# ಕೈದಾಳ

## ಕೆ.ಆರ್. ಗಣೇಶ ಅಭಿನಂದನಾ ಗ್ರಂಥ





ಸಂಪಾದಕರು :

ಭಾರತಿ | ಸುಂಕಂ ಗೋವರ್ಧನ | ಜಿ.ಕೆ. ದೇವರಾಜಸ್ವಾಮಿ

# ಕೈದಾಳ

## (ಡಾ. ಕೆ.ಆರ್. ಗಣೇಶ ಅಭಿನಂದನಾ ಗ್ರಂಥ)



ಸಂಪಾದಕರು

ಡಾ. ಬಿ.ಆರ್.ಭಾರತೀ

ಸುಂಕಂ ಗೋವರ್ಧನ

ಜಿ.ಕೆ. ದೇವರಾಜಸ್ವಾಮಿ

ಡಾ. ಕೆ.ಆರ್. ಗಣೇಶ ಅಭಿನಂದನಾ ಸಮಿತಿ

ನಂ. 30, "ವಾತ್ಸಲ್ಯ" ಒಂದನೆಯ ಅಡ್ಡರಸ್ತೆ, ಓಬಳಪ್ಪ ಗಾರ್ಡನ್, ಬೆಂಗಳೂರು–560 070

2012

# ಕೈದಾಳ

## ಡಾ. ಕೆ.ಆರ್. ಗಣೇಶ ಅಭಿನಂದನಾ ಗ್ರಂಥ


| | | |
|---|---|---|
| ಸಂಪಾದಕರು | : | ಡಾ. ಬಿ.ಆರ್.ಭಾರತೀ, ಸುಂಕಂ ಗೋವರ್ಧನ & ಶ್ರೀ ಜಿ.ಕೆ. ದೇವರಾಜಸ್ವಾಮಿ |
| ಪ್ರಕಾಶಕರು | : | ಡಾ. ಕೆ.ಆರ್. ಗಣೇಶ ಅಭಿನಂದನಾ ಸಮಿತಿ<br>ನಂ. ೩೦, "ವಾತ್ಸಲ್ಯ" ಒಂದನೆಯ ಅಡ್ಡರಸ್ತೆ, ಓಬಳಪ್ಪ ಗಾರ್ಡನ್,<br>ಬೆಂಗಳೂರು – ೫೬೦ ೦೭೦ |
| ಪುಟಗಳು | : | xvi+೧೬+೪೪೨=೪೭೪ |
| **ಬೆಲೆ** | : | **ರೂ. ೪೫೦/–** |
| ಪ್ರಥಮ ಮುದ್ರಣ | : | ೨೦೧೨ |
| ಹಕ್ಕುಗಳು | : | ಆಯಾ ಲೇಖಕರವು |
| ಮುದ್ರಣ ಕಾಗದ | : | ಮ್ಯಾಪ್ಲಿಥೋ ೭೦ ಜಿ.ಎಸ್.ಎಂ |
| ಅಕ್ಷರ ಸಂಯೋಜನೆ | : | ವನಮಾಲಾ & ಶ್ವೇತಾ ಕೆ. |
| ವಿನ್ಯಾಸ | : | ಡಾ. ಬಿ.ಆರ್. ಸತ್ಯನಾರಾಯಣ |
| ಮುಖಪುಟ | : | ಶ್ರೀ ಎಂ ಮಹೇಶ್ |
| ಮುದ್ರಕರು | : | ಸತ್ಯಶ್ರೀ ಪ್ರಿಂಟರ್ಸ್ ಪ್ರೈ.ಲಿ., ಬೆಂಗಳೂರು – ೫೬೦೦೨೬. |




# KAIDALA

A Felicitation Volume of Dr. K.R. Ganesha, Former Principal and Kannada Professor, APS Commerce College, Bangalore.


| | | |
|---|---|---|
| Editors | : | Dr. B.R. Bharati, Sri Sunkam Govardhan & Sri. G.K. Devarajaswami |
| Publisher | : | Dr. K.R. Ganesha Felicitation Committee<br>No. 30, "VATSALYA" 1st Cross, Obalappa Garden<br>Bangalore - 560 070. |
| Page | : | xvi+16+442=474 |
| **Price** | : | **Rs. 450/-** |
| First Impression | : | 2012 |
| Copy Rights | : | Authors |
| Paper Used | : | 70 GSM Maplitho |
| DTP | : | Vanamala & Shwetha K. |
| Design | : | Dr. B.R. Satyanarayana |
| Cover Design | : | Sri. M mahesh |
| Printer | : | Sathyasri Printers Pvt. Ltd., Bangalore - 560 026. |

# ಅಭಿನಂದನಾ ಸಮಿತಿಯ ಪರವಾಗಿ

ಪ್ರತಿಯೊಂದು ತಲೆಮಾರು ಸಹ ಸಂಸ್ಕೃತಿ ಬದ್ಧವಾದ ತನ್ನ ಸ್ಮೃತಿಕೋಶವನ್ನು ಸಾತತ್ಯಗೊಳಿಸಬೇಕಾದರೆ ಅದನ್ನು ಕಾಪಾಡಿಕೊಂಡು ಬಂದ ಪರಂಪರೆಗೆ ಕೃತಜ್ಞತೆಯನ್ನು ಸಲ್ಲಿಸಲೇಬೇಕು ಇಂತಹ ಪರಂಪರೆಯನ್ನು ಜತನದಿಂದ ಪೋಷಿಸಿಕೊಂಡು ಹೊಂಬೆಳಕಿನ ಭವಿಷ್ಯವನ್ನು ರೂಢಿಸಬೇಕಾದರೆ ಉತ್ತಮ ತಾಯಿ–ತಂದೆಯರು ಹಾಗೂ ಉತ್ತಮ ಪರಿಸರದಷ್ಟೇ ಪರಿಣಾಮಕಾರಿಗಳಾದವರು ಎಂದರೆ ಉತ್ತಮವಾದ ಗುರುಗಳು. ಉತ್ತಮನಾದ ಗುರುವೊಬ್ಬ ಕೇವಲ ತನ್ನ ಪಾಠದಿಂದ ಮಾತ್ರವಲ್ಲದೇ ತನ್ನ ಆದರ್ಶಮಯವೂ, ನಿರ್ಮಲವೂ, ನಿರ್ಮಮವೂ ಆದ ಬದುಕಿನಿಂದ ತನ್ನ ಸಂಪರ್ಕಕ್ಕೆ ಬಂದ ಒಂದು ಇಡೀ ತಲೆಮಾರನ್ನು ಪ್ರಭಾವಿಸುತ್ತಾನೆ. ಸಂಸ್ಕೃತಿಯನ್ನು ಮಾನವ ಪರಂಪರೆಯನ್ನು ಅರ್ಥೈಸುವ ತನ್ನ ಸಾಮರ್ಥ್ಯದಿಂದ ಕಲಿಕೆಯ ಹೊಸ ಹೊಸ ವಿಧಾನಗಳಿಂದ ಕಲಿಯುವವರ ಪ್ರತಿಸ್ಪಂದನಕ್ಕೆ ಪಾತ್ರನಾಗುತ್ತಾ ಅವರನ್ನು ಸದಾ ಜಾಗೃತನಾಗುವಂತೆ ಸಹಕರಿಸುತ್ತಾನೆ. ಇಂತೆಲ್ಲ ಗುಣಗಳಿಂದ ನಮ್ಮ ಪರಂಪರೆಯನ್ನು ಅರ್ಥಮಾಡಿಕೊಳ್ಳಲು ಬಲುದೊಡ್ಡ ಪ್ರಮಾಣದಲ್ಲಿ ಕಾರಣರಾದವರು ನಮ್ಮ ಪ್ರೀತಿಯ ಗುರುಗಳಾದ ಕೆ.ಆರ್. ಗಣೇಶ್‌ರವರು.

ಡಾ. ಕೆ.ಆರ್. ಗಣೇಶ್‌ರವರು ನಾಡಿನ ಅತ್ಯಂತ ಪ್ರಬುದ್ಧ ವಿದ್ವಾಂಸರಲ್ಲಿ ಒಬ್ಬರು. ವಿಜ್ಞಾನವನ್ನು ಓದಿ ನಂತರ ಸಾಹಿತ್ಯಕ್ಕೆ ಕಾಲಿಟ್ಟ ಕಾರಣ ತಮ್ಮ ನಿಲುವುಗಳಲ್ಲಿ ವೈಜ್ಞಾನಿಕ ಕರಾರುವಾಕ್ಕನ್ನು ರೂಡಿಸಿಕೊಂಡವರು. ಯಾವುದೇ ವಿಷಯದಲ್ಲಿ ತಮ್ಮ ಅಭಿಪ್ರಾಯಗಳನ್ನು ಎಳ್ಳಷ್ಟೂ ಅನುಮಾನವಿಲ್ಲದ ಹಾಗೇ ಪ್ರಸ್ತುತ ಪಡಿಸುವವರು. ಹಳಗನ್ನಡವಿರಲಿ–ಹೊಸಗನ್ನಡವಿರಲಿ, ಶಾಸನಶಾಸ್ತ್ರವಿರಲಿ–ಶಾಸ್ತ್ರ ವಿಷಯಗಳಿರಲಿ, ಕಲೆಯಿರಲಿ–ವಿಜ್ಞಾನವಿರಲಿ, ಆಯಾ ವಿಷಯಗಳನ್ನು ಸಮಗ್ರವಾಗಿ ಅರ್ಥಮಾಡಿಕೊಳ್ಳುವವರು. ಇವೆಲ್ಲಕ್ಕೂ ಸಹಕಾರಿಯಾಗಿ ಪಾಠ ಮಾಡುವುದನ್ನೇ ತಮ್ಮ ಜೀವನ ಧ್ಯೇಯವಾಗಿಸಿಕೊಂಡವರು. ತಮಗೆ ತಿಳಿದ ಸರ್ವಸ್ವವನ್ನೂ ತಮ್ಮ ವಿದ್ಯಾರ್ಥಿಗಳಿಗೆ ಯಾವುದೇ ಮುಚ್ಚುಮರೆಯಿಲ್ಲದೆ ಸಂಪೂರ್ಣವಾಗಿ ಕಲಿಸುವವರು. ಹೀಗೆ ಕಲಿಸುವುದರಲ್ಲೇ ಸಂಪೂರ್ಣ ತನ್ಮಯತೆಯನ್ನು ಸಾಧಿಸಿರುವುದರಿಂದಲೇ ಅಸಂಖ್ಯಾತ ಶಿಷ್ಯರಿಗೆ ಪ್ರೀತಿಯ ಗಣೇಶ ಮೇಷ್ಟ್ರು ಆಗಿ ಸದಾ ಅವರ ಮನಸ್ಸಿನಲ್ಲಿ ಶಾಶ್ವತವಾಗಿ ನೆಲೆಸಿರುವವರು.

ಸದಾ ವೇದಿಕೆಗಳಲ್ಲಿ ಮಿಂಚುವುದು, ಸಭೆ–ಸಮಾರಂಭಗಳಲ್ಲಿ ಮುಂದಿನ ಸಾಲಿನಲ್ಲಿ ವಿಜೃಂಭಿಸುವುದು, ಪದವಿ–ಪುರಸ್ಕಾರಗಳನ್ನು ಬಯಸಿ ಅದಕ್ಕಾಗಿ ಏನೇನೋ ಮಾಡುವುದು, ಉನ್ನತ ಹುದ್ದೆಗಳ ಆಕಾಂಕ್ಷಿಗಳಾಗಿ ಅಧಿಕಾರವನ್ನು ಬಯಸುವುದು, ಮೇಲಿಂದ ಮೇಲೆ ಲೇಖನಗಳನ್ನು ಹಾಗೂ ಪುಸ್ತಕಗಳನ್ನು ಪ್ರಕಟಿಸುವುದು, ಇವೆಲ್ಲ ಗಣೇಶ ಮೇಷ್ಟ್ರಿಗೆ ಒಗ್ಗದ ಸಂಗತಿಗಳು. ಈ ಎಲ್ಲ ಸಮಯವನ್ನು ಮೇಷ್ಟ್ರು ಕೇವಲ ತಮ್ಮ ವಿದ್ಯಾರ್ಥಿಗಳಿಗೆ ಅವರಿಗೆ ಬೇಕಾದ ವಿಷಯಗಳನ್ನು ಬೋಧಿಸುವುದರಲ್ಲೇ ಕಳೆಯುತ್ತಾರೆ. ತಾವಾಯಿತು, ತಮ್ಮ ಆಸಕ್ತಿಗಳಾಯಿತು, ತಮ್ಮ ಅಧ್ಯಾಪನವಾಯಿತು ಇಷ್ಟೇ ಗಣೇಶ ಮೇಷ್ಟ್ರ ಸರ್ವಸ್ವ.

ಗಣೇಶ್ ಮೇಷ್ಟ್ರ ಶಿಷ್ಯರಲ್ಲಿ ಎರಡು ವಿಧ. ಮೊದಲನೆಯವರು ಕಾಲೇಜಿನ ಅನಿವಾರ್ಯ ಪಠ್ಯಗಳನ್ನು ಕೇಳುವ ಅಸಂಖ್ಯಾತ ಕಾಲೇಜು ವಿದ್ಯಾರ್ಥಿಗಳು. ಎರಡನೆಯವರು ಶಾಸನ, ಹಳಗನ್ನಡ ಮುಂತಾದವರನ್ನು ಕಲಿತವರು. ಆದರೆ ಈ ವಿಂಗಡಣೆಯನ್ನು ಗುರುಗಳು ಎಂದೂ ಮಾಡುವುದಿಲ್ಲ. ಸಾಹಿತ್ಯವನ್ನು ನಿರರ್ಗಳವಾಗಿ ಕಲಿಸುವಂತೆಯೇ ಗಣಿತ–ವಿಜ್ಞಾನಗಳನ್ನು ಸಹ ಪರಿಣಾಮಕಾರಿಯಾಗಿ ಕಲಿಸುವಲ್ಲಿ ಸಮರ್ಥರು. ಪ್ರತಿಯೊಬ್ಬ ಆಸಕ್ತ ವಿದ್ಯಾರ್ಥಿಯನ್ನು ತನ್ನ ನಿಜವಾದ ದಾರಿಯಲ್ಲಿ ನಡೆಸಲು ಗಣೇಶ್ ಮೇಷ್ಟ್ರು ಸಹಕಾರಿಯಾದವರು. ತಮ್ಮ ದ್ವಿಚಕ್ರವಾಹನದಲ್ಲಿ ಬೆಳಗಿನಿಂದ ರಾತ್ರಿಯವರೆಗೂ ಹಲವಾರು ಜಾಗಗಳಿಗೆ ಓಡಾಡುತ್ತಲೇ ಹಲವಾರು ಕಡೆ ತಮ್ಮ ಪಾಠಪ್ರವಚನಗಳಲ್ಲಿ ಸದಾ ತೊಡಗಿಸಿಕೊಂಡವರು. ನಿವೃತ್ತಿಯ ನಂತರವೂ ಈ ಅಧ್ಯಾಪನ ಕಲೆಗೆ ಕಿಂಚಿತ್ ಪುರುಸೊತ್ತನ್ನು ನೀಡದವರ ಮಧ್ಯೆ ಇಂತಹ ಗುರುಗಳು ವಿರಳಾತಿ ವಿರಳ.

ಎಷ್ಟೆಲ್ಲಾ ಕಾಲೇಜುಗಳಲ್ಲಿ ತಮ್ಮ ಪಾಠವನ್ನು ಮಾಡಿರುವ–ಮಾಡುತ್ತಿರುವ ಗುರುಗಳ ಕಾರ್ಯಕ್ಷೇತ್ರವೆಂದರೆ ಎ.ಪಿ.ಎಸ್. ಕಾಲೇಜು. ಇಲ್ಲಿ ಕಲಿತು ತಮ್ಮ ಭದ್ರವಾದ ಬದುಕನ್ನು ರೂಪಿಸಿಕೊಂಡ ಅಸಂಖ್ಯಾತ ವಿದ್ಯಾರ್ಥಿಗಳ ಸ್ಫೂರ್ತಿಯ ಚಿಲುಮೆ ಗಣೇಶ್ ಮೇಷ್ಟ್ರು. ಶಾಸನ, ಹಳಗನ್ನಡ ಕ್ಷೇತ್ರದಲ್ಲಿ ತೊಡಗಿಸಿಕೊಂಡು ಕೆಲಸ ಮಾಡುತ್ತಿರುವ ಈ ತಲೆಮಾರಿನ ಬಹುತೇಕ ಮಂದಿ ಗಣೇಶ್ ಮೇಷ್ಟ್ರ ಗರಡಿಯಲ್ಲಿಯೇ ತಯಾರಾದವರು ಇವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಇವರಿಂದ ಪ್ರಭಾವಿತರಾಗಿ ತಮ್ಮದೇ ಹಾದಿಯಲ್ಲಿ ಸಾಗುತ್ತಿರುವವರು.

ತೀ.ನಂ.ಶ್ರೀ.ಯವರು ಹೇಳುವ ಹಾಗೆ ಓದು-ಬರಹದ ಶತ್ರುವಾದರೆ ಗಣೇಶ್ ಮೇಷ್ಟ್ರಿಗೆ ಅವರ ಅಧ್ಯಾಪನ ಬರಹದ ಶತ್ರು, ಸದಾ ತಮ್ಮ ಕೃತಿ-ಲೇಖನಗಳ ಸಂಖ್ಯೆಗಳಿಂದ ಮೆರೆಯುತ್ತಿರುವ ನಮ್ಮ ಬರಹಗಾರರ ನಡುವೆ ಗಣೇಶ್ ಅಪರೂಪದವರು. ಯಾವುದೇ ಒಂದು ಹೊಸ ವಿಷಯವಿಲ್ಲದೇ ಗುರುಗಳು ಯಾರ ಒತ್ತಾಯಕ್ಕೂ ಮಣಿದು ಬರೆಯುವುದಿಲ್ಲ. ತಾವು ಬರೆಯಬೇಕಾದ ಸಂಗತಿಯ ಬಗ್ಗೆ ತಲಸ್ಪರ್ಶಿಯಾದ ಅಧ್ಯಯನವನ್ನು ಮಾಡದ ಹೊರತು ಅವರು ಏನನ್ನೂ ಬರೆಯುವುದಿಲ್ಲ. ಅವರಿಗೆ ಸಂಖ್ಯೆ ಎಂದೆಂದೂ ಮುಖ್ಯವಲ್ಲ, ಬದಲಿಗೆ ಗುಣಮಟ್ಟವೊಂದೇ ಅವರ ಮುಖ್ಯ ಸಂಗತಿ.

ನಿಜ, ಅವರು ಕಡಿಮೆ ಬರೆದಿರಬಹುದು. ಆದರೆ ಅವೆಲ್ಲವೂ ನಿರ್ದಿಷ್ಟವೂ, ಅಧಿಕೃತವೂ, ಸಮಗ್ರವೂ ಆದ ಅತ್ಯುತ್ತಮ ಬರಹಗಳು. ಇಂದಿಗೂ ಅವರ ಪಿಎಚ್.ಡಿ. ನಿಬಂಧವಾದ "ಆಂಧ್ರಪ್ರದೇಶದ ಕನ್ನಡ ಶಾಸನಗಳು" ಗ್ರಂಥ, ಸಂಶೋಧನೆಗೆ ಮಾದರಿಯಾದ ಆಕರ ಗ್ರಂಥ. ಅವರು ಸಂಪಾದಿಸಿರುವ "ಸರ್ವಜ್ಞನ ವಚನಗಳು" ಒಂದು ಉತ್ತಮ ಗ್ರಂಥ. ಆಂಧ್ರ ಪ್ರದೇಶದ ಕನ್ನಡ ಶಾಸನಗಳ ಎರಡು ಸಂಪುಟಗಳು (ಡಾ. ಆರ್. ಶೇಷಶಾಸ್ತ್ರಿಗಳ ಜೊತೆ) ಪ್ರಮುಖವಾದ ಆಕರ ಗ್ರಂಥ. ಇದರ ಜೊತೆಗೆ 'ಶಾಸನ ಸರಸ್ವತಿ', ಶಾಸನ ವಿದ್ಯಾರ್ಥಿಗಳ ಅಧಿಕೃತ ಗ್ರಂಥ.

ಇಷ್ಟೆಲ್ಲ ಸಾಧನೆಯನ್ನು ಮಾಡಿಯೂ ಎಲೆ ಮರೆಯ 'ಹಣ್ಣಿ'ನಂತೆ ಪ್ರಸಿದ್ಧಿಗೆ ವಿಮುಖರಾಗಿ ತಮ್ಮಷ್ಟಕ್ಕೆ ತಾವು ಇದ್ದುಕೊಂಡು ಸದಾ ಅಧ್ಯಾಪನದಲ್ಲಿಯೇ ತೊಡಗಿಕೊಂಡಿರುವ ನಮ್ಮ ಗುರುಗಳಿಗೆ ನಾವೆಲ್ಲ ಶಿಷ್ಯರು ಸೇರಿ ಒಂದು ಅಭಿನಂದನಾ ಕಾರ್ಯಕ್ರಮ ಮಾಡೋಣ ಎಂದುಕೊಂಡು ಅವರನ್ನು ಕೇಳಿದರೆ ಅವರು ಸ್ಥಿತಿಪ್ರಜ್ಞರಂತೆ ಉಳಿದರು. ಅವರಿಗೆ ಇವೆಲ್ಲ ಇಷ್ಟವಿಲ್ಲ ಎಂದು ನಮಗೆ ಗೊತ್ತಿದ್ದರೂ ಅವರ ಸಾಧನೆಗೆ ನಾವು ಒಂದು ಸಣ್ಣ ಕಾರ್ಯಕ್ರಮ ಮಾಡುವುದು ನಮ್ಮ ಕರ್ತವ್ಯವಾಗಿತ್ತು. ಈ ಅಭಿನಂದನಾ ಕಾರ್ಯಕ್ರಮಕ್ಕೆ ಅವರನ್ನು ಒಪ್ಪಿಸಬೇಕಾದರೆ ನಮ್ಮೆಲ್ಲರ ಕಲಿತ ವಿದ್ಯೆಗಳೆಲ್ಲ ಖಾಲಿಯಾದವು.

ಅವರ ಆತ್ಮೀಯ ಗೆಳೆಯರು, ನಿಡುಗಾಲದ ಒಡನಾಡಿಗಳೂ ಆದ ಡಾ. ಆರ್. ಶೇಷಶಾಸ್ತ್ರಿ ಹಾಗೂ ಡಾ. ದೇವರಕೊಂಡಾ ರೆಡ್ಡಿಯವರ ಹಲವಾರು ಸುತ್ತಿನ ಒತ್ತಾಯಗಳು, ನಿರಂತರ ಪ್ರಯತ್ನಗಳ ಫಲವಾಗಿ ಕಡೆಗೂ ಗಣೇಶ್ ಮೇಷ್ಟ್ರು ಒಪ್ಪಿದರು. ಅದು ಖಂಡಿತ ಅವರಿಗಾಗಿ ಅಲ್ಲ, ಬದಲಿಗೆ ಅವರ ಹೆಸರಿನಲ್ಲಿ ಒಂದು ದಿನದ ಮಟ್ಟಿಗಾದರೂ ಅವರ ಎಲ್ಲ ಶಿಷ್ಯರು ಒಂದೆಡೆ ಸೇರಿ ಸಂತೋಷವಾಗಿರುತ್ತಾರಲ್ಲ ಎಂದು ಅವರು ಒಪ್ಪಿದರು. ಅದಕ್ಕಾಗಿ ಈ ಕಾರ್ಯಕ್ರಮಕ್ಕೆ ಒಪ್ಪಿಗೆ ನೀಡಿದ ಡಾ. ಕೆ.ಆರ್. ಗಣೇಶ್ ರವರಿಗೂ ಅವರನ್ನು ಒಪ್ಪಿಸಲು ಸಫಲರಾದ ಡಾ. ಆರ್. ಶೇಷಶಾಸ್ತ್ರಿ ಹಾಗೂ ಡಾ. ದೇವರ ಕೊಂಡಾರೆಡ್ಡಿಯವರಿಗೂ ಧನ್ಯವಾದಗಳು.

ಡಾ. ಕೆ.ಆರ್. ಗಣೇಶರವರ ಕುಟುಂಬದವರು ನೀಡಿದ ಸಹಕಾರವನ್ನು ನೆನಪಿಸಿಕೊಳ್ಳದೇ ಹೋದರೇ ನಾವು ನಿಜವಾಗಿಯೂ ಕೃತಘ್ನರಾಗುತ್ತೇವೆ. ವಿಶೇಷವಾಗಿ ಗುರುಗಳ ಮಕ್ಕಳು ನಮಗೆ ಫೋಟೋಗಳನ್ನು ಕಲೆಹಾಕುವುದರಲ್ಲಿ ವಿಶೇಷವಾಗಿ ಸಹಕರಿಸಿದ್ದಾರೆ ಇವರಿಗೆ ನಾವು ವಿಶೇಷವಾಗಿ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದೇವೆ.

ತಕ್ಷಣ ಕಾರ್ಯಪ್ರವೃತ್ತರಾದ ನಾವು ಒಂದು ಅಭಿನಂದನಾ ಸಮಿತಿಯನ್ನು ರೂಪಿಸಿಕೊಂಡೆವು. ಈ ಸಮಿತಿಯಲ್ಲಿ ಜಿ.ಎಸ್.ಎಸ್. ರಾವ್‌ರವರು ಅಧ್ಯಕ್ಷರಾಗಿಯೂ, ಶ್ರೀ ಸುಂಕಂ ಗೋವರ್ಧನ, ಡಾ. ಜಿ.ಮನೋಜ್ ಹಾಗೂ ಡಾ. ಬಿ.ಆರ್. ಸತ್ಯನಾರಾಯಣರವರು ಕಾರ್ಯದರ್ಶಿಗಳಾಗಿಯೂ, ಶ್ರೀಮತಿ ಸಂಧ್ಯಾ ..ಮಚಂದ್ರರವರು ಕೋಶಾಧಿಕಾರಿಗಳಾಗಿಯೂ ನಿಯುಕ್ತರಾದೆವು. ನಾವೆಲ್ಲರೂ ಗಣೇಶ ಮೇಷ್ಟ್ರ ಶಿಷ್ಯರೇ ಆಗಿರುವುದರಿಂದ ನಮ್ಮಲ್ಲಿ ವಯಸ್ಸಿನ ಅಂತರ ಮುಖ್ಯ ಪ್ರಶ್ನೆಯಾಗದೇ ಎಲ್ಲರೂ ಒಟ್ಟಿಗೆ ಕೆಲಸ ಮಾಡಲು ಸಹಕಾರಿಯಾಯಿತು.

ಈ ಸಂದರ್ಭದಲ್ಲಿ ಗಣೇಶ ಮೇಷ್ಟ್ರಿಗೆ ಅವರ ಶಿಷ್ಯರೆಲ್ಲ ಸೇರಿ ಒಂದು ಅಭಿನಂದನಾ ಗ್ರಂಥವೊಂದನ್ನು ತರಬೇಕೆಂದು ಯೋಚಿಸಿದಾಗ ಅವರ ಊರಾದ "ಕೈದಾಳ"ಎಂಬ ಶೀರ್ಷಿಕೆಯನ್ನು ಉಪಯೋಗಿಸಿಕೊಂಡೆವು. ತರುಣ ವಿದ್ವಾಂಸರಾದ ಡಾ. ಬಿ.ಆರ್. ಭಾರತಿ, ಸುಂಕಂ ಗೋವರ್ಧನ, ದೇವರಾಜಸ್ವಾಮಿಯವರು ಈ ಜವಾಬ್ದಾರಿಯನ್ನು ತೆಗೆದುಕೊಂಡು ಹಗಲೂ ರಾತ್ರಿ ದುಡಿದು ಈ ಗ್ರಂಥವನ್ನು ಅಚ್ಚುಕಟ್ಟಾಗಿ ತಂದಿದ್ದಾರೆ. ಈ ಗ್ರಂಥವಿರದಿದ್ದರೆ ಈ ಸಮಾರಂಭ ಅಪೂರ್ಣವಾಗಿರುತ್ತಿತ್ತು. ಆದುದರಿಂದ ಈ ತರುಣ ವಿದ್ವಾಂಸರಿಗೆ ಸಮಿತಿಯ ಪರವಾಗಿ ಧನ್ಯವಾದಗಳು. ಈ ಗ್ರಂಥಕ್ಕೆ ಲೇಖನಗಳನ್ನು ಕೊಟ್ಟ ಎಲ್ಲ ವಿಷಯ ಪರಿಣತರಿಗೆ ಸಮಿತಿಯ ಪರವಾಗಿ ತುಂಬು ಹೃದಯದ ಧನ್ಯವಾದಗಳು.

ಡಾ. ಕೆ.ಆರ್. ಗಣೇಶ್ ಅಭಿನಂದನಾ ಸಮಿತಿಗೆ ಅಧ್ಯಕ್ಷರ ಮನೆಯ ವಿಳಾಸವನ್ನು ನೀಡಿ ಸಮಿತಿಯ ಹೆಸರಲ್ಲಿ ಬ್ಯಾಂಕಿನ ಖಾತೆಯೊಂದನ್ನು ತೆರೆದು ಉದಾರ ಧನಸಹಾಯವನ್ನು ಬಯಸಿದಾಗ ಕೆಲವರು ತಮ್ಮ ಪ್ರೋತ್ಸಾಹವನ್ನು ನೀಡಿದ್ದಾರೆ. ಅವರಿಗೆ ನಮ್ಮ ಧನ್ಯವಾದಗಳು.

ಅಭಿನಂದನಾ ಸಮಿತಿಯವರೆಲ್ಲ ಈ ಕ್ಷೇತ್ರದಲ್ಲಿ ಪಳಗಿರದ ಕಾರಣ ಇವರಿಗೆ ಸಲಹೆ–ಸೂಚನೆಗಳನ್ನು ನೀಡಲು ನಾಡಿನ ಹಿರಿಯ ಅನುಭವಸ್ಥ ವಿದ್ವಾಂಸರೂ ಹಾಗೂ ಕೆ.ಆರ್. ಗಣೇಶರವರಿಗೆ ಹತ್ತಿರದವರೂ ಆದ, ಡಾ. ಆರ್. ಶೇಷಶಾಸ್ತ್ರಿ, ಡಾ. ದೇವರಕೊಂಡಾ ರೆಡ್ಡಿ, ಡಾ. ಪಿ.ವಿ. ಕೃಷ್ಣಮೂರ್ತಿ, ಡಾ. ಅ.ಲ. ನರಸಿಂಹನ್, ಡಾ. ಎಸ್. ವಿ. ವೆಂಕಟೇಶಯ್ಯ, ಡಾ. ಶ್ಯಾಮಲಾ ರತ್ನಕುಮಾರಿ ಹಾಗೂ ಡಾ. ಕೆ. ವಸಂತಲಕ್ಷ್ಮಿಯವರನ್ನು ಸಲಹಾಮಂಡಳಿಯೆಂದು ಮಾಡಿಕೊಂಡು, ಅವರೆಲ್ಲರ ನಿರಂತರ ಸಲಹೆ, ಸಹಾಯವನ್ನು ಸಮಿತಿ ಉಪಯೋಗಿಸಿಕೊಂಡಿದೆ. ಅದಕ್ಕಾಗಿ ಅವರೆಲ್ಲರಿಗೂ ಸಮಿತಿಯ ಪರವಾಗಿ ತುಂಬು ಧನ್ಯವಾದಗಳು.

ಮೇಷ್ಟ್ರಿಗೆ ಅಭಿನಂದನಾ ಸಮಾರಂಭದಲ್ಲಿ ನೀಡಲೆಂದೇ ಹಿರಿಯ ಕಲಾತಜ್ಞರಾದ ಡಾ. ಅ.ಲ. ನರಸಿಂಹನ್ ರವರ ನೇತೃತ್ವದಲ್ಲಿ ಶ್ರೀ ಸುಂಕಂ ಗೋವರ್ಧನರವರು ನಾಗೇಂದ್ರರವರ ಮೂಲಕ ಅಭಿನಂದನಾ ಫಲಕವನ್ನು ವಿಶೇಷವಾಗಿ ರೂಪಿಸಿದ್ದಾರೆ. ಇವರಿಗೂ ನಮ್ಮ ಸಮಿತಿಯ ಪರವಾಗಿ ತುಂಬು ಹೃದಯದ ಧನ್ಯವಾದಗಳು.

ಡಿಸೆಂಬರ್ ೧೯ ಮೇಷ್ಟ್ರ ಜನ್ಮದಿನ. ಅದಕ್ಕಾಗಿ ಅಂದೇ ಕಾರ್ಯಕ್ರಮ ಮಾಡಬೇಕೆಂದು ಯೋಜಿಸಿದ್ದು. ಆ ಸಮಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣವನ್ನು ಪಡೆಯುವಲ್ಲಿ ಡಾ. ದೇವರಕೊಂಡಾರೆಡ್ಡಿ, ಡಾ. ಬಿ.ಆರ್. ಭಾರತಿ ಹಾಗೂ ಎಂ. ಲೋಕೇಶ್ ರವರು ಸಫಲರಾಗಿ ಆ ಹೊಣೆಯನ್ನು ಹೊತ್ತಿದ್ದಾರೆ. ಅವರೆಲ್ಲರಿಗೂ ವಿಶೇಷ ಧನ್ಯವಾದಗಳು.

ಅಭಿನಂದನಾ ಕಾರ್ಯಕ್ರಮದಲ್ಲಿ ನಾಡಿನ ಹಿರಿಯ ವಿದ್ವಾಂಸರಾದ ಡಾ. ಎಂ. ಚಿದಾನಂದ ಮೂರ್ತಿಯವರು ಉಪಸ್ಥಿತರಿದ್ದು ಪುಸ್ತಕ ಬಿಡುಗಡೆ ಮಾಡುವುದರಿಂದ, ಅವರಿಗೂ, ಸಮಾರಂಭದ ಅಧ್ಯಕ್ಷತೆ ವಹಿಸುವ ಡಾ. ಎಸ್.ವಿ. ವೆಂಕಟೇಶಯ್ಯನವರಿಗೂ, ಅಭಿನಂದನಾ ನುಡಿಗಳನ್ನಾಡುವ ಡಾ. ನಾ. ಗೀತಾಚಾರ್ಯ ಹಾಗೂ ಪ್ರೊ. ಜಿ. ಅಶ್ವತ್ಥನಾರಾಯಣರಿಗೂ ವಿಶೇಷ ಕೃತಜ್ಞತೆಗಳು.

ಡಾ. ಕೆ.ಆರ್. ಗಣೇಶ್‌ರವರ ಆಪ್ತವಲಯದಲ್ಲಿರುವ ಸತ್ಯಶ್ರೀ ಮುದ್ರಣಾಲಯದ ಮಾಲೀಕರಾದ ಶ್ರೀ ಲಿಂಗಪ್ಪನವರು ತಮ್ಮ ಮುದ್ರಣಾಲಯದ ಮೂಲಕ ಲಾಭರಹಿತವಾಗಿ ಈ ಪುಸ್ತಕವನ್ನು ಅಚ್ಚುಮಾಡಿಕೊಟ್ಟಿರುತ್ತಾರೆ. ಅವರಿಗೂ ಈ ಪುಸ್ತಕ ಸಿದ್ಧಪಡಿಸಲು ಹೆಣಗಾಡಿದ ಪ್ರತಿಯೊಬ್ಬರಿಗೂ ನಮ್ಮ ವಿಶೇಷ ಧನ್ಯವಾದಗಳು.

ಸಮಾರಂಭದ ದಿನದ ವೇದಿಕೆ ಹಾಗೂ ಸಂಪೂರ್ಣ ಯೋಜನೆಯನ್ನು ಡಾ. ಆರ್. ಶೇಷಶಾಸ್ತ್ರಿ, ಡಾ. ದೇವರಕೊಂಡಾರೆಡ್ಡಿ, ಡಾ. ಬಿ.ಆರ್. ಭಾರತಿ, ಎಂ. ಲೋಕೇಶ್, ದೇವರಾಜಸ್ವಾಮಿ, ಡಾ. ಜಿ. ಮನೋಜ್, ಡಾ. ಬಿ.ಆರ್. ಸತ್ಯನಾರಾಯಣ, ವಹಿಸಿಕೊಂಡಿದ್ದಾರೆ. ಅವರಿಗೆ ಪ್ರೀತಿಯ ಧನ್ಯವಾದಗಳು.

ಈ ಕಾರ್ಯಕ್ರಮದ ಸಂಬಂಧ ನಾಡಿನ ಪತ್ರಿಕೆಗಳು ನಮಗೆ ವಿಶೇಷವಾದ ಸಹಕಾರವನ್ನು ನೀಡಿವೆ. ಬಿ.ಎಂ.ಶ್ರೀ. ಪ್ರತಿಷ್ಠಾನ, ಇತಿಹಾಸ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತು, ಎ.ಪಿ.ಎಸ್. ಕಾಲೇಜು ಮುಂತಾದೆಡೆ ಕಲಿತ ಗಣೇಶ್ ಮೇಷ್ಟ್ರ ಎಲ್ಲಾ ಶಿಷ್ಯರೂ ಒಂದೆಡೆ ಸೇರಲು ಕಾರಣ ಕರ್ತರಾಗಿರುವ ಅವರಿಗೆ ಧನ್ಯವಾದಗಳು. ಸಮಾರಂಭದ ಪ್ರಕಟಣೆಯನ್ನು ಪತ್ರಿಕೆಗಳಿಗೆ ಬರೆದುಕೊಟ್ಟು, ಬ್ಯಾನರ್‌ಗಳನ್ನು ಸಿದ್ಧಪಡಿಸಿಕೊಟ್ಟವರು ಗಣೇಶ್ ಮೇಷ್ಟ್ರ ಶಿಷ್ಯವೃಂದದವರೇ ಆದ ಸೃಷ್ಟಿ ನಾಗೇಶ್‌ರವರು. ಇವರ ಸಹಕಾರಕ್ಕೆ ನಮ್ಮ ಕೃತಜ್ಞತೆಗಳು.

*** ಜಿ.ಎಸ್.ಎಸ್. ರಾವ್**

**ಅಧ್ಯಕ್ಷರು**

# ಸಂಪಾದಕರ ನುಡಿ

ಕೈದಾಳ ರಾಮಸ್ವಾಮಿ ಗಣೇಶ್‌ರವರು ಹಳಗನ್ನಡ ಕಾವ್ಯ, ಇತಿಹಾಸ, ವ್ಯಾಕರಣ, ಛಂದಸ್ಸು, ಶಾಸನ ಸಂಪಾದನೆ, ಲಿಪಿ ಅಧ್ಯಯನ, ಕ್ರಿಕೆಟ್, ಸಂಗೀತ, ಚಿತ್ರಗೀತೆಗಳು, ಅಕೌಂಟ್ಸ್ ನಿರ್ವಹಣೆ ಮುಂತಾದ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಇವರ ಬಹುಮುಖೀ ಚಟುವಟಿಕೆಗಳಿಗೆ ಶಿಖರ ಪ್ರಾಯವಾದುದು ಎಂದರೆ, ಎಂತಹ ವಿದ್ಯಾರ್ಥಿಯೇ ಆಗಿರಲಿ ಅವರಿಗೆ ಮೆಚ್ಚುಗೆಯಾಗುವಂತೆ ಪಾಠ ಮಾಡುವ ಕಲೆ. ಹಲವಾರು ಕಾವ್ಯಗಳ ಸಂಭಾಷಣೆ, ಐತಿಹಾಸಿಕ-ಸಾಂಸ್ಕೃತಿಕ ಮಹತ್ವ, ಆಯಾ ಕೃತಿಗಳ ವಿಶೇಷತೆಗಳ ಬಗ್ಗೆ ನಿರರ್ಗಳವಾಗಿ ಹರಿಯುವ ವಾಗ್ಝರಿ ಎಂತವರನ್ನು ಮಂತ್ರ ಮುಗ್ಧರನ್ನಾಗಿಸುತ್ತದೆ. ಶಿಷ್ಯರ ಬೌದ್ಧಿಕ ಸಮಸ್ಯೆಗಳಿಗೆ ಕ್ಷಣಮಾತ್ರದಲ್ಲಿ ಪರಿಹಾರ ತೋರಿಸಬಲ್ಲ ಚಾಣಾಕ್ಷರಿವರು.

ಇಂತಹ ಗುರುಗಳನ್ನು ಅವರ ವಿದ್ಯಾರ್ಥಿಗಳು ಸೇರಿ ಅಭಿನಂದಿಸಬೇಕು ಎಂದುಕೊಂಡು ೨೦೦೫ರಲ್ಲಿಯೇ ಒಂದು ಸಮಿತಿ ರಚಿಸಿಕೊಂಡು ಕಾರ್ಯ ಪ್ರವೃತ್ತರಾಗಿದ್ದೆವು. ಗಣೇಶನಿಗೆ ವಿಘ್ನಗಳೇ ಎನ್ನುವಂತೆ ೨೦೦೫ರಲ್ಲಿ ಪ್ರಾರಂಭವಾದ ಅವರ ಅಭಿನಂದನಾ ಸಮಾರಂಭದ ಸಿದ್ಧತೆ ಹಾಗೂ ಅದಕ್ಕೆ ಪೂರಕವಾಗಿ ತರಲಾಗುವ ಅಭಿನಂದನಾ ಗ್ರಂಥದ ಕೆಲಸ ಕುಂಟುತ್ತಾ ಸಾಗಿ ಕಡೆಗೆ ನಿಂತು ಬಿಟ್ಟಿತ್ತು. ಮತ್ತೆ ಇದನ್ನು ಜಾಗೃತಗೊಳಿಸಿ ಸಮಿತಿಯನ್ನು ಪುನಃ ಪರಿಷ್ಕರಿಸಿ ಯೋಜನೆಯನ್ನು ಮುಂದುವರೆಸಲಾಯಿತು.

ಇದೇ ಸಂದರ್ಭದಲ್ಲಿ, ಹಿರಿಯರೂ, ಪ್ರೀತಿಪಾತ್ರ ಗುರುಗಳೂ ಹಾಗೂ ಕೆ.ಆರ್. ಗಣೇಶ್‌ರವರ ನಿಡುಗಾಲದ ಗೆಳೆಯರೂ ಆದ ಡಾ. ಆರ್. ಶೇಷಶಾಸ್ತ್ರಿಯವರು ಹಾಗೂ ಡಾ. ದೇವರಕೊಂಡಾರೆಡ್ಡಿಯವರ ನಿರಂತರ ಪ್ರೇರಣೆ ದೊರಕಿ ಕಳೆದ ವರ್ಷ ಮತ್ತೆ ಸಭೆ ಕರೆದು ಕೆಲಸ ಚುರುಕಾಗಿ ಸಾಗಲು ಸಾಧ್ಯವಾಯಿತು. ಎಲ್ಲರನ್ನು ಒಗ್ಗೂಡಿಸಿ ಕೆಲಸ ಆರಂಭವಾಗಲು ಈ ಇಬ್ಬರು ಮಹನೀಯರು ಸಕಲ ರೀತಿಯಲ್ಲಿಯೂ ಸಹಕರಿಸಿದ್ದಾರೆ. ಇವರಿಗೆ ನಮ್ಮ ತುಂಬು ಪ್ರೀತಿಯ ಧನ್ಯವಾದಗಳು.

ಅಭಿನಂದನಾ ಗ್ರಂಥ ರೂಪಿಸಬೇಕಾದ ಸಂದರ್ಭದಲ್ಲಿ ಈ ಗುರುತರವಾದ ಜವಾಬ್ದಾರಿಯನ್ನು ನಮ್ಮ ಮೇಲೆ ಹೊರಿಸಲಾಯಿತು. ಇದಕ್ಕೆ ಪ್ರಮುಖ ಕಾರಣ ಸಮಿತಿಯು ನಮ್ಮ ಮೇಲೆ ಇಟ್ಟಿರುವ ನಂಬಿಕೆ. ನಾವು ಈ ಕೆಲಸವನ್ನು ನಿಭಾಯಿಸಬಲ್ಲೆವು ಎಂದು ನಮ್ಮನ್ನು ನಂಬಿ ಈ ಕಾರ್ಯವನ್ನು ನಮಗೆ ವಹಿಸಿದ್ದಕ್ಕೆ ಸಮಿತಿಯ ಅಧ್ಯಕ್ಷರಾದ ಶ್ರೀಯುತ ಜಿ.ಎಸ್.ಎಸ್. ರಾವ್ ರವರಿಗೆ ನಮ್ಮ ತುಂಬು ಹೃದಯದ ಧನ್ಯವಾದಗಳು.

ಈ ಕೃತಿಯಲ್ಲಿ ಆರು ಭಾಗಗಳಲ್ಲಿ ಅರವತ್ತೊಂದು ಲೇಖನಗಳು ಅಂತರ್ಗತವಾಗಿವೆ. ಮೊದಲನೆಯ ಭಾಗದಲ್ಲಿ ಡಾ. ಕೆ.ಆರ್.ಗಣೇಶ ಅವರ ಸ್ವಗತವಿದ್ದರೆ, ಎರಡನೆಯ ನುಡಿ – ಗೌರವ ಶೀರ್ಷಿಕೆಯಡಿ ಲೇಖನಗಳಿವೆ. ಸಾಹಿತ್ಯ – ಸಲ್ಲಾಪ ವಿಭಾಗದಲ್ಲಿ ಹನ್ನೆರಡು ಲೇಖನಗಳಿವೆ. ಶಾಸನ – ಇತಿಹಾಸ ಎಂಬ ಭಾಗದಲ್ಲಿ ಇಪ್ಪತ್ತೆರಡು ಲೇಖನಗಳಿದ್ದರೆ ಐದು ಲೇಖನಗಳು ವಾಸ್ತು – ಶಿಲ್ಪ ವಿಭಾಗದಲ್ಲಿ ಸಂಯೋಜನೆಗೊಂಡಿವೆ. ಕೊನೆಯ ಸಂಪದ – ಸಂಕೀರ್ಣ ವಿಭಾಗದಲ್ಲಿ ಹನ್ನೊಂದು ಲೇಖನಗಳಿದ್ದು, ಇವುಗಳು ಶಾಸ್ತ್ರ, ಚಲನಚಿತ್ರ, ಸಂಗೀತ, ವಾದ್ಯ, ವ್ಯಕ್ತಿಚಿತ್ರ ಮತ್ತು ಇತರೆ ವಿಷಯಗಳನ್ನು ಒಳಗೊಂಡಿದೆ.

ಈ ಹಿಂದೆ ಅಭಿನಂದನಾ ಗ್ರಂಥಕ್ಕೆಂದು ಬಂದ ಲೇಖನಗಳನ್ನೆಲ್ಲ ಒಟ್ಟುಗೂಡಿಸಿ ಮತ್ತೆ ಮತ್ತೆ ಲೇಖಕರಿಗೆ ಬರೆದು ಮತ್ತಷ್ಟು ಲೇಖನಗಳನ್ನು ತರಿಸಿಕೊಳ್ಳಲು ಸಾಧ್ಯವಾಯಿತು. ಆದಾಗ್ಯೂ ಅನೇಕ ಲೇಖಕರು ತಾವು ಮಾತುಕೊಟ್ಟಂತೆ ಸಕಾಲದಲ್ಲಿ ಲೇಖನಗಳನ್ನು ತಲುಪಿಸಿಲ್ಲ. ಬದಲಿಗೆ ಗಣೇಶ್‌ರವರ ಮೇಲೆ ಅಭಿಮಾನವನ್ನು ಹೊಂದಿರುವ ಅವರ ಸಮಕಾಲೀನರು, ಅವರ ಶಿಷ್ಯವೃಂದದವರೂ ಸಕಾಲಕ್ಕೆ ಲೇಖನಗಳನ್ನು ಕೊಟ್ಟು ಸಹಕರಿಸಿದ್ದಾರೆ. ಈ ಎಲ್ಲ ಲೇಖಕರಿಗೂ ನಮ್ಮ ವಿಶೇಷ ಕೃತಜ್ಞತೆಗಳು.

ಬಂದ ಲೇಖನಗಳನ್ನು ಮೊದಲಿಗೆ ಅಕ್ಷರ ಜೋಡನೆಗೆ ಒಳಪಡಿಸಿದವರು ಬಿ.ಆರ್. ಸತ್ಯನಾರಾಯಣರವರು. ಅವರ ಜೊತೆ ಕೈ ಜೋಡಿಸಿದವರು ಶ್ರೀಮತಿ ವನಮಾಲ, ಶ್ರೀಮತಿ ಶ್ವೇತಾ ಸತ್ಯನಾರಾಯಣ, ಎಂ. ಮಹೇಶ್ ಮತ್ತು ರಾಘವೇಂದ್ರ, ಪುಸ್ತಕ ಸಿದ್ಧವಾಗುವ ಹಂತದವರೆಗೂ ಬಂದ ಲೇಖನಗಳನ್ನು ಕಷ್ಟವಾದರೂ ಕೇವಲ ಗುರುಗಳ ಮೇಲಿನ ಅಭಿಮಾನದಿಂದ ಇವರು ಡಿ.ಟಿ.ಪಿ. ಕಾರ್ಯವನ್ನು ಸಾಂಗಗೊಳಿಸಿದ್ದಾರೆ ಇವರಿಗೆ ನಮ್ಮ ವಿಶೇಷ ವಂದನೆಗಳು.

ಡಿ.ಟಿ.ಪಿ.ಯಾದ ಲೇಖನಗಳನ್ನು ಸಂಪಾದಕರ ಜೊತೆಗೆ ಕರಡು ತಿದ್ದುವಲ್ಲಿ ಶ್ರೀಯುತ ಜಿ.ಎಸ್.ಎಸ್. ರಾವ್, ಶ್ರೀಮತಿ ವನಮಾಲ, ಶ್ರೀಮತಿ ಗಂಗಾಂಬಿಕೆ ಎಸ್., ಸಹಕರಿಸಿದ್ದಾರೆ ಇವರಿಗೆ ನಮ್ಮ ವಂದನೆಗಳು.

ಈ ಗ್ರಂಥದಲ್ಲಿರುವ ಅಪರೂಪದ ಛಾಯಾಚಿತ್ರಗಳನ್ನು ಗುರುಗಳ ಮಕ್ಕಳು ಅತ್ಯಂತ ಪ್ರೀತಿಯಿಂದ ಒದಗಿಸಿದ್ದಾರೆ. ಕೇವಲ ಚಿತ್ರಗಳ ವಿಷಯದಲ್ಲಿ ಮಾತ್ರವಲ್ಲದೆ ಇದೇ ಸಮಾರಂಭದ ವಿಷಯದಲ್ಲಿ ಕೆ.ಆರ್. ಗಣೇಶ್‌ರವರ ಕುಟುಂಬದ ಪ್ರತಿಯೊಬ್ಬರೂ ಅನೇಕ ರೀತಿಯಲ್ಲಿ ಸಹಕರಿಸಿದ್ದಾರೆ. ಆದುದರಿಂದ ಅವರ ಇಡೀ ಕುಟುಂಬಕ್ಕೆ ನಮ್ಮ ಗೌರವಪೂರ್ವಕ ಧನ್ಯವಾದಗಳು. ಕೆ.ಆರ್. ಗಣೇಶ್‌ರವರ ಚಿತ್ರಗಳ ಜೊತೆಗೆ ಡಾ. ಆರ್. ಶೇಷಶಾಸ್ತ್ರಿ, ಡಾ. ದೇವರಕೊಂಡಾರೆಡ್ಡಿ, ಡಾ. ಪಿ.ವಿ. ಕೃಷ್ಣಮೂರ್ತಿ, ಸೋಮಶೇಖರ್, ಸತ್ಯನಾರಾಯಣ ಹಾಗೂ ಶಿವುರವರು ಚಿತ್ರಗಳನ್ನು ಒದಗಿಸಿದ್ದಾರೆ. ಇವರೆಲ್ಲರಿಗೂ ನಮ್ಮ ಪ್ರೀತಿಯ ವಂದನೆಗಳು. ಸಂಗ್ರಹಿಸಿದ ಎಲ್ಲ ಚಿತ್ರಗಳನ್ನು ವಿನ್ಯಾಸಗೊಳಿಸಿದವರು ಬೆಂ.ಪು. ನಿರಂಜನರವರು, ಹಾಗೂ ಮುಖಪುಟವನ್ನು ವಿನ್ಯಾಸಗೊಳಿಸಿದವರು ಎಂ. ಮಹೇಶ್‌ರವರು. ಇವರಿಬ್ಬರ ಸಕಾಲದ ಸಹಾಯಕ್ಕೆ ನಮ್ಮ ವಿಶೇಷ ಧನ್ಯವಾದಗಳು.

ನಾವು ಇಷ್ಟೆಲ್ಲ ಜನರ ಸಹಾಯದಿಂದ ರೂಪಿಸಿದ ಈ ಗ್ರಂಥವನ್ನು ಕೆ.ಆರ್. ಗಣೇಶ್‌ರವರ ಮೇಲಿನ ಸ್ನೇಹದಿಂದ ಸತ್ಯಶ್ರೀ ಮುದ್ರಣಾಲಯದ ಶ್ರೀಯುತ ಲಿಂಗಪ್ಪನವರು ನಮ್ಮ ವಿಳಂಬವನ್ನು ಮನ್ನಿಸಿ ಸಕಾಲಕ್ಕೆ ಗ್ರಂಥ ಹೊರತರಲು ಮುಖ್ಯ ಕಾರಣಕರ್ತರಾಗಿದ್ದಾರೆ. ಅವರಿಗೆ ನಮ್ಮ ತುಂಬು ಹೃದಯದ ಧನ್ಯವಾದಗಳು.

ಈ ಸಂಪುಟ ಸಿದ್ಧವಾಗಬೇಕಾದರೆ ನಮಗೆ ನೆರವನ್ನಿತ್ತ ಎಲ್ಲ ಪ್ರತ್ಯಕ್ಷ–ಪರೋಕ್ಷ ಗೆಳೆಯರಿಗೂ, ಹಿತೈಷಿಗಳಿಗೂ, ಗುರುಗಳಿಗೂ ನಮ್ಮ ಅತ್ಯಂತ ಪ್ರೀತಿಯ ವಂದನೆಗಳು.

**ಸಂಪಾದಕರು**

# ಪರಿವಿಡಿ



## ಸ್ವಗತ



## ನುಡಿ – ಗೌರವ



## ಸಾಹಿತ್ಯ – ಸಲ್ಲಾಪ



## ಶಾಸನ & ಇತಿಹಾಸ

## ವಾಸ್ತು – ಶಿಲ್ಪ



## ಸಂಪದ – ಸಂಕೀರ್ಣ

# ಡಾ. ಕೆ.ಆರ್. ಗಣೇಶ ಅವರ ಸ್ವವಿವರ

| | | |
|---|---|---|
| ಹೆಸರು | : | **ಕೈದಾಳ ರಾಮಸ್ವಾಮಿ ಗಣೇಶ** |
| ತಂದೆ | : | **ದಿ॥ ಕೈದಾಳ ರಾಮಸ್ವಾಮಿ** |
| ತಾಯಿ | : | **ದಿ॥ ಶ್ರೀಮತಿ ಲಲಿತಮ್ಮ** |
| ಹುಟ್ಟಿದ ತಾರೀಖು | : | **೧೯-೧೨-೧೯೪೬** |
| ಹುಟ್ಟಿದ ಸ್ಥಳ | : | **ಬೆಂಗಳೂರು** |
| ಪ್ರಾಥಮಿಕ ಶಾಲೆಯ ಅಭ್ಯಾಸ | : | ಸರ್ಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ, ಮಾಗಡಿರಸ್ತೆ, ಬೆಂಗಳೂರು-೨೩. |
| ಪ್ರೌಢಶಾಲೆಯ ಅಭ್ಯಾಸ | : | ಆರ್ಯ ವಿದ್ಯಾಶಾಲಾ ಪ್ರೌಢಶಾಲೆ, ಗಾಂಧೀನಗರ, ಬೆಂಗಳೂರು-೧೯. |
| ಕಾಲೇಜು ಅಭ್ಯಾಸ | : | ೧. ಬಿ.ಎಸ್.ಸಿ. : ಶ್ರೀ ರೇಣುಕಾಚಾರ್ಯ ಕಾಲೇಜು, ಆನಂದರಾವ್ ವೃತ್ತ, ಬೆಂಗಳೂರು-೫೬೦೦೦೯.<br>೨. ಬಿ.ಎಡ್. : ಎಂ.ಇ.ಎಸ್. ಟೀಚರ್‍ಸ್ ಕಾಲೇಜು, ಮಲ್ಲೇಶ್ವರಂ ಬೆಂಗಳೂರು.<br>೩. ಎಂ.ಎ. : ಸೆಂಟ್ರಲ್ ಕಾಲೇಜು, ಬೆಂಗಳೂರು. |
| ವಿದ್ಯಾಭ್ಯಾಸ ವಿವರಗಳು | : | ಅ) ಬೆಂಗಳೂರು ವಿಶ್ವವಿದ್ಯಾಲಯ-ಬೆಂಗಳೂರು<br>೧. ಬಿ.ಎಸ್‌ಸಿ. : ಪ್ರಮುಖ ವಿಷಯಗಳು :<br>– ಭೌತಶಾಸ್ತ್ರ ಮತ್ತು ಗಣಿತಶಾಸ್ತ್ರ-೧೯೬೬.<br>೨. ಬಿ.ಎಡ್., ಪ್ರಮುಖ ವಿಷಯಗಳು :<br>– ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ-೧೯೬೭.<br>೩. ಎಂ.ಎ., – ಕನ್ನಡ (ವಿಶೇಷ ವಿಷಯಗಳು : ಶಾಸನಶಾಸ್ತ್ರ ಮತ್ತು ಕರ್ನಾಟಕದ ಸಾಂಸ್ಕೃತಿಕ ಇತಿಹಾಸ-೧೯೭೦.)<br>ಆ) ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ-ಅನಂತಪುರ-ಆಂಧ್ರಪ್ರದೇಶ.<br>೧. ಪಿಎಚ್.ಡಿ.-ವಿಷಯ : ಆಂಧ್ರಪ್ರದೇಶದ ಕನ್ನಡ ಶಾಸನಗಳು ಒಂದು ಅಧ್ಯಯನ – ೧೯೯೪.<br>**ಮಾರ್ಗದರ್ಶಕರು : ಡಾ॥ ಆರ್. ಶೇಷಶಾಸ್ತ್ರಿ**<br>ಮುಖ್ಯಸ್ಥರು, ತೆಲುಗು-ತೌಲನಿಕ ಅಧ್ಯಯನ ಕೇಂದ್ರ ಆಂಧ್ರಭಾರತಿ, ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಅನಂತಪುರಂ, ಆಂಧ್ರಪ್ರದೇಶ.<br>ಇ) ಇಂಗ್ಲೀಷ್ ಬೆರಳಚ್ಚು-(ಜ್ಯೂನಿಯರ್)-೧೯೬೭.<br>– ಮೈಸೂರು ಸೆಕೆಂಡರಿ ಎಜುಕೇಷನ್ ಎಕ್ಸಾಮಿನೇಷನ್ ಬೋರ್ಡ್. |
| ಕೆಲಸ/ಹುದ್ದೆಗಳು | : | ೧. ಅಧ್ಯಾಪಕ-ವಿಜ್ಞಾನ/ಗಣಿತ ವಿಷಯಗಳು<br>ದಿ ಓರಿಯಂಟರ್ ಹೈಸ್ಕೂಲ್ ರಾಜಾಮಹಲ್ ಗುಟ್ಟಹಳ್ಳಿ, ಬೆಂಗಳೂರು. ೧೯೬೭-೧೯೬೮. |

೨. ಕನ್ನಡ ಉಪನ್ಯಾಸಕ, ಆಚಾರ್ಯ ಪಾಠಶಾಲಾ ಕಾಲೇಜು
೧-೭-೧೯೭೦. ರಿಂದ ೩೧-೧೨-೨೦೦೪,
ನರಸಿಂಹರಾಜ ಕಾಲೋನಿ, ಬೆಂಗಳೂರು-೧೯.

೩. ಪ್ರಿನ್ಸಿಪಾಲ್, ಆಚಾರ್ಯ ಪಾಠಶಾಲಾ ವಾಣಿಜ್ಯ ಕಾಲೇಜು,
ನರಸಿಂಹರಾಜ ಕಾಲೋನಿ, ಬೆಂಗಳೂರು-೧೯. ೨೦೦೩.

೪. ಅತಿಥಿ ಉಪನ್ಯಾಸಕ-ವಿಷಯಗಳು: ಶಾಸನಶಾಸ್ತ್ರ, ಗ್ರಂಥ ಸಂಪಾದನೆ.
ಎ) ಸ್ನಾತಕೋತ್ತರ ಕೇಂದ್ರ, ಕೋಲಾರ, ಬೆಂಗಳೂರು,
ವಿಶ್ವವಿದ್ಯಾಲಯ, ೧೯೯೬, ೧೯೯೭.
ಬಿ) ಸ್ನಾತಕೋತ್ತರ ಕೇಂದ್ರ ಶ್ರೀ ಕುವೆಂಪು ಕಾಲೇಜು, ಕೆಂಗಲ್,
ಚನ್ನಪಟ್ಟಣ ೨೦೦೦-೨೦೦೧.

೫. ಅತಿಥಿ ಉಪನ್ಯಾಸಕ-ವಿಷಯಗಳು : ಗ್ರಂಥ ಸಂಪಾದನೆ, ಛಂದಸ್ಸು.
ಎ) ದೂರ ಶಿಕ್ಷಣ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೮,
೧೯೯೯, ೨೦೦೦, ೨೦೦೨.

೬. ಶಾಸನ ಶಾಸ್ತ್ರ-ಗೌರವ ಉಪನ್ಯಾಸಕ, ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು-೧೮. ೧೯೭೮ ರಿಂದ

೭. ಹಳಗನ್ನಡ ಕಾವ್ಯ ಶಿಬಿರಗಳು-ಸಂಚಾಲಕ,
ಉಪನ್ಯಾಸಕ ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ,
ನರಸಿಂಹರಾಜ ಕಾಲೋನಿ, ಬೆಂಗಳೂರು-೧೯.
೨೦೦೧, ೨೦೦೨

೮. ಮೌಲ್ಯಮಾಪನ ಕೇಂದ್ರದ ನಿರ್ದೇಶಕ / ವ್ಯವಸ್ಥಾಪಕ,
ಬೆಂಗಳೂರು ವಿಶ್ವವಿದ್ಯಾಲಯ ಅಕ್ಟೋಬರ್ ೨೦೦೨ರ
ಪರೀಕ್ಷೆಗಳು ಬೆಂಗಳೂರು.

೯. ಅಧ್ಯಯನ ಮಂಡಳಿ ಸದಸ್ಯ, ಬೆಂಗಳೂರು
ವಿಶ್ವವಿದ್ಯಾಲಯ ಕನ್ನಡ ಸ್ನಾತಕ ಅಧ್ಯಯನ ಮಂಡಳಿ,
೨೦೦೦, ೨೦೦೧, ೨೦೦೨.

೧೦. ಅಧ್ಯಯನ ಮಂಡಳಿ ಸದಸ್ಯ, ಶಾಸನಶಾಸ್ತ್ರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ-ಹಂಪಿ ೨೦೦೨, ೨೦೦೩.

ಪ್ರಕಟವಾದ ಗ್ರಂಥಗಳು :

೧. ಶ್ರೀ ರಾಮಕಥೆಯ ಸಹಜ ಚಿತ್ರ ; ತಂದೆ ದಿ॥ ಕೈದಾಳ
ರಾಮಸ್ವಾಮಿ ಅವರೊಂದಿಗೆ, ೧೯೭೩.

೨. ಸರ್ವಜ್ಞವಚನ ಸಂಗ್ರಹ, ಶ್ರೀ ವೆಂಕಟರಾವ್,
ಅವರೊಂದಿಗೆ ಸಹ ಸಂಪಾದನೆ-ಪ್ರ: ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ,
ಬೆಂಗಳೂರು-೧೯, ೧೯೮೦.

೩. ಆಂಧ್ರಪ್ರದೇಶದ ಕನ್ನಡ ಶಾಸನಗಳು-ಒಂದು ಅಧ್ಯಯನ.
- ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮, ೧೯೯೬

೪. ಛಂದಸ್ಸು–ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೮, ೧೯೯೮.

೫. ಆಂಧ್ರಪ್ರದೇಶದ ಕನ್ನಡ ಶಾಸನಗಳು–ಎರಡು
ಸಂಪುಟಗಳು (ಡಾ॥ ಆರ್. ಶೇಷಶಾಸ್ತ್ರಿ ಅವರೊಂದಿಗೆ ಸಂಪಾದನೆ)
– ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೬. ಮುದ್ದಣ್ಣ ಪ್ರಶಸ್ತಿ ಗ್ರಂಥ, ಶ್ರೀ ಟಿ. ಕೇಶವ ಭಟ್ಟರೊಂದಿಗೆ ಸಂಪಾದನೆ
– ಪ್ರ: ಸಾಹಿತ್ಯ ಕುಟೀರ, ಬೆಂಗಳೂರು, ೧೯೭೪.

೭. ಸಿರಿಭೂವಲಯ–(ಗ್ರಂಥ/ಹಾಗೂ ಲೇಖನಗಳ ಸಂಗ್ರಹ)
ಹಿರಿಯ ವಿದ್ವಾಂಸರೊಂದಿಗೆ ಸಂಪಾದನೆ.
ಪ್ರ: ಪುಸ್ತಕ ಲೋಕ, ಬೆಂಗಳೂರು ೨೦೦೨.

೮. ಶಾಸನ ಸರಸ್ವತೀ ಶಾಸನಗಳನ್ನ ಕುರಿತ ಲೇಖನಗಳು
– ಪ್ರ.: ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ,
ಧಾರವಾಡ, ೨೦೦೭–೨೦೦೮

೯. ಶಾಸನಗಳನ್ನು ಕುರಿತ ಲೇಖನಗಳು
ಪ್ರ.: ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ,
ಧಾರವಾಡ, ೨೦೦೭–೨೦೦೮

ವಿಶೇಷ ಗೋಷ್ಠಿಗಳು :

೧. ಪ್ರಾಕೃತ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
– 'ಜೈನ ಅಧ್ಯಯನ ಗೋಷ್ಠಿ'.
ವಿಷಯ : ಆಂಧ್ರಪ್ರದೇಶದ ಜೈನ ದೇವಾಲಯಗಳು, ೧೯೯೫.

೨. ಆಂಧ್ರ ಭಾರತಿ, ಶ್ರೀ ಕೃಷ್ಣದೇವರಾಯ, ವಿಶ್ವವಿದ್ಯಾಲಯ, ಅನಂತಪುರಂ, ಆಂಧ್ರಪ್ರದೇಶ.
– 'ಕನ್ನಡ ತೆಲುಗು ಭಾಷಾ ಗೋಷ್ಠಿ'.
ವಿಷಯ: ಕನ್ನಡ–ತೆಲುಗು ದ್ವಿಭಾಷಾ ಶಾಸನಗಳು, ೧೯೯೬.

೩. ಕನ್ನಡ ಸಾಹಿತ್ಯ ಪರಿಷತ್ತು, ತುಮಕೂರು ಜಿಲ್ಲೆ, ಮಧುಗಿರಿ
– 'ಜಿಲ್ಲಾ ಸಾಹಿತ್ಯ ಸಮ್ಮೇಳನ'.
ವಿಷಯ : ಪ್ರಾಚೀನ ಕರ್ನಾಟಕದ ಪ್ರಮುಖ ಮಹಿಳೆಯರು (ವಿಶೇಷವಾಗಿ ತುಮಕೂರು ಜಿಲ್ಲೆಯ ಶಾಸನಗಳು) ೧೯೯೭.

೪. ಕನ್ನಡ ಸ್ನಾತಕೋತ್ತರ ಕೇಂದ್ರದ ಆಶ್ರಯ, ಕೋಲಾರ.
– 'ಕೆ.ವಿ. ಅಯ್ಯರ್–ವ್ಯಕ್ತಿ–ಕೃತಿ ಗೋಷ್ಠಿ'
ವಿಷಯ : ಕೆ.ವಿ. ಅಯ್ಯರ್ ಅವರ 'ಕಥೆಗಳು' ೧೯೯೭.

೫. ಜೈನ್ ಕಾಲೇಜು, ಮೂಡುಬಿದರೆ, ದಕ್ಷಿಣ ಕನ್ನಡ ಜಿಲ್ಲೆ
– 'ತುಳು ನಾಡು–ಗೋಷ್ಠಿ'.
ವಿಷಯ : ತುಳುನಾಡಿನ ಜೈನ ಶಾಸನಗಳಲ್ಲಿ ಸಾಹಿತ್ಯ ಗುಣ ೨೦೦೨.

ಪ್ರಕಟವಾದ ಪ್ರಮುಖ ಲೇಖನಗಳು :

೧. ಮುದ್ದಣನ 'ಶ್ರೀ ರಾಮ ಪಟ್ಟಾಭಿಷೇಕ'
– ಮುದ್ದಣ ಪ್ರಶಸ್ತಿ ಗ್ರಂಥ ೧೯೭೪.

೨. ದಶಕದ ಸಾಹಿತ್ಯ : ಭಾಷಾಂತರಿತ ಕೃತಿಗಳು
– ಕೌಸ್ತುಭ, ಸಂ.: ಎಂ.ವಿ.ಸೀ., ಬೆಂಗಳೂರು, ೧೯೭೭
೩. ಸಿರಿಭೂವಲಯ – ಒಂದು ವಿವೇಚನಿ
– ಹರತಿಸಿರಿ, ಸಂ.: ಸು. ಲಕ್ಷ್ಮಣ ತೆಲಗಾವಿ, ಬೆಂಗಳೂರು ೧೯೮೭
೪. ಆಂಧ್ರಪ್ರದೇಶದ ಕಾಳಾಮುಖ ಶೈವರು
– ಸಂಶೋಧನ ಸಂ.: ಲಕ್ಷ್ಮಣ ತೆಲಗಾವಿ, ಬೆಂಗಳೂರು–೪೦ ೧೯೯೧
೫. ಕನ್ನಡ ನವೋದಯ ಸಾಹಿತ್ಯದಲ್ಲಿ ನಾಡು–ನುಡಿ ಚಿಂತನೆ
– ಅಭಿರಾಮ, ಸಂ: ಎಸ್.ವಿ. ಮನ್ವಾಚಾರ್,
ಕಾ.ವೆಂ. ಶ್ರೀನಿವಾಸಮೂರ್ತಿ, ಬೆಂಗಳೂರು, ೧೯೯೭
೬. ಆಂಧ್ರಪ್ರದೇಶದ ಕೆಲವು ಕನ್ನಡ ಶಾಸನಗಳು
ಪುನರಾವಲೋಕನ – ಸಂ.: ಡಾ. ಎಚ್.ಎಸ್. ಗೋಪಾಲರಾವ್
– ಕನಕಸಿರಿ, ಪ್ರೊ. ಜಿ. ಅಬ್ದುಲ್ ಬಷೀರ್, ಬೆಂಗಳೂರು, ೧೯೯೯
೭. ಆಂಧ್ರಪ್ರದೇಶ ಕನ್ನಡ ಶಾಸನಗಳು – ಶಕಪುರುಷ,
ಸಂ.: ಡಾ. ಬಿ.ಕೆ. ಹಿರೇಮಠ, ಬಾಗಲಕೋಟೆ, ೨೦೦೦
೮. ಜೈನ ಶಾಸನಗಳ ಛಂದಸ್ಸು – ಶಾಸನ ಅಧ್ಯಯನ,
ಸಂ.: ದೇವಕೊಂಡಾರೆಡ್ಡಿ, ಹಂಪಿ, ೨೦೦೪
೯. ಸದ್ಗುಣ ಸಂಪನ್ನ ಗುರು (ಪ್ರೊ॥ ಎಂ.ವಿ. ಸೀತಾರಾಮಯ್ಯ)
– ಶಿಷ್ಯರು ಕಂಡಂತೆ ಗುರುಗಳು, ಪ್ರ.: ಸಿಂಚನ ಕನ್ನಡ ವೇದಿಕೆ, ಬೆಂಗಳೂರು–೪೧, ೨೦೧೦

ವಿಶೇಷ ಆಸಕ್ತಿಗಳು :

೧. ಭಾಷಾ ಶಾಸ್ತ್ರ ಮತ್ತು ಛಂದಸ್ಸು.
೨. ಗ್ರಂಥ ಸಂಪಾದನೆ.
೩. ಶಾಸನಗಳ ಸಂಪಾದನೆ – ಅಧ್ಯಯನ.
೪. ಇಂಗ್ಲೀಷ್ ಬೆರಳಚ್ಚು
೫. ಹಳಗನ್ನಡ ಕಾವ್ಯಾಭ್ಯಾಸ ಶಿಬಿರ ಕಾರ್ಯಕ್ರಮಗಳು.
೬. ವ್ಯಾಕರಣ–ಭಾಷಾ ಬೋಧನೆ.
೭. ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳಲ್ಲಿ ಸಹಕಾರ.
೮. ಕರ್ನಾಟಕ ಸಂಗೀತ ಮತ್ತು ೧೯೭೦ರ ದಶಕದ ಹಿಂದಿನ ಕನ್ನಡ ಹಿಂದಿ ಚಲನಚಿತ್ರ ಗೀತೆಗಳು.
೯. ಪುಸ್ತಕ ಸಂಗ್ರಹ.
೧೦. ಭಾರತದ ಪ್ರಸಿದ್ಧ ಚಲನಚಿತ್ರಗಳ ವಿಸಿಡಿ/ಡಿವಿಡಿಗಳ ಸಂಗ್ರಹ ಯೋಜನೆ.
೧೧. ಪ್ರೌಢ ಶಾಲಾ ಅಧ್ಯಾಪಕರ ಕನ್ನಡ ಅಧ್ಯಯನ/ಬೋಧನಾ ಸಮಸ್ಯೆಗಳ ಬಗೆಗೆ. ಭಾಷಣಗಳು.

–: ೦೦೦ :–

# ಅಭಿನಂದನಾ ಸಮಿತಿ

ಅಧ್ಯಕ್ಷರು

ಶ್ರೀ ಜಿ.ಎಸ್.ಎಸ್. ರಾವ್

ಕಾರ್ಯದರ್ಶಿಗಳು

ಡಾ॥ ಬಿ.ಆರ್. ಸತ್ಯನಾರಾಯಣ

ಡಾ॥ ಜಿ. ಮನೋಜ್

ಕೋಶಾಧಿಕಾರಿ

ಶ್ರೀಮತಿ ಸಂಧ್ಯಾ ರಾಮಚಂದ್ರ

ಸಂಪಾದಕರು

ಡಾ॥ ಬಿ.ಆರ್. ಭಾರತೀ

ಶ್ರೀ ಜಿ.ಕೆ. ದೇವರಾಜಸ್ವಾಮಿ

ಶ್ರೀ ಸುಂಕಂ ಗೋವರ್ಧನ

ಸಲಹಾ ಮಂಡಳ

ಡಾ॥ ಆರ್. ಶೇಷಶಾಸ್ತ್ರಿ

ಡಾ॥ ದೇವರಕೊಂಡಾರೆಡ್ಡಿ

ಡಾ॥ ಪಿ.ವಿ. ಕೃಷ್ಣಮೂರ್ತಿ

ಡಾ॥ ಶ್ಯಾಮಲಾರತ್ನಕುಮಾರಿ

ಡಾ॥ ಅ.ಲ. ನರಸಿಂಹನ್

ಡಾ॥ ಎಸ್.ವಿ. ವೆಂಕಟೇಶಯ್ಯ

ಡಾ॥ ಕೆ. ವಸಂತಲಕ್ಷ್ಮೀ

## ಬೊಪ್ಪಣನ ಗೊಮ್ಮಟಸ್ತುತಿ

ಕವಿಯ ಪರಿಚಯ :-

ಬೊಪ್ಪಣನಿಂದ ಅಥವಾ ಸುಜನೋತ್ತಂಸನಿಂದ ರಚಿತವಾದ ಈ ಸ್ತುತಿಯು ೨೭ ವೃತ್ತಗಳಿಂದ, ೩ ಕಂದ ಪದ್ಯಗಳಿಂದ ಕೂಡಿ ಸಣ್ಣ ಕಾವ್ಯದಂತೆಯೇ ಇದೆ. ಕನ್ನಡ ಶಾಸನ ಪ್ರಪಂಚದಲ್ಲಿ ನಿಜವಾಗಲೂ 'ಕಾವ್ಯ' ಎಂದು ಕರೆಸಿಕೊಳ್ಳಬಹುದಾದ ಏಕೈಕ ಶಾಸನ ಈ ಗೊಮ್ಮಟಸ್ತುತಿ

ಬೊಪ್ಪಣ ಕವಿಯು ತಾನು ವಿನಯಶೀಲನೆಂದು ಇಲ್ಲಿ ತೋರಿಸಿಕೊಂಡಿದ್ದಾನೆ. ಸುಜನರು ಯಾವಾಗಲೂ ಭವ್ಯರಾದವರು. ತನಗೆ ಸಜ್ಜನರು ತಲೆಯ ಆಭರಣದಂತೆ ಎಂಬ ಅರ್ಥದಲ್ಲಿ ತಾನು ಸುಜನೋತ್ತಂಸನೆಂದೂ; ಸಜ್ಜನರಿಗೆ ತಾನು ತಲೆಯ ಆಭರಣ ಎಂಬ ಅರ್ಥದಲ್ಲಿ ಅಲ್ಲ' ಎಂದು ಹೇಳಿಕೊಂಡಿದ್ದಾನೆ.

ತಾನು 'ವಿದ್ಯಾಜಿತ ವೃಜಿನಂ' ಎಂದೂ, 'ಸುಕವಿ ಸಮಾಜನುತಂ' ಎಂದೂ ಹೆಮ್ಮೆಯಿಂದ ಕರೆದುಕೊಂಡಿದ್ದಾನೆ ಬೊಪ್ಪಣ. ತಾನು ಕನ್ನಡ ಕವಿಗಳಲ್ಲಿ ಹಿರಿಯನೆಂದು, ಪರಸೈದ್ಧಾಂತಿಕ ಚಕ್ರೇಶ್ವರನಾದ ನಯಕೀರ್ತಿಯ ಶಿಷ್ಯನಾದ ಬಾಲಚಂದ್ರಮುನಿಯ ಅಪ್ಪಣೆಯಂತೆ ಗೊಮ್ಮಟಸ್ತುತಿಯನ್ನು ರಚಿಸಿದುದಾಗಿಯೂ ಹೇಳಿಕೊಂಡಿದ್ದಾನೆ.

ನಮ್ಮ ಅನೇಕ ಶಾಸನಕವಿಗಳು ಬರೆದಿರಬಹುದಾದ ಗ್ರಂಥಗಳು ನಮಗೆ ದೊರೆತಿಲ್ಲ. ಅಥವಾ ಅವರ ಕಾವ್ಯಶಕ್ತಿ ಶಾಸನಗಳಿಗೆ ಮಾತ್ರ ಸೀಮಿತವಾಗಿತ್ತೇನೋ!

- ಆದರೆ ಬೊಪ್ಪಣ ಪಂಡಿತನ ವಿಷಯದಲ್ಲಿ ಹಾಗಾಗಿಲ್ಲ. ಅವನ 'ನಿರ್ವಾಣ ಲಕ್ಷ್ಮೀಪತಿ ನಕ್ಷತ್ರ ಮಾಲಿಕೆ" ಎಂಬ ಕೃತಿ ಸಿಕ್ಕಿದೆ. ಭವ್ಯಗು (ಭಕ್ತರು) ಕೇಳಿಕೊಳ್ಳಲಾಗಿ ಬೊಪ್ಪಣನು ಈ ಕಾವ್ಯವನ್ನು ರಚಿಸಿದನಂತೆ. ಇನ್ನು ಹಲವು ಕಂದಪದ್ಯಗಳು ಬೊಪ್ಪಣನ ಹೆಸರಿನಲ್ಲಿ ದೊರೆಯುತ್ತವೆ. ಮತ್ತೊಂದು ಗಮನಿಸಬೇಕಾದ ಅಂಶವೆಂದರೆ, ಕೇಶಿರಾಜ ತನ್ನ 'ಶಬ್ದಮಣಿದರ್ಪಣ'ದಲ್ಲಿ ಬೊಪ್ಪಣನನ್ನು ಹೆಸರಿಸಿರುವುದು. ಬಹುಶಃ ಬೊಪ್ಪಣ ತನ್ನ ಕಾಲದಲ್ಲಿ ಪ್ರಸಿದ್ಧನಾಗಿದ್ದ ಒಬ್ಬ ಕವಿಯಾಗಿರಬೇಕು.
- ಕೇಶಿರಾಜನ ಕಾಲವಾದ ಕ್ರಿ.ಶ. ೧೨೬೦ ಕ್ಕೆ ಹಿಂದೆ ಬೊಪ್ಪಣನ ಕಾಲ ಹೋಗುತ್ತದೆ. ಬೊಪ್ಪಣನು ರುದ್ರಭಟ್ಟ ಹಾಗು ನೇಮಿಚಂದ್ರರ ಸಮಕಾಲೀನ ಎಂಬ ಅಭಿಪ್ರಾಯವೂ ಇದೆ.

ರುದ್ರಭಟ್ಟನ ಕಾಲ. ಸು. ಕ್ರಿ.ಶ. ೧೧೮೦

ನೇಮಿಚಂದ್ರನ ಕಾಲ ಸು. ಕ್ರಿ.ಶ. ೧೧೭೦

- ಇವೆಲ್ಲದರ ಆಧಾರದಿಂದ, ಬೊಪ್ಪಣನು ಕ್ರಿ.ಶ. ಸು ೧೧೮೦ ರಲ್ಲಿದ್ದವನು ಎಂದು ಸಾಮಾನ್ಯ ನಿರ್ಧಾರಕ್ಕೆ ಬರಬಹುದಾಗಿದೆ..

ಕೈ.ರಾ. ಗಣೇಶರ ಕೈಬರಹ



ಬಾಲ್ಯದಲ್ಲಿ



ಬಿ.ಎಸ್‌ಸಿ. ಪದವಿ ಪಡೆದಾಗ

ಅಧ್ಯಾಪಕರ ಸಮೂಹ ಗಾಯನದಲ್ಲಿ ಹಾರ್ಮೋನಿಯಂ ವಾದಕರಾಗಿ, ಆಚಾರ್ಯ ಪಾಠ ಶಾಲೆ



ವಿದ್ಯಾರ್ಥಿಗಳ ಬೀಳ್ಕೊಡುಗೆಯಲ್ಲಿ ಹಾರ್ಮೋನಿಯಂ ವಾದಕರಾಗಿ



ಕಾರೇಪುರದ ವೀರಗಲ್ಲುಗಳು, 1989



**ತ್ರಿಮೂರ್ತಿಗಳು** : ಕೆ.ಆರ್. ಗಣೇಶ, ಆರ್. ಶೇಷಶಾಸ್ತ್ರಿ, ದೇವರಕೊಂಡಾರೆಡ್ಡಿ



ಕೈದಾಳ ರಾಮಸ್ವಾಮಿಗಳ ಕುಟುಂಬ



ಮಹಾನ್ ವಿದ್ವಾಂಸರ ಜತೆ ಹಸ್ತಪ್ರತಿ ಸಮ್ಮೇಳನದಲ್ಲಿ

ಮದುವೆಯ ದಿನ ತಂದೆ-ತಾಯಿಯರೊಂದಿಗೆ



ಕೆ.ಆರ್. ಗಣೇಶ - ಎಸ್. ಲತಾ ದಂಪತಿಗಳು



ಮದುವೆಯ ಸಮುಹೂರ್ತ



ಕೈ.ರಾ. ಗಣೇಶ ದಂಪತಿಗಳು



ಕೆಳದಿಯಲ್ಲಿ ಕೈ.ರಾ. ಗಣೇಶ ದಂಪತಿಗಳು



ಕೈ.ರಾ. ಗಣೇಶ ಕುಟುಂಬ, 1983



ಲಕ್ಕವಳ್ಳಿ ಅಣೆಕಟ್ಟಿನ ಬಳಿ



ಎಂ.ಎ. ಸಹಪಾಠಿಗಳೊಂದಿಗೆ



ಸ್ನೇಹಿತರೊಂದಿಗೆ ಜೋಗದ ಜಲಪಾತದ ಬಳಿ



ಎಂ.ಎ. ವಿದ್ಯಾರ್ಥಿಗಳೊಂದಿಗೆ ಕ್ರಿಕೆಟ್ ಮ್ಯಾಚ್

೧೯೮೮-೮೯ರ ಶಾಸನ ವಿದ್ಯಾರ್ಥಿಗಳು ಹಾಗೂ ಅಧ್ಯಾಪಕ ವೃಂದದೊಂದಿಗೆ

ಶಾಸನಶಾಸ್ತ್ರ ವಿದ್ಯಾರ್ಥಿಗಳು ಹಾಗೂ ಸಹ ಅಧ್ಯಾಪಕರೊಂದಿಗೆ ಗಣೇಶ ದಂಪತಿಗಳು



ಕೈ.ರಾ. ಗಣೇಶ ಕುಟುಂಬ, 1985



ಕೈ.ರಾ. ಗಣೇಶ ಕುಟುಂಬ, 2003

ತ್ರಿಮೂರ್ತಿಗಳು – ದೇವರಕೊಂಡಾರೆಡ್ಡಿ, ಆರ್. ಶೇಷಶಾಸ್ತ್ರಿ, ಕೆ.ಆರ್. ಗಣೇಶ, 2012

ಬಾ.ರಾ. ಗೋಪಾಲ್ ಪ್ರಶಸ್ತಿ ಸ್ವೀಕಾರ, 2005


ಹಸ್ತಪ್ರತಿ ವಿದ್ಯಾರ್ಥಿಗಳೊಂದಿಗೆ


ಹಸ್ತಪ್ರತಿ ವಿದ್ಯಾರ್ಥಿಗಳೊಂದಿಗೆ


ಸ್ಪರ್ಧಾತ್ಮಕ ಪರೀಕ್ಷೆಯ ತರಬೇತಿ ಶಿಬಿರದಲ್ಲಿ


ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ



ಕೊಲನುಪಾಕದ ಶಾಸನ ಸ್ತಂಭದ ಮುಂದೆ





ಕೃಷ್ಣಾನಂದ ಕಾಮತ್‌ರ
ಕ್ಯಾಮೆರಾ ಕಣ್ಣಲ್ಲಿ









ವಿವಿಧ ಭಂಗಿಗಳಲ್ಲಿ ಕೈ.ರಾ. ಗಣೇಶ

---

ಚಿತ್ರಗಳ ಕೃಪೆ : ಕೆ.ಆರ್. ಗಣೇಶ, ದೇವರಕೊಂಡಾರೆಡ್ಡಿ, ಆರ್. ಶೇಷಶಾಸ್ತ್ರಿ, ಪಿ.ವಿ. ಕೃಷ್ಣಮೂರ್ತಿ, ಶಿವು, ಸೋಮಶೇಖರ್, ಬಿ.ಆರ್. ಸತ್ಯನಾರಾಯಣ

# ಸ್ವಗತ



ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯ್ಯಮೌನ್ನತ್ಯಮುಂ
ಮುತಸೌನ್ದರ್ಯಮುಮಾಗೆ ಮತ್ತತಿಶಯಂ ತಾನಾಗದೌಂನತ್ಯಮುಂ
ನುತಸೌಂದರ್ಯ್ಯಮುಮೂರ್ಜಿತಾತಿಶಯಮುಂ ತಂನಲ್ಲಿನಿನ್ದಿರ್ದ್ದುವೇಂ
ಕ್ಷಿತಿಸಂಪೂಜ್ಯಮೊ ಗೊಂಮಟೇಶ್ವರ ಜಿನಶ್ರೀರೂಪಮಾತ್ಮೋಪಮಂ ॥

# ನನಗೆ ಕಲಿಸಿದವರು

* ಡಾ ಕೆ.ಆರ್. ಗಣೇಶ

ನಾನು ಪ್ರಾಥಮಿಕ ಶಾಲೆ ಪ್ರೌಢಶಾಲೆಗಳಲ್ಲಿ ಕಲಿತದ್ದು ಬರೀ 'ಗಟ್' ಮಾಡಿ. ಉಪಾಧ್ಯಾಯರು ಹೇಳಿದುದನ್ನೆಲ್ಲಾ ಬರೆದುಕೊಳ್ಳುವ, ಅದನ್ನು ಹಾಗೆಯೇ ಹೇಳುವ, ಬರೆಯುವ ಅಭ್ಯಾಸವನ್ನು ಬೆಳೆಸಿಕೊಂಡದ್ದು ಆ ಹಂತದಲ್ಲಿಯೇ. ಬೆಂಗಳೂರಿನ ಮಾಗಡೀರಸ್ತೆಯಲ್ಲಿರುವ ಸರ್ಕಾರೀ ಶಾಲೆಯಲ್ಲಿ. ನಾನು ಕಲಿತದ್ದು. ಏಳನೆಯ ತರಗತಿಯಲ್ಲಿ 'ಹಿಂದಿ'ಯನ್ನು ಐಚ್ಛಿಕವಾಗಿ ಆರಿಸಿಕೊಂಡಿದ್ದೆ. ಇನ್ನೊಂದು 'ಆರೋಗ್ಯಭಾಗ್ಯ'ದ ವಿಷಯವನ್ನು ಏಕೆ ಬಿಟ್ಟೆನೋ ಗೊತ್ತಿಲ್ಲ. ಭೂಗೋಳ, ಇತಿಹಾಸ, ಇಂಗ್ಲಿಷ್ ವಿಷಯಗಳನ್ನು ಪಾಠ ಹೇಳಿದ ಅಧ್ಯಾಪಕರ ಹೆಸರುಗಳೇ ಈಗ ನೆನಪಿಲ್ಲ. ತಮ್ಮ ಮೇಷ್ಟ್ರ ವೃತ್ತಿಯ ನಂತರ ಮಾಗಡೀರಸ್ತೆಯ ಈಶ್ವರನ ದೇವಾಲಯದಲ್ಲಿ ಅರ್ಚಕರಾಗಿದ್ದ ರಾಮನಾಥ್ ಒಬ್ಬರು ಮಾತ್ರ ನೆನಪಿಗೆ ಬರುತ್ತಾರೆ. ಆ ಕಾಲದಲ್ಲೇ ನನಗೆ ಯುದ್ಧದ ವಿಚಾರಗಳು ಇಷ್ಟವಾಗಿತ್ತು. ಮೈಸೂರಿನ ಯುದ್ಧಗಳು, ಪ್ಲಾಸೀ ಕದನ, ರಕ್ಕಸಗಿ–ತಂಗಡಗಿ ಯುದ್ಧಗಳ ವಿಚಾರವನ್ನು ಆಗಿನ ಮೇಷ್ಟ್ರು ಚೆನ್ನಾಗಿ ಹೇಳುತ್ತಿದ್ದರು. ಇಂಗ್ಲಿಷ್ ಮಾಸ್ಟರ್ ಅಂತೂ ರೆನ್ ಅಂಡ್ ಮಾರ್ಟಿನ್ ಗ್ರಾಮರ್‌ನ ಪಾಠವನ್ನು ಬೋರ್ಡ್ ತುಂಬಾ ಬರೆದು ಪಾಠ ಮಾಡುತ್ತಿದ್ದರು.

ಎಂಟನೆಯ ತರಗತಿಗೆ ಗಾಂಧೀನಗರ ಆರ್ಯವಿದ್ಯಾಶಾಲೆಗೆ ಸೇರಿದಾಗ, ನನ್ನನ್ನು ಇಂಗ್ಲಿಷ್ ಮಾಧ್ಯಮದ ತರಗತಿಗೆ ಸೇರಿಸಿಕೊಂಡರು. ವಿಜ್ಞಾನ ಮತ್ತು ಗಣಿತ ಶಾಸ್ತ್ರವನ್ನು ಐಚ್ಛಿಕವಾಗಿ ತೆಗೆದುಕೊಂಡು ಎಸ್.ಎಸ್.ಎಲ್.ಸಿ.ವರೆಗೆ ಕಲಿತದ್ದು ಯಾಂತ್ರಿಕವಾಗಿ. 'ರೇಖಾಗಣಿತ'ವನ್ನು ವಿಶೇಷವಾಗಿ ಕಲಿತೆ. ಈಗಲೂ ನನ್ನ ಬಳಿ ಹತ್ತನೆಯ ತರಗತಿಯ 'ರೇಖಾ ಗಣಿತ'ದ ಟಿಪ್ಪಣಿಗಳನ್ನು ಬರೆದುಕೊಂಡಿದ್ದ Rought Note Book ಇದೆ. ಯಾವುದೇ Theoremಗಳ Rider ಗಳನ್ನು ಬಿಡಿಸುವ ತಂತ್ರವನ್ನು ಮೇಷ್ಟ್ರು ಹೇಳಿಕೊಟ್ಟಿದ್ದರು. ಅಷ್ಟೇ ಚೆನ್ನಾಗಿ ಅಂಕಗಣಿತದ ಲೆಕ್ಕಗಳನ್ನು ಮಾಡುತ್ತಿದ್ದೆ. ಭೌತಶಾಸ್ತ್ರದ ಸುಂದರ್‌ರಾಜ್ ಮೇಷ್ಟ್ರು, ಜೀವಶಾಸ್ತ್ರದ ಪ್ರಹ್ಲಾದರಾಯರು, 'ವೆರಿ ಮುಂಡಾವಾಡ' ಎಂದು ಪ್ರೀತಿಯಿಂದ ಬೈಯುತ್ತಿದ್ದ ಹಿಂದಿಯ ಉಪಾಧ್ಯಾಯರಾದ ಆದಿನಾರಾಯಣ ಶಾಸ್ತ್ರಿಗಳು, ಇಂಗ್ಲಿಷ್ ಪಾಠದ ಉದ್ದದ ಸುಬ್ಬರಾಯರು, ಈಗಲೂ ನೆನಪಿನಲ್ಲಿದ್ದಾರೆ.

ಬೆಂಗಳೂರಿನ ಆನಂದರಾವ್ ಸರ್ಕಲ್ ಸಮೀಪದಲ್ಲಿರುವ ಶ್ರೀ ರೇಣುಕಾಚಾರ್ಯ ಕಾಲೇಜಿಗೆ ೧೯೬೭ನೇ ಇಸವಿಯಲ್ಲಿ ಪಿ.ಯು.ಸಿ.ಗೆ ಪಿ.ಸಿ.ಎಂ. ವಿದ್ಯಾರ್ಥಿಯಾಗಿ ಸೇರಿಕೊಂಡೆ. ಕಾಲೇಜಿನ ಬಸಪ್ಪ ಹಾಲ್‌ನಲ್ಲಿದ್ದ ದೊಡ್ಡ ಕೊಠಡಿಯೊಂದರಲ್ಲಿ ನಮ್ಮ ತರಗತಿಗಳು ನಡೆಯುತ್ತಿದ್ದವು. ಕಛೇರಿಯಿದ್ದ ಹಳೆಯ ಕಟ್ಟಡದ ಹಿಂಭಾಗದಲ್ಲಿದ್ದ ರಸಾಯನಶಾಸ್ತ್ರ ಪ್ರಯೋಗಶಾಲೆಯಲ್ಲಿ ಆಗಾಗ ಪ್ರಯೋಗಗಳನ್ನು ಮಾಡಿ ತೋರಿಸುತ್ತಿದ್ದರು. ನಮಗೆ ಆಗ ಚೆನ್ನಾಗಿ ಪಾಠ ನಡೆದದ್ದು ಗಣಿತ ಶಾಸ್ತ್ರ ಮತ್ತು ಕನ್ನಡದಲ್ಲಿ ಮಾತ್ರ. ವಯಸ್ಸಾದ ಕನ್ನಡ ಪಂಡಿತರೊಬ್ಬರು ಹಾಗೂ ಪ್ರೊ॥ ಆರ್. ರಾಚಪ್ಪನವರು ಮಾಡಿದ ಪಾಠಗಳು ಅಚ್ಚುಕಟ್ಟಾಗಿರುತ್ತಿದ್ದವು. ಯಾವಾಗಲೂ ತಡವಾಗಿ ಬರುತ್ತಿದ್ದ ಪಂಡಿತರ ಪಾಠಗಳು, ಶಿಸ್ತಾಗಿ ಬಟ್ಟೆ ಧರಿಸುತ್ತಿದ್ದ ರಾಚಪ್ಪನವರ ವಾಗ್ಝರಿ ಮನಸೆಳೆಯುತ್ತಿದ್ದವು. ಭಾಸನ 'ಪಂಚರಾತ್ರರೂಪಕಂ' (ಅಳಸಿಂಗಾಚಾರ್ಯರ ಅನುವಾದ) ರಾಘವಾಂಕನ ಸಿದ್ಧರಾಮ ಚರಿತೆಯ ಸಂಗ್ರಹ, ಚದುರಂಗರ ಕಥೆಗಳು – ನಮಗಿದ್ದ ಪಠ್ಯಗಳು.

ನಮ್ಮ ಅದೃಷ್ಟ ನೆಟ್ಟಗಿರಲಿಲ್ಲ ಎಂದು ತೋರುತ್ತದೆ ಪದವಿ ತರಗತಿಯಲ್ಲಿ ನಮಗೆ ಗುಬ್ಬಿಯ ಮಲ್ಲಣಾರ್ಯನ 'ಭಾವಚಿಂತಾ–ರತ್ನ'ದಂತಹ ಭಾಮಿನೀ ಷಟ್ಪದಿಯ ಕಾವ್ಯ ಪಠ್ಯವಾಗಿತ್ತು. ಅದನ್ನೂ ಶ್ರದ್ಧೆಯಿಂದ ಕನ್ನಡ ಪಂಡಿತರು ಪಾಠ ಮಾಡಿದುದು ಮಾದರಿಯಾಗಿತ್ತು. ಬಿ. ವೆಂಕಟಾಚಾರ್ಯರ 'ವಿಷವೃಕ್ಷ', ಕುವೆಂಪು ಅವರ 'ಪಕ್ಷಿಕಾಶಿ', ಮಾಸ್ತಿಯವರ 'ಯಶೋಧರ', ಕಾರಂತರ 'ಚಿಗುರಿದ ಕನಸು', ತೇನ್‌ಸಿಂಗನ ಜೀವನ ಕಥನಗಳು ಕಾವ್ಯದಿಂದ ಆಗಿದ್ದ, ಅಸಮಾಧಾನವನ್ನು ದೂರಮಾಡಿದ್ದವು. ಮುಂದೆ ಕನ್ನಡ ಉಪನ್ಯಾಸಕನಾಗಿ 'ಭಾವಚಿಂತಾರತ್ನ'ವನ್ನೇ ಪಾಠ ಮಾಡಬೇಕಾಗಿ ಬಂದಿತು. ಆಗ ನಾನು ಬರೆದ 'ಟಿಪ್ಪಣಿ'ಗಳು ಪಂಡಿತರ

ಪಾಠದ ನೆನಪಿನಿಂದ ಬರೆದದ್ದು. ಒಂದು 'ಉಪಪಠ್ಯ'ವನ್ನು ಪಾಠ ಮಾಡಬೇಕಾಗಿ ಬಂದಾಗಲೂ ಆ ಕನ್ನಡ ಅಧ್ಯಾಪಕರು ತೋರಿಸುತ್ತಿದ್ದ ಶಿಸ್ತು ಮುಂದಕ್ಕೆ ನನಗೆ ದಾರಿ ತೋರಿಸಿತು. ಎಂದೂ ನಾನು ಉಪಪಠ್ಯಗಳನ್ನು ಹಗುರವಾಗಿ ಕಾಣಲಿಲ್ಲ.

ಪಿ.ಯು.ಸಿ.ಯಲ್ಲಿ ಭೌತಶಾಸ್ತ್ರ ವಿಷಯದಲ್ಲಿ. ನಾನು ೭೨ ಅಂಕಗಳನ್ನು ಗಳಿಸಿದ್ದರಿಂದ (ಕಾಲೇಜಿನ ಪರೀಕ್ಷೆ) ನನಗೆ ಭೌತಶಾಸ್ತ್ರದ ಪಾರಿಭಾಷಿಕ ಶಬ್ದಕೋಶ – ಬಹುಮಾನವಾಗಿ ಬಂದಿತು. ಅದು ಈಗ ನನ್ನ ಮಕ್ಕಳ ಪುಸ್ತಕದ ಜೊತೆಗೆ ಸೇರಿದೆ.

ಪಿ.ಯು.ಸಿ.ಯಲ್ಲಿ ನಾನು ಎರಡನೆಯ ದರ್ಜೆಯಲ್ಲಿ ತೇರ್ಗಡೆಯಾದೆ. ನಮ್ಮ ಫಲಿತಾಂಶಗಳು ಆಗ ದಿನಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ಅಷ್ಟಕ್ಕೇ ಸಂತೋಷಗೊಂಡ ನನ್ನ ತಂದೆ, ಕಾಲೇಜಿನ ಪಕ್ಕದಲ್ಲೇ ಇದ್ದ ಟೂರಿಸ್ಟ್ ಹೋಟೆಲ್‌ನಲ್ಲಿ ಕಾಫಿ ಕೊಡಿಸಿ ಮನೆಗೆ ಕಳುಹಿಸಿದರು. ಮಾಗಡೀರಸ್ತೆಯಲ್ಲಿರುವ ನಮ್ಮ ಮನೆಗೆ ಸಾಮಾನ್ಯವಾಗಿ ಮಿತ್ರರೊಡನೆ ಹರಟುತ್ತಾ, ರೈಲ್ವೆ ನಿಲ್ದಾಣದೊಳಗಿಂದ ನಡೆದೇ ಹೋಗುತ್ತಿದ್ದೆ. ಬಡಬಡ ಮಾತನಾಡುತ್ತಿದ್ದ ಪ್ರಾಣೇಶ್ ಮೂರ್ತಿ, ದೊಡ್ಡವನಾಗಿದ್ದರೂ ಹೆಬ್ಬೆಟ್ಟು ಚೀಪಿಕೊಂಡೇ ಇರುತ್ತಿದ್ದ ಶ್ರೀನಿವಾಸ ರಾಘವನ್ ನನ್ನ ಸಂಗಾತಿಗಳಾಗಿದ್ದರು. ಇವರಿಬ್ಬರೂ ನನ್ನ ಜೊತೆಗೆ ಬಿ.ಎಸ್.ಸಿ.ಗೂ ಸೇರಿಕೊಂಡರು. ನಾವೂ ಮೂರು ಜನವೂ ಪಿ.ಎಂ. (ಭೌತಶಾಸ್ತ್ರ, ಗಣಿತಶಾಸ್ತ್ರ) ಮೇಜರ್ ವಿದ್ಯಾರ್ಥಿಗಳು.

ತರಗತಿಗಳಲ್ಲಿ ಕೆಲವು ವಿಶೇಷವಾಗಿರುತ್ತಿದ್ದವು. ಗಣಿತಶಾಸ್ತ್ರ ವಿಚಾರದಲ್ಲಿ ಆಗ ರೇಣುಕಾಚಾರ್ಯ ಕಾಲೇಜು ಅಗ್ರಪಂಕ್ತಿಯಲ್ಲಿತ್ತು. ನಮಗೆ ಪ್ರೊ॥ ಕುಬೇರ್ Astronomy ಪಾಠ ಮಾಡಿದರು. ಈಗ ಆ ವಿಷಯವನ್ನು ಬಿ.ಎಸ್.ಸಿ. ವಿದ್ಯಾರ್ಥಿಗಳು ಓದುವುದೇ ಇಲ್ಲ. ನಿಷ್ಠುರರಾದ ಪ್ರೊ. ಸೋಮಶೇಖರ್, ಪಾಠ ಬಿಟ್ಟು ಕದಲುತ್ತಲೇ ಇರಬಲಿಲ್ಲ. ಯಾವ ಪುಸ್ತಕವನ್ನೂ ಇಟ್ಟುಕೊಳ್ಳದೇ ನಿರರ್ಗಳವಾಗಿ ಲೆಕ್ಕಗಳನ್ನು ಮಾಡಿಸುತ್ತಿದ್ದರು. ಅವರು ಮಾಡುತ್ತಿದ್ದ Statistics ಪಾಠಗಳ ಟಿಪ್ಪಣಿಗಳನ್ನು ಈಗಲೂ ನಾನು ಕಾದಿರಿಸಿಕೊಂಡಿದ್ದೇನೆ. ಹಕ್ಕಿಯೊಂದು ಹೊಡೆದದ್ದರಿಂದ ತಮ್ಮ ಒಂದು ಕಣ್ಣನ್ನೇ ಕಳೆದುಕೊಂಡಿದ್ದ ಸೋಮಶೇಖರ್ ಅವರಿಗೆ ನಾನು ಗಣಿತವನ್ನು ಬಿಟ್ಟು ಕನ್ನಡದ ಕಡೆಗೆ ಹೋದದ್ದು ಇಷ್ಟವಿರಲಿಲ್ಲ ನಗುತ್ತಲೇ ಬೈಯ್ಯುತ್ತಿದ್ದರು. Dynamics ಪಾಠ ಮಾಡುತ್ತಿದ್ದ. ಪ್ರೊ॥ ಷಡಕ್ಷರಯ್ಯನವರು ಪಾಠ ಮಾಡುತ್ತಿದ್ದ ರೀತಿ ನಮಗೆ ಅರ್ಥವಾಗುತ್ತಿರಲಿಲ್ಲ. ಅಥವಾ ಅರ್ಥ ಮಾಡಿಕೊಳ್ಳಲು ಬರುತ್ತಿರಲಿಲ್ಲ. ಅವರು ಕೊಡುತ್ತಿದ್ದ Integral Calculus ಲೆಕ್ಕಗಳಲ್ಲಿ ಕೆಲವನ್ನು ನಾನು ತ್ರಿವೇಣಿ ಟಾಕೀಸಿನಲ್ಲಿ ದೇವಾನಂದನ 'ತೀನ್‌ದೇವಿಯಾನ್' ಸಿನಿಮಾದ ಟಿಕೇಟ್ ಕ್ಯೂನಲ್ಲಿ ನಿಂತು ಬಿಡಿಸಿದ್ದೇನೆ.

ನಮಗೆ ಪಿ.ಯು.ಸಿಯಲ್ಲಿ Differential Calculus ಇರಲಿಲ್ಲ. ಆದರೆ ಪದವಿಯಲ್ಲಿ ಭೌತಶಾಸ್ತ್ರ ತರಗತಿಯಲ್ಲಿ ಅದರ ನೇರವಾದ ಬಳಕೆಯಾಗುತ್ತಿತ್ತು. ಭೌತಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಪ್ರೊ॥ ಅಜಿತರಾಜಯ್ಯ ನಮಗೆ ಮೊದಲು ಮಾಡಿದ್ದು ಗಣಿತಪಾಠ. ಈಬುಥಿಣ Principles ಮೂಲಕ Differentation ಮಾಡುವುದು ಹೇಗೆ ಎಂದು ಅವರು ಹೇಳಿಕೊಟ್ಟರು. Algebraic Functions ಆಗಲಿ Trigonometric Functions ಆಗಲಿ, ಅಜಿತರಾಜಯ್ಯನವರು ಹೇಳಿಕೊಟ್ಟ ಕ್ರಮದಿಂದ First Principle ಅನ್ನು ಅನ್ವಯ ಮಾಡಿದರೆ ಎಷ್ಟು ಸುಲಭವಾಗಿ ಅರ್ಥವಾಗುತ್ತದೆಂದು ಅನೇಕರಿಗೆ ತಿಳಿದಿಲ್ಲ. ಪ್ರೊ॥ ಸಂಪಂಗಿರಾಮಶೆಟ್ಟಿ ಅವರ Modern Physics ಪಾಠಗಳು ಅಚ್ಚುಕಟ್ಟಾಗಿರುತ್ತಿದ್ದವು. ಸಾಮಾನ್ಯವಾಗಿ ಮೊದಲ ಬೆಂಚಿನ ವಿದ್ಯಾರ್ಥಿಯಾಗಿದ್ದ ನಾನು, ಒಂದು ಬಾರಿ ಕೊನೆಯ ಬೆಂಚಿನಲ್ಲಿ ಕೂತು ಸಂಪಂಗಿರಾಮಶೆಟ್ಟಿ ಅವರು Radio Principles ಅನ್ನು ಪಾಠ ಮಾಡುತ್ತಿದ್ದಾಗ, ರಾಜರತ್ನಂ ಅವರ ಗೋವಿಂದಪೈ ಪುಸ್ತಕ ಓದಿ, ಪ್ರಬಂಧ ಸ್ಪರ್ಧೆಗೆ ತಯಾರಿ ನಡೆಸಿದ್ದೆ. ಅಷ್ಟು ಹೊತ್ತಿಗೆ ರೇಣುಕಾಚಾರ್ಯ ಕಾಲೇಜಿಗೆ ಹೆಣ್ಣು ಮಕ್ಕಳೂ ಸೇರಿದ್ದರು. ಸಹಜವಾಗಿ ಅಧ್ಯಾಪಕರಿಗೆ ನಮ್ಮ ಕಡೆ ದೃಷ್ಟಿ ದೂರವಾಗಿತ್ತು. ಪ್ರಬಂಧ ಸ್ಪರ್ಧೆಯಲ್ಲಿ ಹೆಣ್ಣುಮಗಳೊಬ್ಬಳನ್ನು ಎರಡನೆಯ ಸ್ಥಾನಕ್ಕೆ ತಳ್ಳಿ. ನಾನು ಬಹುಮಾನವನ್ನು ಪಡೆದೆ. ಆ ಪ್ರಬಂಧವನ್ನು ಕಾಲೇಜಿನ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟಮಾಡಿದ್ದರು. ಗೋವಿಂದ ಪೈಗಳನ್ನೇ ಆರಿಸಿಕೊಳ್ಳಲು 'ಕುಲವಧು' ಚಿತ್ರದಲ್ಲಿ ಬಂದ ಅವರ 'ತಾಯೆ ಬಾರ ಮೊಗವ ತೋರ ಕನ್ನಡಿಗರ ಮಾತೆಯೇ' ಎಂಬ ಗೀತೆ ಕಾರಣವಾಗಿತ್ತು.

ನಾನು ಪಿ.ಎಂ. ವಿದ್ಯಾರ್ಥಿಯಾಗಿದ್ದರೂ, ನನಗೆ – ನಮ್ಮ ಗುಂಪಿಗೆ ರಸಾಯನಶಾಸ್ತ್ರದ ಅಧ್ಯಾಪಕರೊಂದಿಗೇ ವಿಶ್ವಾಸ ಹೆಚ್ಚಾಗಿತ್ತು. ಪ್ರಿನ್ಸಿಪಾಲರಾಗಿದ್ದ ಪ್ರೊ॥ ವೃಷಭೇಂದ್ರಸ್ವಾಮಿಗಳ Organic Chemistry ಪಾಠ ಮತ್ತು ಅವರು Black

Board ಅನ್ನು ಬಳಸಿಕೊಳ್ಳುತ್ತಿದ್ದ ರೀತಿ, ನಾನು ಬಿ.ಎಡ್. ಮಾಡಿದಾಗ ಸಹಾಯಕ್ಕೆ ಬಂತು. ರಸಾಯನಶಾಸ್ತ್ರ ವಿಭಾಗದ ಪ್ರೊ॥ ಅಯ್ಯಂಗಾರ್‍ಯರ ಪ್ರೀತಿ ವಿಶ್ವಾಸಗಳು ಅತಿಶಯವಾಗಿದ್ದವು. ವಿದ್ಯಾರ್ಥಿಗಳನ್ನು ಅವರು ಸ್ನೇಹಿತರಂತೆ ನೋಡುತ್ತಿದ್ದರು. ಬಿ.ಎಸ್.ಸಿ. ಮುಗಿಸಿದ ಮೇಲೂ ಅವರು ಆ ವಿಶ್ವಾಸವನ್ನು ಬಿಡಲಿಲ್ಲ. ಕೆಂಪೇಗೌಡ ಟಾಕೀಸ್‌ನ ಕೆಳಗಿದ್ದ ವಿಠಲ ಭವನದಲ್ಲಿ ಎರಡೆರಡು ಟೀ ಕುಡಿಸಿ. ತಾವು ಇಂಡಿಯನ್ ಇನ್ಸ್ಟಿಟ್ಯೂಟ್‌ನಲ್ಲಿ ಓದುತ್ತಿದ್ದಾಗ ಆದ ಅನ್ಯಾಯಗಳನ್ನು ಹೇಳಿಕೊಂಡು ಸೈಕಲ್ ಹತ್ತಿ ಸೂಪರ್ ಫಾಸ್ಟ್ ಆಗಿ ಹೋಗುತ್ತಿದ್ದ ಅಯ್ಯಂಗಾರ್‍ಯರು ಯಾವತ್ತಿಗೂ ಮರೆಯಲಾಗದ ವ್ಯಕ್ತಿ.

ಭೌತಶಾಸ್ತ್ರ ವಿಭಾಗದ ಪ್ರಯೋಗಾಲಯದಲ್ಲಿದ್ದ ಅಲ್ಲಾಡುವ ಬುಡದ Microscopeಗಳು, ಉಪಯೋಗಿಸಲು ಅಸಾಧ್ಯವಾಗಿದ್ದ Moving Coil Galvanometreಗಳಿಗಿಂತ, ಬಣ್ಣಬಣ್ಣದ ದ್ರವ್ಯಗಳ ಶೀಷೆಗಳಿಂದ ಕೂಡಿದ ರಸಾಯನಶಾಸ್ತ್ರ ವಿಭಾಗದ Test tube ಮತ್ತು Spirit Lamp ಪ್ರಪಂಚವೇ ಹೆಚ್ಚು ಇಷ್ಟವಾಗುತ್ತಿತ್ತು.

ನಮಗೆ ಪಿ.ಯು.ಸಿ. ಮತ್ತು ಪದವಿಯಲ್ಲಿ ಇಂಗ್ಲಿಷ್ ಪಾಠ ಮಾಡಿದವರು ಇಬ್ಬರು ದಿಗ್ಗಜಗಳು. ಪ್ರೊ॥ ನಾಗರಾಜ್ ಮತ್ತು ಪ್ರೊ॥ ರಾಮರಾವ್. King Lear ಪಾಠ ಮಾಡುತ್ತಿದ್ದ ನಾಗರಾಜ್ ಅವರದು ವಿದ್ಯಾರ್ಥಿಗಳಿಂದ ದೂರವಾಗಿ ಪಾಂಡಿತ್ಯ ಪೂರ್ಣ ಪಾಠ ಮಾಡುತ್ತಿದ್ದ ಪ್ರವೃತ್ತಿ. ಪ್ರೊ॥ ರಾಮರಾಯರು ನೇರ. ಕನ್ನಡ ಸಾಹಿತ್ಯವನ್ನು ಓದಿಕೊಂಡಿದ್ದವರು. ಅವರು ರಾಜಾರಾಯರ 'Kanthapura' ಕಾದಂಬರಿಯ ಪಾಠವನ್ನು ಮಾಡುತ್ತಿದ್ದಾಗ, ಅಲ್ಲಿ ಬರುವ ಕನ್ನಡ ಜಾಯಮಾನದ ಇಂಗ್ಲಿಷ್ ಪದಗಳನ್ನು ವಾಕ್ಯಗಳನ್ನು ಗುರುತಿಸುತ್ತಿದ್ದ ರೀತಿ ಅಪೂರ್ವವಾಗಿತ್ತು. ಒಂದು ದಿವಸ ಒಬ್ಬ ವಿದ್ಯಾರ್ಥಿ Composition ತರಗತಿಗೆ ತಡವಾಗಿ ಬಂದ ಕಾರಣ ಕೇಳಿದಾಗ. 'ಸಾರ್ ಬಸ್‌ನ Backside' ನಲ್ಲಿ ಬರ್ತಾ ಇದ್ದೆ. Accident ಆಗಿ ಐಚಿಣಜ ಆಗೋಯ್ತು ಎಂದ. ರಾಮರಾಯರು 'Back has no side' ಎಂದು ಹೇಳಿ Backside ಎಂಬ ಪದ ಪ್ರಯೋಗ ಏಕೆ ತಪ್ಪು ಎಂಬುದನ್ನು ಸೊಗಸಾಗಿ ವಿವರಿಸಿದರು. ಅವರು ಇಂಗ್ಲಿಷ್ ಜೊತೆಗೆ ಕನ್ನಡವನ್ನು ಬೆರೆಸಿ ಅರ್ಥವಾಗುವಂತೆ ಮಾತನಾಡುತ್ತಿದ್ದರು. ನಮ್ಮ ಕೆಲವು ಇಂಗ್ಲಿಷ್ ಅಧ್ಯಾಪಕರು ಮಣ್ಣಿನ ವಾಸನೆಯೇ ಇಲ್ಲದೆ ಇಂಗ್ಲೆಂಡಿನಲ್ಲಿ ಮಾತನಾಡುವಂತೆ ಪಾಠ ಮಾಡುತ್ತಾ, ವಿದ್ಯಾರ್ಥಿಗಳಿಗೆ ಕಗ್ಗಂಟಾಗಿದ್ದುದನ್ನು ನೋಡುತ್ತಿದ್ದ ನನಗೆ ಪ್ರೊ॥ ರಾಮರಾಯರನ್ನು ನೆನೆಸಿಕೊಂಡಾಗಲೆಲ್ಲಾ ಮನಸ್ಸು ಪ್ರಸನ್ನವಾಗುತ್ತಿತ್ತು.

ಆಗ ವಿಜ್ಞಾನದ ವಿದ್ಯಾರ್ಥಿಗಳಿಗೆ 'Social Science' ಒಂದು ವಿಷಯವಾಗಿತ್ತು. ಅದನ್ನು ಪಾಠ ಮಾಡುತ್ತಿದ್ದವರು ಏನೋ ಕಾರಣದಿಂದ ತಪ್ಪಿಸಿಕೊಂಡಾಗ, ನಮಗೆ ವಿಜಯಾ ಕಾಲೇಜಿನ ಪ್ರೊ॥ ವೆಂಕಟರಾಂ ಬಂದು ಪಾಠ ಹೇಳಿದರು. ಪಾಠ ಮಾಡುವುದಕ್ಕೆ Analytical Approach ಎಷ್ಟು ಸಹಾಯಕ ಎಂಬುದನ್ನು ನಾನು ಅವರಿಂದ ಕಲಿತೆ. Optimum Population ಎಂದರೇನು ಎಂದು ಅವರು ವಿವರಿಸಿದ್ದ ರೀತಿ ಇಂದಿಗೂ ಕಣ್ಣಿಗೆ ಕಟ್ಟಿದಂತಿದೆ.

ಓದಿನಲ್ಲಿ ನನಗೆ ಸ್ಪರ್ಧೆ ನೀಡುತ್ತಿದ್ದವರು ಇಬ್ಬರು. ಶ್ರೀ ಶ್ರೀನಿವಾಸರಾಘವನ್ ಮತ್ತು ಶ್ರೀ ವೆಂಕಟನಾರಾಯಣ. ರಾಘವನ್ ನನ್ನ ಜೊತೆಗೆ ಕನ್ನಡ ಎಂ.ಎ.ಯನ್ನೂ ಮಾಡಿದರು. ವೆಂಕಟನಾರಾಯಣ್‌ಗೆ, ಹೇಮಂತ್‌ಕುಮಾರ್ ಹುಚ್ಚು, ಮುಖೇಶ್, ಮಹಮ್ಮದ್ ರಫಿಯನ್ನೂ ಮೆಚ್ಚಿಕೊಳ್ಳುತ್ತಿರಲಿಲ್ಲ. 'ಬಹಾರೋಂಫೂಲ್ ಬರ್‌ಸಾವೋ ಮೇರಾ ಮೆಹಬೂಬ್ ಆಯಾ ಹೈ' ಎಂಬ ಹಾಡನ್ನು ಮಹಮದ್ ರಫಿ 'ಸೂರಜ್' ಎಂಬ ಸಿನಿಮಾದಲ್ಲಿ ಹಾಡಿದ್ದರು. ಅದರ ಬಗ್ಗೆ ನಮ್ಮಿಬ್ಬರಿಗೂ ಬಿಸಿಬಿಸಿ ಚರ್ಚೆಯೇ ನಡೆದಿತ್ತು.

ಮೊದಲನೆಯ ಬಿ.ಎಸ್.ಸಿ.ಗೆ ಬರುವವರೆಗೂ ನಾನು 'ಹಿಂದಿ' ಸಿನಿಮಾಗಳನ್ನು ನೋಡುತ್ತಿರಲಿಲ್ಲ. ಎಸ್.ಎಸ್.ಎಲ್.ಸಿ. ಓದುತ್ತಿದ್ದಾಗ, Special Class ಇದೆ ಎಂದು ಹೇಳಿ ಅಲಂಕಾರ್ ಟಾಕೀಸ್‌ನಲ್ಲಿ ರಾಜ್‌ಕಪೂರ್‌ನ 'ಜಿಸ್‌ದೇಶ್ ಮೇ ಗಂಗಾ ಬಹತೀ ಹೈ' ಸಿನಿಮಾ ನೋಡಿ ಅಪ್ಪನ ಕೈಯಲ್ಲಿ ಮರ್ಯಾದೆ ಮಾಡಿಸಿಕೊಂಡದ್ದೇ. ಕೊನೆಯಾಗಿತ್ತು. ಕನ್ನಡ ಸಿನಿಮಾಗಳನ್ನು ಟೀಕೆ ಮಾಡಿದವರ ಜೊತೆ ಜಗಳವನ್ನೇ ಆಡುತ್ತಿದ್ದೆ. ಒಬ್ಬರ ಕೆನ್ನೆಗೆ ಹೊಡೆದಿದ್ದೆ ಎರಡನೆಯ ಬಿ.ಎಸ್.ಸಿ.ಯಲ್ಲಿದ್ದಾಗ ಜಗಳದ ಸ್ನೇಹಿತನ ಒತ್ತಾಯದಿಂದ 'ಫಿರ್‌ವೊಹೀ ದಿಲ್‌ಲಾಯಾ ಹೂಂ' ಚಿತ್ರ ನೋಡಿದ ಮೇಲೆ, ನನಗೆ Musicalsಗಳ ಹುಚ್ಚು

ಹಿಡಿಯಿತು. ಬಿಡುವು ಸಿಕ್ಕಿದಾಗಳೆಲ್ಲಾ ಕನ್ನಡ ಅಧ್ಯಾಪಕನಾದ ಮೇಲೆ ಹಳೆಯ ಎಲ್ಲ ಹಿಂದಿ Musicalsಗಳನ್ನು ನೋಡುತ್ತಿದ್ದೆ. ಈಗಲೂ ಅವುಗಳ ಸಿ.ಡಿ.ಗಳನ್ನು ಮನೆಯಲ್ಲಿ ನೋಡಿ, ಹಾಡುಗಳನ್ನು ಗುನುಗುಟ್ಟುತ್ತೇನೆ. ಈಗ ನನ್ನ ಬಳಿ ಹಳೆಯ ಹಿಂದಿ Musicalsಗಳ ಟೇಪ್‌ಗಳ ಒಂದು ರಾಶಿಯೇ ಇದೆ. ಅವುಗಳನ್ನು ಕೇಳುತ್ತಿದ್ದರೆ ನನ್ನ ಬರವಣಿಗೆಗೆ ತಾಕತ್ ಬರುತ್ತದೆ. ಈಗ ಇದನ್ನು ಬರೆಯುವಾಗಲೂ ದೇವಾನಂದನ ಚಿತ್ರ Taxi Driverನ ಹಾಡುಗಳನ್ನು ಕೇಳಿಸಿಕೊಳ್ಳುತ್ತಿದ್ದೇನೆ.

ಪಿ.ಸಿ. ಮೇಜರ್ ವಿದ್ಯಾರ್ಥಿಗಳಾಗಿದ್ದ ಸತ್ಯನಾರಾಯಣ್, ರಘುವೀರ್, ಸರ್ವೋತ್ತಮ ನನ್ನ ಆಪ್ತ ಗೆಳೆಯರಾಗಿದ್ದರು. ಅವರ ಜೊತೆಗೆ ಕಬ್ಬನ್ ಪಾರ್ಕ್‌ಗೆ ಹೋಗಿ, ವಿಶ್ವೇಶ್ವರಯ್ಯ ಮ್ಯೂಸಿಯಂ ಹಿಂದೆ ನಿಂತು, ನನ್ನ ಹತ್ತಿರ ಇದ್ದ ಬಾಕ್ಸ್ ಕ್ಯಾಮೆರಾದಿಂದ ತೆಗೆಸಿಕೊಂಡ ಒಂದೆರಡು ಫೋಟೋಗಳು ಈಗಲೂ ನನ್ನ ಬಳಿ ಇವೆ. ವೆಂಕಟನಾರಾಯಣ, ನ್ಯಾಷನಲ್ ಕಾಲೇಜ್, ಬಸವನಗುಡಿಯಲ್ಲಿ Mathematics ಉಪಾಧ್ಯಾಯರಾದರು. ಸತ್ಯನಾರಾಯಣ ಚಿಕ್ಕಬಳ್ಳಾಪುರ ಕಾಲೇಜಿನಲ್ಲಿ ರಸಾಯನಶಾಸ್ತ್ರದ ಅಧ್ಯಾಪಕರಾದರು. ಸರ್ವೋತ್ತಮ ನೆಲಮಂಗಲದಲ್ಲಿದ್ದಾರೆ. ರಘುವೀರರ ಬಗೆಗೆ ಗೊತ್ತಿಲ್ಲ. ಪ್ರಾಣೇಶ್ ಮತ್ತು ರಾಘವನ್ ಇಬ್ಬರೂ ಸರ್ಕಾರಿ ಕಛೇರಿಗಳಿಗೆ ಗುಮಾಸ್ತರಾಗಿ ಸೇರಿದ್ದರು. ಈಗಲೂ ಪ್ರಾಣೇಶ್‌ಮೂರ್ತಿ ಆಗಾಗ ಸಿಗುತ್ತಾರೆ. ರಾಘವನ್ ಬಿಜಾಪುರಕ್ಕೆ ಹೋದ ಮೇಲೆ ಸಿಕ್ಕಿಲ್ಲ.

ನಾನು ಬಿ.ಎಸ್.ಸಿ.ಯಲ್ಲಿ ಎರಡನೆಯ ದರ್ಜೆಯಲ್ಲಿ ಪಾಸ್ ಆಗಿದ್ದೆ. ಆದರೆ ಕಾಲೇಜಿಗೆ ನಾನೇ ಪ್ರಥಮ. ಆಗ ನನಗೆ ಬಹುಮಾನವಾಗಿ ಬಂದದ್ದು ೭೫ ರೂಪಾಯಿ. ಅದರಿಂದ ನಾನು ಸೂಲಿಬೆಲೆಯ ಪ್ರೌಢಶಾಲೆಯ ಅಧ್ಯಾಪಕರ ಬಳಿ ಇದ್ದ Murphy Transister ಅನ್ನು ಕೊಂಡುಕೊಂಡಿದ್ದೆ. ತರಗತಿ ಬೇಗ ಮುಗಿದಾಗಲೆಲ್ಲಾ. ಒಂದು ರೂಪಾಯಿ ಕೊಟ್ಟು, ಹಿಮಾಲಯ ಟಾಕೀಸ್‌ನಲ್ಲಿ ನಡೆಯುತ್ತಿದ್ದ ದಾರಾಸಿಂಗ್ ಸಿನಿಮಾಗಳನ್ನೆಲ್ಲಾ ನೋಡುತ್ತಿದ್ದ ನನಗೆ Art Film ಗಳ ಬಗ್ಗೆ ಒಲವು ಬೆಳೆಯಲೇ ಇಲ್ಲ. ಕಾಲೇಜಿನ ಕಬಡ್ಡಿ ಪಂದ್ಯಾವಳಿಯಲ್ಲಿ ನಾನು ಗೆದ್ದ ಟೀಮಿನ ಒಬ್ಬ ಸದಸ್ಯನಾಗಿದ್ದೆ. ಕ್ರಿಕೆಟ್ ಪಂದ್ಯಾವಳಿಯಲ್ಲೂ ಭಾಗವಹಿಸಿ, ತೊಡೆಗೆ ಚಂಡು ಬಡಿದು ನಾಲ್ಕು ದಿವಸ ಜ್ವರ ಬಂದು ಮಲಗಿದ್ದೆ. ಬ್ಯಾಡ್‌ಮಿಂಟನ್ ಸಹ ಆಡುತ್ತಿದ್ದೆ.

ಬಿ.ಎಸ್.ಸಿ. ಮುಗಿಸಿದ ಮೇಲೆ ನಮ್ಮ ತಂದೆ ನನ್ನನ್ನು ಬಿ.ಎಡ್.ಗೆ ಸೇರಿಸಿದರು. ಹೈಸ್ಕೂಲ್‌ನಲ್ಲಿ ಇದ್ದಾಗಲಿಂದಲೂ ನಾನು ಮೂವಿಲ್ಯಾಂಡ್ ಟಾಕೀಸ್ ಎದುರು ಸಂದಿಯಲ್ಲಿದ್ದ Shastry Typewriting Instituteಗೆ ಕಲಿಯಲು ಹೋಗುತ್ತಿದ್ದೆ. ಆದರೆ ಪರೀಕ್ಷೆ ತೆಗೆದುಕೊಂಡದ್ದು ಬಿ.ಎಸ್.ಸಿ. ಆದ ಮೇಲೆ. ನಮ್ಮ ಮನೆಯಲ್ಲಿದ್ದ Portable Typewriter ನಿಂದ ಬೇಕಾದ ಟಿಪ್ಪಣಿಗಳನ್ನೆಲ್ಲಾ ಟೈಪ್ ಮಾಡಿಕೊಳ್ಳುತ್ತಿದ್ದೆ. ಶಾಸ್ತ್ರಿಗಳು ಟೈಪಿಂಗ್ ಪಾಠವನ್ನು ತುಂಬಾ ಸಂತೋಷದಿಂದ ಹೇಳಿಕೊಡುತ್ತಿದ್ದರು. ಹಾಡು ಹೇಳಿಕೊಂಡು ಟೈಪ್ ಮಾಡುತ್ತಾನೆ ಎಂದು ನನ್ನ ಅಣ್ಣ ಶಂಕರ ನಾರಾಯಣನ ಹತ್ತಿರ ನಗುತ್ತಲೇ ದೂರು ಹೇಳಿದ್ದರು. ಟೈಪ್ ರೈಟರ್ ಜೂನಿಯರ್ ಪರೀಕ್ಷೆಯಲ್ಲಿ ನನಗೆ ರ್‍ಯಾಂಕ್ ಬರುವಷ್ಟು ಅಂಕಗಳು ಬಂದಿದ್ದವು. ಈಗಲೂ ನನ್ನ Type Speed ಹೆಚ್ಚಾಗಿಯೇ ಇದೆ. ನನ್ನ ಬಳಿ ಇದ್ದ ಟೈಪ್‌ರೈಟರ್ ಇಂದ ಬಿ.ಎಡ್.ನ ಸ್ನೇಹಿತರನೇಕರಿಗೆ ಅವರ Assignmentಗಳನ್ನು ಟೈಪ್ ಮಾಡಿಕೊಟ್ಟಿದ್ದೆ. ರಿಪೇರಿಗೆಂದು ಕೊಟ್ಟ ಆ ಯಂತ್ರವನ್ನು ಬಸವನಗುಡಿಯ ಒಬ್ಬ ರಿಪೇರಿ ಮಾಡುವವನು ತೆಗೆದುಕೊಂಡು ಪತ್ತೆ ಇಲ್ಲದೆ ಓಡಿ ಹೋದ.

ಬಿಎಡ್‌ನಲ್ಲಿ ನಾನು Physlcal Science ಮತ್ತು Mathematics ಅನ್ನು ಐಚ್ಛಿಕವಾಗಿ ತೆಗೆದುಕೊಂಡಿದ್ದೆ ಎಂ.ಇ.ಎಸ್. ಟೀಚರ್ಸ್ ಕಾಲೇಜಿನ ಅಧ್ಯಾಪಕರೆಲ್ಲರೂ ವಯಸ್ಸಾದವರು. ಶಿಸ್ತಿನವರು. Psychology ಪಾಠ ಮಾಡುತ್ತಿದ್ದ ಪ್ರೊ|| ರಂಗಾಚಾರ್ ವಿದ್ಯಾರ್ಥಿಗಳೊಂದಿಗೆ ಹೆಚ್ಚು ಬೆರೆಯುತ್ತಿರಲಿಲ್ಲ. "School Management" ಪಾಠ ಮಾಡುತ್ತಿದ್ದ ಪ್ರೊ|| ರಾಜಗೋಪಾಲ್ ಅವರು ಎಂಇಣ ಗಳ ಮಧ್ಯೆ ಪಾಠವನ್ನು ಮುಂದುವರಿಸುತ್ತಿದ್ದರು. ಅವರು Jokuಗಳ ಮಧ್ಯೆ ನಮ್ಮ ಪಾಠವನ್ನು ಮುಂದುವರಿಸುತ್ತಿದ್ದರು.

Mathematicsನ ಪ್ರೊ|| ವೆಂಕಟೇಶ ಶಾಸ್ತ್ರಿಗಳು ಎಷ್ಟು ಬೇಕೋ ಅಷ್ಟು ಪಾಠ ಮಾಡಿ ನೋಟ್ಸ್ ಕೊಡುತ್ತಿದ್ದರು. ಪ್ರೊ|| ವೆಂಕಟೇಶಯ್ಯನವರ ಪಾಠ ಮಾಡುತ್ತಿದ್ದ ರೀತಿಯೇ ವಿಶೇಷವಾಗಿತ್ತು. Physical Science and Educational

Psychologyಯನ್ನು ತೆಗೆದುಕೊಳ್ಳುತ್ತಿದ್ದ ಪ್ರೊ॥ ಎಂ.ಆರ್. ಶ್ರೀನಿವಾಸರಾವ್ ಅವರದು ಅಚ್ಚುಕಟ್ಟಾದ ಪಾಠ. ಅವರು ನೋಟ್ಸ್ ಕೊಡುತ್ತಿರಲಿಲ್ಲ. ನಾನು ಅವರು ಹೇಳಿದ್ದನ್ನೆಲ್ಲಾ ಬರೆದುಕೊಂಡಿದ್ದನ್ನು ಬಿ.ಎಡ್. ಆದ ಮೇಲೆ ನನ್ನಿಂದ ತೆಗೆದುಕೊಂಡಿದ್ದರು. 'ಒಂದು Testನಲ್ಲಿ ನಾನು Physical Scienceನಲ್ಲಿ ಎಲ್ಲರಿಗಿಂತ ಹೆಚ್ಚು ಅಂಕಗಳನ್ನು ತೆಗೆದುಕೊಂಡಾಗ ತಮ್ಮ ಕೊಠಡಿಗೆ ಕರೆದು ಮೆಚ್ಚುಗೆ ಸೂಚಿಸಿದ್ದರು. ಎಂ.ಆರ್.ಎಸ್. ಎಂದು ಪ್ರಸಿದ್ಧರಾಗಿದ್ದ ಶ್ರೀನಿವಾಸರಾಯರು ನೆಟ್ಟಕಲ್ಲಪ್ಪ ಸರ್ಕಲ್‌ನಲ್ಲಿದ್ದ ವಾದಿರಾಜ ಕಲ್ಯಾಣ ಮಂಟಪದ ಮೂಲ ನಿವಾಸಿಗಳಾಗಿದ್ದರು. ಬಿ.ಎಡ್. ಮಾಡುವಾಗ Basic Educationನ ಪ್ರಮುಖ ಅಂಗವಾದ ಶ್ರಮದಾನದ ಬಗೆಗೆ ಅರಿವು ಮೂಡಿಸಿದವರು ಅವರು. ಮುಂದೆ ನಾನು ಸಂಜೆ ಕಾಲೇಜಿನಿಂದ ಹಗಲು ಕಾಲೇಜಿಗೆ ವರ್ಗಾವಣೆ ಬಯಸಿದಾಗ, ಅದಕ್ಕೆ ಅಡ್ಡಿ ಪಡಿಸಿದ ತಮ್ಮ ಶಿಷ್ಯರಾಗಿದ್ದ ಶ್ರೀ ಬಿ.ಎಸ್. ಪದ್ಮನಾಭ್ ಅವರಿಗೆ ಹೇಳಿ ಸಹಾಯ ಮಾಡಿದರು. ನಾನು ವಿಜ್ಞಾನದಿಂದ ಕನ್ನಡಕ್ಕೆ ಬದಲಾದದ್ದು ಅವರಿಗೆ ಮೆಚ್ಚುಗೆಯಾಗದಿದ್ದರೂ ವಿಶ್ವಾಸವನ್ನು ಬಿಡಲಿಲ್ಲ. ನನ್ನ ನಂತರ ಅವರಿಗೆ ಶಿಷ್ಯರಾದ ನನ್ನ ಭಾವ ಕಾರೇಪುರ ನಾರಾಯಣರಾಯರನ್ನು ಕಂಡರೆ ಅವರ ಬರೆಹದ ಅಚ್ಚುಕಟ್ಟನ್ನು, ಉತ್ತರದ Precision ಅನ್ನು ಕಂಡರೆ ಶ್ರೀನಿವಾಸರಾಯರಿಗೆ ಬಲು ಅಚ್ಚುಮೆಚ್ಚು. ಸಿಕ್ಕಿದಾಗಲೆಲ್ಲಾ ಅದನ್ನು ಜ್ಞಾಪಿಸುತ್ತಿದ್ದರು. ೧೯೬೦ರ ಬಿ.ಎಡ್. ಪರೀಕ್ಷೆಯಲ್ಲಿ ಪುರುಷ ವಿದ್ಯಾರ್ಥಿಗಳಲ್ಲಿ ನಾನೊಬ್ಬನು ಮಾತ್ರ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾಗಿ ತರಗತಿಯ ಕೊಠಡಿಯ ನಾಮಫಲಕದಲ್ಲಿ ಸೇರ್ಪಡೆಯಾಗಿದ್ದೆ. Fluracy ಕಾಯಿಲೆಯಿಂದ ಕೂಡಿದ್ದರೂ, ಗಂಡ-ಹೆಂಡತಿ ಬಸ್ಸಿನಲ್ಲಿ ಗಾಂಧೀ ಬಜಾರಿನಿಂದ ಪ್ರಯಾಣ ಮಾಡಿ, ತರಗತಿಗೆ ಸಮಯಕ್ಕೆ ಸರಿಯಾಗಿ ಬರುತ್ತಿದ್ದ ಎಂ.ಆರ್.ಎಸ್. ನನಗೆ ಯಾವಾಗಲೂ ಆದರ್ಶ ಮೂರ್ತಿ. ರಾಜಾಮಹಲ್ ಗುಟ್ಟಹಳ್ಳಿಯಲ್ಲಿದ್ದ Oriental High Schoolಗೆ ಕೆಲಸಕ್ಕೆಂದು ಕಳುಹಿಸಿಕೊಟ್ಟವರೂ ಅವರೇ.

ಬಿ.ಎಡ್. ಮಾಡುವಾಗ Practice Teaching ನ ಬಹುಪಾಲು ಭಾಗವನ್ನು ನಾನು ಕನ್ನಡ ಮಾಧ್ಯಮದಲ್ಲೇ ಮಾಡಿದೆ. ಪ್ರಾಯೋಗಿಕ ಪರೀಕ್ಷೆಯನ್ನೂ ನಾನು ಕನ್ನಡ ಮಾಧ್ಯಮ ವಿದ್ಯಾರ್ಥಿಗಳಿಗೇ ಪಾಠ ಮಾಡಿ ಗೆದ್ದೆ. ವಿಷಯದ ಪರೀಕ್ಷೆ ಇಂಗ್ಲಿಷ್‌ನಲ್ಲಿ ಮಾತ್ರ ಇತ್ತು. ಪ್ರತಿಯೊಂದು ಅಧ್ಯಾಯಗಳಿಗೂ ಸಣ್ಣ ಸಣ್ಣ ಪಟ್ಟಿಕೆಗಳನ್ನು ತಯಾರು ಮಾಡಿಕೊಂಡು ಟಿಪ್ಪಣಿಗಳ ಮೂಲಕ ಓದಿಕೊಳ್ಳುತ್ತಿದ್ದೆ. ಆಗ ಟಿ.ಸಿ.ಎಚ್.ಗಾಗಿ ತಯಾರಿಸಿದ ಒಂದು ಆಡಳಿತ ವಿಚಾರಗಳಿಗೆ ಸಂಬಂಧಿಸಿದ ಒಂದು ಪಠ್ಯ ಪುಸ್ತಕ ಸಿಕ್ಕಿತ್ತು. ಕನ್ನಡದಲ್ಲಿದ್ದ ಅದನ್ನು ಓದಿ, ಇಂಗ್ಲಿಷ್‌ಗೆ ಭಾಷಾಂತರಿಸಿಕೊಂಡು, ಟಿಪ್ಪಣಿಗಳನ್ನು ಮಾಡಿಕೊಂಡಿದ್ದೆ. ಇದೆಲ್ಲಾ ಎಂ.ಆರ್.ಎಸ್. ಪಾಠ ಮಾಡುವ ಕ್ರಮದ ಪ್ರಭಾವವಾಗಿತ್ತು.

ಇದರ ಜೊತೆಗೆ ಇಟಿರಟ್ಟು ಒಜಣುಝ ನ ಅಧ್ಯಾಪಕರಾದ ಪ್ರೊ॥ ಕುಲಕರ್ಣಿ ಅವರು ಪ್ರಶ್ನೋತ್ತರ ರೀತಿಯಲ್ಲಿ ನಿಧಾನವಾಗಿ Administration ವಿಷಯವನ್ನು ಪಾಠ ಮಾಡಿದ್ದರು. ನಾವು ಶೈಕ್ಷಣಿಕ ಪ್ರವಾಸ ಹೋಗಿದ್ದಾಗ, ನನಗೆ ಒಂದಿಷ್ಟು ಹಸ್ತ ಸಾಮುದ್ರಿಕೆಯನ್ನೂ ಕಲಿಸಿದ್ದರು. 'ನೀನು ಬಿ.ಎಡ್.' ಅಷ್ಟೇ ಎಂದು ಅವರು ನನ್ನ ಕೈ ನೋಡಿ ಹೇಳಿದ್ದು ಸುಳ್ಳಾಯಿತು ಅಷ್ಟೇ. ಬಿ.ಎಡ್. ಮುಗಿದ ನಂತರ ಎಲ್ಲಿ ಸಿಕ್ಕಿದರೂ ಅದೇ ವಿಶ್ವಾಸದ ಮೂರ್ತಿಯಾಗಿದ್ದರೂ. ಭೂಗೋಳಶಾಸ್ತ್ರದ ಪ್ರೊ॥ ರಾಜೀವ್ ಅವರು ಪಾಠ ಮಾಡದಿದ್ದರೂ, Practice Teaching ಸಮಯದಲ್ಲಿ ಮಾರ್ಗದರ್ಶಕರಾಗಿದ್ದರು. ಬಿ.ಎಡ್. ಕಲಿಯುವ ಸಂದರ್ಭದಲ್ಲಿ ಮಾಡಿದ ಪುಣೆ, ಮುಂಬೈ, ಅಜಂತಾ, ಎಲ್ಲೋರಾ, ದೌಲತಾಬಾದ್, ಹೈದರಾಬಾದ್ ಪ್ರವಾಸ ನನಗೆ ವ್ಯವಹಾರವನ್ನು ಕಲಿಸಿಕೊಟ್ಟಿತು. ಮುಂಬೈನಲ್ಲಿ ನನಗೆ ಸ್ವಲ್ಪ ಕಾಲು ಉಳುಕಿತ್ತು. ಸುಧಾರಿಸಿಕೊಂಡು ಮಲಗಿದ್ದಾಗ ಭಾರತ-ಹಾಲೆಂಡ್‌ನ ವಿಶ್ವಕಪ್ ಕಾಮೆಂಟರಿ ಕೇಳುತ್ತಾ, ಭಾರತ ಗೆದ್ದದ್ದನ್ನು ಕೇಳಿ ಕುಣಿಯಲಾರದೆ ಸಂತೋಷಪಟ್ಟಿದ್ದು ಈಗಲೂ ನೆನಪಿದೆ. ಪ್ರವಾಸವೊಂದರ ಲೆಕ್ಕಪತ್ರವನ್ನು ನೋಡಿಕೊಳ್ಳುವ ವಿದ್ಯೆಯನ್ನು ಕಲಿತದ್ದೂ ಈ ಸಂದರ್ಭದಲ್ಲೇ. ನಮ್ಮ ಪೆಟ್ಟಿಗೆಗಳನ್ನಷ್ಟೇ ಅಲ್ಲದೆ ಜೊತೆಯಲ್ಲಿ ಬಂದಿದ್ದ ವಿದ್ಯಾರ್ಥಿನಿಯರ ದೊಡ್ಡ ದೊಡ್ಡ ಕಬ್ಬಿಣದ ಪೆಟ್ಟಿಗೆಗಳನ್ನು ಕೂಲಿಯವನಿಗೆ ಕೊಡದೆ ಹೊತ್ತು ಸಾಗಿಸಿದ್ದರಿಂದ ಹಿಂತಿರುಗಿ ಬಂದ ಮೇಲೆ, ಆ ಕೂಲಿಯ ಮೊಬಲಗಿನಷ್ಟು ಮೊತ್ತವನ್ನು ಲೆಕ್ಕಹಾಕಿ ಪ್ರೊ॥ ಕುಲಕರ್ಣಿ ಮತ್ತು ಪ್ರೊ॥ ವೆಂಕಟೇಶಯ್ಯನವರು ಪ್ರಾಮಾಣಿಕವಾಗಿ ಎಲ್ಲರಿಗೂ ಹಿಂತಿರುಗಿಸಿದರು. ಈಗ ಕಡಿಮೆ ಖರ್ಚಿನಲ್ಲಿ ಪ್ರಯಾಣ ಮಾಡಿ ಹೆಚ್ಚು ಹಣ ಕೇಳುವ / ಪಡೆಯುವ ಸಂಪ್ರದಾಯ ಬೆಳೆದು ಬಂದಿದೆ.

ಎಂ.ಆರ್.ಎಸ್. ಅವರ ತಮ್ಮನ ಭರತನಾಟ್ಯ ಏರ್ಪಾಟಾಗಿತ್ತು. ಗಾಯನ ಸಮಾಜದಲ್ಲಿ ನಡೆದ ಆ ನೃತ್ಯ ಅದ್ಭುತವಾಗಿತ್ತು. ಅಂದೇ ನನಗೆ Oriental ಹೈಸ್ಕೂಲಿನಲ್ಲಿ ಕೆಲಸ ಸಿಕ್ಕಿದ್ದು. ಪರೀಕ್ಷೆಯ ಪಾಠ ಮಾಡಿದ್ದೆಲ್ಲಾ ಕನ್ನಡದಲ್ಲಿ. ಪಾಠ ಹೇಳಬೇಕಾಗಿ ಬಂದದ್ದು ಇಂಗ್ಲಿಷ್‌ನಲ್ಲಿ. ಪಠ್ಯಗಳು ಇದ್ದದ್ದರಿಂದ ಹೇಗೋ ನಡೆಯಿತು. ನಾನು ಅಂಕಗಣಿತದ / ಬೀಜಗಣಿತದ ಉಪಾಧ್ಯಾಯನಾಗಿ ಹೆಸರು ಮಾಡಿದೆ. ಕನ್ನಡ ಮಾಡುವ ಉಪಾಧ್ಯಾಯರಿಲ್ಲದ್ದರಿಂದ ಬಿಎಡ್‌ನಲ್ಲಿ ನನ್ನ ಸಹಪಾಠಿಯಾಗಿದ್ದ ಶ್ರೀಮತಿ ಪ್ರೇಮ ಅವರು (ಅದೇ ಶಾಲೆಯಲ್ಲಿದ್ದರು) ಹಾಗೂ ನಾನೂ ಕನ್ನಡವನ್ನು ಪಾಠ ಮಾಡಬೇಕಾಗಿ ಬಂತು. ಶ್ರೀರಾಮಾಶ್ವಮೇಧದ ಮುದ್ದಣ–ಮನೋರಮೆಯರ ಪ್ರಸಂಗ, ಕರ್ನಾಟಕ ಕಾದಂಬರಿಯ 'ಚಪಳೆ ಸೊಡರ ಕುಡಿಯಂ ಪೋಲ್ವಳ್' ಎಂಬ ಭಾಗ ನಾನು ಕನ್ನಡದ ಕಡೆಗೆ ಬರಲು ನೆರವಾಯಿತು. ಅಷ್ಟೇ ಅಲ್ಲ ನಾನು ಬಿಎಡ್‌ನಲ್ಲಿ ನಾಲ್ಕು ವಿಷಯಗಳಲ್ಲಿ ಎಲ್ಲರಿಗಿಂತ ಹೆಚ್ಚು ಅಂಕಗಳನ್ನು ಪಡೆದದ್ದರಿಂದ ಕೊಟ್ಟ ಪುಸ್ತಕಗಳೂ ಅದಕ್ಕೆ ಕಾರಣ. ಮಂಕುತಿಮ್ಮನ ಕಗ್ಗ, ರಾಮೇಶ್ವಮೇಧ ಮೊದಲಾದವು ಆಯಾಚಿತವಾಗಿ ನನ್ನ ಕೈಗೆ ಬಂದಿದ್ದವು.

Oriental School ಸ್ಕೂಲ್‌ನಲ್ಲಿ ನನಗಿಂತ ಹಿರಿಯರಾದ ದಾನಶೂರ ಕರ್ಣ (DSK) ವಿಜ್ಞಾನದ ಅಧ್ಯಾಪಕರಾಗಿದ್ದರು. ಅವರು ಬಿಎಡ್ ಮಾಡಿರಲಿಲ್ಲ. ಆದರೆ ಒಳ್ಳೆಯ ಮೇಷ್ಟ್ರು. ಪ್ರತಿನಿತ್ಯ ತಾನು ತಂದಿದ್ದ ಡಬ್ಬಿಯಲ್ಲಿದ್ದ ಅರ್ಧವನ್ನು ನನಗೆ ಕೊಡುತ್ತಿದ್ದರು. ಜೊತೆಗೆ ಕೆಲಸ ಮಾಡುತ್ತಿದ್ದ ಸಂಸ್ಕೃತ ಪಂಡಿತರಾದ ಶ್ರೀ ಅಡಿಗರಿಗೆ ಸಂಜೆಯಾದ ಮೇಲೆ ಅವರ ಮನೆಗೆ ಹೋಗಿ ಅವರ ಎಸ್‌ಎಸ್‌ಎಲ್‌ಸಿ ಪರೀಕ್ಷೆಗೆ ವಿಜ್ಞಾನ/ಗಣಿತದ ಪಾಠಗಳನ್ನು ಮಾಡಿ ಮಾರ್ಗದರ್ಶನ ಮಾಡುತ್ತಿದ್ದೆ. ಅವರು ಕೊಡುತ್ತಿದ್ದ ಉಪ್ಪಿನ ಗಂಜಿಯ ರುಚಿ ಇಂದಿಗೂ ಇದೆ.

ಒಂದು ವರ್ಷದ ಕೆಲಸದ ನಂತರ, ರಾಜೀನಾಮೆ ನೀಡಿ ಸ್ನಾತಕೋತ್ತರ ಪದವಿಗೆ ಸೇರುವ ಉದ್ದೇಶದಿಂದ ಸೆಂಟ್ರಲ್ ಕಾಲೇಜಿನಲ್ಲಿ ಅರ್ಜಿ ಹಾಕಿದೆ. ಮೊದಲು ಹಾಕಿದ್ದು ಎಂ.ಎಡ್.ಗೆ ಮತ್ತು ಎಂ.ಎಸ್ಸಿ. ಗಣಿತಕ್ಕೆ. ಅರ್ಜಿಯ ಜೊತೆಗೆ ಕೊಟ್ಟಿದ್ದ ವಿವರಣಾ ಪತ್ರದಲ್ಲಿ ಪದವಿಯಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಲ್ಲಿ ಓದಿದವರಿಗೂ ಎಂ.ಎ. ಕನ್ನಡದಲ್ಲಿ ಅವಕಾಶವಿದೆ ಎಂದು ಇತ್ತು. ಸರಿ, ಅಲ್ಲಿಗೂ ಒಂದು ಅರ್ಜಿ ಗುಜರಾಯಿಸಿದೆ. ಎಲ್ಲದರಲ್ಲೂ ಸೀಟು ಸಿಕ್ಕಿತ್ತು. ನಮ್ಮ ಭಾವ ಕಾರೇಪುರ ನಾರಾಯಣರಾಯರ ಅಧ್ಯಾಪಕರಾಗಿದ್ದ ಪ್ರೊ॥ ಜಿ.ಅಶ್ವತ್ಥನಾರಾಯಣ ಅವರ ಮಾತಿನ ಮೇರೆಗೆ ಎಂ.ಎ. ಕನ್ನಡಕ್ಕೆ ಸೇರಿದೆ. ಕನ್ನಡ ಸಾಹಿತ್ಯದ ಮೂಲ ತಲೆ, ಬಾಲ ಏನೂ ಗೊತ್ತಿಲ್ಲದ ನನಗೆ ಮೊದಮೊದಲು ಗಾಬರಿಯಾದರೂ ಕಾಲಕಳೆದಂತೆ ಧೈರ್ಯಬಂತು. ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರ ಪಾಂಡಿತ್ಯ ನನ್ನ ಆಲೋಚನೆಗಳ ದಿಕ್ಕನ್ನೇ ಬದಲಾಯಿಸಿತು.

ಕೆಲಸ ಬಿಟ್ಟು ಓದಿಗೆ ನಿಂತದ್ದರಿಂದ, ಖರ್ಚಿಗೆ ದುಡ್ಡು ಹೊಂದಿಸಿಕೊಳ್ಳಬೇಕಾಗಿತ್ತು. ಸಂಜೆಯ ಹೊತ್ತು ನಾನು ರಾಘವನ್ ಹಾಗೂ ಪ್ರಾಣೇಶಮೂರ್ತಿ ಸೇರಿ ಒಂದು ಪಾಠದ ಅಂಗಡಿ ತೆಗೆದು ಒಂದಷ್ಟು ವ್ಯಾಪಾರ ಮಾಡಿ ಕಥೆ ಸಾಗಿಸಿದೆವು.

ಎಂ.ಎ.ದಲ್ಲಿ ಪಾಠ ಹೇಳಿದವರು ಡಾ. ರಂ.ಶ್ರೀ.ಮುಗಳಿ, ಪ್ರೊ॥ ಎಸ್.ಆರ್. ಮಳಗಿ, ಡಾ. ಕೆ.ಎಂ. ಕೃಷ್ಣರಾವ್, ಪ್ರೊ॥ ಹು.ಕಾ. ಜಯದೇವ್, ಡಾ. ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ, ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ಎಂ. ಚಿದಾನಂದಮೂರ್ತಿ, ಡಾ. ಕೆ.ಎಂ. ಮರುಳಸಿದ್ದಪ್ಪ, ಪ್ರೊ॥ ಜಿ.ಪಿ. ರಾಜರತ್ನಂ, ಪ್ರೊ॥ ಎಂ.ವಿ. ಸೀತಾರಾಮಯ್ಯನವರು. ಹೊಸಗನ್ನಡ ಕವಿತೆಗಳು, ಕಾವ್ಯ ಮೀಮಾಂಸೆ, ಪಂಪಭಾರತ, ಭೀಷ್ಮಪರ್ವಗಳನ್ನು ಮಾಡಿದ ಜಿಎಸ್‌ಎಸ್ ಕಂಡರೆ ನಮಗೆಲ್ಲಾ ಸ್ವಲ್ಪ ಭಯ ಇತ್ತು. ಆದರೆ ಅವರ ಪಾಠ ಮಾತ್ರ ಅದ್ಭುತವಾಗಿತ್ತು. ರಂ.ಶ್ರೀ.ಮುಗಳಿಯವರ ಭಾಷಾ ವಿಜ್ಞಾನದ ಪಾಠ ತುಂಬಾ ಅಚ್ಚುಕಟ್ಟಾಗಿರುತ್ತಿತ್ತು. ಸಾಹಿತ್ಯ ವಿಮರ್ಶೆಯ ಮೂಲತತ್ವಗಳನ್ನು ಪಾಠ ಮಾಡುವಾಗ ಮುಗಳಿಯವರು ಒಂದೇ ಸಮನಾಗಿ ಉದಾಹರಿಸುತ್ತಿದ್ದ ಸಂಸ್ಕೃತ ಕವಿಗಳ ಮಾತುಗಳು, ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಕವಿತೆಯ ತುಣುಕುಗಳು ನನ್ನನ್ನು ಕಕ್ಕಾಬಿಕ್ಕಿಯಾಗಿಸುತ್ತಿದ್ದವು. ಮುಗಳಿಯವರ ತರಗತಿಯಲ್ಲಿ ಏನನ್ನೂ ಬರೆದುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಪರೀಕ್ಷೆಯ ಹೊತ್ತಿಗೆ ಅವರ ಸಾಹಿತ್ಯ ವಿಮರ್ಶೆಯ ಮಾರ್ಗದರ್ಶಕ ಸೂತ್ರಗಳು ಗ್ರಂಥ ಪ್ರಕಟವಾದದ್ದು ತುಂಬಾ ಅನುಕೂಲವಾಯಿತು.

ಸೆಮಿನಾರ್ ತರಗತಿಗಳಲ್ಲಿ ಮುಗಳಿಯವರು ಹಾಕುತ್ತಿದ್ದ ಪ್ರಶ್ನೆಗಳು, ಕೊಡುತ್ತಿದ್ದ ಸಮಜಾಯಿಷಿಗಳು ಒಂದು ಬಾರಿ ಹದಿಬದೆಯ ಧರ್ಮವನ್ನು ಕುರಿತು ಅವರು ಮಂಡಿಸಿದ ವಿಚಾರ, ಒಂದು ಬಾರಿ ನಮ್ಮ ಮನೆಯ ಸಮೀಪದ ತ್ಯಾಗರಾಜ ಸಂಗೀತ ಸಭೆಗೆ ಬಂದು ಸಾಮಾನ್ಯರಿಗೂ ಅರ್ಥವಾಗುವಂತೆ ದಾಸಸಾಹಿತ್ಯದ ಬಗ್ಗೆ ಮಾತನಾಡಿದುದು, ಭಾರತೀಯ ಸಾಹಿತ್ಯ ಪರಂಪರೆಯ ವಿಚಾರಗೋಷ್ಠಿಯಲ್ಲಿ ಅವರು ಕನ್ನಡ ಸಾಹಿತ್ಯದ ಶ್ರೇಷ್ಠ ಕೃತಿಗಳ ಬಗ್ಗೆ ಇಂಗ್ಲಿಷ್‌ನಲ್ಲಿ ಮಾತನಾಡಿದುದು, ವಿಚಾರ ಗೋಷ್ಠಿಯಲ್ಲಿ Extempo ಮಾತನಾಡುತ್ತಿದ್ದ ಡಾ. ಕೆ. ಕೃಷ್ಣಮೂರ್ತಿಗಳು ಸಭೆಗೆ ಮುಗಳಿಯವರು ಆಗಮಿಸಿದ ತಕ್ಷಣ ಮಾತನಾಡುವ ರೀತಿಯನ್ನೇ ಬದಲಾಯಿಸಿ ಬರೆದುಕೊಂಡು ಬಂದಿದ್ದನ್ನು ಓದಿದ್ದು, ಕಾರಣ ಕೇಳಿದರೆ ಗುರುಗಳ ಎದುರಿನಲ್ಲಿ ಹಾಗೆಲ್ಲಾ ಮಾತನಾಡಬಾರದು ಎಂದದ್ದು ನನಗೆ ಸದಾ ನೆನಪಿನಲ್ಲಿ ಉಳಿಯುವಂಥದ್ದು.

ಐಚ್ಛಿಕವಾಗಿ ಕನ್ನಡವನ್ನು ಓದಿಲ್ಲದ ನನಗೆ ವಿಶೇಷವಾಗಿ ಬರೆದು Subject Scholarship ಕೊಡಿಸಿದ ಮುಗಳಿಯವರದು ಯಾವಾಗಲೂ ನಗೆಮುಖದ ರೂಪವಾಗಿತ್ತು. ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘದ ಉತ್ಸವದಲ್ಲಿ ಬಿ.ಎಂ.ಶ್ರೀ. ಅವರ ಅಶ್ವತ್ಥಾಮನ್, ಮಾಸ್ತಿಯವರ ಯಶೋಧರಾ ನಾಟಕಗಳ ಜೊತೆಗೆ ಮುಗಳಿಯವರ 'ಎತ್ತಿದ ಕೈ' ನಾಟಕವನ್ನು ನಾವು ಆಡಿದ್ದೆವು. ಅದು ಅವರಿಗೆ ತುಂಬಾ ಸಂತೋಷವನ್ನು ತಂದುಕೊಟ್ಟಿತ್ತು.

ಪ್ರೊ॥ ಹು.ಕ.ಜಯದೇವ ಅವರ ಪಾಠ ರೋಚಕವಾಗಿರದಿದ್ದರೂ, ನಿಯಮಿತವಾಗಿರುತ್ತಿತ್ತು. ಅವರು ತುಂಬಾ ವಿಶ್ವಾಸದಿಂದ ವಿದ್ಯಾರ್ಥಿಗಳನ್ನು ಕಾಣುತ್ತಿದ್ದರು. ಡಾ. ಕೆ.ಎಂ. ಮರುಳಸಿದ್ದಪ್ಪನವರ ಪಾಠ ವಿಶ್ಲೇಷಣಾತ್ಮಕವಾಗಿರುತ್ತಿತ್ತು. ರಾಘವಾಂಕನ ಕೃತಿಗಳನ್ನು ಅಚ್ಚುಕಟ್ಟಾಗಿ ಪರಿಚಯ ಮಾಡಿಕೊಡುತ್ತಿದ್ದ KMS, ಕುಮಾರವ್ಯಾಸನನ್ನು ಮೆಚ್ಚಿಕೊಳ್ಳುತ್ತಿರಲಿಲ್ಲ. ಪುರಾಣ ಕಥೆಗಳ ಸಮಸ್ಯೆ ಬಂದಾಗ 'ಪುರಾಣನಾಮ ಚೂಡಾಮಣಿ' ಪುಸ್ತಕವನ್ನು ನೋಡಿ ಎಂದು ಮೊದಲು ಹೇಳಿದವರು KMS. GSS ಜೊತೆಗೆ ಏಜಖ ನಮ್ಮನ್ನು ಸಾಂಸ್ಕೃತಿಕ ಪ್ರವಾಸಕ್ಕೂ ಕರೆದೊಯ್ದಿದ್ದರು. ಈಗಲೂ ತಮ್ಮ ವೈಚಾರಿಕತೆಯ ಕಾರಣದಿಂದ ಸುದ್ದಿಯಲ್ಲಿ ಕಾಣುವ ಏಜಖ ನನ್ನನ್ನು ಕಂಡರೆ ವಿಶ್ವಾಸದಿಂದ ಮಾತನಾಡಿಸುತ್ತಾರೆ. ಡಾ. ಕೆ.ಎಂ. ಕೃಷ್ಣರಾಯರದು ಪಠ್ಯ ಕೇಂದ್ರಿತ ಉಪನ್ಯಾಸಗಳು. ತಪ್ಪಿಸಗೇ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದ ಅವರು ನಾವು ಸೀನಿಯರ್ ಎಂ.ಎ.ದಲ್ಲಿದ್ದಾಗ ಉಸ್ಮಾನಿಯಾ ವಿಶ್ವವಿದ್ಯಾಲಯಕ್ಕೆ ಹೊರಟು ಹೋದರು.

ಡಾ. ಎಂ. ಚಿದಾನಂದಮೂರ್ತಿಗಳದು ಶಾಸ್ತ್ರೀಯ ಪಾಠ. ಮೊದಲನೆಯ ವರ್ಷ ಅವರು ಮಾಡಿದ ದ್ರಾವಿಡ ಭಾಷಾ ವಿಜ್ಞಾನರ ಪಾಠಗಳು ಹೆಚ್ಚು ಇಂಗ್ಲಿಷ್ ಪದಗಳಿದ್ದುದರಿಂದ ನನಗೆ ಅರ್ಥವಾಗುತ್ತಿರಲಿಲ್ಲ. ವ್ಯಾಕರಣದ ಭಾಗಗಳಿಂದ ನಾನು ಬಚಾವಾಗಿದ್ದೆ. ಆದ್ದರಿಂದಲೇ ಎರಡನೆಯ ವರ್ಷದಲ್ಲಿ ನಾನು ಶಾಸನಶಾಸ್ತ್ರವನ್ನು ಆರಿಸಿಕೊಂಡೆ. ಆಗಲೇ ನನಗೆ ಡಾ. ಎಂ. ಚಿದಾನಂದಮೂರ್ತಿ ಅವರ ಅಧ್ಯಯನದ ವ್ಯಾಪ್ತಿ ಅರ್ಥವಾದದ್ದು. ಅಶೋಕನ ಶಾಸನಗಳನ್ನು, ಅತ್ತಿಮಬ್ಬೆಯ ಲಕ್ಕುಂಡಿ ಶಾಸನವನ್ನು, ಶಾಸನಶಾಸ್ತ್ರ ತತ್ವಗಳನ್ನು ಚಿ.ಮೂ. ಅವರು ಪಾಠ ಮಾಡಿದ ರೀತಿ ಉಳಿದವರಿಗೆ ಸಾಧ್ಯವಿಲ್ಲ. ಯಾವುದಕ್ಕೂ ಮೂಲ ಆಕರವನ್ನೇ ಓದಬೇಕೆಂದು ಅವರು ಹೇಳುತ್ತಿದ್ದ, ಅನುಸರಿಸುತ್ತಿದ್ದ ಮಾರ್ಗ ಯಾವಾಗಲೂ ಅನುಸರಣೀಯ. ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಶಾಸನಶಾಸ್ತ್ರ ವಿದ್ಯಾರ್ಥಿಯಾಗಿದ್ದಾಗ ಚಿ.ಮೂ. ಅವರು ಹಲ್ಮಿಡಿ ಶಾಸನದ ಪಾಠವನ್ನು ಮಾಡಿದ್ದರು. ಮುಂದೆ ನನಗೆ 'ಹಲ್ಮಿಡಿ ಶಾಸನ'ದ ಪಾಠ ಮಾಡಲು ಅದೇ ಮಾರ್ಗದರ್ಶಕವಾಯಿತು. ಅವರ 'ಶೂನ್ಯಸಂಪಾದನೆಯನ್ನು ಕುರಿತು' 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', 'ಸಂಶೋಧನ ತರಂಗ' ಕೃತಿಗಳು ನನ್ನ ಅಧ್ಯಾಪನ ವೃತ್ತಿಯ ಆರಂಭ ಕಾಲದಲ್ಲಿ ತುಂಬಾ ಪ್ರಭಾವವನ್ನು ಬೀರಿದವು. ಅಲ್ಲಮನ ಅಂಕಿತರ ಬಗ್ಗೆ, ಪಾಳಿಧ್ವಜದ ಬಗ್ಗೆ, ನಯಸೇನನ ಧರ್ಮಾಮೃತದ ಬಗ್ಗೆ, ಸೂರ್ಯಗ್ರಹಣದ ಬಗ್ಗೆ ಬರೆದಿರುವ ಅವರ ಲೇಖನಗಳು ಎಂದಿಗೂ ಸಂಶೋಧಕರಿಗೆ ಗುರಿ ತೋರಿಸುವ ದೀಪಗಳಾಗಿವೆ. ಕ್ಷೇತ್ರಕಾರ್ಯ ಮಾಡದೇ ಕೆಲಸ ಮಾಡಬಾರದು, ಸಂಶೋಧನೆ ನಡೆಸಬಾರದು ಎಂದು ಚಿ.ಮೂ. ತಮ್ಮ ನಡವಳಿಕೆಯಿಂದಲೇ ಎಲ್ಲರಿಗೂ ತೋರಿಸುವಂಥವರು. ನಮ್ಮ ಮನೆತನದ ಹಿರಿಯರೊಬ್ಬರು ಲಾರ್ಡ್ ವಿಲಿಯಂ ಬೆಂಟಿಕ್ ಕಾಲದಲ್ಲಿ 'ಮಾಸ್ತಿ'ಯಾಗಿದ್ದನ್ನು ನಾನು ಎಂದೋ ಅವರಿಗೆ ಹೇಳಿದ್ದೆ. ಅದನ್ನು ಅವರು ತಮ್ಮ ಮಾಸ್ತಿಕಲ್ಲುಗಳು ಎಂಬ ಪುಟ್ಟ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ಗೋಕಾಕ್ ಚಳುವಳಿಯ ಸಂದರ್ಭದಲ್ಲಿ ನಾನೂ ಅವರ

ಜೊತೆ ಸೇರಿಕೊಂಡಿದ್ದೆ. ವಿಧಾನಸೌಧದ ಮುಂಭಾಗದಲ್ಲಿ ಕುಳಿತಿದ್ದ ಉಪವಾಸ ಸತ್ಯಾಗ್ರಹದ ಮೊದಲ ತಂಡದಲ್ಲಿ ನಾನೂ ಒಬ್ಬನಾಗಿದ್ದೆ.

ಪ್ರೊ॥ ಎಸ್.ಆರ್. ಮಳಗಿಯವರು ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘದ ಪುಟ್ಟ ಕೊಠಡಿಯಲ್ಲಿ ನನಗೆ ತಾಳ ಹಾಕುತ್ತಾ ಛಂದಸ್ಸಿನ ಪಾಠವನ್ನು ಮಾಡಿದರು. ಕನ್ನಡ ಕೈಪಿಡಿ, ಡಿ.ಎಸ್. ಕರ್ಕಿಯವರ 'ಛಂದೋವಿಕಾಸ' ತೀನಂಶ್ರೀ ಅವರ ಲೇಖನಗಳನ್ನು ಬಿಟ್ಟರೆ ನಮಗೆ ಬೇರೇನೂ ಇರಲಿಲ್ಲ. ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಪಂಡಿತರು ಕಲಿಸಿದ್ದ ಪಾಠ ಈಗ ನನ್ನ ನೆರವಿಗೆ ಬಂತು.

ಡಾ. ಎನ್.ಎಸ್. ಲಕ್ಷ್ಮೀನಾರಾಯಣಭಟ್ಟರದು ಬಲು ಮಾತಿನ ಆದರೆ ಸೊಗಸಾದ ಪಾಠ. ಅಡಿಗರ, ಕೆಎಸ್‌ನ ಅವರ ನಡೆದುಬಂದ ದಾರಿ, ಶಿಲಾಲತೆಗಳ ಪಾಠ ಹಾಗೂ ಭರ್ತೃಹರಿಯ ಶತಕಗಳ ವಿಶ್ಲೇಷಣೆ ಭಟ್ಟರು ಮಾಡುತ್ತಿದ್ದ ರೀತಿ ಅಪೂರ್ವವಾಗಿತ್ತು. ಆಗ ಅಡಿಗರ 'ನಡೆದು ಬಂದ ದಾರಿ' ಕೃತಿಯ ಪ್ರತಿಗಳು ಸಿಗುತ್ತಿರಲಿಲ್ಲ. ನಾನು ಸ್ನೇಹಿತರೊಬ್ಬರು ಬರೆದುಕೊಂಡಿದ್ದ ಪ್ರತಿಯ, ಪ್ರತಿಯನ್ನು ಮಾಡಿಕೊಂಡು ಪಾಠ ಕೇಳುತ್ತಿದ್ದೆ. ಭಟ್ಟರನ್ನು ಬಿಟ್ಟರೆ ನನ್ನ ಬಳಿ ಮಾತ್ರ ತರಗತಿಯಲ್ಲಿ ಆ ಪಠ್ಯ ಇದ್ದದ್ದು. ಅವರು ನನ್ನ ಬಳಿ ಇದ್ದ ಪ್ರತಿಯನ್ನು ತೆಗೆದುಕೊಂಡು ಅದರಲ್ಲಿದ್ದ ಸ್ಖಾಲಿತ್ಯಗಳನ್ನು ಸರಿಪಡಿಸಿಕೊಟ್ಟಿದ್ದರು.

ಪ್ರೊ॥ ಜಿ.ಪಿ. ರಾಜರತ್ನಂ ಅವರು ನಮಗೆ ಎಂ.ಎ.ದಲ್ಲಿ ನೇರವಾಗಿ ತರಗತಿಯ ಪಾಠ ಮಾಡಲಿಲ್ಲ. ವಿಶೇಷ ಉಪನ್ಯಾಸಗಳನ್ನು ನೀಡಿದರು. ಆಗ ಅವರು ಹಲ್ಮಿಡಿ ಶಾಸನದ ಮೊದಲ ಸಂಸ್ಕೃತ ಶ್ಲೋಕಕ್ಕೆ ಅರ್ಥ ಹೇಳಿದ ಟಿಪ್ಪಣಿಗಳು ಈಗಲೂ ನನ್ನ ಬಳಿ ಇವೆ. ಸುರಚಾಪಾಂಬೋಲೆ ಪದ್ಯದ ಅರ್ಥವಂತೂ ನನ್ನ ತಲೆಯಲ್ಲಿ ಹಾಗೆಯೇ ಇದೆ. ಕಂಚಿನ ಕಂಠದಲ್ಲಿ ಅವರು ಗೊಮ್ಮಟನಿಗೆ ನಡೆದ ಮಹಾಮಸ್ತಕಾಭಿಷೇಕದ ವೀಕ್ಷಕ ನಿರ್ವಹಣೆಯನ್ನು ನೀಡುತ್ತಾ ಬೊಪ್ಪಣನ ಗೊಮ್ಮಟಸ್ತುತಿಯ ಪದ್ಯಗಳನ್ನು ಹೇಳಿದ್ದು, ನಾನು ಬಿಎಸ್‌ಸಿಯಲ್ಲಿದ್ದಾಗ ಕೇಳಿಸಿಕೊಂಡಿದ್ದೆ. ನಾನು ಉಪಾಧ್ಯಾಯನಾಗಿ ಕೆಲಸಕ್ಕೆ ಸೇರಿದ ಮೇಲೆ ಶ್ರೀನಿವಾಸರಾಜು ಅವರ ಜೊತೆ ನಮ್ಮ ಗುಂಪಿನವರು, ರಾಜರತ್ನಂ ಅವರ ಪುಸ್ತಕ ಪ್ರಕಟಣೆಯ ಕೆಲಸದಲ್ಲಿ ತೊಡಗಿಕೊಂಡಿದ್ದೆವು. ಅವರ 'ಗಂಡುಗೊಡಲಿ' ನಾಟಕವನ್ನು ಆಡಬೇಕೆಂದು ಕಡಿಚಿಭಿಣುಭಿಜ ಸಹ ಮಾಡಿದ್ದೆವು. ಒಂದು ಕೈಯಿರದ ಕನ್ನಡಕವನ್ನು ಹಾಕಿಕೊಂಡು, ದಟ್ಟಿ ಪಂಚೆ ಉಟ್ಟುಕೊಂಡು ಪಾಠ ಮಾಡುತ್ತಿದ್ದ ಅವರ ವೈಖರಿ, ನಾಗಚಂದ್ರನ ರಾವಣನ ಬಗ್ಗೆ ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ ಅವರ ಭಾಷಣ ಮಾಡಿದ ರೀತಿ, ಆಕಾಶವಾಣಿಯಲ್ಲಿ ಅವರು ನಡೆಸುತ್ತಿದ್ದ ಚಿಂತನ, 'ಸುಧಾ' ವಾರಪತ್ರಿಕೆಯ ಅವರ 'ಅಂಕಣ'ಗಳು ಎಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ನನ್ನ ಕಲಿಕೆಯ ಸಾಧನೆಗಳೇ ಆಗಿದ್ದವು.

ನಮಗೆ ಎಂ.ಎ.ಗೆ ಪಾಠ ಮಾಡಲು ಬಂದ ಪ್ರೊ॥ ಎಂ.ವಿ. ಸೀತಾರಾಮಯ್ಯನವರು ಯಾರು ಎಂಬುದು ಗೊತ್ತೇ ಇರಲಿಲ್ಲ (ಹಾಗೆ ನೋಡಿದರೆ ಕನ್ನಡ ಸಾಹಿತ್ಯದ ಯಾರಿಗೂ ಗೊತ್ತಿರಲಿಲ್ಲ). ಅವರು ಪಾಠ ಹೇಳಿದ್ದು 'ಗ್ರಂಥ ಸಂಪಾದನಾ ಶಾಸ್ತ್ರ'. ಕವಿರಾಜಮಾರ್ಗದ ಉದಾಹರಣೆಗಳ ಮೂಲಕ, ಪಾಠಾಂತರಗಳನ್ನು ಉದಾಹರಣೆಯಾಗಿ ಕೊಟ್ಟು ಎಂವಿಸೀ ಪಾಠ ಮಾಡುತ್ತಿದ್ದ ರೀತಿಯೇ ಹೊಸತು. ಕಪ್ಪು ಹಲಗೆಯನ್ನು ಬಳಸುವ ಕ್ರಮ ನನಗೆ ಬಿಎಡ್‌ನಿಂದ ದೊರೆತಿತ್ತು. ಎಂವಿಸೀ ಬೆರಳಿನಲ್ಲಿ ಸೀಮೆಸುಣ್ಣ ಹಿಡಿಯಲು ಕಷ್ಟವಾಗುತ್ತಿದ್ದರೂ ಬೋರ್ಡ್ ಮೇಲೆ ಬರೆಯುತ್ತಿದ್ದರು. ಅವರು ಹೇಳುತ್ತಿದ್ದ ಪಾಠದ ಸ್ಫೂರ್ತಿಯಿಂದ ನಾನು ನನ್ನ ತಾಯಿಯ ಊರಾದ ಕಾರೇಪುರದಲ್ಲಿ ದೊರೆತ ತಾಳೆಗರಿಯಲ್ಲಿ ಬರೆದಿಟ್ಟ ಲಕ್ಷ್ಮೀಶನ ಜೈಮಿನಿ ಭಾರತದ ಹಸ್ತಪ್ರತಿಯಲ್ಲಿದ್ದ ಕಾಲದ ಉಲ್ಲೇಖ ಇದ್ದ ಭಾಗವನ್ನು ಬರೆದುಕೊಂಡು ಹೋಗಿ ತಿಳಿಸಿದಾಗ ಅವರು ತುಂಬಾ ಸಂತೋಷಪಟ್ಟಿದ್ದರು. ಅವರು ಮಾಡಿದ್ದ ಪಾಠಗಳ ಟಿಪ್ಪಣಿ ಪುಸ್ತಕ ಕಳೆದು ಹೋಗಿದೆ.

ಇಮ್ಮಡಿ ಗುಣವರ್ಮನ 'ಪುಷ್ಪದಂತ ಪುರಾಣ'ದ ಒಂದು ಪ್ರತಿಯನ್ನು ನವಲ್ಗುಂದದ ಮಾದಿರಾಜ ಎಂಬುವವನು ಬರೆದಿದ್ದಾನೆ. ಅವನು ತನ್ನ ಲೇಖನ ಕಲೆಯ ವಿಚಾರವಾಗಿ 'ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಳ ಚೆಲ್ವು'

ಎಂದು ಪದ್ಯವೊಂದರಲ್ಲಿ ಹೇಳಿಕೊಂಡಿದ್ದಾನೆ. ಮಾದಿರಾಜನ ಮಾತುಗಳಿಗೆ ಎಂವಿಸೀ ಆಕಾರವನ್ನು ಕೊಟ್ಟು ಬಳ್ಳಿಗಳ ರಚನೆಯಿರುವ ಲಿಪಿಯನ್ನು ಬರೆದು ತೋರಿಸಿದ್ದರು. ಸಮಯಕ್ಕೆ ಸರಿಯಾಗಿ ಆಟೋದಲ್ಲಿ ಬಂದು ಸಮಯಪೂರ್ತಿ ತರಗತಿಯನ್ನು ನಡೆಸುತ್ತಿದ್ದ ಅವರ ಆದರ್ಶ, ತರಗತಿಯನ್ನು ನಡೆಸಿದುದಕ್ಕೆ ದಿನಚರಿಯನ್ನು ಬರೆದಿಟ್ಟುಕೊಳ್ಳಬೇಕೆಂಬ ಅವರ ನಿಷ್ಠೆಗಳನ್ನು ನನ್ನ ಅಧ್ಯಾಪನ ವೃತ್ತಿಯಲ್ಲಿ ಸಾಕಷ್ಟು ಕಾಲ ಉಳಿಸಿಕೊಳ್ಳಲು ಪ್ರಯತ್ನಿಸಿದೆ. ಉಂಖ ಕಾಲೇಜಿನಲ್ಲಿ ಪಾಠ ಮಾಡಲು 'ಕವಿರಾಜ ಮಾರ್ಗ'ದ ಪ್ರತಿಗಳು ಸಿಗದೇ ಹೋದಾಗ, ಅದೇ ಕಾರಣವಾಗಿ, ಅವರು ಆ ಕೃತಿಯನ್ನು ಅನೇಕ ಹಸ್ತಪ್ರತಿಗಳ ಸಹಾಯದಿಂದ ಸಂಪಾದಿಸಿ, ಅದೇ ಕಾಲೇಜಿನ ಕರ್ನಾಟಕ ಸಂಘದಿಂದ ಪ್ರಕಟಿಸಿದ್ದು, ಛಲಬಿಡದ ತ್ರಿವಿಕ್ರಮನನ್ನು ನೆನಪಿಗೆ ತರುತ್ತದೆ. ಆ ಕೃತಿಯನ್ನು ವಿಸ್ತರಿಸಿ ಸಂಪಾದನೆ ಮಾಡಿದಾಗ ಅದಕ್ಕೆ ಕೊಟ್ಟಿರುವ ಉಪೋದ್ಘಾತ ಮತ್ತು ಟಿಪ್ಪಣಿಗಳಂತೂ ನಭೂತೋ ನ ಭವಿಷ್ಯತಿ. ಪಾಠಾಂತರಗಳನ್ನು ಪುಟಗಳ ಅಡಿಯಲ್ಲಿ ಕೊಡದೇ ಪದ್ಯದ ಕೊನೆಯಲ್ಲಿ ಕೊಟ್ಟಿರುವ ಕ್ರಮದಿಂದ ನನ್ನಂಥವನಿಗೆ ಕೆಲವು ಗೊಂದಲಗಳೇಳುವುದು ಸಹಜ. ಆದರೆ ಕವಿಕಾವ್ಯ ವಿಚಾರದಲ್ಲಿ ಅವರು ತೋರಿಸಿರುವ ಅಭ್ಯಾಸ. ದಂಡಿಯ 'ಕಾವ್ಯಾದರ್ಶ'ದ ಜೊತೆಗೆ ನಡೆಸಿರುವ ತೌಲನಿಕ ಅಧ್ಯಯನ ಇನ್ನೊಬ್ಬರಿಗೆ ಸಾಧ್ಯವಿಲ್ಲ.

ಶಾಸ್ತ್ರ ವಿಷಯವನ್ನು ಎಷ್ಟು ಅಧಿಕೃತವಾಗಿ ಪಾಠ ಮಾಡುತ್ತಿದ್ದರೋ ಅಷ್ಟೇ ಸಹೃದಯ ಗುಣದಿಂದ ಕಾವ್ಯವೊಂದರ ಪಾಠವನ್ನು ಹೇಳುತ್ತಿದ್ದರು. ಎಂ.ಎ.ನಲ್ಲಿ ರತ್ನಾಕರನ 'ಭರತೇಶ ವೈಭವ'ದಂತಹ ವರ್ಣಕ ಕಾವ್ಯವನ್ನು ಅವರು ಮಾಡಿದ ರೀತಿ ಹೊಸದು. ಆಗ ಬರೆದುಕೊಂಡಿದ್ದ ಟಿಪ್ಪಣಿಗಳು ಈಗಲೂ ನನ್ನ ಬಳಿ ಇವೆ. ಭರತೇಶ ವೈಭವದ ಬಗೆಗೆ ಅವರು ಹೇಳುತ್ತಿದ್ದ ಒಂದೆರಡು ಮಾತುಗಳು ಹೀಗಿದ್ದವು:

'ಭರತೇಶ ವೈಭವ ಒಂದು ರಸ ಸಮುದ್ರ. ಆದರೆ ಇಲ್ಲಿ ಅಲ್ಲೋಲ ಕಲ್ಲೋಲವಾದ ಅಲೆಗಳು ಏಳುವುದಿಲ್ಲ'. 'ಭರತೇಶ ಜಡ ಬ್ರಹ್ಮಚಾರಿಯಲ್ಲ. ಆತನು ಆತ್ಮರತಿಯೊಂದನ್ನು ಬಿಟ್ಟು ಉಳಿದ ಎಲ್ಲವನ್ನು ಬಿಟ್ಟ ಕಡು ಬ್ರಹ್ಮಚಾರಿ'.

ನಾನು ಆಚಾರ್ಯ ಪಾಠಶಾಲಾ ಸಂಜೆ ಕಾಲೇಜಿಗೆ ಅಧ್ಯಾಪಕನಾಗಿ ಸೇರಿದ ಮೇಲೆ, ಹನುಮಂತನಗರದಲ್ಲಿದ್ದ ಎಂವಿಸೀ ಅವರ ಮನೆಗೆ ಹೋಗಿ **ಬರು**ವುದು ಹೆಚ್ಚಾಯಿತು. ಕಾಲೇಜಿಗೆ ಹೋಗುವುದಕ್ಕೆ ಮುಂಚೆ ೩–೪ ಗಂಟೆಯ ಹೊತ್ತಿಗೆ ಅವರ ಮನೆಗೆ ಹೋಗಿ, ಅವರು ಹೇಳುವುದನ್ನು ಬರೆದುಕೊಳ್ಳುತ್ತಿದ್ದೆ. ಬರೆದಿರುವುದನ್ನು ಪ್ರತಿ ಮಾಡಿಕೊಡುತ್ತಿದ್ದೆ. ಅವುಗಳಲ್ಲಿ ನಾನು ಅತ್ಯಂತ ಆಸಕ್ತಿಯಿಂದ ಮಾಡಿದ್ದು ಮೂರು ಕೃತಿಗಳು. ಮೈಸೂರು ವಿಶ್ವವಿದ್ಯಾಲಯದವರು ಪ್ರಕಟಿಸಿರುವ 'ಪ್ರಾಚೀನ ಕನ್ನಡ ವ್ಯಾಕರಣ'ಗಳು, ಮತ್ತು ಛಂದಸ್ಸಂಪುಟದಲ್ಲಿರುವ 'ಕರ್ನಾಟಕ ವಿಷಯ ಜಾತಿ'ಯನ್ನು ಕುರಿತ ಭಾಗ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಯಾದ 'ಕನ್ನಡ ಜೀವನ ಚರಿತ್ರೆ'ಗಳು. ನಾನು ತಯಾರಿಸಿ ಕೊಟ್ಟಿದ್ದ ಜೀವನ ಚರಿತ್ರೆಗಳ ಅನುಬಂಧ ಪಟ್ಟಿಕೆಯನ್ನು ಪರಿಷತ್ತಿನವರು ಪುಟಗಳ ಮಿತಿಯ ಕಾರಣದಿಂದ ಪ್ರಕಟಿಸದೇ ಹೋದುದು ಎಂವಿಸೀ ಅವರಿಗೆ ತುಂಬಾ ಬೇಸರವನ್ನು ತಂದಿತ್ತು.

ನಾನು ನನ್ನ ಮಿತ್ರರಾದ ಎ.ವೆಂಕಟರಾವ್ ಸೇರಿ 'ಸರ್ವಜ್ಞ ವಚನಗಳ ಸಂಗ್ರಹ'ವನ್ನು ಸಂಪಾದನೆ ಮಾಡಿದ್ದೇವೆ. ಆದರೆ ಪಾಠ ನಿರ್ಣಯವೆಲ್ಲಾ ಎಂವಿಸೀ ಅವರದೇ ಆಗಿತ್ತು. ೧೯೭೭ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ 'ಕೌಸ್ತುಭ' ಎಂಬ ಸ್ಮರಣ ಸಂಚಿಕೆ ಪ್ರಕಟವಾಯಿತು. ಇಂಗ್ಲಿಷ್ ಮತ್ತು ಕನ್ನಡ ಎರಡೂ ಅವತರಣಿಕೆಗೆ ಎಂವಿಸೀ ಸಂಪಾದಕರು. ನಾನು ಸಹಾಯಕ. ಹೆಸರಾಂತ ವಿದ್ವಾಂಸರೊಬ್ಬರು ಜನಪದ ಸಾಹಿತ್ಯದ ಭವಿಷ್ಯವನ್ನು ಕುರಿತು ಲೇಖನವನ್ನು ಬರೆದುಕೊಡುತ್ತೇನೆಂದು ಹೇಳಿದ್ದರು. ನನ್ನ ಕಾಟವನ್ನು ತಡೆಯಲಾರದೆ ಒಂದು ಪುಟ್ಟ ಗೀಟಿರುವ ಎಕ್ಸೈಸ್ ಹಾಳೆಯಲ್ಲಿ ಟಿಪ್ಪಣಿಯೊಂದನ್ನು ಗೀಚಿಕೊಟ್ಟು ಕೈತೊಳೆದುಕೊಂಡರು. ಎಂವಿಸೀ ಸುಮ್ಮನಿರಲಿಲ್ಲ. ಅದನ್ನು ಲೇಖನ–೧ ಎಂದು ಕರೆದು, ತಾವೇ ಆ ವಿಚಾರವಾಗಿ ಇನ್ನೊಂದು ಲೇಖನವನ್ನು ಬರೆದು ಕೊರತೆಯನ್ನು ತುಂಬಿದರು. ಆಕ್ಷೇಪಣೆಯನ್ನು ಮಾಡಲೇ ಇಲ್ಲ. ಕನ್ನಡದ ಭಾಷಾಂತರ ಕೃತಿಗಳ ಬಗೆಗೆ ಬರೆಯಲು ಲೇಖಕರು ದೊರೆಯದೇ ಹೋದಾಗ, ನನ್ನಿಂದಲೇ ಬರೆಸಿದರು. ಅದರಿಂದ ನಾನು ಭಾರತೀಯ ಹಾಗೂ ವಿಶ್ವದ ಅನೇಕ ಸಾಹಿತ್ಯ ಕೃತಿಗಳನ್ನು ಓದಬೇಕಾಗಿ ಬಂದಿತು. ಯಾರದೋ

ಒತ್ತಾಯದಿಂದ ಪಠ್ಯ ಪುಸ್ತಕಗಳಾಗಿದ್ದ ಟಾಲ್‌ಸ್ಟಾಯ್ ಜೀವನ ಚರಿತ್ರೆ, ಆಲ್ಬರ್ಟ್ ಕಾಮೂನ 'ಕ್ಯಾಲಿಗುಲ' ನಾಟಕ, ಷೇಕ್ಸ್‌ಪಿಯರ್‌ನ 'ರೋಮಿಯೋ ಜೂಲಿಯಟ್'ಗಳ ಪಾಠ ಮಾಡುವ ಕೆಲಸ ನನಗೆ ಗಂಟು ಬಿದ್ದಿತ್ತು. ಪ್ರೊಫೆಸರ್ ಒಬ್ಬರ ಹತ್ತಿರ ಅನುವಾದದ ಘೋರಗಳನ್ನು ಹೇಳಿಕೊಂಡಾಗ ಮೂಲ ಇಟ್ಟುಕೊಂಡು ಪಾಠಮಾಡಿ ಎಂಬ ಉತ್ತರ ಬಂದಿತು. ಅದರಿಂದ ಒಳ್ಳೆಯದೇ ಆಯಿತ. ಗ್ರೀಕ್ ನಾಟಕಗಳನ್ನು ಬಿಟ್ಟು ಉಳಿದ ನಾಟಕಗಳನ್ನು ಮಾಡುವಾಗ ನಾನು ಮೂಲದ ಜೊತೆಗೆ ಹೋಲಿಸಿ ಟಿಪ್ಪಣಿಗಳನ್ನು ಮಾಡಿಕೊಂಡು ಪಾಠ ಮಾಡುವಂತಾಯಿತು.

ಎಂ.ವಿ.ಸೀ. ಅವರ ಪ್ರಾಚೀನ ಕನ್ನಡ ವ್ಯಾಕರಣಗಳು ಕುಪ್ಪಂ ವಿಶ್ವವಿದ್ಯಾಲಯವಾದ ತೆಲುಗಿಗೆ ಅನುವಾದವಾಗಿ ಹೆಸರು ಪಡೆದಿದೆ. ಅದನ್ನು ಅನುವಾದ ಮಾಡುವಾಗ ಇದ್ದ ಕೆಲವು ಅನುಮಾನಗಳನ್ನು ಅನುವಾದಕರಾದ ಅವಧಾನಿ ಡಾ॥ ಸದಾನಂದ ಶಾಸ್ತ್ರಿಗಳು ನನ್ನನ್ನು ಕೇಳಿದಾಗ ಕಕ್ಕಾಬಿಕ್ಕಿಯಾಗಿತ್ತು. ಆದರೆ ಮತ್ತೊಮ್ಮೆ ಓದಿದಾಗ ಆ ಕೃತಿಯ ಮೌಲ್ಯ ಮತ್ತಷ್ಟು ಹೆಚ್ಚಾಯಿತು.

ಎಂ.ವಿ.ಸೀ. ಅವರ ಕಾರಣದಿಂದ ನನಗೆ ಶ್ರೀಯುತರಾದ ಜಿ. ನಾರಾಯಣ, ನಿಟ್ಟೂರ್ ಶ್ರೀನಿವಾಸರಾಯರು, ಗೊರೂರು ರಾಮಸ್ವಾಮಿ ಅಯ್ಯಂಗಾರು, ಜಿ. ವೆಂಕಟಸುಬ್ಬಯ್ಯನವರು, ಗೋಪಾಲಕೃಷ್ಣ ಅಡಿಗರು, ಮೊದಲಾದ ಹಿರಿಯರ ಸಂಪರ್ಕ ಸಿಕ್ಕಿತ್ತು. ಎಂ.ವಿ.ಸೀ.ಯವರೊಂದಿಗೆ ಮಾಸ್ತಿಯವರ ಮನೆಗೆ ಹೋಗಿ ಬರುತ್ತಿದ್ದೆ. ಕನ್ನಡ ಜೀವನ ಚರಿತ್ರೆಯ ತಮ್ಮ ಬಗ್ಗೆ ಎಂ.ವೀ.ಸೀ. ಬರೆದಿದ್ದ ವಿಮರ್ಶೆಯೊಂದನ್ನು ಮಾಸ್ತಿ ಗಂಭೀರವಾಗಿ ಪರಿಗಣಿಸಿದ್ದರು. ಅದನ್ನು ಸಮಾಧಾನ ಮಾಡಲು ಹೋಗಿದ್ದೆವು. ಆ ದಿಗ್ಗಜಗಳ ವರ್ತನೆ ಕಲಿಸಿದ್ದು ಅಪಾರ.

ತಿಮ್ಮಪ್ಪದಾಸರ ಕೀರ್ತನ ಸಾಹಿತ್ಯವನ್ನು ಕುರಿತು ನಾನು ಅಧ್ಯಯನ ಮಾಡಬೇಕೆಂಬುದು ಎಂ.ವಿ.ಸೀ ಅವರ ಆಸೆಯಾಗಿತ್ತು. ಆದರೆ ನನ್ನ ಆಸಕ್ತಿ ಶಾಸನಗಳಾದ್ದರಿಂದ ನಾನು ತಪ್ಪಿಸಿಕೊಳ್ಳುತ್ತಲೇ ಇದ್ದೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯದರ್ಶಿಯಾಗಿ, ಖಜಾಂಚಿಯಾಗಿ ನಾನು ಕೆಲಸ ಮಾಡಿದಷ್ಟು ಕಾಲ, ನನ್ನ ಇನ್ನೊಂದು ಕೆಲಸ ಅವರಿಗೆ ಇಷ್ಟವಾಗಿತ್ತು. ಅದೇ ನಾನು ಪ್ರತಿಷ್ಠಾನದ -ಕ್ಕಬರೆದುಕೊಡುತ್ತಿದ್ದುದು. ನಗದು ಪುಸ್ತಕದಿಂದ ಹಿಡಿದು ತಟ್ಟೆ ಎತ್ತುವವರೆಗೆ ಎಲ್ಲ ಕೆಲಸಗಳನ್ನು ಕೈಯಾರೇ ಮಾಡಬೇಕಾಗಿ ಬಂದಾಗ ಎಂ.ಇ.ಎಸ್.ನ MRS ಅವರ ತರಬೇತಿ ಸಹಾಯಕ್ಕೆ ಬಂದಿತು. ನನ್ನ ತಂದೆ ಕೈದಾಳ ರಾಮಸ್ವಾಮಿಗಳು ಹೇಳಿಕೊಡುತ್ತಿದ್ದ ಲೆಕ್ಕ ಬರೆಯುವ ಕ್ರಮ ಉಪಯುಕ್ತವಾಗಿತ್ತು. ನಾನು ಎಷ್ಟರ ಮಟ್ಟಿಗೆ ಲೆಕ್ಕ ಬರೆಯುವುದನ್ನು ಕಲಿತೆ ಎಂದರೆ ಐದಾರು ವರ್ಷಗಳ ಕಾಲ ನಾನು Buctaದ ಲೆಕ್ಕಗಳನ್ನು ನಗದು ಪುಸ್ತಕವಿಲ್ಲದೆ ಬರೆದುಕೊಟ್ಟಿದ್ದೆ. ಖರ್ಚಿನ ವಿಚಾರದಲ್ಲಿ ನಾನು ಎತ್ತುತ್ತಿದ್ದ ಆಕ್ಷೇಪಣೆಗಳಿಗೆ, ಎಂ.ವಿ.ಸೀ. ನಗುಮುಖದಿಂದಲೇ ವಿವರ ಕೊಡುತ್ತಿದ್ದರು. ವಾಣಿಜ್ಯ ವಿಭಾಗದ ಪ್ರೊ॥ ಎಸ್.ಆರ್. ನಾರಾಯಣಮೂರ್ತಿ ನಾನು ಸಹಕಾರಿ ಸಂಘದ ಕಾರ್ಯದರ್ಶಿಯಾಗಿದ್ದಾಗ, ಲೆಕ್ಕ ಪತ್ರಗಳನ್ನು ಬರೆದುಕೊಳ್ಳುವುದನ್ನು ಆಡಿಟ್ ಮಾಡುವುದನ್ನು, ಹೇಳಿಕೊಟ್ಟಿದ್ದು ನನಗೆ ಉಪಯೋಗಕ್ಕೆ ಬಂದಿತು.

ನಾನು ಡಾ. ದೇವರಕೊಂಡಾರೆಡ್ಡಿ, ಡಾ. ಆರ್. ಶೇಷಶಾಸ್ತ್ರಿ ಮೂರೂ ಜನ ಸೇರಿ ಎಂ.ಎಸ್. ಪುಟ್ಟಣ್ಣನವರ ಮನೆಯಲ್ಲಿ ಗಾಂಧೀಬಜಾರ್‌ನಿಂದ ಹಸ್ತಪ್ರತಿಗಳನ್ನು ತಂದು ಶುದ್ಧಮಾಡಿ ಕಟ್ಟಿಕೊಟ್ಟಾಗ ಎಂ.ವಿ.ಸೀ. ಎಷ್ಟು ಸಂತೋಷ ಪಟ್ಟಿದ್ದರು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಶ್ರೀ ಎಸ್. ಶಿವಣ್ಣನವರಂಥ ಅಚ್ಚುಕಟ್ಟು ಕೆಲಸಗಾರರು ಇನ್ನೊಬ್ಬರಿಲ್ಲ, ನಾನು ಕೇಂದ್ರಕ್ಕೆ ಹೋದಾಗಲೆಲ್ಲಾ, ತಮ್ಮ ಬಳಿ ಬಂದಿದ್ದ ಹೊಸ ಹಸ್ತಪ್ರತಿಗಳನ್ನು ತೋರಿಸಿ ವಿವರಿಸುತ್ತಿದ್ದರು ಶಿವಣ್ಣ, ಅವರ ಲೇಖನಗಳ ಪ್ರತಿಯೊಂದನ್ನು ತಪ್ಪದೇ ಕೊಡುತ್ತಿದ್ದರು. ಪಟೇಲ್ ಶಿವನಂಜೇಗೌಡನ 'ಹಳೇಬೀಡು ದೇವಾಲಯದ ಚರಿತೆ' ಪುಸ್ತಕ ನನ್ನ ಬಳಿ ಇದೆ ಎಂದಾಗ, ಅದು ಮುದ್ರಣವೇ ಆಗಿಲ್ಲ ಎಂದು ದೊಡ್ಡವರೊಬ್ಬರು ಬರೆದಿದ್ದ ವಿಚಾರವನ್ನು ತಿಳಿಸಿ, ಸತ್ಯಾಂಶವನ್ನು ಅವರಿಗೆ ಮನವರಿಕೆ ಮಾಡಿ ಪತ್ರ ಬರೆದಿದ್ದರು.

ನಾನು ಸಂಜೆ ಕಾಲೇಜಿನಿಂದ ಹಗಲು ಕಾಲೇಜಿಗೆ ವರ್ಗಾವಣೆಯಾದ ಕೆಲವು ವರ್ಷಗಳ ನಂತರ ಬಿ.ಎಂ.ಶ್ರೀ. ಸ್ಮಾರಕ ಸಂಸ್ಥೆಯಿಂದ ನಾನು ಹೊರ ಬಂದೆ. ಆದರೆ ಎಂ.ವಿ.ಸೀ. ಅವರು ಮಾತ್ರ ವಿಶ್ವಾಸವನ್ನು ಬಿಡಲಿಲ್ಲ.

ಬಿ.ಕಾಂ. ತರಗತಿಗಳಲ್ಲಿ ಏನು ಪಾಠ ಮಾಡುತ್ತಾರೆ. ಎಂಬುದಕ್ಕಿಂತ ಲೆಕ್ಕ ಬರೆಯುವುದು ಹೇಗೆ ಎಂದು ತಿಳಿಯುವುದಕ್ಕೆ ನಾನು ಆಚಾರ್ಯ ಪಾಠಶಾಲಾ ಸಂಜೆ ಕಾಲೇಜಿನ ಬಿಕಾಂ. ತರಗತಿಗೆ ಸೇರಿದೆ. ಆಗ ನನಗೆ ಅಕೌಂಟ್ಸ್ ಪಾಠ ಮಾಡಲು ಪ್ರೊ॥ ಬಿ.ಎಸ್. ಪದ್ಮನಾಭ, ಪ್ರೊ. ಬಿ.ಎಲ್. ಸತ್ಯನಾರಾಯಣಶಾಸ್ತ್ರಿ, ಸ್ಟಾಟಿಸ್ಟಿಕ್ಸ್, ಪಾಠ ಮಾಡಿದ ಪ್ರೊ. ಪಿ. ಕೃಷ್ಣಮೂರ್ತಿ, ಎಕನಾಮಿಕ್ಸ್ ಪಾಠ ಮಾಡಿದ ಡಾ. ಮುಂಜುಳಾರೆಡ್ಡಿ, ಆರ್ಥಿಕ ಭೂಗೋಳಶಾಸ್ತ್ರದ ಶ್ರೀ ಮೀನಾಕ್ಷಮ್ಮ, ಇಂಗ್ಲಿಷ್ ಪಾಠದ. ಪ್ರೊ॥ ಎಚ್.ಎಲ್. ನಾಗರಾಜ್, ಹಾಗೂ ಕನ್ನಡ ಪಾಠ ಮಾಡಿದ ಪ್ರೊ. ಕೆ.ಎಸ್. ಮಧುಸೂದನ್ ಅವರು ನನ್ನ ಓದಿಗೆ ಮತ್ತೊಂದು ಆಯಾಮವನ್ನು ನೀಡಿದರು. ಯೂನಿವರ್ಸಿಟಿಯ ಕೆಲಸಗಳಿಗೆ ನನ್ನನ್ನು ಹಚ್ಚಿದ ಪ್ರೊ॥ ಬಿ.ಎಸ್. ಪದ್ಮನಾಭ ಮತ್ತು ಪ್ರೊ॥ ಎಂ.ಆರ್. ರಂಗನಾಥ್ ಅವರು ಆಡಳಿತಾತ್ಮಕ ಕೆಲಸಗಳಿಗೆ ಬೇಕಾದ ಧೈರ್ಯವನ್ನು ತಂದುಕೊಟ್ಟರು. ಪದವೀ ಪೂರ್ವ ತರಗತಿಯ ಕನ್ನಡ ಪಾಠ ತಯಾರಿಕೆಯ ಸಂದರ್ಭದಲ್ಲಿ ಜೊತೆಗೂಡಿದ್ದ ಡಾ. ಎಚ್.ಎಸ್. ಮುರಳೀಧರ ಅವರ ಅಚ್ಚುಕಟ್ಟುತನ ನನಗೆ ನಾಚಿಕೆ ಬರಿಸುತ್ತಿತ್ತು. ಜೊತೆಯಲ್ಲಿ ಕೆಲಸ ಮಾಡಿದ ಪ್ರೊ. ಜಿ. ಅಬ್ದುಲ್ ಬಷೀರ್, ದಿನಾ ಊಟ ಹಾಕಿದ ಪ್ರೊ. ಯು. ಮಾಧವಾಚಾರ್, ಅವರ ಸ್ನೇಹ ಸದಾ ಹಸಿರಾಗಿದ್ದಿತ್ತು. ನನ್ನ ಇನ್ನೊಂದು ಓದಿನ ಚಟಕ್ಕೆ ಕಾರಣರಾದವರು ಪ್ರೊ ಜಿ. ಜಯಸಿಂಹರೆಡ್ಡಿ, ಅರ್ಲಿ ಸ್ಟಾನ್‌ಲೀ ಗಾರ್ಡ್‌ನರ್ ಪೆರ್ರಿ ಮ್ಯಾಸನ್ ಸಾಹಸದ ಪುಸ್ತಕಗಳ ಓದುವ ಹುಚ್ಚು ಅವರಿಂದ ಪ್ರಾರಂಭವಾಗಿ ಅವರನ್ನೇ ಮೀರಿಸಿತು. Mythical Monkeyಯಿಂದ ಪ್ರಾರಂಭವಾಗಿ ಈಗ ನನ್ನ ಬಳಿ ಪೆರ್ರಿ ಮ್ಯಾಸನ್ ಸಾಹಸದ ಸಾಕಷ್ಟು ಸಂಖ್ಯೆಯ ಕೃತಿಗಳಿವೆ. ಈಗಲೂ ಬೇಜಾರಾದಾಗ ನಾನು ಅದನ್ನೇ ಓದುವುದು. ಕನ್ನಡ ನಾಟಕಕಾರರಾದ ಹಿಂದಿ ಅಧ್ಯಾಪಕರು ಪ್ರೊ॥ ಜಯಸಿಂಹ ರೆಡ್ಡಿ ಅವರು ಸಂಜೆ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ನಾನು ಮತ್ತೆ ಒಂದು ವರ್ಷ ಸಂಜೆ ಕಾಲೇಜಿನಲ್ಲಿ ಕೆಲಸ ಮಾಡಬೇಕಾಗಿ ಬಂದಿತ್ತು. ಆಗ ಅವರು ಆಡಳಿತ ವಿಚಾರಗಳಲ್ಲಿ ನನ್ನನ್ನು ತುಂಬಾ ಆತ್ಮೀಯವಾಗಿ ಕಾಣುತ್ತಿದ್ದರು. ಮೂವತ್ತೆರಡು ವರ್ಷಗಳ ಕಾಲ ನನ್ನೊಂದಿಗೆ ಅಧ್ಯಾಪನ ಮಾಡಿದವರು ಡಾ॥ ಅನಂತನರಸಿಂಹಾಚಾರ್. ಸಂಸ್ಕೃತ ಮಹಾಮಹೋಪಾಧ್ಯಾಯರಾದ ಅವರು, ಮಡಿವಂತಿಕೆಯಿಲ್ಲದೆ ಸಂಸ್ಕೃತದ ಅನೇಕ ವಿಚಾರಗಳನ್ನು ಹಂಚಿಕೊಳ್ಳುತ್ತಿದ್ದರು. ರವಿವರ್ಮನ ಗುಡ್ನಾಪುರದ ಶಾಸನದ ಪಾಠವನ್ನು ನಾನು ಅವರಿಂದ ಹೇಳಿಸಿಕೊಂಡಿದ್ದೆ. ವಾಲ್ಮೀಕಿ ರಾಮಾಯಣದಲ್ಲಿ ಪ್ರಕ್ಷಿಪ್ತವಾಗಿದ್ದ ಅನೇಕ ವಿಚಾರಗಳನ್ನು ಅವರು ಚರ್ಚೆ ಮಾಡಿದ್ದರು. ನಮ್ಮಿಬ್ಬರಿಗೂ ಊಟಿಜಾ ಒಂ ಮಾಡಬೇಕೆಂಬ ಆಲೋಚನೆಯೂ ಬಂದಿತ್ತು. ಕನ್ನಡದಲ್ಲಿಯೇ ಸಂಸ್ಕೃತ ವಿಚಾರವನ್ನು ಬರೆಯಬೇಕೆಂದು ನಿರ್ಣಯಿಸಿ ಹಾಗೆಯೇ ಬರೆದು ಪಿ.ಎಚ್.ಡಿ.ಯನ್ನು ಪಡೆದ ಅನಂತನರಸಿಂಹಾಚಾರ್ ಸದಾ ಹಸನ್ಮುಖಿಯಾಗಿರುತ್ತಿದ್ದರು.

ಡಾ. ಎಚ್.ಎಸ್. ಮುರಳೀಧರರ ಮನೆಯಲ್ಲಿ ಮುದ್ದಣ ಕವಿಯ ರಾಮಾಶ್ವಮೇಧ, ರನ್ನನ ಗದಾಯುದ್ಧ ಸಂಗ್ರಹದ ಅಧ್ಯಯನ ನಡೆಸಿದಾಗ ಜೊತೆಗೂಡಿದವರು ಪ್ರೊ॥ ಕೆ.ಎಸ್. ಮಧುಸೂದನ್, ಪ್ರೊ॥ ಶ್ರೀನಿವಾಸಮೂರ್ತಿ, ಪ್ರೊ॥ ಕ.ನಂ. ನಾಗರಾಜು ಮೊದಲಾದವರು. ಪ್ರೊ॥ ಮಧುಸೂದನ್ ಮನೆಯಲ್ಲಿ 'ಪಂಪ ಭಾರತ'ದ ಅಧ್ಯಯನ ನಡೆವಾಗ ಸೇರಿಕೊಂಡವರು ಪ್ರೊ॥ ಮಾಧವರಾವ್ ಮತ್ತು ಪ್ರೊ॥ ಕೋದಂಡರಾಂ. ಆಗ ಎಲ್ಲರೂ ನಡೆಸುತ್ತಿದ್ದ ಚರ್ಚೆಯಿಂದ ಮುಂದೆ ನನಗೆ ಹಳಗನ್ನಡ ಶಿಬಿರಗಳನ್ನು ನಡೆಸಲು ಬೇಕಾದಷ್ಟು ಸಹಾಯವಾಯಿತು.

೧೯೮೮ರಲ್ಲಿ ನಾನು ಪಿ.ಎಚ್‌ಡಿ ಅಧ್ಯಯನಕ್ಕೆ ಅನಂತಪುರದ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯಕ್ಕೆ ನೋಂದಣಿ ಮಾಡಿಸಿದಾಗ ನನಗೆ ಮಾರ್ಗದರ್ಶಕರು ಡಾ. ಆರ್. ಶೇಷಶಾಸ್ತ್ರಿ, ಕ್ಷೇತ್ರ ಕಾರ್ಯ ಮಾಡಿ, ಪುಸ್ತಕದಿಂದ ತೆಗೆದು ನಾನು ಬರೆದು ಕೊಡುತ್ತಿದ್ದುದಕ್ಕೆ ಒಂದು ಸ್ವರೂಪವನ್ನು ಕೊಟ್ಟು ಹೀಗೆ ಬರೆಯದೇ ಇದ್ದರೆ ಮಾನ ಬರುವುದಿಲ್ಲ. ಎಂದು ತೋರಿಸಿಕೊಡುತ್ತಿದ್ದರು. ಕರ್ನಾಟಕದ ಜನ ತಮಗೆ ಮಾಡಿದ ಅನ್ಯಾಯವನ್ನು ಯಾರ ಹತ್ತಿರವೂ ದೂರದ ಅವರು ಆಂಧ್ರದಲ್ಲಿ ಕುಳಿತು ಕನ್ನಡದ ಕೆಲಸವನ್ನು ತೆಲುಗು ವಿಭಾಗದಲ್ಲಿ ಮಾಡಿದರು. ಮನೆಯಲ್ಲಿ ಆಶ್ರಯಕೊಟ್ಟು ಊಟ ಹಾಕಿ ಕ್ಷೇತ್ರಕಾರ್ಯದಲ್ಲಿ ಜೊತೆಗೂಡಿದ ಆರ್. ಶೇಷಶಾಸ್ತ್ರಿ ಮತ್ತು ಅವರ ಶ್ರೀಮತಿಯವರು ನನ್ನ ಪಾಲಿನ ಟಿ.ಎಸ್. ವೆಂಕಣ್ಣಯ್ಯನವರಾಗಿದ್ದಾರೆ. ತಮ್ಮ ನಗೆಮಾತಿನಿಂದಲೇ ಹೇಳಿಕೊಡುತ್ತಿದ್ದ ಶೇಷಶಾಸ್ತ್ರಿಗಳು ನನಗೆ ಶಾಸನಶಾಸ್ತ್ರ ಪಾಠ ಮಾಡುವ ಉಪಾಧ್ಯಾಯರೂ ಹೌದು, ಪಿ.ಹೆಚ್‌ಡಿ. ಮಾರ್ಗದರ್ಶಕರೂ ಹೌದು. ಆತ್ಮೀಯ ಸ್ನೇಹಿತರೂ ಹೌದು. ನನ್ನ ಪ್ರೀ ಪಿಎಚ್‌ಡಿ ಪರೀಕ್ಷೆಯಿಂದ ಪ್ರಾರಂಭಿಸಿ, ಪಿಎಚ್‌ಡಿ ಪದವಿ ದೊರೆಯುವವರೆಗೂ,

ನನ್ನನ್ನು ಗಮನಿಸಿದವರು ಡಾ. ಹಂಪ ನಾಗರಾಜಯ್ಯ ಮತ್ತು ಡಾ. ಕಮಲಾ ಹಂಪನಾ ಅವರು. ಪೆನುಗೊಂಡೆಯ ಬೆಟ್ಟದ ಬುಡದಲ್ಲಿದ್ದ ಜೈನ ನಿಸಿದಿಗಳನ್ನು ತೋರಿಸಿದ್ದೇ ಅಲ್ಲದೆ, ತಾನೇ ಕಾರನ್ನು ಓಡಿಸಿಕೊಂಡು ಅನಂತಪುರಕ್ಕೆ ಕರೆದುಕೊಂಡು ಬಂದು, ನನ್ನ ನಿಬಂಧದಲ್ಲಿದ್ದ ಕೊರತೆಗಳನ್ನು ನಿರ್ದಾಕ್ಷಿಣ್ಯವಾಗಿ ತೋರಿಸಿ. ಮೌಖಿಕ ಪರೀಕ್ಷೆಯನ್ನು ನಡೆಸಿಕೊಟ್ಟ ಪ್ರೊ॥ ಹಂಪನಾ ಅವರಿಂದ ನಾನು ಅನೇಕ ಬರೆಹದ ಶಿಸ್ತನ್ನು ಕಲಿದ್ದೇನೆ.

ಕಠಿಣ ಪರಿಸ್ಥಿತಿಯಲ್ಲಿಯೂ ಗೆಲ್ಲಬಲ್ಲ ಕುದುರೆ ಡಾ. ದೇವರಕೊಂಡಾರೆಡ್ಡಿ. ಶೇಷಶಾಸ್ತ್ರಿಗಳಿಗೆ, ದೇವರಕೊಂಡಾರೆಡ್ಡಿಯವರಿಗೆ ಸರಿಯಾಗಿ ಕೆಲಸ ಸಿಕ್ಕಿರಲಿಲ್ಲ. ಆಮೇಲೆ ಅವರೇ ಸ್ವಂತ ಪರಿಶ್ರಮದಿಂದ ಮುಂದೆ ಬಂದರು. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಶಾಸನ ಶಾಸ್ತ್ರ ವಿಭಾಗದಿಂದ ನಾಸೂ ಮತ್ತು ಡಾ. ಶೇಷಶಾಸ್ತ್ರಿ ಸಂಪಾದಿಸಿದ ಆಂಧ್ರಪ್ರದೇಶ ಕನ್ನಡ ಶಾಸನಗಳ ಎರಡು ಸಂಪುಟಗಳು ಪ್ರಕಟವಾದದ್ದು ದೇವರಕೊಂಡಾರೆಡ್ಡಿಯವರ ಉತ್ಸಾಹದಿಂದ ಹಾಗೂ ಅಂದಿನ ಕುಲಪತಿಗಳಾಗಿದ್ದ ಡಾ. ಎಂ.ಎಂ. ಕಲಬುರ್ಗಿ ಅವರಿಂದ. ಶ್ರೀ ಎ.ಎಂ. ಅಣ್ಣಿಗೇರಿ ಅವರು ಎಲ್ಲೋ ನಿಂತು ಹಾರೈಸಿದ್ದರು. ಎಂದು ತೋರುತ್ತದೆ.

ಅನಂತಪುರದ ಡಾ. ಪಿ.ಎಲ್ ಶ್ರೀನಿವಾಸರೆಡ್ಡಿ, ಅವರ ಔದಾರ್ಯ ಹೆಚ್ಚು. ತಮ್ಮ ಬಳಿ ಇದ್ದ 'ಭಾರತಿ' ಪತ್ರಿಕೆಗಳೆಲ್ಲವನ್ನು ಲೆಕ್ಕ ಇಟ್ಟುಕೊಳ್ಳದೇ ಕೊಟ್ಟಿದ್ದರು ಅವರು. ಅಲಂಪುರದ ಗಡಿಯಾರಂ ರಾಮಕೃಷ್ಣ ಶರ್ಮರು, ನಾನು ಡಾ. ಗೋಪಾಲರಾಯರ ಜೊತೆಗೆ ಅಲಂಪುರಕ್ಕೆ ಹೋಗಿದ್ದಾಗ, ತಾವೇ ಎಲ್ಲಾ ದೇವಾಲಯಗಳನ್ನು ತೋರಿಸಿ ವಿವರಿಸಿದ್ದರು. ನನ್ನು ಪಿ.ಎಚ್‌ಡಿ ಅಧ್ಯಯನದ ಗ್ರಂಥ ಪ್ರಕಟವಾದಾಗ ವಿಮರ್ಶೆಯೊಂದನ್ನು ಬರೆದು ಕಳಿಸಿದ್ದರು. ಅವರ 'ಶತಪತ್ರ' ಎಂಬ ಆತ್ಮಕಥಾನಕ ಈಗ ಶೇಷಶಾಸ್ತ್ರಿ ಅವರಿಂದ ಕನ್ನಡಕ್ಕೆ ಬರುತ್ತಿದೆ.

೧೯೭೪ರಲ್ಲಿ ನಾನು ಎಂ.ಎಡ್ ಮಾಡಬೇಕೆಂದು. ಆ ತರಗತಿಗೆ ಸೆಂಟ್ರಲ್ ಕಾಲೇಜಿನಲ್ಲಿ ಸೇರಿದ್ದೆ. ಪ್ರೊ॥ ಎಸ್.ವಿ. ತೀರ್ಥ, ಪ್ರೊ॥ ಶ್ರೀಮತಿ ತೀರ್ಥ, ಪ್ರೊ॥ ರೊಹೆಡೇಕರ್ ಮೊದಲಾದ ಘಟಾನುಘಟಿಗಳ ಪಾಠಗಳನ್ನು ತಿಂಗಳ ಕಾಲ ಕೇಳುವ ಭಾಗ್ಯ ನನ್ನದಾಗಿತ್ತು. ಆದರೆ ಸಂಜೆ ಕಾಲೇಜಿನಲ್ಲಿದ್ದರೂ, ಪರೀಕ್ಷೆಯ ಕೆಲಸಗಳಿಗೆ ಬೆಳಗ್ಗೆ ಒದಗಬೇಕಾಗಿದ್ದುದರಿಂದ ಎಂ.ಎಡ್. ನಿಂತು ಹೋಯಿತು. ಸಾಲದು ಎಂದು ಕುಥಿಭಿ ಒಖಿಲ ಗೆ ಅರ್ಜಿ ಹಾಕಿದೆ. ಸೀಟು ದೊರೆತಿತ್ತು. ಸೇರಿಕೊಳ್ಳಲು ಸಮಯಾವಕಾಶವೇ ಸಿಗಲಿಲ್ಲ. ಹೋಗಲಿ ಎಂ.ಎಸ್.ಸಿ. Mathematic ಮಾಡೋಣ ಎಂದು ಬೆಂಗಳೂರು ವಿಶ್ವವಿದ್ಯಾಲಯದ External Courseಗೆ ಸೇರಿ ಮೊದಲ ವರ್ಷದ ಪರೀಕ್ಷೆಯನ್ನು ತೆಗೆದುಕೊಂಡೆ. ಓದದೇ ಇದ್ದದ್ದರಿಂದ ಟೆಲಿಫೋನ್ ನಂಬರಿನಂತಹ ಅಂಕಗಳು ದೊರೆತವು. ಅಲ್ಲಿಗೆ ನನ್ನ ವಿಜ್ಞಾನದ – ಶಿಕ್ಷಣದ ಸ್ನಾತಕೋತ್ತರ ಪದವಿ ಪಡೆಯಬೇಕೆಂದಿದ್ದ ಉತ್ಸಾಹ ಬತ್ತಿಹೋಯಿತು. ಆದರೆ ಒಚಿಣಉಜಟಚಿಣುಛಿ ನಲ್ಲಿದ್ದ ಉತ್ಸಾಹ ಮಾತ್ರ ಕಡಿಮೆಯಾಗಲಿಲ್ಲ. ಬಿ.ಕಾಂ.ನಲ್ಲಿ Mathematic ಅನ್ನು ಒಂದು ವಿಷಯವಾಗಿ ನಿಗದಿ ಪಡಿಸಿದಾಗ ಕೆಲವು ಮಂದಿ ವಾಣಿಜ್ಯ ಅಧ್ಯಾಪಕ ಮಿತ್ರರಿಗೆ Business Mathematics ಪಾಠ ಮಾಡಿದೆ. ಅದರಿಂದ ಕಾಸು ಬರುತ್ತಿರಲಿಲ್ಲ. ಕಜ್ಜಾಯ ಮಾತ್ರ ಸಿಕ್ಕುತ್ತಿತ್ತು.

ವಿಜ್ಞಾನದ ಅವಕಾಶಗಳು ತಪ್ಪಿದ ಹಾಗೆಲ್ಲಾ ನನಗೆ ಸಾಂಸ್ಕೃತಿಕ ಇತಿಹಾಸದ ಕಡೆಗೆ ಮನಸ್ಸು ಎಳೆಯತೊಡಗಿತು. ಎಂ.ಎ. ಇತಿಹಾಸಕ್ಕೆ ಸೇರೋಣ ಎಂದು ಹೋದಾಗ, ಬೆಂಗಳೂರು ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಡಾ. ಶ್ರೀನಿವಾಸಮೂರ್ತಿಗಳು ಹಾಗೂ ಡಾ. ಯು. ಸೂರ್ಯನಾಥ ಕಾಮತರು, ನನ್ನ ಉತ್ಸಾಹಕ್ಕೆ ಕಡಿವಾಣ ಹಾಕಿ ಹಿಂದೆ ಕಳುಹಿಸಿದರು.

ನನ್ನನ್ನು ಪ್ರೀತಿಯಿಂದ ಕಾಣುತ್ತಿದ್ದವರು ಎಂ.ಇ.ಎಸ್. ಕಾಲೇಜಿನ ಪ್ರೊ॥ ಕ.ವೆಂ. ರಾಜಗೋಪಾಲ್ 'ಅಶ್ವತ್ಥಾಮನ್' ನಾಟಕದಲ್ಲಿ ಭಾರ್ಗವಿಯ ಪಾತ್ರವನ್ನು ಅವರ ನಿರ್ದೇಶನದಲ್ಲಿ ಮಾಡಿದಾಗಿನಿಂದ ನನ್ನ ಬಗ್ಗೆ ವಿಶ್ವಾಸವನ್ನು ಅವರು ಬೆಳೆಸಿಕೊಂಡಿದ್ದರು. ಈ ಇಳೀ ವಯಸ್ಸಿನಲ್ಲಿಯೂ ಅವರು ಇತಿಹಾಸ ಅಕಾಡೆಮಿಯ ಸಮ್ಮೇಳನಗಳಲ್ಲಿ ಭಾಗವಹಿಸಿ ಚರ್ಚೆಯಲ್ಲಿ ಭಾಗವಹಿಸಿ ಬಿಸಿಬಿಸಿಯಾಗಿ ಮಾತನಾಡುತ್ತಾರೆ. ತಾವು ಏನಾದರೂ ಐತಿಹಾಸಿಕವಾಗಿ ಬರೆದಾಗ, ಸಿಕ್ಕಿದಾಗ ವಿವರಿಸಿ ಚರ್ಚೆ ಮಾಡುತ್ತಾರೆ. ಚೆನ್ನಪಟ್ಟಣದ ಕುವೆಂಪು ಕಾಲೇಜಿನ ಸ್ನಾತಕೋತ್ತರ ಕೇಂದ್ರಕ್ಕೆ ನನ್ನನ್ನು ಅತಿಥಿ

ಉಪನ್ಯಾಸಕನಾಗಿಸಿದ್ದರೂ ಅವರೇ. ನನ್ನ ಬರವಣಿಗೆಗೆ ಮೊದಲಿನಿಂದಲೂ ಪ್ರೋತ್ಸಾಹ ನೀಡುತ್ತಿರುವ, ನಾನು ಕನ್ನಡಕ್ಕೆ ಬರಲು ಕಾರಣರಾದ ನನ್ನ ಭಾವ ಕಾರೇಪುರ ನಾರಾಯಣರಾಯರು ಹಾಗೂ ಹಿರಿಯ ಅಕ್ಕ ಸುಬ್ಬಲಕ್ಷ್ಮಿ ನಾರಾಯಣರಾಯರು ಹಾಗೂ ಕ್ಷೇತ್ರಕಾರ್ಯಗಳಲ್ಲಿ ಜೊತೆಗೂಡುತ್ತಿದ್ದ ನನ್ನ ಪ್ರೀತಿಯ ಎಲ್ಲ ವಿದ್ಯಾರ್ಥಿ ಮಿತ್ರರಿಗೂ ನಾನು ಋಣಿಯಾಗಿರಬೇಕು. ಏಕೆಂದರೆ ಸರ್ವಜ್ಞ ಹೇಳಿದಂತೆ.

**"ಮಂಡೆ ಬೋಳಾದೊಡಂ ದಂಡು ಕೋಲ್ವಿಡಿದೊಡಂ**
**ಹೆಂಡತಿಯ ಬಿಟ್ಟು ನಡೆದೊಡಂ ಗುರುಮುಖವ**
**ಕಂಡಲ್ಲದಿಲ್ಲ ಸರ್ವಜ್ಞ"**

ಹಾಗೆಯೇ ಅವನೇ

**"ಏನಾದಡೇನಯ್ಯ ತಾನಾಗದನ್ನಕ್ಕ**
**ತಾನಾಗಿ ತನ್ನನರಿದೊಡೆ ಲೋಕ ತಾ**
**ನೇನಾದಡೇನು ಸರ್ವಜ್ಞ"**

– ಎಂದಿರುವುದು ಸದಾ ನನ್ನ ನೆನಪಿನಲ್ಲಿರುತ್ತದೆ.



# ನುಡಿ - ಗೌರವ



ಶ್ರೀಮತ್ ಸಿಂಧೂರ ಬಂಧ–ಅರುಣಬಿಂದು ನವ ಸಂಧ್ಯಾಂಬುದಂ ಪುಷ್ಕರಪ್ರೋದ್।
ದಾಮಾಂಭಃ ಅ ಶ್ರೀಕರಂ ತಳ್ತುಡುಗಣಂ ಉರು ದಂಷ್ಟ್ರಾಂಕುರಂ ಬಾಲಚಂದ್ರಂ॥
ಪೋ ಮಾತೇನೆಂಬ ನೇರ್ಪಿಂ ನಭಮನ್ ಅನವರತಂ ಕೂರ್ತು ರಕ್ಷಿಸೆಮ್ಮಮ್॥೧॥

# ಗಣೇಶ ನಿನಗೆ ಇಪ್ಪತ್ತೊಂದಕ್ಷರ ನಮನದಾಶಾಸನ

- ಡಾ॥ ಜೋಸ್ಯುಲ ಸದಾನಂದ ಶಾಸ್ತ್ರೀ

ಶ್ರೀಮತ್ಕೈಲಾಸವಾಸೀ ಶ್ರಿತಜನವರದಃ ಪಾರ್ವತೀ ಸಾರ್ಧದೇಹಃ
ಶ್ರೀಭೂದುರ್ಗಾಸಮೇತಃ ಕಲಿತಶುಭಗುಣಃ ಕಾಮಿತಾರ್ಥಪ್ರದಾತಾ
ಶ್ರೀವಾಣೀಶಃ ಶುಭಾತ್ಮಾ ಭುವನಭವನನಿರ್ಮಾಣ ಕೇಳೀವಿಲೋಲಃ
ರಕ್ಷನ್ತ್ವೇನಂ ಗಣೇಶಂ ಗುಣಿವರಮುತ ವಿದ್ವದ್ವರೇಣ್ಯಂ ಲತಾತ್ತಂ. ೧

ಜಯಂತಿಯಸ್ಯಾವದತೋಪಿಭಾರತೀ
ವಿಭೂತಯಸ್ತೀರ್ಥ ಕೃತೋಪಿ ನೈಹ್ರಿತೇ
ಶಿಲಾಯ ಧಾತ್ರೇ ಸುಗತಾಯವಿಷ್ಣವೇ
ಜಿನಾಯ ತಸ್ಮೈ ಸಕಳಾತ್ಮನೇ ನಮಃ ೨

ಓಂ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥ ೩

ಅರವತ್ತಾರು ಕಡಿಮೆಯಾ
ದೆರಡುಂ ಸಾವಿರದ ಶಕವರುಷಕಂ ಸರಿಯ
ಪ್ಪುರೆ ಚಾಂದ್ರಮಾನ ನಂದನ
ವರುಷಗ ಶ್ರಾವಣದ ಶುದ್ಧ ದಶಮೀ ತಿಥಿಗಂ ೪

ಸರಿಯಪ್ಪ ರವಿಯ ವಾರದಿ
ಗುರುಹಿರಿಯರು ಮಿತ್ರಬಂಧುಜನ ಸಂದೋಹಂ
ನೆರೆದುಘೆ ಯೆನುತಿರಲೀ ಶುಭ
ತರ ಶಾಸನಮಾಯ್ತು ಪ್ರಕಟಿತಂ ಲೋಕಕ್ಕಂ. ೫

ಅದೆಂತೆನೆ

ಶ್ರೀಕೈದಾಳ ಸುವಂಶದಿ
ಸ್ವೀಕೃತ ಸಹಗಮನೆಯಾದ ಸತಿ ಪತಿಯೆನಿಪಾ
ಶ್ರೀಕಂಠದಾನಿ ಎಂಬ ಸು
ಧಾಕರನುದಯಿಸಿದ ವಂಶದಾಕಡಲೊಳಗಂ ೬

ಶಿವನಾ ರಾಮನ ಸದ್ಗುಣಂಗಳವು ಮೈವೆತ್ತಂತ ಸದ್ಭಾವಿತಂ
ಶಿವರಾಮಯ್ಯ ಮಹೋದಯಂ ಜನಿಸಿದಂ ಭಾಗ್ಯಾಂಬೆ ತತ್ಪತ್ನಿಯಾ
ಗೆ ವಿರಾಜತ್ಸುಭಕೀರ್ತಿಯಾದನುರೆ ಯೀತಂಗುದ್ಭವಂ ಪೊಂದಿದಂ
ಸುವಿರಾಜದ್ಗುಣಸಂಪದಂ ವಿದಿತ ರಾಮಸ್ವಾಮಿ ಸರ್ವೋನ್ನತಂ ೭

---

* ತೆಲುಗು ಅಧ್ಯಾಪಕರು ಎಸ್.ಎಸ್.ಬಿ.ಎನ್. ಜೂನಿಯರ್ ಕಾಲೇಜು ಅನಂತಪುರಂ ಆಂಧ್ರಪ್ರದೇಶ

ಜೀವನಮಾರ್ಗದೋಳ್ ನಿರತನುಂ ಕೃತಕೃತ್ಯನುಮಾದ ಧನ್ಯನುಂ
ಭಾವಿತ ಸತ್ಯನಾದ ವಿಬುದಂ ಗುಣಿವರ್ಯನು ಶಾನುಭೋಗಸಂ
ಭಾವಿತ ವೃತ್ತಿಯಾಗಿ ಲಲಿತಾ ಸುಮನೋಹರವಾಗಿ ಇರ್ದನಾ
ಧೀವರ ರಾಮಸ್ವಾಮಿ ಕಯಿದಾಳ ನಿವಾಸಿಯು ಸರ್ವಸಮ್ಮತಂ. ೮

ಎಂದೆಲ್ಲಿರಬೇಕೆಂಬುದ
ನಂದಂದಿಗೆ ನಿರ್ಣಯಿಸುವ ನಾವನು ಜಗದೊಳ್
ಎಂದಾವುದನವನೀವನೊ
ಅಂದಿಗಮದು ನಿಜ ಫಲವೆನುವುದೆ ಸರಿಯಕ್ಕುಂ. ೯

ಜನರಸ್ವಾರ್ಥವು ತನ್ನ ಮಾಳ್ಪಕೃತಿಗಂ ನೋವುಂಟುಮಾಡಲ್ ದಲಿಂ
ತು ನವಾವಾಸವಿದಾಗಲೆಂದು ಬಹುಕಾಲಾನಂತರಂ ಬೆಂಗಳೂ
ರ್ಗೆ ನಿಲಲ್ ವಂದನು ರಾಮಸ್ವಾಮಿ ವಿಬುಧಂ ಕೈದಾಳಕಾರೇಪುರಾ
ದಿ ನಿಕೇತಂಗಳನೆಲ್ಲ ಬೀಳ್ಕೊಳುತೆ ನಿಂತಂ ಜೀವನೋತ್ಸಾಹದಿಂ. ೧೦

ಆತಂಗಂ ಲಲಿತಾ ಮಹಿ
ಳಾತಿಲಕಳಿಗಂ ಜನಿಸಿದನುನ್ನತ ಗುಣಸಂ
ಭೂತಸುವಿಜ್ಞಾನಾನ್ವಿತ
ನೀತಂ ಕೃತಿನಾಯಕಂ ಗಣೇಶಂ ವಿಜ್ಞಂ ೧೧

ವೇದವ್ಯಾಸಂ ಪೇಳಲು
ಮೋದದಿ ಭಾರತವ ತಿಳಿದು ಬರೆದಬ್ಯಾಸಂ
ಈದಿನಕು ನಿಂತಿತೆನೆ ತಾ
ನೋದಲ್ ಪೇಳಲ್ಕೆನರಿತನಾಭಾರತಮಂ ೧೨

ಈತನ ಜೀವನಾಂಗಣದಿ ಹಬ್ಬಿತದೊಂದು ಪರೀಮಾಳತ್ತನ
ವ್ಯಾತತ ಶ್ರೀಲತಾಕಳೆಯು ಸಂಭವಮಾಯ್ತು ಪ್ರಸೂನಕದ್ವಯಂ
ಗೀತ ಸು ಪದ್ಮಲೇಖ ಯೆನೆ ಶ್ರೀಗಳದಾನಿ ಯೆನಲ್ಕೆ ಸತ್ಫಲಂ
ಗೀತಮದಾಯ್ತು ಜೀವನವು ಕಾವ್ಯದೊಲೊಪ್ಪುತೆ ಶ್ರೀಗಣೇಶನಾ. ೧೩

ಶ್ರೀಕಂಠದಾನಿ ಯಾದನು
ಸ್ವೀಕೃತಮಾರ್ದಂಗಿಕತ್ವನು ಸುತಾದ್ವಯಮುಂ
ಪ್ರಾಕಟ ವಿಜ್ಞಾನಿತ್ವವ
ಸ್ವೀಕರಿಸುತ್ತೊಪ್ಪುತಿದೆ ಸಂಸಾರಂ. ೧೪

ಭಾರತದಲಿ ಮನೆ ತನಗಂ
ಭಾರತಕಂ ತಾನು ಮನೆಯುಮಾದ ಗಣೇಶಂ
ಗಾರತಿಯಿತ್ತುದು ಭಾರತಿ
ಭಾರತಭಾರತಿಯ ರೂಪ ಮತ್ತೊಂದಾದಂ. ೧೫

ಶ್ರೀಮಾನ್ ಯಂವೀ ಸೀತಾ
ರಾಮಯ್ಯ ನವರಸುಸೇವೆ ಯೊಳ್ ಸಂಭಾವಿತನಾ
ಗೀ ಮಹಿತಗಣೇಶಂ ಧೀ
ಸಾಮಗ್ರಿಯನಾಂತು ಬೆಳೆದನೊಳ್ಪೊಳಗಾಂತಂ. ೧೬

ಗುರುಗಳು ಪೇಳಿದ ಕೃತಿಗಳ
ನುರೆ ಯೋದುತ ಬರೆಯುತಿರ್ದು ಸಂಭಾವನೆಯಂ
ಗುರುವೀಯಲದನ ತಾ ಮಿ
ತ್ರರಜೊತೆ ಮಧುಸೂದನಂಗಮರ್ಪಿಸುತಿದ್ದಂ. ೧೭

ಸೀತಾರಾಮಯ್ಯನವರ ಸದಾ ಸೇವೆಯಿಂದಂ ಸುಲಬ್ಧ
ಸ್ಫೀತಜ್ಞಾನಂ ಗರುಸುಕರುಣಾಢ್ಯಂ ಗಣೇಶಂ ಗುಣಾಢ್ಯಂ.
ಓತಪ್ರೋತಂ ಗುರುಕರುಣೆಯುಂ ಸ್ವೀಯಸೇವಾಮಹತ್ವಂ
ಸ್ವಾತಂತ್ರ್ಯಪ್ರೋಜ್ಜ್ವಿತವು ಪ್ರತಿಭಾರೂಪದಿಂ ಶೋಭಿಸಲ್ ಸ
ದ್ಗೀತಂ ತಾನಾದನು ಸುಚರಿತಂ ಲೋಕದೊಳ್ ಶ್ರೀಗಣೇಶಂ ೧೮

ಕನ್ನಡ ಛಂದಸ್ಸು ಕರಗತಮಾಯ್ತುರೆ
ಬಹುಕಾವ್ಯದಭ್ಯಾಸ ಮಹಿಮೆಯಿಂದ
ಆಂಧ್ರಕನ್ನಡಶಾಸನಾಧ್ಯಯನವದಾಯ್ತು
ಶೇಷಶಾಸ್ತ್ರೀಯ ವಿಶೇಷದಿಂದ
ಸರ್ವಜ್ಞ ವಚನ ಸಂಗ್ರಹಮೆಂಬುದಾಯಿತು
ಸರ್ವಜ್ಞ ಬುದ್ಧಿವಿಶೇಷದಿಂದ
ನುತ ಶಾಸನ ಸರಸ್ವತಿಯುದಯಮಾಯಿತು
ಶಾಸನಾರಾಧನಾಭ್ಯಾಸದಿಂದ
ಆಂಧ್ರದೇಶದ ಕನ್ನಡ ಶಾಸನಗಳು
ಹೊಸ ಬೆಳಕಕಂಡವು ವಿಶೇಷಸುಕೃಷಿಯಿಂದ
ಶ್ರೀಗಣೇಶನ ಕೀರ್ತಿಯು ಸ್ಥಿರಮದಾಯ್ತು
ನಿತ್ಯ ಸಾಹಿತ್ಯಭಾಷಾತ್ತ ಸೇವೆಯಿಂದ ೧೯

ಸ್ನೇಹದರೂಪ ಸದ್ವಿದ್ಯೆಯ ಪ್ರತಿರೂಪ
ಸಜ್ಜನತಾಸತ್ತ್ವರೂಪ ತಾನು
ಮರ್ಯಾದೆಯ ಸ್ವರೂಪ ಮಹಿತಸದಾಲಾಪ
ಮಾನಿತ ಸಜ್ಜನಾಲಾಪ ತಾನು
ಆಡಂಬರವನೋಪ ಸರಳಾತಾ ನಿಜರೂಪ
ಬೆಳಗುವ ವಿಜ್ಞಾನ ದೀಪ ತಾನು
ಶಾಸ್ತ್ರಧರಾ ಭೂಪ ಜ್ಞಾನಾಮೃತದ ಕೂಪ
ವಿದ್ಯಾರ್ಥಿ ಜ್ಞಾನತೃಷಾಪ ತಾನು
ಮಿತ್ರಹೃದ್ಪದ್ಮನಿಷ್ತಾಪ ರವಿಯುತಾನು
ಸ್ನೇಹ ಸುಧೇಯುಳ್ಳೆಡೆಗೆ ಪೋಪ ದುಂಬಿತಾನು
ಶೋಭಿಸುವ ಸಜ್ಜನತೆಗೆ ಸಮೀಪ ತಾನು
ಶ್ರೀಗಣೇಶನಜ್ಞಾನದ ತಮಕೆ ಭಾನು ೨೦

ತಾರೆಗಳೆಣಿಸಲ್ವರ್ಕುಂ
ಸಾರಜಲಧಿತಲವಮುಟ್ಟೆ ತೇಲಲ್ವರ್ಕುಂ
ಬೇರೇನಾದರುಮಕ್ಕುಂ
ಧೀರ ಗಣೇಶನ ಗುಣಗಳೆಣಿಕೆ ದುಸ್ಸಾಧ್ಯಂ. ೨೧

ಆರರಿಗಳು ಶೂನ್ಯಮೆನಲ್
ಆರುಂ ದಶಕಗಳದಾಟಿ ಅರುವಿನ ಬಯಲೋಳ್
ಚಾರು ವಿಹಾರವ ಗೈಯ್ಯುವ
ಸೂರಿ ಗಣೇಶಂಗೆ ಶುಭಮದಕ್ಕನವರತಂ. ೨೨

ಮಕ್ಕಳ ಮದುವೆ ನಡೆದು ಮೊ
ಮ್ಮಕ್ಕಳ್ವಂದಂಕದಲಿನಲಿಯುತಿರಲಿವರ್ಗಂ
ಹೊಕ್ಕುಳಹೂವಿನವನ ಕೃಪೆ
ಮಿಕ್ಕುತಲಿರಲೀ ಲತಾ ಗಣೇಶರಿಗೆಂದುಂ. ೨೩

ನಂಜನಗೂಡು ಪುರಸ್ಥೋ ನಂಜುಂಡಶೋ ಸದಾವತು
ಆರೋಗ್ಯಂ ಸರ್ವಸೌಖ್ಯಾಂಶ್ಚ ದತ್ವಸೌ ಗೃಹದೇವತಾ ೨೪

ಸಖಾಯಸ್ತು ಗಣೇಶಸ್ಯ ಸದಾನಂದೇತಿ ವಿಶ್ರುತಃ ।
ಶಾಸ್ತ್ರೀ ರಚಿತವಾನ್ ಸ್ತುತ್ಯಂ ಶಾಸನಂ ಸರ್ವಸನ್ನುತಮ್ ॥ ೨೫

ಯಃ ಪಠೇತ್ ಶ್ರಾವಯೇದ್ವಾಪಿ ಶಾಸನಂ ತ್ವೇನಮುತ್ತಮಮ್ ।
ತಸ್ಯ ವಿಘ್ನ ಭಯಂ ನಾಸ್ತಿ ಸರ್ವತ್ರ ವಿಜಯೀ ಭವೇತ್ ॥ ೨೬

ಮಂಗಳಂ ಮಹಾಶ್ರೀ

*****

# ಅಪ್ಪ ಅಂದ್ರೆ ಅಪ್ಪಾನೆ

* ಪದ್ಮಲೇಖಾ

ಅಪ್ಪನ ಬಗ್ಗೆ ಬರೆಯಬೇಕು ಅಂದರೆ, ಒಂದು ಪ್ರಶ್ನೆಯಿಂದ ಪ್ರಾರಂಭಿಸುತ್ತೇನೆ: "ಅಪ್ಪ ಅಂದ್ರೆ ಯಾರು?" ಅಪ್ಪ ಅಂದ್ರೆ, ಬೆಳಗ್ಗೆ ಎದ್ದು, ರೇಡಿಯೋ ಕುಯ್, ಕರ್... ಅಂತ ಕಿರುಚಾಡಿ ಕೊನೆಗೆ ಸಿಲೋನ್‌ನಲ್ಲಿ ಸೈಗಲ್ "ಕ್ಯಾ ಜಾದು ಹೈ..." ಅಂತ ಹಾಡುವವರೆಗೂ ರೇಡಿಯೋ ಕಿವಿಯನ್ನು ಹಿಂಡುವವರು. ನಾವುಗಳು ನಿಧಾನವಾಗಿ ಎದ್ದು, ಇನ್ನೂ ನಿಧಾನವಾಗಿ ತಯಾರಾಗಿ, ಶಾಲೆಗೆ ಹೊರಡೋವಾಗ, ವಿಜಯ್ ಸೂಪರ್ ಅನ್ನುವ ಸ್ಕೂಟರ್ ಹತ್ತಿ "ಡ್ರಣ್ ಡರ್... ಇನ್ನೇನು ಹೊರಟೇ ಬಿಡ್ತೀನಿ" ಅಂತ ಚಮಕ್ ಕೊಡುವವರು. ನಾಲ್ಕೂ ಜನರನ್ನು ಹೊತ್ತ ಸ್ಕೂಟರ್ ಎನ್ನುವ ಕಾರನ್ನು ಶಬ್ದಕ್ಕೆ ಹತ್ತಿರದ ವೇಗದಲ್ಲಿ ಓಡಿಸುವವರು. "ಟಕ್ ಟಕ್" ಅಂತ ಗೇರು ಬದಲಾಯಿಸುತ್ತಾ, ಸ್ಕೂಟರ್ ಓಡಿಸುವುದೂ ಒಂದು ಕಲೆ ಅಂತ ಹಿಂದೆ ಕೂತವರಿಗೆ ಅರ್ಥ ಮಾಡಿಸುವವರು. ಯಾವ್ಯಾವ್ದೋ ಕೆಲಸ ಹಚ್ಚಿಕೊಂಡು, ಊರೆಲ್ಲಾ ಸುತ್ತಿ ಬಂದು, "ಇವತ್ತು ನಾಲ್ಕು ಲೀಟರ್ ಪೆಟ್ರೋಲ್ ಸುಟ್ಟೆ" ಅಂತ ವರ್ಣನೆ ಮಾಡುವವರು. ರಸ್ತೆ ತುಂಬಾ ಚೆನ್ನಾಗಿದ್ದರೆ, "ಸ್ಕೂಟರ್ ಓಡಿಸುವಾಗ ನಿದ್ದೆ ಬಂದುಬಿಡುತ್ತೆ" ಎನ್ನುವವರು. ಸ್ಕೂಟರ್‌ನಲ್ಲಿ ಗೇರು ತಂತಿ ಕಿತ್ತು ಬಂದಾಗ, ಮನೇಲೇ ಅದನ್ನು ಮರು ಜೋಡಿಸಿ, ಮಕ್ಕಳಿಗೆ ಅದರ ಬಗ್ಗೆ ಹೇಳಿ ಕೊಡುವವರು. ಮನೆಯಲ್ಲಿ ರೇಡಿಯೋ ರಿಪೇರಿ ಮಾಡಿ, ಅದರ ಬಿಡಿ ಭಾಗಗಳನ್ನು ವರ್ಣನೆ ಮಾಡುವವರು. ಟ್ಯೂಬ್ ಲೈಟ್‌ಗೆ ಬೂಸ್ಟರ್ ಜೋಡಿಸಲು ನನಗೆ ಕೊಟ್ಟು, ಎಷ್ಟು ಅರ್ಥ ಮಾಡಿಕೊಂಡಿದ್ದೀಯ ನೋಡೋಣ ಅಂತ ಕೇಳುವವರು. ಯಾವ ಮಾಧ್ಯಮ, ಯಾವ ವಿಷಯ ಬೇಕಾದರೂ ಓದು ಅಂತ ಮಕ್ಕಳಿಗೆ ಸ್ವಾತಂತ್ರ್ಯ ಕೊಡುವವರು. ಹಳೆಗನ್ನಡವಾಗಲೀ, ಗಣಿತವಾಗಲೀ, ಸುಲಭವಾಗಿ ಹೇಳಿಕೊಡುವವರು. ಇಂಟಿಗ್ರೇಶನ್‌ಅನ್ನು ಮಾಡಲಾರದೇ ತಿಣುಕಾಡುತ್ತಿದ್ದಾಗ, ಅದು ಎಷ್ಟು ಸುಲಭ ಅಂತ ತಿಳಿಸಿಕೊಟ್ಟವರು. ನಮಗೆ ಪರೀಕ್ಷೆ ಇದ್ದಾಗ, ಸಮಯಕ್ಕೆ ಸರಿಯಾಗಿ ನಾವು ಶಾಲೆ/ಕಾಲೇಜು ತಲುಪಿದ ಮೇಲೇ<sup></sup> ಬೇರೆ ಕೆಲಸ ನೋಡುತ್ತಿದ್ದವರು. ವೈಚಾರಿಕತೆ ಅಂದರೆ ಏನು ಅಂತ ಪರಿಚಯ ಮಾಡಿಕೊಟ್ಟವರು. ನಾವು ಇಂಗ್ಲಿಷ್ ತಿಳಿಯದಿದ್ದ ಕಾಲದಲ್ಲಿ, ಇಂಗ್ಲಿಷ್ ಸಿನೆಮಾಗೆ ಕರೆದೊಯ್ಯುವ ಮುನ್ನ ಅದರ ಕಥೆಯನ್ನು ಚಿತ್ರ ಬಿಡಿಸಿ ಹೇಳುವವರು. ಕರೆಂಟ್ ಹೋದಾಗ ಎಲ್ಲರನ್ನೂ ಕೂಡಿಸಿ, "ಬುರುಡೆ ದಾಸಯ್ಯ, ಏಕಾಂತದ ರಾಮಯ್ಯ, ಸನತ್ ಕುಮಾರ..." ಮುಂತಾದ ನಮ್ಮೂರಿನ ಕಥೆಗಳನ್ನೂ, ಮತ್ತು ಜೇಮ್ಸ್ ಬಾಂಡ್ ಸಿನೆಮಾದಲ್ಲಿ ಬರುವ "ಬೋಡ ಕಳ್ಳ, ಮೂಗುದ್ದ ಕಳ್ಳ, ಕಬ್ಣದ್ ಹಲ್ಲಿನವನು, ಕಬ್ಣದ್ ಕೈಯವನು..." ಇತ್ಯಾದಿ ಸಿನಿಮಾ ಕಥೆಗಳನ್ನೂ ಹೇಳುವವರು. ಕೈ ತುತ್ತು ಹಾಕಲು ಅಪ್ಪಾನೇ ಬೇಕು ಅಂತ ನಾವುಗಳು ಕೇಳಲು ಕಥೆ ಹೇಳುವುದೇ ಒಂದು ಕಾರಣ ಮಾಡಿದವರು. ನಾವು ಬೆನ್ನು ಹಿಡಿದುಕೊಂಡಾಗ, "ಎಲ್ಲೆಲ್ಲೋ ಹೋಗೋದು" ಅನ್ನೋ ಆಟ ಆಡ್ತಿದ್ದವರು. ಖುಷಿಯಾದಾಗ, "ಹ್ಮ್...." ಅಂತ ಹಾಡ್ಕೊಳ್ಳುವವರು, ಅದೇ ತುಂಬಾ ಕೋಪ ಬಂದಾಗ "ಬೇಕೂಫ" ಅಂತ ಬೈಯುವವರು. ರಾತ್ರಿ ಹೊತ್ತು, ನಾವುಗಳು ಹರಟೆ ಹೊಡೆಯುತ್ತಿದ್ದರೆ "ಸಾಕು ಕಯ ಕಯ" ಅಂತ ಬೈದು, ನಾವು ಮುಸಿ ಮುಸಿ ನಕ್ಕರೂ ಕೇಳಿಸಿಕೊಂಡು ಮತ್ತೆ ಎದ್ದು ಬಂದು ಮತ್ತೆ ಬೈದು, ಎಲ್ಲರೂ ಮಲಗಿ ನಿಶ್ಶಬ್ದವಾಗದ ಹೊರತು ಮಲಗದವರು. ಇದಕ್ಕೆ ತದ್ವಿರುದ್ಧವಾಗಿ, ಟಿವಿ ನೋಡುತ್ತಾ, ಹಾಗೇ ಕುರ್ಚಿಯ ಮೇಲೇ ನಿದ್ದೆ ಮಾಡಿ ಬಿಡುವವರು. ಬಿಸಿ ಬಿಸಿ ಸ್ಟ್ರಾಂಗ್ ಫಿಲ್ಟರ್ ಕಾಫಿಯನ್ನು ಆಸ್ವಾದಿಸುವವರು. ಕಾಫಿಯಲ್ಲಿ ಹಾಲಿನ ಕೆನೆ ಹಾಕಿ ಅವರ ಮುಂದೆ ಕೂತು ನಾವು ಕುಡಿದರೂ, "ವ್ಯಾ" ಅನ್ನುವವರು. ವಿಸಿಆರ್ ನಿಂದ ಡಿವಿಡಿಯವರೆಗೆ ಸುದೀರ್ಘ ಕಾಲದ ಸಿನೆಮಾ ಗೆಳೆತನ ಬೆಳೆಸಿಕೊಂಡವರು. ಸುರಯ್ಯ, ಮುಖೇಶ್ ಹಾಡುಗಳನ್ನು ಇಷ್ಟ ಪಡುವವರು. ಆಷಾಢಭೂತಿ ಮುಂತಾದ ಕನ್ನಡ ಸಿನೆಮಾಗಳನ್ನೂ, ದೇವಾನಂದ್ ನಟಿಸಿರುವ ಹಳೇ ಹಿಂದಿ ಸಿನೆಮಾಗಳನ್ನು, ವಾನ್ ರಯಾನ್ಸ್ ಎಕ್ಸ್‌ಪ್ರೆಸ್ ಮುಂತಾದ ಎರಡನೇ ಮಹಾಯುದ್ಧದ ಇಂಗ್ಲಿಷ್ ಸಿನೆಮಾಗಳನ್ನು ನಮಗೆ ತೋರಿಸಿ, ಒಳ್ಳೆ ಸಿನೆಮಾ ಎಂದರೆ ಏನು ಅಂತ ಚಿಕ್ಕ ವಯಸ್ಸಿನಲ್ಲೇ ಪರಿಚಯ ಮಾಡಿಕೊಟ್ಟವರು. ಯಾವುದೇ ದೇಶದವರು ಆಡುತ್ತಿರಲಿ, ಕೂತು ಕ್ರಿಕೆಟ್ ಟೆಸ್ಟ್

---

* ನಂ. ೨೦/೧, ೪ನೆಯ ಅಡ್ಡರಸ್ತೆ, ಮಾಗಡಿ ರಸ್ತೆ ಬೆಂಗಳೂರು-೫೬೦೦೨೩

ಮ್ಯಾಚ್ ಒಂದೊಂದು ಚಾಲನ್ನೂ ನೋಡುವವರು. ಪೆರ್ರಿ ಮೇಸನ್ ಪುಸ್ತಕಗಳಲ್ಲಿ ಬರುವ "ಇಂಪ್ರಾಪರ್, ಇರ್ರೆಲೆವೆಂಟ್, ಇಮ್ಮೆಟೀರಿಯಲ್" ಅನ್ನು ಓದುವಂಥವರು. ಕಾಮಿಕ್ಸ್ ಪುಸ್ತಕಗಳ ರಾಶಿಯನ್ನೇ ಮಕ್ಕಳಿಗೆ ತಂದುಕೊಟ್ಟು, ಒಂದು ಹೊಸಾ ಲೋಕಕ್ಕೆ ನಮ್ಮನ್ನು ಕರೆದೊಯ್ದವರು. "ಓಲ್ಡ್ ಫ಼ಾಕ್ಸ್" ಅನ್ನು ಟಿವಿಯಲ್ಲಿ ನೋಡುತ್ತಿದ್ದವರು. ಸ್ಟಾರ್ ಟ್ರೆಕ್‌ನಲ್ಲಿ ಬರುತ್ತಿದ್ದ ಸ್ಪಾಕ್ ಅನ್ನು "ಉದ್ದ ಕಿವಿಯವನು" ಅಂತ ನನಗೆ ಹೇಳಿಕೊಟ್ಟವರು. "ನಿನ್ನ ನಿರ್ಧಾರ ನಿನಗೆ ಬಿಟ್ಟಿದ್ದು" ಅನ್ನುವುದು ಹೊರತು, "ನನ್ನ ಮಾತು ಕೇಳಲೇಬೇಕು" ಎಂದು ನನಗೆ ಹೇಳದಿದ್ದವರು. ಒಂದು ವಯಸ್ಸು ದಾಟಿದ ಮೇಲೆ ನನ್ನನ್ನು ಚಿಕ್ಕ ಹುಡುಗಿಯೆನ್ನದೆ, ಸಮಾನಳಂತೆ ಕಂಡವರು, ನನ್ನ ಅನಿಸಿಕೆಗಳಿಗೆ ಪ್ರಾಮುಖ್ಯತೆ ಕೊಟ್ಟವರು... ಎಲ್ಲಾ ಬರೆದ ಮೇಲೂ, "ಅಪ್ಪ ಅಂದ್ರೆ ಯಾರು" ಎನ್ನುವ ಪ್ರಶ್ನೆಗೆ ಸರಿಯಾದ ಉತ್ತರ ಎಂದರೆ, ಅದು ನನ್ನ ತಂಗಿ ಒಮ್ಮೆ ಇದೇ ಪ್ರಶ್ನೆಗೆ ಕೊಟ್ಟ ಉತ್ತರ; "ಅಪ್ಪ ಅಂದ್ರೆ, ಅಪ್ಪಾನೇ!".

****

# ಅಪ್ಪ ಮತ್ತು ನಾನು

* ಕೆ.ಜಿ. ಶ್ರೀಕಂಠ ದಾನಿ

"ನಿನ್ನ ಕೈ ತುಂಬಾ ಮೆತ್ತಗಿದೆ ಕಣೋ, ಕೈ ಹಿಡ್ಕೊಂಡೇ ಇರು.." ಅಂತ ಅಪ್ಪ ನನಗೆ ಹೇಳಿದ್ದು ಬಹಳಷ್ಟು ಬಾರಿ ನನ್ನ ನೆನೆಪಿಗೆ ಬಂದಿದೆ. ನಾನು ಆಗ ಎಂಟು ಹತ್ತು ವರ್ಷದವನಿರಬಹುದು.ಅಪ್ಪನ ಕೈ ಬೆರಳಿಗೆ ಮಂಡರಗಪ್ಪೆಯೊಂದು ಕುಟುಕಿ ಮನೆಯಲ್ಲಿ ಆತಂಕದ ವಾತಾವರಣ ಸೃಷ್ಟಿಯಾಗಿತ್ತು. ಔಷಧಿ ತೆಗೆದುಕೊಂಡು ಗುಣಮುಖರಾಗುತ್ತಿದ್ದ ಅಪ್ಪ ಮತ್ತು ಪುಟ್ಟ ನಾನು ಒಟ್ಟಿಗೇ ಎಲ್ಲೋ ನಡೆದುಕೊಂಡು ಹೋಗಿದ್ದೆವು. ದಾರಿಯಲ್ಲಿ (ಬಹುಶಃ ರಸ್ತೆ ದಾಟುವಾಗ) ಅಪ್ಪನ ಕೈ ಹಿಡಿದುಕೊಂಡಿದ್ದ ನಾನು "ಅಪ್ಪಾ, ಕೈ ನೋವಾಗುತ್ತಾ ನಾನು ಹಿಡ್ಕೊಂಡ್ರೆ?" ಅಂತ ಕೇಳಿದ್ದ ನೆನಪು. ಅದಕ್ಕೆ ಅಪ್ಪ "ನಿನ್ನ ಕೈ ತುಂಬಾ ಮೆತ್ತಗಿದೆ ಕಣೋ, ಕೈ ಹಿಡ್ಕೊಂಡೇ ಇರು" ಎಂದಿದ್ದರು. ನಾನು ಒಳಗೊಳಗೇ ತುಂಬಾ ಖುಷಿ ಪಟ್ಟಿದ್ದೆ.

ಮನೆಯಿಂದ ಮುಖ್ಯರಸ್ತೆಗೆ, ಶಾಲೆಗೆ, ಕ್ಷೌರಕ್ಕೆ ಅಪ್ಪನೊಂದಿಗೆ ನಡೆದುಕೊಂಡು ಹೋಗುತ್ತಿದ್ದ ನಿಧಾನ ಗತಿಯ ಅಷ್ಟೇ ಸಮಾಧಾನದಿಂದ ಕೂಡಿರುತ್ತಿದ್ದ ಅನುಭವಗಳು ಒಂದು ಕಡೆಯಾದರೆ, ಅವರ ದ್ವಿಚಕ್ರ ವಾಹನದ ಹಿಂದಿನ ಸೀಟಿನಲ್ಲಿ (ಎರಡೂ ಸೀಟುಗಳ ಮಧ್ಯದ ಪೆಟ್ರೋಲ್ ಟ್ಯಾಂಕ್ ಬಾಯಿಯಿರುವ ಹಳ್ಳದಲ್ಲಿ ಬೀಳದಂತೆ) ಕುಳಿತುಕೊಂಡು ಅಥವಾ ಅವರ ಕೈಗಳ ಮಧ್ಯೆ ಮುಂದೆ ನಿಂತುಕೊಂಡು ವೇಗವಾಗಿ ನುಗ್ಗುತ್ತಿದ್ದ ರೋಮಾಂಚಕಾರಿ ಅನುಭವಗಳು ಇನ್ನೊಂದು ಕಡೆ. ಅಪ್ಪನಿಗೆ ದ್ವಿಚಕ್ರ ವಾಹನಗಳ ಮೇಲಿರುವ ಅಕ್ಕರೆ, ಅವುಗಳಿಗೆ ಸಣ್ಣ ಪುಟ್ಟ ತೊಂದರೆಯಾದಾಗ ರಿಪೇರಿ ಮಾಡುವ ಅವರ ಕಾರ್ಯಕುಶಲತೆ, ಖಾಲಿ ರಸ್ತೆ ಸಿಕ್ಕಾಗ ಎಂಭತ್ತು ಕಿ.ಮೀ.ಪ್ರತಿ ಘಂಟೆಯ ವೇಗವನ್ನೂ ಸಲೀಸಾಗಿ ಮುಟ್ಟಿ ಅಷ್ಟೇ ಸುರಕ್ಷಿತವಾಗಿ ವಾಹನ ನಿಯಂತ್ರಿಸುವ ಅವರ ಸ್ಥಿಮಿತ ಮತ್ತು ಕ್ಷಮತೆ ಎಲ್ಲವನ್ನೂ ನೋಡಿ ಆಶ್ಚರ್ಯಪಡುತ್ತಲೇ ಬೆಳೆದವನು ನಾನು. ಹಳೆಯ ಸುವೇಗ ಇರಬಹುದು, ಲೂನಾ ಇರಬಹುದು, ಅಥವಾ ಅಮ್ಮ, ಲೇಖಾ, ಗೀತಾ ಮತ್ತು ನಾನು ಅಪ್ಪನೊಂದಿಗೆ ಒಟ್ಟಾಗಿ ಕುಳಿತುಕೊಂಡು ಓಡಾಡುತ್ತಿದ್ದ "ನಮ್ಮ ಪ್ರೀತಿಯ ಎಮ್ಮೆ" ವಿಜಯ್ ಸೂಪರ್ ಇರಬಹುದು, ಅಥವಾ ಆ ವಿಜಯ್ ಸೂಪರ್ ನ ಚಾಸಿ ಬೆಂಡಾಗಿ ವಿಧಿಯಿಲ್ಲದೆ ಮಾರಿದ ಮೇಲೆ ಸೆಕೆಂಡ್ ಹ್ಯಾಂಡ್ ಆಗಿ ಕೊಂಡುಕೊಂಡ ಬಜಾಜ್ ಸೂಪರ್ ಇರಬಹುದು...ಅಪ್ಪನ ಓಡಾಟಕ್ಕೆ ಎಂದೂ ಸುಸ್ತಾಗಿಲ್ಲ. ತಾತನ ಬಳಿಯೂ ಒಂದು ಕಾಲದಲ್ಲಿ ಜೇಮ್ಸ್ ಮೋಟರ್ ಬೈಕ್ ಇತ್ತಂತೆ. ಅಪ್ಪನಿಗೂ ಮೋಟರ್ ಗಾಡಿಯೇ ಇಷ್ಟ. ಸ್ಕೂಟರ್ ಕಲಿಯುವವರೆಗೂ ನಾನೂ ಅದರ ಹಿಂದೆ ಬಿದ್ದಿದ್ದೆ, ಆದರೆ ಕ್ರಮೇಣ ನನ್ನ ಒಲವು ಬೈಸಿಕಲ್ಲಿಗೇ ಮೀಸಲಾಗಿ ಬೆಳೆಯಿತು.

ತಾವು ಸ್ಕೂಟರ್ ಮೇಲೆ ಕುಳಿತು ಮನಬಂದಂತೆ ಸುತ್ತುತ್ತಿದ್ದ ಅಪ್ಪ ನನಗೆ ಮಾತ್ರ ನೇರವಾಗಿ ಸ್ಕೂಟರ್ ಓಡಿಸುವುದನ್ನು ಬಹಳ ಕಾಲದವರೆಗೆ ಹೇಳಿಕೊಡಲಿಲ್ಲ. ಎಂಟನೇ ತರಗತಿಗೆ ಬಂದರೂ ಅಪ್ಪ ನನಗೆ ಸ್ಕೂಟರ್ ಕೊಡದ ಕಾರಣ, ದೊಡ್ಡಪ್ಪನನ್ನು ಪೀಡಿಸಿ, ಅವರು ಮಗುವಿನಂತೆ ನೋಡಿಕೊಳ್ಳುತ್ತಿದ್ದ ಅರವತ್ತರ ದಶಕದ ವೆಸ್ಪಾವನ್ನು ಓಡಿಸಿ, ದೊಡ್ಡಪ್ಪನನ್ನು ಒಮ್ಮೆ ಬೀಳಿಸಿ ನಾನು ಸ್ಕೂಟರ್ ಓಡಿಸಲು ಕಲಿಯಬೇಕಾಯ್ತು. ನನ್ನ ಕಲಿಕೆ ಒಂದು ಹಂತಕ್ಕೆ ಬಂದಿದೆ ಎಂದು ಗೊತ್ತಾದ ಮೇಲೆ ಅಪ್ಪ ನನಗೆ ಬೆಂಗಳೂರಿನಿಂದಾಚೆಯ ಖಾಲಿ ಹೆದ್ದಾರಿಗಳಲ್ಲಿ ಅವಕಾಶ ಕೊಟ್ಟರು. ನಾನು ಸ್ವಭಾವತಃ ಅಪ್ಪನಷ್ಟು ಒಳ್ಳೆಯ ಸ್ಕೂಟರ್ ಚಾಲಕನಲ್ಲದಿದ್ದರೂ, (ಕೊಂಚ ಮಟ್ಟಿಗೆ ತಿಕ್ಕಲು ತಲೆಯ ಒರಟನಾದರೂ) ಸಂದರ್ಭಕ್ಕೆ ತಕ್ಕಂತೆ ಸಮಾಧಾನವನ್ನೂ ರೂಢಿಸಿಕೊಂಡಿದ್ದೇನೆ ಎನ್ನಬಹುದು. ಅಪ್ಪ ಈಗಲೂ ವೇಗವಾಗಿ ಹೋಗುವುದುಂಟು. ಆದರೆ, ಅದು ವಯೋಧರ್ಮಕ್ಕೆ ತಕ್ಕಂತೆ ಕಡಿಮೆಯಾಗಿದೆ.ರಸ್ತೆಯ ಮೇಲಿನ ನಾಜೂಕು, ಹಾವ ಭಾವ, ಅವರು ಪಟಪಟನೆ ಗೇರು ಬದಲಿಸುವ ಶೈಲಿ ಬದಲಾಗಿಲ್ಲ. ಅದು ಬದಲಾಗುವುದೂ ಬೇಡ.

---

* ನಂ. ೨೦/ಗ, ೪ನೆಯ ಅಡ್ಡರಸ್ತೆ, ಮಾಗಡಿ ರಸ್ತೆ ಬೆಂಗಳೂರು-೫೬೦೦೨೩

ಬಹಳ ವರ್ಷಗಳ ಹಿಂದೆ ಅಪ್ಪನಿಗೆ ಕುಂಡಿ ಶಸ್ತ್ರಚಿಕಿತ್ಸೆಯಾಗಿ, ಕೆಲವು ದಿನ ಅವರು ಸೊಟ್ಟಗೆ (ಅರೆಕುಂಡಿ) ಕುಳಿತುಕೊಂಡು ಸ್ಕೂಟರ್ ಓಡಿಸುವಂತಾಗಿತ್ತು.ಹೀಗೆ ಸೊಟ್ಟಗೆ ಕುಳಿತುಕೊಂಡು ಮನೆಯಿಂದ ಹೊರಡುತ್ತಿದ್ದ ಅಪ್ಪನನ್ನು ಕಿಟಕಿಯಿಂದ ಇಣುಕಿ ನೋಡುತ್ತಿದ್ದ ಚಿಕ್ಕ ಹುಡುಗನಾಗಿದ್ದ ನನಗೆ ಒಂದು ಕಡೆ ಅರ್ಥವಾಗದ ನಗು. ಇನ್ನೊಂಡು ಕಡೆ "ಅಪ್ಪ ಏನ್ ಸ್ಟೈಲಾಗ್ ಓಡಿಸ್ತಾರಲ್ಲ ಸ್ಕೂಟರ್ ನ, ಸೊಟ್ಟಗ್ ಕೂತ್ಕೊಂಡು...ಒಳ್ಳೇ ರೇಸ್ ಮೋಟರ್ ಬೈಕ್ ಥರಾ" ಅಂತ ಅನುಕರಣೆ ಮಾಡುವ ಮನಸ್ಸು. ಸಾಮಾನ್ಯವಾಗಿ ಯಾರೂ ಹೇಳಲು ಬಯಸದ ಇಂತಹ ವೈಯಕ್ತಿಕ ವಿಚಾರವನ್ನು ಇಲ್ಲಿ ಪ್ರಸ್ತಾಪಿಸಿದುದರ ಉದ್ದೇಶ ಅಪ್ಪನಿಗೆ ತಮ್ಮ ಕೆಲಸದ ಮೇಲೆ ಇದ್ದ ಕಾಳಜಿಯನ್ನು ತೋರಿಸುವುದಷ್ಟೇ ಅಲ್ಲದೆ, ನನ್ನಲ್ಲಿ ಅವರು ಉಂಟುಮಾಡುತ್ತಿದ್ದ ಅತಿ ಮುಖ್ಯವಾದ "ಅಪ್ಪ ಯಾಕೆ ಹೀಗೆ ಶಕ್ತಿಮೀರಿ ಕೆಲಸ ಮಾಡುತ್ತಾರೆ?" ಎಂಬ ಪ್ರಶ್ನೆಯನ್ನು ಮತ್ತೆ ನನಗೆ ನಾನೇ ಕೇಳಿಕೊಳ್ಳುವುದಾಗಿದೆ. ನಾನು ಕಂಡಂತೆ ಅಪ್ಪ ತಮ್ಮ ಸುದೀರ್ಘವಾದ ಪ್ರಾಧ್ಯಾಪಕನ ವೃತ್ತಿಯಲ್ಲಿ ಎಂದೂ ರಜೆಗಾಗಿ ರಜೆ ಹಾಕಿದವರಲ್ಲ. ರಜೆಗಾಗಿ ಏಕೆ, ಯಾವುದೇ ಮುಖ್ಯವಾದ ಮನೆಯ ಕೆಲಸ, ಸಮಾರಂಭವಿದ್ದರೂ ಅವರು ರಜೆ ಹಾಕಿದ್ದು ಅಪರೂಪ. ಕೆಮ್ಮು ನೆಗಡಿಗಾಗಿ ರಜೆ ಹಾಕುತ್ತಿದ್ದ ಅನೇಕ ಉಪನ್ಯಾಸಕರನ್ನು ನೋಡಿರುವ ನಾನು, ಆಚಾರ್ಯ ಪಾಠ ಶಾಲೆಯ ವಿವಿಧ ಕಾಲೇಜುಗಳಲ್ಲಿ ಪಾಠದ ಜೊತೆಗೆ ಅದರ ಶ್ರೇಯೋಭಿವೃದ್ಧಿಯ ಎಲ್ಲಾ ಚಟುವಟಿಕೆಗಳಲ್ಲಿ ತೊಡಗಿರುತ್ತಿದ್ದ ಅಪ್ಪನನ್ನು ಅರ್ಥಮಾಡುಕೊಳ್ಳಲು ಕಷ್ಟ ಪಟ್ಟಿದ್ದೇನೆ. ಎಪ್ಪತ್ತರ ದಶಕದಲ್ಲಿ ಮಾನ್ಯ ಅನಂತಾಚಾರ್ಯರು ಅಪ್ಪನಿಗೆ ಸಂಜೆ ಕಾಲೇಜಿನಲ್ಲಿ ಕೆಲಸ ಕೊಟ್ಟಿದ್ದಕ್ಕೆ ಕೃತಜ್ಞತೆಯೋ, ಅಪ್ಪನು ತಾತನಿಂದ ಕಲಿತಿರಬಹುದಾದ ಮಾತೃ ಸಂಸ್ಥಾ ಪ್ರೀತಿಯೋ, ಅಥವಾ ವಿದ್ಯಾರ್ಥಿಗಳೊಂದಿಗೆ ನಿತ್ಯ ಒಡನಾಡುವ ಆಸೆಯೋ (ಬಹುಶಃ ಎಲ್ಲವೂ) ಉಂಟುಮಾಡಿದ ಅಪ್ಪನ ನಾಲ್ಕು ದಶಕಗಳ ಆಚಾರ್ಯ ಪಾಠ ಶಾಲೆಯ ನಂಟು, ನನ್ನ ಜೀವನದಲ್ಲಿ ಪ್ರಮುಖ ಆದರ್ಶಗಳನ್ನು ರೂಪಿಸಿದೆ.

ವಿದ್ಯಾರ್ಥಿ ಮನಸ್ಸುಗಳನ್ನು ತಮ್ಮ ಟೀಚರ್ಸ್ ಕಾಲೇಜಿನ ದಿನಗಳಿಂದ ಅಧ್ಯಯನ ಮಾಡಿರುವ ಅಪ್ಪನ ಕಾಲೇಜಿನ ತರಗತಿಯಲ್ಲಿ ನಾನು ಎಂದೂ ಕೂತವನಲ್ಲ. ನನ್ನ ಶಾಲಾ ದಿನಗಳಲ್ಲಿ ಬರುತ್ತಿದ್ದ ಅನುಮಾನಗಳನ್ನು ಮನೆಯಲ್ಲಿ ಅಪ್ಪ ಪರಿಹರಿಸುತ್ತಿದ್ದ ರೀತಿ ಅವರ ಕಾಲೇಜಿನ ಪಾಠದಂತಿರಲು ಸಾಧ್ಯವಿಲ್ಲ. ನಾನು ಅಪ್ಪನ ಬಳಿ ಹೋಗುತ್ತಿದ್ದುದೂ ಅಪರೂಪ. ಆದರೆ, ಅವರಿಗೆ ಎಲ್ಲಾ ವಿಷಯಗಳೂ ಗೊತ್ತಿದ್ದು, ಎಲ್ಲವನ್ನೂ ಹೇಳಿಕೊಡಲು ಬರುತ್ತಿತ್ತು ಎಂದು ಮಾತ್ರ ಹೇಳಬಲ್ಲೆ. ಅಪ್ಪನ ಅತಿ ಮುಖ್ಯವಾದ ಕೊಡುಗೆ ನನ್ನನ್ನು (ಗೀತಾ ಮತ್ತು ಲೇಖಾ ಸಹ) ಹತ್ತನೇ ತರಗತಿಯವರೆಗೂ ಕನ್ನಡ ಮಾಧ್ಯಮದಲ್ಲೇ ಓದಿಸಿದ್ದು. ಅದರಲ್ಲೂ ಆರಂಭದ ಶಿಕ್ಷಣವೆಲ್ಲವೂ ಕನ್ನಡದ ಸರ್ಕಾರಿ ಶಾಲೆಯಲ್ಲೇ ಆಗಿದ್ದು. ಅದರಿಂದ ನನ್ನ ಜೀವನ ದೃಷ್ಟಿ ಕೋನವೇ ಬದಲಾಯ್ತು.ಕನ್ನಡ ಮಾಧ್ಯಮಕ್ಕೆ ಬರುತ್ತಿದ್ದ ವಿದ್ಯಾರ್ಥಿಗಳಲ್ಲಿ ಬಹುಪಾಲು ಸಮಾಜದ ಕೆಳ–ಆರ್ಥಿಕ ಸ್ತರದವರಾಗಿರುತ್ತಿದ್ದರು.ಪ್ರೌಢಶಾಲೆಯ ಮೊದಲ ದಿನದಂದು ನಾನು ಹೊಸ ಸಮವಸ್ತ್ರ ಧರಿಸಿ ಶಾಲೆಗೆ ಹೋಗಿದ್ದೆ.ತರಗತಿಯಲ್ಲಿ ಅಧ್ಯಾಪಕರು "ಯಾರ್ಯಾರ ಹತ್ತಿರ ಸಮವಸ್ತ್ರ ಇದೆ ಕೈ ಎತ್ತಿ?" ಎಂದು ಕೇಳಿದಾಗ ನನ್ನ ವಿನಃ ಬೇರಾರೂ ಕೈ ಎತ್ತಿರಲಿಲ್ಲ.ಅಂತಹ ಅನೇಕ ಸಂದರ್ಭಗಳಿಂದ ನಾನು ಜೀವನದ ಅನೇಕ ಪಾಠಗಳನ್ನು ಕಲಿತೆ. ನಾವೆಂದೂ ಸಿರಿವಂತರಾಗಿಲ್ಲದಿದ್ದರೂ ನನ್ನ ಸಹಪಾಠಿಗಳಿಗಿಂತ 'ಪರವಾಗಿಲ್ಲ' ಎನ್ನುವಷ್ಟು ಸ್ಥಿತಿವಂತರು ನಾವಾಗಿದ್ದುದು ನಿಜವೇ ಆದರೂ, ನಾನು ಶಾಲೆಗೆ ಮೊದಲ ದಿನದಿಂದಲೇ ಸಮವಸ್ತ್ರ ಧರಿಸಿಕೊಂಡು ಹೋಗುವುದು ಸಾಧ್ಯವಾಗುತ್ತಿದುದು ಅಪ್ಪ ಮತ್ತು ಅಮ್ಮನ ಮುಂದಾಲೋಚನೆ ಮತ್ತು ಮುತುವರ್ಜಿಯಿಂದ ಮಾತ್ರ. ಪುಸ್ತಕಗಳನ್ನು ಖರೀದಿಸಿ, ಅಪ್ಪ ಅದಕ್ಕೆ ಅಚ್ಚುಕಟ್ಟಾಗಿ ರೊಟ್ಟು ಹಾಕಿ ಕೊಡುತ್ತಿದ್ದ ವಿಧಾನ ಅವರನ್ನು ನನ್ನ ಹತ್ತಿರಕ್ಕೆ ತರುತ್ತಿದ್ದ ಅಂಶಗಳಲ್ಲೊಂದು. ಕಾಲೇಜಿನ ಆರಂಭದ ದಿನಗಳಲ್ಲಿ ವಿಜ್ಞಾನ ಮತ್ತು ಗಣಿತದ ಆಂಗ್ಲ ಪಾರಿಭಾಷಿಕ ಶಬ್ದಗಳ ಪರಿಚಯವಿಲ್ಲದೆ ತೊಂದರೆಯಾದರೂ, ಕಡಿಮೆ ಸಮಯದಲ್ಲೇ ಪರಿಸ್ಥಿತಿ ಸುಧಾರಿಸಿತು. ಆ ಸುಧಾರಣೆಗೆ ನನ್ನ ವಿಷಯ ಗ್ರಹಿಕೆಯ ತಳಹದಿಯು ಮಾತೃ ಭಾಷೆಯಲ್ಲಿದ್ದುದರ ಜೊತೆಗೆ ನನಗೆ ಸಿಕ್ಕ ಉತ್ತಮ ಶಿಕ್ಷಕ ಶಿಕ್ಷಕಿಯರ ಪಾತ್ರವೂ ಕಾರಣ. ಆ ಸಮಯದಲ್ಲೇ ನಾನು ಅಪ್ಪನ ಗಣಿತ ಪಾಠದ ವಿಶೇಷವನ್ನು ನೋಡಿದ್ದು.ಅಪ್ಪ ಮೂಲತಃ ವಿಜ್ಞಾನದ ವಿದ್ಯಾರ್ಥಿ. ನಾವೀರ್ವರೂ ರೇಣುಕಾಚಾರ್ಯ ಕಾಲೇಜಿನ ವಿದ್ಯಾರ್ಥಿಗಳು. ಅಪ್ಪನದು ೧೯೬೫–೬೭ರ ಗುಂಪು, ನನ್ನದು ೨೦೦೨–೦೩ ರ ಗುಂಪು. ಷಟ್ಪದಿಗಳಿಗೆ ಪ್ರಸ್ತಾರ ಹಾಕಿ ಗಣ ವಿಭಾಗ ಮಾಡುವುದನ್ನು ತೋರಿಸಿಕೊಟ್ಟಿದ್ದ ಅಪ್ಪ, ನನಗೆ ಕ್ಯಾಲ್ಕುಲಸ್ನಲ್ಲಿ ಡಿರೈವೇಟಿವ್ ಅನ್ನು ಮೊದಲ ನಿಯಮಗಳ ಆಧಾರದಿಂದ ಕಂಡು ಹಿಡಿಯುವುದನ್ನು ಹೇಳಿಕೊಟ್ಟ ವಿಧಾನ ಬೇರೆಲ್ಲಿಯೂ ಸಿಗಲಿಲ್ಲ. ಅಪ್ಪನ ಶಾಸನದ

ವಿದ್ಯಾರ್ಥಿಗಳೊಂದಿಗೆ ಶ್ರವಣಬೆಳಗೊಳ, ಸೋಮನಾಥಪುರ, ಟಿ.ನರಸೀಪುರ, ಬೇಲೂರು, ಹಳೇಬೀಡು, ಬಾದಾಮಿ, ಐಹೊಳೆ, ಪಟ್ಟದ ಕಲ್ಲು, ಬೇಗೂರುಗಳಿಗೆ ಹೋಗಿ ಬಂದಿದ್ದರೂ, ಅವರ ಶಾಸನದ ತರಗತಿಗಳನ್ನು, ಪ್ರಾಚೀನ ಕಾವ್ಯ ಮಾರ್ಗದ ಪಾಠಗಳನ್ನು ನಾನು ನೇರವಾಗಿ ಕೇಳಲು ಸಾಧ್ಯವಾಗದೇ ಇರುವುದು ದುರದೃಷ್ಟಕರ. ಆದರೆ ಅವುಗಳೆಲ್ಲದರ ಪರೋಕ್ಷ ಪರಿಣಾಮ ನನ್ನ ವ್ಯಕ್ತಿತ್ವದ ಮೇಲಾಗಿದೆ. ಬಾಲ್ಯದ ದಿನಗಳಿಂದಲೂ ನನ್ನಲ್ಲಿದ್ದ ಗಿಡಮರಗಳ ಪ್ರಶ್ನೆಗಳನ್ನು, ಕಾಲೇಜಿನ ನಿರ್ಧಾರಗಳ ಗಡಿಬಿಡಿಗಳ ಮಧ್ಯೆ ಕಳೆದುಕೊಳ್ಳದೆ ಭೂವಿಜ್ಞಾನ ಮತ್ತು ಜೀವವಿಕಾಸ ವಾದದಲ್ಲಿನನ್ನ ಸಂಶೋಧನೆಯ ಆಸಕ್ತಿಯನ್ನಾಗಿ ಕಂಡುಕೊಳ್ಳುವವರೆಗೂ ಅಪ್ಪ ಮತ್ತು ಅಮ್ಮ ತಾಳ್ಮೆಯಿಂದ ಕಾದಿದ್ದು, ಈವತ್ತೂ ನಾನು ನಿಶ್ಚಿಂತೆಯಿಂದ ನನ್ನ ಯೋಚನಾ ಲಹರಿಗೆ ಒಗ್ಗುವ ವಿಷಯಗಳ ಹಿಂದೆ ಹೋಗಲು ಅನುವು ಮಾಡಿಕೊಟ್ಟಿದ್ದಾರೆ.

ಅವರ ಶಾಲಾ ದಿನಗಳಿಂದಲೂ ಅಪ್ಪ ಸಾಮಾನ್ಯಕ್ಕಿಂತ ಉತ್ತಮನಾದ ಕ್ರೀಡಾಪಟು.ಕಬಡ್ಡಿಯಿಂದ ಹಿಡಿದು ಕ್ರಿಕೆಟ್ಟಿನವರೆಗೆ ಎಲ್ಲವನ್ನೂ ಆಡಿರುವ ಅಪ್ಪನಿಗೆ ಕ್ರಿಕೆಟ್ ಬಹಳ ಪ್ರಿಯವಾದ ಆಟ.ಕರ್ನಾಟಕ–ಮುಂಬೈ ರಣಜಿ ಪಂದ್ಯವನ್ನೂ ನೋಡುವ ಹುಚ್ಚು ಅಪ್ಪನಿಂದ ನನಗೂ ಬಂದಿದೆ. ಟಿ.ವಿ.ಯಲ್ಲಿ ಅಂತಾರಾಷ್ಟ್ರೀಯ ಕ್ರಿಕೆಟ್ ಟೆಸ್ಟ್ ಪಂದ್ಯವಿದ್ದರಂತೂ ಹೇಳಲೇಬೇಕಾಗಿಲ್ಲ. ಟಿ.ವಿ.ಇಲ್ಲದಿದ್ದರೆ ರೇಡಿಯೋ. ಮನೆಯಲ್ಲಿ ಗೀತಾ, ಲೇಖಾ ಯಾರು ಏನು ಹೇಳಿದರೂ ಪ್ರಯೋಜನವಿಲ್ಲ. ಕ್ರಿಕೆಟ್ ಕಟ್ಟಿಟ್ಟ ಬುತ್ತಿ.ಟಿ.ವಿಯಲ್ಲಿ ವಾರ್ತೆಯ ವಿನಃ ಬೇರೇನನ್ನೂ ನೋಡದ ನನ್ನಂಥವರಿಗೆ ಕ್ರಿಕೆಟ್ ರಿಯಾಯಿತಿ ಕೊಡಬೇಕೆಂದು ಮನೆಯಲ್ಲಿ ಯಾರೂ ಒಪ್ಪುವುದಿಲ್ಲ. ತಮ್ಮ ಮುದ್ದಿನ ಮಗಳ (ಗೀತಾ) ಮೆಚ್ಚಿಸಲು ಅಪ್ಪ ಕೂಡ ಕೆಲವೊಮ್ಮೆ ನನ್ನ ಕ್ರಿಕೆಟ್ಟಿಗೆ ಸೊನ್ನೆ ಸುತ್ತಿದ್ದುಂಟು. ಆದರೆ, ಅವರು ಮಾತ್ರ ಬೇಕೆಂದರೆ ಮಧ್ಯರಾತ್ರಿ ಎದ್ದು ನ್ಯೂಜಿಲೆಂಡಿನಲ್ಲಿ ನಡೆಯುವ ಪಂದ್ಯವನ್ನೂ ವೀಕ್ಷಿಸಬಹುದು. ಇಂತಹ ಕೆಲವು ವಿಚಾರಗಳು ಬಂದಾಗ ಮಾತ್ರ ಅಪ್ಪನಿಗೆ ಒಂದು ನಿಯಮ.ಮಕ್ಕಳಿಗೆ ಬೇರೆ ನಿಯಮ. ಅಪ್ಪ, ಗೀತಾ ಮತ್ತು ನಾನು ನಮ್ಮ ಮನೆಯ ಪುಟ್ಟ ಅಂಗಳದಲ್ಲಿ ಆಡಿರುವ ಕ್ರಿಕೆಟ್ ಪಂದ್ಯಗಳಿಗೆ ಲೆಕ್ಕವಿಲ್ಲ. ಗೀತಾ ನನಗಿಂತ ಒಳ್ಳೆಯ ಬ್ಯಾಟುಗಾರ್ತಿ. ಅವಳ ಪ್ರಕಾರ ನಾನು ಮಾನಸಿಕವಾಗಿ ಹೆಚ್ಚು ದುರ್ಬಲನಾದ್ದರಿಂದ ಭಾರತ ಕ್ರಿಕೆಟ್ ಆಡುವಾಗ ಚಡಪಡಿಸುತ್ತಿರುತ್ತೇನಂತೆ. ಅದನ್ನವಳು ಮೂದಲಿಸಿ ರೇಗಿಸುತ್ತಾಳೆ. ನಾನು ಅವಕಾಶ ಸಿಕ್ಕಾಗ ಅವಳನ್ನು ರೇಗಿಸಿದರೆ, ಅಪ್ಪನ ಕೋಪಕ್ಕೆ ಗುರಿಯಾಗಬೇಕಾಗುತ್ತದೆ.. ಅಪ್ಪ ನನ್ನನ್ನು ಖಂಡಿಸಿದರೂ ನಾನು ನಗುತ್ತಲೇ ಸುಮ್ಮನಾಗುವುದರಿಂದ ಗೀತಾಳ ಕೋಪ ಇಮ್ಮಡಿಯಾಗುತ್ತದೆ. ಅಪ್ಪ ಮಾತ್ರ ಯಾವಾಗಲೂ ತಮ್ಮ ಪ್ರೀತಿಯ ಪುಮೂರಿನ (ಪುthree) ಪರವಾಗೇ ವಾದಿಸುವುದನ್ನು ನಾನು ಈ ಮೂಲಕ ಬಹಿರಂಗವಾಗಿ ವಿರೋಧಿಸುತ್ತೇನೆ (ಹ್ಹಿ..ಹ್ಹಿ..ಹ್ಹಿ...). ಅಪ್ಪನ ದ್ವಂದ್ವ ನೀತಿ ಕ್ರಿಕೆಟ್ಟಿಗಷ್ಟೇ ಅಲ್ಲ, ಥಿಯೇಟರ್‌ಗಳಲ್ಲಿ ಸಿನೆಮಾ ನೋಡುವುದಕ್ಕೂ ಅನ್ವಯಿಸುತ್ತದೆ.ಅವರ ಬಿಡುವಿಲ್ಲದ ಕಾಲೇಜು ಜೀವನದ ಮಧ್ಯೆ ಊಹಿಸಲಾಗದಷ್ಟು ಮೋಜನ್ನೂ ಮಾಡಿದ್ದಾರೆ. ದೇವಾನಂದ, ದಿಲೀಪ್ ಕುಮಾರ, ರಾಜೇಂದ್ರ ಕುಮಾರರ ಹಳೆಯ ಹಿಂದಿ ಚಿತ್ರಗಳನ್ನು, ಅವುಗಳ ಹಾಡುಗಳನ್ನು ಕೇಳಲಿಕ್ಕಾಗಿಯೇ ಪದೇ ಪದೇ ನೋಡಿರುವವರು ಅವರು. ಈಗಲೂ ಮನೆಯಲ್ಲಿ ಹಳೆಯ ಕನ್ನಡ ಮತ್ತು ಹಿಂದಿ ಚಿತ್ರಗೀತೆಗಳ ಧ್ವನಿಮುದ್ರಿಕೆ ಭಂಡಾರವೇ ಇದೆ. ಅಪ್ಪನಿಗೆ ವಿದ್ಯಾರ್ಥಿಯಾದ ನಾನು ಸಿನೆಮಾ ಇತ್ಯಾದಿಗಾಗಿ ತಿರುಗುವುದು ರುಚಿಸುವುದಿಲ್ಲ. ತಾವು ಮಾತ್ರ (ನನ್ನ ವಯಸ್ಸಿನವರಾಗಿದ್ದಾಗ) ತಿರುಗದ ಜಾಗವಿಲ್ಲ, ನೋಡದ ಇಂಗ್ಲಿಷ್ ಸಿನೆಮಾ ಇಲ್ಲ. ನನಗೂ ಸಿನೆಮಾ ಆಕರ್ಷಣೆ ಅಷ್ಟಾಗಿ ಎಂದೂ ಇಲ್ಲ ಎಂದಿಟ್ಟುಕೊಳ್ಳೋಣ. ಆದರೆ, ಅಪ್ಪ ನಮ್ಮ ಮನೆಯ ರೆಡ್–ಆಕ್ಸೈಡ್ ಗೋಡೆಗಳ ಮೇಲೆ, ಕಡಪಾ ಕಲ್ಲಿನ ಕಪ್ಪು ನೆಲದ ಮೇಲೆ ಸೀಮೆ ಸುಣ್ಣದಿಂದ ಚಿತ್ರಗಳನ್ನು ಬರೆದು ಹೊಡೆದಾಟದ ಇಂಗ್ಲಿಷ್ ಚಲನಚಿತ್ರ ಕಥೆಗಳನ್ನು ಹೇಳುತ್ತಿದ್ದುದು ಮರೆಯಲಾಗದ ಕ್ಷಣಗಳನ್ನು ಕೊಟ್ಟಿದೆ.

ಮಧ್ಯಮ ವರ್ಗದ ಬದುಕಿನ ಎಲ್ಲಾ ತವಕ ತಲ್ಲಣಗಳ ಮಧ್ಯ ಅಪ್ಪನ ಮತ್ತು ನಮ್ಮೆಲ್ಲರ ನೆಮ್ಮದಿಗೆ ಮಾಗಡಿ ರಸ್ತೆಯಲ್ಲಿ ನಮಗೆ ದೊರಕಿರುವ ಶಾಶ್ವತವಾದ ನೆಲೆಯೂ ಕಾರಣ.ತಾತನಂತೆ ಅಪ್ಪನಿಗೆ ಹಲವಾರು ಬಾರಿ ತಮ್ಮ ಜೀವನದ ನೆಲೆಯನ್ನು ಬದಲಾಯಿಸುವ ಅವಶ್ಯಕತೆ ಬಂದಿಲ್ಲ. ಅಪ್ಪ ಹುಟ್ಟಿದ ಆರು ತಿಂಗಳಿಗೇ ತಾತ ಮತ್ತು ಅಜ್ಜಿ ನಾವು ಈಗಲೂ ವಾಸವಿರುವ ಮಾಗಡಿ ರಸ್ತೆಯ ಮನೆಗೆ ಬಂದರು. ದೊಡ್ಡಪ್ಪ ಮತ್ತು ಅಪ್ಪ ಬಹಳ ವರ್ಷಗಳೇ ಒಟ್ಟಾಗಿ ಅದೇ ಮನೆಯಲ್ಲಿದ್ದು, ದೊಡ್ಡಪ್ಪ ಪಕ್ಕದ ಇನ್ನೊಂದು ನಿವೇಶನದಲ್ಲಿ ಹೊಸಮನೆ ಕಟ್ಟಿಕೊಂಡು ಹೋದ ಮೇಲೂ ಎರಡೂ ಕುಟುಂಬಗಳು ಒಂದೇ ಮನೆಯಂತೆ ಓಡಾಡಿಕೊಂಡು ಉಳಿದದ್ದೂ ನನ್ನ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಬೇಕಾದಷ್ಟು ಅವಕಾಶಗಳು

ತಾನಾಗಿ ಒದಗಿ ಬಂದರೂ, ಅಜ್ಜಿ ಮತ್ತು ಅಮ್ಮ (ಬೇರೆ ಬೇರೆ ಕಾರಣಗಳಿಗೆ) ಇಷ್ಟಪಟ್ಟರೂ ಅಪ್ಪ ಮಾಗಡಿ ರಸ್ತೆಯನ್ನು ಬಿಡಲಿಲ್ಲ. ಅಜ್ಜಿಯ ಮಾತಿನಲ್ಲಿ ಅದೊಂದು "ಋಣಾನುಬಂಧ ವಿಶೇಷ". ಅಪ್ಪ ಮತ್ತು ನಾನು ಇಬ್ಬರೂ ಅಲ್ಲೇ ಬೆಳೆದಿರುವ ಕಾರಣದಿಂದ ನಮ್ಮ ಅನುಭವಗಳ ಭೌಗೋಳಿಕ ಸನ್ನಿವೇಶಗಳು ಹೆಚ್ಚು ಕಡಿಮೆ ಒಂದೇ ರೀತಿಯವು. ಅಪ್ಪನ ಮತ್ತು ನನ್ನ ಜೀವನ ದೃಷ್ಟಿಕೋನಗಳು ಮಾಗಡಿ ರಸ್ತೆಯ ಚಿಕ್ಕ ಚಿಕ್ಕ ರಸ್ತೆಗಳಲ್ಲಿ, ಗಲ್ಲಿಗಳಲ್ಲಿ, ಕೆಳ ಮಧ್ಯಮ ವರ್ಗದ-ಕಾರ್ಮಿಕ ವರ್ಗದ ನೆರೆಹೊರೆಯವರ ಮಧ್ಯೆ, ಕನ್ನಡ ಮಾತೃ ಭಾಷೆಯಲ್ಲದ ಸಮುದಾಯಗಳ ನಡುವೆ ರೂಪುಗೊಂಡಿದೆ. ನಮ್ಮ ಸುತ್ತಲಿನ ಜನರ ಆಶೋತ್ತರಗಳು, ಜೀವನ ಗುಣಮಟ್ಟ ಭಾರತದ ಅಭಿವೃದ್ಧಿಯೊಂದಿಗೆ ನಿಧಾನವಾಗಿ ಸುಧಾರಿಸುತ್ತಾ ಬಂದಿದೆ. ನಮ್ಮ ಕುಟುಂಬದ ಪದ್ಧತಿಗಳು ಕಾಲಕ್ಕೆ ಹೊಂದಿಕೊಂಡು ಬದಲಾಗಿದ್ದರೂ ಅದು ಹಿಂದೆಯೂ ಆಡಂಬರವನ್ನು ನೋಡಿಲ್ಲ ಮತ್ತು ಇಂದೂ ಸರಳವಾಗೇ ಉಳಿದಿದೆ. ಸಮುದಾಯ ಪ್ರಜ್ಞೆ ತಾತನಲ್ಲಿ ಬಹಳವಾಗಿತ್ತು. ಪರಿಸ್ಥಿತಿಯೋ, ತಾವೇ ಹಾಕಿಕೊಂಡ ನಿಯಮಗಳೋ, ಮಾಗಡಿ ರಸ್ತೆಯ ಕೈದಾಳ ರಾಮಸ್ವಾಮಿಯವರ ಕುಟುಂಬ ಎಂದೂ ತನ್ನ ತುತ್ತೂರಿಯನ್ನು ಊದುವ ದುಸ್ಸಾಹಸ ಮಾಡಿಲ್ಲ. ಅದು ನನಗೆ ತುಂಬಾ ಹೆಮ್ಮೆಯ ವಿಷಯ. ತಾತ ಕಟ್ಟಿಸಿದ ಮನೆಯನ್ನು ಕಟ್ಟಿ ಐವತ್ತು ವರ್ಷಗಳಾದ ಮೇಲೆ ಅಪ್ಪ ಒಮ್ಮೆ ದುರಸ್ತಿ ಮಾಡಿಸಿ, ಇತ್ತೀಚೆಗೆ ಸ್ವಲ್ಪ ವಿಸ್ತರಿಸಿದ್ದಾರೆ. ಒಬ್ಬ ಪ್ರಾಮಾಣಿಕ ಕಾಲೇಜು ಪ್ರಾಧ್ಯಾಪಕನ ಸಾಮಾನ್ಯ ವೇತನ ಶ್ರೇಣಿಯಲ್ಲೇ (ಯುಜಿಸಿಯ ಹೊಸ ಮಾಪನ ಬಂದ ಮೇಲೂ) ನಿವೃತ್ತರಾದ ಅಪ್ಪ, ಈಗ ನಿವೃತ್ತರಾಗಬೇಕಾಗಿರುವ, ಆದರೂ 'ಸುಮ್ಮನೆ' ಸಿಗುತ್ತಿರುವ ದ(ದೊ)ಡ್ಡ ಸಂಬಳವನ್ನು ಬಿಡಲಾಗದೆ ಚಡಪಡಿಸುತ್ತಿರುವ ಅನೇಕರಿಗೆ ಮಾದರಿಯಂತಿದ್ದಾರೆ. ಕಳೆದ ಹತ್ತು ವರ್ಷಗಳಲ್ಲಿ ಸಾಮಾನ್ಯ ಬದುಕು ಎಂಬುದು ಅರ್ಥವನ್ನೇ ಕಳೆದುಕೊಂಡಿರುವುದು ದುಃಖದ ಸಂಗತಿ. ನಾನು ಅಪ್ಪನಷ್ಟು ಧಾರಾಳ ಮನಸ್ಸುಳ್ಳವನಾಗಿರದಿದ್ದರೂ ಕಡೆಯ ಪಕ್ಷ ಯಾವುದು ಆವಶ್ಯಕವೆಂಬುದನ್ನು ವಿವೇಚಿಸುವ ಪ್ರಜ್ಞೆಯನ್ನು ಮೈಗೂಡಿಸಿಕೊಂಡಿದ್ದೇನೆ ಎಂದು ಭಾವಿಸುತ್ತೇನೆ.ಮೊದಲೇ ಹೇಳಿದಂತೆ ಭಾರತದಂತಹ ದೇಶದಲ್ಲಿ ಕೋಟ್ಯಂತರ ಜನರ ಪಾಲಿಗೆ ಆರ್ಥಿಕ ಭದ್ರತೆ ಎಷ್ಟು ಮುಖ್ಯ ಎಂಬುದನ್ನು ನಾನು ಚಿಕ್ಕಂದಿನಿಂದಲೇ ನೋಡಿದ್ದೇನೆ. ಆದರೂ, ನನ್ನ ತಲೆಮಾರಿನ ಉಳ್ಳ ಬಹುಪಾಲು ಜನರ ಎಣೆಯಿಲ್ಲದ ದುಡ್ಡಿನ ದಾಹವನ್ನು ನಾನಿನ್ನೂ ಅರ್ಥ ಮಾಡಿಕೊಂಡಿಲ್ಲ. ಅಂತಹ ಆವಶ್ಯಕತೆಯಿದೆಯೆಂದು ಮನದಟ್ಟಾದರೆ, ಅದಕ್ಕಾಗಿ ಆರ್ಥಿಕ ಬೆಂಬಲವನ್ನು ಸಾಧಿಸಬಲ್ಲೆನೆಂಬ ಆತ್ಮ ವಿಶ್ವಾಸ ನನಗಿದೆ. ಆದಕ್ಕೆ ಬೇಕಾಗುವ ಮಾನಸಿಕ ಚೈತನ್ಯವನ್ನು ಒಗ್ಗೂಡಿಸಿಕೊಳ್ಳುವ ಕಲೆಯನ್ನು ಅಪ್ಪನನ್ನು ನೋಡಿ ಕಲಿತಿದ್ದೇನೆ.ಮಿಕ್ಕಿದ್ದು ಗೌಣ.

ಅಪ್ಪನ ಸ್ವಭಾವಗಳನ್ನು ರೂಪಿಸುವಲ್ಲಿ ತಾತ ಮತ್ತು ಅಜ್ಜಿಯೊಂದಿಗೆ ಅವರ ಅಣ್ಣ (ನಮ್ಮ ದೊಡ್ಡಪ್ಪ, ಈಗ ಬದುಕಿಲ್ಲ) ಮತ್ತು ನಾಲ್ವರು ಅಕ್ಕ-ತಂಗಿಯರ ಪಾತ್ರವೂ ದೊಡ್ಡದು. ದೊಡ್ಡಪ್ಪನ ನಿರ್ದಾಕ್ಷಿಣ್ಯ ಕರ್ತವ್ಯ ನಿಷ್ಠೆಯನ್ನು ಅಪಾರವಾಗಿ ಗೌರವಿಸುವುದರ ಜೊತೆಗೆ ಅವರಿಗೆ ನನ್ನ ಮತ್ತು ಗೀತಾಳ ಮೇಲಿದ್ದ ಅಕ್ಕರೆಯನ್ನೂ ಅಪ್ಪ ನೋಡಿ ಸಂತೋಷಿಸಿದ್ದಾರೆ. ಅವರಿಬ್ಬರ ನಡುವಿನ ವ್ಯತ್ಯಾಸಗಳನ್ನು ನನಗಿಂತ ಚೆನ್ನಾಗಿ ನಮ್ಮ ಮನೆಯ ಸಾಕು ನಾಯಿ ಶಮ್ಮಿಯ ನಡವಳಿಕೆ ಹೇಳಬಲ್ಲುದು (ಅದೂ ಈಗ ಬದುಕಿಲ್ಲ). ದೊಡ್ಡಪ್ಪನ ಸ್ಕೂಟರ್ ದೂರದ ತಿರುವಿನಲ್ಲಿ ಬರುವಾಗಲೇ ಹುಚ್ಚೆದ್ದು ಕುಣಿಯುತ್ತಿದ್ದ ಅದಕ್ಕೆ ಅವರ ಬಳಿ ಹೋಗಲೂ ಭಯ.ದೊಡ್ಡಪ್ಪನೊಂದಿಗೆ ನಾನು ಹೋದರೆ ನನ್ನ ಬಳಿಯೇ ಓಡಿ ಬರುತ್ತಿತ್ತು.ಎಷ್ಟೇ ಆಗಲಿ ನನ್ನ ಹಠಕ್ಕೆ ಮಣಿದು ದೊಡ್ಡಪ್ಪ ತಂದು ಕೊಟ್ಟಿದ್ದ ನಾಯಿ ಅದು, ಆದರೆ, ಕೇಳುತ್ತಿದ್ದ ಮಾತು ಮಾತ್ರ ದೊಡ್ಡಪ್ಪನದು. ಅದಕ್ಕೆ ಅಪವಾದವೆಂಬಂತೆ ಅಪರೂಪಕ್ಕೊಮ್ಮೆ ಮಾತನಾಡಿಸುತ್ತಿದ್ದ ಅಪ್ಪನ ಕಂಡರೆ ಅದು ತನ್ನ ಬಾಲವನ್ನು ಕಳಚಿ ಬೀಳುವಷ್ಟು ಜೋರಾಗಿ ಅಲ್ಲಾಡಿಸುತ್ತಾ ಅವರ ಮೈಮೇಲೆ ಒರಗಿ ನಿಲ್ಲುತ್ತಿತ್ತು.ಅಪ್ಪ ಅದಕ್ಕೆ ಅವಕಾಶ ಕೊಡುತ್ತಿದ್ದರು. ಅಪ್ಪನ ಈ ಸಲುಗೆಯ ಸ್ವಭಾವವು ಅವರನ್ನು ಎಳೆಯ ಮಕ್ಕಳಿಗೂ ಬಹಳ ಆಪ್ತವಾಗಿ ಮಾಡುತ್ತಾ ಬಂದಿದೆ.

ಅಪ್ಪನ ಹಿರಿಯ ಅಕ್ಕ ಸುಬ್ಬಮ್ಮನವರು ನಮ್ಮ ಅಜ್ಜಿಯಷ್ಟೇ ಮುಖ್ಯವಾಗಿ ಕುಟುಂಬದ ಎಲ್ಲಾ ಸದಸ್ಯರನ್ನು ಒಂದಿಲ್ಲೊಂದು ಸಂದರ್ಭದಲ್ಲಿ ಸಲಹಿ ಸಹಾಯ ಮಾಡಿದವರು. ನನ್ನ ವ್ಯಕ್ತಿತ್ವ ನಿರ್ಮಾಣದಲ್ಲೂ ಸುಬ್ಬಮ್ಮನವರ ಮುಖ್ಯ ಪ್ರಭಾವವಿದೆ. ಅಪ್ಪನಿಗೆ ಅವರ ಅಕ್ಕಂದಿರಾದ ಸುಬ್ಬಮ್ಮ, ಭಾಗಮ್ಮ, ಮತ್ತು ಮಣೀ (ನಿರ್ಮಲಾ) ಅವರುಗಳಲ್ಲಿರುವ ಅಭಿಮಾನ ಮತ್ತು ಕೃತಜ್ಞತೆಗಳು ಅವರ ನಿತ್ಯದ ನಡವಳಿಕೆಗಳು ಎದ್ದು ಕಾಣುತ್ತದೆ. ಅಪ್ಪ ಮತ್ತು ಅವರ ತಂಗಿ ವಿಜಯಾ ಈಗಲೂ ನಾನು

ಮತ್ತು ಗೀತಾ ಜಗಳವಾಡುವಂತೆ ಯಾವುದಾದರೊಂದು ಕಾರಣಕ್ಕೆ ಜಗಳವಾಡುತ್ತಲೇ ಇರುತ್ತಾರೆ. ಅಪ್ಪನನ್ನು ಅರ್ಥಮಾಡಿಕೊಳ್ಳಬೇಕಾದರೆ ಅವರ ನಾಲ್ಕೂ ಜನ ಸೋದರಿಯರನ್ನು ಮರೆಯಲು ಸಾಧ್ಯವೇ ಇಲ್ಲ. ದೊಡ್ಡಪ್ಪ ತೀರಿಕೊಂಡ ಮೇಲೆ ಅವರೆಲ್ಲರಿಗೂ ಅಪ್ಪನ ಮೇಲಿದ್ದ ಮಮತೆ ಇನ್ನೂ ಬಹಿರಂಗವಾಗಿ ವ್ಯಕ್ತವಾಗಿದ್ದನ್ನು ನಾನು ಹತ್ತಿರದಿಂದ ನೋಡಿದ್ದೇನೆ.

ಗ್ರಂಥ ಸಂಪಾದನೆ, ಹಳಗನ್ನಡ ಕಾವ್ಯ, ವ್ಯಾಕರಣ, ಛಂದಸ್ಸು, ಹೊಸಗನ್ನಡ ಸಾಹಿತ್ಯ, ಶಾಸನ ಸಂಶೋಧನೆ, ಲಿಪಿ ಶಾಸ್ತ್ರ ಇನ್ನೂ ಮುಂತಾದ ವಿಷಯಗಳನ್ನು ಪಿಎಚ್.ಡಿ. ಮಾಡಿದವರಿಗಿಂತ ಮಿಗಿಲಾಗಿ ಅಭ್ಯಸಿಸಿರುವ ಅಪ್ಪನಿಗೆ, ಅವರು ಕನ್ನಡ ಅಧ್ಯಾಪಕನಾಗಿ ಇಪ್ಪತ್ತೈದು ವರ್ಷಗಳಾದ ಮೇಲೆ ಪಿಎಚ್.ಡಿ ಪದವಿ ಸಿಕ್ಕಾಗ ನನಗೆ ಅದರ ಬೆಲೆ ಗೊತ್ತಿರಲಿಲ್ಲ. ಅಪ್ಪ ಅದಕ್ಕಾಗಿ ಆಂಧ್ರಪ್ರದೇಶದ ಉದ್ದಗಲಕ್ಕೂ ಓಡಾಡಿ ಶ್ರಮ ಪಟ್ಟಿದ್ದರೆಂದು ಮಾತ್ರ ಗೊತ್ತಿತ್ತು. ಅವರು ಶಾಸನಗಳ ಬಗ್ಗೆ ಮಾಡಿದ್ದ ಟಿಪ್ಪಣಿಗಳ ಬಣ್ಣ-ಬಣ್ಣದ ಹಾಳೆಗಳನ್ನು ಅರ್ಥವಾಗದಿದ್ದರೂ ಓದುತ್ತಿದ್ದ ನಾನು (ಗೀತಾಳೊಂದಿಗೆ) ಅವರ ಪ್ರಬಂಧ ಅಚ್ಚಾಗುವಾಗ ಅಕಾರಾದಿ ಮಾಡಿಕೊಡಲು ಸಹಾಯ ಮಾಡುವ ನೆಪದಲ್ಲಿ ಸುಸ್ತಾಗಿದ್ದೆ. ಇಷ್ಟೆಲ್ಲಾ ವಿಷಯಗಳು ಗೊತ್ತಿರುವ ಅಪ್ಪ ಸುಲಭವಾಗಿ ಕರ್ನಾಟಕದಲ್ಲಿ ಇನ್ನೂ ಹೆಚ್ಚಿನ ಪ್ರಸಿದ್ಧಿ ಪಡೆಯಬಹುದಿತ್ತು. ಟಿ.ವಿ.ಮತ್ತು ರೇಡಿಯೋಗಳಲ್ಲಿ ಕಾಣಿಸಿಕೊಳ್ಳುವ/ಕೇಳಿಸಿಕೊಳ್ಳುವ ತಜ್ಞರಾಗಬಹುದಿತ್ತು. ಪುಣ್ಯಕ್ಕೆ ಹಾಗಾಗಿಲ್ಲ.ಅಪ್ಪ ಪಾಠ ಮಾಡುವ ಮೇಷ್ಟ್ರಾದರೂ ಅವರದ್ದು ಒಂದು ಥರಾ ಸಂಕೊಚವುಳ್ಳ, ಕೋಪಮಿಶ್ರಿತ ಬಂಡಾಯದ ಮನಸ್ಸು.ಪ್ರಚಾರಕ್ಕೆ ಒಗ್ಗದ ಮನೋಧರ್ಮ. ಯಾವುದೇ ಪರಿಸ್ಥಿತಿಯನ್ನು ಎದುರಿಸಬಲ್ಲ, ನಿಭಾಯಿಸಬಲ್ಲ ಸತತವಾದ ತಯಾರಿ, ಯೋಜನೆ ಮತ್ತು ಮುಂದಾಲೋಚನೆ ಮಾಡುವ ಶಕ್ತಿ ಅಪ್ಪನಿಗೆ ಸಿಕ್ಕಿರುವ ವರಗಳಲ್ಲೊಂದು, ಆದರೆ ಹಾಗೆ ನಿಭಾಯಿಸುವ ಸಂದರ್ಭದಲ್ಲಿ ಅವರು ಮುನ್ನುಗ್ಗಿ ಎದಿರೇಟು ಹಾಕುವವರಲ್ಲ. ಅವರ ಹಳೆಯ ಛಾಯಾಚಿತ್ರಗಳನ್ನು ನೋಡಿದರೇ ಗೊತ್ತಾಗುತ್ತದೆ.ಯಾವುದೇ ಗುಂಪಿನಲ್ಲಿ ಅಪ್ಪ ಮೂರನೇ ಸಾಲಿನಲ್ಲೋ, ನಾಲ್ಕನೇ ಸಾಲಿನ ಮೂಲೆಯಲ್ಲೋ ನಿಲ್ಲುವುದು ಸಾಮಾನ್ಯ. ಅವರ ಈ ಸಂಕೋಚ, ಪರಿಸ್ಥಿತಿಯ ಒತ್ತಡ ಹೆಚ್ಚಾದಾಗ ಅವರನ್ನು ಕೋಪಮಿಶ್ರಿತ ಬಂಡಾಯಗಾರನನ್ನಾಗಿಸುತ್ತದೆ. ಈ ಗುಣವೂ ಸಹ ಕೊಂಚ ಮಟ್ಟಿಗೆ ನಮ್ಮ ತಾತ ಕೈದಾಳದ ರಾಮಸ್ವಾಮಿಯವರಿಂದಲೇ ಅಪ್ಪನಿಗೆ ಬಂದಿರುವುದೆಂದು ನನ್ನ ತಿಳುವಳಿಕೆ.ತಾತನನ್ನು ನಾನು ಐದು ವರ್ಷದವನಿದ್ದಾಗಲೇ ಕಳೆದುಕೊಂಡರೂ, ಅಜ್ಜಿಯ ನಿಕಟ ಸಂಪರ್ಕದಿಂದ, ತಾತನನ್ನು ಹತ್ತಿರದಿಂದ ನೋಡಿದ್ದ ಅನೇಕರಿಂದ ಅವರನ್ನು ಮತ್ತೆ ಜೀವಂತವಾಗಿರಿಸಿಕೊಂಡ ಅನುಭವ ನನ್ನದು. ಅವರೂ ಸಹ ತಮ್ಮ ಧಾಟಿಗೆ ಸಿಗದ, ಅಸಮರ್ಪಕವಾದ ಸಂದರ್ಭಗಳು ಬಂದಾಗ ಅಲ್ಲಿ ಇನ್ನೊಂದು ಕ್ಷಣ ಇರುತ್ತಿರಲಿಲ್ಲವಂತೆ. ಅಪ್ಪನೂ ಹಾಗೆಯೇ. ಅವರಿಗೆ ಒಪ್ಪಿಗೆಯಾಗದ, ಒಪ್ಪಿಗೆಯಾದರೂ ಮುಜುಗರ ತರುವ ಸಂದರ್ಭ, ಸನ್ನಿವೇಶಗಳಲ್ಲಿ ನಿಲ್ಲುವುದಿಲ್ಲ. ತಮ್ಮ ಅನುಪಸ್ಥಿತಿಯಿಂದ ಇತರರಿಗೆ ಕೋಪ ಬಂದರೂ, ಅಪ್ಪ ತಮ್ಮ ಪೂರ್ವಸಿದ್ಧತೆಗಳಿಂದ ಯಾರಿಗೂ ಯಾವ ತೊಂದರೆಯೂ ಆಗದಂತೆ ಮಾಡುತ್ತಾರೆಂಬುದೂ ನಿಜ.ತಾತನಲ್ಲಿದ್ದುದು ಜೀವನದ ಬಗೆಗಿನ ಕೆಲ ಅವಗುಣಗಳ ಬಗೆಗಿನ ವೈರಾಗ್ಯವಾದರೆ, ಅಪ್ಪನಲ್ಲಿರುವುದು ತನ್ನ ಸಮಕಾಲೀನರ ಬೇಡಿಕೆಗಳಿಗೆ ಸೋತೂ ಸೋಲದ ಬಂಡಾಯ. ಸಂಪ್ರದಾಯ, ಪೂಜೆ ಪುನಸ್ಕಾರಗಳಲ್ಲಿ ಅಪ್ಪನ ಮನಸ್ಸು ನಿಲ್ಲದಿದ್ದರೂ, ಮನೆಯ ಹಿರಿಯರ ಆಣತಿಯಂತೆ ನಡೆದುಕೊಂಡಿರುವುದಕ್ಕೆ ಬೇಕಾದಷ್ಟು ಉದಾಹರಣೆಗಳನ್ನು ಕೊಡಬಹುದು. ಅಜ್ಜಿಯ ಮತ್ತು ದೊಡ್ಡಪ್ಪನ ಒಡನಾಟದಿಂದ ನಾನೂ ಸಂಪ್ರದಾಯ ಪದ್ಧತಿಗಳನ್ನು ರೂಢಿಸಿಕೊಂಡಿದ್ದಕ್ಕೆ ಅಪ್ಪ ಎಂದೂ ಅಡ್ಡಿ ಮಾಡಲಿಲ್ಲ, ಇಂದೂ ಮಾಡುತ್ತಿಲ್ಲ. ಅವರು ಶ್ರಾದ್ಧಕಾರ್ಯ ಕರ್ತವ್ಯಗಳಿಂದ ವಿಮುಖರಾಗದಿರುವುದು, ನಾನು ಅಪ್ಪನಲ್ಲಿ ಬಹಳವಾಗಿ ಮೆಚ್ಚುವ ಅಂಶ. ಅದರ ಆಚರಣೆಯ ವಿಧಾನದಲ್ಲಿ ಲೋಪದೋಷಗಳೇನೇ ಇದ್ದರೂ, ನಮ್ಮೊಂದಿಗಿರದ ಹಿರಿಯರನ್ನು ಜ್ಞಾಪಿಸಿಕೊಳ್ಳುವ ಈ ಪದ್ಧತಿ ಯಾವುದೇ ವ್ರತಾಚರಣೆಗಳಿಗಿಂತ ದೊಡ್ಡದು. ಅಪ್ಪನಿಂದ ನಮಸ್ಕಾರಗಳನ್ನು ಪಡೆಯುತ್ತಿರುವ ಆ ಹಿರಿಯರೂ ಪುಣ್ಯವಂತರೇ. ತಾತ, ದೊಡ್ಡಪ್ಪನ ನಂತರ ಇತ್ತೀಚೆಗೆ ಆ ಸಾಲಿಗೆ ಸೇರಿದವರು ನಮ್ಮಜ್ಜಿ ಲಲಿತಮ್ಮ.ತಮ್ಮ ಜೀವನದುದ್ದಕ್ಕೂ ಯಾರ ಹಂಗಿಗೂ ಸಿಗದೇ ಇದ್ದ ನಮ್ಮಜ್ಜಿ ವಿಧಿವಶಾತ್ ಕೊನೆಯ ದಿನಗಳಲ್ಲಿ ಹಾಸಿಗೆ ಹಿಡಿಯುವಂತಾಯ್ತು. ಆಗ ನಾನು ಅರಿತಂತೆ ಅಪ್ಪನಲ್ಲಾದ ತಳಮಳಗಳನ್ನು ಪದಗಳಲ್ಲಿ ಹೇಳುವುದು ಕಷ್ಟ. ನಮ್ಮಮ್ಮ ಅಜ್ಜಿಯ ಆಸರೆಗೆ ಇರದಿದ್ದರೆ ಅಪ್ಪನ ಮೌನ ಬಂಡಾಯ ದಿಕ್ಕೆಡುತ್ತಿತ್ತೇನೋ.ನಮ್ಮ ಮನೆಯಲ್ಲಿ ಎಲ್ಲರಿಗಿಂತ ಮಿಗಿಲಾದ ಸಮಯಪ್ರಜ್ಞೆ, ಜೀವನದ ಬಗ್ಗೆ ಒಂದು ತೆರನಾದ ಸಮಾಧಾನಕರ ವಿಶಾಲ ದೃಷ್ಟಿಕೋನವಿರುವುದು ನಮ್ಮಮ್ಮನಿಗೆ. ಅದರ ಮುಖ್ಯ ಫಲಾನುಭವಿ ಅಪ್ಪ. ಅಜ್ಜಿಯ ಕೊನೆಯ ನಾಲ್ಕು ತಿಂಗಳುಗಳಲ್ಲಿ ನಾನೂ ಅವರೊಂದಿಗಿರಲಿಲ್ಲ. ಆ ಕೊರತೆಯಿಂದುಂಟಾದ

ಅಸಂಪೂರ್ಣತೆಯ ಶೂನ್ಯ ಭಾವನೆ ನನ್ನನ್ನು ನಿಸ್ಸಂಶಯವಾಗಿ ಕಾಡುತ್ತಲೇ ಇರಲಿದೆ. ಆ ದಿನಗಳಲ್ಲಿ ಅಮ್ಮ, ದೊಡ್ಡಮ್ಮ, ಲೇಖಾ, ದೊಡ್ಡಕ್ಕ, ಭಾವ, ಮಂಜುಳಾ, ಗೀತಾ ಮತ್ತು ಅಪ್ಪನ ಸೋದರಿಯರೆಲ್ಲರೂ ಅಜ್ಜಿಯ ಜೊತೆಗಿದ್ದು, ಅಪ್ಪನ ಮಾನಸಿಕ ಹೊಯ್ದಾಟಗಳನ್ನು ಕಡಿಮೆ ಮಾಡಿದರೆಂಬ ಸಂಗತಿಯೊಂದರಿಂದ ಸಾಧ್ಯವಾದಷ್ಟೂ ಸಮಾಧಾನ ಮಾಡಿಕೊಂಡಿದ್ದೇನೆ. ಪ್ರಪಂಚದಲ್ಲಿ ಇಂತಹ ಪರಿಸ್ಥಿತಿಗಳನ್ನು ಎದುರಿಸಿದ್ದ ಅಸಂಖ್ಯಾತ ಮಧ್ಯಮ ವರ್ಗದ ಕುಟುಂಬಗಳಂತೆ ನಮ್ಮದೂ ಇನ್ನಷ್ಟು ಪಕ್ವವಾಗಲು ಅದು ದಾರಿ ಮಾಡಿಕೊಟ್ಟಿತು ಎಂದಷ್ಟೇ ಹೇಳಬಲ್ಲೆ. ನನ್ನ ಕರ್ನಾಟಕ ಶಾಸ್ತ್ರೀಯ ಸಂಗೀತದ ಅಭ್ಯಾಸವೂ ನನಗೆ ವೈಯಕ್ತಿಕವಾಗಿ ಅಂತಹ ಸಂದರ್ಭಗಳನ್ನು ಎದುರಿಸಲು ಬೇಕಾಗುವ ಮನೋಸ್ಥೈರ್ಯವನ್ನೂ, ಆ ಪರಿಸ್ಥಿತಿಯು ಕಳೆದ ನಂತರ ಜೀವನವನ್ನು ಮತ್ತೆ ಪ್ರೀತಿಸಲು ಬೇಕಾದ ಸ್ಫೂರ್ತಿಯನ್ನೂ ಒದಗಿಸಲಿದೆ ಎಂದು ಅನುಭವದಿಂದ ಹೇಳಬಲ್ಲೆ. ನಿಧಾನವಾಗಿ ಏನೂ ಅರಿಯದ ಅರೆ ಮನಸ್ಸಿನಿಂದ ಆರಂಭವಾದ ನನ್ನ ಮತ್ತು ಮೃದಂಗದ ನಂಟು ಈಗ ಹೆಮ್ಮರವಾಗಿರುವುದಕ್ಕೆ ಅಪ್ಪನ ಉತ್ತೇಜನವೂ ಮುಖ್ಯವಾದ ಕಾರಣಗಳಲ್ಲೊಂದು. ನಾನು ಮೃದಂಗದ ಜೊತೆಗಿದ್ದಾಗ ಅಪ್ಪನ ನಡವಳಿಕೆ, "ಅವರು ನನ್ನೊಂದಿಗೆ ಯಾವಾಗಲೂ ಹೀಗೇ ವ್ಯವಹರಿಸಬಾರದೇ" ಎನ್ನಿಸುವಂತಿರುತ್ತದೆ. ಅಪ್ಪ ಈಗ ಹೆಸರಿಗಾದರೂ ನಿವೃತ್ತರಾಗಿ ಆರುವರ್ಷಗಳೇ ಆಗಿವೆ. ಈಗಲಾದರೂ ಅವರಲ್ಲಿರುವ ಹಾರ್ಮೋನಿಯಂ ವಾದಕನ ಪ್ರತಿಭೆಗೆ ಹೆಚ್ಚಿನ ಸಮಯ ಸಿಗುವಂತಾಗಲಿ ಎಂಬ ಆಶಯ ನನ್ನದು.

ನಮ್ಮಪ್ಪನ ಮತ್ತು ನನ್ನ ಮಧ್ಯದ ಸಂಪರ್ಕ, ಅವರು ನನ್ನ ಮೇಲೆ ಮಾಡಿರುವ ಪ್ರಭಾವದ ಆದಷ್ಟೂ ನೈಜ ಚಿತ್ರಣವನ್ನು ಕೊಡುವ ನಿಟ್ಟಿನಲ್ಲಿ ನಾನು ಮಾಡಿರುವ ಈ ಪ್ರಯತ್ನ ತಕ್ಕ ಮಟ್ಟಿಗೆ ಯಶಸ್ವಿಯಾದೀತೆಂದು ಆಶಿಸುತ್ತೇನೆ. ಈ ಬರವಣಿಗೆ ನನಗೆ ತುಂಬಾ ಖುಶಿ ಕೊಟ್ಟಿದೆ. ಇಲ್ಲಿ ನಾನು ಪ್ರಸ್ತಾಪಿಸಿರುವ ವಿಚಾರಗಳು ಅವರ ವ್ಯಕ್ತಿತ್ವವನ್ನು ಕಟ್ಟಿಕೊಡಲು ಸಹಾಯ ಮಾಡುವ ತುಣುಕುಗಳಷ್ಟೇ. ಅಪ್ಪನ ಗೆಳೆಯರಾದ ಶೇಷಶಾಸ್ತ್ರಿಗಳು ನನಗೆ ವರ್ಷಗಳ ಹಿಂದೆ ಬರೆದಿದ್ದ ಕಾಗದವೊಂದರಲ್ಲಿ ಬಳಸಿದ್ದ ಶಬ್ದಗಳನ್ನು ಇಲ್ಲಿ ಎರವಲು ಪಡೆದು ಹೇಳುವುದಾದರೆ, ನಾನು ನನ್ನ "ಹೃದಯಾಂತರಾಳದಲ್ಲಿ ಕಾಪಾಡಿಕೊಂಡಿರುವ" ಅನೇಕ ವಿಚಾರಗಳನ್ನು ಇಲ್ಲಿ ಹೇಳಲು ಸಾಧ್ಯವಾಗಿಲ್ಲ. ಆದರೆ, ಅಪ್ಪನ ಬಗ್ಗೆ ನಾನು ಇಷ್ಟೊಂದು ಬರೆದಿರುವುದೇ ಅವರಿಗೆ ಗುಟ್ಟುಪದೇ ಹೋಗಬಹುದು.ಹಾಗಾಗಿ ಇಷ್ಟು ಸಾಕು. ನಾನು ಈ ಲೇಖನವನ್ನು ಬರೆಯಲು ಶುರುಮಾಡಿದಾಗ ಕವಿ ಪುತಿನ ಅವರು ಅವರ ತಂದೆಯನ್ನು ವರ್ಣಿಸುತ್ತಾ ಬರೆದಿದ್ದ ಗದ್ಯ ಭಾಗ ನನ್ನ ನೆನಪಿಗೆ ಬಂತು. ನಮ್ಮಪ್ಪ ತಮ್ಮ ಕೆಲಸದಲ್ಲಿ ತಲ್ಲೀನರಾಗಿರುವ ಸನ್ನಿವೇಶವನ್ನು ನಾನೂ ವರ್ಣಿಸುವುದು ಸೂಕ್ತವೇ ಎಂದು ಯೋಚಿಸಿದೆ. ತಮ್ಮ ಬರೆಯೋ ಮಣೆಯ ಮೇಲೆ ಕಾಗದಗಳನ್ನು ಹರಡಿಕೊಂಡು, ಪಕ್ಕದಲ್ಲಿರುವ ಬೀರುವಿನ ಬಾಗಿಲು ತೆಗೆದುಕೊಂಡು, ಎಡಗೈನಲ್ಲಿ ಕಾಫಿಯ ಲೋಟವನ್ನು ಹಿಡಿದುಕೊಂಡು, ಹಿನ್ನೆಲೆಯಲ್ಲಿ ಮುಕೇಶ್ ಅಥವಾ ಮೊಹಮ್ಮದ್ ರಫಿ ಅವರು ಹಾಡಿದ್ದ ಹಾಡನ್ನು ಸಣ್ಣಗೆ ಕೇಳಿಸಿಕೊಳ್ಳುತ್ತಾ, ತಾವು ಬರೆಯುವಾಗ ಮೊದಲ ಶಬ್ದದ ಆರಂಭದಲ್ಲಿ ಅಪ್ಪ ತಮ್ಮ ಲೇಖನಿಯನ್ನು ಹಾಳೆಯ ಹತ್ತಿರ ತಂದು ಗಾಳಿಯಲ್ಲಿ ಬರೆದಂತೆ ಎರಡು ಸುತ್ತು ತೇಲಿಸಿ ನಂತರ ಶುರುಮಾಡುವ ವಿಧಾನವನ್ನು ನಾನು ಪುತಿನ ಅವರಂತೆ ವರ್ಣಿಸಲು ಸಾಧ್ಯವಿಲ್ಲ ಎಂದು ಗೊತ್ತಾಗಿ ಸುಮ್ಮನಾದೆ.

ಅಪ್ಪನ ಹೆಸರು ಗಣೇಶ. ನನ್ನ ಹೆಸರು ಶ್ರೀಕಂಠ. ಮುಂದೊಂದು ದಿನ ಅಪ್ಪನಿಗೆ ಬೇಕಿಲ್ಲದಿದ್ದರೂ ನಮ್ಮ ಹೆಸರಿಗೆ ತಕ್ಕಂಥ ಪಾತ್ರಗಳು ನಮ್ಮಿರ್ವರ ನಡುವೆ ಬಂದೇ ಬರುತ್ತದೆ. ಹಾಗಾದಾಗ ನನ್ನ ಕೈ ಈಗ ಗಡುಸಾಗಿದ್ದರೂ ಅಪ್ಪನಿಗಾಗಿ ಮತ್ತೆ ಮೃದುವಾಗಲಿದೆಯೆಂಬುದು ಖಂಡಿತ ಮತ್ತು ಆ ನಂಬಿಕೆ ಅಪ್ಪನಿಗೂ ಇರುವುದೆಂದು ನನಗೆ ಗೊತ್ತಿದೆ.

*****

# "ಗುಣಾಃ ಪೂಜಾಸ್ಥಾನಂ"

* ಯು. ಮಾಧವಾಚಾರ್ಯ

ಅಧ್ಯಾಪನ ವೃತ್ತಿಯು ಅತ್ಯಂತ ಪವಿತ್ರವಾದುದು. ಯುವಜನಾಂಗವನ್ನು ದೇಶದ ಸತ್ ಪ್ರಜೆಗಳನ್ನಾಗಿ ರೂಪಿಸುವ ಉತ್ತಮ ಉದ್ದೇಶವನ್ನು ಹೊಂದಿರುವದರಿಂದ ಹೆಚ್ಚು ಜವಾಬ್ದಾರಿಯುತವಾದುದೂ ಆಗಿದೆ. ಆದರೆ ಇಂದು ಈ ಅಧ್ಯಾಪನ ವೃತ್ತಿಯು ತನ್ನ ಪಾವಿತ್ರ್ಯವನ್ನು ಕಳೆದುಕೊಂಡು ಮೂಲ ಉದ್ದೇಶದಿಂದ ದೂರ ಸರಿದು "ಜ್ಞಾನಪಣ್ಯಂ" ವ್ಯಾಪಾರವಾಗಿ ಪರಿವರ್ತನೆಗೊಳ್ಳುತ್ತಿದೆ. ಪ್ರಾಚೀನ ಕಾಲದ ಆದರ್ಶ ಅಧ್ಯಾಪಕರ ಹೆಸರುಗಳನ್ನು ಉದಾಹರಿಸಿ ಅವರಲ್ಲಿದ್ದ ಉತ್ತಮ ಗುಣಗಳನ್ನು ಹೇಳಿದಾಗ ಅಂತಹ ಗುಣಗಳಿರುವ ಅಧ್ಯಾಪಕರನ್ನು ಇಂದಿನ ಸಮಾಜದಲ್ಲಿ ಹೆಸರಿಸುವುದು ಗುರುತಿಸುವುದು ಕಷ್ಟವಾಗಬಹುದು.

**. . . . . . ಸಂಕ್ರಾಂತಿರನ್ಯಸ್ಯ ವಿಶೇಷಯುಕ್ತಾ ।**
**ಯಸ್ಯೋಭಯಂ ಸಾಧು ಸ ಶಿಕ್ಷಕಾಣಾಂ ಧುರಿ ಪ್ರತಿಷ್ಠಾಪಯಿತವ್ಯ ಏವ ॥**

ಕಲಿಯುವಿಕೆ ಮತ್ತು ಕಲಿಸುವಿಕೆ ಇವೆರಡನ್ನು ಪ್ರಾಮಾಣಿಕವಾಗಿ ನೆರವೇರಿಸುವ ಆದರ್ಶ ಗುರುಗಳ ಸಂಖ್ಯೆ ವಿರಳವಾಗುತ್ತಿರುವ ಈ ದಿನಗಳಲ್ಲಿಯೂ ಅಲ್ಲೊಬ್ಬರು ಇಲ್ಲೊಬ್ಬರು ಅಂತಹ ಆದರ್ಶ ಗುರುಗಳು ಕಂಡು ಬರುತ್ತಿದ್ದಾರೆ. ನಿಜವಾಗಿಯೂ ಇದು ಸಮಾಜಕ್ಕೊಂದು ಆಶಾಕಿರಣ ಹಾಗೆ ಹೆಸರಿಸಬಹುದಾದವರಲ್ಲಿ ಡಾ. ಕೆ.ಆರ್. ಗಣೇಶ್ ಅವರೂ ಒಬ್ಬರು ಎಂದು ಹೇಳಲು ಸಂತೋಷವೆನಿಸುತ್ತದೆ.

ಡಾ. ಕೆ.ಆರ್. ಗಣೇಶ್ ಅವರಿಗೆ ಅವರ ಶಿಷ್ಯ ವರ್ಗದವರು ಅಭಿನಂದನಾ ಗ್ರಂಥವನ್ನು ಸಮರ್ಪಣೆ ಮಾಡಬೇಕೆಂದಿರುವುದನ್ನು ಕೇಳಿ ತುಂಬಾ ಸಂತೋಷವಾಯಿತು. ಅರ್ಹರಾದವರಲ್ಲಿರುವ ಅರ್ಹತೆಯನ್ನು ಗುರುತಿಸಿ ಗೌರವಿಸುವಕಾರ್ಯ ಸ್ತುತ್ಯರ್ಹವಾದುದು. "ಕ್ಲೇಶಃ ಫಲೇನ ಹಿ ಪುನಃ ನವತಾಂ ವಿಧತ್ತೆ" ಸಮಾಜಕ್ಕೆ ಅವರು ಇನ್ನೂ ಹೆಚ್ಚು ಹೆಚ್ಚು ಕೊಡುಗೆ ನೀಡುವಂತೆ ಪ್ರೇರೇಪಿಸುತ್ತದೆ. ಆತ್ಮ ತೃಪ್ತಿಯನ್ನೂ ನೀಡುತ್ತದೆ. ಇದರಿಂದ ಗೌರವಿಸಲ್ಪಡುವವರು ಹಾಗೂ ಗೌರವಿಸುವವರು ಇಬ್ಬರೂ ಪ್ರಶಂಸಾರ್ಹರು.

ಡಾ॥ ಕೆ.ಆರ್. ಗಣೇಶ್ ಅಭಿನಂದನಾ ಸಮಿತಿಯು ಗಣೇಶ್ ಅವರ ಬಗ್ಗೆ ಲೇಖನವೊಂದನ್ನು ಬರೆದುಕೊಡಬೇಕೆಂದು ಕೇಳಿದಾಗ ನನಗೆ ಆಶ್ಚರ್ಯವೇ ಆಯಿತು. ನಾನು ಪ್ರಸಿದ್ಧ ಲೇಖಕನೂ ಅಲ್ಲ. ಜನಪ್ರಿಯ ವ್ಯಕ್ತಿಯೂ ಅಲ್ಲ. ಶಾಸನ ತಜ್ಞನೂ ಅಲ್ಲ, ಒಬ್ಬ ಅಧ್ಯಾಪಕನಾಗಿ ಕಲಿಸುವಿಕೆಯ ಕಾಯಕವನ್ನು ತಕ್ಕಮಟ್ಟಿಗೆ ಚೆನ್ನಾಗಿಯೇ ನೆರವೇರಿಸಿದ್ದೇನೆ ಎಂಬ ವಿಶ್ವಾಸವಿದ್ದರೂ ಲೇಖನ ಕಾಯಕವನ್ನು ರೂಢಿಸಿಕೊಂಡವನೇ ಅಲ್ಲ. ಗಣೇಶ್ ಮತ್ತು ನಾನು ಆಚಾರ್ಯ ಪಾಠಶಾಲಾ ಕಾಲೇಜಿನಲ್ಲಿ ಪರಸ್ಪರ ವಿಶ್ವಾಸದೊಂದಿಗೆ ಆತ್ಮೀಯ ಗೆಳೆಯರಾಗಿ ಕಾರ್ಯನೆರವೇರಿಸಿದವರು. ಆದ್ದರಿಂದ ಸಹೃದಯರಾದ ಗಣೇಶ್ ಅವರ ಜೊತೆಗಿನ ಸಖ್ಯದ ಸವಿನೆನೆಪಿಗಾಗಿ ಸಂಕೋಚದಿಂದಲೇ ಚಿಕ್ಕ ಲೇಖನವೊಂದನ್ನು ಬರೆದುಕೊಡಲು ಒಪ್ಪಿದೆ.

ನಾನು ಆಚಾರ್ಯಪಾಠಶಾಲಾ ಸಂಜೆ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕನಾಗಿ ಸೇರಿದಾಗ ನಮ್ಮಿಬ್ಬರ ಮೊದಲ ಪರಿಚಯವಾದದ್ದು. ನಾನು ೧೯೮೬ ರಲ್ಲಿ ಆಚಾರ್ಯ ಪಾಠಶಾಲಾ ಕಲೆ ಮತ್ತು ವಿಜ್ಞಾನ ಕಾಲೇಜಿಗೆ ವರ್ಗಾಯಿಸಲ್ಪಟ್ಟೆ. ಗಣೇಶ್ ಅವರು ಅಷ್ಟೊತ್ತಿಗಾಗಲೇ ಅಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದರು. ಅಲ್ಲಿ ನಮ್ಮಿಬ್ಬರ ಪರಿಚಯವು ಸಖ್ಯವಾಗಿ ದಿನೇ ದಿನೇ ಅಭಿವೃದ್ಧಿ ಹೊಂದಿತು. ಇಬ್ಬರೂ ಭಾಷಾ ಅಧ್ಯಾಪಕರು ಸಂಸ್ಕೃತ ಮತ್ತು ಕನ್ನಡ ಭಾಷೆಗಳು ಪರಸ್ಪರ ವಿರೋಧಿಗಳು ಅಲ್ಲ ಎಂಬ ವಿಷಯದಲ್ಲಿ ಸಹಮತವಿದ್ದವರು. ಕಾಲೇಜಿನ ಹಲವಾರು ಆಡಳಿತಾತ್ಮಕ ಹಾಗೂ ಶೈಕ್ಷಣಿಕ ವಿಷಯಗಳಲ್ಲಿ ಸಹಮತವಿದ್ದವರು. ವಿದ್ಯಾರ್ಥಿಗಳ ಶಿಸ್ತಿನ ವಿಷಯದಲ್ಲಿಯೂ ಒಂದೇ ಅಭಿಪ್ರಾಯವಿದ್ದವರು. ಹೀಗಾಗಿ ನಮ್ಮಿಬ್ಬರ ಸಖ್ಯಕ್ಕೆ ಎಂದೂ ಕುಂದು ಬರಲಿಲ್ಲ.

---

* ನಂ. ೧೫೫೮ ಅನುಗ್ರಹ ೧೬ ಎ ಮುಖ್ಯರಸ್ತೆ ಜೆ.ಪಿ.ನಗರ ೨ನೆಯ ಫೇಸ್ ಬೆಂಗಳೂರು – ೫೬೦೦೭೮

ನಮ್ಮ ಕಾಲೇಜಿನಲ್ಲಿ ಭಾಷಾ ಅಧ್ಯಾಪಕರು ಒಂದೇ ಕೊಠಡಿಯಲ್ಲಿ ಕುಳಿತಿರುತ್ತಿದ್ದೆವು. ಸಾಮಾನ್ಯವಾಗಿ ತರಗತಿಗಳು ಇಲ್ಲದ ಬಿಡುವಿನ ಸಮಯ ನಮ್ಮಿಬ್ಬರದ್ದು ಒಂದೇ ಆಗಿರುತ್ತಿತ್ತು. ಆಗ ನಾವು ಸಂಸ್ಕೃತ ಸಾಹಿತ್ಯದ ಬಗ್ಗೆ ಕನ್ನಡ ಸಾಹಿತ್ಯದ ಬಗ್ಗೆ ಧೀಮಂತ ನಾಯಕರ ಬಗ್ಗೆ ಅಧ್ಯಾಪಕ ವರ್ಗದ ಬಗ್ಗೆ ವಿದ್ಯಾರ್ಥಿಗಳ ಅಶಿಸ್ತಿನ ಬಗ್ಗೆ ಇನ್ನೂ ಹಲವಾರು ವಿಷಯಗಳ ಬಗ್ಗೆ ಚರ್ಚಿಸುತ್ತಿದ್ದೆವು. ನನಗೆ ಶಾಸನಗಳ ಬಗೆಗೆ ಎ.ಬಿ.ಸಿ.ಡಿ. ಪರಿಚಯವಾದುದೂ ಇಂತಹ ಸಂದರ್ಭಗಳಲ್ಲಿಯೇ. ಗಣೇಶ್ ಅವರ ಬಳಿ ಒಂದು ಪಾಕೆಟ್ ಟ್ರಾನ್ಸಿಸ್ಟರ್ ಇತ್ತು. ವಿರಾಮ ಅವಧಿಯಲ್ಲಿ ಅವರು ಹಳೆಯ ಹಿಂದಿ ಚಿತ್ರಗೀತೆಗಳನ್ನು ಟ್ಯೂನ್ ಮಾಡಿದಾಗ ನಾನೂ ಒಬ್ಬ ಶ್ರೋತೃ ಆಗಿರುತ್ತಿದ್ದೆ. ಕ್ರಿಕೆಟ್ ಕಾಮೆಂಟರಿಯನ್ನು ಕೇಳುತ್ತಿದ್ದೆವು. ಕ್ರಿಕೆಟ್ ಬಗ್ಗೆ ದೀರ್ಘವಾಗಿಯೇ ಚರ್ಚಿಸುತ್ತಿದ್ದೆವು. ಈ ಎಲ್ಲಾ ಚರ್ಚೆಗಳು ಸುಮುಖವಾಗಿಯೇ ಪರಿಸಮಾಪ್ತಿಗೊಳ್ಳುತ್ತಿದ್ದವು ಎಂದೂ ವಿಕೋಪಕ್ಕೆ ಹೋದದ್ದಿಲ್ಲ.

ಶಿಲಾ ಶಾಸನಗಳನ್ನು ಓದುವಲ್ಲಿ ವಿಮರ್ಶಿಸುವ ವಿಷಯದಲ್ಲಿ ಜಿಜ್ಞಾಸುಗಳಿಗೆ ತಿಳಿಸಿಕೊಡುವಲ್ಲಿ ಕೆಲವೇ ಕೆಲವು ಪರಿಣತರಿದ್ದಾರೆ. ಅಂಥವರಲ್ಲಿ ಗಣೇಶ್ ಅವರೂ ಒಬ್ಬರು ಎಂಬುದು ಗಮನಾರ್ಹ ವಿಷಯ. ಗ್ರಂಥ ಸಮರ್ಪಣಾ ಪುರಸ್ಕಾರಕ್ಕೆ ಇದೇ ಪ್ರಮುಖ ಕಾರಣವೆಂದರೂ ತಪ್ಪಾಗಲಾರದು. ಜಿಜ್ಞಾಸುಗಳಿಗೆ ಶಾಸನ ಪಾಠಗಳನ್ನು ಚೆನ್ನಾಗಿಯೇ ಮಾಡುತ್ತಿದ್ದರು. ಬಹಳ ಜನ ಜಿಜ್ಞಾಸುಗಳು ಬಹಳ ಸಲ ಕಾಲೇಜಿಗೂ ಬಂದು ಚರ್ಚಿಸುತ್ತಿದ್ದರು. ಅಂತಹ ಚರ್ಚೆಗಳಲ್ಲಿ ನಾನೂ ಒಬ್ಬ ಶ್ರೋತೃ ಆಗಿ ಭಾಗವಹಿಸುತ್ತಿದ್ದೆ. ಶಿಲಾಶಾಸನಗಳು ಇರುವಲ್ಲಿಗೆ ಜಿಜ್ಞಾಸುಗಳನ್ನು ಕರೆದೊಯ್ದು ಅವರಿಗೆ ಓದುವ ಕ್ರಮವನ್ನು ಹಾಗೂ ಅವುಗಳ ಅಂತರಾಳಗಳನ್ನು ತಿಳಿಸುವುದು ಗಣೇಶ್‌ರವರಿಗೆ ಸಂತಸದ ಹವ್ಯಾಸವಾಗಿತ್ತು. ಅದಕ್ಕಾಗಿ ಅವರು ತಮ್ಮ ಅಮೂಲ್ಯವಾದ ರಜೆಗಳನ್ನೂ ತಮ್ಮ ದುಡಿಮೆಯ ಹಣವನ್ನೂ ವ್ಯಯಿಸಿರುವುದನ್ನು ನಾನು ಗಮನಿಸಿದ್ದೇನೆ.

ಕಾಲೇಜಿನಲ್ಲಿ ಅಧ್ಯಾಪಕರಾಗಿ ಪ್ರಾಮಾಣಿಕವಾಗಿ ಕರ್ತವ್ಯನಿರತರಾದವರು. ತಮ್ಮ ಅಧ್ಯಾಪಕರ ಬಗ್ಗೆ ಮಾತು ಬಂದಾಗ ಖಂಡಿತವಾಗಿಯೂ ಇವರ ಶಿಷ್ಯ ವರ್ಗದವರು ಒಳ್ಳೆಯ ಕಾರಣಗಳಿಗಾಗಿ ಇವರನ್ನು ಸ್ಮರಿಸಿಕೊಂಡು ಇವರನ್ನು ಹೆಸರಿಸುವರು ಎಂದು ಖಂಡಿತವಾಗಿಯೂ ನಾನು ಹೇಳಬಲ್ಲೆ. ಯಾವುದೇ ವಿದ್ಯಾರ್ಥಿಯು ಯಾವ ಸಂದರ್ಭದಲ್ಲಿಯೇ ಆಗಲೀ ಬಂದು ಯಾವುದೇ ಜಿಜ್ಞಾಸೆಯನ್ನು ತಮ್ಮ ಮುಂದಿಟ್ಟಾಗ ಅದನ್ನು ಸೂಕ್ತವಾಗಿ ಚರ್ಚಿಸಿ ಪರಿಹರಿಸಿ ಬಂದ ವಿದ್ಯಾರ್ಥಿಯು ತೃಪ್ತನಾಗಿ ಹಿಂತಿರುಗುವಂತೆ ನೋಡಿಕೊಳ್ಳುವುದು ಗಣೇಶ್ ಅವರ ಚರ್ಯೆಯಾಗಿತ್ತು. ಕಾಲೇಜಿನಲ್ಲಿ ಒಂದು ಸಂದರ್ಭದಲ್ಲಿ ಅಧ್ಯಾಪಕರುಗಳು ಅಂದಂದು ಮಾಡಿದ ಪಾಠ್ಯಭಾಗಗಳನ್ನು ಬರೆದಿಡಬೇಕೆಂಬ ಆಜ್ಞೆಯು ಬಂದಿತ್ತು. ಅದರಂತೆ ನಾನೂ ಬರೆಯುತ್ತಿದ್ದೆ. ಆದರೆ ಹಾಗೆ ಬರೆದದ್ದು ಆಯಾಯಾ ಶೈಕ್ಷಣಿಕ ವರ್ಷದ ಕೊನೆಯವರೆಗೆ ಮಾತ್ರ ನಮ್ಮಲ್ಲಿರುತ್ತಿದ್ದವು. ಆದರೆ ಗಣೇಶ್ ಅವರು ತಾವು ಅಧ್ಯಾಪಕ ವೃತ್ತಿಗೆ ಸೇರಿದಂದಿನಿಂದಲೂ ಪಾಠ್ಯ ಭಾಗವನ್ನು ಬರೆದಿಡುವ ಕ್ರಮವನ್ನು ಅನುಸರಿಸುತ್ತಿದ್ದರು. ಹಾಗೂ ಅವುಗಳನ್ನು ಸಂಗ್ರಹಿಸಿಡುತ್ತಿದ್ದರು. ಕಾಲೇಜಿನಿಂದ ನಿವೃತ್ತರಾಗುವವರೆಗಿನ ಈ ಸಂಗ್ರಹವನ್ನು ನಾನು ಗಮನಿಸಿದ್ದೇನೆ. ಮನಸ್ಸಿನಲ್ಲಿಯೇ ಅವರ ಬಗ್ಗೆ "ಭೇಷ್" ಅಂದುಕೊಂಡಿದ್ದೇನೆ. ಇಂತಹ ಹಲವಾರು ಅಧ್ಯಾಪನ ವೃತ್ತಿಯಲ್ಲಿ ಅಡಕವಾಗಿರುವ ಹಲವಾರು ಅಂಶಗಳನ್ನು ಗಣೇಶ್ ಅವರಲ್ಲಿ ನಾನು ಕಂಡಿದ್ದೇನೆ. ಸಂತೋಷಪಟ್ಟಿದ್ದೇನೆ. "ಗುಣಾಃ ಪೂಜಾಸ್ಥಾನಂ" ಗುಣಗಳನ್ನು ಗೌರವಿಸಲೇಬೇಕು.

ಗಣೇಶ್ ಅವರು ಶೈಕ್ಷಣಿಕವಾಗಿ ಮಾತ್ರವಲ್ಲದೆ, ಆಡಳಿತಾತ್ಮಕ ಕಾರ್ಯಗಳಲ್ಲಿಯೂ ಸಮರ್ಥರಾಗಿದ್ದವರು. ವಿದ್ಯಾರ್ಥಿಗಳ ಪ್ರವೇಶ ಪ್ರಕ್ರಿಯೆಯಾಗಲಿ, ಕಾಲೇಜಿನ ವೇಳಾಪಟ್ಟಿ ತಯಾರಿಯಾಗಲಿ ಪರೀಕ್ಷೆಗಳನ್ನು ನಡೆಸುವುದಾಗಲಿ, ಪರೀಕ್ಷಾ ಫಲಿತಾಂಶ ಪ್ರಕ್ರಿಯೆಯಾಗಲಿ ಎಲ್ಲದರಲ್ಲಿಯೂ ಗಣೇಶ್ ಅವರ ಕೈಚಳಕ ಪರಿಣತಿ ಎದ್ದು ಕಾಣುತ್ತಿದ್ದವು. ಕಾಲೇಜಿನ ವೇಳಾಪಟ್ಟಿ ತಯಾರಿಯಂತೂ ತುಂಬಾ ಜಟಿಲವಾದ ಕೆಲಸವಾಗಿತ್ತು, ಪ್ರತಿಯೊಬ್ಬ ಅಧ್ಯಾಪಕರಿಗೂ ತಮ್ಮ ವಿಭಾಗಕ್ಕೆ ಅನುಕೂಲಕರವಾಗಿರಬೇಕೆಂಬ ಹಂಬಲ. ಹೀಗಿರುವಾಗ ಎಲ್ಲಾ ವಿಭಾಗದ ಅಧ್ಯಾಪಕರು ಒಪ್ಪುವ ರೀತಿಯಲ್ಲಿ ತರಗತಿ ವೇಳಾಪಟ್ಟಿಯನ್ನು ತಯಾರಿಸುವಲ್ಲಿ ಗಣೇಶ್ ಸಿದ್ಧ ಹಸ್ತರಾಗಿದ್ದರು. ಕೆಲವು ಪರೀಕ್ಷೆಗಳ ಫಲಿತಾಂಶವನ್ನು ಆಯಾಯಾ ಕಾಲೇಜಿನವರೇ ಪ್ರಕಟಿಸಬೇಕಾಗುತ್ತದೆ. ಇದೂ ಒಂದು ತಲೆನೋವಿನ ಕೆಲಸ. ಹೆಚ್ಚಿನವರು ಈ ತಲೆನೋವಿನಿಂದ ದೂರಸರಿಯುವವರೆ. ಆದರೆ ಗಣೇಶ್ ಅವರು ನಗು ಮುಖದಿಂದಲೇ ತಮ್ಮ ಅಮೂಲ್ಯವಾದ ಸಮಯವನ್ನು ಈ ಕೆಲಸಕ್ಕಾಗಿ ಮೀಸಲಿಟ್ಟು, ಯಾವುದೇ ಸಮಸ್ಯೆ ಇಲ್ಲದ ರೀತಿಯಲ್ಲಿ ಸರಿಯಾದ ಸಮಯಕ್ಕೆ ಫಲಿತಾಂಶವು ಪ್ರಕಟಿಸಲು ಪ್ರಾಚಾರ್ಯರಿಗೆ ಸಹಕರಿಸಿ ಪ್ರಾಚಾರ್ಯರು ನೆಮ್ಮದಿಯಿಂದಿರುವಂತೆ

ಮಾಡುತ್ತಿದ್ದರು. ಪರೀಕ್ಷಾ ಸಮಿತಿ, ಟಾಬುಮೇಶನ್ ಸಮಿತಿ ಇನ್ನೂ ಬೇರೆ ಬೇರೆ ಸಮಿತಿಗಳಿಗೆ ಸಂಚಾಲಕರಾಗಿ ಅಧ್ಯಾಪಕರು ತಮ್ಮ ತಮ್ಮ ವೈಯಕ್ತಿಕ ಸಮಸ್ಯೆಗಳನ್ನು ತೋಡಿಕೊಂಡಾಗ ಸಹೃದಯತೆಯಿಂದ ಸ್ಪಂದಿಸಿ ಯಾರಿಗೂ ತೊಂದರೆಯಾಗದ ರೀತಿಯಲ್ಲಿ ಕಾರ್ಯಗಳನ್ನು ನಡೆಸಿ ಕಾಲೇಜಿನ ಎಲ್ಲ ಅಧ್ಯಾಪಕರ ಗೌರವಾಭಿಮಾನಗಳಿಗೆ ಪಾತ್ರರಾಗಿದ್ದಾರೆ. ಇವೆಲ್ಲವೂ ಗಣೇಶ್ ಅವರ ಕಾರ್ಯಸಾಮರ್ಥ್ಯವನ್ನು ತೋರಿಸುತ್ತವೆ.

ಡಾ|| ಗಣೇಶ್ ಅವರ ಕಾರ್ಯವ್ಯಾಪ್ತಿಯು ಕಾಲೇಜಿಗೆ ಮಾತ್ರ ಸೀಮಿತವಾಗಿರದೆ ವಿಶ್ವವಿದ್ಯಾನಿಲಯದವರೆಗೂ ವಿಸ್ತರಿಸಿದೆ. ವಿಶ್ವವಿದ್ಯಾಲಯವು ನಡೆಸುವ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಪರೀಕ್ಷೆಯ ಮೊದಲು ಹಾಗೂ ಪರೀಕ್ಷೆಯ ನಂತರ ಫಲಿತಾಂಶ ಪ್ರಕಟವಾಗಿ ಅಂಕಪಟ್ಟಿಯು ವಿದ್ಯಾರ್ಥಿಗಳ ಕೈ ಸೇರುವವರೆಗೆ ಹಲವು ಹಂತಗಳ ಕಾರ್ಯಗಳಿರುತ್ತವೆ. ಪರೀಕ್ಷೆಯ ಮೊದಲ ಹಂತದ ಕಾರ್ಯಗಳು ಸೇವಾ ಜ್ಯೇಷ್ಠತೆಯ ಆಧಾರದ ಮೇಲೆ ನಡೆಯುವಂಥವುಗಳು. ಆದರೆ ಪರೀಕ್ಷಾನಂತರದ ಹಂತಗಳಲ್ಲಿ ನಡೆಯುವ ಪ್ರತಿಯೊಂದು ಕಾರ್ಯವೂ ಜವಾಬ್ದಾರಿಯುತವಾದುದೂ, ಜಟಿಲವಾದುದೂ ವ್ಯಕ್ತಿಯ ನೈಪುಣ್ಯತೆಗೆ ಸವಾಲಿನಂತೆ ಇರುವವುಗಳೂ ಆಗಿವೆ. ದೈಹಿಕ ಶ್ರಮದೊಂದಿಗೆ ತಲೆಬಿಸಿ ಆಗುವಂತಹ ಕಾರ್ಯಗಳು ಹಲವು ಬಾರಿ ಈ ಕಾರ್ಯಗಳು ಗಣೇಶ್ ಅವರನ್ನು ಹುಡುಕಿಕೊಂಡು ಬಂದಿವೆ. ಈ ಎಲ್ಲ ಸಂದರ್ಭಗಳಲ್ಲಿಯೂ ತಮ್ಮ ಜವಾಬ್ದಾರಿಯನ್ನು ಸಮರ್ಪಕವಾಗಿ ನೆರವೇರಿಸಿ ವಿಶ್ವವಿದ್ಯಾನಿಲಯದ ಅಧಿಕಾರಿಗಳ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಇಂದಿನ ಪರಿಸರದಲ್ಲಿ ಇದು ಖಂಡಿತವಾಗಿಯೂ ಹೆಸರಿಸಲೇಬೇಕಾದುದು.

ಯಾವುದೇ ಕೆಲಸವಾಗಲಿ ಅದನ್ನು ಸಂತೋಷದಿಂದ ಒಪ್ಪಿಕೊಂಡು ಅದನ್ನು ಶ್ರದ್ಧೆಯಿಂದ ತನ್ನದೇ ಸ್ವಂತಕೆಲಸವೆಂಬಂತೆ ಮಾಡಿಮುಗಿಸುವುದು ಗಣೇಶ್‌ರ ಸ್ವಭಾವ. ಎಲ್ಲವನ್ನೂ ವಿವರಿಸಲು ಸಾಧ್ಯವಿಲ್ಲ. ಸ್ಯಾಂಪಲ್ ಆಗಿ ಒಂದನ್ನು ಹೇಳಬಹುದು. ನಮ್ಮ ಕಾಲೇಜಿನಲ್ಲಿ ಜೀವವಿಮಾ ಸಂಸ್ಥೆಗೆ ನೌಕರರ ಸಂಬಳದಿಂದ ಜಮಾ ಆಗಬೇಕಾಗಿದ್ದ ಲೆಕ್ಕ ಬಹಳ ಅಸಮರ್ಪಕವಾಗಿತ್ತು. ಅದನ್ನು ಸರಿಪಡಿಸಲು ಗಣೇಶ್ ಅವರು ಬಹಳ ಶ್ರಮಪಟ್ಟಿದ್ದಾರೆ. ಎಲ್ಲಾ ಅಧ್ಯಾಪಕರು ನೌಕರವರ್ಗದವರು ಅವರ ಹತ್ತಿರ ತಾವೇ ಹೋಗಿ ಅವರವರ ಪಾಲಿಸಿಗಳನ್ನು ತರಿಸಿಕೊಂಡು ಅವುಗಳ ಸಂಖ್ಯೆಗಳನ್ನು ಬರೆದುಕೊಂಡು ಲಿಸ್ಟಲ್ಲಿ ಬಂದ ಸಂಖ್ಯೆಗಳನ್ನು ತಾಳೆಹಾಕಿ ಆ ಲೆಕ್ಕವನ್ನು ಸಹಜ ಸ್ಥಿತಿಗೆ ತಂದಿರುವುದು ಗಣೇಶ್ ಅವರು.

ನಮ್ಮ ಕಾಲೇಜಿನಲ್ಲಿ ಸಹಕಾರ ಸಂಘವೊಂದಿದೆ. ಹಲವು ಬಾರಿ ಆ ಸಂಘದ ಕಾರ್ಯದರ್ಶಿಯಾಗಿ ಸಂಘವು ಅಭಿವೃದ್ಧಿಹೊಂದುವಲ್ಲಿ ಗಣೇಶ್ ಅವರು ಮಹತ್ತರ ಪಾತ್ರವನ್ನು ವಹಿಸಿದ್ದಾರೆ. ಇದು ಅವರ ಬಹುಮುಖ ಕಾರ್ಯಚಟುವಟಿಕೆಯ ಪರಿಚಯವನ್ನು ಮಾಡಿಕೊಡುತ್ತದೆ. ಈ ಸಂದರ್ಭದಲ್ಲಿ ನಾನು ಹೇಳಲೇ ಬೇಕಾದ ವಿಷಯವೊಂದಿದೆ. ಹೇಳದಿದ್ದಲ್ಲಿ ಅದು ಆತ್ಮವಂಚನೆಯಾದೀತು. ಸಂಘದ ಸದಸ್ಯರಿಗೆ ಸಂಘದವತಿಯಿಂದ ಸಾಲಸೌಲಭ್ಯವಿತ್ತು. ಗಣೇಶ್ ಅವರು ಹಲವು ಸಲ ತಮ್ಮ ಪಾಲಿನ ಈ ಸಾಲ ಸೌಲಭ್ಯವನ್ನು ನನಗೆ ಸಿಗುವಂತೆ ಮಾಡಿ ಸಹಕರಿಸಿದ್ದಾರೆ. ಉಪಕೃತನಾಗಿದ್ದೇನೆ. ಕೃತಜ್ಞತಾ ಭಾವವು ಮನದಲ್ಲಿದ್ದರೂ ಅದನ್ನು ವ್ಯಕ್ತಪಡಿಸಲು ಸರಿಯಾದ ಸಂದರ್ಭವೇ ಸಿಕ್ಕಿರಲಿಲ್ಲ. ಈಗ ಗಣೇಶ್ ಅವರ ಶಿಷ್ಯವರ್ಗದವರು ನನಗೂ ಲೇಖನವೊಂದನ್ನು ಬರೆಯುವ ಅವಕಾಶವನ್ನು ಒದಗಿಸಿ ಗಣೇಶ ಅವರಿಗೆ ಕೃತಜ್ಞತೆಯನ್ನು ಸಲ್ಲಿಸಲು ಅವಕಾಶ ಮಾಡಿಕೊಟ್ಟಿದ್ದಾರೆ. ಗಣೇಶ್ ಅವರೆ! "ಕೃತಜ್ಞೋಽಸ್ಮಿ".

ಒಬ್ಬರಿಗೆ ನಷ್ಟವಾದಾಗ ಅದು ಇನ್ನೊಬ್ಬರಿಗೆ ಲಾಭವಾಗುತ್ತದಂತೆ. ಗಣೇಶ್ ಅವರ ವಿಷಯದಲ್ಲಿಯೂ ಇದು ನಿಜವಾಯಿತು. ಅವರು ಕಾಲೇಜಿನಿಂದ ನಿವೃತ್ತರಾದಾಗ ಕಾಲೇಜಿನ ಶಿಷ್ಯವೃಂದಕ್ಕೆ ನಷ್ಟವಾದರೂ ಶಾಸನ ಕ್ಷೇತ್ರಕ್ಕೆ ಲಾಭವಾಯಿತು. ಸರಳ ಸಜ್ಜನರಾದ ಗಣೇಶ್ ಅವರು ನಿವೃತ್ತಿಹೊಂದಿದ ನಂತರ ಸಮಾನ ಮನಸ್ಕರಿಗೂ ಶಾಸನ ಶಿಷ್ಯವರ್ಗಕ್ಕೂ ಮೊದಲಿಗಿಂತಲೂ ಹೆಚ್ಚು ಹತ್ತಿರದವರಾಗಿ ಅವರ ಜ್ಞಾನದಾಹವನ್ನು ತಣಿಸುತ್ತಿದ್ದಾರೆ. ಅವರ ಈ ಸೇವಾಕಾರ್ಯ ನಿರಂತರವಾಗಿ ಮುಂದುವರೆಯಲಿ. ಜಿಜ್ಞಾಸುಗಳಿಗೆ ತೃಪ್ತಿಸಿಗಲಿ. ಗಣೇಶ್ ಅವರಿಗೆ ಜೀವನದಲ್ಲಿ ಆಯುರಾರೋಗ್ಯ, ಐಶ್ವರ್ಯ, ಸುಖಶಾಂತಿ ಎಲ್ಲವೂ ಸಿಗಲಿ ಎಂದು ತುಂಬು ಹೃದಯದಿಂದ ಹಾರೈಸುತ್ತೇನೆ.

****

# ನನ್ನ ಹಿರಿಯ ಸಹೋದ್ಯೋಗಿ ಡಾ॥ ಕೆ.ಆರ್. ಗಣೇಶ

* ಡಾ॥ ಕೆ. ಗೋಕುಲನಾಥ್

ಪ್ರತಿಯೊಬ್ಬ ಮನುಷ್ಯನಿಗೂ ಬಂಧು-ಮಿತ್ರರು ಇರುವರಾದರೂ, ಈ ಬಂಧು-ಮಿತ್ರರಲ್ಲಿ ಕೇವಲ ಬೆರಳೆಣಿಕೆಯಷ್ಟು ಮಂದಿ ಮಾತ್ರ ನಿಜವಾದ ಬಂಧು-ಮಿತ್ರರಾಗಿ ಹಲವು ದಶಕಗಳುರುಳಿದರೂ ನಂಟು ಕೆಡದೆ ಸಂಬಂಧ ಮುಂದುವರಿಯುತ್ತಿರುತ್ತದೆ. ಸಣ್ಣ ಪುಟ್ಟ ಕಾರಣಗಳಿಂದಲೂ ನಂಟು ಕುಂಟುವ-ಕಡಿಯುವ ಸಂಭವವೇ ಲೋಕದಲ್ಲಿ ಅಧಿಕ; ಆದರೆ ನನ್ನ ಹಿರಿಯ ಸಹೋದ್ಯೋಗಿಯಾಗಿ, ಗೆಳೆಯರಾಗಿ ಶ್ರೀ ಕೆ.ಆರ್. ಗಣೇಶ ಅವರ ಸಂಪರ್ಕ ಸಂಬಂಧ ಉಂಟಾಗಿ ನಾಲ್ಕು ದಶಕಗಳು, ಮೀರಿದ್ದರೂ ಅವರೊಡನೆ ನನ್ನ ಸಂಬಂಧ ಎಂದಿನಂತೆಯೇ ಆಹ್ಲಾದದಾಯಕವಾಗಿ ಮುಂದುವರಿದಿದೆ. ಗಣೇಶ ಅವರ ಸಂಬಂಧ ಎಲ್ಲರೊಡನೆಯೂ ಇದೇ ರೀತಿಯಾಗಿಯೇ ಮುಂದುವರಿದಿದ್ದು ಅವರು 'ಅಜಾತಶತ್ರು' ಎನಿಸಿದ್ದಾರೆ.

ಡಾ॥ ಕೆ.ಆರ್. ಗಣೇಶ ಅವರು ಕನ್ನಡ ಸಾಹಿತ್ಯ, ಚರಿತ್ರೆ, ಶಾಸನಶಾಸ್ತ್ರ, ಭಾಷಾಶಾಸ್ತ್ರ, ಛಂದಸ್ಸು, ವ್ಯಾಕರಣ ಇತ್ಯಾದಿ ಎಲ್ಲ ವಿಷಯಗಳಲ್ಲಿಯೂ ಅಗಾಧ ವಿದ್ವತ್ತನ್ನು ರೂಢಿಸಿಕೊಂಡು ಆ ವಿದ್ವತ್ತನ್ನು ನಿರ್ವಂಚನೆಯಿಂದ ವಿದ್ಯಾರ್ಥಿಗಳಿಗೆ ಹಂಚಿದ್ದಾರೆ. ಇವರ ವಿದ್ವತ್ತು, ಶಿಸ್ತು, ಶಿಷ್ಯವಾತ್ಸಲ್ಯದ ಆಳ-ಅಗಲಗಳನ್ನು ಬಹಳ ಹತ್ತಿರದಿಂದ ಕಂಡು ಸಂತೋಷ ಪಟ್ಟಿದ್ದೇನೆ. ಕನ್ನಡ ಅಧ್ಯಾಪಕ ಹುದ್ದೆಯನ್ನೂ ಇವರು 'ಉದ್ಯೋಗ' ನಿಮಿತ್ತ ಒಪ್ಪಿಕೊಂಡವರಲ್ಲ; ಪಾಠ ಹೇಳುವುದರಲ್ಲಿ ಒಂದು ಸುಖವನ್ನು ಅನುಭವಿಸುತ್ತಿದ್ದರು. ಪೂರ್ವ ಸಿದ್ಧತೆ ಇಲ್ಲದೆ ಪಾಠ ಮಾಡುತ್ತಿರಲಿಲ್ಲ. ಪ್ರತಿವರ್ಷ ನಿಗದಿಯಾಗುತ್ತಿದ್ದ ಪಠ್ಯ ಪುಸ್ತಕಗಳನ್ನು ಕೊಂಡು, ರಟ್ಟು ಕಟ್ಟಿ ಕೊಡುವ ಅಂಗಡಿಗೆ ಅದನ್ನು ಕೊಟ್ಟು ಪುಸ್ತಕದ ಎರಡು ಹಾಳೆಗಳ ನಡುವೆ ಬಿಳಿ ಹಾಳೆಗಳನ್ನು ಲಗತ್ತಿಸಿ ಬೈಂಡ್ ಮಾಡಿಸಿ ಆ ಬಿಳಿ ಹಾಳೆಯಲ್ಲಿ ಟಿಪ್ಪಣಿಯನ್ನು ಬರೆದು ತಂದು ಪಾಠ ಮಾಡುವ ಅವರ ಪ್ರವೃತ್ತಿ ಆದರ್ಶಪ್ರಾಯವಾದುದು. ವಿಷಯಗಳ ಹಂಚಿಕೆಯ ಸಂದರ್ಭದಲ್ಲಿ ಯಾವುದೇ ಸಹೋದ್ಯೋಗಿ ಒಂದು ವಿಷಯ ಸ್ವೀಕಾರಕ್ಕೆ ಹಿಂದು-ಮುಂದು ನೋಡಿದರೆ ತಕ್ಷಣ ಗಣೇಶ ಅವರು "ಅದನ್ನು ನನಗೆ ಕೊಡಿ" ಎಂದು ಹೊಸ ವಿಷಯವಾದರೂ ಸ್ವೀಕರಿಸಿ ವಿದ್ಯಾರ್ಥಿಗಳು ಮೆಚ್ಚುವಂತೆ ಪಾಠ ಮಾಡುತ್ತಿದ್ದರು.

ಆಚಾರ್ಯ ಪಾಠ ಶಾಲಾ ಕಾಲೇಜಿನ ಭಾಷಾ ಅಧ್ಯಾಪಕರ ಕೊಠಡಿಯಲ್ಲಿ ಪ್ರೊ॥ ಕೊರಟಿ ಶ್ರೀನಿವಾಸರಾವ್, ಪ್ರೊ॥ ಟಿ. ಕೇಶವ ಭಟ್ಟ, ಪ್ರೊ॥ ಜಿ. ಅಬ್ದುಲ್ ಬಷೀರ್, ಪ್ರೊ॥ ಶ್ರೀಕಂಠಶಾಸ್ತ್ರಿ (ಹಿಂದಿ), ಡಾ॥ ತಿರುಪತಿರಾವ್ (ತೆಲುಗು), ಪ್ರೊ॥ ಎನ್. ಕೃಷ್ಣಮೂರ್ತಿ(ತಮಿಳು), ಪ್ರೊ॥ ಅತಿಸುಲ್‌ಹಕ್(ಉರ್ದು), ಪ್ರೊ॥ ಟಿ.ಕೆ. ಶ್ರೀನಿವಾಸ ಮೂರ್ತಿ(ಇಂಗ್ಲೀಷ್), ಪ್ರೊ॥ ಸಿ. ರಾಮನಾಥನ್ (ಸಂಸ್ಕೃತ), ಡಾ॥ ಅನಂತನರಸಿಂಹಾಚಾರ್ (ಸಂಸ್ಕೃತ) ಅವರೊಡನೆ ನಾನು ಮತ್ತು ಕೆ.ಆರ್. ಗಣೇಶ ಅವರು ಒಟ್ಟಿಗೆ ಕುಳಿತು ಕೊಳ್ಳುವ ಅವಕಾಶ ಕೆಲವು ವರ್ಷಗಳವರೆಗಿತ್ತು. ಆ ಸಂದರ್ಭದಲ್ಲಿ ಸಾಹಿತ್ಯ, ಇತಿಹಾಸ, ಭಾಷಾ ಬೆಳವಣಿಗೆಯ ಬಗ್ಗೆ ನಡೆಯುತ್ತಿದ್ದ ಚರ್ಚೆ, ವಿನೋದ, ಹೊರಹೊಮ್ಮುತ್ತಿದ್ದ ವಿಚಾರ ಲಹರಿಯಲ್ಲಿ ಡಾ॥ ಕೆ.ಆರ್. ಗಣೇಶ ಅವರು ಪ್ರಮುಖ ಪಾತ್ರವಹಿಸುತ್ತಿದ್ದರು. ಪ್ರೊ॥ ಎಂ.ಆರ್. ಲಕ್ಷ್ಮೀದೇವೀಯವರು ಚರ್ಚೆಯಲ್ಲಿ ಭಾಗವಹಿಸಲೆಂದೇ ನಮ್ಮ ಕೊಠಡಿಗೆ ಬಂದು ಕುಳಿತು ತಮ್ಮ ವಿದ್ವತ್ತಿನ ಧ್ವನಿಯನ್ನು ಕೂಡಿಸುತ್ತಿದ್ದರು. ಈ ಚರ್ಚೆ ಎಷ್ಟೋ ವೇಳೆ ಸಂಜೆ ಕಾಲೇಜಿನ ಅಧ್ಯಾಪಕರು ನಮ್ಮ ಕೊಠಡಿಯನ್ನು ಆಕ್ರಮಿಸಿಕೊಳ್ಳಲು ಬರುವ ತನಕ ಮುಂದುವರಿಯುತ್ತಿದ್ದುದುಂಟು. ಡಾ॥ ಕೆ.ಆರ್. ಗಣೇಶ ಅವರು ಎ.ಪಿ.ಎಸ್. ಸಂಜೆ ಕಾಲೇಜಿಗೆ ವರ್ಗಾವಣೆಗೊಂಡ ಮೇಲೂ ಸಾಹಿತ್ಯ ಚರ್ಚೆಗಾಗಿ ಹಗಲು ಕಾಲೇಜಿಗೆ ಬಂದು ನಮ್ಮೊಡನೆ ಸೇರುತ್ತಿದ್ದುದುಂಟು, ಡಾ॥ ಕೆ.ಆರ್. ಗಣೇಶ ಅವರ ವಿಚಾರ-ವಿವರಣೆ-ತರ್ಕ ತಲೆದೂಗಿಸುವಂತಿರುತ್ತಿತ್ತು.

ಒಂದು ಸಂದರ್ಭದಲ್ಲಿ ಆಡಳಿತಾತ್ಮಕ ಕಾರಣಗಳಿಗಾಗಿ ಸಂಜೆ ಕಾಲೇಜಿಗೆ ನನ್ನನ್ನು ಆಡಳಿತ ಮಂಡಲಿ ವರ್ಗಾಯಿಸಿತು.

---

* ೧೦೩೦, ಕೃಷ್ಣಧಾಮ, ೨೪ನೇ ಮುಖ್ಯರಸ್ತೆ, ಎಚ್.ಎಸ್.ಆರ್. ಲೇಔಟ್ ಸೆಕ್ಟಾರ್ ೧. ಬೆಂಗಳೂರು-೫೬೦೧೦೨.

ಆದರೆ ಆ ಸಂದರ್ಭದಲ್ಲಿ ವೈಯಕ್ತಿಕ ಕಾರಣಗಳಿಂದ ಸಂಜೆ ಕಾಲೇಜಿನಲ್ಲಿ ಕಾರ್ಯನಿರ್ವಹಣೆ ಮಾಡುವುದು ನನಗೆ ಅಸಾಧ್ಯವಾಗಿತ್ತು. ಆಡಳಿತ ಮಂಡಲಿಯ ಕಾರ್ಯದರ್ಶಿ ಶ್ರೀ ಎ.ಆರ್. ಆಚಾರ್ಯ ಅವರನ್ನು ಭೇಟಿ ಮಾಡಿ ನನ್ನ ವೈಯಕ್ತಿಕ ಸಮಸ್ಯೆಯನ್ನು ವಿವರಿಸಿ "ಹಿಂದಿನ ವರ್ಷಗಳಲ್ಲಿ ವರ್ಗಾವಣೆ ಮಾಡಿದ್ದರೆ ಒಪ್ಪಿಕೊಳ್ಳುತ್ತಿದ್ದೆ; ಮುಂದಿನ ವರ್ಷಗಳಲ್ಲಿ ಸಂಜೆ ಕಾಲೇಜಿಗೆ ವರ್ಗಾವಣೆ ಮಾಡಿದರೂ ಒಪ್ಪಿಕೊಳ್ಳುತ್ತೇನೆ. ಈ ವರ್ಷ ಅನನುಕೂಲವಾಗಿದೆ. ದಯವಿಟ್ಟು ವರ್ಗಾವಣೆಯನ್ನು ರದ್ದುಮಾಡಿ ಯಾವುದಾದರೊಂದು ಹಗಲು ಕಾಲೇಜಿನಲ್ಲಿ ಅಧ್ಯಾಪಕನಾಗಿ ಮುಂದುವರಿಯುವ ಹಾಗೆ ಅವಕಾಶ ಮಾಡಿ ಕೊಡಿ" ಎಂದು ವಿನಂತಿಸಿದೆ. ಸನ್ಮಾನ್ಯ ಕಾರ್ಯದರ್ಶಿ ಅವರು "ಒಮ್ಮೆ ನೀಡಿದ ಆದೇಶವನ್ನು ರದ್ದು ಮಾಡುವಂತಿಲ್ಲ. ವಿಶೇಷ ಸಂದರ್ಭವೆಂದು ಕೋರಿಕೆಯನ್ನು ಮರುಪರಿಶೀಲನೆ ಮಾಡಬೇಕಾದರೆ ಹಗಲು ಕಾಲೇಜಿನ ಕನ್ನಡ ಅಧ್ಯಾಪಕರೊಬ್ಬರು ಸಂಜೆ ಕಾಲೇಜಿಗೆ ವರ್ಗಾವಣೆಯನ್ನು ಬಯಸಿ ಪತ್ರವನ್ನು ಸಲ್ಲಿಸಿದರೆ ಅವರ ಸ್ಥಳಕ್ಕೆ ನಿಮ್ಮನ್ನು ನಿಯೋಜಿಸಲಾಗುತ್ತದೆ" ಎಂದು ತಕ್ಷಣವೇ ನನ್ನ ಕೋರಿಕೆಗೆ ಪರಿಹಾರ ಸೂತ್ರವನ್ನು ಸೂಚಿಸಿದರು. ಆಗ ನನ್ನ ನಿವೇದನೆಗೆ ಓಗೊಟ್ಟು ಸಹಕರಿಸಿ ಸಂಜೆ ಕಾಲೇಜಿಗೆ ತೆರಳಿ ನಾನು ಹಗಲು ಕಾಲೇಜಿನಲ್ಲಿ ಮುಂದುವರಿಯಲು ಅವಕಾಶ ಮಾಡಿಕೊಟ್ಟವರು–ಡಾ॥ ಕೆ.ಆರ್. ಗಣೇಶ.

ಡಾ॥ ಕೆ.ಆರ್. ಗಣೇಶ ಅವರದು ಶಾಂತ ಸ್ವಭಾವ; ಅವರು ಸಿಟ್ಟು ಮಾಡಿಕೊಂಡಿದ್ದನ್ನು ನಾನು ನೋಡಿಲ್ಲ. ಅವರು ಎಲ್ಲಕ್ಕೂ 'ಹೂಂ' ಗುಟ್ಟುವ 'ಹೌದಪ್ಪ' ಆಗಿರಲಿಲ್ಲ. ತಮ್ಮ ಅಭಿಪ್ರಾಯಗಳನ್ನು ಧೈರ್ಯದಿಂದ ಮಂಡಿಸುವರು; ಅದೇ ಸರಿ–ಅದೇ ಸಾಧಿತವಾಗಬೇಕೆಂಬ ಹಟ ಅವರಲ್ಲಿರಲಿಲ್ಲ. ಅವರು ಕೆಲಸವನ್ನು ಮಾಡಲು ಎಂದೂ ಹಿಂದೆಗೆದವರಲ್ಲ. ನಾನು ಪ್ರಾಂಶುಪಾಲನಾಗಿರುವ ಸಂದರ್ಭದಲ್ಲಿ ಅವರು ನಿವೃತ್ತಿಯ ಅಂಚಿಗೆ ತಲುಪಿದ್ದರು. ಆ ಸಂದರ್ಭದಲ್ಲಿ ಒಂದು ಸಮಿತಿಯ ಸಭೆ ನಡೆಯಿತು. ಡಾ॥ ಕೆ.ಆರ್. ಗಣೇಶ ಅವರು ಆ ಸಮಿತಿಯ ಸದಸ್ಯರಾಗಿರಲಿಲ್ಲ. ಒಂದು ಗುರುತರವಾದ ಕಾರ್ಯ ಸಕಾಲದಲ್ಲಿ ನಡೆಯಬೇಕಾಗಿದ್ದು ಅದನ್ನು ಯಾರಿಗೆ ವಹಿಸಬೇಕೆಂಬುದರ ಬಗ್ಗೆ ಸಭೆಯಲ್ಲಿ ಚರ್ಚೆ ನಡೆದು ಸಮಿತಿಯ ಸದಸ್ಯರಲ್ಲಿ ಯಾರೊಬ್ಬರೂ ಆ ಕಾರ್ಯವನ್ನು ಹೆಗಲಿಗೇರಿಸಿಕೊಳ್ಳಲು ಮನಸ್ಸು ಮಾಡದೆ ಆ ಕಾರ್ಯವನ್ನು ಡಾ॥ ಕೆ.ಆರ್. ಗಣೇಶ ಅವರಿಗೆ ವಹಿಸಬಹುದೆಂಬ ಸೂಚನೆ ಬಂದಿತು, ಪ್ರಿನ್ಸಿಪಾಲನಾಗಿದ್ದ ನಾನು, " ಡಾ॥ ಕೆ.ಆರ್. ಗಣೇಶ ಅವರು ಕಾಲೇಜಿಗೆ ಸೇರಿದಾಗಿನಿಂದ ಗುರುತರ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ. ನಿವೃತ್ತಿಯ ಅಂಚಿನಲ್ಲಿರುವ (ಅವರು ನಿವೃತ್ತರಾಗಲು ಒಂದು ತಿಂಗಳ ಅವಧಿ ಮಾತ್ರ ಇದ್ದಿತು) ಅವರಿಗೆ ಈ ಕೆಲಸವನ್ನು ಒಪ್ಪಿಸುವುದು ಬೇಡ. ಸಮಿತಿಯ ಸದಸ್ಯರಲ್ಲಿಯೇ ಒಬ್ಬರು ಇಬ್ಬರು ಸ್ವಯಂ ಪ್ರೇರಣೆಯಿಂದ ಆ ಜವಾಬ್ದಾರಿಯನ್ನು ಕೈಗೊಳ್ಳುವುದು ಸೂಕ್ತ" ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸಿದೆ. ಸಭೆ ಒಪ್ಪಿ ಒಬ್ಬರನ್ನು ಆಯ್ಕೆ ಮಾಡಿತು. ಮಾರನೆಯ ದಿನ ಹಿಂದಿನ ದಿನದ ಸಭೆಯಲ್ಲಿ ನಡೆದ ಚರ್ಚೆ–ನಿರ್ಧಾರ–ನಡವಳಿಕೆಯ ಸಾರ ಡಾ॥ ಕೆ.ಆರ್. ಗಣೇಶ ಅವರ ಕಿವಿಗೆ ಬಿದ್ದಿತು. ಅವರು ನನ್ನ ಬಳಿಗೆ ಬಂದು "ನಾನು ನಿವೃತ್ತನಾದ ಮೇಲೆ ನೀವು ಯಾವ ಕೆಲಸವನ್ನು ವಹಿಸುವಂತಿಲ್ಲ, ನಾನು ನಿವೃತ್ತಿಯಾಗಲು ಸಾಕಷ್ಟು ಅವಧಿ ಇದೆ. ನಿವೃತ್ತನಾಗುವುದರೊಳಗಾಗಿ ಆ ಕಾರ್ಯವನ್ನು ಮಾಡಿ ಕೊಡುತ್ತೇನೆ. ಆ ಕೆಲಸವನ್ನು ನನಗೆ ವಹಿಸಿ" ಎಂದು ಒತ್ತಾಯ ಮಾಡಿ ಸ್ವೀಕರಿಸಿ ಆ ಗುರುತರ ಕಾರ್ಯವನ್ನು ಅಚ್ಚುಕಟ್ಟಾಗಿ ಮಾಡಿಕೊಟ್ಟವರು – ಡಾ॥ ಕೆ.ಆರ್.ಜಿ. ಇವರು ಕಷ್ಟ ಪಟ್ಟು ಕೆಲಸವನ್ನು ಮಾಡುವ ಅಭ್ಯಾಸವನ್ನು ಮೊದಲಿನಿಂದ ರೂಢಿಸಿಕೊಂಡಿದ್ದು, ಈಗಲೂ ಅದೇ ಉತ್ಸಾಹ, ಸಂಭ್ರಮ, ಕಾರ್ಯ ತತ್ಪರತೆಯ ಶಕ್ತಿಯನ್ನು ಕಾಪಾಡಿ ಕೊಂಡಿದ್ದಾರೆ. ಒಂದು ಕಾಲೇಜಿನಲ್ಲಿ ಕನಿಷ್ಠ ಪಕ್ಷ ೨೦% – ೩೦% ರಷ್ಟು ಅಧ್ಯಾಪಕರು/ಸಿಬ್ಬಂದಿಯವರು ಈ ಬಗೆಯ ಕಾರ್ಯ ತತ್ಪರತೆಯನ್ನು ಹೊಂದಿದವರಿದ್ದರೆ ಸಾಕು, ಆ ಸಂಸ್ಥೆ ಶ್ರೇಯೋಭಿವೃದ್ಧಿಯನ್ನು ಸಾಧಿಸಬಹುದು.

ಡಾ॥ ಕೆ.ಆರ್. ಗಣೇಶ ಅವರಲ್ಲಿ ಅನೇಕ ಅನುಸರಣೀಯ ಗುಣಗಳಿವೆ. ಶಿಷ್ಯ ವಾತ್ಸಲ್ಯ, ಸಮಯ ಪರಿಪಾಲನೆ, ಶಿಸ್ತು, ಸಂಯಮ, ಆತ್ಮಗೌರವ, ಘನತೆಯ ನಡವಳಿಕೆ, ಬೆಣ್ಣೆ ಹಚ್ಚದ ಪ್ರವೃತ್ತಿ, ಅಧಿಕಾರದ ಬಗ್ಗೆ ನಿರ್ಲಿಪ್ತಿ, ಮಾತಾಪಿತೃಸೇವೆ, ತೀಕ್ಷ್ಣ ಬುದ್ಧಿಶಕ್ತಿ, ವಿದ್ವತ್ತು, ಸಹೋದ್ಯೋಗಿಗಳಲ್ಲಿ ವಿಶ್ವಾಸ, ದುಡಿಮೆಯಲ್ಲಿ ಉತ್ಸಾಹವೇ ಮೊದಲಾದ ಗುಣಗಳನ್ನು ನಾನು ಗುರುತಿಸಿದ್ದೇನೆ. ಇವರು ನೂರೊಂದು ವಸಂತಗಳನ್ನು ಆರೋಗ್ಯಪೂರ್ಣವಾಗಿ ಮುಂದುವರಿಸುವಂತಾಗಲೆಂದು ಹಾರೈಸುತ್ತೇನೆ.

****

# ನಮ್ಮ ಗಣೇಶ ಮೇಷ್ಟ್ರು

* ಡಾ. ಬಿ.ಆರ್. ಸತ್ಯನಾರಾಯಣ

೧೯೯೮ರಲ್ಲಿ ನಾನು ಉದ್ಯೋಗಾರ್ಥಿಯಾಗಿ ಬೆಂಗಳೂರಿಗೆ ಬಂದೆ. ಸಂಜೆ ವೇಳೆ ಕಳೆಯಲು, ಜೊತೆಗೆ ಮುಕ್ತ ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ಮಾಡುತ್ತಿದ್ದುದರಿಂದ ಉಪಯೋಗವಾಗಬಹುದೆಂದು ಕನ್ನಡ ಸಾಹಿತ್ಯ ಪರಿಷತ್ತು ನಡೆಸುತ್ತಿದ್ದ ಶಾಸನಶಾಸ್ತ್ರ ಪ್ರವೇಶ ತರಗತಿಗೆ ಸೇರಿಕೊಂಡಿದ್ದೆ. ಮೊದಲ ವರ್ಷ ಕಳೆದು ಪ್ರೌಢ ತರಗತಿಗಳು ಆರಂಭವಾಗುವಷ್ಟರ ಹೊತ್ತಿಗೆ ನಾನು ಸಾಯಂಕಾಲದ ವೇಳೆ ಕರ್ತವ್ಯ ನಿರ್ವಹಿಸಬೇಕಾಗಿದ್ದರಿಂದ, ಆರಂಭದ ತರಗತಿಗಳಿಗೆ ಹೋಗಲಾಗಲೇ ಇಲ್ಲ. ಶಾಸನಶಾಸ್ತ್ರ ತರಗತಿಗಳಲ್ಲಿ ನಡೆಯುತ್ತಿದ್ದ ಕರ್ನಾಟಕ ಸಾಂಸ್ಕೃತಿಕ ಇತಿಹಾಸದ ಬಗೆಗಿನ ಚರ್ಚೆಗಳು ನನ್ನ ಆ ಕಡೆಗೆ ಎಳೆಯುತ್ತಲೇ ಇದ್ದವು. ಒಂದು ದಿನ ನನ್ನ ಸಹದ್ಯೋಗಿಯನ್ನು ಹೇಗೋ ಒಪ್ಪಿಸಿ ತರಗತಿಗೆ ನಡೆದೇ ಬಿಟ್ಟೆ. ಇನ್ನೂ ಮೆಟ್ಟಿಲು ಹತ್ತುತ್ತಿರುವಾಗಲೇ ಹಳಗನ್ನಡ ಪದ್ಯವೊಂದರ ಸಾಲುಗಳು ಕಿವಿಗಪ್ಪಳಿಸುತ್ತಿದ್ದವು. ಧ್ವನಿ ಹೊಸದಾಗಿತ್ತು ಅಂದರೆ ಪ್ರವೇಶ ತರಗತಿಗಳಲ್ಲಿ ಇದ್ದ ಮೇಷ್ಟ್ರು ಇವರಾಗಿರಲಿಲ್ಲ. ಮುಂದುವರೆದು ಬಾಗಿಲಲ್ಲಿ ನಿಂತಾಗ, ನಾನು ಒಳ ಬರಲೇ ಎಂದು ಕೇಳುವಷ್ಟರಲ್ಲಿ 'ಬನ್ನಿ ಬನ್ನಿ' ಎಂದು ಕುಳಿತುಕೊಳ್ಳಲು ಜಾಗ ತೋರಿಸಿ ಮತ್ತೆ ಪಾಠ ಮಾಡುತ್ತಿದ್ದ ಪದ್ಯಗಳಲ್ಲಿ ಮುಳುಗಿದರು. ಪದ್ಯಗಳನ್ನು ಅವರು ಓದುತ್ತಿದ್ದ ರೀತಿಯೇ ನನ್ನನ್ನು ಮಂತ್ರಮುಗ್ಧನನ್ನಾಗಿಸಿತ್ತು. ಅತ್ಯಂತ ಸ್ಪಷ್ಟವಾಗಿ, ಪದ್ಯವನ್ನು ಓದಿ, ಬಿಡಿಸಿ ಓದಿ, ಅರ್ಥೈಸಿ, ಅನ್ವಯಿಸಿ ಅವರು ಅದ್ಭುತವಾಗಿ ಪಾಠ ಮಾಡುತ್ತಿದ್ದರು. ಒಂದು ಗಂಟೆಯ ಕಾಲ ಕಳೆದಿದ್ದೇ ಗೊತ್ತಾಗಲಿಲ್ಲ. ನನ್ನ ಹೆಸರು ಕೇಳಿ ಅಟೆಂಡೆನ್ಸ್ ರಿಜಿಸ್ಟರಿನಲ್ಲಿ ಹೆಸರು ಬರೆದುಕೊಂಡರು ಮೇಷ್ಟ್ರು.

ಸೊಗಸಾದ ಹಳಗನ್ನಡ ಪಾಠವನ್ನು ನಾನು ಮೊದಲ ಬಾರಿಗೆ ಕೇಳಿದ್ದೆ. ತರಗತಿಯ ನಂತರ, ಪಾಠ ಮಾಡಿದ ಮೇಷ್ಟ್ರು ಡಾ.ಕೆ.ಆರ್.ಗಣೇಶ ಅವರೆಂತಲೂ, ಅವರು ಮಾಡುತ್ತಿದ್ದುದು ಬೊಪ್ಪಣನ ಗೊಮ್ಮಟಸ್ತುತಿಯೆಂತಲೂ ನನಗೆ ತಿಳಿಯಿತು. ಹೀಗೆ ನನ್ನ ಮತ್ತು ಮೇಷ್ಟ್ರ ಮುಖಾಮುಖಿಯಾಯಿತು. ಅಂದಿನಿಂದ ನಾನು ಹಠ ಹಿಡಿದು ನನ್ನ ಕೆಲಸದ ಅವಧಿಯನ್ನು ಬದಲಾಯಿಸಿಕೊಂಡು ತರಗತಿಗಳಿಗೆ ಹಾಜರಾಗತೊಡಗಿದೆ. ಗಣೇಶ ಮೇಷ್ಟ್ರು 'ನಮ್ಮ ಮೇಷ್ಟ್ರು' ಆಗಿದ್ದರು! ಪ್ರೌಢ ತರಗತಿಯಲ್ಲಿ ಮೇಷ್ಟ್ರ ಜೊತೆಯಲ್ಲಿ ಎರಡು ಬಾರಿ ಪ್ರವಾಸ ಹೋಗಿಬರುವ ಅವಕಾಶ ನನಗೆ ಲಭಿಸಿತು. ಒಮ್ಮೆ ಶ್ರವಣಬೆಳಗೊಳಕ್ಕೆ ಹೋಗಿಬಂದೆವು. ಎರಡನೆಯ ಬಾರಿ ಹತ್ತು ದಿನಗಳ ಭರ್ತಿ ಪ್ರವಾಸದಲ್ಲಿ ಅರಳಗುಪ್ಪೆ, ಅರಸೀಕೆರೆ, ಹೊಂಬುಜ್ಜ, ಇಕ್ಕೇರಿ, ಕೆಳದಿ, ಕೋಟಿಪುರ, ಬನವಾಸಿ, ಹಾನಗಲ್ಲು, ಗದಗ, ಬದಾಮಿ, ಪಟ್ಟದಕಲ್ಲು, ಐಹೊಳೆ, ಮಹಾಕೂಟ ಎಲ್ಲವನ್ನೂ ಅಧ್ಯಯನದ ದೃಷ್ಟಿಯಿಂದ ನೋಡುವ ಅವಕಾಶ ನನ್ನದಾಯಿತು. ಆಗ ಗಣೇಶ ಮೇಷ್ಟ್ರ ನಿಜವಾದ ವಿದ್ವತ್ತು, ಅವರೊಳಗಿನ ಅತ್ಯಂತ ಯಶಸ್ವೀ ಶಿಕ್ಷಕ, ಅವರ ಪ್ರತಿಭೆ, ವಿಶಾಲವಾದ ಕಾರ್ಯಕ್ಷೇತ್ರ ಅನುಭವ ಎಲ್ಲವೂ ನನಗೆ ಮನದಟ್ಟಾಯಿತು.

ಪ್ರೌಢ ತರಗತಿಗಳು ಮುಗಿಯುವಷ್ಟರಲ್ಲಿ, ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಹಸ್ತಪ್ರತಿ ತರಗತಿಗಳು ನಡೆಯುತ್ತವೆ ಎಂದು, ಅಲ್ಲಿಯೂ ಗಣೇಶ ಮೇಷ್ಟ್ರು ಪಾಠ ಮಾಡುತ್ತಾರೆಂದು ತಿಳಿದು, ಹೋಗಿ ಸೇರಿಕೊಂಡೆ. ಅಲ್ಲಿಯೂ ಅಷ್ಟೆ ಕನ್ನಡ ಕಾವ್ಯ ಛಂದಸ್ಸು ಪಾಠ ಕೇಳುವ ಸೌಭಾಗ್ಯ ಸಿಕ್ಕಿತು. ಹಸ್ತಪ್ರತಿ ತರಗತಿಗಳು ಮುಗಿಯುವಷ್ಟರಲ್ಲಿ, ಪ್ರತಿಷ್ಠಾನದಲ್ಲೇ 'ಸಿರಿಕಂಟ' ಕಾವ್ಯಾಸಕ್ತರ ಕೂಟದ ರಚನೆಯಾಯಿತು. ನಾನು ಸಂಚಾಲಕನಾಗಿದ್ದೆ. ಸಿರಿಕಂಟದ ಆಶ್ರಯದಲ್ಲಿ ಹಳಗನ್ನಡ ಕಾವ್ಯಾಭ್ಯಾಸ ಶಿಬಿರಗಳನ್ನು ನಡೆಸುತ್ತಿದ್ದೆವು. ಗಣೇಶ ಮೇಷ್ಟ್ರ ಮಾರ್ಗದರ್ಶನ ಅದಕ್ಕಿತ್ತು. ಕನ್ನಡ ಸಾಹಿತ್ಯದ ಆಳಕ್ಕಿಳಿಯಲು ನನಗೆ ನೆರವಾಗಿದ್ದೇ ಆ ತರಗತಿಗಳು. ಆ ವರ್ಷವೂ ಮೇಷ್ಟ್ರ ಮಾರ್ಗದರ್ಶನದಲ್ಲಿ ಕರ್ನಾಟಕದ ಹಲವಾರು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಮಹತ್ವದ ಸ್ಥಳಗಳನ್ನು ಸಂದರ್ಶಿಸುವ ಸೌಭಾಗ್ಯ ನನ್ನದಾಗಿತ್ತು.

---

* ನಂ. ೪೯, "ಈಕ್ಷಿತಾ" ೨ನೆಯ ಮುಖ್ಯರಸ್ತೆ, ಮಂಜುನಾಥನಗರ, ಬನಶಂಕರಿ ೩ನೆಯ ಹಂತ, ಇಟ್ಟಮಡು, ಬೆಂಗಳೂರು – ೫೬೦೦೮೫. ದೂ: ೦ ೯೫೩೫೫ ೭೦೭೪೮ ಈಮೇಲ್: satya_nbr@yahoo.com

ಆ ನಡುವೆ ನನ್ನ ಕನ್ನಡ ಎಂ.ಎ. ಮುಗಿದಿತ್ತು. ಕನ್ನಡ ಛಂದಸ್ಸಿಗೆ ನಾನು ಮಾಡಿಕೊಂಡಿದ್ದ ನೋಟ್ಸುಗಳನ್ನು ಸ್ವಲ್ಪ ವಿಸ್ತರಿಸಿ ಪುಸ್ತಕರೂಪಕ್ಕೆ ತಂದಿದ್ದೆ. ಅದನ್ನು ಪ್ರಕಟಿಸಲು ಸುಮುಖ ಪ್ರಕಾಶನದವರು ಮುಂದೆ ಬಂದಿದ್ದರು. ಆಗ ನಾನು ಅದನ್ನು ಮೇಷ್ಟ್ರ ಗಮನಕ್ಕೆ ತಂದೆ. ಅವರು ಅದನ್ನೊಮ್ಮೆ ಇಡಿಯಾಗಿ ಓದಿ, ತಿದ್ದಿ, ಚೊಕ್ಕದಾದ ಮುನ್ನುಡಿಯನ್ನೂ ಬರೆದು ನನ್ನನ್ನು ಆಶೀರ್ವದಿಸಿದ್ದರು. ಹಾಸನದಲ್ಲಿ ನನ್ನ ಮದುವೆ ನಡೆಯುವುದಿತ್ತು. ಅಷ್ಟು ದೂರ ಬರುತ್ತಾರೊ ಇಲ್ಲವೊ ಎಂಬ ಅನುಮಾನದಿಂದಲೇ ಮದುವೆಗೆ ಆಹ್ವಾನವಿತ್ತಿದ್ದೆ. ಆಶ್ಚರ್ಯವೆಂದರೆ, ಮದುವೆಯ ದಿನ ಬೆಳಗ್ಗೆ ಅವರು ನನ್ನೆದುರಿಗೆ ಪ್ರತ್ಯಕ್ಷವಾಗಿದ್ದರು. ನಾನಾಗ ಮದುವೆ ಗಂಡಿನ ವೇಷದಲ್ಲಿದ್ದು, ವಾದ್ಯದವರ ಹಿಂದೆ, ಬಂಧು-ಬಳಗದವರ ಸ್ನೇಹಿತರ ನಡುವೆ ನಡೆದುಕೊಂಡು ಛತ್ರ ಪ್ರವೇಶ ಮಾಡುವುದರಲ್ಲಿದ್ದೆ. ಮೇಷ್ಟ್ರನ್ನು ನೋಡಿ ನಾನು, ತಕ್ಷಣ ಎಲ್ಲದರಿಂದ ಬಿಡಿಸಿಕೊಂಡು ಒಬ್ಬರೇ ನಿಂತಿದ್ದ ಅವರನ್ನು ಮಾತನಾಡಿಸಲು ಓಡಿದೆ. ನಾನು ಹಾಗೆ ಓಡಿದ್ದನ್ನು ಕಂಡು ಅಲ್ಲಿದ್ದವರೆಲ್ಲಾ ಸ್ವಲ್ಪ ಗೊಂದಲಕ್ಕೀಡಾಗಿಬಿಟ್ಟಿದ್ದರು. ಅದು ಮೇಷ್ಟ್ರ ಗಮನಕ್ಕೂ ಬಂದಿತ್ತು. ತಕ್ಷಣ, ಅವರೇ ಮುಂದೆ ಬಂದು, 'ನೀವು ಹೋಗಿ, ಅವರ ಜೊತೆ ನಿಲ್ಲಿ. ನಾನು ಒಬ್ಬನೇ ಇದ್ದರೂ ನನಗೇನೂ ಯೋಚನೆಯಿಲ್ಲ. ಇನ್ನೇನು ಉಳಿದವರು ಬಂದುಬಿಡುತ್ತಾರೆ' ಎಂದು ನನ್ನನ್ನು ಹಿಂದಕ್ಕೆ ಓಡಿಸಿಬಿಟ್ಟಿದ್ದರು!

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಹತ್ತಿದ್ದ ಹಳಗನ್ನಡ ಕಾವ್ಯದ ರುಚಿಯನ್ನು ಕಳೆದುಕೊಳ್ಳಲು ನಾನು ಸಿದ್ಧನಿರಲಿಲ್ಲ. ಆಗ ನಾನು ಹಿರಿಯರಾದ ಜಿ.ಎಸ್.ಎಸ್.ರಾವ್, ಸಂಧ್ಯಾ ಮೇಡಂ, ಮನೋಜ್ ಅವರನ್ನು ಸೇರಿಸಿಕೊಂಡು ಕುವೆಂಪು ಅವರ ಶ್ರೀ ರಾಮಾಯಣ ದರ್ಶನಂ ಕಾವ್ಯವನ್ನು ಮೇಷ್ಟ್ರ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡುವ ಕಾರ್ಯತಂತ್ರವನ್ನು ರೂಪಿಸಿದೆ. ಅದು ಮನೋಜ್ ಅವರ ಮನೆಯಲ್ಲಿ ಕಾರ್ಯಗತವಾಯಿತು. ನನ್ನ ಶ್ರೀಮತಿ ಶ್ವೇತಾ ಮತ್ತು ಮನೋಜ್ ಅವರ ಶ್ರೀಮತಿ ರಂಜಿತಾ ನಮ್ಮ ಗುಂಪಿಗೆ ಸೇರಿಕೊಂಡರು. ಐದು ತಿಂಗಳ ನನ್ನ ಮಗಳನ್ನು ನಡುವೆ ಮಲಗಿಸಿಕೊಂಡು ನಾವು ಸುತ್ತಲು ಕುಳಿತು ಕಾವ್ಯವನ್ನು ಓದಿ ನಮಗೆ ತೋಚಿದಂತೆ ಅರ್ಥೈಸುತ್ತಿದ್ದೆವು. ಮಾರ್ಗದರ್ಶಕರಾಗಿದ್ದ ಮೇಷ್ಟ್ರು ನಮ್ಮನ್ನು ತಿದ್ದುತ್ತಿದ್ದರು. ನಮ್ಮ ತಂಡದ ಯಾರೇ ತಪ್ಪು ಹೇಳಿದರೂ, ಅದನ್ನು ತಪ್ಪು ಎನ್ನದೆ, ಅದೂ ಒಂದು ರೀತಿಯಲ್ಲಿ ಸರಿ ಎಂದು ಹೇಳಿ, ನಂತರ ಅವರೇ ಅದನ್ನು ವಿವರಿಸುತ್ತಿದ್ದರು. ಅವರು ಕಾವ್ಯವನ್ನು ಓದುವ ರೀತಿ, ಪದವಿಭಾಗ, ಅನ್ವಯ, ಸ್ವಾರಸ್ಯ ಮೊದಲಾದವನ್ನು ಸ...ನವಾಗಿ ಕಲಿಸಿದರು. ಆದರೆ ಅವರು ಅದನ್ನು ನಮಗೆ ಕಲಿಸುತ್ತಿದ್ದೇ.. ಎಂದು ಯಾವತ್ತೂ ಹೇಳಲಿಲ್ಲ. ನಮಗೂ ಹಾಗೆ ಅನ್ನಿಸಲಿಲ್ಲ. ಆದರೆ ನಮಗೆ ಆಶ್ಚರ್ಯವಾಗುವ ರೀತಿಯಲ್ಲಿ ನಾವು ಅದನ್ನು ಕಲಿಯುತ್ತಿದ್ದೆವು.

ರಾಮಾಯಣ ದರ್ಶನಂ ತರಗತಿಯಲ್ಲಿದ್ದ ನಾವು ಆರೂ ಜನರು ಮೇಷ್ಟ್ರ ಮಾರ್ಗದರ್ಶನದಲ್ಲಿ ಭುವನೇಶ್ವರ, ಪುರಿ, ಕೊನಾರ್ಕ್ ಮೊದಲಾದ ಕಡೆ ಒಂದು ಪ್ರವಾಸ ಮಾಡಿ ಬಂದೆವು. ತರಗತಿಗಳು ವಾರಕ್ಕೆ ಒಂದು ದಿನ ನಡೆಯುತ್ತಿದ್ದವು. ಅದರ ನಡುವೆ, ಹಿರಿಯರಾದ ಜಿ.ಎಸ್.ಎಸ್. ರಾವ್ ಅವರ ಆರೋಗ್ಯದಲ್ಲಿ ಏರುಪೇರಾದಾಗ, ಅವರು ಹುಷಾರಾದ ಮೇಲೆ ಅವರ ಮನೆಯಲ್ಲೇ ತರಗತಿಗಳು ನಡೆಯಲಾರಂಭಿಸಿದವು. ಸುಮಾರು ಮೂರೂವರೆ ವರ್ಷಗಳ ಕಾಲ, ವಾರಕ್ಕೆ ಒಂದು ದಿನ, ಒಂದು-ಒಂದೂವರೆ ಗಂಟೆಗಳ ಕಾಲ ನಮ್ಮ ಕಾವ್ಯಾಧ್ಯಯನ ನಡೆದು ಯಶಸ್ವಿಯಾಗಿ ಮುಗಿಯಿತು! ಎಷ್ಟೋ ದಿನಗಳು, ಅವರು ಬರುವಾಗಲೇ, ಬಿಸಿಬಿಸಿ ಬನ್ ಅಥವಾ ಪ್ಲೇನ್ ಕೇಕ್ ಅಥವಾ ಕಡ್ಲೆಬೀಜವನ್ನೂ ತರುತ್ತಿದ್ದರು. ಅದನ್ನು ನಮಗೆ ಕೊಟ್ಟು,ನಾವು ತಿಂದು ಮುಗಿಸಿದ ಮೇಲೆಯೇ ತರಗತಿಗಳು ಆರಂಭವಾಗುತ್ತಿದ್ದವು. ಆಗಾಗ ನನ್ನ ಮಗಳಿಗೆ ಚಾಕೊಲೇಟ್ ಸಹ ಇರುತ್ತಿತ್ತು. ಅದರ ನಡುವೆಯೇ ನನ್ನ ಶ್ರೀಮತಿ ಮುಕ್ತವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ಮಾಡುತ್ತಿದ್ದಳು. ಅದಕ್ಕೂ ಮೇಷ್ಟ್ರು ಆಗಾಗ ಸಲಹೆ ಸೂಚನೆಗಳನ್ನು ಕೊಡುತ್ತಿದ್ದರು. ಕೆಲವೊಮ್ಮೆ ನಮ್ಮ ಮನೆಗೇ ಬಂದು ಕಾವ್ಯಮೀಮಾಂಸೆ, ಭಾಷಾಚರಿತ್ರೆ ಪಾಠ ಮಾಡಿ, ನನ್ನ ಮಗಳೊಂದಿಗೆ ಸ್ವಲ್ಪ ಹೊತ್ತು ಆಟವಾಡಿ ಹೋಗುತ್ತಿದ್ದರು. ಆದ್ದರಿಂದ ನನ್ನ ಮಗಳಿಗೆ ಅವರು 'ಮೇಷ್ಟ್ರುತಾತ' ಆಗಿದ್ದರು.

ನನ್ನ ಪಿಹೆಚ್.ಡಿ. ಅಧ್ಯಯನ ಆರಂಭವಾದಾಗ ನಾನು ಅವರ ಸಲಹೆಗಳನ್ನು ಕೇಳುತ್ತಿದ್ದೆ. ನಾನು ಕೇಳುತ್ತಿದ್ದ ಎಲ್ಲ ಅನುಮಾನಗಳಿಗೆ ಉತ್ತರಿಸುತ್ತಿದ್ದರೂ, ತೀರ್ಮಾನಗಳನ್ನು ನನಗೆ ಬಿಡುತ್ತಿದ್ದರು. ನನ್ನ ಮಹಾಪ್ರಬಂಧ ಅಂತಿಮವಾಗುತ್ತಿದ್ದಾಗಲೇ, ನನ್ನ ಮನೆಯೂ ನಿರ್ಮಾಣವಾಗುತ್ತಿತ್ತು. ನನ್ನ ಬರವಣಿಗೆಯನ್ನು ಅವರಿಗೊಮ್ಮೆ ತೋರಿಸಿ ಅಭಿಪ್ರಾಯ ಪಡೆಯುತ್ತಿದ್ದೆ. ಮಹಾಪ್ರಬಂದವನ್ನು ತಿದ್ದುವಲ್ಲಿ ಅವರ ಸಹಕಾರವನ್ನು ವರ್ಣಿಸಲಸಾಧ್ಯ. ಸ್ವತಃ ಅವರೇ ನನ್ನ ಕಾಲೇಜಿನ ಬಳಿ ಬಂದು,

ನನ್ನ ಗ್ರಂಥಾಲಯದಲ್ಲಿ ಕುಳಿತು, ಪ್ರೂಫ್ ನೋಡಿಕೊಡುತ್ತಿದ್ದರು. ಪ್ರೂಫ್ ನೋಡುವಾಗಲೇ ಅವರಿಗಾದ ಸಂದೇಹಗಳನ್ನು ಒಂದು ಹಾಳೆಯಲ್ಲಿ ಬರೆದು, ಇವುಗಳ ಕಡೆಗೆ ಗಮನ ಹರಿಸಿ ಎಂದು ನನಗೆ ಕೊಡುತ್ತಿದ್ದರು. ಅವರ ಸಂಗ್ರಹದ ಹಲವಾರು ಅಪರೂಪದ ಪುಸ್ತಕಗಳನ್ನು ನನಗೆ ತಂದುಕೊಟ್ಟು, ನಾನು ಗ್ರಂಥಾಲಯಗಳಿಗೆ ಅಲೆಯುವ ಶ್ರಮವನ್ನೂ ತಪ್ಪಿಸಿದ್ದರು. ಅವರ ಶಿಶ್ಯವಾತ್ಸಲ್ಯದಿಂದ ನಾನು ನನ್ನ ಪಿಹೆಚ್.ಡಿ. ಅಧ್ಯಯನವನ್ನು ಯಶಸ್ವಿಯಾಗಿ ಮುಗಿಸಿದೆ. ಅದು ಮುಂದೆ ಪುಸ್ತಕ ರೂಪದಲ್ಲಿ ಪ್ರಕಟವಾದಾಗ, ನನ್ನ ಇನ್ನೊಬ್ಬ ಮೇಷ್ಟ್ರು, ಮಾರ್ಗದರ್ಶಕರೂ ಆದ ಡಾ. ದೇವರಕೊಂಡಾರೆಡ್ಡಿ ಮತ್ತು ಡಾ. ಕೆ.ಆರ್. ಗಣೇಶ ಅವರಿಗೆ ಗೌರವಪೂರ್ವಕವಾಗಿ ಅರ್ಪಣೆ ಮಾಡಿದ್ದೆ.

ರಾಮಾಯಣದರ್ಶನಂ ಮುಗಿದ ಮೇಲೆ ಪಂಪಭಾರತವನ್ನು ನಮ್ಮ ತಂಡ ಅಧ್ಯಯನಕ್ಕೆ ಆರಿಸಿಕೊಂಡಿತು. ಗಣೇಶ ಮೇಷ್ಟ್ರು ಪಂಪನ, ಹಾಗೂ ಅವನ ಕಾವ್ಯದ ಗುಣಾವಗುಣಗಳನ್ನೆಲ್ಲಾ ಸರ್ವ ಆಯಾಮಗಳಿಂದ ನಮಗೆ ಬಿಡಿಸಿಟ್ಟಿದ್ದರು. ಅಧ್ಯಯನದಲ್ಲಿ ಅವರ ಶ್ರದ್ಧೆ, ಶಿಷ್ಯಂದಿರಾದ ನಮಗೇ ನಾಚಿಕೆ ಮೂಡಿಸುವಂತಿತ್ತು! ಇಡೀ ಪಂಪಭಾರತದ ಪುಸ್ತಕವನ್ನು ಬಿಚ್ಚಿ, ಪ್ರತಿ ಹಾಳೆಯ ನಡುವೆ ಒಂದು ಬಿಳಿ ಹಾಳೆಯನ್ನು ಇಟ್ಟು ಮತ್ತೆ ಬೈಂಡ್ ಮಾಡಿಸಿದ್ದರು. ಹಲವಾರು ಹಳಗನ್ನಡದ ಕಾವ್ಯಗಳನ್ನು ಅವರು ಅದೇ ರೀತಿ ರೀ–ಬೈಂಡ್ ಮಾಡಿಸಿ ಇಟ್ಟುಕೊಂಡಿದ್ದರು. ಪ್ರತಿ ಪದ್ಯವನ್ನು ಓದಿ, ಅರ್ಥೈಸಿ, ಅನ್ವಯಿಸಿರುತ್ತಿದ್ದರು. ತಮ್ಮ ಅನುಮಾನಗಳನ್ನು ಬಿಳಿ ಹಾಳೆಯಲ್ಲಿ ಬರೆದಿರುತ್ತಿದ್ದರು. ಛಂದಸ್ಸು, ಅಲಂಕಾರ, ವಿಶೇಷ ಯಾವುದನ್ನೂ ಅವರು ನಿರ್ಲಕ್ಷ್ಯ ಮಾಡುತ್ತಿರಲಿಲ್ಲ. ನಿಜವಾಗಿಯೂ ಹಳಗನ್ನಡದ ಅಧ್ಯಯನಕ್ಕೆ ಒಂದು ಮಾದರಿ ಎಂದರೆ ಅದು 'ನಮ್ಮ ಮೇಷ್ಟ್ರು' ಮಾತ್ರ. ಪಂಪಭಾರತ ಮುಗಿಯುತ್ತಿದ್ದಂತೆ, ಅವರೇ ಹರಿಶ್ಚಂದ್ರಕಾವ್ಯವನ್ನು ಸೂಚಿಸಿ ಅಧ್ಯಯನವನ್ನು ಮುಂದುವರೆಸುವಂತೆ ನಮ್ಮನ್ನು ಪ್ರೇರೇಪಿಸಿದ್ದಾರೆ.

ಹಳಗನ್ನಡ ಸಾಹಿತ್ಯ, ಶಾಸನ ಸಾಹಿತ್ಯ ಇವೆಲ್ಲದರ ನಡುವೆಯೂ ಅವರು ಹಲವಾರು ಕ್ಷೇತ್ರಗಳಲ್ಲಿ ಆಸಕ್ತರು. ತಮ್ಮ ಹಳೆಯ ಸ್ಕೂಟರುಗಳನ್ನು ರಿಪೇರಿ ಮಾಡುವುದರಲ್ಲಿ, ಅವುಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುವುದರಲ್ಲಿ ಅವರ ನೈಪುಣ್ಯತೆ ಅಗಾಧವಾದದ್ದು. ಅವರ ಕಂಪ್ಯೂಟರ್ ಜ್ಞಾನವನ್ನು ನೋಡಿ ನಮ್ಮ ಕನ್ನಡ ಮೇಷ್ಟ್ರುಗಳು ಕಲಿಯಬೇಕು. ಅತ್ಯಂತ ವೇಗವಾಗಿ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಟೈಪ್ ಮಾಡುವ ಚಾಕಚಕ್ಯತೆಯೂ ಅವರಿಗಿದೆ. ಅವರ ಕೈಬರಹವೂ ಅಷ್ಟೆ, ತಪ್ಪಿಲ್ಲದ ಸ್ಪಷ್ಟ ಬರವಣಿಗೆ. ಸಾವಿರಾರು ಜನರ ಹಸ್ತಪ್ರತಿಗಳ ನಡುವೆಯೂ ನಾನು ಅವರ ಕೈಬರಹದ ಹಸ್ತಪ್ರತಿಯನ್ನು ಸುಲಭವಾಗಿ ಗುರುತಿಸಬಲ್ಲೆ. ಅವರೇ ಸಿದ್ಧ ಪಡಿಸಿದ ಹಲವಾರು ನೋಟ್ಸುಗಳನ್ನು ಅವರೇ ಕ್ಸೆರಾಕ್ಸ್ ಮಾಡಿಸಿ ನಮಗೆ ಓದಲು ಕೊಟ್ಟಿದ್ದಾರೆ. ಅವರು ಸಿದ್ಧಪಡಿಸಿರುವ ಶಾಸನಗಳ, ಕಾಲೇಜಿನ ಪಠ್ಯಭಾಗಗಳ, ಕಾವ್ಯಭಾಗಗಳ ನೋಟ್ಸುಗಳನ್ನು ಹೇಗಿವೆಯೋ ಹಾಗೇ ಮುದ್ರಿಸಿದರೂ ಅತ್ಯುತ್ತಮ ಪುಸ್ತಕಗಳಾಗುತ್ತವೆ.

ಮೇಷ್ಟ್ರಿಗೆ ಹಳೆಯ ಹಿಂದಿ ಚಲನಚಿತ್ರಗೀತೆಗಳೆಂದರೆ ಇಷ್ಟ. ಹಲವಾರು ಸಿನಿಮಾದ ಸಿ.ಡಿ.ಗಳನ್ನು ಸಂಗ್ರಹಿಸಿದ್ದಾರೆ. ಹಲವಾರು ಯುದ್ಧ ಸರಣಿಯ ಇಂಗ್ಲಿಷ್ ಸಿನಿಮಾಗಳನ್ನು ನಾನು ಅವರಿಂದ ಸಿ.ಡಿ. ಪಡೆದು ನೋಡಿದ್ದೇನೆ. ಯಾವಾಗಲೂ ರೇಡಿಯೋ ಒಂದನ್ನು ಜೊತೆಯಲ್ಲಿರಿಸಿಕೊಂಡು, ತಮಗೆ ಬೇಕೆನ್ನಿಸಿದಾಗ, ಯಾವುದೋ ಸ್ಟೇಷನ್ನಿಗೆ ಟ್ಯೂನ್ ಮಾಡಿ, ಶಾಸ್ತ್ರೀಯ ಸಂಗೀತವನ್ನೊ, ಹಳೆಯ ಗೀತೆಗಳನ್ನು ಕೇಳುತ್ತ ಅವರು ದಿವ್ಯಾನಂದವನ್ನು ಅನುಭವಿಸಬಲ್ಲರು. ಕ್ರಿಕೆಟ್ ಬಗ್ಗೆಯೂ ಅಷ್ಟೆ! ಅದರಲ್ಲೂ ಟೆಸ್ಟ್ ಕ್ರಿಕೆಟ್ ಎಂದರೆ ಅವರಿಗೆ ಅಚ್ಚುಮೆಚ್ಚು. ಜೊತೆಗೆ, ಲೆಕ್ಕ ಪತ್ರಗಳನ್ನು ಇಡುವುದರಲ್ಲಿ, ಅವುಗಳನ್ನು ಆಡಿಟ್ ಮಾಡುವುದರಲ್ಲಿ ಅವರಿಗೆ ವಿಶೇಷ ಆಸಕ್ತಿಯಿದೆ. ಹಲವಾರು ಸಣ್ಣಪುಟ್ಟ ಸಂಘಸಂಸ್ಥೆಗಳಿಗೆ ಉಚಿತವಾಗಿ ಆಡಿಟ್ ಮಾಡಿಕೊಡುವ ಅವರ ಹವ್ಯಾಸ ಗಮನಾರ್ಹ.

ತಾನಾಯ್ತು, ತನ್ನ ಕೆಲಸವಾಯ್ತು. ತನ್ನಿಂದಂತೂ ಯಾರಿಗೂ ತೊಂದರೆಯಿಲ್ಲ. ಎಂದು ಅವರು ಬಾಯಿಬಿಟ್ಟು ಹೇಳದಿದ್ದರೂ, ಅದರಂತೆಯೇ ಬದುಕುತ್ತಿರುವವರು. ಅವರ ಪ್ರತಿಫಲಾಪೇಕ್ಷೆಯಿಲ್ಲದ ಕರ್ತವ್ಯಶೀಲತೆ, ವೃತ್ತಿಯ ಬಗೆಗಿನ ಗೌರವ, ಕ್ರಿಯಾಶೀಲ ಬದುಕು ಸದಾ ಅನುಕರಣೀಯ.

*****

# ಕಾವ್ಯಾಸಕ್ತಿ ಬೆಳೆಸಿದ ನಮ್ಮ ಮೇಷ್ಟ್ರು

* ಜಿ.ಎಸ್.ಎಸ್. ರಾವ್

ನಾನು ವೃತ್ತಿಯಿಂದ ೨೦೦೦ದಲ್ಲಿ ನಿವೃತ್ತನಾದನಂತರ, ನನಗೆ ಬಾಲ್ಯದಿಂದಲೂ ಪ್ರಿಯವಾಗಿದ್ದ ಕನ್ನಡ ಸಾಹಿತ್ಯದ ಓದನ್ನು ಮುಂದುವರಿಸಿದ್ದೆ. ಆಗ ಶ್ರೀ ಬಿ.ಎಂ.ಶ್ರೀ. ಪ್ರತಿಷ್ಠಾನದವರು ಹಸ್ತಪ್ರತಿಗಳ ಓದುವಿಕೆ ಮತ್ತು ಸಂರಕ್ಷಣೆಯ ವಿಚಾರವಾಗಿ ಏರ್ಪಡಿಸಿದ್ದ ಮೂರು ತಿಂಗಳ ತರಬೇತಿ ಕಾರ್ಯಕ್ರಮಕ್ಕೆ ಸೇರಿದುದರಿಂದ, ಅಲ್ಲಿ ತರಬೇತಿ ನೀಡುತ್ತಿದ್ದ ಡಾ॥ ಗಣೇಶ್ ಮಾಸ್ತರವರ ಸಂಪರ್ಕ ಉಂಟಾಯಿತು. ಡಾ॥ ಗಣೇಶ್ ರವರು ಇತರರಿಗಿಂತ ಭಿನ್ನವಾಗಿ ಅಂದರೆ ಪ್ರಾತ್ಯಕ್ಷಿಕೆಗಳಿಗೆ ಹೆಚ್ಚು ಗಮನ ಕೊಟ್ಟು, ವಿಷಯ ಬೋಧನೆ ಮಾಡುತ್ತಿದ್ದುದರಿಂದ, ನನಗೆ ಪ್ರಿಯ ಗುರುಗಳಾಗಿದ್ದರು.

ಮುಂದೆ ಬಿ.ಎಂ.ಶ್ರೀ ಪ್ರತಿಷ್ಠಾನದವರು 'ಹಳಗನ್ನಡ ಕಾವ್ಯಾಭ್ಯಾಸ ಶಿಬಿರ' ಏರ್ಪಡಿಸಲಾರಂಭಿಸಿದರು. ಈ ಶಿಬಿರಗಳು ಕಾಲೇಜುಗಳಲ್ಲಿ ಕನ್ನಡ ಕಲಿಸುವ ಉಪನ್ಯಾಸಕರ ಉಪಯೋಗಕ್ಕೆಂದು ಪ್ರಾರಂಭಿಸಲ್ಪಟ್ಟವು. ನಾನು ಕನ್ನಡದಲ್ಲಿ ಯಾವ ಪದವಿಯನ್ನೂ ಪಡೆಯದೆ ಇದ್ದುದರಿಂದ, ನನಗೆ ಈ ಶಿಬಿರದಲ್ಲಿ ಪ್ರವೇಶ ದೊರಕಲಾರದೆಂಬ ಅನುಮಾನ ಇತ್ತು. ಆದರೆ ಡಾ॥ ಗಣೇಶ್ ಮಾಸ್ತರರಿಂದ ಅನುಮತಿ ದೊರಕಿದುದು ಮಾತ್ರವಲ್ಲದೆ, ಮುಂದಿನ ಮೂರು ಕಾವ್ಯಾಭ್ಯಾಸ ಶಿಬಿರಗಳಲ್ಲಿಯೂ ಭಾಗವಹಿಸುವಂತಾಯಿತು. ಈ ಶಿಬಿರಗಳಲ್ಲಿಯೂ ಮಾಸ್ತರರು ಕೇವಲ ಪಠ್ಯವನ್ನಲ್ಲದೆ ಕನ್ನಡ ಶಾಸನಗಳಲ್ಲಿ ಬಳಕೆಯಾಗಿರುತ್ತಿದ್ದ, ಉತ್ತಮ ಸಾಹಿತ್ಯಾಂಶಗಳನ್ನೊಳಗೊಂಡ, ವಿವಿಧ ಛಂದಸ್ಸಿನ ಪದ್ಯಗಳನ್ನು ಪರಿಚಯಿಸಿ, ಅವುಗಳನ್ನು ಆಸ್ವಾದಿಸುವ ರೀತಿಯನ್ನು ವಿವರಿಸುತ್ತಿದ್ದರು. ಹೀಗಾಗಿ ಅವರು ಯಾವಾಗ ತರಗತಿಯನ್ನು ತೆಗೆದುಕೊಳ್ಳುತ್ತಾರೋ ಎಂದು ವಿದ್ಯಾರ್ಥಿಗಳೆಲ್ಲಾ ಕಾಯುತ್ತಿದ್ದರು.

ಮೇಲ್ಕಂಡ ಕಾರ್ಯಕ್ರಮಗಳು ನನಗೆ ಹೊಸಲೋಕವೊಂದರ ದರ್ಶನ ಮಾಡಿಸಿತು. ಕೆಲವು ಸುಪ್ರಸಿದ್ಧ ಹಾಗೂ ಅಪ್ರಸಿದ್ಧ ದೇವಾಲಯಗಳಿಗೆ ಕರೆದುಕೊಂಡು ಹೋಗಿ, ಅವುಗಳ ವೈಶಿಷ್ಟ್ಯ, ವಾಸ್ತು-ಶೈಲಿ, ಗಮನಿಸಬೇಕಾದ ಅಂಶಗಳು ಇವುಗಳನ್ನು ಪರಿಚಯಿಸಿ, ದೇವಾಲಯಗಳ ಬಗ್ಗೆ ನಮಗಿದ್ದ ಬಹಳಷ್ಟು ಮೌಢ್ಯಗಳನ್ನು ನಿವಾರಿಸಿದರು.

ಕಾವ್ಯದ ರಸಾಸ್ವಾದನೆಯನ್ನು ಮಾಡುವ ರೀತಿಯನ್ನು ನಮಗೆ ತೋರಿಸಿಕೊಟ್ಟುದುದರಿಂದ ಪ್ರಭಾವಿತರಾಗಿ, ನಾವು ಕೆಲವು ಗೆಳೆಯರು ಅವರನ್ನು 'ರಾಮಾಯಣ ದರ್ಶನಂ' ಮಹಾಕಾವ್ಯದ ಅಧ್ಯಯನದ ಬಗೆಯನ್ನು ಮನೋಜ್, ರಂಜಿತಾ, ಸಂಧ್ಯಾರಾಮಚಂದ್ರ, ಸತ್ಯನಾರಾಯಣ, ಶ್ವೇತಾ ಹಾಗೂ ನಾನು ಇದ್ದ ನಮ್ಮ ಗುಂಪಿಗೆ ತಿಳಿಸಿಕೊಡುವಂತೆ ಕೇಳಿಕೊಂಡಾಗ ಕೂಡಲೆ ಒಪ್ಪಿಕೊಂಡು, ೨೦-೧೧-೨೦೦೪ ರಂದು ಮೊದಲ ಓದನ್ನು ಗೆ॥ ಮನೋಜ್ ಮನೆಯಲ್ಲಿ ಪ್ರಾರಂಭಿಸಿದರು. ಮಹಾಕವಿ ಕುವೆಂಪು ರವರ 'ದರ್ಶನ' ದೊಂದಿಗೆ, ವಾಲ್ಮೀಕಿ ರಾಮಾಯಣ, ಕಂಬ ರಾಮಾಯಣ, ಜನಪದರ ರಾಮಾಯಣ ಇವುಗಳ ತುಲನಾತ್ಮಕ ವಿಶ್ಲೇಷಣೆಯೊಂದಿಗೆ, ಹೇಗೆ ಯುಗಧರ್ಮವು ರಾಮಾಯಣದಲ್ಲಿನ ಬದಲಾವಣೆಗಳಿಗೆ ಕಾರಣವಾಯಿತು ಇತ್ಯಾದಿ ವಿಷಯಗಳ ಚರ್ಚೆ, ವಿಮರ್ಶೆ, ಕಾವ್ಯ ರಸಾಸ್ವಾದನೆ ಇವುಗಳೊಂದಿಗೆ ಅಧ್ಯಯನ ಸಾಗಿತು. ಕುವೆಂಪುರವರ ಪ್ರತಿಭಾದರ್ಶನಕ್ಕೆ ಬೆಳಕಿಂಡಿಯಾದವರು ನಮ್ಮ ಡಾ॥ ಗಣೇಶ ಮಾಸ್ತರು. ಹೀಗೆ ದರ್ಶನದ ಅಧ್ಯಯನ ನಿಧಾನವಾಗಿ ಸಾಗಿ, ಸುಮಾರು ನಾಲ್ಕು ವರ್ಷಗಳ ನಂತರ ೧೭-೮-೨೦೦೮ ರಂದು ಮಂಗಳವಾಯಿತು.

೧. ಮಾಸ್ತರರ ಮಾರ್ಗದರ್ಶನದಲ್ಲಿ ನಮ್ಮ ಗುಂಪು ಒರಿಸ್ಸಾದ ಪ್ರವಾಸವನ್ನು ಕೈಗೊಂಡಿದ್ದು ಒಂದು ಮರೆಯಲಾಗದ ಅನುಭವ. ಭುವನೇಶ್ವರದ ದೇವಾಲಯಗಳ ವಾಸ್ತು ವೈಶಿಷ್ಟ್ಯ, ಕೊನಾರ್ಕದ ಸೂರ್ಯದೇವಾಲಯದ ಕಂಬವೊಂದರಲ್ಲಿರುವ ಕನ್ನಡಶಾಸನವನ್ನು ಓದಿದ್ದು, ಅಶೋಕ ಹಾಗೂ ಖಾರವೇಲ ಶಾಸನಗಳು, ಗುಹೆಗಳ ದರ್ಶನ, ಹೀಗೆ ಅನೇಕ ವಿಷಯಗಳ ಬಗ್ಗೆ ಮಾಸ್ತರು ಕೊಟ್ಟ ಮಾಹಿತಿ ಮನತಣಿಸಿದುದಲ್ಲದೆ ಇಂತಹ ಐತಿಹಾಸಿಕ ಪ್ರದೇಶಗಳಿಗೆ ಪದೇ ಪದೇ ಭೇಟಿ ಕೊಡಬೇಕೆಂಬ

---

* ನಂ. ೩೦, 'ವಾತ್ಸಲ್ಯ', ಮೊದಲನೇ ಕ್ರಾಸ್, ಓಬಳಪ್ಪ ಗಾರ್ಡನ್, ಬೆಂಗಳೂರು-೫೬೦೦೨೦.

ಬಯಕೆಯನ್ನು ಹುಟ್ಟುಹಾಕಿತು.

ಕಾವ್ಯರಸಾಸ್ವಾದನೆಯನ್ನು ಮಾಡುವ ರೀತಿ ಗೊತ್ತಾದುದರಿಂದ, ಪಂಪನ 'ವಿಕ್ರಮಾರ್ಜುನ ವಿಜಯ'ದ ಅಧ್ಯಯನಕ್ಕೆ ಮಾರ್ಗದರ್ಶನ ಮಾಡಬೇಕೆಂದು ಮೇಷ್ಟರಿಗೆ ಮತ್ತೆ ದುಂಬಾಲು ಬಿದ್ದೆವು. ಹಸನ್ಮುಖರಾಗಿಯೇ ಅದನ್ನು ಒಪ್ಪಿಕೊಂಡ ಮಾಷ್ಟರು ೧೪-೯-೨೦೦೮ ರಿಂದ ೨೦-೫-೨೦೧೨ ರವರೆಗೆ ಸುಮಾರು ನಾಲ್ಕು ವರ್ಷಕಾಲ ಪ್ರತಿ ಭಾನುವಾರ ನಮ್ಮನ್ನು ಪಂಪನ ಪ್ರತಿಭಾಲೋಕಕ್ಕೆ ಕರೆದೊಯ್ಯುತ್ತಿದ್ದರು. ಪಂಪನ ಕಥಾ ಸಂಗ್ರಹಣಾ ಕೌಶಲ, ದೇಸಿಯ ಸೊಗಸು, ಕುಮಾರವ್ಯಾಸನಿಗಿಂತ ಭಿನ್ನವಾಗಿ ನಡೆದಿರುವ ಪಾತ್ರಪೋಷಣೆ, ಅದರಲ್ಲಿಯೂ ಶ್ರೀಕೃಷ್ಣನ ಮುತ್ಸದ್ದಿತನ ಓದುಗರನ್ನು ಬೆರಗುಗೊಳಿಸುವ ರೀತಿ ಹಾಗೂ ಪಂಪನ ಕೆಲವು ಪದ್ಯಗಳನ್ನು ವಿವರಿಸುತ್ತಿದ್ದ ರೀತಿ, ಅದನ್ನು ಕೇಳಿದವರಿಗೆ ಮಾತ್ರವೇ ಗೊತ್ತು. ವಿವಿಧ ಶಾಸನಗಳಲ್ಲಿ ಪಂಪನ ಪದಪ್ರಯೋಗವಾಗಿಸಿರುವುದನ್ನೂ, ಅವನ ಶೈಲಿಯನ್ನು ಇತರರು ಅನುಕರಿಸಿರುವುದನ್ನೂ ಸೋದಾಹರಣವಾಗಿ ವಿವರಿಸುತ್ತಿದ್ದರು. ಅಧ್ಯಯನದ ಆದಿನಗಳಿಗೆ ಮತ್ತೆ ಮತ್ತೆ ಹಾತೊರೆಯುವಂತೆ ಮಾಡುತ್ತಿತ್ತು ಅವರ ಪಾಠದ ವೈಖರಿ.

ಕಾವ್ಯಗಳನ್ನೋದುವ ಗೀಳಿನಿಂದ ಹೊರಬರಲಾಗದ ನಮ್ಮ ಗುಂಪು ಮತ್ತೆ ಯಾವುದಾದರೊಂದು ಕಾವ್ಯವನ್ನು ಓದಲು ಮಾರ್ಗದರ್ಶನ ಮಾಡಬೇಕೆಂದು ಒತ್ತಾಯಿಸಿದಾಗ, ಮಾಸ್ತರು 'ಹರಿಶ್ಚಂದ್ರ ಕಾವ್ಯ ಸಂಗ್ರಹ'ವನ್ನು ಅಭ್ಯಾಸ ಮಾಡಲು ಸೂಚಿಸಿದರು. ಹೀಗಾಗಿ ಈಗ ನಮ್ಮ ಗುಂಪು 'ಹರಿಶ್ಚಂದ್ರ ಕಾವ್ಯ ಸಂಗ್ರಹ'ದ ಅಧ್ಯಯನದಲ್ಲಿ ತೊಡಗಿದೆ.

*****

# ಆಲದ ಮರ ನಮ್ಮೇಷ್ಟ್ರು

* ಶ್ರೀಮತಿ ಸಂಧ್ಯಾ ರಾಮಚಂದ್ರ

ವಿದ್ವತ್ತಿನ, ವಿದ್ಯೆಯ ದೊಡ್ಡ ಆಲದಮರ ನಮ್ಮೇಷ್ಟ್ರು. ಆಲದ ಬಿಳಿಲುಗಳು ಪ್ರೀತಿ, ವಿಶ್ವಾಸ, ಮಮತೆ, ಕನಿಕರ, ಆದರ, ಮೆಚ್ಚುಗೆ ಮಾರ್ಗದರ್ಶನ ಅಂತ ಮುಂತಾದ ಸಹಸ್ರ ಬಿಳುಲುಗಳುಳ್ಳ ದೊಡ್ಡ ವಟವೃಕ್ಷ ನಮ್ಮ ಕೆ.ಆರ್.ಜಿ. ಒಂದೊಂದು ಬಿಳಲನ್ನು ಆಶ್ರಯಿಸಿದ, ಅದೇ ಒಂದು ಸ್ವತಂತ್ರ ಮರವಾಗಿ ಬೆಳೆಯೋ ಯೋಗ್ಯತೆಯನ್ನು ತರಿಸೊ ಧೀಮಂತ ವ್ಯಕ್ತಿತ್ವ ನಮ್ಮ ಮೇಷ್ಟ್ರದ್ದು. ಯಾವುದೇ ವಿದ್ಯಾರ್ಥಿ ತನ್ನ ಅಭಿಪ್ರಾಯವನ್ನು ಮೌಢ್ಯವಾಗಿ ಮುಂದುವರಿಸಿದಾಗ ಶ್ರೀಮಂತ ಹೃದಯದ ನಮ್ಮೇಷ್ಟ್ರು ಅವರನ್ನು ನಿರಾಶೆಗೊಳಿಸದೆ 'ನೀವು ಹೇಳೋದು ಒಂದು ರೀತಿಲಿ ಸರಿ' ಅಂತ ಹೇಳಿ ಹುರಿದುಂಬಿಸೋ ವ್ಯಕ್ತಿತ್ವ ಇಂಥಾ ಮನೋಭಾವದಿಂದ ಅವರ ಶಿಷ್ಯಕೋಟಿ ಎಂದೂ ನಿರಾಶೆಗೊಳ್ಳದೆ ಒಂದೊಂದೇ ಹೆಜ್ಜೆಗಳನ್ನು ಇಡುತ್ತಾ ಮುಂದುವರೆಯಲು ಸಾಧ್ಯ. ಇಂಥಾ ಮಾರ್ಗದರ್ಶಕರು ನಮ್ಮ ಮೇಷ್ಟ್ರು. ವಿದ್ವತ್ ಅಂತ ಮುಖವಾಡ ಧರಿಸಿ ದೂರದಿಂದ ಮಾರ್ಗದರ್ಶನ ಮಾಡುತ್ತಾ ಇರುವ ಇಂದಿನ ಪರಿಸ್ಥಿತಿಯಲ್ಲಿ ನಾನು ನನ್ನದು ಎಂದು ದೂರವಿರದೇ ವಿದ್ಯಾರ್ಥಿಗಳೊಂದಿಗೆ ಆತ್ಮೀಯವಾಗಿ ವ್ಯವಹರಿಸುತ್ತಾ ಅವರ ಕುಂದು ಕೊರತೆಗಳನ್ನು ತಿಳಿದು ಅವರಿಗೇ ಅರಿವಾಗದಂತೆ ಅವರಿಗೆ ಮಾರ್ಗದರ್ಶನ ಉತ್ತೇಜನ ಕೊಡುತ್ತಾ ಮುನ್ನೆಡೆಸೊ ಶ್ರೀಮಂತ ಗುರುತತ್ವ ಹೊಂದಿರೋ ಗುರುಬ್ರಹ್ಮ.

ನನಗಾಗಿರೋ ಅನುಭವವೇ ಅವರ ಅನೇಕ ಶಿಷ್ಯರಿಗೂ ಆಗಿರೋದ್ರಲ್ಲಿ ಆಶ್ಚರ್ಯವಿಲ್ಲ. ನನ್ನ ಕೈಲಾಗೋಲ್ಲ ನಾನು ಸಾಮಾನ್ಯರಲ್ಲಿ ಅತಿ ಸಾಮಾನ್ಯ ಅಂತ ಹಿಂಜರಿಯೋರಿಗೆ ನಾಟಕೀಯವಾಗಿ ಹುರಿದುಂಬಿಸೋ ಈ ಪ್ರಪಂಚದಲ್ಲಿ ಅವರಿಗೇ ಅರಿವಾಗದಂತೆ ಅವರ ಕೈಹಿಡಿದು ಎತ್ತರಕ್ಕೆ ಏರಿಸೋವಾಗ ಅವರು ಗುರುವಿಷ್ಣು. ಹಾಗೇ ವಿದ್ಯಾರ್ಥಿಗಳ ನಿಜವಾದ ಅನಿಸಿಕೆಯನ್ನು ಸಹಜವಾಗಿ ಕಾಣುತ್ತಾ ಅವರನ್ನು ತಿದ್ದಿತೀಡುವ ಅವರ ಮಮತೆ ಅವರೇ ವಿದ್ಯಾರ್ಥಿಯ ಸಂಕೋಚ ಪ್ರವೃತ್ತಿಯನ್ನು ತಿಳಿದುಕೊಂಡು ಸಹಾಯ ಹಸ್ತ ನೀಡಿ ಗುರು ಮಹೇಶ್ವರನಾಗಿ ನಿಲ್ಲುವ ಅವರ ನಿಲುವು ಸ್ತುತ್ಯಾರ್ಹ. ಹೀಗಾಗಿ ಗುರುಬ್ರಹ್ಮ ಗುರುವಿಷ್ಣು ಗುರುದೇವರಾಗಿಹರು ನಮ್ಮೇಷ್ಟ್ರು.

ಒಮ್ಮೊಮ್ಮೆ ನಮ್ಮೊಂದಿಗೆ ಪ್ರವಾಸ ಹೊರಡುವ ಈ ಗುರುಬ್ರಹ್ಮ ನಮ್ಮೊಂದಿಗೆ ಎಷ್ಟು ಲೀನವಾಗಿ ಬಿಡುತ್ತಾರೆ ಅಂದ್ರೆ ಹೇಳಲು ಅಸಾಧ್ಯ... ಇಷ್ಟೇ ಅಲ್ಲದೆ ಒಂದು ಕ್ಷಣವೂ ಅನ್ಯಥಾ ವ್ಯಯಮಾಡದೆ ನಮ್ಮೆಲ್ಲ ತುಂಟತನವನ್ನು ನಗುತ್ತ ಸಹಿಸುತ್ತ ಸಂತೆಯಲ್ಲೂ ತನ್ನ ಕೆಲಸ ತಾನುಮಾಡಿಕೊಳ್ಳುವ ಏಕಾಗ್ರತೆ ಅನುಕರಣೀಯ. ಯಾವ ಸಮಸ್ಯೆ ಏನೇ ಆಗಲಿ ಎದುರಿಸಲಾರದೆ ತೊಳಲಾಡುವ ಶಿಷ್ಯನ ನೆರವಿಗೆ ಬರುವ ಆತ್ಮೀಯ ನಮ್ಮೇಷ್ಟ್ರು ತಮ್ಮ ಅನುಭವ ಜ್ಞಾನದಿಂದ ಸಮಸ್ಯೆಯನ್ನು ಅರಿತು ಕ್ಲಿಷ್ಟತೆಯನ್ನು ಶಿಷ್ಯನಿಗೆ ಅರಿವಾಗಲು ಅವನ ಮಟ್ಟಕ್ಕೆ ಇಳಿದು ಅರ್ಥೈಸುವಾಗ ಆತ್ಮೀಯ ಗುರು, ಸನ್ಮಾರ್ಗದರ್ಶಕ ನಮ್ಮೇಷ್ಟ್ರು.

ಶಾಸನ ತಜ್ಞರಾಗಿ ಕಾಣುವ ನಮ್ಮೇಷ್ಟ್ರು ಇತಿಹಾಸ. ವಿಜ್ಞಾನಗಳಲ್ಲಿ ಪ್ರಭುತ್ವ ಸಾಧಿಸಿರುವ ಸಂದರ್ಭಗಳು ನಮಗೆ ಒಮ್ಮೆ ಪ್ರವಾಸದಲ್ಲಿ ಅರಿವಾಯಿತು. ಭುವನೇಶ್ವರ, ಪೂರಿ ಜಗನ್ನಾಥ, ಹಾತಿಗುಪ್ಪ ಗವಿಗಳನ್ನು ನೋಡಲು ಹೊರ ಶಿಷ್ಯರು ಅವರೊಂದಿಗೆ ಕೆ.ಆರ್.ಜಿ. ಪೂರ್ವ ಸಿದ್ಧತೆ ಇಲ್ಲದೆ ಹೊರಟ ತಂಡಕ್ಕೆ ಉತ್ತಮ ಮಾರ್ಗದರ್ಶಕರಾಗಿ ಬಂದಿದ್ದ ಇತಿಹಾಸ ತಜ್ಞ ನಮ್ಮೇಷ್ಟ್ರು. ಪ್ರವಾಸದಿಂದ ಬಳಲಿ ಬೆಂಡಾದ ಶಿಷ್ಯರಿಗೆ ಮಮತೆಯಿಂದ ತಂದುಕೊಡುವ ಸಿಹಿ, ಐಸ್‌ಕ್ರೀಮ್ ಹಾಗೂ ಚಾಕಲೇಟ್‌ಗಳು ಅವರ ಸರಳ ನಡವಳಿಕೆಯ ಪ್ರತೀಕಗಳು.

---

* ನಂ ೧೦೧೪ ಬನಶಂಕರಿ ೩ನೆ ಹಂತ ೩ನೆ ಹಂತ ೩ನೆ ಕ್ರಾಸ್ ೫ನೆ ಮೈನ್ ೭ನೆ ಬ್ಲಾಕ್ ಹೊಸಕೆರೆಹಳ್ಳಿ ಬೆಂಗಳೂರು – ೮೪

ಒಮ್ಮೆ ಹೊಂಬುಜ, ಬನವಾಸಿ ಅಂತ ಹೊರಟ ನಮಗೆ ಮಾರ್ಗದರ್ಶಕರಾಗಿ ಬಂದ ಕೆ.ಆರ್.ಜಿ. ಮಳೆಯಲ್ಲಿ ನೆನೆಯುತ್ತ ನಮ್ಮನ್ನು ಎಚ್ಚರಿಸುತ್ತಾ ಹೆಜ್ಜೆಹಾಕಲು ಹುರಿದುಂಬಿಸುತ್ತ ಶಾಸನಗಳನ್ನು ವಿವರಿಸುತ್ತಾ ನಮ್ಮಲ್ಲಿ ಆಸಕ್ತಿ ಮೂಡಿಸಿದ ರೀತಿಯಂತೂ ಸ್ತುತ್ಯರ್ಹ. ಶಾಸನ ವಿದ್ಯಾರ್ಥಿಗಳು ಅಲ್ಲಿ ಇತಿಹಾಸದಲ್ಲಿ ಆಸಕ್ತಿಯೂ ಇಲ್ಲದ ಗೃಹಿಣಿಯಾದವರಲ್ಲಿ ಆಸಕ್ತಿ ಹುಟ್ಟಿಸಿ ಮೇಷ್ಟ್ರು ಏನು ಹೇಳುತ್ತಾರೋ ಅಂತ ಕಾತುರತೆಯಿಂದ ಕಾದು ಕೇಳುವಂತೆ ಆಸಕ್ತಿ ಮೂಡಿಸಿದ ಧೀಮಂತ ವ್ಯಕ್ತಿ ಕೆ.ಆರ್.ಜಿ.

ಇತಿಹಾಸವನ್ನು ಅವರು ನೋಡುವ ದೃಷ್ಟಿ ಕೋನ ವಿಶಿಷ್ಟವಾದುದು. ಶಾಸನವನ್ನು ಓದುತ್ತಾ ಅದನ್ನು ಅರ್ಥೈಸಿ ಅಲ್ಲಿನ ಸಾಹಿತ್ಯಿಕ ಅಂಶಗಳೂ ಐತಿಹಾಸಿಕ ಅಂಶಗಳೂ ಅಕ್ಷರ ವಿನ್ಯಾಸ ಹೀಗೆ ಒಂದು ಶಾಸನವನ್ನು ಹಲವಾರು ದೃಷ್ಟಿಕೋನಗಳಿಂದ ಗಮನಿಸುವ ರೀತಿಯಂತೂ ಅದ್ಭುತ. ಎಲ್ಲದರಲ್ಲೂ ಸಹಜತೆಯನ್ನು ಕಾಣುವುದರಿಂದಾಗಿ ವೈಭವೀಕರಿಸದೆ ಅರ್ಥೈಸುವ ಅಂಶಗಳಂತೂ ಮನೋಜ್ಞ. ತನ್ನ ಮಾರ್ಗದರ್ಶನದಲ್ಲಿ ೮–೧೦ ವರ್ಷಗಳಿಂದ ಯಾವ ಪ್ರತಿಫಲ ಅಪೇಕ್ಷಿಸದೆ, ನಮ್ಮೆಲ್ಲರಿಗೂ ಕಾವ್ಯಾಭ್ಯಾಸ ಮಾಡುತ್ತಿರುವ ನಮ್ಮ ಮೇಷ್ಟ್ರು, ನಮಗೆಲ್ಲ ನಡೆದಾಡೋ ವಿಶ್ವಕೋಶವಾಗಿದ್ದಾರೆ.

ಅವರ ಪಾಠದ ವೈಖರಿಯಂತೂ ಆಕರ್ಷಕ. ಆಸಕ್ತಿಹೀನ ವಿದ್ಯಾರ್ಥಿಯನ್ನು ಹೀಯಾಳಿಸದೆ, ಬೈಯದೇ ತನ್ನೆಡೆಗೆ ಎಳೆದುಕೊಳ್ಳುವ ಅವರ ಶೈಲಿಯನ್ನು ಬೇರೆಲ್ಲಾ ಉಪಾಧ್ಯಾಯರೂ ಹೊಂದಿದ್ದರೆ, ಯಾವ ವಿಷಯವೂ ನೀರಸ ಎನಿಸದು. ನೀರಸವಾದ ತತ್ವವನ್ನು ಕಥೆಯ ಸ್ವಾರಸ್ಯದಲ್ಲಿ ಹುದುಗಿಸಿ ಹೇಳುವ ಅವರ ಕ್ರಮ ವಿದ್ಯಾರ್ಥಿಗಳಿಗೆ ಮೆಚ್ಚುಗೆ.

ಇಷ್ಟೆಲ್ಲಾ ಹೊಂದಿರುವ ನಮ್ಮ ಮೇಷ್ಟ್ರು ನಮಗೇ ಅರಿವಿಲ್ಲದೆ ನಮ್ಮಲ್ಲಿನ ಶಕ್ತಿ, ಸಾಮರ್ಥ್ಯಗಳನ್ನು ಅರಿತು ಅದೇ ಕೆಲಸ ಹೇಳಿ ನಮ್ಮಿಂದ ಮಾಡಿಸಿ ನಮ್ಮಲ್ಲಿ ಆತ್ಮವಿಶ್ವಾಸ ಮೂಡಿಸಿ ನಮಗೆ ನಾವೇ ಕೀರ್ತಿವಂತರಾಗುವಂತೆ ಆಶ್ರಯ ಕೊಡುವ ಆಲದಮರ ನಮ್ಮೇಷ್ಟ್ರು. ಈ ಆಲದ ಮರದಡಿ ಸುಖ ಶಾಂತಿಯಿಂದ ಅಧ್ಯಯನ ಮಾಡುವ ನಾವುಗಳೇ ಧನ್ಯ.

*****

# ಸಾಹಿತ್ಯೋಪಾಸಕರಾದ ಗಣೇಶ್ ಮಾಸ್ತ್ರು !

* ಡಾ. ಕೆ. ವಸಂತಲಕ್ಷ್ಮಿ

**ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ।**
**ಚಕ್ಷುರನ್ಮೀಲಿತಂ ಏನ ತಸ್ಮೈಶ್ರೀ ಗುರವೇನಮಃ॥**

ಕನ್ನಡ ಸಾಹಿತ್ಯ ಪರಿಷತ್ತಿನ ಶಾಸನ ತರಗತಿಗೆ (೧೯೮೮) ಸೇರಿದಾಗ ಶಾಸನ ತರಗತಿಗಳು ಪ್ರವೇಶ ಮತ್ತು ಪ್ರೌಢ ಎಂದು ಎರಡು ಹಂತದಲ್ಲಿ ನಡೆಯುತ್ತಿತ್ತು. ನಾವು ಶಾಸನ ಪ್ರೌಢಕ್ಕೆ ಬಂದಾಗ ನಮ್ಮ ತರಗತಿಗೆ ಮಾಸ್ತ್ರು ಶಾಸನ ಸಾಹಿತ್ಯ ವಿಭಾಗವನ್ನು ತೆಗೆದುಕೊಳ್ಳುತ್ತಿದ್ದರು. ಅವರ ವಿದ್ಯಾರ್ಥಿಯಾಗಿ ಎದುರಿಗೆ ಕುಳಿತು ಅವರು ಮಾಡುವ ಪಾಠ ಪ್ರವಚನಗಳನ್ನು ಕೇಳುವ ಸೌಭಾಗ್ಯ ನನ್ನದಾಗಿತ್ತು. ಗಣೇಶ್ ಮಾಸ್ತ್ರ ಭೋದನಾಕ್ರಮವು ಅದ್ಭುತವಾದದ್ದು. ನಮಗೆ ಸಂಸ್ಕೃತ ಶಾಸನಗಳಿಂದ ಆರಂಭಿಸಿದಾಗ ನಮ್ಮ ಬಳಿ ಶಾಸನ ಪಠ್ಯದ ಭಾಗವಿರಲಿಲ್ಲ. ಹೀಗಾಗಿ ಅವರು ತಾವೇ ಬರೆದು ತಂದಿದ್ದ ಕೆಲವು ಹಾಳೆಗಳನ್ನು ಮುಂದಿಟ್ಟು ಕೊಂಡು ಓದಿ ಅರ್ಥೈಸುತ್ತಿದ್ದರು. ಮೊದಲು ಶಾಸನ ದೊರೆತ ಸ್ಥಳ. ಅದನ್ನು ಶೋಧಿಸಿ ಮೊದಲು ಪ್ರಕಟಿಸಿದ ವಿವರಗಳು ನಂತರ ಪಠ್ಯದ ವಾಚನ. ಅತಿ ದೀರ್ಘಶಾಸನವಾದಾಗ ಶಾಸನದ ಮುಖ್ಯ ವಿವರಗಳನ್ನು ವಿಂಗಡಿಸಿ, ಅಗತ್ಯವಿದ್ದೆಡೆ ಶ್ಲೋಕಗಳನ್ನು ಓದಿ ತಿಳಿಸುತ್ತಿದ್ದರು. ಶಾಸನದಲ್ಲಿ ಉಕ್ತವಾದ ವಿವರಗಳ ಐತಿಹಾಸಿಕ ವಿಚಾರಗಳನ್ನು ತಿಳಿಸುತ್ತಾ ಆಯಾ ರಾಜವಂಶದ ಇತಿಹಾಸದ ಸ್ಪಷ್ಟ ಚಿತ್ರಣ ನೀಡುತ್ತಿದ್ದರು. ಧಾರ್ಮಿಕ ವಿವರಗಳ ಕಡೆಯೂ ಗಮನ ಹರಿಸುತ್ತಿದ್ದ ಗಣೇಶ್‌ರವರಿಗೆ ಎಲ್ಲಕ್ಕಿಂತ ಸಾಹಿತ್ಯದ ಅಂಶಗಳು ಮನ ಸೆಳೆಯುತ್ತಿದ್ದವು. ಸಾಹಿತ್ಯದ ವಿವರಗಳಿಗೆ ಪೂರಕವಾದ ಬೇರೆ ಸಾಹಿತ್ಯಕೃತಿಗಳಿದ್ದರೂ ಅವನ್ನು ತಿಳಿಸಿ ತುಲನಾತ್ಮಕವಾಗಿ ವರ್ಣಿಸುತ್ತಿದ್ದರು. ಶಾಸನದ ಭಾಷೆ, ಪದ್ಯಗಳಲ್ಲಿ ಕಾಣಸಿಗುವ ಛಂದಸ್ಸು, ಅಲಂಕಾರ, ಕವಿಪ್ರತಿಭೆ ಮುಂತಾದುವನ್ನು ವಿವರಿಸುತ್ತಾ ನಮಗೆ ಶಾಸನದ ಸಾಹಿತ್ಯಕ ಮಹತ್ವವನ್ನು ಮನದಟ್ಟಾಗಿಸುತ್ತಿದ್ದರು. ಎಷ್ಟೊಂದು ವಿವರಗಳನ್ನು ನೀಡುತ್ತಿದ್ದರೆಂದರೆ ನಮಗೆ ಇಷ್ಟೆಲ್ಲ ನಾವು ತಿಳಿದು ಮತ್ತೆ ಬರೆಯಲು ಸಾಧ್ಯವೇ ಎನ್ನಿಸುವಂತಾಗಿತ್ತು. ಆದರೆ ಹೀಗೆ ವಿದ್ಯಾರ್ಥಿಗಳಿಗೆ ಅಂಜಿಕೆಯಾಗದಿರಲು ಸ್ವತಃ ಸುಂದರವಾದ ಅಕ್ಷರಗಳಿಂದ ಬರೆದು ಸಿದ್ಧಪಡಿಸಿದ್ದ ನೋಟ್ಸ್ ಅನ್ನು ಕೊಡುತ್ತಿದ್ದರು, ಕೆಲವೆಡೆ ಒಂದೆರೆಡು ಪ್ರಶ್ನೆಗಳನ್ನೆತ್ತಿ ಕೆಲವು ಪುಸ್ತಕಗಳನ್ನು ಸೂಚಿಸಿ ಇವುಗಳನ್ನು ಓದಿ ಸಂದೇಹ ಬಗೆಹರಿಯುತ್ತದೆ ಎನ್ನುತ್ತಿದ್ದರು. ಹೀಗೆ ವಿದ್ಯಾರ್ಥಿಗಳಲ್ಲೂ ತಮ್ಮಲ್ಲಿದ್ದ ಅದಮ್ಯ ಉತ್ಸಾಹವನ್ನು ಜ್ಞಾನಭಂಡಾರವನ್ನು ಹಂಚುತ್ತಿದ್ದ ನಂ ಮೇಷ್ಟ್ರ ತರಗತಿಗಳು ನಮಗೆ 'ರಸದೌತಣ'ದಂತಿದ್ದವು. ಯಾವುದೇ ಶಾಸನವಿರಲಿ ಸಾಕಷ್ಟು ಸಿದ್ಧವಾಗಿ ಬಂದಿರುತ್ತಿದ್ದ ಅನೇಕ ವಿಚಾರಗಳನ್ನು ಸಂಗ್ರಹಿಸುತ್ತಿದ್ದು, ಘನ ಪಾಂಡಿತ್ಯದಿಂದಾದ ಆತ್ಮವಿಶ್ವಾಸವುಳ್ಳ ಅವರ ಧ್ವನಿ, ಅವರ ವಾಗ್ಧಾರೆ ನಮಗೆಲ್ಲ ತುಂಬ ಹಿತವೆನ್ನಿಸಿತು. ಒಂದು ದಿನವೂ ಅವರ ತರಗತಿ ತಪ್ಪದಂತೆ ಎಚ್ಚರಿಕೆ ವಹಿಸುತ್ತಿದ್ದೆವು. ಅವರ ನೂರಾರು ಆಲೋಚನೆಗಳು ಪಠ್ಯದ ನಡುವೆ ತೂರಿ ನಮ್ಮ ಜ್ಞಾನದ ಪರಿಧಿಯನ್ನು ವಿಸ್ತರಿಸುತ್ತಿದ್ದವು.

ಗಣೇಶ್ ಮಾಷ್ಟ್ರರ ವ್ಯಕ್ತಿತ್ವದ ಬಗೆಗೆ ಚಿಂತಿಸಿದಾಗ ಬರೆಯಲು ನನಗೆ ಅಂಜಿಕೆಯೇ ಆಗುತ್ತಿದೆ. ಕಾರಣವಿಷ್ಟೇ. ನಾನು ಕಂಡಿರುವುದು ಅವರ ಬಾಹ್ಯ ಜೀವನದ ಒಂದು ಮಗ್ಗಲನ್ನು ಮಾತ್ರ. ಅನೇಕ ವರ್ಷಗಳ ಪರಿಚಯವಿದ್ದರೂ, ಅವರ ವೈಯಕ್ತಿಕ ಬದುಕಿನ ಬಗೆಗೆ ನನಗಷ್ಟು ತಿಳಿದಿಲ್ಲವೆನ್ನಬಹುದು. ಗಣೇಶ್ ಮಾಸ್ತ್ರು ಅಂದಕೂಡಲೇ ತಿಳಿಯುವ 'ಶಾಸನದ ಮೇಷ್ಟ್ರು' ಚಿತ್ರ ನೀಡಿದ್ದೇನೆ. ಇದಲ್ಲದೇ ಅವರನ್ನು ಬಹಳಷ್ಟು ಜನರು ಗುರುತಿಸುವುದು ಎ.ಪಿ.ಎಸ್. ಕಾಲೇಜಿನ ಕನ್ನಡ ಉಪನ್ಯಾಸಕರಾಗಿ. ನಾನು ಕೂಡ ಅವರನ್ನು ನೋಡುವ ಮೊದಲು, ಭವ್ಯ ಶರೀರದ ದೊಡ್ಡ ಪ್ರೊಫೆಸರ್, ವಯೋವೃದ್ಧರಿರಬೇಕು ಎಂದು ಭಾವಿಸಿದ್ದೆ. ಆದರೆ ನೋಡಿದ ಕೂಡಲೇ ನನ್ನ ಹಿರಿಯಣ್ಣನನ್ನು ನೋಡಿದಂತೆ ಸರಳ ಸ್ವಭಾವದ, ಸಹಜವಾಗಿ ಎಲ್ಲರೊಂದಿಗೆ ಬೆರೆತು ಬಾಳುವ ಸಾಮಾನ್ಯ ಉಡುಪಿನ ವೇಷಧಾರಿಯನ್ನು ಕಂಡು ಅಚ್ಚರಿಗೊಂಡೆ. ನಮಗೆ ಶಾಸನ ಪ್ರೌಢ ತರಗತಿಗೆ ಬರುವ ಹೊತ್ತಿಗೆ, ಶ್ರೀ ಪಿ.ವಿ.ಕೆ, ಕೊಂಡಾರೆಡ್ಡಿಯವರು, ಶಾಸ್ತ್ರಿ ಮಾಷ್ಟ್ರು ಎಲ್ಲಾ ನಮ್ಮ ಬಂಧುಗಳೆಂಬಂತೆ

*   ೧೬೭೬, ೫ನೆ ಎ ಅಡ್ಡರಸ್ತೆ, ೧೦ನೆಮುಖ್ಯರಸ್ತೆ, ಬನಶಂಕರಿ ಮೊದಲನೆ ಹಂತ, ಬೆಂಗಳೂರು–೫೬೦೦೫೦

ಹೊಂದಿಕೊಂಡಿದ್ದರು. ದಿನವೂ ಸಂಜೆ ಪರಿಷತ್ತಿನ ಲೈಬ್ರರಿಗೆ ಬಂದು ಸಂಜೆ ೭.೦೦ ಗಂಟೆವರೆಗೆ ಓದುತ್ತಿದ್ದೆವು. ಆಮೇಲೆ ಕಟ್ಟೆ ಮೇಲೆ ಕುಳಿತು ಅನೇಕ ವಿಚಾರಗಳನ್ನು ಅವರು ಚರ್ಚಿಸುತ್ತಿದ್ದರು. ತರಗತಿ ಮುಗಿದ ಮೇಲೆ ಎಲ್ಲರೂ ಕಾಫಿ ಕುಡಿದು ತೆರಳುತ್ತಿದ್ದೆವು. ಆದರೆ ಗಣೇಶ್ ಮಾಷ್ಟ್ರು ಮಾತ್ರ ಸಂಜೆ ೬.೦೦ ಗಂಟೆಗೆ ಸರಿಯಾಗಿ ಸ್ಕೂಟರ್‌ನಲ್ಲಿ ಬರುತ್ತಿದ್ದರು. ಕೆಳಗೆ ಇರುತ್ತಿದ್ದ ಸ್ನೇಹಿತರ ಬಳಿ ಐದು ನಿಮಿಷ ಮಾತಾಡಿ ತರಗತಿಗೆ ಬರುತ್ತಿದ್ದರು. ಅವರೊಂದಿಗೆ ಆರಂಭದ ದಿನಗಳಲ್ಲಿ ಹೆಚ್ಚಿನ ಸಂಪರ್ಕವೇ ಇರಲಿಲ್ಲ. ಅವರು ಯಾವಾಗಲೂ ತುಂಬಾ 'ಬಿಜಿ' ಇರುತ್ತಿದ್ದರೆಂದು ಉಳಿದವರು ಹೇಳುತ್ತಿದ್ದುದನ್ನು ಕೇಳಿದ್ದೆವು.

ನಾವು ಶಾಸನ ಪ್ರೌಢ ಮುಗಿದ ಮೇಲೂ ಪರಿಷತ್ತಿನ ಲೈಬ್ರರಿ ಒಡನಾಟ ಗುರುವೃಂದದವರ ಸಂಪರ್ಕ ಇಟ್ಟುಕೊಂಡುದರ ಪರಿಣಾಮವೇ ನಾವು ಇಂದು ಈ ಸ್ಥಿತಿಗೆ ಬರಲು ಸಾಧ್ಯವಾದುದ್ದು.

ಗಣೇಶ್ ಮಾಷ್ಟ್ರ ಬಗೆಗೆ ಒಂದೊಂದೇ ವಿಚಾರಗಳು ತಿಳಿಯುತ್ತಾ ಬಂದಂತೆ ನಮ್ಮ ಅಚ್ಚರಿ ಹೆಚ್ಚುತ್ತಾ ಹೋಯಿತು. ಅವರೊಬ್ಬ ಅಪರೂಪದ ವ್ಯಕ್ತಿ. ಮೊದಲು ಅವರು ಬಿ.ಎಸ್ಸಿ, ಬಿ.ಇಡ್. ಮಾಡಿದ ವಿಜ್ಞಾನದ ವಿದ್ಯಾರ್ಥಿಯಾಗಿದ್ದರು. ಎರಡು ಮೂರು ವರ್ಷ ನಮ್ಮ ಭಾರತೀಯ ಸಂಸ್ಕೃತಿ ವಿದ್ಯಾಪೀಠದಲ್ಲೇ ಹೈಸ್ಕೂಲಿನ ವಿಜ್ಞಾನದ ಅಧ್ಯಾಪಕರೂ ಆಗಿದ್ದರಂತೆ. ಅವರು ಹೇಗೋ ಏನೋ ಬಿ.ಕಾಂ ಪದವಿಯನ್ನು ಪಡೆದಿದ್ದಾರೆಂದು ತಿಳಿದಿದೆ. ಅದರಂತೆ ಕರ್ನಾಟಕ ಇತಿಹಾಸ ಅಕಾಡೆಮಿ, ಬಿ.ಎಂ.ಶ್ರೀ ಪ್ರತಿಷ್ಠಾನಗಳಲ್ಲಿ ಕೆಲಕಾಲ ಲೆಕ್ಕಪತ್ರಗಳನ್ನಿಡಲು ಸಹಕಾರ ನೀಡಿದ್ದರಂತೆ. ಇವೆಲ್ಲಕ್ಕಿಂತ ಅವರ ಮನಸ್ಸನ್ನು ಸಂಪೂರ್ಣವಾಗಿ ತನ್ನ ಕಡೆಗೆ ಸೆಳೆದುಕೊಂಡ ವಿಷಯವೇ 'ಕನ್ನಡ ಸಾಹಿತ್ಯ' ಅವರು ಕನ್ನಡ ಎಂ.ಎ. ಪದವಿ ಪಡೆದ ಮೇಲೆ ಆಚಾರ್ಯ ಪಾಠಶಾಲೆಯ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾದ ಮೇಲೆ ಅವರು ಅತ್ತಿತ್ತ ತಿರುಗಲಿಲ್ಲ. ಜೀವನದುದ್ದಕ್ಕೂ ಕನ್ನಡ ಬೋಧನೆಯನ್ನೆ ಬಾಳಬುತ್ತಿಯಾಗಿಸಿದರು. ಅದರಲ್ಲೂ ಪ್ರಾಚೀನ ಕನ್ನಡ ಸಾಹಿತ್ಯ ಅವರ ಮನಸ್ಸನ್ನು ತಟ್ಟಿದಷ್ಟು ಆಧುನಿಕ ಸಾಹಿತ್ಯ ತಟ್ಟಿಲ್ಲವೆನ್ನಿಸುತ್ತದೆ. ಅವರು ತಮಗೆ ಅಗತ್ಯವಿರಲಿ, ಇಲ್ಲದಿರಲಿ, ಪ್ರಾಚೀನ ಕನ್ನಡ ಕವಿಗಳ ಕೃತಿಗಳನ್ನೆಲ್ಲ ಅಭ್ಯಾಸ ಮಾಡಿದ್ದಾರೆ. ತಾವು ಮಾಡಿದ್ದಾರೆ ಮಾತ್ರವಲ್ಲ. ಯಾವಾಗಲೂ ತಮ್ಮೊಂದಿಗಿರುವ ಮಿತ್ರರ ಬಳಗ, ಶಿಷ್ಯರ ಬಳಗಗಳಿಗೂ ತಿಳಿಸುತ್ತಾ ಎಲ್ಲರನ್ನು ಈ ಕಾವ್ಯಸುಧೆಯಲ್ಲಿ ಮೀಯಿಸಿದ್ದಾರೆ. ಅವರ ಈ ಅನನ್ಯಗುಣವನ್ನು ಕಂಡೇ ನಾನು ಅವರನ್ನು ಸಾಹಿತ್ಯೋಪಾಸಕರು' ಎಂದದ್ದು.

ಶಾಸನ ತರಗತಿಯಿಂದ ನಾನು ಅವರೊಂದಿಗೆ ಅನೇಕ ಬಾರಿ ಕ್ಷೇತ್ರಕಾರ್ಯದಲ್ಲೂ ಭಾಗವಹಿಸಿರುವೆ. ಗಣೇಶ್ ಮಾಷ್ಟ್ರಿಗೆ 'ಟೂರಿಗೆ ಹೋಗಲು ತುಂಬಾ ಇಷ್ಟವೆನಿಸುತ್ತದೆ. ಸಾಮಾನ್ಯವಾಗಿ ಅವರು ಕ್ಷೇತ್ರಕಾರ್ಯಕ್ಕೆ ತಪ್ಪಿಸಿಕೊಳ್ಳುತ್ತಿರಲಿಲ್ಲ. ನಾನು ನಾಲ್ಕಾರು ಸಾರಿ ಅವರೊಂದಿಗೆ ಬೆಂಗಳೂರಿನ ಮ್ಯೂಸಿಯಂಗೆ ಭೇಟಿ ಕೊಟ್ಟಿದ್ದೇನೆ. ಅವರು ಆತಕೂರು ಶಾಸನ, ಬೇಗೂರಿನ ವೀರಗಲ್ಲು, ಇವುಗಳ ವಿವರಣೆ ಕೊಟ್ಟಿದ್ದನ್ನು ಮರೆಯುವಂತಿಲ್ಲ. ಇದಲ್ಲದೇ ಬೇಗೂರಿಗೆ ನಮ್ಮನ್ನೆಲ್ಲ ಪ್ರತಿವರ್ಷ ಕರೆದೊಯ್ದು ಅಲ್ಲಿಯ ದೇವಾಲಯಗಳು ಸ್ಮಾರಕಗಳ ಬಗೆಗೆ ಸಾಕಷ್ಟು ತಿಳಿಸಿದ್ದರು. ಅವರೊಂದಿಗೆ ನಾವೆಲ್ಲ ಒಮ್ಮೆ ಬಳ್ಳಿಗಾವೆ, ತಾಳಗುಂದ, ಗುಡ್ನಾಪುರ, ಕುಪಟೂರು, ಕೆಳದಿ, ಇಕ್ಕೇರಿ ಮುಂತಾದ ಸ್ಥಳಗಳಿಗೆ ಹೋಗಿದ್ದೆವು. ಅವರು ಟೂರಿನ ಯೋಜನೆ ಸಿದ್ಧಪಡಿಸುವಲ್ಲೂ ಸಿದ್ಧಹಸ್ತರು. ಬೆಂಗಳೂರಿನಿಂದಲೇ ಅವರೇ ಗಾಡಿ ಗೊತ್ತುಮಾಡಿ ಯಾವ ಯಾವ ಸ್ಥಳಗಳಿಗೆ ಹೋಗಬೇಕು ಎಲ್ಲಿ ತಂಗಿದರೆ ಅನುಕೂಲ ಇತ್ಯಾದಿ ಎಲ್ಲ ವಿವರಗಳನ್ನು ನಿರ್ಧರಿಸಿಯೇ ಹೊರಡುತ್ತಾರೆ. ಅವರೊಂದಿಗೆ ಹೋಗಿದ್ದಾಗ, ಪಠ್ಯದ ವಿಚಾರಗಳಲ್ಲದೇ ನೂರಾರು ವಿವರಗಳು ತಿಳಿಯುತ್ತದೆ. ಲಕ್ಕುಂಡಿಯಲ್ಲಿ ಅತ್ತಿಮಬ್ಬೆ ಶಾಸನವನ್ನು, ಶ್ರವಣಬೆಳಗೊಳದಲ್ಲಿ ಬೊಪ್ಪಣನಗೊಮ್ಮಟ ಸ್ತುತಿಯನ್ನು ಅವರು ಬಣ್ಣಿಸಿದ್ದ ರೀತಿ ಇಂದಿಗೂ ಮರೆತಿಲ್ಲ. ನಂ ಮೇಷ್ಟ್ರು ಸೊಗಸಾಗಿ ಹಾಡುತ್ತಾರೆ. ಅವರು ಒಂದು ಸ್ಕೌಟ್ ಹಾಡು ಹೇಳಿಕೊಡುತ್ತಿದ್ದರು. ಎಲ್ಲರೂ ಒಟ್ಟಾಗಿ ಹಾಡುತ್ತಿದ್ದೆವು. ರಸ್ತೆಯುದ್ದಕ್ಕೂ ಅಂತ್ಯಾಕ್ಷರಿಯೂ ನಡೆಯುತ್ತಿತ್ತು. ಇಷ್ಟೇ ಅಲ್ಲ. ಗಣೇಶ್ ಮಾಸ್ಟ್ರಿಗೆ ಕ್ರಿಕೆಟ್ ಅಂದರೆ ಬಹಳ ಮೆಚ್ಚಿಗೆ. ಕ್ರಿಕೆಟ್ ಮ್ಯಾಚ್ ಇದ್ದಾಗ ಅವರು ಬಂದ್ರೆ ಟ್ರಾನ್ಸಿಸ್ಟರ್ ಜೊತೆಗೆ ಬರುತ್ತಾರೆ. ಕಾಮೆಂಟ್ರಿ ಕೇಳುತ್ತಲೇ ಕೆಲಸವೂ ಸಾಗುತ್ತದೆ. ಅವರಿಗೆ ಸಿನಿಮಾ ನೋಡುವ ಹುಚ್ಚು ಇತ್ತಂತೆ. ಹಳೇ ಸಿನಿಮಾಗಳ ಬಗ್ಗೆ ನಟರ ಬಗ್ಗೆ ಖಚಿತವಾಗಿ ಹೇಳುತ್ತಾರೆ. ಅವರಿಗೆ ಸಂಗೀತವೆಂದರೆ ಬಲುಪ್ರಿಯವಂತೆ. ಈಗಲೂ ಒಳ್ಳೊಳ್ಳೆ ಸಂಗೀತ ಕಛೇರಿಗಳು ನಡೆದರೆ ತಪ್ಪಿಸಿಕೊಳ್ಳುವುದಿಲ್ಲ ಎನ್ನುತ್ತಾರೆ. ಇವೆಲ್ಲದರ ಜೊತೆಗೆ ಕಾಲೇಜಿನಲ್ಲಿ ಎಲ್ಲರ ಮೆಚ್ಚಿಗೆ ಉಪನ್ಯಾಸಕರು. ಯಾವ ಕೆಲಸವೇ ಇರಲಿ ಸಲೀಸಾಗಿ ಸಾಗಿಸಬಲ್ಲ ಧೀಮಂತರು. ಹೀಗಾಗಿಯೇ ಇವರಿಗೆ ಸಮಯದ ಬಿಡುವು ಹೆಚ್ಚಾಗಿ ಸಿಕ್ಕುತ್ತಿರಲಿಲ್ಲ ಎನ್ನಬಹುದು.

ನನಗೆ ಗಣೇಶ್ ಮಾಸ್ತ್ರ ಪಾಂಡಿತ್ಯದ ಮೇಲೆ ಯಾವಾಗಲೂ ಕಣ್ಣು. ನಾನು ಸಾಹಿತ್ಯ ಇತಿಹಾಸ ಒಂದಷ್ಟು ಓದಿಕೊಂಡಿದ್ದೆ. ಆದರೆ ಧಾರ್ಮಿಕ ಸಂಗತಿ ಬಂದರೆ ನನಗೇ ತಿಳಿಯುತ್ತಿರಲಿಲ್ಲ. ನಾನು 'ಶಾರದಾ ಆರಾಧನೆ' ಎಂಬ ಲೇಖನ ಸಿದ್ಧಮಾಡಿ ಸಮ್ಮೇಳನಕ್ಕೆ ಹೋಗುವ ಮೊದಲು ಒಮ್ಮೆ ಇವರಿಗೆ ತೋರಿಸೋಣವೆಂದು ಕೊಟ್ಟೆ. ಆದರೆ ಮೊದಲ ಭಾಗ ನೋಡಿದ ಕೂಡಲೇ ಅವರು ಶಂಕರ ವಿಜಯ ಯಾರು ಬರೆದದ್ದು, ಈ ಕೃತಿಯ ಕಾಲವೆಷ್ಟು? ಎಂದರೆ ನನಗೆ ಆ ಕೃತಿ ಕಾಲದ ಬಗ್ಗೆ ಖಚಿತವಿರಲಿಲ್ಲ. ಆಗ ಸರ್, ನೀವೇ ನೋಡಿ ಹೇಳಿ. ನನಗಷ್ಟು ತಿಳಿಯದು. ಸುಮಾರು ೧೦ನೇ ಶತಮಾನವಿರಬೇಕು ಎಂದೆ. ಅವರು ಅದೇ ಸರಿ, ಆದರೆ ಯಾರಾದ್ರೂ ಸಭೆಯಲ್ಲಿ ಕೇಳಿದರೆ ನೀವು ಸಿದ್ಧರಿರಬೇಕಾಗುತ್ತೆ ಎಂದು ಎಚ್ಚರಿಸಿದರು. ಶಾರದೆಯ ಪರಿಕಲ್ಪನೆ ಅವರಿಗೆ ಮೆಚ್ಚುಗೆಯಾಯ್ತು. ಓದಿ ಚೆನ್ನಾಗಿದೆ ಎಂದರು. ಅಂದಿನಿಂದ ನನ್ನ ಹಲವಾರು ಲೇಖನಗಳಲ್ಲಿನ ಸಂದೇಹಗಳಿಗೆ ಗಣೇಶ್‌ರವರು ಪರಿಹಾರ ಸೂಚಿಸಿದ್ದಾರೆ. ನನ್ನ ಸಂಪ್ರಬಂಧ ಬರೆಯುತ್ತಿದ್ದಾಗ. ಒಮ್ಮೆ ಮೊದಲು 'ಜೈನಧರ್ಮದ ಬಗೆಗೆ ಓದಿ ಖಚಿತಪಡಿಸಿಕೊಳ್ಳಿ. ಏಕೆಂದರೆ ಈ ವಿಷಯದಲ್ಲಿ ನೀವೇ ತಿಳಿದಿರಬೇಕು, ನಾವ್ಯಾರು ಜೈನ ತತ್ವದ ಬಗಗೆ ಆಳವಾಗಿ ಓದಿಲ್ಲ ಎಂದರು. ಅವರೆಂದಂತೆ ಹತ್ತಾರು ಪುಸ್ತಕಗಳನ್ನು ಓದಿದ್ದರ ಪರಿಣಾಮ ನನಗೆ ಒಂದು ಅಧ್ಯಾಯವನ್ನು ಸುಲಭವಾಗಿ ಬರೆಯಲು ಸಾಧ್ಯವಾಯಿತು. 'ವೀರೇಶ ಚರಿತೆ' 'ಹರಿವಂಶಾಭ್ಯುದಯ' ಮುಂತಾದ ನಾಲ್ಕಾರು ಕೃತಿಗಳನ್ನು ತಮ್ಮ ಪುಸ್ತಕ ಭಂಡಾರದಿಂದ ನನಗೆ ಓದಲು ಕೊಟ್ಟಿದ್ದರು. ನನಗೆ ಮಾತ್ರವಲ್ಲ ಇವರು 'ಪುಸ್ತಕಪ್ರೇಮಿ'ಯಾಗಿರುವಂತೆ 'ಶಿಷ್ಯವತ್ಸಲರೂ' ಹೌದು. ಅನೇಕರಿಗೆ ತಮ್ಮ ಪುಸ್ತಗಳನ್ನು ಕೊಟ್ಟು ಓದಿಸಿ ಅವರಿಂದ ಲೇಖನಗಳನ್ನು ಬರೆಸಿ ಸಂತೋಷಪಟ್ಟವರು. ಆದರೆ ಅವರೆಂದೂ ಯಾರೊಂದಿಗೂ ಸಿಟ್ಟಾದುದನ್ನು ನಾನು ನೋಡಿಲ್ಲ.

ಕರ್ನಾಟಕದ ಶೈವ ಶಿಲ್ಪಗಳು ಕೃತಿ ಸಿದ್ಧಪಡಿಸಿದಾಗ ನನಗೆ ಮೊದಲೊಮ್ಮೆ ಯಾರಿಗಾದೂ ತೋರಿಸಬೇಕೆನ್ನಿಸಿತು. ಇದನ್ನು ಬರೆಯಲು ಮತ್ತೊಬ್ಬ ಗುರುಗಳಾದ ರೆಡ್ಡಿ ಮಾಸ್ತ್ರು ಸೂಚಿಸಿದ್ದರು. ಆದ್ದರಿಂದ ಅವರನ್ನು ಕೇಳುವುದು ತರವಲ್ಲ. ನಾನು ಕೂಡಲೇ ಗಣೇಶ್ ಮಾಸ್ತ್ರಿಗೆ ಫೋನ್ ಮಾಡಿದೆ. ಅವರು ಶನಿವಾರ ಮದ್ಯಾಹ್ನ ನಾನೇ ಬರುತ್ತೇನೆ. ಓದೋಣ ಎಂದರು. ಅವರು ನೀಡಿದ ೧-೨ ಸೂಚನೆಗಳನ್ನು ಅಳವಡಿಸಿ ಪ್ರಕಟಣೆಗೆ ಕಳಿಸಿದೆ. ಹೀಗೆ ನಮಗೆ ಯಾವುದೇ ವಿಚಾರದಲ್ಲಿ ಸಂದೇಹ ಬಂದರೂ ಹಿಂಜರಿಕೆಯಾದರೂ ನನ್ನ ಗುರುಗಳಾದ ಗಣೇಶ್ ಮಾಸ್ತ್ರ ಸಹಾಯ ಹಸ್ತ ನನಗೆ ನೆರವಾಗಿದೆ. ನಮಗೆ ತಿಳಿಯದಂತೆ ನಮ್ಮಲ್ಲಿದ್ದ ಸುಪ್ತ ಪ್ರತಿಭೆಯನ್ನು ಗುರುತಿಸಿ, ಬೆಳೆಯಲು ಪ್ರೋತ್ಸಾಹಿಸಿ ತಮ್ಮಂತೆ ನಮ್ಮನ್ನು ಸಂಶೋಧನ ಮಾರ್ಗದಲ್ಲಿ ಕರೆದೊಯ್ದ ಮಹನೀಯರು ಇವರು. ಒಳ್ಳೆಯ ಗುರುಗಳನ್ನು ಪಡೆಯಲು ಪುಣ್ಯವಿರಬೇಕೆಂಬ ಮಾತು ಸುಳ್ಳಲ್ಲವೆನ್ನಿಸುತ್ತದೆ.

ಡಾ॥ ಗಣೇಶ್‌ರವರು ಎಲೆಮರೆಯ ಕಾಯಂತೆ ಬಾಳಿದವರು. ತುಂಬಿದ ಕೊಡ ತುಳುಕುವುದಿಲ್ಲವೆಂಬಂತೆ ಹೆಚ್ಚು ಬರೆಯದೇ, ಪ್ರಚಾರಗಳಿಸದೇ ಮರೆಯಲ್ಲೇ ಮೆರೆದವರು.

ಸರಳ, ಸಜ್ಜನಿಕೆಯ ಸ್ನೇಹಜೀವಿ, ವಿಜ್ಞಾನ, ವಾಣಿಜ್ಯ, ಗಣಕಯಂತ್ರಗಳ ತಂತ್ರಗಾರಿಕೆಯ ನೈಪುಣ್ಯವುಳ್ಳ ಕುಶಲಿ, ಕನ್ನಡ, ಇಂಗ್ಲಿಷ್, ಸಂಸ್ಕೃತ, ತೆಲುಗು ಹಲವು ಭಾಷೆಗಳನ್ನು ಬಲ್ಲ ಭಾಷಾಕೋವಿದ, ಸಂಗೀತ ಸಾಹಿತ್ಯ ಕಲಾನಿಪುಣರಾದ ಡಾ.ಕೆ.ಆರ್ ಗಣೇಶ್‌ರವರು ಮಿತಭಾಷಿ, ಗಂಭೀರ ಚಿಂತಕ, ಕಲಾರಾಧಕ, ಸಾಹಿತ್ಯೋಪಾಸಕರು.

ತಮ್ಮಂತೆ ತಮ್ಮ ಮಕ್ಕಳಲ್ಲಿ ಸಾಹಿತ್ಯ ಆಸಕ್ತಿಯನ್ನು, ಶಾಸನ ಅಭ್ಯಾಸವನ್ನು ರೂಢಿಸಿದ್ದು, ತಮ್ಮ ವಿದ್ವತ್ತಿನ ಪರಂಪರೆ ಮುನ್ನಡೆಯುವಂತೆ ಮಾಡಿದ್ದಾರೆ. ವೃತ್ತಿಯಿಂದ ನಿವೃತ್ತರಾದ ಮೇಲೂ ಸಹೃದಯರಾದ ಸಾಹಿತ್ಯ ಪ್ರಿಯರ ಬಳಗದಲ್ಲಿ ಕಾವ್ಯಾಭ್ಯಾಸವನ್ನು ನಡೆಸುತ್ತಿದ್ದಾರೆ. ಬಿ.ಎಂ.ಶ್ರೀ ಪ್ರತಿಷ್ಠಾನದ ಎಂ.ಫಿಲ್. ತರಗತಿಗಳಿಗೆ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿರುವ ಗಣೇಶ್‌ರವರು ಆಗಾಗ ಹಳೆಗನ್ನಡ ಕಾವ್ಯ ಶಿಬಿರಗಳನ್ನು ನಡೆಸುತ್ತಾರೆ. ಇಂಥ ನಮ್ಮ ಗುರುಗಳಿಗೆ ನಡೆಯುತ್ತಿರುವ ಅಭಿನಂದನಾ ಸಮಾರಂಭದಲ್ಲಿ ನನ್ನ ಈ ನುಡಿನಮನವನ್ನು ಅವರಿಗೆ ಸಲ್ಲಿಸುತ್ತಿದ್ದೇನೆ. ಇದು ನನ್ನ ಸುಯೋಗವೇ ಸರಿ.

*****

# ಕೆ.ಆರ್. ಗಣೇಶ ಅವರ ಕೃತಿಗಳು ಹಾಗೂ ವ್ಯಕ್ತಿತ್ವ

* ಡಾ॥ ನಾ. ಗೀತಾಚಾರ್ಯ

ಗುರುಗಳಾದ ಡಾ॥ ಗಣೇಶ್ ಅವರು ಬರೆದದ್ದು ಕಡಿಮೆ, ಬರೆಸಿದ್ದು ಹೆಚ್ಚು. ಬೋಧಿಸಿದ್ದು ಇನ್ನೂ ಹೆಚ್ಚು. ಅವರಿಗೆ ಬರೆಯುವುದಕ್ಕಿಂತ ಬೋಧಿಸುವುದೇ ಹೆಚ್ಚು ಇಷ್ಟವಾದ ಕಾರ್ಯ. ಆದ್ದರಿಂದಲೇ ಹೆಚ್ಚು ಬರೆಯಲಿಲ್ಲ ಎಂದು ಕೊಂಡಿದ್ದೇನೆ. ಡಾ॥ ಶೇಷಶಾಸ್ತ್ರಿಯವರು ಒತ್ತಾಯಿಸದೇ ಇದ್ದರೆ ಪ್ರಾಯಶಃ ಪಿ.ಎಚ್.ಡಿ.ಯ್ನೂ ಮಾಡುತ್ತಿರಲಿಲ್ಲವೆಂದೇ ನನ್ನ ಅನಿಸಿಕೆ. ಅನಂತಪುರ ಕೃಷ್ಣದೇವರಾಯ ವಿ.ವಿ. ಮೂಲಕ ನಡೆಸಿದ ಪಿ.ಎಚ್.ಡಿ. ▯ ಅಧ್ಯಯನ ಗ್ರಂಥ 'ಆಂಧ್ರ ಪ್ರದೇಶದ ಕನ್ನಡ ಶಾಸನಗಳು : ಒಂದು ಅಧ್ಯಯನ'. ಇದರ ಸಂಗ್ರಹ ರೂಪ ೧೯೯೬ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿದೆ. ಇದರ ಫಲವಾಗಿ ಡಾ॥ ಶೇಷಶಾಸ್ತ್ರಿ ಅವರೊಂದಿಗೆ ಸೇರಿ ಹಂಪಿ ಕನ್ನಡ ವಿ.ವಿ.ಯ ಮೂಲಕ 'ಆಂಧ್ರಪ್ರದೇಶದ ಕನ್ನಡ ಶಾಸನಗಳು' ಎರಡು ಸಂಪುಟಗಳಲ್ಲಿ ೨೦೦೧ರಲ್ಲಿ ಪ್ರಕಟವಾಗಿದೆ. ಇವೆರಡೇ ಇವರ ಅತ್ಯಂತ ಪ್ರಮುಖ ಗ್ರಂಥಗಳೆಂದು ಹೇಳಬಹುದು. ಉಳಿದಂತೆ ಇತರರೊಂದಿಗೆ ಸಂಪಾದಿಸಿದ ಮೂರು ಹಾಗೂ ವಿದ್ಯಾರ್ಥಿಗಳಿಗಾಗಿ ಸಿದ್ಧಪಡಿಸಿದ ಎರಡು ಗ್ರಂಥಗಳು ಈ ಕೆಳಕಂಡಂತಿವೆ.

**ಸಂಪಾದಿತ ಗ್ರಂಥಗಳು :**

೧. ಸರ್ವಜ್ಞನ ವಚನಗಳು : (ವಿ. ವೆಂಕಟರಾವ್‌ರೊಂದಿಗೆ, ಪ್ರಸಂ. ಎಂ.ವಿ. ಸೀತಾರಾಮಯ್ಯ), ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೮೦.

೨. ಮುದ್ದಣ ಪ್ರಶಸ್ತಿ ಗ್ರಂಥ : (ಟಿ. ಕೇಶವಭಟ್ಟರೊಂದಿಗೆ) ಸಾಹಿತ್ಯ ಕುಟೀರ, ಬೆಂ, ೧೯೭೪.

೩. ಸಿರಿಭೂವಲಯ : (ಹಿರಿಯ ವಿದ್ವಾಂಸರೊಂದಿಗೆ), ಪುಸ್ತಕ ಶಕ್ತಿ, ಬೆಂಗಳೂರು, ೨೦೦೩, ವಿದ್ಯಾರ್ಥಿಗಳಿಗಾಗಿ ರಚಿಸಿದ ಗ್ರಂಥಗಳು.

೪. ಛಂದಸ್ಸು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೮.

೫. ಶಾಸನ ಸರಸ್ವತಿ : ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮.

ಆಂದ್ರಪ್ರದೇಶದ ಕನ್ನಡ ಶಾಸನಗಳು, ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ. ಅದರಲ್ಲೂ ಶಾಸನಾಭ್ಯಾಸಿಗಳಿಗೆ ಮಹತ್ವದ ಗ್ರಂಥವಾಗಿದೆ. ಕನ್ನಡ ಶಾಸನಗಳ ಚರಿತ್ರೆ ಬರೆಯುವಾಗ ಕರ್ನಾಟಕದ ಶಾಸನಗಳನ್ನಷ್ಟೇ ಪರಿಗಣಿಸಲಾಗುತ್ತಿತ್ತಾದರೂ ಖಚಿತ ಮಾಹಿತಿಯಿರಲಿಲ್ಲ. ಬೇರೆ ಬೇರೆ ಮೂಲಗಳನ್ನು ಅವಲಂಬಿಸಬೇಕಾಗುತ್ತಿತ್ತು. ಇದೀಗ ಡಾ॥ ಗಣೇಶ್ ಅವರ ಪರಿಶ್ರಮದಿಂದ ಆಂಧ್ರಪ್ರದೇಶದ ಕನ್ನಡ ಶಾಸನಗಳು ಒಂದೆಡೆ ಲಭ್ಯವಾದದ್ದಲ್ಲದೆ ಅವುಗಳ ಅಧ್ಯಯನವೂ ಆದಂತಾಗಿದೆ. ಚಾರಿತ್ರಿಕ ಕರ್ನಾಟಕ ಗಡಿ, ಆಂಧ್ರ, ಮಹಾರಾಷ್ಟ್ರ, ತಮಿಳುನಾಡುಗಳನ್ನೆಲ್ಲಾ ಒಳಗೊಂಡಿರುವುರಿಂದ ಆ ರಾಜ್ಯಗಳ ಯಾವ ಯಾವ ಪ್ರಾಂತ್ಯಗಳು ಕರ್ನಾಟಕದ ಯಾವ ಯಾವ ರಾಜರುಗಳ ಅಳ್ವಿಕೆಯಲ್ಲಿತ್ತು ಎಂಬುದರ ಖಚಿತ ಮಾಹಿತಿ ಇವರ ಗ್ರಂಥದಿಂದ ಸ್ಪಷ್ಟವಾಗಿದೆ. ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ ಮತ್ತು ಭಾಷಿಕವಾಗಿ ಈ ಶಾಸನಗಳ ಅಧ್ಯಯನವನ್ನೂ ಇನ್ನು ಮುಂದಿನ ಶಾಸನಾಧ್ಯಯನಾಧಾರಿತ ಸಂಶೋಧನೆಗಳು ಅಳವಡಿಸಿಕೊಳ್ಳಲು ಇದರಿಂದ ಸಾಧ್ಯವಾಗಿದೆ. ಇಂತಹ ಮಹತ್ವ ಕೃತಿಯನ್ನು ನೀಡಿದ ಡಾ॥ ಗಣೇಶ್ ಅವರು ಅಭಿನಂದನಾರ್ಹರಾಗಿದ್ದಾರೆ.

---

* ನಂ ೧೪೫ ವಿಜಯ ಅಪಾರ್ಟ್‌ಮೆಂಟ್ ೫ನೆ ಮುಖ್ಯರಸ್ತೆ ಚಾಮರಾಜಪೇಟೆ ಬೆಂಗಳೂರು – ೧೮

'ಮುದ್ದಣ ಪ್ರಶಸ್ತಿ ಗ್ರಂಥ'ವನ್ನು ೧೯೭೪ರಲ್ಲೇ ವಿದ್ವಾನ್. ಓ. ಕೇಶವಭಟ್ಟರೊಂದಿಗೆ ಸಂಪಾದಿಸಿದ್ದಾರೆ. ಆಗಿನಿಂದಲೇ ಗಣೇಶ್ ಅವರಿಗಿದ್ದ ಸಾಹಿತ್ಯ ಸಂಬಂಧವನ್ನು ಇದು ದಾಖಲಿಸುತ್ತದೆ. ಹಳಗನ್ನಡ ಮತ್ತು ಹೊಸಗನ್ನಡದ ಕೊಂಡಿಯಾದ ಮುದ್ದಣನನ್ನು ಸಾಹಿತ್ಯ ಲೋಕಕ್ಕೆ ಸಮರ್ಥವಾಗಿ ಪರಿಚಯಿಸುವ ಗ್ರಂಥವಾಗಿದ್ದು ಇದರಲ್ಲಿ ಅನೇಕ ಪ್ರಮುಖ ವಿದ್ವಾಂಸರ ಮೌಲಿಕ ಲೇಖನಗಳಿವೆ.

'ಸಿರಿಭೂವಲಯ'ವನ್ನು ೨೦೦೩ರಲ್ಲಿ ಹಿರಿಯ ವಿದ್ವಾಂಸರೊಂದಿಗೆ ಸಂಪಾದಿಸಿರುವ ಡಾ॥ ಗಣೇಶ್ ಅವರು ಈ ವಿಶಿಷ್ಟ ಗ್ರಂಥದ ಬಗೆಗೆ ಅಧಿಕೃತವಾಗಿ ಮಾತಾಡಬಲ್ಲ ಪರಿಣಿತರಾಗಿದ್ದಾರೆ. ಈ ಗ್ರಂಥವನ್ನು ಪುಸ್ತಕ ಶಕ್ತಿ ಪ್ರಕಟಿಸಿದೆ. ಕನ್ನಡ ಸಾರಸ್ವತ ಲೋಕದಲ್ಲಿ ಇದೊಂದು ಅಪರೂಪದ ಗ್ರಂಥ. ಜಾಗತಿಕ ಗ್ರಂಥ ಚರಿತ್ರೆಯಲ್ಲೇ ಇದು ಏಕಮೇವಾದ್ವಿತೀಯ. ಇಂತಹ ಇನ್ನೊಂದು ಗ್ರಂಥ ಜಗತ್ತಿನಲ್ಲಿ ಯಾವ ಭಾಷೆಯ ಪುಸ್ತಕ ಲೋಕದಲ್ಲೂ ಇಲ್ಲ. ಇದರಲ್ಲಿ ೭೧೮ ಭಾಷೆಗಳಿವೆ. ಇದೊಂದು ಎಲ್ಲಾ ವಿಷಯಗಳು ಇರುವ ವಿಶ್ವಕೋಶ. ಭಾರತ, ಭಾಗವತ, ಭಗವದ್ಗೀತೆ, ಗಣಿತ, ಜ್ಯೋತಿಷ್ಯ, ಆಯುರ್ವೇದ, ಯೋಗ, ವಿಜ್ಞಾನ, ವೈದ್ಯ ಇತ್ಯಾದಿ ಎಲ್ಲಾ ವಿಷಯಗಳೂ ಅಡಕವಾಗಿವೆ. ಪ್ರಧಾನವಾಗಿ ಯಾವುದೇ ಲಿಪಿಯೆಂಬುದಿಲ್ಲ. ಇಲ್ಲಿರುವ ಲಿಪಿ ಅಂಕಲಿಪಿ. ಕನ್ನಡದ ೧ ರಿಂದ ೬೪ ಅಂಕಿಗಳ ಲಿಪಿಯನ್ನು ಬಳಸಿ ೨೭ ಷ ೨೭ ಚೌಕಗಳನ್ನು ತುಂಬಿರುವ ಪಟ್ಟಿಕೆಗಳೇ ಈ ಗ್ರಂಥದ ಪುಟಗಳು. ಈ ೬೪ ಅಂಕಿಗಳನ್ನು ಕನ್ನಡ ಲಿಪಿಯ ೬೪ ಅಕ್ಷರಗಳಿಗೆ ಸಂಕೇತವಾಗಿ ಇಲ್ಲಿ ಬಳಸಿದೆ. ಆದರೆ ಅಂಕಿಗಳನ್ನು ಅಕ್ಷರಕ್ಕೆ ಪರಿವರ್ತಿಸಿದ ಮಾತ್ರಕ್ಕೆ ಓದಲಾಗುವುದಿಲ್ಲ. ಓದುವ ಕ್ರಮದಲ್ಲೂ ವಿಶಿಷ್ಟ ತಂತ್ರವಿದೆ. ಹಲವು ರೀತಿಯ ಬಂಧಗಳನ್ನು ಕೊಟ್ಟಿದ್ದು ಒಂದೊಂದು ಬಂಧದಲ್ಲಿ ಬರುವ ಅಂಕಿಗಳಿಗೆ ಆಯಾ ಅಕ್ಷರಗಳನ್ನು ಕೂಡಿಸಿಕೊಂಡು ಓದಿದರೆ ಒಂದೊಂದು ಭಾಷೆಯಲ್ಲಿ ಒಂದೊಂದು ವಿಷಯದ ಗ್ರಂಥಗಳು ಕಂಡು ಬರುತ್ತವೆ. ಹೀಗೆ ವಿಶಿಷ್ಟ ತಂತ್ರಗಾರಿಕೆಯಿಂದ ರಚಿಸಿರುವ ಈ ಅದ್ಭುತ ಗ್ರಂಥದ ಕವಿ ಕುಮುದೇಂದುಮುನಿ, ಇವನ ಸ್ಥಳ ಚಿಕ್ಕಬಳ್ಳಾಪುರದ ಸಮೀಪದ ನಂದಿಬೆಟ್ಟದ ತಪ್ಪಲಿನಲ್ಲಿರುವ ಯಲವಹಳ್ಳಿ. ಇವನ ಕಾಲ ಸುಮಾರು ೧೬-೧೭ನೇ ಶತಮಾನ. ಈ ಗ್ರಂಥದ ಹೆಸರನ್ನು ಹಿಂದಿನಿಂದ ಓದಿದರೆ ಕವಿಯ ಹೆಸರು ಸ್ಥಳ ಗೋಚರವಾಗುತ್ತದೆ. ಇದು ಗಿನ್ನೀಸ್ ದಾಖಲೆಗೆ ಸೇರಬೇಕಾದ ಗ್ರಂಥ. ಈ ಅಪರೂಪದ ಗ್ರಂಥವನ್ನು ನೂರು ವರ್ಷಗಳ ಹಿಂದೆ ಬೆಳಕಿಗೆ ತಂದು ಪ್ರಚಾರ ಮಾಡಿ ತಮ್ಮ ತನು-ಮನ-ಧನವನ್ನೆಲ್ಲಾ ಸಮರ್ಪಿಸಿದವರು ಪಂಡಿತ ಎಲ್ಲಪ್ಪ ಶಾಸ್ತ್ರೀಗಳು. ಕರ್ಲಮಂಗಲಂ ಶ್ರೀಕಂಠಯ್ಯನವರು, ಕೆ. ಅನಂತಸುಬ್ಬರಾವ್ ಮತ್ತು ಡಾ॥ ಎಸ್. ಶ್ರೀಕಂಠಶಾಸ್ತ್ರಿಗಳು. ಈ ಪೂರ್ವಸೂರಿಗಳು ಸತತ ಪರಿಶ್ರಮದಿಂದ ಅಂಕಲಿಪಿಯಲ್ಲಿರುವ ಈ ಗ್ರಂಥವನ್ನು ಎಲ್ಲಪ್ಪ ಶಾಸ್ತ್ರಿಗಳು ಕಂಡು ಹಿಡಿದ 'ಶ್ರೇಣಿ' ಬಂಧನ ಮೂಲಕ ಬಿಡಿಸಿ ಮೊದಲ ಭಾಗವನ್ನು ೧೯೫೩ರಲ್ಲಿ ಪ್ರಕಟಿಸಿದ್ದರು. ಆ ಪುಸ್ತಕದಲ್ಲಿ ಅಂಕಿಗಳಿಗೆ ಅಕ್ಷರಗಳನ್ನು ಅಳವಡಿಸಿದುದರಿಂದ ವ್ಯಂಜನರಹಿತ ಹಾಗೂ ಒತ್ತಕ್ಷರವಿಲ್ಲದ ಬಿಡಿ ಅಕ್ಷರಗಳಿಂದ ಮುದ್ರಿಸಿದ್ದರು. ಅದನ್ನೆ ಅವರುಗಳು ನಿರಂತರವಾಗಿ ಪ್ರಚಾರ ಮಾಡುತ್ತಿದ್ದರಾದರೂ ಓದಿಸಿಕೊಂಡು ಹೋಗುವಲ್ಲಿ ಆ ಗ್ರಂಥ ವಿಫಲವಾಗಿತ್ತು. ಪಂಡಿತ ಎಲ್ಲಪ್ಪ ಶಾಸ್ತ್ರಿಗಳ ಮಕ್ಕಳಾದ ಎಂ.ವೈ. ಧರ್ಮಪಾಲ್ ಅವರ ಸಂಗ್ರಹದಲ್ಲಿದ್ದ ಈ ಅದ್ಭುತ ಗ್ರಂಥವನ್ನು ಅವರ ಸ್ನೇಹಿತರಾದ ವೈ.ಕೆ. ಮೋಹನ್ ಅವರು ಶ್ರಮವಹಿಸಿ ತಮ್ಮ ಪುಸ್ತಕ ಶಕ್ತಿಪ್ರಕಾಶನದ ಮೂಲಕ ೨೦೦೩ರಲ್ಲಿ ಪ್ರಕಟಿಸಿದರು. ಈ ಗ್ರಂಥ ಪ್ರಕಟಣೆಗಾಗಿಯೇ ಅವರೊಂದು ತಜ್ಞರ ಸಂಪಾದಕ ಸಮಿತಿಯನ್ನು ರಚಿಸಿದ್ದರು. ಅದರಲ್ಲಿ ಪ್ರೊ. ಕೆ. ವೆಂಕಟಸುಬ್ಬಯ್ಯ, ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿ, ಡಾ॥ ಸಾ.ಶಿ. ಮರುಳಯ್ಯ ಮುಂತಾದ ಗಣ್ಯರನೇಕರ ಜೊತೆ ಡಾ॥ ಕೆ.ಆರ್. ಗಣೇಶ್ ಅವರೂ ಇದ್ದರು.

ಈ ಗ್ರಂಥದಲ್ಲಿ ಡಾ॥ ಗಣೇಶ್ ಅವರ ಪಾತ್ರ ಬಹಳ ಮುಖ್ಯವಾದುದು. ವೈ.ಕೆ. ಮೋಹನ್ ಅವರು ಈ ಗ್ರಂಥ ವಿನ್ಯಾಸವನ್ನು ರೂಪಿಸಿದ್ದು ಮೊದಲಿಗೆ ಎಲ್ಲಪ್ಪಶಾಸ್ತ್ರಿಗಳು ಮುದ್ರಿಸಿದ್ದ ಪುಟಗಳನ್ನು ಯಥಾವತ್ತಾಗಿ ಕೊಟ್ಟು ನಂತರ ಅದರ ಹೊಸಗನ್ನಡ ರೂಪವನ್ನು ಅದರ ಪದ್ಯ ಸ್ವರೂಪವನ್ನೂ ನೀಡಿದ್ದಾರೆ. ನಂತರ ಪ್ರತಿ ಅಧ್ಯಯನದ ತಾತ್ಪರ್ಯವನ್ನು ಒದಗಿಸಿದ್ದಾರೆ. ಈ ಗ್ರಂಥದ ಸಾಹಿತ್ಯ ಭಾಗದೊಂದಿಗೆ ಮೂಲ ಗ್ರಂಥದ ಅಂಕ ಪುಟಗಳನ್ನು ಅದಕ್ಕೆ ಅಳವಡಿಸಬಹುದಾದ ಶ್ರೇಣಿಬಂಧದ ಪಾರದರ್ಶಕ ಪುಟವನ್ನು ನೀಡಿ ಓದುಗರೂ ಅಂಕ ಪುಟಗಳನ್ನು ಅಕ್ಷರ ಪುಟವಾಗಿ ಪರಿವರ್ತಿಸಲು ಅನುಕೂಲ ಕಲ್ಪಿಸಿದ್ದಾರೆ. ಒಟ್ಟು ಸುಮಾರು ೩೦೦ ಪುಟಗಳಲ್ಲಿ ಕ್ರೌನ್ ೧/ ೪ ಆಕಾರದಲ್ಲಿ ಗಟ್ಟಿ ರಟ್ಟಿನಿಂದ ಹೊರಬಂದಿರುವ ಈ ಗ್ರಂಥ ಮೊದಲ ಭಾಗ ಮಾತ್ರವಾಗಿದೆ. (ಈಚೆಗೆ ಎರಡನೇ ಭಾಗವೂ ಬಂದಿದೆ). ಎಲ್ಲಪ್ಪಶಾಸ್ತ್ರಿಗಳು ಬಿಡಿಸಿದ ಬಂಧ ಇಲ್ಲಿಗೆ

ಮುಗಿದಿದ್ದು ಮುಂದಿನದನ್ನು ಬಿಡಿಸಬೇಕಾಗಿದೆ. ಡಾ॥ ಗಣೇಶ್ ಅವರು ಕರ್ಲಮಂಗಲಂ ಶ್ರೀಕಂಠಯ್ಯನವರ ಸ್ವರ-ಸಂಯುಕ್ತ ರಹಿತ ಪಠ್ಯವನ್ನು ಈಗಿನ ಕನ್ನಡಕ್ಕೆ ಅಳವಡಿಸಿ ತಾತ್ಪರ್ಯ ನೀಡಿರುವ ಭಾಗವನ್ನು ಸಿದ್ಧಪಡಿಸಿದ್ದು ಇದೇ ಗ್ರಂಥದ ಮುಖ್ಯ ಭಾಗವಾಗಿದೆ. (ಡಾ॥ ಟಿ.ವಿ.ವಿ. ಅವರು ಪ್ರಸ್ತಾವನೆ ಮತ್ತು ಉಳಿದವರು ಅಭಿಪ್ರಾಯ ದಾಖಲಿಸಿದ್ದಾರೆ.) ಹೀಗಾಗಿ ಈ ಗ್ರಂಥದ ಪ್ರಧಾನ ಪಠ್ಯವನ್ನು ಸಿದ್ಧಪಡಿಸಿದ ಕಾರ್ಯ ಡಾ॥ ಗಣೇಶ್ ಅವರ ಕೊಡುಗೆಯಾಗಿ ಮಹತ್ವದ್ದಾಗಿದೆ.

'ಸರ್ವಜ್ಞ ವಚನಗಳು' ಡಾ॥ ಗಣೇಶ್ ಅವರ ಗ್ರಂಥ ಸಂಪಾದನಾ ಕೃತಿ. ಪಿ. ವೆಂಕಟರಾವ್ ಜೊತೆ ಸಂಪಾದಕರು, ಪ್ರೊ॥ ಎಂ.ವಿ. ಸೀತಾರಾಮಯ್ಯ ಪ್ರಧಾನ ಸಂಪಾದಕರು. ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ ೧೯೮೦ರಲ್ಲಿ ಪ್ರಕಟವಾಗಿದೆ. ಎಂ.ವಿ.ಸೀ.ಯವರು ಈ ಕೃತಿಗೆ ವಿವರವಾದ ಪ್ರಸ್ಥಾವನೆ ಬರೆದಿದ್ದರೂ ಅದಕ್ಕೆ ಅಗತ್ಯವಾದ ಸಾಮಗ್ರಿಯನ್ನೆಲ್ಲಾ ಒದಗಿಸಿದವರು, ಬಹುಪಾಲು ಸಂಪಾದನಾ ಕಾರ್ಯವನ್ನು ಪೂರೈಸಿದವರು ಡಾ॥ ಗಣೇಶ್ ಅವರೇ. ಸುಮಾರು ನಾಲ್ಕೈದು ಹಸ್ತಪ್ರತಿ ಮತ್ತು ಮುದ್ರಿತ ಪ್ರತಿಗಳ ನೆರವಿನಿಂದ ಇದರ ಸಂಪಾದನಾ ಕಾರ್ಯ ನಡೆದಿದೆ. ಆ ಪ್ರತಿಗಳ ಪಾಠಾಂತರ ಸಂಕಲನ, ಸಂಪ್ರತಿ, ಕಿಟ್ಟೆಲ್ ಕೋಶದ ತ್ರಿಪದಿಗಳ ಸಂಗ್ರಹ ಇತ್ಯಾದಿ ಗ್ರಂಥ ಸಂಪಾದನಾ ಕಾರ್ಯವನ್ನೆಲ್ಲ ಡಾ॥ ಗಣೇಶ್ ಅವರೇ ಮಾಡಿರುವುದು ನಾನು ಗಮನಿಸಿದ್ದೇನೆ. ಈ ಕೃತಿಯ ಸಂಪಾದನಾ ಕಾರ್ಯ ನಡೆಯುವಾಗ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಾನು ಸಹಾಯಕನಾಗಿ ಕೆಲಸ ಮಾಡುತ್ತಿದ್ದೆ. ಹಾಗೆ ನೋಡಿದರೆ ಈ ಗ್ರಂಥದ ಮುಖಪುಟದ ವಿನ್ಯಾಸವನ್ನು ರಚಿಸಿದವನು ನಾನೇ. ಎಂ.ವಿ.ಸೀ. ಅವರೇ ಸ್ವತಃ ಕಲಾವಿದರಾಗಿದ್ದರೂ ನನ್ನಲ್ಲೂ ಕಲೆಯ ಗೀಳು ಇರುವುದನ್ನು ತಿಳಿದು ಮುಖಪುಟದ ವಿನ್ಯಾಸವನ್ನು ನನ್ನಿಂದಲೇ ಬರೆಸಿದರು. 'ಶ್ರೀ ಕೃಷ್ಣದೇವರಾಯ ದಿನಚರಿ'ಯ ಮುಖಪುಟ, ಪ್ರತಿಷ್ಠಾನದ ಲೋಗೋಗಳನ್ನು ನಾನೇ ರಚಿಸಿದವನು.

'ಶಾಸನ ಸರಸ್ವತಿ' ಮತ್ತು 'ಛಂದಸ್ಸು' ಶಾಸನ ತರಗತಿಯ ಹಾಗೂ ಪರಿಷತ್ತಿನ ಕಾವ, ಜಾಣ, ರತ್ನ ತರಗತಿಯ ವಿದ್ಯಾರ್ಥಿಗಳಿಗಾಗಿ ರಚಿಸಿದವು. ಆದರೂ ಇವು ವಿದ್ವತ್ ಕೃತಿಗಳಾಗಿ ಗಮನ ಸೆಳೆಯುತ್ತವೆ. ಛಂದಸ್ಸಿನ ವಿಚಾರಗಳನ್ನು ಅತ್ಯಂತ ಸರಳವಾಗಿ ನಿರೂಪಿಸುವ ಗಣೇಶ್ ಅವರ ಶೈಲಿ ಓದುಗರನ್ನು ಹಿಡಿದಿಡುತ್ತದೆ. ಯಾರಿಗೆ ಹೇಗೆ ಬೇಕೋ ಹಾಗೆ ಹೇಳುವ ಕಲೆ ಗಣೇಶ್ ಅವರಿಗೆ ಚೆನ್ನಾಗಿ ಬಂದಿರುವುದು ಈ ಎರಡೂ ಕೃತಿಗಳಿಂದ ತಿಳಿಯುತ್ತದೆ. ಶಾಸನ ಸರಸ್ವತಿಯಲ್ಲಿ ಪ್ರಮುಖವಾದ ಇಪ್ಪತ್ತು ಶಾಸನಗಳ ವಿವರಗಳಿವೆ, ಈ ವಿವರಗಳು ವಿಶಿಷ್ಟವಾಗಿವೆ. ಶಾಸನ ಪಠ್ಯ, ಅದರ ಪದ್ಯ ಸ್ವರೂಪ, ಗದ್ಯ ವಿವರಣೆ, ವ್ಯಾಖ್ಯಾನಗಳನ್ನು ಪ್ರತಿಯೊಂದು ಶಾಸನಕ್ಕೂ ನೀಡಿದ್ದಾರೆ, ಶಾಸನ ವ್ಯಾಖ್ಯಾನದಲ್ಲಿ ಅದರ ಇತಿಹಾಸ, ಸಾಂಸ್ಕೃತಿಕ, ಸಾಹಿತ್ಯಿಕ, ಭಾಷಿಕ ಮಹತ್ವಗಳನ್ನೆಲ್ಲ ಕೊಟ್ಟಿದ್ದು ಆ ಶಾಸನದ ಬಗೆಗಿನ ವಿದ್ವಾಂಸರ ಅಭಿಪ್ರಾಯ, ಚರ್ಚೆಗಳನ್ನು ಕೊಟ್ಟಿದ್ದಾರೆ. ಶಾಸನ ವಿದ್ಯಾರ್ಥಿಗಳಿಗೆ ಇದು ಅತ್ಯಂತ ಉಪಯುಕ್ತ ಗ್ರಂಥವಾಗಿದೆ.

ಸಾಮಾನ್ಯವಾಗಿ ಶಾಸನಗಳನ್ನು ಪಠ್ಯಗಳಾಗಿ ಇಡಲಾಗುತ್ತದೆಯೇ ವಿನಾ ಆ ಶಾಸನ ಪಾಠಗಳಿಗೆ ಈ ರೀತಿಯ ವಿವರಣೆಗಳಿರುವುದಿಲ್ಲ. ಇಂಥದೊಂದು ವಿವರಣಾತ್ಮಕ ಗ್ರಂಥದ ಅವಶ್ಯಕತೆ ಬಹಳ ದಿನಗಳಿಂದ ಇತ್ತು. ವಿಶ್ವವಿದ್ಯಾಲಯದ ಶಾಸನ ವಿದ್ಯಾರ್ಥಿಗಳಿಗೂ ಇದು ಬಹಳ ಉಪಯುಕ್ತವಾಗಿದೆ. ಗಣೇಶ್ ಅವರಲ್ಲಿ ಇನ್ನೂ ಇಪ್ಪತ್ತು ಮೂವತ್ತು ಶಾಸನಗಳ ಸರಕಿದೆ. ನಾನು ಹಿಂದಿನಿಂದಲೂ ಇಂಥದೊಂದು ಪುಸ್ತಕ ಸಿದ್ಧಪಡಿಸಲು ಒತ್ತಾಯಿಸುತ್ತಲೇ ಇದ್ದೆ. ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ದಶಮಾನೋತ್ಸವ ಗ್ರಂಥಮಾಲೆಯಲ್ಲಿಯೇ ಇಂಥದೊಂದು ಗ್ರಂಥವನ್ನ ಪ್ರಕಟಿಸಬೇಕೆಂದು ಉದ್ದೇಶಿಸಿ, ಎಂ.ವಿ.ಸೀ., ಅವರನ್ನು ಒಪ್ಪಿಸಿ ಗ್ರಂಥಮಾಲೆಯ ಪುಸ್ತಕದ ಪಟ್ಟಿಯಲ್ಲೂ ಸೇರಿಸಲಾಗಿತ್ತು. ಎಲ್ಲಾ ಪ್ರಕಟಿತ ಪುಸ್ತಕಗಳ ಹಿಂಬದಿ ಪುಟದಲ್ಲೂ ಅಚ್ಚುಹಾಕಿಸಲಾಗಿತ್ತು. ಈ ಗ್ರಂಥದ ಸಿದ್ಧತೆಗೆ ಡಾ॥ ಗಣೇಶ್ ಅವರನ್ನೇ ಕೇಳಲಾಗಿತ್ತು. ಆದರೆ ಏನು ಕಾರಣದಿಂದಲೋ ಅವರಿಂದ ಆಗ ಈ ಪುಸ್ತಕ ಪ್ರತಿಷ್ಠಾನಕ್ಕೆ ದೊರಕಲಿಲ್ಲ. ಈಗಲಾದರೂ ಬಂದಿದೆಯಲ್ಲ ಎಂಬುದು ಸಂತೋಷದ ಸಂಗತಿಯಾಗಿದೆ. ಅವರಲ್ಲಿರುವ ಉಳಿದ ಶಾಸನಗಳ ವ್ಯಾಖ್ಯಾನಗಳನ್ನು ಹೀಗೆಯೇ ಇನ್ನೊಂದು ಪುಸ್ತಕದ ಮೂಲಕ ಹೊರತಂದರೆ ಶಾಸನಾಭ್ಯಾಸಿಗಳಿಗೆ ತುಂಬಾ ಅನುಕೂಲವಾಗುತ್ತದೆ.

ಈ ಗ್ರಂಥದಲ್ಲಿ ಡಾ॥ ಗಣೇಶ್‌ರವರು ಕೇವಲ ಶಾಸನ ಪಠ್ಯದ ವಿವರಣೆ ಮತ್ತು ವಿದ್ವಾಂಸರ ಚರ್ಚೆಗಳಿಗಷ್ಟೇ ಸೀಮಿತಗೊಳಿಸದೆ ವ್ಯಾಖ್ಯಾನದಲ್ಲಿ ತಮ್ಮ ವಿಚಾರಗಳನ್ನು ದಾಖಲಿಸಿದ್ದಾರೆ. ಪ್ರತಿಯೊಂದು ಶಾಸನವನ್ನು ತಮ್ಮದೇ ಆದ

ಚಿಂತನೆಯ ಮೂಸೆಯಲ್ಲಿ ಅದ್ದಿ ತೆಗೆದಿದ್ದಾರೆ, ಅವರ ಶಾಸನಾಧ್ಯಯನದ, ಸಾಹಿತ್ಯಾಧ್ಯಯನದ ಅನುಭವವನ್ನೆಲ್ಲಾ ಇದರಲ್ಲಿ ಅಡಕಗೊಳಿಸಿದ್ದಾರೆ. ಹಾಗಾಗಿಯೇ ಈ ಕೃತಿ ವಿದ್ಯಾರ್ಥಿಗಳಿಗಷ್ಟೇ ಅಲ್ಲದೆ ವಿದ್ವಾಂಸರಿಗೂ ಮುಖ್ಯವಾಗುತ್ತದೆ. ಈ ಕೃತಿಯಲ್ಲಿನ ಶಾಸನಗಳ ಚರ್ಚೆಯಲ್ಲಿ ಗಣೇಶ್ ಅವರ ಅಭಿಪ್ರಾಯವನ್ನು ದಾಖಲಿಸಲೇ ಬೇಕಾದಂತಹ ಮೌಲಿಕ ವಿಚಾರಗಳಿಂದ ಈ ಕೃತಿ ಮಹತ್ವವನ್ನು ಪಡೆದಿದೆ. ಇದೊಂದು ವಿದ್ವತ್‌ಪೂರ್ಣ ಕೃತಿಯಾಗಿದೆ. ಡಾ॥ ಗಣೇಶ್ ಅವರಿಂದ ಇಂತಹ ಇನ್ನೂ ಒಂದೆರಡು ಕೃತಿಗಳು ಹೊರಬರುವಂತಾಗಲಿ ಎಂದು ನನ್ನಂಥ ಹಲವರ ನಿರೀಕ್ಷೆಯಿದೆ. ಒಟ್ಟಾರೆ ಗಣೇಶ್ ಅವರು ಬರೆದಿರುವ ಕೃತಿಗಳು ಕೆಲವೇ ಆದರೂ ಅವೆಲ್ಲಾ ಮೌಲಿಕವಾದವುಗಳಾಗಿವೆ.

ಡಾ॥ ಕೆ.ಆರ್. ಗಣೇಶ್ ಅವರು ನನ್ನ ಶಾಸನಶಾಸ್ತ್ರ ತರಗತಿಯ ಮತ್ತು ಬಿ.ಎ. ತರಗತಿಯ ಗುರುಗಳು. ನಾನು ಎ.ಪಿ.ಎಸ್. ಕಾಲೇಜಿನಲ್ಲಿ ಬಿ.ಎ. ಐಚ್ಛಿಕ ಕನ್ನಡ ತರಗತಿಯಲ್ಲಿದ್ದಾಗ ನನ್ನ ಗುರುಗಳಾಗಿದ್ದರು. ನನ್ನಲ್ಲಿ ಕನ್ನಡ ಸಾಹಿತ್ಯ-ಶಾಸನ ಸಾಹಿತ್ಯದ ಬಗೆಗೆ ಆಸಕ್ತಿಮೂಡಿಸಿದರು. ನಾನು ದೊಡ್ಡಹೆಜ್ಜಾಜಿಯವನು ಎಂದು ತಿಳಿದ ಮೇಲೆ ಸಮೀಪದ ಕಾಶೀಪುರದ ಸಂಬಂಧ ಹೊಂದಿದ್ದ ಡಾ॥ ಗಣೇಶ್ ಅವರು ನನಗೆ ಇನ್ನೂ ಹೆಚ್ಚು ಪರಿಚಿತರಾದರು. ನಾನು ಸ್ವ-ಉದ್ಯೋಗದ ಮೂಲಕ ವಿದ್ಯಾಭ್ಯಾಸ ಮಾಡುತ್ತಿರುವುದನ್ನು ಕೇಳಿ, ಆಗತಾನೆ ಆರಂಭವಾಗಿದ್ದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಅದರ ಸಂಸ್ಥಾಪಕರೂ, ಪ್ರಸಿದ್ಧ ಸಾಹಿತಿಗಳೂ ಆಗಿದ್ದ ಪ್ರೊ॥ ಎಂ.ವಿ. ಸೀತಾರಾಮಯ್ಯನವರಿಗೆ ನನ್ನನ್ನು ಪರಿಚಯಿಸಿ, ಅಲ್ಲಿ ಅವರ ಸಹಾಯಕನನ್ನಾಗಿ ಸೇರಿಸಿದರು. ಅದು ನನಗೆ ಸಾಹಿತ್ಯಲೋಕಕ್ಕೆ ದಿಡ್ಡಿ ಬಾಗಿಲಾಯಿತು. ಇಂದು ನಾನು ಏನೇನೆಲ್ಲ ಆಗಿದ್ದೇನೋ ಅದಕ್ಕೆಲ್ಲ ಅದೇ ಕಾರಣ. ಅವರ ಸಹವಾಸ, ಒಡನಾಟ, ಅವರು ತೋರಿದ ದಾರಿ, ಮಾಡಿಸಿದ ಸಾಹಿತ್ಯದ ಕೆಲಸ, ಹೇಳಿದ ಮಾತುಗಳೆಲ್ಲ ನನಗೆ ದಾರಿ ದೀಪವಾಯಿತು. ಅವರಿಗೆ ಪ್ರತಿಕಾರನಾಗಿ ಪತ್ರ-ಲೇಖನಗಳನ್ನು ಬರೆದುಕೊಡುವುದು, ಪ್ರತಿಷ್ಠಾನದ ಕಛೇರಿಯ ವ್ಯವಹಾರಗಳನ್ನು ನೋಡಿಕೊಳ್ಳುವುದು ಇತ್ಯಾದಿ ಕಾರ್ಯಕರ್ತನಾಗಿ ನಾನು ನನ್ನ ಸೇವೆಯನ್ನು ಆರಂಭಿಸಿ, ಅನಂತರ ಸಹಾಯಕ ಕಾರ್ಯದರ್ಶಿಯಾದೆ. ಮುಂದೆ ಪ್ರೊ॥ ಎಂ.ವಿ. ಸತ್ಯನಾರಾಯಣರ ಸಂಪರ್ಕದಿಂದಾಗಿ ಅವರ ನಂತರ ಗೌರವ ಕಾರ್ಯದರ್ಶಿಯಾಗಿ ಮೊನ್ನೆಮೊನ್ನೆಯವರೆಗೂ ಆ ಸಂಸ್ಥೆಯಲ್ಲಿ ನನ್ನ ಸೇವೆಯನ್ನು ನಿಸ್ವಾರ್ಥದಿಂದ ಸಲ್ಲಿಸಿದ್ದೇನೆ. ಆರಂಭದಲ್ಲಿ ಎಂ.ವಿ.ಸಿ. ಅವರೇ ಸ್ವಂತದಿಂದ ೫೦ ರೂಗಳ ಸಹಾಯವನ್ನು ನೀಡುತ್ತಿದ್ದರು. ಆಗಾಗ್ಗೆ ಪ್ರತಿಷ್ಠಾನಕ್ಕೆ ಆರ್ಥಿಕ ಸೌಲಭ್ಯ ದೊರೆತಾಗ ಆಯಾ ಯೋಜನೆಗಳ ಹೆಸರಿನಲ್ಲಿ ಅಲ್ಪಸ್ವಲ್ಪ ಸಂಭಾವನೆ ನೀಡುತ್ತಿದ್ದರು. ಆಗ ನನೊಂದಿಗಿದ್ದವರು ವಿ. ವೆಂಕಟರಾವ್, ನಾನು ಎಂ.ವಿ. ಸತ್ಯನಾರಾಯಣರ ಮೂಲಕ ಶೇಷಾದ್ರಿಪುರಂ ಶಿಕ್ಷಣದತ್ತಿಯ ಕಾಲೇಜಿನ ಅಧ್ಯಾಪಕನಾದ ಮೇಲೆ ಸೀತಾರಾಮಯ್ಯನವರ ಶಿಷ್ಯರೇ ಆಗಿದ್ದ ಶಿಕ್ಷಣದತ್ತಿಯ ಗೌ॥ ಕಾರ್ಯದರ್ಶಿಗಳಾದ ದಿ॥ ಕೆ.ಸಿ. ಪುಟ್ಟನರಸಯ್ಯನವರು ನನ್ನ ಕೆಲಸವನ್ನು ಖಾಯಂ ಮಾಡಿದ ಮೇಲೆ ನನಗೆ ಅನ್ನಕೊಟ್ಟ ಸಂಸ್ಥೆ ಎಂಬ ಕಾರಣದಿಂದ ಆ ಅಲ್ಪ ಸಂಭಾವನೆಯನ್ನು ಸ್ವೀಕರಿಸದೆ ಕರ್ತವ್ಯಪ್ರಜ್ಞೆಯಿಂದ ಸಂಪೂರ್ಣ ಉಚಿತವಾಗಿ ಸೇವೆಸಲ್ಲಿಸಿದೆ. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ಸೇರಿದ ದಿನದಿಂದ (೧೯೮೦), ಕೊನೆಯ ದಿನದವರೆಗೆ (೧೨-೩-೨೦೧೨) ನನ್ನ ಎಲ್ಲ ಸಂಜೆಗಳನ್ನು ಪ್ರತಿಷ್ಠಾನಕ್ಕೆ ಮೀಸಲಿಟ್ಟಿದ್ದೇನೆ. ನನ್ನದೇ ಮನೆ ಎಂಬಂತೆ ಸಂಸ್ಥೆಗಾಗಿ ದುಡಿದಿದ್ದೇನೆ. ಅದರಲ್ಲೂ ಸೀತಾರಾಮಯ್ಯನವರು ನಿಧನರಾದ ಮೇಲೆ ಹಿಂದಿನ ದಿನ (೧೧-೩-೧೯೯೦) ರಾತ್ರಿ ಅವರ ೮೦ನೇ ವರ್ಷದ ಅಭಿನಂದನೆ ಮತ್ತು 'ಮಾದನ ಮಗಳು' ಬಿಡುಗಡೆ ಸಮಾರಂಭ ಮುಗಿಸಿ ಅವರ ಮನೆಗೆ ಹೋಗಿ ವರದಿ ಮಾಡುವಾಗ ಅವರಾಡಿದ ಮಾತು ಎಂ. ಗೋವಿಂದರಾಜು, ಮಗ ಭಾಸ್ಕರ್, ಶೇಷಾದ್ರಿ, ಪೋಸ್ಟ್‌ಮಾಸ್ಟರ್ ಮುಂತಾದವರ ಸಮ್ಮುಖದಲ್ಲಿ ಇನ್ನು ಮುಂದೆ ಎಲ್ಲವನ್ನು ಗೀತಾಚಾರ್ಯರೇ ನೋಡಿಕೊಳ್ಳುತ್ತಾರೆ, ಅವರನ್ನೇ ಕೇಳಿ, ಎಲ್ಲ ನಿನ್ನದೇನಪ್ಪ, ನನ್ನಿಂದಾಗುವುದಿಲ್ಲ. ನೀನೇ ನಡೆಸಿಕೊಂಡು ಹೋಗು ಎಂದಿದ್ದ ಮಾತಿಗೆ ಕಟ್ಟುಬಿದ್ದು ಅನೇಕ ಅಡೆ-ತಡೆಗಳನ್ನು ಎದುರಿಸಿಕೊಂಡು ಹಿರಿಯರ, ಅಧ್ಯಕ್ಷರ ಕಾರ್ಯಸಮಿತಿಸದಸ್ಯರೂಗಳ ಮಾರ್ಗದರ್ಶನದಲ್ಲಿ ಅವರು ಒಪ್ಪಿಸಿದ್ದ ಹತ್ತು ವರ್ಷದ ಕೂಸನ್ನು ೩೨ ವರ್ಷದ ಯುವಕನನ್ನಾಗಿಸಿ ಸ್ವಂತ ಕಾಲ ಮೇಲೆ ನಿಲ್ಲುವಂತೆ ಮಾಡಿ ಸುಭದ್ರಗೊಳಿಸಿದ್ದೇನೆ. ಸಂಸ್ಥೆಯ ರಜತೋತ್ಸವ ವರ್ಷದ ಸಮಾರೋಪದಲ್ಲೆ (೨೦೦೪) ನನ್ನ ಕರ್ತವ್ಯ ಮುಗಿಯಿತೆಂದೂ ನನ್ನನ್ನು ಬೀಳ್ಕೊಡಬೇಕೆಂದೂ ಕೇಳಿ, ಆಗಿನಿಂದ ಬೇಡಿಕೆ ಸಲ್ಲಿಸುತ್ತ ಬಂದಿದ್ದರೂ ಕಾರ್ಯಸಮಿತಿ ನನ್ನನ್ನು ಬಿಟ್ಟುಕೊಟ್ಟಿರಲಿಲ್ಲ. ಈಚೆಗೆ ಆ ದೇವರಿಗೆ ನನ್ನ ಮೊರೆ ಕೇಳಿ, ಕಾರ್ಯ ಸಮಿತಿಯವರ ಮನಸನ್ನು ಬದಲಿಸಿ ನನ್ನನ್ನು ಬೀಳ್ಕೊಡಿಸಿದ್ದಾರೆ. ನಾನು ರಾಜೀನಾಮೆ ನೀಡಿದ್ದೇನೆ. ಹಾಗೆ ಬಿಡುವಾಗ ನನ್ನನ್ನು ಕಾಡಿದ್ದು ಒಂದೇ

ಚಿಂತೆ, ಸೇರಿಸಿದ್ದ ಗುರುಗಳಾದ ಗಣೇಶ್ ಅವರಿಲ್ಲ ಎಂದು. ಅವರು ಆಗಾಗ್ಗೆ ಬಂದು ಹೋಗುವ ನೆಂಟರಾಗಿದ್ದರೇವಿನಾ ಶಾಶ್ವತವಾಗಿ ಪ್ರತಿಷ್ಠಾನದ ಕಾರ್ಯಸಮಿತಿಯಲ್ಲಿರಲಿಲ್ಲ. ಬೇರೆ ಬೇರೆ ಕಾರ್ಯಗಳ ಒತ್ತಡದಿಂದ ಸಂಸ್ಥೆಯ ಜವಾಬ್ದಾರಿಗಳಿಂದ ಬಿಡಿಸಿಕೊಳ್ಳುತ್ತಿದ್ದರೂ ಗೌ॥ ಕಾರ್ಯದರ್ಶಿಯಾಗಿ, ಕೋಶಾಧಿಕಾರಿಗಳಾಗಿ, ಹಳಗನ್ನಡ, ಹಸ್ತಪ್ರತಿ, ಎಂ.ಫಿಲ್. ತರಗತಿಗಳ ಅಧ್ಯಾಪಕರಾಗಿ ಸಂಪೂರ್ಣವಾಗಿ ತೊಡಗಿಸಿಕೊಂಡು ಪ್ರತಿಷ್ಠಾನವನ್ನು ಬೆಳೆಸಿದ್ದಾರೆ. ಯಾವುದೇ ಕಾರ್ಯ ಯೋಜನೆ ರೂಪಿಸುವಾಗ ಅವರ ನೆರವು, ಮಾರ್ಗದರ್ಶನ ಪಡೆದೇ ತೀರುತ್ತಿದ್ದೆ. ನಾನು ಕರೆದಾಗಲೆಲ್ಲ ಬಂದು ನನ್ನ ಕೈಹಿಡಿದಿದ್ದಾರೆ. ಹಳಗನ್ನಡ ತರಗತಿಗಳ ಸಂಚಾಲಕರನ್ನಾಗಿ ಅವರನ್ನೇ ಕೇಳಿಕೊಳ್ಳಲಾಗಿತ್ತು. ಅವರ ಶ್ರದ್ಧೆ ಆಸಕ್ತಿ ಮಾರ್ಗದರ್ಶನದಿಂದಲೇ ಆ ತರಗತಿಯು ಯಶಸ್ವಿಯಾಗಿದ್ದವು. ಅವರನ್ನು ಮತ್ತೆ ಕಾರ್ಯ ಸಮಿತಿಗೆ ಸೇರಿಸಿಕೊಳ್ಳುವ ನನ್ನ ಬಯಕೆ ೨೦೧೧ರ ಸರ್ವ ಸದಸ್ಯರ ಸಭೆಯಲ್ಲಿ ಸಾಕಾರವಾಯಿತು. ನಾನು ಬಿಟ್ಟು ಬರುವ ಕಾಲಕ್ಕೆ ಅವರಿದ್ದಾರೆ ಎಂದು ಸಮಾಧಾನವಾಯಿತು. ಅವರಿಗೆ ದೂರವಾಣಿಯಲ್ಲಿ ಎಲ್ಲಿ, ವಿದ್ಯಮಾನಗಳನ್ನು ತಿಳಿಸಿ ಅವರಿಗೆ ಪ್ರತಿಷ್ಠಾನವನ್ನು ಒಪ್ಪಿಸಿದ ನಂತರವೇ ಅವರ ಒಪ್ಪಿಗೆ ಪಡೆದೇ ನಾನು ರಾಜೀನಾಮೆ ಪತ್ರ ಸಲ್ಲಿಸಿದುದುರಿಂದ ನನ್ನ ಮನಸ್ಸು ನಿರಾಳವಾಗಿದೆ.

ನಾನು ಆಚಾರ್ಯ ಪಾಠಶಾಲೆ ಕಾಲೇಜಿಗೆ ಸೇರಿದ್ದೇ ಒಂದು ಆಕಸ್ಮಿಕ. ಸರ್ಕಾರಿ ಕಲಾಕಾಲೇಜಿನಲ್ಲಿ ಪಿ.ಯು.ಸಿ. ಮಾಡಿದ ಮೇಲೆ ಅಲ್ಲೇ ಮುಂದುವರಿಸುವ ಅನಿವಾರ್ಯತೆಯಿದ್ದರೂ ತ್ರಿವೇಣಿಯವರ 'ಬೆಕ್ಕಿನ ಕಣ್ಣು' ಕಾದಂಬರಿಯ ಪ್ರಭಾವದಿಂದ ಮನಶಾಸ್ತ್ರ ಓದಬೇಕೆಂಬ ಬಯಕೆಯಾಯಿತು. ಆದರೆ ಮೊದಲಿನಿಂದಲೂ ಇದ್ದ ಸಾಹಿತ್ಯದ ಆಸಕ್ತಿಯಿಂದ ಐಚ್ಛಿಕ ಕನ್ನಡವನ್ನು ಬಿಡಲಾಗದು, ಹೀಗಾಗಿ ಕಲಾ ಕಾಲೇಜಿನಲ್ಲಿ ಮನಶಾಸ್ತ್ರ ಇಲ್ಲುದುದರಿಂದ ಬೇರೆ ಕಾಲೇಜುಗಳಲ್ಲಿ ಹುಡುಕಾಟ ನಡೆಸಿದಾಗ ಎ.ಪಿ.ಎಸ್. ಕಾಲೇಜಿನಲ್ಲಿ ದೊರಕಿದುದರಿಂದ ಅಲ್ಲಿ ಸೇರಬೇಕಾಯಿತು. ಐಚ್ಛಿಕ ಕನ್ನಡ, ಮನಶಾಸ್ತ್ರ, ಅರ್ಥಶಾಸ್ತ್ರ ನನ್ನ ವಿಷಯಗಳು. ಐಚ್ಛಿಕ ಕನ್ನಡ ತರಗತಿಯಲ್ಲಿ ಇದ್ದದ್ದೇ ಒಂಬತ್ತು ಜನ, ಅದರಲ್ಲಿ ನಾನೊಬ್ಬನೇ ಹುಡುಗ. ಮೊದಲ ತರಗತಿಯಲ್ಲೇ ನಾನು ಅಧೀರನಾಗಿದ್ದೆ. ಆಗ ನನಗೆ ಧೈರ್ಯ ತುಂಬಿದವರೇ ಡಾ॥ ಗಣೇಶ್ ಅವರು. ಅವರೊಂದಿಗೆ ಪಡೆದುಕೊಂಡ ಆತ್ಮೀಯ ಸಂಬಂಧವೇ ನನಗೆ ಅಲ್ಲಿ ಪದವಿ ಪೂರೈಸಲು ಸಹಕಾರಿಯಾಯಿತು. ಅವರ ಮೂಲಕ ಪ್ರೊ॥ ಅಬ್ದುಲ್ ಬಷೀರ್, ಪ್ರೊ॥ ಎಂ.ಆರ್. ಲಕ್ಷ್ಮೀದೇವಿ, ಪ್ರೊ॥ ಸುನಂದ. ಪ್ರೊ॥ ಅನ್ನಪೂರ್ಣ ಎಲ್ಲದಿಕ್ಕಿಂತ ಹೆಚ್ಚಾಗಿ ಪ್ರಸಿದ್ಧ ಕಾದಂಬರಿಕಾರರಾದ ಕೊರಟಿ ಶ್ರೀನಿವಾಸರಾವ್ ಅವರುಗಳು ನನಗೆ ಕನ್ನಡದ ಗುರುಗಳಾಗಿದ್ದೂದು ನನ್ನ ಸೌಭಾಗ್ಯ. ಈ ಎಲ್ಲ ಗುರುಗಳೊಂದಿಗೆ ಈಗಲೂ ನಾನು ಸೌಹಾರ್ದ ಸಂಬಂಧ ಉಳ್ಳವನಾಗಿದ್ದೇನೆ. ಪ್ರೊ॥ ಎಂ.ಆರ್. ಲಕ್ಷ್ಮೀದೇವಿಯವರು ಹಿರಿಯ ಸಾಹಿತಿಗಳಾದ ಪ್ರೊ॥ ಜಿ. ಅಶ್ವತ್ಥನಾರಾಯಣರ (ಪರಿಚಯವಾದ ಮೇಲೆ ಅವರ) ಪತ್ನಿ ಎಂದು ತಿಳಿದು ಇನ್ನು ಹೆಚ್ಚು ಆತ್ಮೀಯವಾದರು. ಪ್ರೊ॥ ಬಷೀರ್ ಅವರು ನನ್ನ ಬಗ್ಗೆ ವಿಶೇಷ ಅಭಿಮಾನವುಳ್ಳವರಾಗಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಅಧ್ಯಪನ ವೃತ್ತಿಗಳ ಮೂಲಕ ತುಂಬ ಹತ್ತಿರದವರಾಗಿದ್ದಾರೆ.

ನಾನು ಬಿ.ಎ. ತರಗತಿ ಓದುತ್ತಿರುವಾಗಲೇ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶಾಸನ ತರಗತಿ ಆರಂಭವಾಯಿತು. ಆಸಕ್ತಿಯಿಂದ ಸೇರಿಕೊಂಡಿದ್ದೆ. ಅಲ್ಲಿಗೂ ಡಾ॥ ಗಣೇಶ್ ಅವರು ಅಧ್ಯಾಪಕರಾಗಿ ಬಂದರು. ಅಲ್ಲಿ ವಿದ್ಯಾರ್ಥಿಗಳಾಗಿದ್ದವರೆಲ್ಲ ಉದ್ಯೋಗಿಗಳು, ಹಿರಿಯರು. ಕಿರಿಯ ವಿದ್ಯಾರ್ಥಿಯಾಗಿದ್ದವನು ಪ್ರಾಯಶಃ ನಾನೊಬ್ಬನೇ. ಇಂದು ಪ್ರಸಿದ್ಧರಾಗಿರುವ ಡಾ॥ ಎಚ್.ಎಸ್. ಗೋಪಾಲರಾವ್, ಡಾ॥ ಎಂ.ಜಿ. ನಾಗರಾಜ್, ಡಾ॥ ನೀ.ಕೃ. ರಾಮಶೇಷನ್, ಡಾ॥ ಪಿ.ವಿ. ಕೃಷ್ಣಮೂರ್ತಿ ಮುಂತಾದವರೆಲ್ಲ ನನ್ನ ಸಹಪಾಠಿಗಳಾಗಿದ್ದರು. ಅವುರುಗಳ ಪರಿಚಯ–ಒಡನಾಟವೂ ನನ್ನ ಸಾಹಿತ್ಯದ ಬದುಕನ್ನು ಕಟ್ಟಿಕೊಟ್ಟಿದೆ. ಗಣೇಶ್‌ರೊಂದಿಗೆ ಅಲ್ಲಿ ಅಧ್ಯಾಪಕರಾಗಿದ್ದವರು ಡಾ॥ ದೇವರಕೊಂಡಾರೆಡ್ಡಿ, ಡಾ॥ ಆರ್. ಶೇಷಶಾಸ್ತ್ರಿ ಅವರುಗಳು. ಅವರುಗಳಿಂದ ನಾನು ಕಲಿತ ಶಾಸನಪಾಠ ನನ್ನನ್ನು ಪಿಎಚ್.ಡಿ. ಅಧ್ಯಯನದವರೆಗೂ ಕೊಂಡೊಯ್ದಿತು. ನಾನು ಪರಿಷತ್ತಿನಲ್ಲಿ ಶಾಸನವನ್ನು ಕಲಿಯುತ್ತಿದ್ದುದರಿಂದಲೇ ಎಂ.ಎ.ಯಲ್ಲಿ ಭಾಷಾವಿಜ್ಞಾನವನ್ನು ಆಯ್ಕೆ ಮಾಡಿಕೊಂಡೆ. ಈ ಎರಡೂ ವಿಷಯಗಳ ಅಧ್ಯಯನದ ಫಲವಾಗಿಯೇ ನನ್ನ ಪಿ.ಎಚ್‌ಡಿ. ವಿಷಯ ಶಾಸನ ಭಾಷೆಯಾಯಿತು. ಇಲ್ಲಿ ಶಾಸನವನ್ನು ಕಲಿಸುತ್ತಿದ್ದ ರೀತಿ ವಿಶೇಷವಾಗಿತ್ತು. ಅಭ್ಯಾಸಗಳು, ಲಿಪಿ ಮಾದರಿ, ಕ್ಷೇತ್ರ – ಪ್ರಾಯೋಗಿಕ ತರಗತಿಗಳ ಮೂಲಕ ಶಾಸನಲಿಪಿಗಳನ್ನು ಗುರುತಿಸಿ, ಓದಿ, ಅರ್ಥೈಸುವವರೆಗೆ ತರಬೇತಿ ಗೊಳಿಸುತ್ತಿದ್ದರು. ಇಂದು ಕರ್ನಾಟಕದಲ್ಲಿರುವ ಶಾಸನಗಳನ್ನು ಮೂಲ ಲಿಪಿಯಲ್ಲಿಯೇ ಓದಿ

ವಿವರಿಸುವ ತಜ್ಞರಲ್ಲಿ ಬಹಳಷ್ಟು ಮಂದಿ ಪರಿಷತ್ತಿನ ವಿದ್ಯಾರ್ಥಿಗಳೇ ಆಗಿದ್ದಾರೆಂಬುದು ವಿಶೇಷ. ವಿದ್ಯಾರ್ಥಿಗಳನ್ನು ಉತ್ತೇಜಿಸುವ ಈ ಗುರುಗಳ ಸೌಹರ್ದತೆಗೆ ನನ್ನದೇ ಒಂದು ನಿದರ್ಶನವನ್ನು ಹೇಳಿದರೆ ಅಪ್ರಕೃತವೆನಿಸದು. ನಾವು ಕ್ಷೇತ್ರಾಧ್ಯಯನಕ್ಕೆ ಹೋಗಿದ್ದಾಗ ಅಬ್ಬಲೂರಿನಲ್ಲಿದ್ದ ಶಾಸನಗಳಲ್ಲಿ ಎರಡು ವೀರಗಲ್ಲುಗಳಲ್ಲಿ ಕಂಡುಬಂದ 'ಪೆಣ್ಬುಯ್ಯಲ್' ಶಿಲ್ಪವನ್ನು ನಾನು ಗುರುಗಳಿಗೆ ತೋರಿಸಿದಾಗ ಡಾ॥ ಶೇಷಶಾಸ್ತ್ರಿಯವರ ಬಾಯಲ್ಲಿ ಹೊರಟ ಉದ್ಗಾರ ಇನ್ನು ನನ್ನ ನೆನಪಿನಲ್ಲಿದೆ. ಹೌದು, ಇದು ಪೆಣ್ಬುಯ್ಯಲ್ ಶಿಲ್ಪವೇ. ಶಿಲ್ಪದಲ್ಲಿರುವುದನ್ನು ಮೊದಲ ಬಾರಿಗೆ ದಾಖಲಿಸುತ್ತಿದ್ದೀಯ, ಈವರೆಗೂ ಶಿಲ್ಪದಲ್ಲಿರುವುದನ್ನು ಯಾರೂ ದಾಖಲಿಸಿಲ್ಲ. ನೀನು ಇದರ ಬಗ್ಗೆ ಒಂದು ಲೇಖನ ಸಿದ್ಧಪಡಿಸು ಎಂದು ಅಲ್ಲೇ ಹುರಿದುಂಬಿಸಿದುದನ್ನು ನಾನು ಮರೆಯಲಾರೆ. ಅವರಿನ್ನೂ ಪಿಹೆಚ್.ಡಿ. ಅಧ್ಯಯನದಲ್ಲಿದ್ದರೂ ಇಂತಹ ಅಪರೂಪದ ಶಿಲ್ಪಗಳ ಹುಡುಕಾಟದಲ್ಲಿದ್ದರೂ ಅವರ ಹೆಸರಲ್ಲೇ ದಾಖಲಿಸಬಹುದಾಗಿದ್ದರೂ ಮೊದಲಿಗೆ ತೋರಿಸಿದ ನನ್ನಿಂದಲೇ ಲೇಖನ ಬರೆಯಿಸಿ, ಮಾಹಿತಿ ಒದಗಿಸಿ ಆಗತಾನೆ ಕಣ್ಣು ಬಿಡುತ್ತಿದ್ದ ನನ್ನನ್ನೂ ಒಬ್ಬ ಶಾಸನತಜ್ಞನನ್ನಾಗಿಸಿದ ಈ ಗುರುತ್ರಯರ ಪ್ರೀತಿಗೆ ನಾನೇನು ಕೊಡಬಲ್ಲೆ! ಶಾಸನ ತರಗತಿಯ ಈ ಕಲಿಕಾಮಾದರಿಯನ್ನೇ ಮುಂದೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಆರಂಭಿಸಿದ ಎಂ.ವಿ.ಸೀ.ಯವರ ಕನಸಾಗಿದ್ದ ಹಸ್ತಪ್ರತಿಶಾಸ್ತ್ರ ತರಗತಿಗೂ ಅಳವಡಿಸಿದ ಗುರುಋಣವನ್ನು ತೀರಿಸಿದ್ದೇನೆ. ಡಾ॥ ಗಣೇಶ್ ಅವರೂ ಈ ತರಗತಿಗಳ ಯಶಸ್ವಿಗೆ ಕಾರಣರಾಗಿದ್ದಾರೆ. ೧೯೯೦ರಲ್ಲಿ ಆರಂಭಿಸಿದ ಈ ತರಗತಿಗಳ ಗೌ॥ ಅಧ್ಯಾಪಕರಾತ್ಯಿಂದಿನ ರವರೆಗೂ ಡಾ॥ ಗಣೇಶ್ ಅವರು ಸಹಕರಿಸಿದ್ದಾರೆ. ಈ ತರಗತಿ ವಿದ್ಯಾರ್ಥಿಗಳ ಸಂಘ 'ಸಿರಿಕಂಟ'ದ ಸ್ಥಾಪನೆಗೂ ಕಾರಣರಾಗಿದ್ದಾರೆ. ಎಂ.ವಿ.ಸೀ. ಶತಮಾನೋತ್ಸವ ವರ್ಷ (೨೦೦೯-೧೦) ದಿಂದ ಈ ಸಿರಿಕಂಟದಿಂದ ಹಸ್ತಪ್ರತಿ ಅಧ್ಯಯನ ಸಮಾವೇಶಗಳು ನಡೆಯುವಂತಾಗಿದೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿಶಾಸ್ತ್ರ ತರಗತಿಯ ಹತ್ತನೇ ವರ್ಷದ ನೆನಪಿಗೆ ೨೦೦೦ರಲ್ಲಿ ಆರಂಭವಾದ ಸಿರಿಕಂಟದಿಂದ ಡಾ॥ ಗಣೇಶ್ ಅವರ ಸಂಚಾಲಕತ್ವದಲ್ಲೇ 'ಹಳಗನ್ನಡ' ಕಾವ್ಯಾಭ್ಯಾಸ ಶಿಬಿರ'ವನ್ನು ಆರಂಭಿಸಲಾಯಿತು. ಇದು ಇಂದಿಗೂ ಯಶಸ್ವಿಯಾಗಿ ಮುಂದುವರಿಯುತ್ತಿದೆ. ಈ ತರಗತಿಗಳ ವಿದ್ಯಾರ್ಥಿಗಳ ತಂಡವೇ ಇಂದು ಗಣೇಶ್ ಅವರ ಈ ಅಭಿನಂದನೆಯ ಹೊಣೆಯನ್ನು ಹೊತ್ತಿರುವುದು. ಗಣೇಶ್ ಅವರ ತರಗತಿಗಳೇ ಇಲ್ಲಿ ವಿಶೇಷ ಆಕರ್ಷಣೆ. ವಿದ್ಯಾರ್ಥಿಗಳು ಗಣೇಶ್ ಅವರು ತರಗತಿ ತೆಗೆದುಕೊಳ್ಳುವುದನ್ನು ಖಚಿತಪಡಿಸಿಕೊಂಡೇ ಪ್ರವೇಶ ಪಡೆಯುತ್ತಿದ್ದರು. ಒಂದು ತಿಂಗಳಿನಿಂದ ಒಂದು ವರ್ಷದವರೆಗೆ ವಿದ್ಯಾರ್ಥಿಗಳ ಆಸಕ್ತಿಯನ್ನಾಧರಿಸಿ ಈ ಶಿಬಿರಗಳಿರುತ್ತಿದ್ದವು. ಗಣೇಶ್ ಪಾಠದ ಸೆಳೆತ ಎಷ್ಟಿತ್ತೆಂದರೆ ಶಿಬಿರದ ವಿದ್ಯಾರ್ಥಿಗಳು ತಾವೇ ಗೋಷ್ಠಿಗಳನ್ನು ರೂಪಿಸಿಕೊಂಡು ತಮ್ಮ ಮನೆಗಳಲ್ಲಿಯೇ ವಿಶೇಷ ತರಗತಿಗಳಿಗೆ ಗಣೇಶ್‌ರನ್ನು ಆಹ್ವಾನಿಸುತ್ತಿದ್ದರು. ಹಳಗನ್ನಡ ಕಾವ್ಯಗಳು, ವ್ಯಾಕರಣ, ಛಂದಸ್ಸು, ಶಾಸನ, ಪ್ರಾಚೀನ ಸಾಹಿತ್ಯದಲ್ಲಿ ಡಾ॥ ಗಣೇಶ್ ಅವರು ಸಿದ್ಧ ಹಸ್ತರು. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಮೂಲಕ ಸಾಧ್ಯವಾದದ್ದೂ ಮತ್ತು ಅವರ ಕಣ್ಣರಯಲ್ಲಿ ಬೆಳೆಯಲು ನನಗೆ ಅವಕಾಶವಾದದ್ದು ನನ್ನ ಬಾಳಿನ ಪುಣ್ಯ ಎಂದು ಕೊಂಡಿದ್ದೇನೆ.

*****

# ಸಾಹಿತ್ಯ – ಸಲ್ಲಾಪ



ನೀರಜಜಾತ ವಿಸ್ತರಿಸಿದಂಡಮುಮಂ ಮಣಿಮಾಲೆಯಾಗಿ ಬಿ
ಸ್ತಾರಿಸಿ ಹಸ್ತದಿಂ ಪಿಡಿದು ತನ್ನ ಸರಣ್ಬುಗುವರ್ಗೆ ಲೇಸುಮಂ
ಪ್ರೇರಿಸಲೋಸುಗಂ ಜಪಿಸುತಿರ್ಪಳಿರುಳ್ ಪಗಲಾವಳೊರ್ವಳಾ
ಭಾರತಿ ನಮ್ಮ ಜಿಹ್ವೆಯೊಳನಾವಿಳದಿಂದಿರುತಿರ್ಕೆ ಸಂತತಂ ॥

# ಗೋಸಾಲ ಮತ್ತು ಅದ್ದ : ಸಂವಾದ

* ನಾಡೋಜ ಪ್ರೊ. ಹಂಪ ನಾಗರಾಜಯ್ಯ

## ಪ್ರಸ್ತಾವನೆ

ಪ್ರಾಚೀನ ಸೂಯಗಡಂ(ಸೂತ್ರಕೃತಾಂಗ : ಕ್ರಿ.ಪೂ. ಎರಡನೆಯ ಶತಮಾನ) ಗ್ರಂಥದಲ್ಲಿ ಸಿಗುವ ಸಂವಾದದಲ್ಲಿ ಆಜೀವಿಕ ಸಂಪ್ರದಾಯದ ನಾಯಕ ಮಕ್ಖಲಿ ಗೋಸಾಲನಿಗೂ ಅದ್ದಕುಮಾರನಿಗೂ ನಡೆದ ಚರ್ಚೆಗೆ ಚಾರಿತ್ರಿಕ ಮಹತ್ವವಿದೆ.

ಪ್ರಾಕೃತ ಅರ್ಧಮಾಗಧೀ ಭಾಷೆಯಲ್ಲಿರುವ ಹಳೆಯ ಹೊತ್ತಗೆಗಳಲ್ಲಿ ಸೂಯಗಡಂ ಕೂಡ ಒಂದು. ಈ ಜೈನ ಶ್ರುತಾಂಗದಲ್ಲಿ ಎರಡು ಶ್ರುತಸ್ಕಂಧಗಳಿವೆ. ಮೊದಲನೆಯ ಶ್ರುತಸ್ಕಂಧದಲ್ಲಿ ೧೬ ಅಧ್ಯಯನ(ಅಧ್ಯಾಯ)ಗಳಲ್ಲಿ ಒಂದು ಮಾತ್ರ ಗದ್ಯದಲ್ಲಿದ್ದು ಉಳಿದ ೧೫ ಪದ್ಯರೂಪದಲ್ಲಿವೆ. ಎರಡನೆಯ ಶ್ರುತಸ್ಕಂಧದ ಏಳೂ ಅಧ್ಯಯನಗಳಲ್ಲಿ ಗದ್ಯ-ಪದ್ಯ ಎರಡೂ ಬೆರೆತಿವೆ. ಗಾಥಾಛಂದಸ್ಸಲ್ಲದೆ ಅನುಷ್ಟುಪ್, ಇಂದ್ರವಜ್ರಾ, ವೈಕಾಲಿಕ ಛಂದಗಳ ಪ್ರಯೋಗವಿದೆ.

ಸೂಯಗಡ (ಸೂತ್ರಕೃತಾಂಗ) ಗ್ರಂಥದ ಕೇಂದ್ರ ಪ್ರಜ್ಞೆಯೆಂದರೆ ಜೈನದರ್ಶನವಲ್ಲದೆ ಅನ್ಯ ಮತ ಸಿದ್ಧಾಂತಗಳ ವಿವರಣೆ. ಕ್ರಿ.ಪೂ. ಆರನೆಯ ಶತಮಾನದ ವೇಳೆಗೆ ಭಾರತದಲ್ಲಿ ಪ್ರಚಲಿತವಿದ್ದ ಅಕ್ರಿಯಾವಾದ, ಅಜ್ಞಾನವಾದ, ಕ್ರಿಯಾವಾದ, ಜಗತ್ ಕರ್ತೃತ್ವವಾದ, ನಿಯತಿವಾದ-ಇತ್ಯಾದಿ ವಾದಗಳ ಪರಿಚಯವಿದೆ. ನಾಲಂದಾದಲ್ಲಿ ನಡೆದ ಗೌತಮ ಗಣಧರ ಮತ್ತು ಪಾರ್ಶ್ವನಾಥನ ಶಿಷ್ಯನಾದ ಉದಕ ಪೇಡಾಲಪುತ್ರನ ವಾರ್ತಾಲಾಪವಿದೆ. ಸೂಯಗಡ ಗ್ರಂಥಕ್ಕೆ ನಿಜ್ಜುತ್ತಿ (ನಿರ್ಯುಕ್ತಿ), ಚುಣ್ಣಿ (ಚೂರ್ಣಿ) ಟೀಕು-ವೃತ್ತಿ ರಚಿತವಾಗಿವೆ. ಶೀಲಾಂಕನ ನಿರ್ಯುಕ್ತಿ ಮತ್ತು ಜಿನದಾಸನ ಚೂರ್ಣಿಯನ್ನು ಅನುಲಕ್ಷಿಸಿ ಅದ್ದ ಮತ್ತು ಗೋಪಾಲ-ಇವರ ನಡುವೆ ನಡೆದ ವಾಗ್ವಾದವನ್ನು ಇಲ್ಲಿ ಯಥಾವತ್ತಾಗಿ ಪರಿಚಯಿಸಿದೆ.

[ವಿ.ಸೂ: ಇದರಲ್ಲಿ ಬಳಕೆಯಾಗಿರುವ ಅರ್ಧಮಾಗಧಿ ಪ್ರಾಕೃತ ಭಾಷೆಯ ಪ್ರಾಚೀನ ರೂಪಗಳು ಮಹತ್ವಪೂರ್ಣವಾಗಿವೆ. ಅದರ ವಿವೇಚನೆ ಇಲ್ಲಿಗೆ ಅಪ್ರಸ್ತುತವೆಂದು ಕೈಬಿಡಲಾಗಿದೆ].

ಗೋಸಾಲ ಮುಂಖಲಿಪುತ್ರ ಮತ್ತು ಆತನ ಸಿದ್ಧಾಂತದ ಪರಿಚಯ ಪುರಾತನತಮ ಜೈನಾಗಮಗಳಾದ ಉವಾಸಗದಸಾಓ (ಉಪಾಸಕಾಧ್ಯಯನ), ವಿಯಾಹಪಣ್ಣತ್ತಿ (ವ್ಯಾಖ್ಯಾಪ್ರಜ್ಞಪ್ತಿ - ಭಗವತೀಸುತ್ತ), ಇಸಿಭಾಸಿಯಾಇಂ (ಋಷಿಭಾಷಿತಾನಿ) ಮತ್ತು ಪ್ರಸ್ತುತ ಸೂತ್ರಕೃತಾಂಗದಲ್ಲಿ ದೊರೆಯುತ್ತದೆ.

ಅದ್ದೋಪದೇಶ ಎಂಬ ಶೀರ್ಷಿಕೆ ಇರುವ ವಿಭಾಗದಲ್ಲಿ ಈ ಸಂವಾದ ನಿರೂಪಿತವಾಗಿದೆ. ಇದಕ್ಕೂ ಮೊದಲು ಪುವ್ವಭಣಿಓ ಅಣುಮಓ ಯ ಹೋಇ ಇಸಿಭಾಸಿಯೇಸು ಜಹಾ - ಎಂದು ಶೀಲಾಂಕ (ಶೀಲಾಚಾರ್ಯ)ನು ಹೇಳಿರುವುದು ಪರಿಶೀಲಿಸಬೇಕಾದ ಸೂಚನೆ. ಈ ಮಾತು ಟೀಕಾದಲ್ಲೂ ಬಂದಿದೆ: ತಥಾ ಪುರ್ವಮಪ್ಯಸಾವರ್ಥೋಮುದ್ದಿಶ್ಯೋಕ್ತೋನುಮತಶ್ಚ ಭವತಿ ರಿಷಿಭಾಷಿ ತೇಷುತ್ತರಾಧ್ಯಯನಾದಿಷು ಯಥಾ. ಇಸಿಭಾಸಿಯಾಇಂ (ಋಷಿಭಾಷಿತಾನಿ) ಎಂಬುದು ಪ್ರಾಚೀನತಮ ಜೈನಾಗಮಗ್ರಂಥ. ಸೂಯಗಡದದಲ್ಲಿಯೂ ಹೆಸರಿಸಿರುವುದರಿಂದ ಇಸಿಭಾಸಿಯಾಇಂ ಗ್ರಂಥ ಪ್ರಾಯಃ ಕ್ರಿಪೂ ಮೂರನೆಯ ಶತಮಾನದ್ದಿರಬಹುದು. ಇದರ ೨೮ನೆಯ ಅಧ್ಯಾಯ 'ಅದ್ದಇಜ್ಜಜಯಣಂ', ಅದ್ದಕುಮಾರ ಅಧ್ಯಯನ.

ಅದ್ದೋಪದೇಶವನ್ನು ಪ್ರಾರಂಭಿಸುವುದಕ್ಕೆ ಮೊದಲು ಅದ್ದನ ಪರಿಚಯವನ್ನು 'ಅದ್ದನಿಕ್ಷೇಪ'ದ ಅಯ್ದು ಪದ್ಯಗಳಲ್ಲಿ ಕೊಟ್ಟಿದೆ.

---

* ಸ್ವನಿಮಾ ೧೦೭೯, ೧೮ ಎ ಮುಖ್ಯರಸ್ತೆ, ೫ನೆ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦



ಅದ್ದ, ಅದ್ದಲಿ, ಅದ್ದಕುಮಾರ– ಇವು ಪ್ರಾಕೃತರೂಪದ ಹೆಸರು, ಆರ್ದ್ರಕ, ಆರ್ದ್ರಕ ಕುಮಾರ – ಇದು ಸಂಸ್ಕೃತರೂಪದ ಹೆಸರು.

**ಅದ್ದ (ಆರ್ದ್ರಕ – ಅದ್ದಕುಮಾರ)**

ಶೀಲಾಂಕ (ಶೀಲಾಚಾರ್ಯ) ನು ಸೂಯಗಡಕ್ಕೆ (ಸೂತ್ರಕೃತಾಂಗ) ವೃತ್ತಿಯನ್ನು ರಚಿಸಿದ್ದಾನೆ. ಈ ವೃತ್ತಿ ಅಲ್ಲದೆ ಸೂತ್ರಕೃತಾಂಗಕ್ಕೆ ಪ್ರತ್ಯೇಕವಾಗಿ ಚೂರ್ಣಿ ಮತ್ತು ನಿಜ್ಜುತ್ತಿ (ನಿರ್ಯುಕ್ತಿ) ರಚಿಸಿದ್ದಾರೆ. ಅವುಗಳಲ್ಲಿ ಮಂಖಲಿ ಪುತ್ರ ಗೋಸಾಲನಿಗೂ ಅದ್ದ (ಆರ್ದ್ರಕ ಪುತ್ರ) ನಿಗೂ ನಡೆದ ಸಂವಾದ ಬಂದಿದೆ. ಪ್ರಾಚೀನ ಆಗಮಗ್ರಂಥವಾದ ಸೂಯಗಡದ ಕಾಲ ಕ್ರಿ.ಪೂ ಎರಡನೆಯ ಶತಮಾನ. ಇದರ ಇನ್ನೂ ಹಿಂದಿನ ಅವಧಿಗೆ ಸೇರಿದ ಇಸಿಭಾಸಿಯಾಇಂ (ಋಷಿಭಾಷಿತಾನಿ) ಗ್ರಂಥದಲ್ಲಿಯೂ ೨೮ನೆಯ ಅದ್ದ ಇಜ್ಜ–ಅಜ್ಜಯಣಂ ಎಂಬ ಅಧ್ಯಾಯವಿದೆ. ಇವಲ್ಲದೆ ಆವಶ್ಯಕ, ದಶವೈಕಾಲಿಕ ಚೂರ್ಣಿ, ವ್ಯವಹಾರಸೂತ್ರ ಗ್ರಂಥಗಳಲ್ಲಿಯೂ ಅದ್ದನ ಕಥನವಿದೆ. ಇದರಿಂದ ಅದ್ದ (ಮತ್ತು ಗೋಸಾಲ) ಸಂವಾದ ಮಹತ್ವದ್ದೆಂದು ತಿಳಿದು ಬರುತ್ತದೆ. ಅದ್ದಕುಮಾರನು (ಆರ್ದ್ರಕನು) ಮಹಾವೀರನ ಸಮಕಾಲೀನ ಸನ್ಯಾಸಿ ಹಾಗೂ ತತ್ವಜ್ಞಾನಿ.

ಸೂಯಗಡ ನಿಜ್ಜುತ್ತಿಯಲ್ಲಿ ಗೋಸಾಲ ಮೊದಲಾದವರೊಂದಿಗೆ ಅದ್ದನು ವಾದಿಸಿದ್ದನ್ನು ಹೇಳಿದೆ:

ಅಜ್ಜ–ಅದ್ದೇಣ ಗೋಸಾಲ ಭಿಕ್ಖು ಬಂಭವ್ವಈ ತಿದಂಡಿಣಂ

ಜಹ ಹತ್ಥಿ ತಾವಸಾಣಂ ಕಹಿಯಂ ಇಣಮೋ ತಹಾವಚ್ಚಮ್. ೧೯೦

ಆರ್ಯ (ಪೂಜ್ಯನಾದ) ಅದ್ದ (ಆರ್ದ್ರಕ) ನೊಂದಿಗೆ ಬ್ರಾಹ್ಮಣ ತ್ರಿದಂಡಿ ಗೋಸಾಲ ಬೌದ್ಧ ಸನ್ಯಾಸಿ ಹಾಗೂ ಹಸ್ತಿತಾಪಸಿ– ಇವರು ನಡಸಿದ ವಾಗ್ವಾದವನ್ನು ಅದು ನಡೆದ ರೀತಿಯಲ್ಲಿಯೇ (ಯಥಾವತ್ತಾಗಿ) ನಿರೂಪಿಸುತ್ತೇನೆ. ಇಲ್ಲಿ ಗೋಸಾಲನು ಬ್ರಾಹ್ಮಣ (ಬಂಭವ್ವ) ವಿರಕ್ತ (ಭಿಕ್ಖು) ಮತ್ತು ತ್ರಿದಂಡಧಾರಿ ಎಂದು ಹೇಳಿದೆ. ಅನ್ಯತ್ರ ಏಕದಂಡಿನ್ ಎಂದಿದೆ.

(ಅದ್ದನ ಕಥಾಸಾರ ಶೀಲಾಂಕನು ಬರೆದಿರುವ ಸೂತ್ರಕೃತಾಂಗ ವೃತ್ತಿಯಿಂದ ತೆಗೆದುಕೊಂಡಿರುವ ಕಥೆ);

ಮಗಧದೇಶದ ವಸಂತಪುರದಲ್ಲಿ ಸಾಮಾಯಿಕನೆಂಬ ಗೃಹಸ್ಥನು, ಧರ್ಮಘೋಷ ಮುನಿಯ ಪ್ರವಚನ ಕೇಳಿ, ತನ್ನ ಮಡದಿ ಸಹಿತ ವಿರಾಗಿಯಾದನು. ಒಮ್ಮೆ ಆಹಾರಕ್ಕಾಗಿ ಚರಿಗೆ ಹೊರಟಾಗ ದಾರಿಯಲ್ಲಿ (ಹಿಂದೆ ತನ್ನ ಹೆಂಡತಿಯಾಗಿದ್ದು ಈಗ ಸನ್ಯಾಸಿನಿ ಆಗಿರುವ) ಸನ್ಯಾಸಿಯನ್ನು ಕಂಡು ಆಕೆಯನ್ನು ಬಯಸಿದನು. ಆಕೆ ಇದಕ್ಕೆ ಒಪ್ಪಲಿಲ್ಲ. ಈತ ಮತ್ತೆ ಬಂದು ಒತ್ತಾಯಿಸಬಹುದೆಂದು ತಿಳಿದು ಆ ಸನ್ಯಾಸಿನಿ ಆಹಾರ ಬಿಟ್ಟು ಆತ್ಮಹತ್ಯೆ ಮಾಡಿಕೊಂಡಳು. ಸಾಮಾಯಿಕನೂ ಆಹಾರ ತೊರೆದು ಸತ್ತು ದೇವನಾದನು. ಆಮೇಲೆ ಆ ದೇವನು ಆರ್ದ್ರಪುರದಲ್ಲಿ ಅದ್ದ (ಆರ್ದ್ರಕ)ನಾಗಿ ಹುಟ್ಟಿದನು. ಈತನ ಪತ್ನಿಯಾಗಿದ್ದಾಕೆ ವಸಂತಪುರದಲ್ಲಿ ಸೆಟ್ಟಿ (ಶ್ರೇಷ್ಠಿ)ಯ ಮಗಳಾಗಿ ಜನಿಸಿದಳು.

**ಅದ್ದಕಹಾ ಕಥಾಸಾರ**

[ಶೀಲಾಂಕನ ವೃತ್ತಿಯಲ್ಲಿ ಬಂದಿರುವ ಈ ಕಥಾವಿವರಕ್ಕಿಂತ ಬೇರೆಯಾದ ವಿವರ ಜಿನದಾಸನ (ಚೂರ್ಣಿ) ವ್ಯಾಖ್ಯಾದಲ್ಲಿದೆ: ಅದರ ಪ್ರಕಾರ ಸಾಮಾಯಿಕನೇ ವಸಂತಪುರದಲ್ಲಿ ಸೆಟ್ಟಿಗೆ ಮಗಳಾಗಿ ಹುಟ್ಟಿದನೆಂದಿದೆ. ಮತ್ತು ಈತನ ಹೆಂಡತಿಯು ಮೇಚ್ಛವಿಸಯ (ಮ್ಲೇಚ್ಛದೇಶ) ದಲ್ಲಿ ಅದ್ದಗ ಮತ್ತು ಧಾರಿಣೀ ಎಂಬ ರಾಜ–ರಾಣಿಯರ ಮಗ ಅದ್ದಯ (ಆರ್ದ್ರಕ)ನಾಗಿ ಹುಟ್ಟುತ್ತಾನೆ. ಜಿನದಾಸನ ಆವೃತ್ತಿಯು ಆಸಕ್ತಿ ಮೂಡಿಸುತ್ತದೆ. ಅದರಲ್ಲಿ ಪಾತ್ರದ ಉನ್ನತೀಕರಣವಿದೆ].

ಒಂದು ದಿನ (ರಾಜಕುಮಾರ) ಆರ್ದ್ರಕನು ತನ್ನೊಂದಿಗೆ ಹಳೆಯ ಹಿರಿಯ ಸಹಚರನನ್ನು (ಚೂರ್ಣಿಯಲ್ಲಿ 'ದೂತ' ಎಂದಿದೆ) ಕರೆದುಕೊಂಡು ಶ್ರೇಣಿಕ (ಬಿಂಬಿಸಾರ) ರಾಜನಲ್ಲಿಗೆ ಬಂದನು. ತನ್ನ ತಂದೆಯ ಪರಮ ಮಿತ್ರನಾದ ಶ್ರೇಣಿಕನಿಗೆ ಬೆಲೆಬಾಳುವ ಉಡುಗೊರೆ ಕೊಡುವುದು ಅಲ್ಲಿಗೆ ಬಂದ ಉದ್ದೇಶ. ಶ್ರೇಣಿಕನಿಗೆ ಒಬ್ಬ ಯೋಗ್ಯ ಮಗನಾದ ಅಭಯಕುಮಾರ

ಇರುವುದು ತಿಳಿಯಿತು. ಮರುದಿನಸ ರಾಜನ ತನ್ನ ಒಡ್ಡೋಲಗದಲ್ಲಿ ಆರ್ದ್ರಕನು (ಅದ್ದ) ಅಭಯಕುಮಾರನಿಗೆ ತನ್ನ ಗೌರವವನ್ನು ಸಲ್ಲಿಸಿದನು. ಊರಿಗೆ ಹಿಂತಿರುಗಿದ ಮೇಲೆ ಶ್ರೇಣಿಕರಾಜನೂ ಕಾಣಿಕೆಗಳನ್ನು ಕಳಿಸಿದನು. ಅಭಯಕುಮಾರನೂ ಅದ್ದಕುಮಾರನಿಗೆ ಪ್ರತ್ಯೇಕವಾಗಿ 'ತೀರ್ಥಂಕರ ಬಿಂಬ'ವನ್ನು ತನ್ನ ಕೊಡುಗೆಯೆಂದು ರವಾನಿಸಿದ್ದನು. ಈ ಜಿನಬಿಂಬವನ್ನು ನೋಡಿದೊಡನೆ ಅದ್ದನಿಗೆ ಹಿಂದಿನ ಭವಗಳೂ ದೇವನಾಗಿದ್ದುದೂ ನೆನಪಾದುವು. ಲೌಕಿಕ ಸುಖಭೋಗಗಳಲ್ಲಿ ನಿರಾಸಕ್ತನಾದನು. ತನ್ನ ಮಗ ಎಲ್ಲಿಯೂ ಹೋಗದ ಹಾಗೆ ತಂದೆಯಾದ ರಾಜನು ಅಯ್ನೂರುಜನ ರಾಜಪುತ್ರ (ರಜಪೂತ)ರನ್ನು ಕಾವಲಿಟ್ಟನು. ಒಂದು ಸಲ ಕುದುರೆ ಸವಾರಿ ಮಾಡುವ ನೆಪದಲ್ಲಿ ಅದ್ದನು ೫೦೦ ಜನ ರಜಪೂತ (ಭಟ)ರ ಕಣ್ಣು ತಪ್ಪಿಸಿ ಪರಾರಿಯಾದನು ಮತ್ತು ದೀಕ್ಷೆ ತಳೆದು ವಿರಾಗಿಯಾದನು.

ಅದ್ದಮುನಿ ವಿಹಾರ ಕೈಗೊಂಡು ವಸಂತಪುರ ತಲಪಿದನು. ಅಲ್ಲಿ ಹನ್ನೊಂದನೆಯ ಗುಣಸ್ಥಾನ ಶ್ರಾವಕ (ಉಪಾಸಕ) ಪ್ರತಿಮಾಯೋಗದ (ಕಾಯೋತ್ಸರ್ಗ) ಅಭ್ಯಾಸದಲ್ಲಿ ತೊಡಗಿದ್ದನು. ಒಮ್ಮೆ ಸೆಟ್ಟಿಯ ಮಗಳು (ಹಿಂದಿನ ಜನ್ಮದ ನೆನಪಿಂದ) ಅದ್ದಮುನಿಯನ್ನು ಕಂಡು ಅವನನ್ನು ಮದುವೆಯಾಗಬೇಕೆಂದಳು. ದೇವತೆಯಿಂದ ಆರೂವರೆ ಕೋಟಿ ಹೊನ್ನಿನ ಮಳೆಗರೆಯಿತು ಮತ್ತು ರಾಜನಿಗೆ ಅದು ಸಿಗದಂತೆ, ಹಾವುಗಳನ್ನು ಸೃಷ್ಟಿಸಿ, ದೂರಮಾಡಿತು (ವಿಧೃತ). ಯಾರು ಎಷ್ಟೇ ಬುದ್ಧಿವಾದ ಹೇಳಿದರೂ ಆಕೆ ತನ್ನ ನಿರ್ಧಾರವನ್ನು ಬಿಡಲಿಲ್ಲ. ಯಾರ ಬಳಿಗೆ ಹೋದಾಗ ಸುವರ್ಣವೃಷ್ಟಿ ಆಯಿತೋ ಆತನಿಗೇ ತನ್ನನ್ನು ಕೊಟ್ಟು ಮದುವೆ ಮಾಡಬೇಕೆಂದು ಪಟ್ಟು ಹಿಡಿದಳು. ಈ ನಡುವೆ ಅದ್ದಮುನಿ ತನ್ನ ವಿಹಾರವನ್ನು ಮುಂದುವರಿಸಿದ್ದು ಹನ್ನೆರಡು ವರ್ಷಗಳಾದ ಮೇಲೆ ಮತ್ತೆ ವಸಂತಪುರಕ್ಕೆ ಮರಳಿದ್ದನು. ಸೆಟ್ಟಿಯ ಮಗಳು (ಪಾದಗತಾಭಿಜ್ಞಾನ) ಕಾಲಿನ ಹೆಜ್ಜೆ ಗುರುತಿನಿಂದಲೂ ಪತ್ತೆ ಹಚ್ಚಿ ಅವನನ್ನು ಮದುವೆಗೆ ಒತ್ತಾಯಿಸಿದಳು. ದೇವತೆ ಮುನ್ನೆಚ್ಚರಿಕೆ ಕೊಟ್ಟರೂ ಕೇಳದೆ ಕರ್ಮೋದಯದಂತೆ (ತಥಾವಿಧ ಕರ್ಮೋದಯಾ ಏ ಚಾವಶ್ಯಂ ಭವಿತವ್ಯತಾ ನಿಯೋಗೇನ ಚ -ಟೀಕಾ) ತನ್ನ ಸನ್ಯಾಸವ್ರತವನ್ನು ಮುರಿದು ಆಕೆಯನ್ನು ವಿವಾಹವಾಗಿ ಸಂಸಾರ ಹೂಡಿದನು.

ಒಬ್ಬ ಮಗ ಹುಟ್ಟಿದ ಮೇಲೆ ಅದ್ದನು ಇನ್ನೊಮ್ಮೆ ಸಂಸಾರ ತೊರೆದು ವೈರಾಗ್ಯ ಹೊಂದಲು ತೀರ್ಮಾನಿಸಿದನು. ಮಡದಿ ತನ್ನ ಬದುಕಿಗೆ ಬೇಕಾಗುವಷ್ಟನ್ನು ದುಡಿ... ಸಂಪಾದಿಸಲು ತೊಡಗಿದಳು. ಮಗನೂ ಹತ್ತಿಯ ನೂಲು ತೆಗೆಯುವ (ಕರ್ಪಾಸ ಕರ್ತನ) ಮೂಲಕ ಗಳಿಸುತ್ತಿದ್ದನು. ತನ್ನ ತಂದೆ ತಮ್ಮನ್ನು ತೊರೆದು ಹೋಗುವುದನ್ನು ಅರಿತು ಮಗನು ತನ್ನ ತಾಯಿಯನ್ನು ಬಿಟ್ಟು ಹೋಗದಂತೆ ತಂದೆಯ ಮೈಗೆ ಹನ್ನೆರಡು ಸುತ್ತು ನೂಲಿನಿಂದ ಕಟ್ಟಿಹಾಕಿದನು. ೧೨ ಸುತ್ತು ನೂಲಿನ ಸಂಕೇತದಂತೆ, ಅಷ್ಟು ವರ್ಷ ಕುಟುಂಬದಲ್ಲಿ ಅದ್ದನು ಇದ್ದನು. ಆ ಅವಧಿ ಮುಗಿದೊಡನೆ ರಾಜಗೃಹದತ್ತ ಹೊರಟಾಗ ೫೦೦ ಜನ ರಾಜಪುತರ ಕೈಗೆ ಸಿಕ್ಕಿಬಿದ್ದನು. (ಹಿಂದೆ ಈತ ಅವರಿಂದ ತಪ್ಪಿಸಿಕೊಂಡು ಕುದುರೆಹತ್ತಿ ಪಾರಾಗಿದ್ದನು. ಅದರಿಂದ ಅವರು ರಾಜಧಾನಿಗೆ ಹೋಗಲು ಹೆದರಿ ಕಾಡಿನಲ್ಲಿ ಉಳಿದು ಕಳ್ಳರಾಗಿ ಬಾಳುತ್ತಿದ್ದರು). ಈ ಸಲ ಅದ್ದಮುನಿ ಅವರಿಗೆ ಧರ್ಮೋಪದೇಶ ಮಾಡಿ ಕಳ್ಳತನದಿಂದ ಬಿಡಿಸಿ ವಿರಾಗಿಗಳನ್ನಾಗಿ ಪರಿವರ್ತಿಸಿದನು. ಆ ೫೦೦ ಜನ ಶಿಷ್ಯರೊಂದಿಗೆ ರಾಜಧಾನಿ ರಾಜಗೃಹವನ್ನು ಹೊಕ್ಕನು. ಅಲ್ಲಿ ಅದ್ದನು ಮಕ್ಖಲಿ ಗೋಸಾಲಕ, ಗಜಸನ್ಯಾಸಿ ಮತ್ತು ಬ್ರಾಹ್ಮಣರನ್ನು ವಾದದಲ್ಲಿ ಸೋಲಿಸಿದನು.

**ಗೋಸಾಲನೊಂದಿಗೆ ವಾಗ್ವಾದ**

ಅದ್ದನು ಮಾಡಿದ ವಾದಗಳಲ್ಲಿ ಪ್ರಸ್ತುತ ಗ್ರಂಥಕ್ಕೆ ಆಜೀವಕ ಗ್ರಂಥಕ್ಕೆ ಸಂಬಂಧಿಸಿದ್ದು ಗೋಸಾಲನೊಂದಿಗೆ ನಡೆದ ದೊಡ್ಡ ಸಂವಾದ. ಇದು ಅರ್ಧಮಾಗಧಿ ಪ್ರಾಕೃತ ಭಾಷೆ ಮತ್ತು ತ್ರಿಷ್ಟುಭ್ ಛಂದಸ್ಸಿನಲ್ಲಿದೆ. ಗೋಸಾಲನು ಅದ್ದನಿಗೆ ಕೇ(ಹೇ)ಳ ತೊಡಗಿದನು–

**ಪುರಾಕಡಂ ಅದ್ದ ಇಮಂ ಸುಣೇಹ**
**ಏಗಂತಯಾರೀ ಸಮಣೇ ಪುರಾಸೀ ।**
**ಸೇ ಭೀಕ್ಖುಣೋ ಉವನೇತ್ತಾ ಅಣೇಗೇ**
**ಆಇಕ್ಖಇಣ್ಹಿಂ ಪುಢೋ ವಿತ್ಥರೇಣಂ.** ೨.೬.೧.

ಅದ್ದನೇ, ಆತ (ಮಹಾವೀರ) ಬಹಳ ಹಿಂದೆ ಏನು ಮಾಡಿದ ಎಂಬುದನ್ನು (ಹೇಳುತ್ತೇನೆ) ಕೇಳು. ಮೊದಲಿಗೆ ಅವನು ಒಂಟಿ ಸಮಣ ಮುನಿಯಾಗಿದ್ದನು. ಆಮೇಲೆ ಹಲವರಿಗೆ ಮುನಿದೀಕ್ಷೆ ಕೊಟ್ಟುದುಂಟು. ಈಗ ಆತ ಅವರಿಗೆ ಒಬ್ಬೊಬ್ಬರಿಗೂ ಧರ್ಮವನ್ನು ಉಪದೇಶಿಸುತ್ತಿದ್ದಾನೆ (ಆಇಕ್ಖಇ – ಆಚಕ್ಷತಿ).

**ಸಾಜೀವಿಯಾ ಪಟ್ಠವಿಯಾಥಿರೇಣಂ**
**ಸಭಾಗಓ ಗಣಓ ಭಿಕ್ಖು ಮಜ್ಝೇ।**
**ಅಇಕ್ಖಮಾಣೋ ಬಹುಜನ್ನಮಟ್ಠಂ**
**ನ ಸಂಧಯಾಇ ಅವರೇಣ ಪುವ್ವಂ. ೨,೬,೨.**

ಇದು (ಮಹಾವೀರ ಅನುಸರಿಸುತ್ತಿರುವುದು) ಏಕನಿಷ್ಠೆಯಿರದ ಅಸ್ಥಿರನಾದ ಮನುಷ್ಯನ ಜೀವನರೀತಿ. ತನ್ನ ಗಣದಿಂದ ಬೇರೆ ಮುನಿಗಳ ಸಂಗಡ ಸಭೆಗೆ ಹೋಗುವುದರಿಂದ ಮತ್ತು ಸಾಮೂಹಿಕವಾಗಿ ಮೋಕ್ಷವನ್ನು ಬೋಧಿಸುವುದರಿಂದ ತನ್ನ ಹಿಂದಿನ ನಡವಳಿಕೆಗಿಂತ ಭಿನ್ನವಾಗಿ ನಡೆದುಕೊಳ್ಳುತ್ತಿದ್ದಾನೆ. ('ಒಬ್ಬಂಟಿಗನಾಗಿರುವವನನ್ನು ಸಾಮಾನ್ಯ ಜನರು ಗೌರವಿಸರು' ಎಂದು ಆಲೋಚಿಸಿ ಈ ಮಹಾವೀರನು ಅನುಕೂಲ ಸಿಂಧುವಾಗಿದ್ದು ಬಹುಜನ ಹಿಂಬಾಲಕರೊಂದಿಗೆ ಇದ್ದಾನೆ – ಎಂಬುದು ಗೋಸಾಲನ ಆರೋಪ. ವೇದ ಆರಣ್ಯಗಳ ಪ್ರಕಾರ ರಹಸ್ಯಜ್ಞಾನವನ್ನು ಜನರಿಗೆ ಹೊರಗೆಡವಬಾರದೆಂದಿದೆ).

**ಏಗಂತ ಮೇವಮದುವಾ ವಿ ಇಣ್ಹಿಂ**
**ದೋವನ್ನಮನ್ನಂ ನ ಸಮೇಇ ಜಮ್ಹಾ।**
**ಪುವ್ವಿಂಚ ಇಣ್ಹಿಂ ಚ ಅಣಾಗಯಂ ವಾ**
**ಏಗಂತಮೇವ ಪಡಿಸಂಧಯಾಇ. ೨,೬,೩.**

ಆತನು (ಮಹಾವೀರನು) ಇಲ್ಲವೇ ಏಕಾಂತದಲ್ಲಿ ವಾಸ ಇರಬೇಕು. ಅಥವಾ (ಈಗ ನಡೆದು ಕೋಳ್ಳುತ್ತಿರುವಂತೆ) ಜನರೊಂದಿಗೆ ಇರಬೇಕು. ಏಕೆಂದರೆ ಏಕಾಂತವೇ ಬೇರೆ, ಲೋಕಾಂತವೇ ಬೇರೆ, (ನೋಡಿ, ಬಷಮ್ ೫೩).

ಗೋಸಾಲನು ಹೀಗೆ ಮಹಾವೀರನ ಸನ್ಯಾಸನ ಜೀವನ, ಬೋಧನ ಕುರಿತು ಅದ್ದನೊಂದಿಗೆ ಟೀಕಿಸಿ ಮಾತನಾಡಿದ್ದು ಅದ್ದನಿಗೆ ಸರಿಗಾಣಲಿಲ್ಲ. ಅದ್ದನು ಮಹಾವೀರನಲ್ಲಿ ಶ್ರದ್ಧೆಯಿರುವ ಶಿಷ್ಯ. ಅದರಿಂದ ಈ ಗುರುನಿಂದೆಯನ್ನು ನುಂಗಿಕೊಳ್ಳುವುದಿಲ್ಲ. ಮಕ್ಖಲಿ–ಗೋಸಾಲನೊಂದಿಗೆ ವಾಗ್ವಾದಕ್ಕೆ ತೊಡಗಿ ಮಹಾವೀರನನ್ನು ಸಮರ್ಥಿಸುತ್ತಾನೆ. (ಮೇಲಿನ ಪದ್ಯದ ಕಡೆಯ ಎರಡು ಸಾಲು ಅದ್ದನ ಉತ್ತರ; ಮೊದಲಿನ ಎರಡು ಪಾದ ಗೋಸಾಲನ ಆಕ್ಷೇಪ)

ಆತನು (ಮಹಾವೀರನು) ಏಕಾಂಗಿಯಾಗಿ ಬಾಳುತ್ತಿರುವಂತೆಯೇ 'ಭೂತ'ವನ್ನು ವರ್ತಮಾನ ಮತ್ತು ಭವಿಷ್ಯದೊಂದಿಗೆ ಕೂಡಿಸುತ್ತಾನೆ.

**ಸಮೇಚ್ಚ ಲೋಗಂ ತಸ ಥಾವರಾಣಂ**
**ಖೇಮಂಕರೇ ಸಮಣೇ ಮಾಹಣೇ ವ।**
**ಆಇಕ್ಖಮಾಣೋ ವಿ ಸಹಸ್ಸ – ಮಜ್ಝೇ**
**ಏಗಂತಯಂ ಸಾರಯಈ ತಹಚ್ಚೇ. ೨,೬,೪.**

ಯಾರು ಜಂಗಮ ಮತ್ತು ಸ್ಥಾವರ ಜೀವಿಗಳನ್ನು ಅರ್ಥಮಾಡಿಕೊಳ್ಳುವನೋ, ಯಾರು ತನ್ನ ಸಹಜೀವರು ಶಾಂತಿ ಮತ್ತು ಸುರಕ್ಷಿತರೆಂದು ಅರಿಯುವಂತೆ ಮಾಡುವನೋ ಅಂತಹ ಶ್ರಮಣನು ಅಥವಾ ಬ್ರಾಹ್ಮಣನು (ಮಾಹಣೇ) ಸಹಸ್ರಾರು ಜನರ ನಡುವೆ ಬೋಧಿಸುತ್ತಿದ್ದರೂ ತಾನು ನಿಜವಾದ ಸನ್ಯಾಸಿಯೆಂಬುದನ್ನು ತೋರಿಸುತ್ತಾನೆ.

**ಧಮ್ಮಂ ಕಹಂತಸ್ಸ ಉ ನತ್ಥಿ ದೋ ಸೋ**
**ಖಂತಸ್ಸ ದಂತಸ್ಸ ಜಿಯಿಂದಿಯಸ್ಸ।**
**ಭಾಸಾವಿ ದೋಸೇ ಯ ವಿವಿಜ್ಜಗಸ್ಸ**
**ಗುಣೇ ಯ ಭಾಸಾಯ ನಿಸೇವಗಸ್ಸ. ೨,೬,೫.**

ಯಾರು ಇಂದ್ರಿಯಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿದ್ದಾನೆಯೊ, ಯಾರು ಮಾತನ್ನು ನೇತ್ಯಾರ್ಥಕವಾಗಿ ಬಳಸದೆ ಇತ್ಯಾರ್ಥಕವಾಗಿ ಬಳಸುವರೋ ಅಂತಹ ಪ್ರಶಾಂತ ಸಂಯಮಿ ತನ್ನ ಧರ್ಮವನ್ನು ಮುಚ್ಚುಮರೆ ಇರದೆ ಬಹಿರಂಗವಾಗಿ ಬೋಧಿಸುವುದು ಅಪರಾಧವೇನಲ್ಲ.

**ಮಹವ್ವ ಏ ಪಂಚ ಅಣುವ್ವ ಏ ಯ**
**ತಹೇವ ಪಂಚಾಸವ ಸಂವರೇ ಯ ।**
**ವಿರಯಿಂ ಇಹಸ್ಸಾಮಣಿಯಂಮಿ ಪನ್ನೇ**
**ಲವಾವಸಕ್ಕೀ 'ಸಮಣೇ'ತಿ ಬೇಮಿ. ೨,೬,೬**

ಯಾರು ಅಯ್ದು ಮಹಾವ್ರತಗಳನ್ನೂ ( ಮಹವ್ವ ಏ) ಅಯ್ದು ಅಣುವ್ರತಗಳನ್ನೂ ಹಾಗೂ ಅಯ್ದು ಆಸ್ರವಗಳನ್ನು ಮತ್ತು (ಆ ಹರಿದು ಬರುವಿಕೆಯನ್ನು) ತಡೆಯುವ ದಾರಿಯನ್ನು ಬಲ್ಲನೊ, ಯಾರು ಕರ್ಮಾಣುಗಳನ್ನು (ದೂರ) ತಳ್ಳಿ ಮುನಿಯಾದವನು ಪಾಲಿಸಬೇಕಾದ ಆಚರಣೆಗಳನ್ನು ಅರಿತಿರುವನೋ ಆತನೇ ಸಮಣನೆಂದು (ದಿಟದ ಯತಿಯೆಂದು) ನಾನು ಹೇಳುತ್ತೇನೆ (ಬೇಮಿ).

**ಸೀಓದಗಂ ಸೇವಉ ಬೀಯ-ಕಾಯಂ**
**ಆಹಾಯ ಕಮ್ಮಂ ತಹ ಇತ್ಥಿಯಾಓ ।**
**ಏಗಂತ ಚಾರಿಸ್ಸಿಹ ಅಮ್ಹ ಧಮ್ಮೇ**
**ತವಸ್ಸಿಣೋ ನಾಭಿಸಮೇಇ ಪಾವಂ. ೨,೬,೭**

ಕಾಯಿಸದಿರುವ ನೀರನ್ನು ಕುಡಿಯುವ, ಬೀಜ (ಕಾಳು)ಗಳನ್ನು ತಿನ್ನುವ, ಇಲ್ಲವೇ ಭಿಕ್ಷಾಹಾರ ಪಡೆಯಲೆಂದು ಬರುವವರಿಗೋಸ್ಕರವಾಗಿ (ಸನ್ಯಾಸಿಗಳಿಗಾಗಿ) ಅಟ್ಟುದನ್ನು ಉಣ್ಣುವ, ಅಥವಾ ಹೆಣ್ಣನ್ನು ಭೋಗಿಸುವ ಸನ್ಯಾಸಿಗೆ, ಆತ ಏಕಾಂಗಿಯಾಗಿ ಬದುಕಿರುವವರೆಗೆ, ನಮ್ಮ(ಆಜೀವಿಕ) ಧರ್ಮದಲ್ಲಿ ಯಾವ ಪಾಪಕರ್ಮವೂ ಉಂಟಾಗುವುದಿಲ್ಲ. (ಆಜೀವಿಕ ಸಂಘದೊಂದಿಗೆ ಗುಂಪಿನಲ್ಲಿ ಸೇರಿ ವಿಹರಿಸದೆ ತಮ್ಮ ಪಾಡಿಗೆ ತಾವು ಒಬ್ಬೊಬ್ಬರೇ (ಏಗಂತ – ಏಕಾಂಗಿಯಾಗಿ) ವಿಹರಿಸುತ್ತಿದ್ದ ಮುನಿಗಳಿದ್ದರು. ಆದರೆ ಅವರು ಗೋ...ಲನು ಹಾಕಿಕೊಟ್ಟಿದ್ದ (ಆಜೀವಿಕ) ನಿಯಮಗಳಿಗೆ ಅನುಗುಣವಾಗಿ ನಡೆದುಕೊಳ್ಳುತ್ತಿದ್ದರು.

ತಮಗೋಸ್ಕರವಾಗಿ ಪ್ರಾಣಿಯನ್ನು ಕೊಂದು ಅಡಿಗೆ ಮಾಡಿದ್ದನ್ನು ಬೌದ್ಧ ಭಿಕ್ಖುಗಳು ತೆಗೆದುಕೊಳ್ಳುವುದು ನಿಷಿದ್ಧ. ಜೈನರಲ್ಲಿ ಮಾಂಸಾಹಾರದ ಪ್ರಶ್ನೆಯೇ ಇಲ್ಲ. << ಪಶ್ಚಿಮ ಭಾರತದಲ್ಲಿ, ರಾಜಸ್ತಾನದಲ್ಲಿ, ಜೈನರ ಈ ಅಹಿಂಸಾವ್ರತ ಪಾಲನೆಯನ್ನು ಪಾಲಿಸಲಾಗದೆ ರಜಪೂತರು ಏಳು-ಎಂಟನೆಯ ಶತಮಾನದಲ್ಲಿ ಮತಾಂತರ ಹೊಂದಿದರು. ಉಳಿದಿರುವ ಜೈನರಲ್ಲಿ ಅನೇಕರು ತಾವು ರಜಪೂತರೆಂದು ಹೇಳಿಕೊಳ್ಳುವರು >> [ವಿಲ್ಲೆಮ್ ಬೋಲೆ : ೨೦೧೦ : ೫೯].

**ಸೀಓದಗಂ ವಾತಹ ಬೀಯ-ಕಾಯಂ**
**ಆಹಾಯಕಮ್ಮಂ ತಹ ಇತ್ಥಿಯಾ ಓ ।**
**ಏಯಾಈ ಜಾಣ ಪಡಿಸೇವಮಾಣಾ**
**ಏಗಾರಿಣೋ ಅ-ಸ್ಸಮಣಾ ಭವಂತಿ. ೨.೬.೮.**

ಕಾಯಿಸಿದ ನೀರನ್ನು ಇಲ್ಲವೇ ಬೀಜವನ್ನು, ಆಹಾರ ಭಿಕ್ಷೆ ಪಡೆಯಲು ಬರುವ ಸನ್ಯಾಸಿಗಳಿಗೋಸ್ಕರವಾಗಿ ಮಾಡಿದ ಅಡುಗೆಯನ್ನು ಬಳಸುವ ಮತ್ತು ಹೆಣ್ಣನ್ನು ಭೋಗಿಸುವ ಸನ್ಯಾಸಿಗಳು ಶ್ರಾವಕರೇ ಹೊರತು ಸನ್ಯಾಸಿಗಳಲ್ಲ.

**ಬಿಯಾಯ ಸೀ ಓದಗ ಇತ್ಥಿಯಾ ಓ**
**ಪಡಿಸೇವಮಾಣಾ ಸಮಣಾ ಭವಂತಿ ।**
**ಅಗಾರಿಣೋ ವಿ ಸಮಣಾ ಭವಂತು**
**ಸೇವಂತಿ ಊ ತೇವಿ ತಹಪ್ಪಗಾರಂ. ೨,೬,೯.**

ಒಂದು ವೇಳೆ ಯಾರು ಕಾಯಿಸದ ನೀರನ್ನು ಕುಡಿಯುವರೊ ಬೀಜಗಳನ್ನು ತಿನ್ನುವರೊ ಹೆಂಗಸರನ್ನು ಭೋಗಿಸುವರೊ ಅವರನ್ನು ಸನ್ಯಾಸಿಗಳೆಂದು ಕರೆಯುವುದಾದರೆ ಇವೆಲ್ಲವನ್ನೂ ಆಚರಿಸುವ ಗೃಹಸ್ಥರನ್ನು ಕೂಡ ಸನ್ಯಾಸಿಗಳೆನ್ನಬೇಕು!

**ಜೇ ಯಾವಿ ಬೀಓದಗ ಭೋಇ ಭಿಕ್ಖೂ**
**ಭಿಕ್ಖಂ ಚಿಹಂ ಜಾಯಇ ಜೀವಿಯಟ್ಠೀ।**
**ತೇನಾಇ ಸಂಜೋಗಮವಿಪ್ಪಹಾಯ**
**ಕಾಯೋವಗಾ ನಾನ್ತಕರಾ ಭವನ್ತಿ. ೨,೬,೧೦.**

ಇದೂ ಅಲ್ಲದೆ, ಬೀಜಗಳನ್ನೂ ಕಾಯಿಸಿದ ನೀರನ್ನೂ ಬಳಸುವವರು, ಈ ಲೋಕದಲ್ಲಿಯೇ ಇರಲು ಬೇಕಾಗುವುದನ್ನು ಅರಸುವವರು, ಭಿಕ್ಷಾಹಾರಕ್ಕೆ ಹೋಗುವವರು ಮರುಹುಟ್ಟು ಪಡೆಯುವರು. ಅಂಥವರು ಈ ಸಂಸಾರಕ್ಕೆ ವಿರಾಮ ಹೇಳುವುದಿಲ್ಲ. ಒಂದು ವೇಳೆ ತಮ್ಮ ನಂಟರು ಇಷ್ಟರಿಂದ ಸಂಪರ್ಕವನ್ನು ತ್ಯಜಿಸಿದ್ದರೂ ಪುನರ್ಜನ್ಮದಲ್ಲಿ ತೊಳಲಾಡುವರು.

**ಇಮಂ ವಯಂ ತು ತುಮಾ ಪಾಉಕುವ್ವಂ**
**ಪಾವಾಇಣೋ ಗರಿಹಸಿ ಸವ್ವ ಏವ।**
**ಪಾವಾಇಣೋ ಉಪುಢೋ ಕಿಟ್ಟಯಂತಾ**
**ಸಯಂ ಸಯಂ ದಿಟ್ಠೀ ಕರೇಂತಿ ಪಾಉ. ೨,೬,೧೧.**

ನೀನು ಈ ಬಗೆಯ ಅಭಿಪ್ರಾಯಗಳನ್ನು ಮಂಡಿಸುವುದಾದರೆ ಧಾರ್ಮಿಕ ಜೀವನವನ್ನು ನಡಸುತ್ತಿರುವವರನ್ನೆಲ್ಲ ಖಂಡಿಸಿ ತಿರಸ್ಕರಿಸು ಎಂದು ಗೋಸಾಲನು ಹೇಳಿದನು. ಅದಕ್ಕೆ ಅದ್ದ (ಕುಮಾರ) ಮಾತಾಡತೊಡಗಿದನು–

ತನ್ನದೇ ಆದ ಧರ್ಮವನ್ನು ಹೊಂದಿರುವ ಪ್ರತಿಯೊಬ್ಬರೂ (ತತ್ತ್ವಜ್ಞಾನಿಗಳು) ತಂತಮ್ಮ ಧರ್ಮಾನುಸರಣೆಯನ್ನು ಹೊಗಳುತ್ತಾರಲ್ಲದೆ ಅದನ್ನು ಸಾರ್ವಜನಿಕವಾಗಿಯೂ ಗೊತ್ತುಪಡಿಸುತ್ತಾರೆ.

ಟಿಪ್ಪಣಿ : ಪಾವಾಇಣೋ (ಪಾವಾಇಯ, ಪಾಮಾಉಯ – ಜ್ಞಾತಿರೂಪಗಳು)

– ಈ ಪದಕ್ಕೆ 'ಪ್ರವದನಶೀಲ ಪ್ರಾವಾದುಕಾಃ – ಎಂದು ಸೂಯಗಡ ಚೂರ್ಣಿಯಲ್ಲಿ ವಿವರಣೆಯಿದೆ (೪೨೧,೭). ಶೀಲಾಂಕನೂ (ಸೂತ್ರಕೃತಾಂಗವೃತ್ತಿ, ಆಗಮೋದಯ ಸಮಿತಿ, ಬಾಂಬೆ– ಮೆಹೇಸನ, ೧೯೧೭) ಇದನ್ನು ಅನುಮೋದಿಸಿದ್ದಾನೆ.

**ತೇ ಅನ್ನಮನ್ನಸ್ಸ ಉ ಗರಹಮಾಣಾ**
**ಅಕ್ಖಂತಿ ಭೋ! ಸಮಣಾ ಮಾಹಣಾಯ।**
**ಸ ಓಯ ಅತ್ಥಿ ಅಸ ಓ ಯ ನತ್ಥಿ**
**ಗರಹಾಮೋ ದಿಟ್ಠಿಂ ನ ಗರಹಾಮೋ ಕಿಂಚಿ. ೨,೬,೧೨.**

ಸ್ವಾಮೀ, ಶ್ರಮಣರೂ ಬ್ರಾಹ್ಮಣರೂ ತಮ್ಮ ಪಕ್ಷವೇ ಸರಿಯೆಂದೂ ಎದುರಾಳಿ ತಪ್ಪೆಂದೂ ಒಬ್ಬರಿಗೊಬ್ಬರು ಟೀಕಿಸುವರು. ನಾವು ಏನಿದ್ದರೂ ತಪ್ಪು (ತತ್ವ) ತಿಳಿವಳಿಕೆಯನ್ನು ಖಂಡಿಸುತ್ತೇವೆ. ಅದರ ಹೊರತು ನಾವು ಯಾವುದನ್ನೂ ಯಾರನ್ನೂ ನಾವು ದೋಷಾರೋಪಣೆ ಮಾಡುವುದಿಲ್ಲ.

**ನ ಕಿಂಚಿ ರೂವೇಣ – ಅಭಿಧಾರಯಾಮೋ**
**ಸದಿಟ್ಠಮಗ್ಗಂ ತು ಕರೇಮು ಪಾಉಂ।**
**ಮಗ್ಗೇ ಇಮೇ ಕಿಟ್ಟಿ ಏ ಆರಿಏಹಿಂ**
**ಅಣುತ್ತರೇ ಸಪ್ಪುರಿಸೇಹಿ ಅಂಜೂ. ೨,೬,೧೩**

ನಾವು ಯಾವ ರೀತಿಯಲ್ಲಿಯೂ (ಒಬ್ಬ ವ್ಯಕ್ತಿಯ) ಖಾಸಗಿ ಗುಣಗಳನ್ನು ಖಂಡಿಸುವುದಿಲ್ಲ. ಆದರೆ ನಾವು ಕೇವಲ ನಮ್ಮ (ಶ್ರೇಷ್ಠ) ಧರ್ಮ ಮಾರ್ಗವನ್ನು ಘೋಷಿಸುತ್ತೇವೆ. ಮಹಾಪುರುಷರಿಂದಲೂ ಸಜ್ಜನರಿಂದಲೂ ಈ ವಿಧವಾಗಿ ಯಾರಿಂದಲೂ ಮೀರಲಾಗದ ನೇರನಡೆನುಡಿಯುಳ್ಳ ವ್ಯಕ್ತಿಯು ಅರ್ಹನೆನಿಸಿಕೊಳ್ಳುವನು.

ಟಿಪ್ಪಣಿ : ಸೂಯಗಡ ಚೂರ್ಣಿಯಲ್ಲಿರುವ ಹೆಚ್ಚಿನ ವಿವರಣೆ. ಖಾಸಗಿ ಗುಣಗಳನ್ನು ಟೀಕಿಸಬಾರದು – ನೀನು ಒಕ್ಕಣ್ಣ, ನೀನು ಗೂನ, ಕುಷ್ಠರೋಗಿ, ಚಂಡಾಲ, ನೀಚ, ತ್ರಿದಂಡಿ, ಎಂಬಿತ್ಯಾದಿಯಾಗಿ ನಿಂದಿಸಬಾರದು.

**ಉಡ್ಢಂ ಅಹೇ ಯಂ ತಿರಿಯಂ ದಿಸಾಸು**
**ತಸಾ ಯ ಜೇ ಥಾವರ ಜೇ ಯ ಪಾಣಾ ।**
**ಭೂಯಾಭಿಸಂಕಾಏ ದುಗುಂಛಮಾಣೋ**
**ನೋ ಗರಹಈ ಉಸಿಮಂ ಕಿಂಚ ಲೋಏ. ೨,೬,೧೪.**

ಮೇಲಕ್ಕೆ ದೂರ ಹಾರಿ ಹೋಗುವ, ಕೆಳಗೆ ಆಳಕ್ಕೆ ಇಳಿಯುವ, ಸಪಾಟಾಗಿ ನಾಲ್ಕು ಕಡೆಗೆ ಚಲಿಸುವ ಮತ್ತು ಚಲಿಸದಿರುವ ಜೀವಿಗಳಿಗೆ ನೋವುಂಟು ಮಾಡಲು ಹೆದರುವಂತಹ ಸಂಯಮ (ಅಹಿಂಸಾತ್ಮಕ) ಸನ್ಯಾಸ ಜೀವನವನ್ನು ನಡೆಸುತ್ತಿರುವಾತನು ಲೋಕದಲ್ಲಿ, ಯಾವುದನ್ನೂ ಯಾವುದೇ ಕಾರಣವಿರಲಿ, ಟೀಕಿಸುವುದಿಲ್ಲ – ಎಂದು ಅದ್ದನು ಉತ್ತರಿಸಿದನು. ಅದಕ್ಕೆ ಗೋಸಾಲ ಮರು ಉತ್ತರ ಕೊಟ್ಟನು;

**ಆಗಂತಗ ಗಾರೇ ಆರಾಮಾಗಾರೇ**
**ಸಮಣೇ ಉ ಭೀಏ ನ ಉವೇಇ ವಾಸಂ ।**
**ದಕ್ಖಾ ಹು ಸಂತಿ ಬಹವೇ ಮಣುಸ್ಸಾ**
**ಊಣಾಇರಿತ್ತಾ ಯ ಲವಾಲವಾ ಯ. ೨,೬,೧೫.**

ನಿಮ್ಮ ಈ ಉತ್ಸಾಹಿ ಮುನಿ ಛಾತ್ರನಿಲಯಗಳಲ್ಲಾಗಲಿ ಉದ್ಯಾನದಲ್ಲಿ ಇರುವ ವಿಶ್ರಾಂತಿ ಗೃಹದಲ್ಲಾಗಲಿ ನಿಮ್ಮ ಈ ಉತ್ಸಾಹಿ ಮುನಿ ವಸತಿ ಮಾಡುವುದಿಲ್ಲ. (ಏಕೆ ಗೊತ್ತಾ!) ಅಲ್ಲೆಲ್ಲ ಅನೇಕ ಪ್ರಾಜ್ಞರು ಇರುತ್ತಾರೆ. (ಪಾಪ) ಅವರಲ್ಲಿ ಕೆಲವರು ಹೆಚ್ಚು ತಿಳಿಸಲು ಬಾರದವರು. ಉಳಿದವರು ಅತಿಯಾಗಿ ವಾಗ್ಝರಿ ಹರಿಸುವವರು.

**ಮೇಹಾವಿಣೋ ಸಿಕ್ಖಿಯ ಬುದ್ಧಿಮಂತಾ**
**ಸುತ್ತೇಹಿ ಅತ್ಥೇಹಿಯ ನಿಚ್ಛಯನ್ನಾ ।**
**ಪುಚ್ಛಿಂಸು ಮಾಣೇ ಅಣಗಾರ ಅನ್ನೇ**
**ಇಇ ಸಂಕಮಾಣೋ ನ ಉವೇಇ ತತ್ಥ. ೨,೬,೧೬**

(ಈ ಹಿಂದಿನ ಪದ್ಯದಲ್ಲಿ ಹೆಸರಿಸಿದ ಸ್ಥಳಗಳಿಗೆ ಯಾಕೆ ಹೋಗುವುದಿಲ್ಲವೆಂದರೆ) ಆ ಸ್ಥಳಗಳಲ್ಲಿ ಇರುವವರಲ್ಲಿ ಕೆಲವರು ವಿರಾಗಿಗಳೂ, ಅಲ್ಲಿರುವ ಇತರರೂ ಜಾಣರು. ಅವರು ತಮ್ಮ ತರಬೇತು ಶಿಕ್ಷಣ ಮುಗಿಸಿರುವವರು. ನಿಮ್ಮ (ಜೈನ) ಆಗಮಗಳನ್ನು (ಮೇಲೆ ಹೇಳಿದ ಸ್ಥಳಗಳಲ್ಲಿ ಇರುವವರು) ಚೆನ್ನಾಗಿ ಓದಿರುವರು ಮತ್ತು ಅವುಗಳ ಅರ್ಥ ಅರಿತವರು, ಅದರಿಂದ, ಅಲ್ಲಿರುವ ಪ್ರಾಜ್ಞರು ಎಲ್ಲಿ ಮುಜುಗರ ಆಗುವಂತಹ (ಗಂಭೀರ–ಕ್ಲಿಷ್ಟ) ಪ್ರಶ್ನೆಗಳನ್ನು ಕೇಳುವರೋ – ಎಂಬ ಹೆದರಿಕೆಯಿಂದ ನಿಮ್ಮ ಜಿನಮುನಿ ಅಲ್ಲಿಗೆ ಹೋಗುವುದಿಲ್ಲ.

ಟಿಪ್ಪಣಿ : ಈ ಪದ್ಯದಿಂದ ಒಂದು ಮಹತ್ವದ ಅಂಶ, ವಿವಿಧ ಧರ್ಮಗಳ ಸಿದ್ಧಾಂತಗಳ ದೃಷ್ಟಿಯಿಂದ, ತಿಳಿದು ಬರುತ್ತದೆ. ಆಜೀವಿಕರು ಮತ್ತು ಬೇರೆ ಸಂಪ್ರಾದಾಯದವರು ಜೈನ ಸಿದ್ಧಾಂತಗಳನ್ನೂ ಆಗಮಗಳನ್ನೂ ಚೆನ್ನಾಗಿ ಅರಿತಿದ್ದರು. ಅದರಿಂದ ಮಹಾವೀರನ ಶಿಷ್ಯರು ಅವರೊಂದಿಗೆ ಅನಗತ್ಯ ವಾಗ್ವಾದಕ್ಕಿಳಿಯುತ್ತಿರಲಿಲ್ಲ. ಆ ರೀತಿ ಚರ್ಚೆಗೆ ಹೋಗಬಾರದೆಂದು ಆಯಾರಾಂಗ (೨, ೩, ೨, ೧೭), ಸೂತ್ರಕೃತಾಂಗ (೧, ೧, ೪, ೨) ಉವಾಸಗದಸಾಓ (೫೮), ವಿಯಾಹಪಣ್ಣತ್ತಿ (೧೫) ಆಗಮಗ್ರಂಥಗಳಲ್ಲಿ ಹೇಳಿದೆ. ಚತುರ್ದಶ ಪೂರ್ವಗಳು ನಷ್ಟವಾಗಲು ಇದೂ ಒಂದು ಕಾರಣ. ಬುದ್ಧ – ಮಹಾವೀರ ಪರಸ್ಪರ ಭೇಟಿಯಾಗದಿರಲು ಈ ಕಾರಣವೂ ಇದ್ದಿರಬಹುದು. –ಅದ್ದ ಉವಾಚ

**ನೋ ಕಾಮ ಕಿಚ್ಚಾ ನಯ ಬಾಲ ಕಿಚ್ಚಾ**
**ರಾಯಾಭಿಯೋಗೇಣ ಕುಓ ಭಯೇ ಣಂ ।**
**ವಿಯಾಗರೇಜ್ಜಾ ಪಸಿಣಂ ನ ವಾವಿ**
**ಸಕಾಮ ಕಿಚ್ಚೇಣಿಹ ಆರಿಯಾಣಂ. ೨,೬,೧೭**

ಆತನು (ಸನ್ಯಾಸಿ) ಪ್ರಶ್ನೆಗಳಿಗೆ ಉತ್ತರಿಸುವುದು, ಬಿಡುವುದು ಆಯಾ ಸಂದರ್ಭವನ್ನು ಅವಲಂಬಿಸಿದ್ದು. ಆದರೂ ಅರ್ಹರಾದವರ ಪ್ರಶ್ನೆಗಳಿಗೆ ಆತನು ಉತ್ತರಿಸಲು ಇಚ್ಛಿಸುತ್ತಾನೆ. ಆತ ಉತ್ತರಿಸಲಾಗಲಿ ಉತ್ತರಿಸದಿರುವುದಾಗಲಿ – ಅದನ್ನು ದುಡುಕಿನಿಂದಾಗಲಿ, ರಾಜನ ಆಜ್ಞೆಯಿಂದಾಗಲಿ, ಭಯ ಭೀತಿಯಿಂದಾಗಲಿ ಮಾಡಬಾರದು.

**ಗಂತಾ ಚ ತತ್ಥಾ ಅದುವಾ ಅಗಂತಾ**
**ವಿಯಾಗರೇಜ್ಜಾ ಸಮಿಯಾಸು ಪನ್ನೇ।**
**ಅಣಾರಿಯಾ ದಂಸಣಓ ಪರಿತ್ತಾ**
**ಇಇ ಸಂಕಮಾಣೋ ನ ಉವೇಇ ತತ್ಥ. ೨, ೬, ೧೮.**

ಆತನು (ಅವರು) ಅಲ್ಲಿಗೆ (ಹಿಂದೆ ೨, ೬, ೧೫ರಲ್ಲಿ ಹೇಳಿರುವ ತಾಣಗಳಿಗೆ) ಹೋಗುತ್ತಾನೆ(ರೆ)ಯೋ ಹೋಗುವುದಿಲ್ಲವೋ (ಅಗಂತಾ), ಪ್ರತ್ಯುತ್ಪನ್ನಮತಿಯಾದ (ಆಸುಪನ್ನೇ – ಜಾಣ, ಸರ್ವಜ್ಞ) ಆತನು ನಿಷ್ಪಕ್ಷಪಾತವಾದ (ಸಮಿಯ – ಸಮದೃಷ್ಟಿ) ಉತ್ತರ – ವಿವರಣೆಗಳನ್ನು ಕೊಡುತ್ತಾನೆ. ಅವರುಗಳು ಇರುವಲ್ಲಿಗೆ ಏಕೆ ಹೋಗುವುದಿಲ್ಲವೆಂದರೆ ಸಮ್ಯಗ್‌ದರ್ಶನ ದಿಂದ (ಸರಿಯಾದ ನಂಬಿಕೆ) ದೂರಸರಿದವರೂ ಆಗಿರಬಹುದೆಂಬ ಆತಂಕ ಇರುವುದಕ್ಕಾಗಿ.

**ಪಣ್ಣಂ ಜಹಾ ವಣಿಏ ಊದಯಟ್ಠೀ**
**ಆಯಸ್ಸ ಹೇಉಂ ಪಗರೇಇ ಸಂಗಂ।**
**ತಯೂವಮೇ ಸಮಣೇ ನಾಯಪುತ್ತೇ**
**ಇಚ್ಚೇವ ಮೇ ಹೋಇ ಮಇ ವಿಯಕ್ಕಾ. ೨, ೬, ೧೯.**

ಶ್ರಮಣ ನಾಯಪುತ್ತ (ಮಹಾವೀರ)ನು ಲಾಭದೃಷ್ಟಿಯಿರುವ ವರ್ತಕನಂತೆ ನಡೆದುಕೊಳ್ಳುತ್ತಾನೆ. ವ್ಯಾಪಾರಿಯು ತನ್ನ ಲಾಭಗಳಿಕೆಗಾಗಿ ಸರಕನ್ನು ಪಡೆಯುತ್ತಾನೆ. ಇದರಿಂದ ಕರ್ಮಬಂಧ, ಪರಾವಲಂಬಿತ್ವ ಆಗುತ್ತದೆ – ಇದು ನನ್ನ (ಗೋಸಾಲನ) ದೃಷ್ಟಿ ಮತ್ತು ಅಭಿಪ್ರಾಯ.

ಟಿಪ್ಪಣಿ : ಮುಂಖಲಿಪುತ್ತ ಗೋಸಾಲನ ಆಕ್ಷೇಪದ ತಿರುಳು ಇದು. ಆತನ ಆಕ್ರಮಣದ ಗುರಿ ಇರುವುದು ಮಹಾವೀರನ ಮೇಲೆ. ಮಹಾವೀರನದು ಪೂರ್ವಾಪರ ಸಂಬಂಧ ಇಲ್ಲದ ಅಸಂಗತ ನಡವಳಿಕೆಯೆಂದೂ ಸ್ವಾಭಾವಿಕವಾಗಿ ಅನುಸರಿಸಿ ಬರಲಿಲ್ಲವೆಂದೂ ಗೋಸಾಲನ ಆರೋಪ. ೨, ೬, ೨ ನೇ ಸಂಖ್ಯೆಯ ಪದ್ಯದಲ್ಲಿ ಮಹಾವೀರನನ್ನು – 'ಮೊದಲು ಏಕಾಂಗಿಯಾಗಿ ಇದ್ದವನು ಈಗ ಏಕಾಏಕಿ ಸಾರ್ವಜನಿಕರ ಕಣ್ಣಿಗೆ ಮುನಿಗಳೊಡನೆ ಸುತ್ತುವರಿದು ಕಾಣಿಸಿಕೊಳ್ಳುತ್ತ ಉಪದೇಶ ಮಾಡುತ್ತಿದ್ದಾನೆ. ಇದು ತತ್ವವನ್ನು ಗಾಳಿಗೆ ತೂರಿದಂತೆ' – ಎಂಬುದು ಗೋಸಾಲನ ಟೀಕೆ. ಈ ಪದ್ಯದಲ್ಲಿ ಗೋಸಾಲನು ಮಹಾವೀರನನ್ನು ವರ್ತಕನಿಗೆ ಹೋಲಿಸಿರುವುದು ಅರ್ಥಗರ್ಭಿತವಾಗಿದೆ. ಶಾಕ್ಯ ವಪ್ಪನು ಬುದ್ಧನನ್ನು ತನ್ನ ಬಂಡವಾಳವನ್ನು ಬಿಕರಿ ಮಾಡುವ ವರ್ತಕನೆಂದು ಆರೋಪಿಸಿರುವುದು ನೆನಪಿಗೆ ಬರುತ್ತದೆ (ಅಂಗುತ್ತರ ನಿಕಾಯ. ೧೧, ೧೯೯).

ಗೋಸಾಲನ ಟೀಕೆಗೆ ಅದ್ದನ ಮಾತು –

**ನವಂ ನ ಕುಜ್ಜಾ ವಿಹುಣೇ ಪುರಾಣಂ**
**ಚಿಚ್ಚಾಮಇಂ ತಾಇ ಯ ಸಾಹ ಏವಂ।**
**ಏಯಾವಯಾ ಬಂಭವಯ ತ್ತಿ ವುತ್ತಾ**
**ತಸ್ಸೋದಯಟ್ಠಿ ಸಮಣೇ ತ್ತಿ ಬೇಮಿ. ೨, ೬, ೨೦.**

ತಪ್ಪು ವಿಚಾರಗಳನ್ನು ಬಿಟ್ಟು ಬಿಡುವುದರ ಮೂಲಕ ಆತನು (ಮಹಾವೀರನು) ಹೊಸ ಕರ್ಮಗಳನ್ನು ಸಂಚಯಿಸುವುದಿಲ್ಲ. ಮತ್ತು (ಏಕಕಾಲಕ್ಕೆ) ಹಳೆಯ (ಸಂಚಿತ) ಕರ್ಮವನ್ನು ಕಳಚುತ್ತಾನೆ. ಆದ್ದರಿಂದ ಆ ಋಷಿಯು ತಕ್ಕ ರೀತಿಯಲ್ಲಿಯೇ ಮಾತಾಡಿದ್ದಾನೆ. ಈ ದೃಷ್ಟಿಯಿಂದ ಆ ಋಷಿಗಳನ್ನು ಶ್ರೇಷ್ಠ ವ್ರತಧಾರಿಗಳೆನ್ನುವರು. ಯಾರು ಈ (ಆತ್ಮೋನ್ನತಿ ಮೋಕ್ಷ) ಲಾಭಕ್ಕಾಗಿ ಶ್ರಮಿಸುವರೋ ಆತ ಮಾತ್ರ ಶ್ರಮಣ ಮುನಿ – ಎಂದು ನಾನು ಹೇಳುತ್ತೇನೆ(ಬೇಮಿ).

**(ಸಮ್) ಆರಭಾತೇ ವಣಿಯಾ ಭೂಯಗಾಮಂ**
**ಪರಿಗ್ಗಹಂ ಚೇವ ಮಮಾಯಮಾಣಾ ।**
**ತೇ ನಾಇ ಸಂಜೋಗ ಮವಿಪ್ಪಹಾಯ**
**ಆಯಸ್ಸ ಹೇಉಂ ಪಗರಂತಿ ಸಂಗಂ. ೨, ೬, ೨೧.**

ವಣಿಜರು ಹಲವು ಜೀವಿಗಳನ್ನು ಕೊಲ್ಲುವರು. ತಮ್ಮ ನಂಟರಿಪ್ಪರಿಂದ ಬೇರೆಯಾದರೂ ಸಂಪರ್ಕ ತಪ್ಪಿದರೂ ಬಿಡದೆ ಅವರು (ವರ್ತಕರು) ಆಸ್ತಿ ಗಳಿಸುವರು. ಹಾಗೆ ಮಾಡುವುದರಿಂದಾಗಿ ಪ್ರಾಪಂಚಿಕ ಗಳಿಕೆಗೋಸ್ಕರ ಅವರು ಕರ್ಮಾಣುಬಂಧನಕ್ಕೆ ಒಳಗಾಗುವರು.

ಟಿಪ್ಪಣಿ : ಸಾರ್ಥವಾಹ ವರ್ತಕರು ಬಂಡಿ (ಶಕಟ)ಗಳಿಗೆ ಹೂಡಿದ ಎತ್ತುಗಳು, ಒಂಟೆಗಳು ಪ್ರಯಾಣದಲ್ಲಿ ಆಯಾಸದಿಂದಾಗಿ ಕೊಲ್ಲಲ್ಪಡುತ್ತವೆ.

**ವಿತ್ತೇಸಿಣೋ ಮೇಹುಣ ಸಂಪಗಾಢಾ**
**ತೇ ಭೋಯಣಟ್ಠಾ ವಣಿಯಾ ವಯಂತಿ ।**
**ವಯಂ ತು ಕಾಮೇಸು ಅಜ್ಝೋವವನ್ನಾ**
**ಅಣಾರಿಯಾ ಪೇಮ ರಸೇಸು ಗಿದ್ಧಾ. ೨,೬,೨೨.**

ಆಸ್ತಿಗಳಿಕೆಯ ಹಂಬಲದಿಂದಲೂ ವಣಿಜರು (ವರ್ತಕರು) ಜೀವನಕ್ಕೆ ಬೇಕಾಗುವಷ್ಟನ್ನು ಸಂಪಾದಿಸುತ್ತಾರೆ. ಆನಂದಕ್ಕಾಗಿ ಲೈಂಗಿಕ ಸಂಪರ್ಕ ಇಟ್ಟುಕೊಂಡಿದ್ದಾರೆ ಮತ್ತು ಸುತ್ತ ವಿಹರಿಸುತ್ತಾರೆ. ಈ ಕಾರಣವನ್ನು ಅರಿತು, ಅವರು ಪ್ರೇಮಭಾವದಿಂದ ಇಂದ್ರಿಯ ಸುಖ ಬಯಸುವವರೇ ಹೊರತು ಅದನ್ನೇ ಪೂರ್ತಿ ನಂಬಿಕೊಂಡ ಕಾಮಲೋಲುಪರಲ್ಲವೆಂದು ನಾವು ಭಾವಿಸಿದ್ದೇವೆ.

**ಆರಂಭಗಂ ಚೇವ ಪರಿಗ್ಗಹಂ ಚ**
**ಅವಿಯಸ್ಸಿಯಾ ನಿಸ್ಸಿಯ ಆಯ ದಂಡಾ ।**
**ತೇಸಿಂಚ ಸೇ ಉದಏ ಜಂ ವಯಸೀ**
**ಚೌರಂತಣಂತಾಯ ದುಹಾಯ ನೇಹ. ೨,೬,೨೩.**

ಅವರು (ವಣಿಯಾ – ವರ್ತಕರು) ಕೊಲ್ಲುವುದನ್ನಾಗಲಿ ಆಸ್ತಿಯನ್ನಾಗಲಿ ಬಿಡುವುದಿಲ್ಲ. ಅದಕ್ಕೇ ಅಂಟಿಕೊಂಡಿರುತ್ತಾರೆ. ಅವರು ಅನುದಾರಿಗಳು ನೀವು ಹೇಳಿದ ಅವರ ಸಂಪಾದನೆ ಅವರನ್ನು (ನೇಹ: ನ ಇಹ) ಇಹ ಲೋಕದಲ್ಲಿಯೂ ಅನಂತ ದುಃಖಕ್ಕೆ (ಅಣಂತಾಯ ದುಹಾಯ) ಪರಲೋಕದಲ್ಲಿಯೂ ಕಾರಣವಾಗುತ್ತದೆ.

**ಣೇಗಂತಣಚ್ಚಂತಿಯ ಊದಯೇ ಸೋ**
**ವಯಂತಿ ತೇ ದೋವಿ ಗುಣೋದಯಮ್ಮಿ ।**
**ಸೇಊದಏ ಸಾಇಮಣಂತ ಪತ್ತೇ**
**ತಮ್ ಊದಯಂ ಸಾಹಏ ತಾಇ ನಾಇ. ೨, ೬, ೨೪.**

ಅವರುಗಳ ಸಂಪಾದನೆ ಅನಿಶ್ಚಿತವಾದದ್ದು ಮತ್ತು ಅಂತವಿಲ್ಲದ್ದು. ಈ ಸಂಪಾದನೆ ಮತ್ತು ಇಂದ್ರಿಯ ಸುಖವನ್ನು ಅವರು ಪ್ರಾರಂಭದಲ್ಲಷ್ಟೆ ಅನುಭವಿಸುವರು. ಆದರೆ ಆತನ (ಮಹಾವೀರನ) ಮೂಲಕ ಅವರು ಗಳಿಸುವ ಲಾಭಕ್ಕೆ ಒಂದು ಆರಂಭವಿದೆಯೇ ಹೊರತು ಕೊನೆಯಿಲ್ಲ. ಮುನಿ ಮತ್ತು ಮಾರ್ಗದರ್ಶಿಯು (ನಾಯಪುತ್ತ) ತಾನು ಆರ್ಜಿಸಿದ್ದನ್ನು (ಆತ್ಮಜ್ಞಾನ) ಕೊಟ್ಟು ಬಿಡುತ್ತಾನೆ.

**ಅಹಿಂಸಯಂ ಸವ್ವ ಪಯಾಣುಕಂಪೀ**
**ಧಮ್ಮೇ ಠಿಯಂ ಕಮ್ಮವಿವೇಗ ಹೇಉಂ ।**
**ತಂ ಆಯ–ದಂಡೇಹೀ ಸಮಾಯರಂತಾ**
**ಅಬೋಹಿಏ ತೇ ಪಡಿರೂವ ಏಯಂ. ೨, ೬, ೨೫.**

ಆತನು (ಮಹಾವೀರನು) ಯಾರನ್ನೂ ಹಿಂಸಿಸುವುದಿಲ್ಲ. ಎಲ್ಲ ಜೀವಿಗಳಲ್ಲಿಯೂ ದಯೆ ಮತ್ತು ಅನುಕಂಪೆ ಹೊಂದಿದ್ದಾನೆ. ಧರ್ಮದಲ್ಲಿ ಸ್ಥಿರನಾಗಿದ್ದಾನೆ (ಠಿಯಂ-ಸ್ಥಿರಂ) ತನ್ನ ನಡವಳಿಕೆ ಸರಿಯಾಗಿರುವುದನ್ನು ಪರಿಭಾವಿಸುತ್ತಾನೆ. ಆತನನ್ನು ಪರ್ಯಾಲೋಚನೆ ಇಲ್ಲದ ಜನರಂತೆಯೇ ಎಂದು ತಿಳಿಯುವವನು ಅಜ್ಞಾನಿಗಳಿಗೊಬ್ಬ ಮಾದರಿಯಾಗುವನು.

ಇದು ಆರು ಸಾವಿರ ವರ್ಷಗಳ ಹಿಂದೆ ನಡೆದ ಸೈದ್ಧಾಂತಿಕ ಸಂವಾದ ಎಂಬುದು ಮತ್ತು ಕಣ್ಮರೆಯಾಗಿರುವ ಆಜೀವಿಕ ಸಂಪ್ರದಾಯಕ್ಕೆ ಸಂಬಂಧಿಸಿದುದು ಎಂಬುದು ಇದರ ಚಾರಿತ್ರಿಕ ಮಹತ್ವವನ್ನು ಹೆಚ್ಚಿಸಿದೆ.

**ಸಹಾಯ ಸಾಹಿತ್ಯ**


೧ ಸೂಯಗಡಾಂಗ ಸುತ್ತಂ : (ಸಂ) ಮುನಿ ಜಂಬೂವಿಜಯ, ಜೈನ ಆಗಮಮಾಲೆ, ಬಾಂಬೆ, ೧೯೭೮.
೨ ಸೂತ್ರಕೃತಾಂಗ ನಿರ್ಯುಕ್ತಿ : ಪುಣೆ, ೧೯೨೮.
೩ ಸೂತ್ರಕೃತಾಂಗ ಚೂರ್ಣಿ: ೧) ಋಷಭದೇವಜೀ ಶ್ವೇತಾಂಬರ ಸಂಸ್ಥಾ, ರತ್ಲಂ, ೧೯೫೦.
೪ (ಜನದಾಸಕೃತಿ) ೨) ರಿಷಭ್‌ದೇವ ಕೇಶರಿಮಲ್, ರತ್ಲಂ, ೧೯೪೧.
೫ ಸೂತ್ರಕೃತಾಂಗಂ – ೩) ಗೋಡಿ ಪಾರ್ಶ್ವ ಜೈನ ಗ್ರಂಥಮಾಲಾ ೭, ಬಾಂಬೆ, ೧೯೫೩.
೬ ಸೂತ್ರಕೃತಾಂಗ ವೃತ್ತಿ (ಶಿಲಾಂಕಕೃತ) : ಆಗಮೋದಯ ಸಮಿತಿ, ಬಾಂಬೆ – ಮೆಹೇಸನ, ೧೯೧೭
೭ ಉತ್ತರಾಧ್ಯಯನಾನೀ : ಆತ್ಮವಲ್ಲಭ ಗ್ರಂಥಾವಳಿ ೧೨, ೧೯೩೭.
೮ ಷೂಬ್ರಿಂಗ್, ವಾಲ್ತೆರ್ : ದಿ ಡಾಕ್ಟ್ರಿನ್ ಆಫ್ ದಿ ಜೈನಾಸ್, ದೆಹಲಿ, ೧೯೭೮
೯ ಯಾಕೊಬಿ, ಹರ್ಮನ್ : ಜೈನ ಸೂತ್ರಾಸ್ – II, ಸೇಕ್ರೆಡ್ ಬುಕ್ಸ್ ಆಫ್ ದಿ ಈಸ್ಟ್ ಮಾಲೆ, ಸಂಖ್ಯೆ XLV, ಆಕ್ಸ್‌ಫಡ, ೧೮೯೫.
೧೦ ಬಷಮ್, ಎ. ಎಲ್ : ಹಿಸ್ಟರಿ ಅಂಡ್ ಡಾಕ್ಟ್ರಿನ್ಸ್ ಆಫ್ ದಿ ಆಜೀವಿಕಾಸ್, ಲಂಡನ್, ೧೯೫೧
೧೧ ಬೋಲೆ, ವಿಲ್ಲೆಮ್ : 'ಅದ್ದ ಆರ್ ದಿ ಓಲ್ಡೆಸ್ಟ್ ಎಕ್ಸ್‌ಟಂಟ್ ಡಿಸ್ಪ್ಯೂಟ್ ಬಿಟ್‌ವೀನ್ ಜೈನ್ಸ್ ಅಂಡ್ ಹೆರೆಟಿಕ್ಸ್ (ಸೂಯಗಡ ೨, ೬,) : ಪಾರ್ಟ್ ಒನ್', ಜಂಬೂ ವಿಜಯ, ಅಹಮದಾಬಾದು, ೨೦೦೯
೧೨ ಜೈನ್, ಹೀರಾಲಾಲ್ : ಭಾರತೀಯ ಸಂಸ್ಕೃತಿಗೆ ಜೈನಧರ್ಮಧ ಕೊಡುಗೆ, ಕನ್ನಡ ಅನುವಾದ : ಮಿರ್ಜಿ ಅಣ್ಣಾರಾಯ, ಸೊಲ್ಲಾಪುರ, ೧೯೫೭.


*****

# ಪಂಪನ ಪ್ರತಿಭೆ – ಒಂದು ಟಿಪ್ಪಣಿ

* ಡಾ. ಸಿ.ಯು. ಮಂಜುನಾಥ್

ಪಂಪ ಕವಿಯ ಆದಿಪುರಾಣ ಒಂದು 'ಪುರಾಣ ಕಾವ್ಯ' ಎಂದು ವಿದ್ವಾಂಸರಿಂದ ಕರೆಸಿಕೊಂಡಿದೆ. ಹದಿನಾರು ಆಶ್ವಾಸಗಳ ಈ ಚಂಪೂಕೃತಿ ನಡುನಡುವೆ ಇರುವ ಗದ್ಯ ಭಾಗಗಳು ಸೇರಿದಂತೆ ವಿವಿಧ ಪದ್ಯ ಜಾತಿಗಳ ೧೬೦೦ ಕ್ಕೂ ಹೆಚ್ಚು ಪದ್ಯಗಳನ್ನು ಒಳಗೊಂಡಿದೆ. ಇಂತಹ ದೊಡ್ಡ ಕೃತಿಯನ್ನು ಕವಿ ಮೂರು ತಿಂಗಳಲ್ಲಿ ರಚಿಸಿ ಮುಗಿಸಿರುವುದು ಆಶ್ಚರ್ಯವನ್ನು ತರುತ್ತದೆ. ಕನ್ನಡ ಚಂಪೂ ಕಾವ್ಯಕ್ಕೆ ಒಂದು ಹೆದ್ದಾರಿಯನ್ನು ಹಾಕಿಕೊಟ್ಟು ಆದಿಪುರಾಣ ಜೈನ ಪುರಾಣಗಳಿಗೇ ಒಂದು ಮಾರ್ಗದರ್ಶಕ ಕೃತಿಯಾಗಿದೆ. ಈ ಮಾರ್ಗದಲ್ಲಿ ಮುನ್ನಡೆದ ಅನೇಕ ಕನ್ನಡ ಕವಿಗಳಿದ್ದಾರೆ. ಜಿನ ಸೇನಾಚಾರ್ಯರ (ಕ್ರಿ.ಶ. ೮೫೦) ಪೂರ್ವಪುರಾಣ[1] ಪಂಪನ ಆದಿಪುರಾಣಕ್ಕೆ ಮೂಲ ಆಧಾರವಾಗಿದೆ. ಸುಮಾರು ೧೬೩೦ ಪದ್ಯಗಳಲ್ಲಿ ಮತ್ತು ಮಧ್ಯೆ ಮಧ್ಯೆ ಬರುವ ಗದ್ಯ ಭಾಗಗಳನ್ನು ಅಡಕಗೊಳಿಸಿದ್ದಾನೆ. ಯಾವ ಭಾಗವನ್ನು ಸಂಗ್ರಹಿಸಬೇಕು, ಯಾವ ಭಾಗವನ್ನು ವಿಸ್ತರಿಸಬೇಕು ಎಂಬ ವಿಷಯದಲ್ಲಿ ಪಂಪ ತನ್ನ ವಿವೇಕ, ವಿವೇಚನೆಗಳನ್ನು ಸ್ವತಂತ್ರವಾಗಿ ಬಳಸಿದ್ದಾನೆ. ಹಾಗೆಯೇ ಎಲ್ಲಿ ಹೊಸ ಅಂಶಗಳನ್ನು ಹೊಳಹುಗಳನ್ನು ಸೇರಿಸಬೇಕೆಂಬ ಔಚಿತ್ಯಜ್ಞಾನ ಕವಿಯಲ್ಲಿ ಸಹಜವಾಗಿಯೇ ಇದೆ. ಅವನಿಗೆ ಪೂರ್ವದಲ್ಲಿ ಅಂಥ ಮಾರ್ಗದರ್ಶಕ ಕೃತಿ ಕನ್ನಡದಲ್ಲಿ ಯಾವುದೂ ಇರಲಿಲ್ಲ ಎಂಬುದು ಗಮನಾರ್ಹ, ಇದೇ ಮಾತು ಅವನ ವಿಕ್ರಮಾರ್ಜುನ ವಿಜಯಕ್ಕೂ ಅನ್ವಯವಾಗುತ್ತದೆ. ಈ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ 'ಕಥೆಯ ಮೆಯ್ಗಿಡಲೀಯದೆ' ಕಾವ್ಯ ರಚಿಸುವ ಕಲೆ ಮತ್ತು ಪ್ರತಿಭಾ ಸಾಮರ್ಥ್ಯ ಪಂಪನಿಗೆ ಅನನ್ಯವಾದವು.

ಭರತ ಚಕ್ರವರ್ತಿಯ ದಿಗ್ವಿಜಯದ ಸಂದರ್ಭದಲ್ಲಿ ಬರುವ ಗಂಗಾನದಿ ತೀರದ ವನವಿಹಾರದ ವಿವರಗಳು ಪ್ರಕೃತಿ ವರ್ಣನೆಗೆ ಒಂದು ವಿಪುಲವಾದ ಅವಕಾಶವನ್ನು ಜಿನಸೇನಾಚಾರ್ಯರಿಗೆ ತೆರೆದಿಟ್ಟಿವೆ. ಭರತ ಚಕ್ರವರ್ತಿಯ ಪರಿವಾರ ಹಾಗೂ ಅಂತಃಪುರ ಸ್ತ್ರೀಯರು ವನವಿಹಾರ ಮಾಡಿದ ವಿವರಗಳು ಸುಮಾರು ೧೫೦ ಶ್ಲೋಕಗಳಲ್ಲಿ ವರ್ಣಿತವಾಗಿವೆ. ಪಂಪನು ಮಹಾಪುರಾಣದ ಕೆಲವು ಭಾಗಗಳನ್ನು ಸಂಗ್ರಹಿಸಿಯೂ ಕೆಲಭಾಗಗಳನ್ನು ವಿಸ್ತರಿಸಿಯೂ ರಚಿಸಿದ್ದಾನೆಂದು ವಿದ್ವಾಂಸರು ಗುರುತಿಸಿದ್ದಾರೆ. ವಿಸ್ತರಿಸಿದ ಭಾಗಗಳಲ್ಲಿ ಪುಷ್ಪೋದ್ಯಾನದ ಭಾಗವೊಂದು ಎಂದು ಆದಿಪುರಾಣವನ್ನು ಸಂಪಾದಿಸಿರುವ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ ಅವರು ಅಭಿಪ್ರಾಯಪಟ್ಟಿದ್ದಾರೆ.[2] ಸಹಜವಾಗಿ ಪಂಪ ಪ್ರಕೃತಿಪ್ರೇಮಿ ಕವಿಯಾಗಿರುವುದರಿಂದ ಪುಷ್ಪೋದ್ಯಾನದ ವರ್ಣನೆಯ ಅವಕಾಶವನ್ನು ಅದ್ಭುತ ರೀತಿಯಲ್ಲಿ ಬಳಸಿಕೊಂಡಿರುವುದಲ್ಲದೆ ಅನನ್ಯವಾದ ಪರಿಸರಪ್ರಜ್ಞೆಯನ್ನು ಅಭಿವ್ಯಕ್ತಿ ಮಾಡಿದ್ದಾನೆ.

ಜಿನಸೇನಾಚಾರ್ಯರ ಪೂರ್ವಪುರಾಣದಲ್ಲಿ ಬರುವಂತೆ ೨೭ನೆಯ ಪರ್ವದಲ್ಲಿ ಭರತನ ಸೈನ್ಯ ಮತ್ತು ಅಂತಃಪುರ ಪರಿಹಾರ ಮಾರ್ಗಾಯಾಸದಿಂದ ಬಳಲಿದ್ದ ಕಾರಣ ಪ್ರಶಾಂತ ಗಂಗಾನದಿಯ ತೀರದಲ್ಲಿದ್ದ ವಿಸ್ತಾರ ಉದ್ಯಾನದಲ್ಲಿ ವಿಶ್ರಮಿಸಿತು. ಅದು ಸರ್ವಋತು ಉದ್ಯಾನವಾಗಿದ್ದು ಅದರ ವರ್ಣನೆ ಸಾಕಷ್ಟು ವಿವರವಾಗಿ ಬಂದಿದೆ. ಈ ಬಾಗವನ್ನು ಕವಿ ಅದ್ಭುತ ರೀತಿಯಲ್ಲಿ ಬಳಸಿಕೊಂಡು ತನ್ನ ಪ್ರಕೃತಿ ಪ್ರೇಮ, ಪರಿಸರ ಕಳಕಳಿ, ಸಸ್ಯಜ್ಞಾನದ ಅರಿವು ಮುಂತಾದವುಗಳ ಮೇಲೆ ಗಮನ ಹರಿಸುವುದರ ಜೊತೆಯಲ್ಲಿ ಮಾನವ ಮನಸ್ಸಿನ ಸೂಕ್ಷ್ಮ ಅಂತಃಕರಣವನ್ನೂ ನಿರೂಪಿಸುವುದರ ಮೂಲಕ ಒಂದು ರಮ್ಯಾದ್ಭುತ ಚಿತ್ರವನ್ನು ಕೊಟ್ಟಿದ್ದಾನೆ. ಆದಿಪುರಾಣದ ಹನ್ನೊಂದನೆಯ ಆಶ್ವಾಸದ ಬಹುಭಾಗವನ್ನು ಅದಕ್ಕಾಗಿ ಮೀಸಲಿಟ್ಟಿದ್ದಾನೆ.

ಭರತ ಚಕ್ರಿಯ ದಿಗ್ವಿಜಯ ಯಾತ್ರೆಯಲ್ಲಿ ಅವನ ಚತುರಂಗ ಬಲ, ಅಂತಃಪುರದ ಸ್ತ್ರೀಯರೂ, ಸಕಲಪರಿವಾರದವರೂ ಪಾಲ್ಗೊಂಡಿದ್ದಾರೆ. ಈ ಚೈತ್ರಯಾತ್ರೆಯ ಕಾಲದಲ್ಲಿ ಮಾರ್ಗಾಯಾಸದಿಂದ ಬಳಲಿದ್ದ ಪರಿವಾರ ಗಂಗಾತಟದಲ್ಲಿದ್ದ ಭೂಲೋಕದ ಸರ್ವಋತು ನಂದನವನ್ನು ಪ್ರವೇಶಿಸಿತು. ಬಳಲಿದ್ದ ಭರತೇಶನ ಅಂತಃಪುರದವರಿಗೆ ಈ ಪುಷ್ಪೋದ್ಯಾನ ಒಂದು ಕ್ರೀಡಾಕ್ಷೇತ್ರವಾಗಿ

---

* ೧೪೪೮, ೭ನೆಯ 'ಸಿ' ಮುಖ್ಯ ರಸ್ತೆ, ೩ನೆಯ ಅಡ್ಡರಸ್ತೆ, ಕಲ್ಯಾಣ ಹೌಸಿಂಗ್ ಬಡಾವಣೆ, ಹಂಪಿನಗರ, ಬೆಂಗಳೂರು – ೫೬೦ ೧೦೪.

ಪರಿಣಮಿಸುತ್ತದೆ. ತಮ್ಮ ನಾನಾ ವಿಧವಾದ ಕ್ರೀಡೆಗಳಿಂದ ಆ ವನವನ್ನೆಲ್ಲಾ ಸುತ್ತಿ ಸುಳಿದು ಆನಂದ ಪಡೆದರು. ತಮ್ಮ ಶೃಂಗಾರ, ಆನಂದ, ಪ್ರಮೋದಗಳಿಂದ ಹೂ ಗಿಡ ಮರ ಬಳ್ಳಿಗಳನ್ನು ಆಕ್ರಮಣ ಮಾಡಿ, ಕಾಡಿಸಿ, ನೋಯಿಸಿ, ಕ್ರೀಡಿಸಿ, ಹಿಂಸಿಸಿ ವನದ ಚೆಲುವನ್ನು ಮನಸೋ ಇಚ್ಛಾ ಸೂರೆಮಾಡಿದರು. ಪ್ರಕೃತಿಯ ರಮ್ಯ ಮನೋಹರ ವರ್ಣನೆಯ ಜೊತೆಯಲ್ಲಿ ಅಂತಃಪುರದ ಪರಿವಾರದವರು ನಡೆಸಿದ ಸ್ವೇಚ್ಛಾ ವರ್ತನೆಯನ್ನೂ ಪಂಪ ನಿರೂಪಿಸಿದ್ದಾನೆ.

ಆ ಪುಷ್ಪೋದ್ಯಾನ ಫಲಭರಿತ ವೃಕ್ಷಗಳಿಂದ, ವೈವಿಧ್ಯಮಯ ಪುಷ್ಪ ಸಂಕುಲದಿಂದ, ನಾನಾ ಬಗೆಯ ಬಳ್ಳಿಗಳಿಂದ ಪ್ರಕೃತಿಯ ರಮ್ಯತಾಣವಾಗಿತ್ತು. ಅಪಾರ ವಿಸ್ತಾರದ ಹುಲ್ಲು ಹಾಸು ಕಣ್ಮನ ತಣಿಸುವ ಸಸ್ಯ ವೈವಿಧ್ಯದಿಂದ, ತಂಗಾಳಿಯಿಂದ ದಣಿದ ದೇಹ ಮತ್ತು ಮನಸ್ಸುಗಳಿಗೆ ಚೇತೋಹಾರಿಯಾಗಿತ್ತು. ಆ ಉದ್ಯಾನದ ತಳಿರ ಮೆರುಗು ಅಸಾಧಾರಣವಾದುದು. ಪಂಪ ಅದನ್ನು ನಿರೂಪಿಸಿರುವ ರೀತಿ ಹೀಗಿದೆ:

**ತಳಿರ್ಗಳ ಖಾಂಡ ಪಟಂಗಳೆ**
**ತಳಿರ್ಗಳ ಪಾಸುಗಳೆ ತಳಿರ್ಗಳೋವರಿಗಳೆ ಕೆಂ**
**ದಳಿರ್ಗಳ ಪೊಳೆವಿಜೆ ಸಲ್ಗಳೆ**
**ವಿಳಾಸಮಂ ಮೆಱೆದುವಲ್ಲಿ ಕೆಲರ ಬಲೆಯರಾ ॥ (ಆದಿಪುರಾಣ ೧೧-೭೭)**

ಆ ಸ್ಥಳದ ಚಿಗುರಿನ ರಮ್ಯತೆ ಹೇಗಿದ್ದಿತೆಂದರೆ ಚಿಗುರುಗಳೇ ಅಡ್ಡ ತೆರೆಯಂತೆಯೂ, ಚಿಗುರುಗಳ ಹಾಸುಗಳು, ಚಿಗುರಿನ ಕೊಠಡಿಗಳು, ಕೆಂಪು ಚಿಗುರುಗಳು ಹೊಳೆಯುವ ಇಳಿಜಾರಿನ ಚಾವಣಿಗಳಂತೆ ಇರುವ ಚಿಗುರು ಸಮೂಹದಲ್ಲಿ ಸ್ತ್ರೀಯರು ವಿಲಾಸವನ್ನು ಪ್ರದರ್ಶಿಸಿದರು. ಚಿಗುರಿನ ಪುನರಾವೃತ್ತ ವರ್ಣನೆ ಅದರ ಸಮೃದ್ಧಿಯನ್ನು ನಿರೂಪಿಸುತ್ತದೆ.

ಹಲಸು, ಮಾವು, ಬಾಳೆ, ಕಿತ್ತಳೆ, ತೆಂಗು ಮೊದಲಾದ ಫಲಗಳ ಅಮೃತ ಆಸ್ವಾದದಿಂದ ಸಂತೃಪ್ತಿಗೊಂಡು, ದುಂಬಿಗಳ ಝೇಂಕಾರವನ್ನು ಕೇಳುತ್ತಾ ಅಮೃತದ ಹನಿಗಳು ತೊಟ್ಟಿಡುತ್ತಿರಲು ಹಲವು ಸ್ತ್ರೀಯರು ಪ್ರಕಾಶಿಸಿದರು.

ಗಿಳಿಗಳ ಜೊತೆ ಲಲ್ಲೆ ಮಾತುಗಳನ್ನಾಡಿ, ಝೇಂಕರಿಸುವ ದುಂಬಿಗಳ ಸಂಗೀತವನ್ನು ಜೊತೆಯಲ್ಲಿ ಕೇಳಿ, ಹೆಣ್ಣುಗಿಳಿಗಳೊಡನೆ ಸ್ನೇಹ ಮಾಡಿಕೊಂಡು, ನವಿಲುಗಳ ಬಳಗದೊಂದಿಗೆ ನರ್ತಿಸಿದ ಸುಂದರಿ ಸಮೂಹವು ಹೆಮ್ಮೆಯಿಂದ ಮೆರೆದಾಡಿತು.

ಭರತ ತನ್ನ ಸಕಲ ಅಂತಃಪುರದ ಸ್ತ್ರೀಯರೊಂದಿಗೆ ವಿಶ್ರಮಿಸಿ, ವನದಲ್ಲಿ ತೊಳಲಿ ಮನಃ ಪೂರ್ತಿ ಕೊನೆಯಿಲ್ಲದ ಉತ್ಸಾಹವನ್ನು ಹೊಂದಿದನು.

**ಕೊಳಗಳ ಮರಗಳ ಲತೆಗಳ**
**ಫಳ ಪ್ರಸೂನಂಗಳೋದವಿನೊಳ್ ಪಕ್ಷಿಗಣಂ**
**ಗಳ ಪುದುವಿನೊಲಾಱುಂ ಋತು**
**ಗಳ ಚೆಲ್ವಂ ಕಾಣಲಾದುದಾ ನಂದನದೊಳ್ ॥ (ಆದಿಪುರಾಣ ೧೧-೮೨)**

ಕೊಳಗಳ ಲತೆಗಳ ಹಣ್ಣು ಹೂಗಳ ಸಮೂಹದಲ್ಲಿ, ಪಕ್ಷಿಗಣ ಸಮೂಹದಲ್ಲಿ ಆರುಋತುಗಳ ಸೌಂದರ್ಯವನ್ನು ಆ ಉದ್ಯಾನದಲ್ಲಿ ಕಾಣಲು ಸಾಧ್ಯವಾಯಿತು. ಕವಿ ಪಂಪನು ತನ್ನ ಸಸ್ಯಜ್ಞಾನ, ಜೀವಜಾಲ ಜ್ಞಾನವನ್ನು ಮನೋಜ್ಞವಾಗಿ ಪ್ರದರ್ಶಿಸಿದ್ದಾನೆ. ಇಡೀ ಆಶ್ವಾಸ ಪ್ರಕೃತಿ ಪ್ರೇಮದಿಂದ ತುಂಬಿ ಬಂದಿದೆ.

ಅಂತಃಪುರದ ಸ್ತ್ರೀಯರು ವಿಹಾರದ ಉತ್ಸಾಹದಲ್ಲಿ, ಗುಂಪು ಮನೋಭಾವದಲ್ಲಿ, ತೃಪ್ತಿ ಹೊಂದುವ ಭರದಲ್ಲಿ ತಮ್ಮಿಂದ ಪ್ರಕೃತಿಗೆ ಅಪಚಾರವಾಗುತ್ತಿದೆ, ಅತಿರೇಕವಾಗುತ್ತಿದೆ ಎಂಬುದನ್ನು ಮರೆಯುತ್ತಾರೆ. ಅತಿರೇಕ ನಡವಳಿಕೆಗೆ ಒಂದು ಉದಾಹರಣೆ:

**ಪೊಸ ಮಾವಿನ ಮಿಡಿಯೊಳ್ ಪ**
**ಚ್ಚೆಸಾರಮಂ ಮಾಡುಪಟ್ಟೆಯಿಂ ಮತ್ತೋರ್ವಳ್**
**ಪಸದನದ ಬಸನಿ ನಿಜಕರ**
**ಕಿಸಲಯ ರುಚಿ ಪಸುರೊಳೆಸೆಯೆ ಮಿಡಿಯಂ ಕೊಯ್ದಳ್ ॥ (ಆದಿಪುರಾಣ ೧೧-೯೮)**

ಪರಿವಾರ ಸ್ತ್ರೀಯರಲ್ಲಿ ಒಬ್ಬಳು ಹೊಸ ಮಾವಿನ ಮಿಡಿಗಾಯಿಯಲ್ಲಿ ಪಚ್ಚೆಬಣ್ಣದ ಸರವನ್ನು ಮಾಡಿಕೊಳ್ಳುವ ಅಭಿಲಾಶೆಯಿಂದ ಅಲಂಕಾರಪ್ರಿಯೆ ಮಿಡಿಗಾಯಿಗಳನ್ನು ಕಿತ್ತಳು. ಇನ್ನೊಬ್ಬಳು ಅಲಂಕಾರಕ್ಕಾಗಿ ಮಾವಿನ ಎಲೆಯ ಚಿಗುರನ್ನು ಚಾಚಿದ ಕೊಂಬೆಯಿಂದ ಕಿತ್ತಳು. ಹೊಸ ಮುತ್ತಿನ ಸರದಲ್ಲಿ ಸುರಗಿಯ ಮೊಗ್ಗುಗಳನ್ನು ದಟ್ಟವಾಗಿ ತುಂಬಿರುವಂತೆ ಕಾಣಿಸಬೇಕೆಂಬ ಉದ್ದೇಶದಿಂದ ತನ್ನ ಹಾರ ಮತ್ತು ಸರಿಗೆಗಾಗಿ ಪ್ರೀತಿಯಿಂದ ಸುರಗಿಯ ಮೊಗ್ಗುಗಳನ್ನು ಮತ್ತೊಬ್ಬಳು ಕಿತ್ತಳು. ಹೀಗೆಯೇ ಮಲ್ಲಿಗೆ, ಜಾಜಿ, ಮಾಧವಿ, ಸುರಹೊನ್ನೆ, ಕರ್ಣಿಕಾರ, ಸಂಪಗೆ, ಕೇದಗೆ, ಬಕುಳ, ಸೇವಂತಿಗೆ, ಗೊಜ್ಜಗೆ ಮುಂತಾದ ಎಲ್ಲ ಹೂ ಮೊಗ್ಗುಗಳನ್ನು ಕಿತ್ತು ಹೂವಿನ ತೊಡುಗೆಗಳನ್ನು ಮಾಡಿಕೊಂಡು ಧರಿಸಿ ಆನಂದಿಸಿದರು. ಆ ವನದ ಎಳೆಯ ಚಿಗುರು, ಮೊಗ್ಗು, ದಪ್ಪಮೊಗ್ಗು, ಬಿರಿಮುಗುಳು, ಹೂಗೊಂಚಲುಗಳು, ಮಿಡಿಕಾಯಿಗಳು, ಅಲಂಕಾರದ ಆಭರಣಗಳಾಗಿ ಸೂರೆಯಾದವು. ಅವರೆಲ್ಲರೂ ಹೂವಿನ, ಚಿಗುರಿನ, ಮೊಗ್ಗಿನ, ಮಿಡಿಗಾಯಿಗಳ ಆಭರಣಗಳನ್ನು ಧರಿಸಿ ವನಕಾಂತೆಯರಂತೆ ಕಂಡು ಬಂದರು.

**ಬನದ ಕಳಿರ್ಗಳಿಕೆ ಮುಗುಳ್**
**ನನೆ ಬಿರಿ ಮುಗುಳಲರ ಗೊಂಚಲೆಂಬಿವು ವನಜಾ**
**ನನೆಯರದೇಂ ಪೆಂಪೊ ಭರತನಂತಃಪುರದ** (ಆದಿಪುರಾಣ ೧೧-೧೨೩)

ಪಂಪನು ಒಂದು ಸಂಕ್ಷಿಪ್ತ ಗದ್ಯ ಭಾಗದಲ್ಲಿ ಅಂತಃಪುರ ಸ್ತ್ರೀಯರ ನಡವಳಿಕೆಯನ್ನು ನಿರೂಪಿಸುತ್ತಾನೆ. ರಾಣಿಯರು ಅರಗಿನ ರಸದಿಂದ ಕೆಂಪಾದುದೂ, ರತ್ನ ಕಾಲಂದುಗೆಗಳ ಧ್ವನಿಯಿಂದ ಸುಭಗ ಮನೋಹರವಾದ ಎಡಗಾಲಿನ ಒದೆತದಿಂದ ಬಂಗಾರದಂತಿರುವ ಅಶಿಕ ವೃಕ್ಷಗಳು ಕುಸುಮಿಸುವಂತೆ ಮಾಡಿ, ಮುಖ ಕಮಲದ ಮದ್ಯದ ಅಭಿಷೇಕದ ಸುವಾಸನೆಯ ಶಾಳದಿಂದ ವಕುಳ ವೃಕ್ಷಗಳನ್ನು ಅರಳಿಸಿ, ಹಾಲನ್ನು ಮುಕ್ಕಳಿಸಿ ಅಭಿಷೇಕ ಮಾಡುವುದರಿಂದ ಸಂಪಿಗೆ ವೃಕ್ಷಗಳನ್ನು ಹೂಬಿಡುವಂತೆ ಮಾಡಿಯೂ, ಉನ್ನತ ವಕ್ಷಗಳಿಂದ ಅಪ್ಪುವುದರ ಮೂಲಕ ಗೋರಂಟಿ ಹೂಗಳು ಬಿಡುವಂತೆ ಮಾಡಿ, ತಮ್ಮ ವಿಸ್ತಾರವಾದ ಹಾಗೂ ಕಾಂತಿಯುಕ್ತವಾದ ಕಣ್ನೋಟದ ಜೋಡಣೆಯಿಂದ ತಿಲಕ ವೃಕ್ಷಗಳನ್ನು, ಹೊಸ ಲತೆಗಳೊಂದಿಗೆ ಸೇರಿಸುತ್ತಾ, ಹೂ ಬಿಡುವಂತೆ ಮಾಡುತ್ತಾ ಹೀಗೆ ನಾನಾ ವಿಧವಾದ ಕ್ರೀಡೆಗಳಿಂದ, ವನಕ್ರೀಡೆಯಲ್ಲಿ ತಲ್ಲೀನರಾಗಿ ವಿಹರಿಸಿದರು.

ಈ ಹಂತದಲ್ಲಿ ಭರತನ ಅಂತಃಪುರದವರೆಗೆ ತಮ್ಮ ಅತಿರೇಕದ ವರ್ತನೆ ಅರಿವಾಗತೊಡಗಿತು. ತಾವು ಬಂದ ಸಮಯದಲ್ಲಿ ಇದ್ದ ಉದ್ಯಾನವನದ ಸ್ಥಿತಿಗೂ ಈಗಿನ ಸ್ಥಿತಿಗೂ ಇರುವ ಅಂತರ ಅರಿವಾಗಿರಬೇಕು. ಹೊರಡುವ ಸಮಯದಲ್ಲಿ ಮರಳಿ ನೋಡಿದಾಗ ತಾವು ಮಾಡಿರುವ ಹಾನಿಯ ಪರಿಣಾಮ ಮತ್ತು ಪರಿಮಾಣಗಳು ಮನಸ್ಸಿಗೆ ತಟ್ಟಿರಬೇಕು. ತಪ್ಪಿನ ಗಹನತೆ ಅರಿವಾಗಿ ಪಶ್ಚಾತ್ತಾಪದಿಂದ ಕ್ಷಮೆಯಾಚಿಸುತ್ತಾರೆ.

**ಇದು ಕಡುನಾಣಪುತ್ತು ವಲಮಿ ನೆನೆವುತ್ತಿರಿಮೆಮ್ಮನೆಂಬುದಾ**
**ವುದು ಗುಣವೆಮ್ಮೊಳಾಗಿ ನೆನೆದಪ್ಪಿರಶೋಕಮೆ ವಾಮಪಾದದಿಂ**
**ದೊದೆವುದೆ ಕೇಸರ ದ್ರುಮಮೆ ನಿನ್ನುಮನಾನನ ಸೀಧುವಿಂದೆ ಪೂ**
**ಮ್ದಿದೆ ಕೃತಮಾವುದಿಂ ಮಱೆವುದೆಮ್ಮ ಮದೋತ್ಕಟ ಚೇಷ್ಟಿತಂ ಗಳಂ ॥** (ಆದಿಪುರಾಣ ೧೧-೧೨೫)

ಬೀಳ್ಕೊಡುಗೆಯ ಈ ಸಂದರ್ಭದಲ್ಲಿ ನೀವು ನಮ್ಮನ್ನು ಜ್ಞಾಪಿಸಿಕೊಳ್ಳುತ್ತಿರಿ ಎಂದು ಹೇಳುವುದು ಅತ್ಯಂತ ನಾಚಿಕೆಯ ಹುತ್ತವಲ್ಲದೆ. [ಹಾವು ಹುತ್ತದಲ್ಲಿ ಸೇರುವಂತೆ ನಮ್ಮ ಕಾರ್ಯದಲ್ಲಿ ನಾಚಿಕೆಗೇಡಿತನ ತುಂಬಿದೆ.] ಯಾವ ಉತ್ತಮ ಗುಣ ಹೊಂದುದ್ದೆವೆಂದು ನಮ್ಮನ್ನು ಜ್ಞಾಪಿಸಿಕೊಳ್ಳುತ್ತೀರಿ? ಅಶೋಕ ವೃಕ್ಷವನ್ನು ಎಡಗಾಲಿನಿಂದ ಒದೆದದ್ದೇ? ಕೇಸರ ವೃಕ್ಷವನ್ನು ಬಾಯಲ್ಲಿದ್ದ ಹೆಂಡದಿಂದ ಉಗುಳಿದ್ದೆ? ನಾವು ಮಾಡಿದ್ದೇನು? ನಮ್ಮ ಮದೋತ್ಕಟ ಚೇಷ್ಟೆಗಳನ್ನು ಮರೆಯುವಂತೆ ವಿನಂತಿಸುತ್ತಾರೆ. ಅವುಗಳಿಂದ ಬೀಳ್ಕೊಳ್ಳುತ್ತಾರೆ.

**ನನೆಗಳ ಗೊಂಚಲಂ ತಳಿರತೊಂಗಲಣಾಡುವ ಬೆಳ್ಪಳಪ್ಪ ಕೊಂ**
**ಬಿನಮಿಡಿಯಂ ತೆರಳ್ಚಿ ತೆಗೆದೋವದೆ ಕಾಯದೆ ಕೂರ ಕರ್ಮದಿಂ**
**ಸೊನೆಸುರಿವನ್ನೆಗಂ ಪಱಿದು ನೋಯಿಸಿ ಕಾಡಿದೆಮಿನ್ನದೊಂದುಮಂ**
**ನೆನೆಯದೆ ನೀನುಮಾಮುಮೊಡ ನಿರ್ದಿರವಂ ನೆನೆ ಬಾಲ ಚೂತಮೆ ॥** (ಆದಿಪುರಾಣ ೧೧-೧೨೭)

ಎಳೆಮಾವಿನ ಮರವೆ ನಾವು ನಿನ್ನ ಮೊಗ್ಗುಗಳ ಗೊಂಚಲನ್ನು, ಚಿಗುರಿನ ಕೊನೆಗಳನ್ನು ಸೊಗಸಾಗಿ ತೂಗುತ್ತಿದ್ದ ಕೊಂಬೆಯ ಮಿಡಿಗಾಯಿಗಳನ್ನು ಕಿತ್ತುಕೊಂಡು ಅವಸರದಲ್ಲಿ ಕರುಣೆಯಿಲ್ಲದೆ ಕ್ರೂರ ವರ್ತನೆಯಿಂದ ಸೂನೆ ಸುರಿಯುವಷ್ಟು ಕಿತ್ತು, ನೋಯಿಸಿ, ಕಾಡಿದೆವು. ನಾವು ಮಾಡಿದ ಈ ಎಲ್ಲ ಕ್ರೂರ ನಡೆವಳಿಕೆಗಳಲ್ಲಿ ಯಾವುದೊಂದನ್ನೂ ನೆನೆಯದೆ ನಾವು ಮತ್ತು ನೀನು ಒಡನಿದ್ದದ್ದನ್ನು ಮಾತ್ರ ನೆನೆಯುವಂತೆ ಅಂತಃಪುರ ಸ್ತ್ರೀಯರು ವಿನಂತಿಸುತ್ತಾರೆ. ಅನಂತರ ಮಾವಿನ ಮರವನ್ನು ಪ್ರೀತಿಯಿಂದ ಅಪ್ಪಿ ಬೀಳ್ಕೊಳ್ಳುತ್ತಾರೆ.

**ಭಂಗಿಗಳೊಳೆ ನಿಮ್ಮೊಳ್ ಕಡು**
**ಸಂಗತಮೆಮಗವನೆ ಮನದೆಗೊಂಡೆಮ್ಮ ಕಿಸುರ್**
**ಪಿಂಗುಗಗಲ್ವೆಡೆಯೊಳ್ ಕೆಳೆ**
**ಸಂಗಳಿಸುಗೆ ನಿಮಗಮೆಗಗಮಿಂ ಲತೆಗಳಿರಾ ॥** (ಆದಿಪುರಾಣ ೧೧-೧೨೭)

ಬಳ್ಳಿಗಳೆ ನರ್ತನ ಭಂಗಿಗಳಲ್ಲಿ ನಮಗೆ ನಿಮ್ಮಲ್ಲಿ ಬಹು ಸ್ನೇಹವಾಯಿತು. ಆ ಸ್ನೇಹವನ್ನೇ ಮನಸ್ಸಿಗೆ ತಂದುಕೊಂಡು ನಮ್ಮ ಪಾಪವು ಹಿಂಗಿ ಹೋಗಲಿ, ಪರಸ್ಪರ ಅಗಲುವ ಈ ಸಂದರ್ಭದಲ್ಲಿ ನಮಗೆ ನಿಮಗೆ ಸ್ನೇಹ ಉಂಟಾಗಲಿ ಎಂದು ಹೇಳುತ್ತಾರೆ. ಈ ರೀತಿಯಾಗಿ ಅಂತಃಪುರ ಸ್ತ್ರೀಯರು ವನಲತೆಗಳನ್ನು ಸಮಾಧಾನಿಸುತ್ತಾರೆ.

**ಪದೆದುತ್ತಂಸವತಂಸ ಶೋಭೆಗೆ ಭವದ್ಬಾಲ ಪ್ರವಾಳೀಲ್ಲಸನ್**
**ಮೃದು ಪುಷ್ಪಸ್ತಬ ಕಂಗಳಂ ಪಱಿದೆಮಿನ್ನಾದೋಷಮಂ ಕೊಳ್ಳದಿ**
**ರ್ಪುದು ಕೇಳೀವನ ಪಾದಪಂಗಳಿರ ಚಿತ್ತಂಗೊಂಡು ಬೀಱಿಕ್ಕೊಂಡುರಾ**
**ಗದೆ ನಿಮ್ಮಂ ಬಲಗೊಂಡು ಪೋಪ ಗುಣಮಂ ಕೊಳ್ಳಿಂ ಮನಃ ಪ್ರೀತಿಯಿಂ ॥** (ಆದಿಪುರಾಣ ೧೧-೧೨೮)

ಆಟಗಳಿಗಾಗಿ ಬಳಸಿಕೊಂಡ ಅಡವಿಮರಗಳೆ, ನಮ್ಮ ತಲೆಯ ಮತ್ತು ಕಿವಿಯ ಆಭರಣಕ್ಕಾಗಿ ನಿಮ್ಮ ಮನೋಹರವಾದ ಎಳೆಯ ಚಿಗುರು, ಮೃದುಹೂವಿನ ಗೊಂಚಲುಗಳನ್ನು ಹರಿದಿದ್ದೇವೆ. ಆ ತಪ್ಪನ್ನು ಮನಸ್ಸಿಗೆ ಇನ್ನು ಮೇಲೆ ತಂದುಕೊಳ್ಳಬೇಡಿ. ಮನಃ ಪೂರ್ವಕವಾಗಿ ನಿಮ್ಮಿಂದ ಬ...ಳ್ಕೊರಡು ಪ್ರೀತಿಯಿಂದ ನಿಮ್ಮನ್ನು ಪ್ರದಕ್ಷಿಣೆ ಮಾಡಿ ಹೊರಡುವ ನಮ್ಮ ಸದ್ಗುಣವನ್ನು ಮಾತ್ರ ಮನಃ ಪೂರ್ವಕವಾಗಿ ಪ್ರೀತಿಯಿಂದ ಸ್ವೀಕರಿಸಿ ಎಂದು ವನವೃಕ್ಷಗಳನ್ನು ಅಂತಃಪುರ ಸ್ತ್ರೀಯರು ಒಪ್ಪಿಸಿದರು.

**ಬನದ ಪಡಿವಱನಸಂಗಂ**
**ನಿನಗಿತ್ತೊಡೆ ಪುಗಲಿಮೆಂದುದೇಂ ದೋಷಮೆ ಚಿಃ**
**ನೆನೆಯದಿದಂ ನಿನ್ನಿಂಚರ**
**ಮನೆ ಮನದೊಳ್ ನೆನೆವೆಮಾಗಳುಂ ಪರಭೃತಮೇ ॥** (ಆದಿಪುರಾಣ ೧೧-೧೨೯)

ಕೋಗಿಲೆಯೇ, ಮನ್ಮಥನು ಬಾಗಿಲು ಕಾಯುವ ಕರ್ತವ್ಯವನ್ನು ನಿನಗೆ ವಹಿಸಿದಾಗ ಪ್ರವೇಶಿಸಬೇಡಿ (ಪುಗಲಾ) ಎಂದು ನೀನುಕೂಗಿ ಹೇಳಿದುದು ಏನು ದೋಷವೆ? ಅದೇನು ತಪ್ಪಲ್ಲ. ನಿನ್ನ ಮಾತನ್ನು ನೆನೆಪಿಸಿಕೊಳ್ಳದೆ, ನಿನ್ನ ಸೊಗಸಾದ ಮಧುರ ಧ್ವನಿಯನ್ನು ಮಾತ್ರ ಮನಸ್ಸಿನಲ್ಲಿ ನೆನೆಪಿಸಿಕೊಳ್ಳುತ್ತೇವೆ ಎಂದು ಅಂತಃಪುರ ಸ್ತ್ರೀಯರು ಹೇಳಿದರು. ಹೀಗೆ ಕೋಗಿಲೆಗಳಿಗೆ, ದುಂಬಿಗಳಿಗೆ, ಸರೋವರ, ಕಾಲುವೆ, ಹಂಸಪಕ್ಷಿಗಳು ಮುಂತಾದವುಗಲೊಂದಿಗೆ ಬೀಳ್ಕೊಡುಗೆ ಪಡೆದು, ತಮ್ಮ ಮುಂದಿನ ಪ್ರಯಾಣ ಬಹಳ ದೀರ್ಘವಾದುದೆಂದೂ ಹೇಳಿ ಮುಂದೆ ಸಾಗುತ್ತಾರೆ. ಗಂಗಾ ನದಿಯಲ್ಲಿ ಮಾಡುವ ಜಲಕ್ರೀಡೆಯೊಂದಿಗೆ ಮುಂದಿನ ಕಥಾಭಾಗ ಮುಂದುವರಿಯುತ್ತದೆ.

ಆದಿಪುರಾಣ ಮೂಲ ಪೂರ್ವ ಪುರಾಣವನ್ನು ಅನುಸರಿಸಿ ಸಾಗಿದ್ದರೂ ಪ್ರಕೃತಿಯವರ್ಣನೆಯಲ್ಲಿ ಅಲ್ಲಲ್ಲಿ ಸ್ವಂತಿಕೆಯನ್ನು ಪಂಪನು ಮನೋಜ್ಞವಾಗಿ ಮೆರೆದಿದ್ದಾನೆ. ಮೂಲದಲ್ಲಿ ಪ್ರಕೃತಿಯ ರಮ್ಯ ವರ್ಣನೆ ಇದ್ದರೂ, ಪಂಪನ ಆದಿಪುರಾಣದಲ್ಲಿ ಅಂತಃಪುರ ಸ್ತ್ರೀಯರ ಪಶ್ಚಾತ್ತಾಪದ ಕ್ಷಮಾಯಾಚನೆ ಒಂದು ಹೊಸ ಆಯಾಮವನ್ನು ಒದಗಿಸುತ್ತದೆ. ಇಲ್ಲಿ ಸ್ಪಷ್ಟವಾಗಿ ಪಂಪನ ಪ್ರಕೃತಿ ಪ್ರೀತಿ, ಒಳನೋಟ, ಪರಿಸರ ಪ್ರಜ್ಞೆ ಸ್ಫುಟವಾಗಿ ಅಭಿವ್ಯಕ್ತಿ ಪಡೆದಿವೆ.

ಮಾನವರು ಉತ್ಸಾಹದ ಭರದಲ್ಲಿ, ಗುಂಪಿನ ಮನೋಭಾವದಲ್ಲಿ, ಮೈಮರೆವಿನಲ್ಲಿ ಕೆಲವು ಸಾರಿ ನಿಸರ್ಗದೊಡನೆ ಒರಟಾಗಿ, ಕ್ರೂರವಾಗಿ ವರ್ತಿಸಿ ಅದಕ್ಕೆ ಅಪಚಾರವನ್ನು ಮಾಡುವುದರ ಮೂಲಕ ಪರಿಸರ ಸಮೃದ್ಧಿಯನ್ನು ಹಾಳು ಮಾಡುತ್ತಾರೆ. ಇಂತಹುದೇ ನಡವಳಿಕೆ, ಭರತನ ಅಂತಃಪುರ ಸ್ತ್ರೀಪರಿವಾರದಿಂದ ನಡೆಯುತ್ತದೆ. ತಮ್ಮ ತಪ್ಪಿನ ಅರಿವಾದ ತಕ್ಷಣ, ವಿವೇಕ ಎಚ್ಚರವಾದಾಗ, ತಮ್ಮ ನಡವಳಿಕೆಯಿಂದ ಆದ ಅಪಚಾರಕ್ಕೆ, ಅತಿರೇಕ ವರ್ತನೆಗಾಗಿ ಕ್ಷಮಾಯಾಚನೆಯ ಮನಃಸ್ಥಿತಿ ಮೂಡುತ್ತದೆ. ಇಂಥ ಅತಿ ವರ್ತನೆ ಪುನರಾವೃತ್ತಿಯಾಗದಂತೆ ನೋಡಿಕೊಳ್ಳುವುದು ಸೂಕ್ಷ್ಮಮನಸ್ಸಿನ ಸುಸಂಸ್ಕೃತ ನಡವಳಿಕೆಯಾಗಿದೆ.

ಮಾನವ ಮತ್ತು ನಿಸರ್ಗದ ಸಂಬಂಧ ಕುರಿತ ಪಂಪನ ದೃಷ್ಟಿಕೋನ, ಅನನ್ಯ ಸೂಕ್ಷ್ಮ ಸಂವೇದನೆ, ಅಸಾಧಾರಣ ಪರಿಸರ ಪ್ರಜ್ಞೆ ಇವು ಅದ್ಭುತ ರೀತಿಯಲ್ಲಿ ಹನ್ನೊಂದನೆಯ ಆಶ್ವಾಸದಲ್ಲಿ ಪ್ರಕಟವಾಗಿದೆ. ಪಂಪಕವಿಯ ವಿಶೇಷವಿರುವುದೇ ಇಂಥ ಸ್ವತಂತ್ರ ಒಳನೋಟಗಳನ್ನು ನೀಡುವುದರಲ್ಲಿದೆ. ಜಿನಸೇನಾಚಾರ್ಯರ ಪೂರ್ವಪುರಾಣ ಅಥವಾ ವ್ಯಾಸಭಾರತವನ್ನು ಅನುಸರಿಸಿ ಕೃತಿಗಳನ್ನು ರಚಿಸಿ ತೃಪ್ತನಾಗದೆ ತನ್ನ ಪ್ರತಿಭಾ ಸ್ಪರ್ಶದಿಂದ ಸ್ವಂತಿಕೆಯನ್ನು ಮೆರೆದು ಮಾನವೀಯ ಒಳನೋಟಗಳನ್ನು ಪ್ರಕಟಪಡಿಸುವ ಸಾಮರ್ಥ್ಯದಿಂದ ಪಂಪಕವಿ ವಿಶಿಷ್ಟ ನೆಲೆಯಲ್ಲಿಯೇ ವಿಹರಿಸುತ್ತಾನೆ.

ಭರತನ ರಾಣಿಯರು ಪುಷ್ಪೋದ್ಯಾನವನ್ನು ಪ್ರವೇಶಿಸುವಾಗ ಇದ್ದ ರಾಣಿಯರೆಂಬ, ಚಕ್ರವರ್ತಿಯರ ಪರಿವಾರದವರೆಂಬ ಅಹಂಕಾರ ಅಡಗಿ, ದೈನ್ಯಯುತ, ವಿನಯಯುತ, ನಿರ್ಮಲ ಮನಸ್ಸಿನವರಾಗಿ ಪರಿವರ್ತಿತರಾಗುತ್ತಾರೆ. ಬೀಳ್ಕೊಳ್ಳುವಿಕೆಯ ಸನ್ನಿವೇಶದಲ್ಲಿ ಇದ್ದಕ್ಕಿದ್ದಂತೆ, ಚಕ್ರವರ್ತಿ ಪರಿವಾರದವರೆಂಬ ಅಹಂಕಾರವಡಗಿ, ಸಹಜ ಮಾನವರಂತೆ ನಡೆದುಕೊಳ್ಳುತ್ತಾರೆ. ಪ್ರಕೃತಿಯ ಅಸಾಧಾರಣ ಶಕ್ತಿಯ ಮುಂದೆ, ಸೌಂದರ್ಯದ ಮುಂದೆ ವಿನೀತ ಸಾಧಾರಣ ಜೀವಿಗಳಾಗಿ ಕಂಡು ಬರುತ್ತಾರೆ. ಪ್ರಕೃತಿ ಕಲಿಸಿದ ಮೌನ ಪಾಠ, ಅಂತಃಪುರದ ಸ್ತ್ರೀಯರ ಮನಸ್ಸಿನ ಪರಿವರ್ತನೆ, ಪಕ್ವವಾಗುವ ರೀತಿ ಇಂಥ ಚಿತ್ರಣಗಳಲ್ಲಿ ಪಂಪನ ಪ್ರತಿಭಾ ಸ್ಪರ್ಶ ಮಹತ್ವಪೂರ್ಣವಾಗಿ ಮೂಡಿರುವುದನ್ನು ಕಾಣಬಹುದಾಗಿದೆ.

**ಸಹಾಯಕ ಗ್ರಂಥಗಳು**

೧. ಪ್ರೊ. ತೀ. ನಂ. ಶ್ರೀಕಂಠಯ್ಯ : ಪಂಪ (೧೯೬೫)
೨. ತ.ಸು. ಶಾಮರಾಯ, ಪ. ನಾಗರಾಜಯ್ಯ : ಆದಿಪುರಾಣದೀಪಿಕೆ (೧೯೯೧)
ಆದಿಪುರಾಣ ಪದ್ಯ ಸಂಖ್ಯೆಗಳು ಆದಿಪುರಾಣ ದೀಪಿಕೆಯವು.
೩. ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ : ಪಂಪ (೧೯೮೭)
೪. ಅಭಿಜ್ಞ: ಸಾ.ಶಿ. ಮರುಳಯ್ಯ ಅಭಿನಂದನ ಗ್ರಂಥ (೨೦೦೧)
೫. ಲೇಖನ : ಶಾಸನ ಕಾವ್ಯಗಳಲ್ಲಿ ಪರಿಸರ ಪ್ರಜ್ಞೆ: ಡಾ. ಸಿ.ಯು. ಮಂಜುನಾಥ್, ಪು. ೬೩೦–೬೪೧.

**ಅಡಿಟಿಪ್ಪಣಿಗಳು**

೧ ಜಿನಸೇನಾಚಾರ್ಯರು (೮೩೮–೯೮) ಈ ಸಮಗ್ರ ಪುರಾಣ ಕಾವ್ಯದ ಮೊದಲ ೪೨ ಸರ್ಗಗಳನ್ನು ರಚಿಸಿದರು. ಇದನ್ನು ಪೂರ್ವ ಪುರಾಣವೆನ್ನುವರು. ಮುಂದಿನ ಭಾಗವನ್ನು ಪೂರ್ಣಗೊಳಿಸಿದವರು ಅವರ ಶಿಷ್ಯರಾದ ಗುಣಭದ್ರಾಚಾರ್ಯರು. ಇದನ್ನು ಉತ್ತರಪುರಾಣವೆಂದು ಕರೆಯುತ್ತಾರೆ. ಎರಡೂ ಭಾಗಗಳು ಸೇರಿ ಮಹಾಪುರಾಣವೆಂದು ಗುರುತಿಸಲ್ಪಡುತ್ತದೆ. ಅದು ಪೂರ್ಣರೂಪ ಪಡೆದದ್ದು ಕ್ರಿ.ಶ. ೮೯೮–೯೯ ರಲ್ಲಿ

೨ ಸಂ. ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ : ಆದಿಪುರಾಣ.

*****

# ಶ್ರೀರೋಹಣಗಿರಿ

* ಸೀತಾರಾಮ ಜಾಗೀರದಾರ್

ಆರಾರೇ ಶಾಸ್ತ್ರ
ಶ್ರೀರೋಹಣಗಿರಿಯನಲ್ಲಿ ನವಕವಿತಾ ಚಿಂ
ತಾರತ್ನಂ ದೊರೆಗುಮೆ ಮಾ
ರಾರಿಯ ಕೃಪೆಯಿಲ್ಲದಂಗೆ ಧರಣೀತಲದೊಳ್ ॥

'ಕನ್ನಡ ಕೈಪಿಡಿ'[೧] ಓದಿದವರಿಗೆ ಮೇಲ್ಕಾಣಿಸಿದ ಪದ್ಯ ಕಂದದ ಶೈಲಿಗೆ ಷಡಕ್ಷರ ಕವಿಯ ರಾಜಶೇಖರ ವಿಳಾಸದಿಂದ ಎತ್ತಿಕೊಟ್ಟ ಪದ್ಯವೆಂದು ತತ್ಕ್ಷಣ ನೆನಪಿಗೆ ಬರುತ್ತದೆ. ಈ ರೋಹಣಗಿರಿ ಎಲ್ಲಿದೆ, ಏನು, ಎತ್ತ ಎಂಬ ಪ್ರಶ್ನೆಗಳಿಗೆ D. F. ಕಿಟ್ಟೆಲ್ಲ್ ಕೋಶ ಒಂದು ಉತ್ತರ ಕೊಟ್ಟರೆ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು (ಬೃಹನ್ನಿಘಂಟು) ಸಂಪೂರ್ಣ ಮೌನ ತಳೆದಿದೆ,[೨] ಎಂದರೆ ಈ ಪ್ರಯೋಗವನ್ನು ಕೊಟ್ಟು ಕೊಡಬೇಕಾದ ಅರ್ಥವನ್ನು ಕೊಟ್ಟಿಲ್ಲ. ಆ ಬಗ್ಗೆ ವಿವರಿಸುವುದೇ ಲೇಖನದ ಗುರಿ.

**ರೋಹಣಗಿರಿಯ ಪ್ರಸ್ತಾಪವನ್ನುಳ್ಳ ಕೃತಿಗಳು**

**೧. ಕೋಶಗಳು;**

(ಅ) ಬೃಹತ್‌ಕೋಶ ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನಿಘಂಟು' – ಏಳನೆಯ ಸಂಪುಟ, ಪುಟ–೭೬೬೦;

ರೋಹಣ (ನಾ) ೧. ಹತ್ತುವುದು, ಏರುವುದು. ೨. ಬೆಳೆಯುವುದು, ಏಳಿಗೆ, 'ರುಟ್, ರುಹಂ ರೋಹಣಂ' – ಈ ೪ (ನಾಲ್ಕು) ಮೊಳಕೆ (ಕಾಕ್ಯ, ೧೫೦); ೩. ಬಾಣ, ಅಂಬು; ೪. (ಸಿಂಹಳದಲ್ಲಿರುವ) ಒಂದು ಪರ್ವತ; ತಾರಾಚಳದೊಡನೆ ರೋಹಣಂ ಪೋರ್ದುದೆನಲ್ ವಾರಣದೊಡನೆ ಖಗಪ್ರಭುವಾ ರಣದೊಳ್ ಪೋರ್ದು (ಜಗವಿ. ೧೩–೧೧೦); ಉರ್ವೀಧಂ ರೋಹಣಮೆಗಡಾರ್ವರ್ಣಿಸಜೆವರಣ್ಣ, ತಜ್ಜನಪದಮಂ (ಚಂದ್ರ ಪಉ. ೩–೧೦) ರೋಹಣದ್ರುಮ (ನಾ) ಗಂಧದ ಮರ ; ಚಂದನ ವೃಕ್ಷ.

(ಆ) ಆ. ರೋಫ್, ಕಿಟ್ಟೆಲ್ : Kannada English Dictionary (4th pt.) pp. 1426;

ರೋಹ = ರೋಹಣ

ರೋಹಕ = Riding on ; a rider, sea ಆ - 2, growing on

ರೋಹಣ = rising ; mounting upwards; ascending ; riding on Sitting or standing on; Growing, growing over, Healing ; sea ಆ - 2, N. of a mountain (Adam's Peak in Ceylon) [i.e. Srilanka]

ರೋಹಣಗಿರಿ = ರೋಹಣಾದ್ರಿ (R.sv. 1,29)

ರೋಹಣದ್ರುಮ = The sandal tree

ರೋಹಣಾದ್ರಿ = Meru (Bp. 1829)[3]

---

* 'ಕಲ್ಪ' ೪೦೬/೬.೧ ಮೇನ್–೩, ಕ್ರಾಸ್–೭ ಸರಸ್ವತಿಪುರಂ ಮೈಸೂರು– ೫೭೦ ೦೦೯

(ಇ) Sanskrit - English Dictionary (Sir M.M. Williams)

Rohana, N. of a mountain ( Adam's peak in cylon) Rajat. (i) i. e. Rohini - pertains to medicine etc.

- druma : m. the sandal tree, L

- parvata : m. Adam's peak in ceglonsatr

- Rohaṇòa chala : m. id. sarvad (I.e. Sarva-dar'sana ಸರ್ವದರ್ಶನ)

ಈ) Indian Epigraphical Glossary (Dr. D.C. Sircar) :

Rohana : (SITI= South Indian Temple Inscription) Function perfromed at the commonn cement of a festival (p. 281)

- It is evident here that the auther of this Glossary does not know the other epigraphical usages or occurences viz.

**ಶಾಸನಗಳಲ್ಲಿ ರೋಹಣಾದ್ರಿ**

(A) (i) E.C. vol. VII, sk. 114 (BLRice) : 1096 A.D.

ಎಳೆಗೆಲ್ಲಂ ಬಲಿರಾಜಧಾನಿ ನಯನಕ್ಕಾನಂದಮೆಂದಿಂದ್ರನೀ ಪೊಳಲಂ ನೋಡುತಮಿರ್ದ್ದದಿಲ್ಲಿಯೆ ವಿಮಾನಂ ನಿಂದುದೆಂಬತಿರಿಟ್ಟಳಮಾಗೊಪ್ಪಿರೆ ಸರ್ವ್ವದೇವನಮಳ ಶ್ರೀಕಾಮಿನೀವಲ್ಲಭಂ ಕಳಸಾರೋಹಣಮಾಗೆ ಮಾಡಿಸಿದನೀ ಸರ್ವ್ವೇಶ್ವರಾವಾಸಮಂ ॥

(ii) ibid. ಸರ್ವ್ವೇಶ್ವರ ದಂಡನಾಯಕನ ಒಂದು ಬಿರುದು ಇಂತಿದೆ : ಗುಣರತ್ನಾರೋಹಣ ಮಹೀಧರ[೪]. ಆತ ಗುಣಗಳನೇಕವನ್ನು –ರತ್ನಪ್ರಾಯವಾದುವನ್ನು– ಆ ರೋಹಣಗಿರಿಯಂತೆ ಧರಿಸಿದ್ದನು ಆ ರೋಹಣ ಗಿರಿಯಂತೆ ಇದ್ದಿತು.

(B) (i) E. C. vol. viii (B.L. Rice) Sl. 28 (1208 A.D.)

ದೊರೆಯೆನೆ ಕೊಡಕಣೆ ಬನವಾ
ಸೆರೋಹಣಾಚಳಕದ ಪುರುಷಕಾಂತಾವಿಬೂಧೋ
ತ್ಕರ ರತ್ನಂಗಳ ಕಣಿಯೆನೆ
ನಿರಂತರಂ ತೊಳಗಿಬೆಳಗಿ ರಾಜಿಸುತಿರ್ಕ್ಕುಂ ॥

(ii) E.C. vol XI (BL. Rice) Dg.85 (1143 A.D.) : ಪಂಕ್ತಿಗಳು :

೨೦ . . . . . . . . . . ॥ ಆಗಣ್ಯಪ್ರಣ್ಯಮೂರ್ತ್ತಿ
೨೧ ಯುಂ ಪ್ರಭುಮಂತ್ರೋತ್ಸಾಹಸಕ್ತಿತ್ರಯ ರತ್ನಾಳಂಕರನಾವೀರಲಕ್ಷ್ಮೀ
೨೨ ಹಾರನು (ಂ)ಸೂರ್ಯ್ಯಂಡದೇಹ ರೋಹ(ರ)ಣಾಚಳೋತ್ಪನ್ನ ಸ್ರಿಂಗಾರಪುರುಷರತ್ನನುಂ

ಇಲ್ಲಿ ಬಂದಿರುವ 'ರೋಹಣಾಚಲ(ಳ)' ಎಂಬ ಗಿರಿಯನ್ನು ಗಮನಿಸಿ.

(ಅ) (i) E.C. VIII (B.L. Rice) Sa. 55 (1560 A.D.) ಪಂಕ್ತಿಗಳು 81-83 :

ಹರಿವಂಶಾರಿಷ್ಟನೇಮಿ ಸ್ಥಿರವಸನದಿಂದೂರ್ಜ್ಜಯಂತಾದ್ರಿಯಿಂ ಭಾ
ಸ್ಕರ ರತ್ನಸ್ಪ(ರು)ಶ್ಮ್ಯ ಕೂಪೋನ್ನತಿಯಿನನುದಿನಂ ರೋಹಣಾದ್ರೀಂದ್ರಮಂ ಭಾ

ಸುರ ಸೌಧರ್ಮ್ಮಾಗಮರ್ಷಿ ಸ್ಥಿತಿಯಿನಮರ ಶೈಲೇಂದ್ರಂದ್ರಮಂ ಸತ್ವತಾಕೋ
ತ್ಕರದಿಂ ನಾಟ್ಯಾಂಗಮಂ ಪೋಲ್ತೆಸಲುದು ಭುವನ ಸ್ವಾಮಿ ನೇಮೀಶವಾಸಂ ॥

(ii) ibid. NR. 46 (About 1530 A.D.) ಈ ಶಾಸನದಲ್ಲಿ ಅಚ್ಯುತರಾಯ (ವಿಜಯನಗರ) ದೊರೆಯ ಪ್ರಸ್ತಾಪವಿದೆ. (ವಿದ್ಯಾನಂದ ಮುನಿಯ ಶಿಷ್ಯನ ವರ್ಣನೆಯಿದೆ).

ಶ್ರೀಮದ್ದೇವೇನ್ದ್ರಕೀರ್ತ್ತಿ ವ್ರತಿಹ ಜಿನಮತಾಂಭೋಜಿನೀ ಭಾಸಿ ಭಾನೋ
ಸದ್ವಿದ್ಯಾನಾಥಪಥೋನಿಧಿ ವಿಶದ ಕರತ್ಸಾರಪೀಯೂಷಭಾನೋ
ಏನೋ ಬನ್ಧಾಸಿಧೇನೋಮಯಿ ಕುರು ಕರುಣಾಂವಾಕ್ಸುಧಾ ಕಾಮಧೇನೋ
ವಿದ್ಯಾನಂದಾರ್ಯ್ಯಸೂನೋ ಗುಣಮಣಿವಿಲಸ ದ್ರೋಹಣಾದ್ರಿಂದ್ರಸಾನೋ ॥

– ಇಲ್ಲಿನ 'ರೋಹಣಾದ್ರಿ' ಇದನ್ನು ಗಮನಿಸಿ

(D) ibid. (EC. etc) Nr. 37 (1069 A.D. & 1201 A.D.)

ಶೌರ್ಯ್ಯ ಯಸ್ಯ ಸದರ್ಪ್ಪ ವೈರಿವನಿತಾ ವೈಧವ್ಯ ದೀಕ್ಷಾಗುರುಂ
ಪ್ರಾಯೇದಾನಮನೂನಮರ್ತ್ಥಿ ಜನತಾದಾರಿದ್ಯ ವಿದ್ರಾವಣಂ
ಕೀರ್ತ್ತಿ ದಿಗ್ವನಿತಾವಿಲೋಲ ಕಬರೀ ಕುಂದ ಪ್ರತಿದ್ವಂದಿನೀ
ಸೋಯಂ ಸದ್ಗುಣರತ್ನ ರೋಹಣಗಿರಿಃ ಶ್ರೀವಲ್ಲಭೋರ್ವ್ವೀಶ್ವರಃ ॥

– ಇಲ್ಲಿನ ರೋಹಣಗಿರಿಯೂ ರತ್ನ ನಿಕ್ಷೇಪ ಹೊಂದಿದ ಗಿರಿ ಎಂದು ಪ್ರಸಿದ್ಧವಾಗಿರುವುದು ಸ್ಪಷ್ಟವಿದೆ.

(E) S.I.I. vol. XX. (Ed. Dr. G.S. Gai) Insp. No. 52 (ಪಂಕ್ತಿಗಳು : ೨–೪) : ಶಾ.ಶ. ೯೯೯ ಮತ್ತು ೧೦೦೦, ಪಿಂಗಳ ಮತ್ತು ಕಾಳಯುಕ್ತ (1077 A.D. & 1078 A.D.)

ಸ್ವಸ್ತಿ ಶ್ರೀಮೂಳಸಂಘ ಪ್ರಥಿತ ಪೃಥು ತಪೋ . . ಸಮ್ಯಕ್ತ ಬೋ[ಧಾ']
ನ್ಯಸ್ತಾನೇಕಾನ್ತ ವಸ್ತೂಚ್ಚಯರಚಿತ ಗುಣಶ್ಚಿತ್ರಹಾರಾಯಿತ ಶ್ರೀಃ
ಶಸ್ತಸ್ಸೂರಸ್ತವಂಶಃ ಶಮಭುವಿ ಸಮಭೂದಾರ್ಹತೇ ರೋಹಣಾದ್ರೌ ॥

– ಅರ್ಹತ ರೋಹಣಾದ್ರಿಯಲ್ಲಿ ಅನೇಕಾನ್ತದ ಗುಣಮಣಿಗಳನ್ನು ಹೊಂದಿದ ತಪಸ್ಸಿನಿಂದ ಮೂಲಸಂಘದ ತಪೋಧನರು ಸೂರಸ್ತಗಣದ ಹಾರವನ್ನು ರಚಿಸಿದರು. ಇಲ್ಲಿನ "ರೋಹಣಾದ್ರಿ" ರತ್ನಗಳ ನಿಕ್ಷೇಪ ಹೊಂದಿದ ಬೆಟ್ಟ ಎಂಬುದು ಸ್ಪಷ್ಟ.

III. ಇನ್ನು ನಾವು ಸಾಹಿತ್ಯ ಕೃತಿಗಳತ್ತ ಇನಿತು ಹೊರಳೋಣ ರೋಹಣಾದ್ರಿಯ ಕುರಿತ ಪ್ರಯೋಗಗಳನ್ನು ನೋಡೋಣ. ಇದು ಆಗ್ಗಳದೇವನ 'ಚಂದ್ರಪ್ರಭಪುರಾಣಂ' ಕಾವ್ಯದಲ್ಲಿ ಎರಡು ಸಲ ಪ್ರಯೋಗಗೊಂಡಿದೆ.

(ಅ)

ದುರಿತವ್ರಾತಲತಾ ಕೃಪಾಣಿ ವಿಸರದ್ದುರ್ಬೋಧರೋಧಸ್ವಿನೀ
ತರಣದ್ರೋಣಿ ಸಮುನ್ನತಾಕ್ಷಯ ಪದ ಪ್ರಸಾದನಿಶ್ರೇಣಿ ಬಂ
ಧುರ ಸಾಹಿತ್ಯ ಸುರತ್ನರೋಹಣ ಮಹೇಂದ್ರಕ್ಷೋಣಿ ತಾರ್ಳ್ದಕ್ಕೆ ವಿ
ಸ್ತರದಿಂ ವಾಣಿ ಮದೀಯ ಮಾನಿತ ಮುಖಶ್ರೀಯೊಳ್ ಸಖೀಲೀಲೆಯಿಂ ॥ (ಆ. ೧–೧೨)

(ಆ) 'ಸುಗಂಧಿ' ಎಂಬ ವಿಷಯದ (ಪ್ರದೇಶದ) ವರ್ಣನೆಯಲ್ಲಿ ರೋಹಣಗಿರಿಯ ಪ್ರಸ್ತಾಪ ಹೀಗಿದೆ;

ಸರ್ವರ್ತುಕಮೆ ಬನಂನೆಲ
ನರ್ತರೆಯೆ ಕೊಳಂಸಮಂತು ಪೊಗೊಳನೆ ಬಜೆ ।
 ಕ್ಸುರ್ವಿಧ್ರಂ ರೋಹಣಮೆಗ
ಡಾರ್ವರ್ಣಸಲಜೀವರಣ್ಣ ತಜ್ಜನಪದಮಂ ॥ (ಆ. ೩–೧೦)

ಆದೇಶಲ್ಲಿ ಇದ್ದ ಪರ್ವತಗಳೆಲ್ಲ ರೋಹಣಗಿರಿಗಳು! ರೋಹಣಗಿರಿ ಅತ್ಯಂತ ಶ್ರೇಷ್ಠಪರ್ವತ ಎಂಬುದು ಇದರಿಂದ ಸ್ಪಷ್ಟ. ಮೊದಲನೆಯ ಪ್ರಯೋಗ ಈ ಸಂಗತಿಯನ್ನು ತಿಳಿಸುವಲ್ಲಿ ಇನ್ನಷ್ಟು ಸ್ಫಟಿಕಶಲಾಕೆಯಷ್ಟು ಪಾರದರ್ಶಕವಾಗಿದೆ. ಸರಸ್ವತೀ ದೇವಿಯು 'ಬಂಧುರಸಾಹಿತ್ಯ ಸುರತ್ನ ರೋಹಣಮಹೇಂದ್ರ ಕ್ಷೋಣೆ' ಸಾಹಿತ್ಯಸುರತ್ನಗಳನ್ನು ಹೊಂದಿದ ರೋಹಣಪರ್ವತಸಾನು ಪ್ರದೇಶ.

(ಇ) ರುದ್ರಭಟ್ಟನ 'ಜಗನ್ನಾಥವಿಜಯಂ' ಕಾವ್ಯದಲ್ಲಿ ಕೃಷ್ಣ ಹಾಗು ಇಂದ್ರರ ಯುದ್ಧದ ಪ್ರಸಂಗದಲ್ಲಿ ರೋಹಣಗಿರಿಯ ಪ್ರಸ್ತಾಪವಿದೆ :

**ತಾರಾಚಳನಂ ಜನಯಿಸೇ**
**ತಾರಾಚಳದೊಡನೆ ರೋಹಣಂ ಪೋರ್ದ್ದುದೆನಲ್**
**ವಾರಣದೊಡನೆ ಳಗಪ್ರಭು**
**ವಾರಣದೊಳ್ ಪೋರ್ದ್ದು ಚಿತ್ರವಿಧದಿಂ ಪೊಣರ್ದ್ದಂ ॥**

ರಣರಂಗಭೂಮಿಯಲ್ಲಿ ಯುದ್ಧದ ಅಸ್ತ್ರ-ಪ್ರತ್ಯಸ್ತ್ರಗಳನ್ನಾಗಿ ತಾರಾಚಳ ಮತ್ತು ರೋಹಣಾಚಲಗಳನ್ನು ಬಳಸಲಾಗಿದೆ. ಈ ಎರಡು ಇಲ್ಲಿ ಕಾಲ್ಪನಿಕ ಗಿರಿಗಳು ಎಂಬಂತೆ ತೋರುತ್ತವೆ. 'ತಾರಾಚಲ' ಇದನ್ನು 'ಕೈಲಾಸಪರ್ವತ' ಎಂದು ಗುರುತಿಸಬಹುದು. ತಾರಾ = ರಜತ; ತಾರಾಚಲ ಎಂದರೆ ರಜತಾದ್ರಿ. 'ರಜತಗಿರಿ' 'ರೋಹಣಗಿರಿ' ಒಂದರ ಮುಂದೆ ಒಂದು ನಿಂತವು! ಕವಿಗೆ ಹೀಗೆ ಕಂಡಿದೆ. ಇನ್ನೊಂದು ದೃಷ್ಟಿಯಲ್ಲಿ ಒಂದರ ಮುಂದೆ ಇನ್ನೊಂದು!

(ಈ) ಭೀಮಕವಿಯ ಬಸವಪುರಾಣ ಕಾವ್ಯದಲ್ಲಿ ರೋಹಣಗಿರಿಯ ಪ್ರಸ್ತಾಪವಿದೆ : ಸಂಧಿ-೧೮, ಪದ್ಯ-೨೯:

**ಹರನನೊಂದಿನವಾದೊಡಂ ತಾಂ**
**ಧರಿಸಲಾಜಿದ ಮಾನಸೋತ್ತಮ**
**ಗಿರಿಯ ನಿಲವೆನಿತೀಶ್ವರೋ ತನ್ನವನಗಲಿ ಪೋದ ।**
**ಸುರಪಕೀಲದ ಧೈರ್ಯ್ಯವೆನಿತು**
**ಸ್ಥಿರದರುಣ ಪಾಷಾಣವರ್ಣ್ಣೋ**
**ತ್ಕರದಿನಟಿಸುವ ರೋಹಣಾದ್ರಿಯ ಘನತೆಯೇತಜದು ॥**

ಸಕಲೇಶ ಮಾದರಸ ಶ್ರೀಶೈಲಪರ್ವತದಲ್ಲಿ ಇದ್ದ ಮಲ್ಲರಸನನ್ನು ಕಾಣಲು ಹೋದ; ಶಿವಯೋಗಿ ಮಲ್ಲಿಕಾರ್ಜ್ಜುನ ಸ್ವಾಮಿಯು ಇದ್ದ ಶ್ರೀಶೈಲಪರ್ವತ ಪ್ರಪಂಚದಲ್ಲಿ ಇದ್ದ ಎಲ್ಲ ಕುಲಪರ್ವ್ವತಗಳಿಗಿಂತಲೂ ಶ್ರೇಷ್ಠವಾಗಿ ಆತನಿಗೆ ಕಂಡಿತು. ರೋಹಣಾದ್ರಿ ಶ್ರೀಶೈಲ ಪರ್ವತಕ್ಕಿಂತಲೂ ಕಡಿಮೆಯಾಗಿ ಕಂಗೊಳಿಸಿತು. ಸೂಚನಾಪದ್ಯ (ಸಂಧಿ-೧೮) ಈ ಸಂಗತಿಯನ್ನು ಸ್ಪಷ್ಟಪಡಿಸಿದೆ :

ಸೂಚನೆ :

**ಶ್ರೀಗಿರೀಂದ್ರಕೆ ಹೋಗಿಯದರ ಮ**
**ಹಾಗಹನ ಗುಹೆಗಳೊಳಜಿಸಿ ಶಿವ**
**ಯೋಗಿ ಮಲ್ಲರಸರನು ಕಂಡಂ ಮಾದಿರಾಜಯ್ಯ ॥**

ಕುಲಪರ್ವತಗಳ ಸಮೂಹದಲ್ಲಿ 'ತಾರಾಚಳ' ಆಗಲಿ 'ರೋಹಣಾದ್ರಿ' ಆಗಲಿ ಇಲ್ಲ. ಮೋನಿಯರ್ ವಿಲಿಯಮ್ಸ ಸಂಸ್ಕೃತ ಇಂಗ್ಲಿಷ್ ಡಿಕ್ಷನರಿಯಲ್ಲಿ 'ಕುಲಪರ್ವತ' ಹಾಗು 'ಕುಲಗಿರಿ' ಒಂದೇ ಎಂದು ಹೇಳಿ ಅವೆಂದರೆ : ಮಹೇಂದ್ರ, ಮಲಯ, ಸಹ್ಯ, ಶುಕ್ತಿಮತ್, ಋಕ್ಷ, ವಿಂಧ್ಯ ಹಾಗೂ ಪಾರಿಯಾತ್ರ (ಪಾರಿಪಾತ್ರ) ಎಂದು ವಿವರಿಸಿದ್ದಾನೆ.

ಕೆ. ಈಶ್ವರ ದತ್ತ ತೆಲುಗು ಶಾಸನಗಳಲ್ಲಿ ಬಂದಿರುವ ಕುಲಪರ್ವತಗಳನ್ನು ಹೀಗೆ ವಿವರಿಸಿದ್ದಾರೆ : ಇವು (ಇವಿವಡು) ಹಿಮವಂತ, ವಿಧ್ಯ, ನಿಷಧ, ಮಾಳ್ಯವಂತ, ಪಾರಿಯಾತ್ರ, ಗಂಧಮಾದನ, ಹೇಮಕೂಟ (S.I.I. IV, 1380)

ಪಂಪನು ಆದಿಪುರಾಣದಲ್ಲಿ – ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿ ಪರಿವೃತಮಾಗಿ ಭರತ, ಹೈಮವತ, ಹರಿವರ್ಷ, ವಿದೇಹ, ರಮ್ಯಕ, ಹೈರಣ್ಯವತೈರಾವತಗಳೆಳೇಜು ಜನಪದಗಳಿಂದಂ ಪೂರ್ವಾಪರಾಯತಂಗಳುಂ ಹೇಮಾರ್ಜುನ ತಪನೀಯ ವೈಡೂರ್ಯವಜ್ರ ರಜತ ಹೇಮಮಯಂಗಳುಂ ಮಣಿವಿಚಿತ್ರಪಾರ್ಶ್ವಂಗಳು ಮಧಸ್ಥಳೋಪರಿನತಳ ನಮಾನವಿಸ್ತಾರಂಗಳಪ್ಪ ಹಿಮವನ್ಮಹಾಡಿಮ ವನ್ನಿಷಧನೀಳರುಗ್ಮಿ ಶಿಳರಗಳೆಂಬ ವರ್ಷಧರಮಡೀಧರಂಗಳಿಂದಂ ಇನ್ನೊಂದು ಕನಕಗಿರಿಗಳಿಂದಂ ನಾಲ್ಕು ನಾಭಿನಗಂಗಳಿಂದಂ ಮೂವತ್ತು ನಾಲ್ಲಕು ವಿಜಯಾರ್ಧಪರ್ವತಂಗಳಿಂದಮನಿತೆ ವೃಷಭಾದ್ರಿಗಳಿಂದಂ ಚತುರ್ದಶ ಮಹಾವಾಹಿನಿಗಳಿಂದಮೆಸೆದು – ಹಿಮವನ್, ಮಹಾಹಿಮವನ್, ನಿಷಧ, ನೀಳ, ರುಗ್ಮಿ ಹಾಗು ಶಿಖರಿ ಎಂಬ ಮೋಡಮುಸುಕುವ ಪರ್ವತಗಳು. ಎಣಿಸಿದರೆ ಇವು ೫ ಆದರೂ ಆಗಬಹುದು ಆರಾದರೂ ಆಗಬಹುದು! 'ಆರು' ಎಂಬ ಸಂಖ್ಯೆಯ ಪಾಠ (ಗ್ರಂಥ = text) ಇಲ್ಲ, ಈ ಹೆಸರುಗಳನ್ನು ಪಂಪನೆಲ್ಲಿಂದ ಶೇಖಸಿರಿದನೋ? ಪೂರ್ವಪುರಾಣಲ್ಲಿ ಆಗಲಿ ಚಾವುಂಡರಾಯಪುರಾಣದಲ್ಲಿ ಆಗಲಿ ಇಲ್ಲ. ನಮಗೆ ಮುಖ್ಯವಾದ ಸಂಗತಿ ಎಂದರೆ 'ರೋಹನಾದ್ರಿ' ಎಂಬ ಅಭಿಧಾನವು ಇಲ್ಲಿ ಎಲ್ಲೂ ಇಲ್ಲ.

ಕುಲಪರ್ವತಗಳು ಎಂದಾಗಲೆಲ್ಲ ನಮ್ಮ ಮುಂದೆ ನಿಲ್ಲುವ ಪರ್ವತಗಳೆಂದರೆ (ಕುಲಗಿರಿಗಳು) :

(ಅ) ಮಹೇಂದ್ರ, ಮಲಯ, ಸಹ್ಯ, ಶುಕ್ತಿಮತ್, ಋಕ್ಷ ವಿಂಧ್ಯ ಹಾಗೂ ಪಾರಿಯಾ(ಪಾ)ತ್ರ MMW ; MBR. Bhishwa parva -9 etc.

(ಆ) ಮೇರು, ಮಂದರ, ಕೈಲಾಸ, ಹಿಮಾಚಲ, ನಿಷಗ, ಗಂಧಮಾದನ ಹಾಗೂರಮಣ (ಗರುಡಪುರಾಣ:೧೫–೬೦, ೬೧)

(ಇ) ಗುಣಭದ್ರಾಚಾರ್ಯರು ಮಹಾಪುರಾಣದ ಭಾಗವಾದ ಉತ್ತರಪುರಾಣದಲ್ಲಿ ಬರುವ ಶಾಂತೇಶ್ವರ ತೀರ್ಥಂಕರ ಪುರಾಣದಲ್ಲಿ ಭವಾವಳಿಯ ವಿವರಣೆಯಲ್ಲಿ ಮಾನುಷೋತ್ತರ ಭೂಭಾಗಗಳನ್ನು ತೋರಿಸುತ್ತಾ ಮನೋಹರವಾದ ದೇಶಗಳನ್ನು ತೋರಿಸಿದ್ದಾರೆ ; ಅಲ್ಲಿ ಪರ್ವತಗಳ ವಿವರ ಹೀಗಿದೆ :

**ಭರತಃ ಪ್ರಥಮೋ ಽತಃಸ್ತತೋ ಹೈಮವತಃ ಪರಃ**
**ಹರಿವರ್ಷೋಽವಿದೇಶ್ಚ ಕಮ್ಯಕಃ ಪಂಚಮೋ ಮತಃ ॥**
**ಹೈರಣ್ಯವತಸಂಜ್ಞಶ್ಚ ಪರಶ್ಚೈರಾವತಾದ್ವಯಃ**
**ಪಶ್ಚೈತೇ ಸಪ್ತ ಭೂಭೃದ್ಭಿ ಭಕ್ತಾಃ ಸಪ್ತಭಿರ್ವಿಭೋ ॥**
**ಹಿಮವಾನ್ಮಹಾಡಿವಾನ್ನಿಷದೋ ಮಂದರೋ ಮಹಾನ್**
**ನೀಲೋ ರುಕ್ಮಿ ಶಿಖರ್ಯಾಖ್ಯೋವಿಖ್ಯಾತಾಃ ಕುಲಪರ್ವತಾಃ ॥**

(ಪರ್ವ–೬೩, ಪದ್ಯಗಳು : ೭೦೨–೭೦೪). ಪಂಪ ಗುಣಭದ್ರಾಚಾರ್ಯರಿಗೆ ಋಣಿ ಆಗಿದ್ದಾನೆ ಎಂಬುದು ಸ್ಪಷ್ಟ.

(ಈ) ಆಪ್ಟೆ ನಿಘಂಟುವಿನಲ್ಲಿ ಕುಲಪರ್ವತಗಳು –೮. ಎಂದು ಎರಡು ವಿಧದಲ್ಲಿ ವಿವರಿಸಿದೆ.

(ಅ) ನೀಲ, ನಿಷದ, ವಿಂಧ್ಯಾಚಲ, ಮಾಲ್ಯವಾನ್, ಮಲಯ, ಗಂಧಮಾದನ, ಹೇಮಕೂಟ ಹಾಗು ಹಿಮಾಲಯ

(ಆ) ಹಿಮಾಲಯ, ಹೇಮಕೂಟ, ನಿಷಧ, ಗಂಧಮಾದನ, ನೀಲ, ಶ್ವೇತ, ಶೃಗವಾರ ಮತ್ತು ಮಾಲ್ಯವಾನ್

ಇಲ್ಲಿನ 'ಅ' ಗುಂಪಿನಲ್ಲಿ 'ವಿಂದ್ಯಾಚಲ' ಹಾಗೂ 'ಮಲಯ' ಪರ್ವತಗಳಿದ್ದರೆ 'ಆ' ಗುಂಪಿನಲ್ಲಿ 'ಶ್ವೇತ' ಹಾಗೂ 'ಶೃಗವಾರ' ಎಂಬುವು ಇದ್ದು ಎರಡು ಭಾಗ ಆಗಿವೆ.

ಕುಲಪರ್ವತಗಳು – ೬, ೭, ೮ ಹೀಗೆ ಮೂರು ರೀತಿಯಲ್ಲಿ ವಿವರಿಸಿರುವುದನ್ನು ಮೇಲಿನ ವಿವರಣೆಗಳಲ್ಲಿ (ಅಸ್ಪಷ್ಟವಾಗಿರುವುದನ್ನು) ಕಾಣಬಹುದಾಗಿದೆ. ಮತ್ತೆ 'ರೋಹಣಗಿರಿ' ಇವುಗಳಲ್ಲಿ ನಮೂದಿತವಾಗಿಲ್ಲವೆನ್ನುವುದೂ ಅಷ್ಟೇ ಸ್ಪಷ್ಟವಿದೆ. ಹಾಗಾದರೆ ರೋಹಣಗಿರಿ ಎಂಬುದು ಯಾವುದು ಎಂಬ ಪ್ರಶ್ನೆ ನಮ್ಮ ಮುಂದೆ ನಿಲ್ಲುತ್ತದೆ – ಎಲ್ಲಿದೆ ಎಂದು ಕಾಡುತ್ತದೆ.

ಶಾಸನವೊಂದರಲ್ಲಿ ಮೇರು ಹಾಗು ಮಂದರ ಇವು ಒಂದರ ಮುಂದೆ ಇನ್ನೊಂದು ; ದಂಪತಿಗಳ ಹಾಗೆ ಇರುತ್ತವೆ! ಬನವಾಸಿಪನ್ನಿರ್ಚ್ಛಾಸಿರದಲ್ಲಿನ ಬೆಳಗುವತ್ತಿಯ ಸಿಂದರ ಅಧಿಕಾರಿ ಶಂತಣ್ಣ (ಶಾಂತಿ ಯಣ್ಣ) ಹಾಗೂ ಆತನಸತಿ ಇಬ್ಬರು ಮೇರು ಮಂದರಗಳ ಹಾಗೆ ಇದ್ದರೆಂದು ವರ್ಣಿಸಿದೆ. (VII. sk. 315) ಅವರಿಬ್ಬರೂ ಕಾಂಚನಭೂರದಂತೆ ಇದ್ದರು ಅಮರಕೋಶದಲ್ಲಿ ಮೇರುಪರ್ವತವನ್ನು ಹೀಗೆಂದು ವಿವರಿಸಿದೆ :

**ಮೇರುಸ್ಸುಮೇರುರ್ಹೇಮಾದ್ರೀರತ್ನಸಾನು ಸ್ಸುರಾಲಯಃ।**

ಮೇರು, ಸುಮೇರು, ಹೇಮಾದ್ರಿ, ರತ್ನಸಾನು ಹಾಗು ಸುರಾಲಯ ಎಂಬ ಐದು ಅಭಿಧಾನಗಳು. ಮತ್ತೆ ಭಟ್ಟಹಲಾಯುಧನ ಅಭಿಧಾನರತ್ನಮಾಲಾದಲ್ಲಿ :

. . . . . . . . .
**ಮೇರು ಸ್ಸುರಪರ್ವತಸುಮೇರುಶ್ಚ ॥**
**ಶಕ್ರಕ್ರೀಡಚಲೋ ಮೇರುಸ್ಸುಮೇರುರ್ಹೇಮಪರ್ವತಃ**
**ರತ್ನಸಾನುರಿತಿಖ್ಯತೋ ಹೇಮಾದ್ರಿ ಸ್ತ್ರಿದಶಾಲಯಃ ॥**

ಮೇರು, ಸುರಪರ್ವತ, ಸುಮೇರು, ಇಂದ್ರನಾಡುವ ಬೆಟ್ಟ, ಹೇಮಪರ್ವತ, ರತ್ನಸಾನು, ತ್ರಿದಶಾಲಯ ಇತ್ಯಾದಿ ಹೆಸರುಗಳಿಂದ ಹೇಮಾದ್ರಿ ಪ್ರಸಿದ್ಧವಾಗಿದೆ. ಈ ಕೋಶಕಾರರು 'ಮಂದರ' ಪರ್ವತದ ಹೆಸರನ್ನೇ ಹೇಳಿಲ್ಲ. ಮೋನಿಯರ್‌ವಿಲಿಯಂಸನ 'ಸಂಸ್ಕೃತ ಇಂಗ್ಲಿಷ್ ಡಿಕ್ಷ್ನರಿ (Sanskröit English Dictionary) ಗ್ರಂಥದಲ್ಲೂ 'ಮೇರು-ಮಂದರ' ಇವು ಜೈನಗ್ರಂಥಗಳಾದ 'ಮಹಾಪುರಾಣ' ಹಾಗು 'ಚಾವುಂಡರಾಯ ಪುರಾಣ' ಗ್ರಂಥಗಳಲ್ಲಿ (ಮೇರುಮಂದರಗಳು) ಒಂದಾದ ಹಾಗೆ ಒಂದಾಗಿವೆ. ಅರ್ಥಾತ್ ಒಂದು ಬೆಟ್ಟ ಶ್ರೇಣಿಯಲ್ಲಿರುವ ಎರಡು ಶಿಖರಗಳು ಒಂದಕ್ಕೊಂದು ಆನಿಕೊಂಡಿವೆ ಅಥವಾ ಹತ್ತಿರದಲ್ಲಿದೆ. ಜೈನಪುರಾಣಗಳ ಪ್ರಕಾರ ಹಿಮಾಲಯ ಬೆಟ್ಟದಲ್ಲಿರುವ ಕೈಲಾಸಪರ್ವತದಲ್ಲಿ ಮುನಿವರ ವೃಷಭನಾಥ ತಪಸ್ಸನ್ನಾಚರಿಸಿ ನಿರ್ವಾಣವನ್ನು ಪಡೆದರು. ಈ ಸ್ಥಳವನ್ನು 'ಅಷ್ಟಾಪದ' ಎಂದು ಗುರುತಿಸಲಾಗುತ್ತದೆ. ಕೈಲಾಸಪರ್ವತ ಭಾರತೀಯರಿಗೆಲ್ಲ ಪೂಜನೀಯ ಸ್ಥಳ-ಪರ್ವತ. ಅದು ಈಶ್ವರನ ವಾಸಸ್ಥಾನ. 'ರಜತಾದ್ರಿ' ಎಂದರೂ ಇದೇ. ಮತ್ತೆ ಮೂಲ 'ಹೇಮಕೂಟವೆಂದರೂ ಇದೇ ಗಿರಿಶಿಖರ. ಹಿಮಾಲಯ ಪರ್ವತವೇ ಈ ಎಲ್ಲ ಬೆಟ್ಟಗಳಿಗೆ ಆಲಯ. ಇಲ್ಲಿಂದಲೆ ನಮ್ಮ ಎಲ್ಲ ನದಿಗಳೂ (ಗಂಗೆ, ಯಮುನೆ, ಸಿಂಧು, ಸರಸ್ವತೀ ಬ್ರಹ್ಮಪುತ್ರಾ ಅಥವಾ ಕಾವೇರಜಾ) ತಮ್ಮ ಜನ್ಮತಳೆದಿವೆ. ಪ್ರ-ಪ್ರಜಾಪತಿ ಎಲ್ಲವೂ ಇಲ್ಲಿಂದಲೇ:

**ಪ್ರಜಾಪತಿಯಃ ಪ್ರಥಮಂ ಜಿಜೀವಿಷುಃ**
**ಶಶಾಸ ಕೃಷ್ಯಾದಿಷು ಕರ್ಮಸು ಪ್ರಜಾಃ**
**ಮುಮುಷುರಿಷ್ವಾಕುಲಾದಿರಾತ್ಮವಾನ್**
**ಪ್ರಭುಃ ಪ್ರವವ್ರಾಜ ಸಹಿಷ್ಣುತಚ್ಯುತಃ ॥**

(ಬೃಹತ್ ಸ್ವಯಂಭೂ ಸ್ತೋತ್ರ, ಪದ್ಯ-೨೬, ಸಮಂತಭದ್ರ) ಪ್ರಜಾಪತಿಯು (ಬ್ರಹ್ಮ) ಪ್ರಜೆಗಳಿಗೆ ಬದುಕಲುಬೇಕಾದ ಕೆಲಸ ಕಾರ್ಯಗಳನ್ನು ತಿಳಿಸಿದ್ದು, ಮುಮುಕ್ಷುಗಳಿಗೆ ಏನೆಲ್ಲವನ್ನೂ ಸಹಿಸಿ ಮೋಕ್ಷ (ಅಚ್ಯುತ) ಪದವಿಯನ್ನು ಪಡೆಯಲು ಪಥವನ್ನು ತೋರಿಸಿದ್ದು ಮತ್ತು ಇಕ್ಷ್ವಾಕು ಮೊದಲಾದ ಕುಲಗಳನ್ನು ಸೃಷ್ಟಿಸಿದ್ದು ಇಲ್ಲಿಯೇ, ಜೀವಜಗತ್ತು, ಅದು ಬದುಕಲು ಬೇಕಾದ ಕೃಷಿ, ಮಷಿಃ, ಅಸಿ, ವಿದ್ಯಾ, ವಾಣಿಜ್ಯ ಹಾಗೂ ಶಿಲ್ಪ ಪ್ರಪಂಚ ಸೃಷ್ಟಿ ಆದದ್ದು ಈ ಬೆಟ್ಟದ ಶ್ರೇಣಿಯಲ್ಲೇ. ಆ ಜನಾಂಗ ಆಚೆ, ಈಚೆ, ಉತ್ತರ ದಕ್ಷಿಣ, ಪೂರ್ವ, ಪಶ್ಚಿಮ ಮುಂತಾಗಿ ವಿವಿಧ ದಿಕ್ಕುಗಳಲ್ಲಿ ನೀರು ಆಹಾರ ಇತ್ಯಾದಿ ಮೂಲಭೂತ ಆವಶ್ಯಕತೆಗಳಿಗನುಸಾರವಾಗಿ (Basic requirements) ಪಸರಿಸಿತು. ಅದೇ ಕಾರಣಕ್ಕಾಗಿ ಆ ಜನಾಂಗದ ಭಾಷೆ ಕಿಂಚಿತ್ ಹತ್ತಿರ, ಕಿಂಚಿತ್ ದೂರ ಸ್ವರೂಪವನ್ನು ಪಡೆದಿದ್ದು ಸ್ಪಷ್ಟವಿದೆ. ತಲೆ, ತಲೈ, ತಲ (ಕನ್ನಡ, ತಮಿಳು, ಹಾಗೂ ತೆಲುಗು ಭಾಷೆಗಳು) ಸೋದರ ಶಬ್ದಗಳಿದ್ದ ಹಾಗೆ 'ಪಿತೃ' 'ಪೀಟರ್' (Peater) 'ಫಾದರ್' (Father) ಸೋದರ ಶಬ್ದಗಳು. ಅಪ್ಪ (< ಆಪ್ತ), ಅಮ್ಮ (<ಆತ್ಮ) (Soul) ಇವೂ ಸಂಬಂಧಗಳೇ. ಹಿಮಾಲಯ ಬೆಟ್ಟಶ್ರೇಣಿಗಳು ಸರ್ವರಿಗೂ ಸಂಬಂಧಿಗಳು. ಅರ್ಥಾತ್ ಆ ಹಿಮಾಲಯವು 'ನಗಾಧಿರಾಜ' ಎಂಬುದು ಸರ್ವರಿಗೂ ಮಾನಿತ ವಸ್ತು. ಜೈನರಿಗಂತೂ ತೀರ್ಥಂಕರರಿಗೆ ಸಮಾನ –

ಸ್ವಸ್ತಿ ಶ್ರೀಮೂಳಸಂಘ ಪ್ರಥಿತ ಪೃಥು ತಪೋ . . ಸಮ್ಯಕ್ತ್ವಬೋಧಾ
ಸ್ತಾಜ್ಞಾನಾನ್ಧಕಾರೈರವಿಭಿರಿವ ಕರೈಸ್ಸೂರಿಭಿಜ್ವಿತಾರಮೀರನ್
ನ್ಯಸ್ತಾನೇಕಾನ್ತ ವಸ್ತೂಚ್ಚಯರಚಿತ ಗುಣಶ್ಚಿತ್ರಹಾರಾಮಿತ ಶ್ರೀಃ
ಳಸ್ತಸ್ಸೂರಸ್ತವಂಶಃ ಶಮಭುವಿಸಮಭೂದಾರ್ಹತೇ ರೋಹಣಾದ್ರೌ ॥

ಮೂಲಸಂಘ ಹಾಗೂ ಅದರಲ್ಲಿಯ ಆ ಸೂರಸ್ಥಗಣದ ಮುನಿವೃಂದ ಯಾವುದು ಸಮ್ಯಕ್ತ ತಪೋರಾಶಿಯ ಮುಖಾಂತರ ಅಜ್ಞಾನತಿಮಿರವನ್ನು ಸೂರ್ಯನು ಕತ್ತಲೆಯನ್ನು ತೊಡೆದು ಹಾಕಿದ ಹಾಗೆ ತೊಡೆದು ಹಾಕಿತೋ ಅದು ಆ ಅರ್ಹತ್ (=ತೀರ್ಥಂಕರ) ರೋಹಣಾದ್ರಿಯಲ್ಲೇ ಹುಟ್ಟಿದ ಸೂರ್ಯ–

ಶ್ರಿಯಂ ಕ್ರಿಯಾಸುರ್ಜ್ಜಗತಾಮಧೀಶ್ವರಾ
ಸ್ಸಮನ್ತ ಭದ್ರಾಮಕಳಂಕ ನಿಶ್ಚಳಾಂ
ತಮೋಪ . . ಯ ಜಿತೇಂನ್ದ್ರ ಭಾನವಃ
ಸ್ಫುರನ್ತಿ ಪೋಯನ್ನಯಮಾನಭಾನವಃ ॥

(S.I.I.vol. XX, No. 52, ಡಾ. ಜಿ.ಎಸ್. ಗಾಯಿ)

ಕೈಲಾಸ ಪರ್ವತದಲ್ಲಿ ನಿರ್ವಾಣ ಪಡೆದ ಆದಿನಾಥ ಅರ್ಹಂತರಿಂದ (ತೀರ್ಥಂಕರರಿಂದ) ಜೈನಧರ್ಮದ ಜನನ, ಆದುವೇ ಮೂಲ ಸ್ರೋತ.

ಮೇರುಮಂದರಗಳ ಶ್ರೇಣಿಯೆ 'ರೋಹಣಾದ್ರಿ' ಎಂಬುದು ಸ್ಪಷ್ಟವಾದ ಮೇಲೆ ನಮ್ಮ ಮುಂದೆ ಶ್ರೀಲಂಕಾ ದ್ವೀಪದಲ್ಲಿ ಇರುವ ರೋಹಣಾದ್ರಿಯ ಬಗ್ಗೆ ಎರಡು ಮಾತನ್ನು ಹೇಳಲೇಬೇಕಾದ ಪ್ರಸಂಗ ಬರುತ್ತದೆ ಅದೆಂದರೆ–

(ಅ) ಶ್ರೀಲಂಕಾ ದ್ವೀಪದಲ್ಲಿಯ ರೋಹಣಾದ್ರಿಗೆ 'Adam's - peak' ಎಂಬ ಹೆಸರು ಇದೆಯಲ್ಲಾ ಇದು ಹೇಗೆ? ಕೋಶಗಳಲ್ಲಿಯೆ ಈ ಪ್ರಶ್ನೆಗೆ ಉತ್ತರವಿದೆ. ಮೈ.ವಿ.ವಿ. ಪ್ರಕಟಿಸಿರುವ ಇಂಗ್ಲಿಷ್ ಡಿಕ್ಷನರಿಯಲ್ಲಿ 'Adam' ಶಬ್ದಕ್ಕೆ 'ನಗ್ನ' ಅವಸ್ಥೆಯಲ್ಲಿ ಇರುವ ಜನರು ಇರುವ ಸ್ಥಳ ಎಂದು ಅರ್ಥವಾಗುತ್ತದೆ. ಚೇಂಬರ್ಸ ಕೋಶದಲ್ಲಿ (Chamber's Twentieth Century Dictionary) 'Naked' ಎಂದೇ ಬರೆದಿದೆ.

(ಆ) ಈಗ ನಾವು 'ನಗ್ನ' ಹಾಗೂ 'ರೋಹಣಾದ್ರಿ' ಇವಕ್ಕಿರುವ ಸಂಬಂಧವನ್ನು ಚಿಂತನಮಂಥನಕ್ಕೆ ಒಳಪಡಿಸಿದರೆ ಸ್ಪಷ್ಟವಾಗುತ್ತದೆ, ಅದೆಂದರೆ ದಿಗಂಬರ ಜೈನಮುನಿಗಳು ಜೈನಧರ್ಮದ ಪ್ರಸಾರಕ್ಕೆ ಬೌದ್ಧಧರ್ಮೀಯ ಸನ್ಯಾಸಿಗಳ ಹಾಗೆ ಧರ್ಮವನ್ನು ಪ್ರಸಾರಮಾಡಲು ಶ್ರೀಲಂಕಾಕ್ಕೆ ಹೋಗಿದ್ದಾರೆ ಮತ್ತು ಆ ದಿಗಂಬರ (ನಗ್ನ) ಮುನಿಗಳು ನಿಂತದ್ದೇ 'ರೋಹಣಾದ್ರಿ'. ಪಾಶ್ಚಾತ್ಯ ವ್ಯಾಪಾರಿಗಳು ಶ್ರೀಲಂಕಾಕ್ಕೆ ಬಂದವರು. ಜೈನದಿಗಂಬರ ಮುನಿಗಳಿದ್ದ ಆ ಬೆಟ್ಟವನ್ನು 'Adam's peak' ಎಂದು ಕರೆದಿದ್ದಾರೆ. ಇದೀಗ ಎಲ್ಲ ಕೋಶಗಳೂ Up to date ಆಗಬೇಕು. ರೋಹಣಾದ್ರಿ – ಮೇರು ಮಂದರ ಪರ್ವತ ಶ್ರೇಣಿ.

**ಅಡಿಟಿಪ್ಪಣಿಗಳು**

೧ ಕನ್ನಡ ಕೈಪಿಡಿ, ಪು. ೧೧೯ (ಮೈ.ವಿ.ವಿ. ಪ್ರಸಾರಾಂಗ ಪ್ರಕಟಣೆ, ಚತುರ್ಥ ಮುದ್ರಣ, ೧೯೬೫)
೨ ನೋಡಿ ಕ.ಸಾ.ಪರಿಷತ್ತಿನ ಬೃಹನ್ನಿಘಂಟು ಸಂಪುಟ ; ೭. ಪುಟ: ೭೬೬೦
೩ (a) Kittle's Kannada - English Dictionary vol-IV, Y-L ; University of Madras (1973), p. 1426
(b) ರೋಹಣಾದ್ರಿ ಶಬ್ದದ ಮುಂದೆ 'Bp. 19,29' ಎಂದು ಅಚ್ಚಾಗಿದೆ. ಇಲ್ಲಿನ ಅಧ್ಯಾಯ (ಸಂಧಿ) ೧೯ ಸರಿಯಲ್ಲ. ಕನ್ನಡ ಬೃಹನ್ನಿಘಂಟು ಕೃತಿಗಿಂತ ಇದರಲ್ಲೇ ಹೆಚ್ಚು ಅರ್ಥಗಳಿವೆ.
೪ ಇ. ಅ. ೧೪ (Revised) Sk. no. 226, pp. 262-263

*****

# ನಯಸೇನನ ಕೃತಿಯಿಂದ ಚಂಪೂ ಪ್ರಕಾರಕ್ಕೆ ದೊರೆತ ಹೊಸ ರೂಪ

*** ಡಾ. ಎನ್. ಆರ್ ಲಲಿತಾಂಬ**

ಹಳಗನ್ನಡದ ಸಾಹಿತ್ಯ ಕೃತಿಗಳ ಪುನರ್ ಮೌಲ್ಯೀಕರಣವಾಗುತ್ತಿರುವ ಈ ಸಂದರ್ಭದಲ್ಲಿ ಶುದ್ಧ ಸಾಹಿತ್ಯದ ಮೀಮಾಂಸೆಯ ಅಳತೆ ಮಾಪನಗಳಿಗಿಂತ ಭಿನ್ನವಾದ ದೃಷ್ಟಿಕೋನಗಳಿಂದ ಆ ಕೃತಿಗಳೊಂದಿಗೆ ಅನುಸಂಧಾನ ಮಾಡಬೇಕಾಗಿದೆ. ಇಂದು ನಯಸೇನ, ಬ್ರಹ್ಮಶಿವ ಮುಂತಾದವರ ಕೃತಿಗಳು ಶುದ್ಧಸಾಹಿತ್ಯದಿಂದ ಭಿನ್ನವಾಗಿ ತಾವು ಹುಟ್ಟಿದ ಕಾಲಮಾನದ ಸಾಂಸ್ಕೃತಿಕ ಪಠ್ಯಗಳಾಗಿ ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡಿವೆ. ಅದರಲ್ಲೂ ನಯಸೇನನ ಧರ್ಮಾಮೃತವು ತನ್ನ ಸೃಷ್ಟಿಯ ಹಿಂದಿರುವ ಧಾರ್ಮಿಕ ಆಶಯವನ್ನು ಮೀರಿನಿಂತ ಸಂಗತಿಗಳನ್ನು ತನ್ನ ಒಡಲಲ್ಲಿ ಅಡಗಿಸಿಕೊಂಡಿದೆ. ಅಷ್ಟೇ ಅಲ್ಲ, ಚಂಪೂ ಸಂಪ್ರದಾಯದಲ್ಲಿ ಒಂದು ಸಣ್ಣ ಕ್ರಾಂತಿಯನ್ನೇ ಮಾಡಿದೆ.

ನಯಸೇನ ಇವತ್ತಿಗೆ ಎಷ್ಟು ಪ್ರಸ್ತುತ ಎಂಬ ಪ್ರಶ್ನೆಗೆ ಮೂರು ವಿಚಾರಗಳಿಂದ ಉತ್ತರ ಕಂಡುಕೊಳ್ಳಬಹುದು. ಮೊದಲನೆಯದಾಗಿ, ಆ ಕಾಲದ ಶಾಸನಗಳು, ಧರ್ಮಾಮೃತ ಕೃತಿ ಹಾಗು ಇತರ ಆಕರಗಳು ಕಟ್ಟಿಕೊಡುವ ಚಿತ್ರವನ್ನು ಗಮನಿಸಿದರೆ, ೧೧ನೇ ಶತಮಾನದಲ್ಲಿ ತೀವ್ರಗೊಂಡ ಆರ್ಥಿಕ ಚಟುವಟಿಕೆಗಳಿಂದ ಕೃಷಿ ಸಮಾಜವು ಉದ್ಯಮಶೀಲವಾದ ಸಮಾಜವಾಗಿ ಬದಲಾಗುತ್ತಿದ್ದುದು ಹಾಗೂ ಸಂಪತ್ತಿನ ಕ್ರೋಢೀಕರಣ ಅದರ ಆದ್ಯಂತಿಕ ಗುರಿಯಾಗಿತ್ತು ಎಂಬುದು ತಿಳಿದುಬರುತ್ತದೆ. ಭೋಗ ಮತ್ತು ಸಂಪತ್ತಿನ ಬೆನ್ನುಹತ್ತಿ ಅಸ್ವಸ್ಥಗೊಂಡ ಸಮಾಜ ಧರ್ಮಾಮೃತದಲ್ಲಿ ಅನಾವರಣ ಗೊಂಡಿದೆ. ಅಲ್ಲಿಂದ ಸುಮಾರು ೯೦೦-೧೦೦೦ ವರ್ಷಗಳ ಈಚೆಗೆ ನಿಂತಿರುವ ನಮ್ಮ ಬುದ್ಧಿ-ಭಾವಕೋಶಗಳೆರಡೂ ವಾಣಿಜ್ಯೀಕರಣಗೊಂಡು, ನಮ್ಮ ಗುರಿಯೂ ಭೋಗ ಮತ್ತು ಸಂಪತ್ತಿನ ಕ್ರೋಢೀಕರಣವೇ ಆಗಿರುವುದರಿಂದ ನೈತಿಕ ಸಂಹಿತೆಗಳ ಕಟ್ಟುಕಳಚಿ ಸಾಗುತ್ತಿರುವ ಸಮಾಜವನ್ನು ಅರ್ಥೈಸಿ ಕೊಳ್ಳಲು, ತಿದ್ದಿ ಸಂತೈಸಿಕೊಳ್ಳಲು ನಯಸೇನನ ಕೃತಿಯ ಅನುಸಂಧಾನ ನಮಗೆ ಇಂದು ಮುಖ್ಯವಾಗುತ್ತದೆ.

ಎರಡನೆಯದಾಗಿ ಕನ್ನಡ ಮತ್ತು ಇತರ ಭಾಷೆಗಳ ಸಂಬಂಧ, ಅವುಗಳ ಸ್ಥಾನಮಾನ ಕುರಿತಂತೆ ಕನ್ನಡ ಭಾಷೆ ಮತ್ತು ಸಂಸ್ಕೃತಿ ಇಂದು ಎದುರಿಸುತ್ತಿರುವ ಸವಾಲುಗಳನ್ನು ಅರ್ಥಮಾಡಿ ಕೊಳ್ಳಲು, ಬಿಡಿಸಿಕೊಳ್ಳಲು ನಾವು ನಯಸೇನನಿಂದ ಸ್ಫೂರ್ತಿಗೊಳ್ಳಬೇಕಾಗಿದೆ. ಮಾರ್ಗಸಂಪ್ರದಾಯದ ಒತ್ತಡ, ಸಂಸ್ಕೃತದ ಭಾರಗಳಿಂದ ಬಿಡಿಸಿಕೊಳ್ಳಲು, ನಯಸೇನನು 'ದೇಸಿವೆತ್ತನುಡಿ'ಯ ದಾರಿ ಕಂಡುಕೊಂಡಂತೆ ನಾವೂ ಕೂಡ ಅನ್ಯಭಾಷೆ, ಸಂಸ್ಕೃತಿಯ ಒತ್ತಡಗಳಿಂದ ಪಾರಾಗಲು ದೇಸೀ ದಾರಿಗಳನ್ನು ಕಂಡುಕೊಳ್ಳಬೇಕಾಗಿದೆ.

ಮೂರನೆಯದಾಗಿ, ಕನ್ನಡಕ್ಕೆ ಕನ್ನಡದ ಕಾವ್ಯ ಮೀಮಾಂಸೆಯೊಂದನ್ನು ಕಟ್ಟಿಕೊಳ್ಳ ಬೇಕೆನ್ನುವ ಪ್ರಯತ್ನದಲ್ಲಿರುವ ನಮಗೆ ನಯಸೇನ ಪ್ರಸ್ತುತನಾಗುತ್ತಾನೆ. ಕನ್ನಡ ಸಾಹಿತ್ಯವಾಹಿನಿ ಮಾರ್ಗದಿಂದ ಹೊರಳಿದ ಕಾಲಘಟ್ಟದ ಕನ್ನಡ ಕಾವ್ಯಮೀಮಾಂಸೆ ಏನು ಎಂಬುದನ್ನು ಕಟ್ಟಿಕೊಳ್ಳುವಲ್ಲಿ ನಯಸೇನನ ಅಭಿಪ್ರಾಯಗಳು ಬಹಳ ಮುಖ್ಯವಾಗುತ್ತವೆ.

## ನಯಸೇನ ಚಂಪುವಿಗೆ ತಂದು ಕೊಟ್ಟ ಹೊಸರೂಪ

ನಯಸೇನನ ಕಾವ್ಯಮೀಮಾಂಸೆ ಅರ್ಥವಾದಾಗ ಮಾತ್ರ ಅವನ ಕೃತಿ ಹೇಗೆ ಹೊಸರೂಪ ಪಡೆದುಕೊಂಡಿತು ಎಂಬುದು ತಿಳಿಯುತ್ತದೆ. ಆವರೆಗಿನ ಕನ್ನಡ ಕಾವ್ಯಗಳನ್ನು ಕುರಿತು, ಸುಕವಿ, ಕುಕವಿಗಳನ್ನು ಕುರಿತು, ಸತ್ಕೃತಿಯನ್ನು ಕುರಿತು ಅವನ ಹೊಸ ವಿಚಾರಗಳೇನು ಮತ್ತು ಆ ವಿಚಾರಗಳನ್ನು ಎಷ್ಟರಮಟ್ಟಿಗೆ ತನ್ನ ಕೃತಿಯಲ್ಲಿ ಒಡಮೂಡಿಸಿದ್ದಾನೆ ಎನ್ನುವುದನ್ನು ಗಮನಿಸಿದಾಗ ಅವನ ಹೊಸತನ ಗೋಚರಿಸುತ್ತದೆ.

* ಸಹಪ್ರಾಧ್ಯಾಪಕರು. ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯನಗರ, ಬೆಂಗಳೂರು- ೫೬೦೧೦೪. ಮೊ.: ೯೮೪೫೪೨೭೫೮೧.

ನಯಸೇನನ ಪ್ರಕಾರ ಶ್ರೇಷ್ಠ ಕೃತಿ ಯಾವುದು? ಕೃತಿನಿರ್ಮಾಣದ ಅವನ ಆದರ್ಶವೇನು? ಅವನ ಕೃತಿಯ ಹೊಸತನ ಎಲ್ಲಿದೆ? ಎಂಬುದಕ್ಕೆ ಅವನದೇ ಕೆಲವು ಪದ್ಯಗಳು ಉತ್ತರಿಸುತ್ತವೆ.

**'ರಸಭಾವ ಗಮಕಂ ಕಾ/ಣಿಸೆ, ನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ**

ಕುಸುರಿಯ ಬಗೆಯಿಂದಿನಿತರೊ/ ಳೆಸೆವಂತೆ......' ರಚನೆಯಾಗದ ಕೃತಿಗಳನ್ನು ಶ್ರೇಷ್ಠಕೃತಿಗಳಲ್ಲವೆಂದು ಹೇಳಿದ್ದಾನೆ. ಅಂದರೆ ರಸಭಾವ ಗಮಕವಿರಬೇಕು. ಅಷ್ಟೇ ಇದ್ದರೆ ಸಾಲದು, ನಾಣ್ನುಡಿಗಳನ್ನೂ 'ದೇಸಿವೆತ್ತ ಪೊಸನುಡಿ ಮಾರ್ಗ'ವನ್ನೂ ಕುಸುರಿಯ ಬಗೆಯಲ್ಲಿ ಹೊಂದಿಸಿ ಹೊಸ ಕಲಾತ್ಮಕ ಶೈಲಿಯೊಂದನ್ನು ನಿರ್ಮಿಸಿ ಕೊಳ್ಳುವ ಕಡೆಗೆ ಅವನ ಗಮನವಿದೆ.

**ಪೊಸಗನ್ನಡದಿಂ ವ್ಯಾವ/ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ**
**ತಿಸಿ ಕೊಡಲಾರದಕ್ಕಟ/ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ**
**ಸಕ್ಕದಮಂ ಪೇಳ್ವೊಡೆ ನೆರೆ/ಸಕ್ಕದಮಂ ಪೇಳ್ಗೆ ಸುದ್ದಗನ್ನಡದೊಳ್ತಂ**
**ದಿಕ್ಕುವುದೇ ಸಕ್ಕದಮಂ/ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ**

'ಹೊಸಗನ್ನಡದಲ್ಲಿ ಸತ್ಕೃತಿಯನ್ನು ಬರೆಯುವ ನಿಶ್ಚಯಮಾಡಿ 'ಕನ್ನಡಮಂ ಚಿಂತಿಸಿ ಕೊಡಲಾರದೆ' ಮಿಸುಕದ ಸಂಸ್ಕೃತವನ್ನು ತಂದು ತುರುಕುವವರ ಬಗೆಗೆ ಬೇಸರಪಡುತ್ತಾನೆ. ಅಂತಹವರು ಸಂಸ್ಕೃತದ ಬಗೆಗೆ ಅಷ್ಟು ವ್ಯಾಮೋಹವಿದ್ದರೆ ಪೂರ್ಣ ಸಂಸ್ಕೃತದಲ್ಲೇ ಕಾವ್ಯರಚಿಸಲಿ, ಅದನ್ನು ಬಿಟ್ಟು, 'ಸುದ್ಧಗನ್ನಡದೊಳ್ತಂದಿಕ್ಕುವುದೇ ಸಕ್ಕದಮಂ' ಎಂಬುದು ನಯಸೇನನ ತಕರಾರು. ಈ ರೀತಿ ಬೆರಕೆ ಕಾವ್ಯರಚಿಸಿ ಶುದ್ಧಕನ್ನಡವನ್ನು ಹಾಳುಮಾಡುವುದು ಯೋಗ್ಯವಾದ ಕಾರ್ಯವಲ್ಲವೆಂಬುದನ್ನು ನಿರ್ಭಿಡೆಯಿಂದ ಹೇಳಿದ್ದಾನೆ. ಘೃತ ಮತ್ತು ತೈಲದ ಬೆರಕೆಯಂತೆ ಶುದ್ಧಗನ್ನಡ ಹಾಗು ಸಂಸ್ಕೃತದ ಬಳಕೆ ಅಸಾಧುವಾದುದು ಎಂಬುದು ನಯಸೇನನ ಅಭಿಪ್ರಾಯ

ಇಲ್ಲಿ 'ಮಿಸುಕದ' ಎಂಬ ಮಾತು ಮುಖ್ಯ. ನಮ್ಮ ಚಿಂತನೆ ಭಾವಗಳಿಗೆ ತಕ್ಕಂತೆ ಸ್ಪಂದಿಸುವ ಶಕ್ತಿ, ಜೀವಂತಿಕೆ ಇಲ್ಲದ್ದು ಎಂಬರ್ಥದಲ್ಲಿ ಗಮನಿಸಿಕೊಳ್ಳಬೇಕಾಗುತ್ತದೆ. ಒಂದು ಸಂಸ್ಕೃತಿಯಲ್ಲಿ ಅಲ್ಲಿನ ಬದುಕಿಗೂ ಭಾಷೆಗೂ ಅವಿನಾಭಾವ ಸಂಬಂಧವಿರುತ್ತದೆ. ಆ ಬದುಕಿನ ಎಲ್ಲ ಮಿಡಿತಗಳನ್ನು ಸಹಜವಾಗಿ ಸರಳವಾಗಿ ಸ್ವಂತ ಭಾಷೆಯಲ್ಲಿ ಪಡೆಮೂಡಿಸುವುದು ಸುಲಭ ಮತ್ತು ಸಾಧುವಾದುದು. ಸಂಸ್ಕೃತ ಎಂದೂ ಜನಸಾಮಾನ್ಯರ ಬದುಕಿನ ಭಾಷೆಯಾಗಿ ಅಭಿವ್ಯಕ್ತಗೊಂಡಿಲ್ಲ. ಹಾಗಾಗಿ ಆಲೋಚಿಸುವ ಭಾಷೆಯು ಅಭಿವ್ಯಕ್ತಿಸುವ ಭಾಷೆಯೂ ಬೇರೆಯಾದಾಗ ಈ 'ಮಿಸುಕದ' ಸಮಸ್ಯೆ ಉಂಟಾಗುತದೆ. [ಮುದ್ದಣ ಸಂಸ್ಕೃತದ ಈ ಮಿಸುಕದ ಗುಣವನ್ನು ನೀರಿಳಿಯದ ಗಂಟಲಲ್ಲಿ ಕೂತು ಒಳಗಿಳಿಯದೇ ಕಾಡುವ ಕಡುಬಿಗೆ ಹೋಲಿಸಿದ್ದಾನೆ]

ಇಲ್ಲಿ ಚರ್ಚಿತವಾಗಿರುವ ಸಮಸ್ಯೆ, ಹೊಸಗನ್ನಡದಲ್ಲಿ ಕನ್ನಡ ಚಿಂತನೆಗಳನ್ನು ಅಭಿವ್ಯಕ್ತಿಸಲಾರದ ಸಮಸ್ಯೆ. ನಯಸೇನನ ಕಾಲಕ್ಕಾಗಲೇ ಸತ್ಕೃತಿಗಳನ್ನು ಹೊಸಗನ್ನಡದಲ್ಲಿ ಬರೆಯಬೇಕೆಂಬ ಹಂಬಲ, ಒತ್ತಡ ಹುಟ್ಟಿತ್ತು, ಆ 'ಪೊಸಗನ್ನಡ'ದ ಲಕ್ಷಣವೇನು? ಅವನೇ ಹೇಳುವ ಹಾಗೆ ಅದು ಸರಳವಾದ 'ನಾಣ್ನುಡಿ ದೇಸಿವೆತ್ತ ಪೊಸನುಡಿ'. ಕನ್ನಡದ ಆಲೋಚನೆಗಳನ್ನು ಕನ್ನಡದಲ್ಲಿ ಸಮರ್ಪಕವಾಗಿ ಕೊಡಲು ಬೇಕಾದ ಆ ಕನ್ನಡ ನಾಣ್ನುಡಿ, ದೇಸಿವೆತ್ತ ಪೊಸನುಡಿಗಳ ಭಂಡಾರದ ಅಭಾವವಿರುವವರ ಸಮಸ್ಯೆ ಇದು. ಮಾರ್ಗ ಕಾವ್ಯಗಳ ಪ್ರಭಾವ, ಸಂಸ್ಕೃತದ ಸೆಳೆತದಿಂದ ಬಿಡಿಸಿ ಕೊಳ್ಳಲಾರದ, ಕನ್ನಡ ದೇಸಿವೆತ್ತ ನುಡಿಗಳನ್ನು ಸ್ವೀಕರಿಸಲಾರದ, ಅದನ್ನು ಕಾವ್ಯ ಭಾಷೆಗೆ ಒಗ್ಗಿಸಿ ಕೊಳ್ಳಲು ಅರಿಯದವರ ಸಮಸ್ಯೆ ಇದು.

ಕವಿಯೊಬ್ಬ ತನ್ನ ಆಶಯಕ್ಕೆ, ಚಿಂತನಕ್ರಮಕ್ಕೆ ತಕ್ಕಂತಹ ಒಂದು ಆಕೃತಿಯನ್ನು, ದಾರಿಯನ್ನು ಹುಡುಕಿಕೊಳ್ಳುವಾಗ ಎತ್ತಿಕೊಳ್ಳುವ ಚರ್ಚೆಗಳಿವು. ಕನ್ನಡ ಸಾಹಿತ್ಯದ ಉದ್ದಕ್ಕೂ ಭಾಷೆ, ಆಶಯ ಹಾಗೂ ಆಕೃತಿ ಕುರಿತು ಇಂಥ ಚರ್ಚೆಗಳನ್ನು ಎತ್ತಿಕೊಂಡು ಪ್ರಯೋಗಶೀಲರಾದ ನಮ್ಮ ಕವಿಗಳು ಆಗಾಗ ಹೊಸ ನಿರ್ಧಾರದ ಘೋಷಣೆ ಮಾಡುತ್ತಲೇ ಬಂದಿದ್ದಾರೆ. ಅದರಂತೆ ತಮ್ಮ ಕೃತಿಗಳಲ್ಲಿ ಪ್ರಯೋಗ ನಡೆಸುತ್ತಲೇ ಬಂದಿದ್ದಾರೆ. ಪಂಪ, ನಯಸೇನ, ಬಸವ, ಹರಿಹರ, ಕುಮಾರವ್ಯಾಸ, ರತ್ನಾಕರ, ಮುದ್ದಣ, ಅಡಿಗ, ತೇಜಸ್ವಿ ಇವರ ಘೋಷಣೆಗಳು ಮತ್ತು ಪ್ರಯೋಗಗಳು ಕನ್ನಡ ಸಾಹಿತ್ಯಕ್ಕೆ ತಂದುಕೊಟ್ಟಿರುವ ವೈವಿಧ್ಯತೆ ನಮಗೆಲ್ಲ ತಿಳಿದಿರುವಂತದ್ದು.

ಕನ್ನಡ ಕಾವ್ಯದಲ್ಲಿ ಸಂಸ್ಕೃತದ ಸ್ಥಾನವೇನು, ಹೊಸ ಕಾಲದ ಕನ್ನಡಿಗರಿಗೆ ಎಂಥ ಕಾವ್ಯ ಬೇಕೆಂಬುದನ್ನು ಕುರಿತು ಮುದ್ದಣ ಎತ್ತಿಕೊಂಡ ಚರ್ಚೆಯನ್ನು ಅವನ ಹೊಸ ಪ್ರಯೋಗವನ್ನು ನಾವು ಮರೆಯುವಹಾಗಿಲ್ಲ, ಇವನೂ ನಯಸೇನನಂತೆ ಹೊರಳು ದಾರಿಯಲ್ಲಿ ನಿಂತಿದ್ದವನು. ಇಂತಹ ಹೊರಳು ದಾರಿಯಲ್ಲಿ ನಿಂತ ಸೂಕ್ಷ್ಮಮತಿಯಾದ, ಸಮರ್ಥನಾದ ಯಾವುದೇ ಕವಿ ಹೆಜ್ಜೆ ಇಡುವ ಮೊದಲು ತನ್ನ ಕಾಲದ ಒಳಗಿನ ಹಾಗೂ ಹೊರಗಿನ ತುರ್ತುಗಳನ್ನು ಎಚ್ಚರಿಕೆಯಿಂದ ಗಮನಿಸುತ್ತಾನೆ ಮತ್ತು ಧೈರ್ಯವಾಗಿ ತನ್ನದೇ ದಾರಿಯೊಂದನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಾನೆ. ನಯಸೇನ ಆ ಪ್ರಯತ್ನದಲ್ಲಿ ಗೆದ್ದಿದ್ದಾನೆ. ಆ ಮೂಲಕ ಕನ್ನಡ ಚಂಪೂ ಪ್ರಕಾರಕ್ಕೆ ಒಂದು ಹೊಸ ರೂಪವನ್ನು ತಂದುಕೊಟ್ಟಿದ್ದಾನೆ.

ದೇ. ಜವರೇಗೌಡರು ನಯಸೇನನನ್ನು ಕುರಿತು ಚಂಪೂ, ಸಂಪ್ರದಾಯದ ಪ್ರಲೋಭಕರ ವಾದ ಗಾಢಾಲಿಂಗನದಲ್ಲಿ ಸೆರೆಯಾಗಿದ್ದಾಗಲೇ ಅದನ್ನು ಪರಿಷ್ಕರಿಸಿ, ಸ್ವಲ್ಪಮಟ್ಟಿಗಾದರೂ ಅದರ ಚಹರೆಯನ್ನು ಬದಲಾಯಿಸಿದ ದಿಟ್ಟಕವಿ. ಕಥಾ ಶರೀರ ಹಳೆಯದಾದರೂ ಅದಕ್ಕೆ ಜಾನಪದ ಶಕ್ತಿವಾಹಿನಿಯನ್ನು ಹರಿಸಿ ಕಾಯಕಲ್ಪ ಚಿಕಿತ್ಸೆ ನಡೆಸಿದ ಜೈನಯತಿ ಅನ್ನುವಮಾತನ್ನು ಹೇಳಿದ್ದಾರೆ.[೧]

ಧರ್ಮಾಮೃತದಲ್ಲಿ ಚಂಪುವಿಗೆ ಹೊಸರೂಪ ಬಂದದ್ದು ಭಾಷೆ, ವಸ್ತುವಿಷಯ, ವಿನ್ಯಾಸದಿಂದ ಜೈನಧರ್ಮದಲ್ಲಿ ವಿಶ್ವಾಸವನ್ನು, ಶ್ರದ್ಧೆಯನ್ನು ಜನರು ಕಳೆದುಕೊಳ್ಳುತ್ತಿದ್ದಾರೆ, ತನ್ನ ಧರ್ಮ ಸಂಕಷ್ಟದಲ್ಲಿದೆ ಎಂಬುದನ್ನು ಸೂಕ್ಷ್ಮಮತಿಯಾದ ನಯಸೇನ ಅರಿತಿದ್ದನು. ಸೃಜನಶೀಲತೆಯುಳ್ಳ ಒಬ್ಬ ಜೈನ ಮುನಿಯಾಗಿ ತನ್ನ ಕಾವ್ಯದ ಮೂಲಕ ಜೈನ ಧರ್ಮತತ್ವಗಳನ್ನು ಜನಸಾಮಾನ್ಯರಿಗೆ ಮುಟ್ಟಿಸಬೇಕೆಂಬ ಅದಮ್ಯವಾದ ಹಂಬಲಹೊತ್ತವನು. ತನ್ನಗುರಿ ಮುಟ್ಟಬೇಕಾದರೆ ಮಾರ್ಗಕಾವ್ಯಗಳ ಹಾದಿ ಹಿಡಿದರೆ ಸಾಧ್ಯವಿಲ್ಲ ಎಂಬುದನ್ನು ಅರ್ಥಮಾಡಿಕೊಂಡಿದ್ದವನು. ತನ್ನ ಆಶಯ ನೆರವೇರಬೇಕಾದರೆ ಭಾಷೆ ಸರಳವಾಗಬೇಕಾದ, ಆಪ್ಯಾಯಮಾನವಾಗಬೇಕಾದ ಅನಿವಾರ್ಯತೆಯನ್ನು ಗುರುತಿಸಿಕೊಂಡಿದ್ದ ನಯಸೇನ, ಬದುಕಿನಲ್ಲಿ ಹಾಸುಹೊಕ್ಕಾಗಿ ದಿನನಿತ್ಯ ಬೆಡಗಿನಿಂದ ಬಳಕೆಗೊಳ್ಳುವ ನಾಣ್ಣುಡಿಗಳು, ದೇಸಿವೆತ್ತ ಪೊಸನುಡಿಗಳಿಂದ ತನ್ನ ಕೃತಿಯನ್ನು ಕಟ್ಟುವ ನಿರ್ಧಾರ ಮಾಡಿದ್ದಾನೆ.

**ಚಂಪುವಿನೊಳಗೆ ಜನಪದವನ್ನು ಬೆರೆಸಿದ ಜಾಣ್ಮೆ.**

ಡಾ.ಎಂ.ಚಿದಾನಂದಮೂರ್ತಿಯವರು ಧರ್ಮಾಮೃತದ ಹೊಸರೂಪ ಏನು ಎಂಬುದನ್ನು ಕುರಿತು ಧರ್ಮಾಮೃತವು ಬಾಹ್ಯರೂಪದಲ್ಲಿ ಚಂಪೂಕಾವ್ಯ, ಅಂತಸ್ಸತ್ವದಲ್ಲಿ ಜನಪದಕಾವ್ಯ ಎಂದು ಹೇಳಿದ್ದಾರೆ. ಅನೇಕ ಜಾನಪದ ಕಲೆಗಳು, ಆಚರಣೆಗಳು, ವಿಶಿಷ್ಟವಾದ ದೇಸೀನಂಬಿಕೆಗಳು, ಸಾಂಸ್ಕೃತಿಕ ವಿವರಗಳನ್ನು ಒಳಗೊಂಡು ಧರ್ಮಾಮೃತ ಸಾಮಾಜಿಕ ಇತಿಹಾಸದ ಅಧ್ಯಯನದ ವಿದ್ಯಾರ್ಥಿಗಳಿಗೊಂದು ದೊಡ್ಡ ಗಣಿಯಾಗಿದೆ ಎಂದು ಹೇಳಿದ್ದಾರೆ.[೨] ಚಂಪುವಿನ ಹೊರ ಆಕೃತಿ ಇದ್ದರೂ ಒಳಗೆ 'ಆನು ಒಲಿದಂತೆ ಹಾಡುವೆ ಎನ್ನುವ ನಯಸೇನನ ಸ್ವತಂತ್ರ ಮನೋಭಾವ, ಧೈರ್ಯ ಮೆಚ್ಚುವಂತದ್ದೇ. ಅಸಂಖ್ಯವಾದ ಗಾದೆಗಳು, ಜಾಣ್ಣುಡಿಗಳು, ಪ್ರತಿಧ್ವನಿಪದಗಳು, ಸೌಮ್ಯೋಕ್ತಿಗಳಿಂದ ತುಂಬಿದ ಅಂದಿನ ಜನಪದರ ಆಡುಭಾಷೆಯ ಸೊಗಡನ್ನು ಸಮರ್ಥವಾಗಿ ಕೃತಿಯಲ್ಲಿ ಬಳಸಿದ್ದಾನೆ.

**ಶಾಸ್ತ್ರದ ಹಂಗುತೊರೆದ ಆಡುನುಡಿಯ ಬೆಡಗು**

ಶಾಸ್ತ್ರೀಯ ಪ್ರಜ್ಞೆಯಿಂದ ಕಾವ್ಯ ಹುಟ್ಟುವುದಿಲ್ಲ ಅದು ಹೊಯ್ನೀರಿನಂತೆ. ಮಳೆಯಂತೆ ಕವಿತಾಶಕ್ತಿ ಸ್ವಾಭಾವಿಕವಾಗಿರುವಂತದ್ದೆನ್ನುವ ನಯಸೇನ[೩] ಔಚಿತ್ಯ, ರಸ, ರೀತಿ, ಧ್ವನಿ ಇತ್ಯಾದಿಗಳ ಬಗೆಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಸಂಪ್ರದಾಯ, ಶಾಸ್ತ್ರಬದ್ಧತೆ, ಆಡಂಬರದ ಶೈಲಿಯಿಂದ ಪಂಡಿತ ಮಂಡಳಿಯನ್ನು ಮೆಚ್ಚಿಸಬೇಕಾದ ಅನಿವಾರ್ಯತೆಯಾಗಲೀ ಹಂಬಲವಾಗಲೀ ಅವನಿಗಿಲ್ಲ. ಆಡು ಭಾಷೆಯಿಂದ ಕಾವ್ಯಭಾಷೆ ಬೇರೆಯಾಗಿರಬೇಕೆಂಬ ಸಂಕಷ್ಟದಿಂದ ಮುಕ್ತಿಗೊಳಿಸಿ, ಅವನ ಉದ್ದಿಶ್ಯಕ್ಕೆ ತಕ್ಕಂತೆ ಒದಗಿಬರುವ ಕನ್ನಡ ಆಡುಭಾಷೆಯನ್ನು ಅದರೆಲ್ಲಾ ಸೊಗಸಿನೊಂದಿಗೆ, ಬೆಡಗಿನೊಂದಿಗೆ ಕಾವ್ಯಭಾಷೆಯಾಗಿ ಮಾಡಿ ಚಂಪೂ ಪ್ರಕಾರಕ್ಕೆ ಒಂದು ಹೊಸರೂಪ ತಂದಿದ್ದಾನೆ. ಪದ್ಯ ಪ್ರಧಾನವಾಗಿದ್ದ ಚಂಪುವಿನಲ್ಲಿ

ನಿಮಿತ್ತ ಮಾತ್ರವಾಗಿದ್ದ ಗದ್ಯವನ್ನು ಲಂಬಿಸಿ, ಪದ್ಯದ ಹಿಡಿಕಟ್ಟಿನಲ್ಲಿ ಆಡು ನುಡಿಯನ್ನು ಉಸಿರು ಕಟ್ಟಿಸದೆ, ಗದ್ಯದಲ್ಲಿ ಲೀಲಾಜಾಲವಾಗಿ ತನ್ನ ಮಾಲೋಪಮೆಗಳನ್ನು ಹರಿಯ ಬಿಟ್ಟಿದ್ದಾನೆ.

ನಯಸೇನನು ಸಾದೃಶ್ಯ ಲಕ್ಷಾದೀಶ, ಹೋಲಿಕೆಗಳ ದುಂದುಗಾರ, ಉಪಮಾಲಂಪಟ ನೆಂದು ಕರೆಸಿಕೊಂಡಿದ್ದಾನೆ.[೪] ಎಸ್. ವಿ. ರಂಗಣ್ಣನವರು ನಯಸೇನನ ವಿಶಿಷ್ಟ ಶೈಲಿಯನ್ನು ಗುರುತಿಸಿದ್ದಾರೆ. ಹೋಲಿಕೆಗಳನ್ನು ರಚಿಸುವಲ್ಲಿ ಅವನು ಸಾಧಿಸಿರುವ ವೈವಿಧ್ಯತೆಯ ಸುಮಾರು ೩೦ ವಿಧಗಳನ್ನು ಪಟ್ಟಿ ಮಾಡಿದ್ದಾರೆ.[೫] ಇವುಗಳು ಕೆಲವೊಮ್ಮೆ ಅಳತೆಮೀರಿ ಬೆಳೆದಿರುವುವಾದರೂ ಅವುಗಳ ಮೂಲಕ ತೆರೆದುಕೊಳ್ಳುವ ಬದುಕಿನ ಬಿಡಿಬಿಡಿ ಚಿತ್ರಗಳು, ಸಹಜ ಬದುಕಿನ ಅಭಿವ್ಯಕಿಗಳಾಗಿವೆ. ತಮ್ಮ ದಲಿತಲೋಕದ ಅನುಭವಗಳನ್ನು ತಮ್ಮದೇ ಭಾವದ ಭಾಷೆಯ ಸತ್ವದಲ್ಲಿ ಹಿಡಿದು ಹೇಗೆ ದಲಿತ ಸಾಹಿತಿಗಳು ಒಂದು ಜನ್ಯೂನಿಟಿಯನ್ನು ದಲಿತ ಸಾಹಿತ್ಯಕ್ಕೆ ತಂದುಕೊಟ್ಟರೋ ಹಾಗೆ ನಯಸೇನ ತಾನು ಸೃಷ್ಟಿಸಿರುವ ಬದುಕಿಗೆ ಜನಪದರ ಸಹಜ ಭಾಷೆ ಬಳಸಿ ದೇಸೀತನಕ್ಕೆ ಒಂದು ಜನ್ಯೂನಿಟಿಯನ್ನು ತಂದು ಕೊಟ್ಟಿದ್ದಾನೆ. ಅದರಿಂದ ಜಾನಪದ ಚಂಪೂ ಕವಿ ಎಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ.

ಅವನ ಸಾದೃಶ್ಯಮಾಲಿಕೆಯಲ್ಲಿ, ಹೊಸತನವೂ ಜಾನಪದ ಮನಸ್ಸನ್ನು ಸೆರೆಹಿಡಿಯುವ ನಿತ್ಯಾನುಭವವೂ. ದೈನಂದಿನ ಪ್ರಪಂಚದಲ್ಲಿ ಸುತ್ತಮುತ್ತ ಕಾಣಬಹುದಾದ ಸಂಗತಿಗಳೇ ತುಂಬಿವೆ. ಎಲ್ಲರ ಬಾಯಲ್ಲಿಯೂ ಇದ್ದಿರಬಹುದಾದ ಗಾದೆಗಳು, ಸಾಮತಿಗಳು ಮೂಡಿಸುವ ಚಿತ್ರಗಳು ಅಮೂರ್ತವಾಗದೆ ತಟ್ಟನೆ ಅರ್ಥವಾಗುತ್ತವೆ. ಒಕ್ಕಲು ಮಗನ ಚಿತ್ರ, ಅವನ ತೆರಿಗೆ, ದಂಡ, ಸಾಲದ ಬಾಧೆ, ಮಳೆಗಾಗಿ ಹಾತೊರೆಯುವ ಸ್ಥಿತಿ, ವರ್ತಕರ ಲೋಭ, ವ್ಯಾಪಾರಿಗುಣ, ಸಂಬಳವಿಲ್ಲದ ಸೈನಿಕನ ಸಮಸ್ಯೆ, ವಿವಿಧ ಬಗೆಯ ದಂಪತಿಗಳು ಅವರ ನಡುವಿನ ಸಂಬಂಧಗಳು, ಈರ್ಷೆ, ಅನುಮಾನ, ಸಣ್ಣತನ, ಸರಸ–ವಿರಸ, ಕಳ್ಳರ ಪ್ರಪಂಚ, ದುಡಿಯುವ ವರ್ಗದ ಚಿತ್ರಣಗಳು ಚಂಪೂ ರೂಪದಲ್ಲಿ ಇಷ್ಟು ವಿಸ್ತಾರವಾಗಿ ಬೆರೆತುಕೊಂಡದ್ದೇ ಒಂದು ವಿಶೇಷ.

**ಕಥಾವಿನ್ಯಾಸದಲ್ಲಿ ತಂದ ಮಾರ್ಪಾಡು**

ಜೈನ ಪುರಾಣಗಳ ಪ್ರೌಢಮಾರ್ಗದಲ್ಲಿ ತೀರ್ಥಂಕರ ಚರಿತೆಗಳು, ವಿಸ್ತಾರವಾದ ಪ್ರೌಢ ವರ್ಣನೆಗಳು, ಭವಾವಳಿಗಳು, ಮತಪ್ರಕ್ರಿಯೆಯ ಜಟಿಲತೆಯಿಂದಾಗಿ ಜೈನಧರ್ಮದ ಸಾರವು ಸಾಮಾನ್ಯರನ್ನು ತಲುಪುತ್ತಿಲ್ಲವೆಂಬ ಅರಿವು ನಯಸೇನನಗಿತ್ತು. ವಡ್ಡಾರಾಧನೆ, ಚಾವುಂಡರಾಯ ಪುರಾಣ, ಪಂಚತಂತ್ರದಂತಹ ಕೃತಿಗಳು ಹಾಗೂ ಜಾನಪದ ಕಥಾನಕಗಳೂ, ಅನ್ಯಧರ್ಮಗಳಲ್ಲಿರುವ ಕಥಾ ಪುರಾಣಗಳ ಪರಿಚಯವೂ ನಯಸೇನನಿಗಿತ್ತು. ಹೊರೆಯಾಗದಂತೆ ಸಾಮಾನ್ಯನನ್ನು ಹಿಡಿದಿಡಲು ಕಥನ ಕಲೆಯೇ ಒಳಿತೆಂಬುದನ್ನು ಅರಿತು ಕಥಾನಕಗಳನ್ನು ತನ್ನ ಕೃತಿಗೆ ಆರಿಸಿಕೊಂಡನಾದರೂ ಚಂಪು ಪ್ರಕಾರವನ್ನು ಮಾತ್ರ ಬಿಡಲಿಲ್ಲ. ಅದನ್ನು ತನಗೆ ಬೇಕಾದಂತೆ ಬಗ್ಗಿಸಿಕೊಂಡನು. ಭವಾವಳಿಗಳ ಗೋಜಲಿಗೆ, ತಾತ್ವಿಕತೆಯ ಭಾರಕ್ಕೆ ಸಾಮಾನ್ಯರು ಕುಗ್ಗದಂತೆ ಜೈನ ತೀರ್ಥಂಕರ ಪುರಾಣಗಳ ಸಂಪ್ರದಾಯವನ್ನು ಬಿಟ್ಟು, ಭಿನ್ನ ಭಿನ್ನ ಕಥಾನಕಗಳ ಕಡೆಗೆ ಹೊರಳಿದನು. ಈ ವಿನ್ಯಾಸ ಅವನಿಗೆ ಹೆಚ್ಚು ಸ್ವಾತಂತ್ರ್ಯವನ್ನು ಕೊಟ್ಟಿತು. ಜಾನಪದ ಕಥೆಗಾರನ ಸಹಜ ಕಲೆಯಿರುವ ನಯಸೇನನು ಕೃತಿಯ ಆಕೃತಿಯಲ್ಲೂ ಒಳಸತ್ವದಲೂ ಭಿನ್ನತೆ ತರಲು ಸಾಧ್ಯವಾಯಿತು.

ಧರ್ಮಾಮೃತದಲ್ಲಿ ಒಟ್ಟು ಹದಿನಾಲ್ಕು ಅಧ್ಯಾಯಗಳಿದ್ದು, ಪ್ರತಿಯೊಂದು ಅಧ್ಯಾಯದಲ್ಲೂ ಶ್ರಾವಕ ಧರ್ಮಭೋದೆಗೆ ಅವಶ್ಯಕವಾದ ಒಂದೊಂದು ಗುಣಗಳನ್ನು ಅಳವಡಿಸಿ ಒಂದೊಂದು ಕಥೆಯನ್ನು ಹೇಳಿದ್ದಾನೆ. ರತ್ನತ್ರಯಗಳಲ್ಲಿ ಮೊದಲನೆಯ ಸಮ್ಯಕ್‌ದರ್ಶನ ಮತ್ತು ಅದರ ಎಂಟು ಅಂಗಗಳಾದ ೧.ನಿಶ್ಶಂಕೆ[ಜೈನಧರ್ಮದಲ್ಲಿ ಸಂದೇಹವಿಲ್ಲದಿರುವಿಕೆ] ೨.ನಿಷ್ಕಾಂಕ್ಷೆ [ಲೋಕದ ಸುಖಭೋಗಗಳ ಬಗ್ಗೆ ಆಸೆಯಿಲ್ಲದಿರುವುದು] ೩. ನಿರ್ವಿಚಿಕಿತ್ಸೆ [ದೇಹದ ಮೇಲೆ ಪ್ರೀತಿ ಅಥವಾ ದ್ವೇಷವಿಲ್ಲದಿರುವುದು] ೪.ಅಮೂಢದೃಷ್ಟಿತ್ವ [ಜೈನಮಾರ್ಗವನ್ನು ಬಿಟ್ಟು ಬೇರೆ ಮಾಗವನ್ನು ಅನುಸರಿಸದೆ ಇರುವುದು] ೫.ಉಪಘೂಹನ [ಜೈನಮತದಲ್ಲಿ ಯಾರಿಗೆ ಸಂಪೂರ್ಣ ನಂಬಿಕೆ ಇಲ್ಲವೋ ಅಂತಹವರ ಸಂಶಯಗಳನ್ನು ಹೋಗಲಾಡಿಸುವುದು] ೬.ಸ್ಥಿತಿಕರಣ [ಆತ್ಮನು ಸರಿಯಾದ ನಂಬಿಕೆಯನ್ನು ಬಿಡದಂತೆ ನೋಡಿಕೊಳ್ಳುವುದು] ೭.ವಾತ್ಸಲ್ಯ [ಜೈನಗೃಹಸ್ತರ ಬಗ್ಗೆ ಪ್ರೀತಿ ಗೌರವಗಳನ್ನು

ತೋರಿಸುವುದು] ೮.ಧರ್ಮ ಪ್ರಭಾವನೆ [ಜೈನ ಸಿದ್ಧಾಂತಗಳ ಮಹಿಮೆಯ ಪ್ರಸಾರ ಮಾಡುವುದು] ಹಾಗೂ ಪಂಚಾಣುವ್ರತಗಳಾದ ಅಹಿಂಸೆ, ಸತ್ಯ, ಅಸ್ತೇಯ ಬ್ರಹ್ಮಚರ್ಯ, ಅಪರಿಗ್ರಹಗಳನ್ನು ಕುರಿತ ಕಥೆಗಳನ್ನು ಹೇಳಿದ್ದಾನೆ. ಈ ಕಥೆಗಳ ಒಳಗೆ ಉಪಕಥೆಗಳನ್ನು ಹೆಣೆದಿದ್ದಾನೆ. ಆಸ್ತೇಯಕಥೆಯೊಳಗೆ ಜಿನಪಾಲಿತಮುನಿ ಮತ್ತು ಜಿನದತ್ತರು ಕಥೆಗಳ ಮೂಲಕವೇ ತಮ್ಮ ಅಭಿಪ್ರಾಯಗಳನ್ನು ತಿಳಿಸುವುದು ಬಹಳ ಆಕರ್ಷಕವಾಗಿದೆ.

**ಕೇವಲ ಮತಪ್ರಸಾರದ ಕಥೆಗಳಲ್ಲ–ಸಾಮಾಜಿಕ ಸಂಹಿತೆಗಳು**

ಧರ್ಮಾಮೃತ ಕೇವಲ ಮತಪ್ರಸಾರದ ಧಾರ್ಮಿಕ ಕೃತಿಯಾಗಿ ಉಳಿದಿಲ್ಲ. ಕಥೆಗಳಲ್ಲಿ ಧರ್ಮದ ಹಾಗೂ ಬದುಕಿನ ಹಲವು ಮಗ್ಗಲುಗಳನ್ನು ಅನಾವರಣಮಾಡಿದ್ದಾನೆ. ವ್ಯಕ್ತಿಯ ಮೂಲಭೂತ ಪ್ರವೃತ್ತಿಗಳಾದ ಕಾಮ, ಪ್ರೀತಿ, ಹಿಂಸೆ, ಸನ್ನಡತೆ, ದುಷ್ಟತನ, ಹಾದರ, ಅಪರಾಧೀಪ್ರಜ್ಞೆ, ಅನುಮಾನ, ಅಪನಂಬಿಕೆ, ದೇಹವನ್ನು ಮೀರುವ ಬಯಕೆ, ಮೀರಲಾರದ ತಳಮಳಗಳನ್ನು ಮುಖಾಮುಖಿಯಾಗಿಸಿದ್ದಾನೆ. ಇಂತವುಗಳಿಗೆಲ್ಲ ಪರಿಹಾರ ಜೈನ ಧರ್ಮದಲ್ಲಿದೆ ಎಂದು ಹೇಳವುದಕ್ಕಾಗಿಯೇ ಅವನು ಕಾವ್ಯ ಬರೆದಿದ್ದರೂ ಆ ಉದ್ದೇಶವನ್ನು ಮೀರಿ ಸಂಕೀರ್ಣವಾದ ಸಾಂಸ್ಕೃತಿಕ ಬದುಕೊಂದು ಕಾವ್ಯದಲ್ಲಿ ಸೃಷ್ಟಿಗೊಂಡಿದೆ. ಧರ್ಮವನ್ನು ಮರೆತು ಸುಖ ಸಂಪತ್ತಿನ ಹಿಂದೆಬಿದ್ದು ಅಧಃಪತನಕ್ಕೆ ಇಳಿಯುತ್ತಿರುವ ಇಂಥ ಸಮಾಜವನ್ನು ತಿದ್ದಲು ಅವಶ್ಯಕವಾದ ಸಾಮಾಜಿಕ ಸಂಹಿತೆಯಾಗಿ ಇಲ್ಲಿನ ಹದಿನಾಲ್ಕು ತತ್ವಗಳಲ್ಲಿ ಹೆಚ್ಚಿನವಗಳನ್ನು ಗ್ರಹಿಸಲು ಅವಕಾಶವಿದೆ. ನೀತಿ–ಅನೀತಿಗಳನ್ನು ಎದುರುಬದಿರಾಗಿಸಿ ಅವೆರಡನ್ನೂ ಮೀರಿದ ಒಂದು ಬಿಡುಗಡೆಯ ಹಾದಿಯಕಡೆಗೆ ಕಥೆಗಳು ಮುಖಮಾಡಿರುವಂತೆನಿಸುತ್ತದೆ. ಭೋಗದ ಬೆನ್ನುಹತ್ತಿ ಹೊರಟ ಇಲ್ಲಿನ ಅನೇಕರು ಕಡೆಗೆ ತಿರುಗುವುದು ಮುಕ್ತಿಯ ಕಡೆಗೆ. ಆದರೂ 'ಸತ್ತು ಕೊಳ್ವ ಸ್ವರ್ಗದಿಂ ಬದುಕಿಕೊಳ್ವ ನರಕಲೇಸು' ಎನ್ನುವ ಜೀವನಪ್ರೀತಿ, ಭೋಗದ ಬಯಕೆಗಳು, ಸುಖಿಯಾಗುವ ಹಂಬಲ ಢಾಳಾಗಿ ಕಾಣಿಸಿಕೊಂಡು ಇಲ್ಲಿನ ವೈರಾಗ್ಯ ತ್ಯಾಗಗಳನ್ನು ಹಿನ್ನೆಲೆಗೆ ತಳ್ಳಿಬಿಡುತ್ತವೆ. ವ್ರತ, ಪೂಜೆ, ಆಚರಣೆ, ಉಪದೇಶ, ದೀಕ್ಷೆ ಇತ್ಯಾದಿ ಧಾರ್ಮಿಕ ಚೌಕಟ್ಟು ಕಂಡುಬಂದರೂ ಈ ಚೌಕಟ್ಟಿನ ಆಚೆಗೆ ನಡೆಯುವ ಬದುಕಿನ ಆಸೆ, ದ್ವೇಷ ಪ್ರತೀಕಾರ, ಹೆಣ್ಣು, ಹೊನ್ನು, ಮಣ್ಣನ್ನು ದಕ್ಕಿಸಿಕೊಳ್ಳಲು ಹೂಡುವ ಹುನ್ನಾರ, ಯುದ್ಧ ಇತ್ಯಾದಿಗಳ ವಿಭಿನ್ನವಾದ ಬದುಕಿನ ಸಮೃದ್ಧ ಲೋಕಾನುಭವದ ಚಿತ್ರಣದಿಂದಲೇ ನಯಸೇನ ...ಮ ನಮಗೆ ಹೆಚ್ಚು ಪ್ರಸ್ತುತನಾಗುತ್ತಾನೆ. ಕಥೆಗಳ ತುಂಬ ಪಾಪಿಗಳು, ಕಳ್ಳರು, ತಳವಾರರು, ಅತಿಮಾನುಷ ವಿದ್ಯೆಯನ್ನು ಸಾಧಿಸಿಕೊಂಡವರು, ದುರ್ಮಾರ್ಗಿಗಳು, ದರೋಡೆಕೋರರು ಹಂತಕರು, ನಿರ್ಲಜ್ಜ ಕಾಮಾಂದರು ವೇಶ್ಯೆಯರು, ಸಂಚುಕೋರರು ಲಂಪಟರು ತುಂಬಿಹೋಗಿದ್ದಾರೆ. ಎಲ್ಲ ಸಮುದಾಯದ ಎಲ್ಲ ಸಾಮಾಜಿಕಸ್ಥರದ, ಜನರು ಕಾಣಿಸಿಕೊಳ್ಳುತಾರೆ. ವಿವಿಧ ಸ್ತ್ರೀ ಪಾತ್ರಗಳಲ್ಲಿ ಜಿನಭಕ್ತೆಯರು, ಪತಿವ್ರತೆಯರು, ವೈಶ್ಯೆಯರು, ವ್ರತಹಿಡಿದು ನಿಭಾಯಿಸಲಾಗದೆ ಸೋಲುವವರು, ಜಿನವ್ರತಕ್ಕಾಗಿಯೇ ಜೀವಹಿಡಿದವರು, ಮದುವೆಯಾಗದೆ ವಿವಾಹ ಸಂಸ್ಥೆಯನ್ನು ಪ್ರತಿಭಟಿಸುವವರೂ ಹಾಗೂ ಯಾವ ನಿರ್ಬಂಧಗಳೂ ಇಲ್ಲದ ಸ್ವಚ್ಛಂದ ಬದುಕು ನಡೆಸುವವರ ಚಿತ್ರಣದಂತೆಯೇ ವಿಭಿನ್ನ ದಾಂಪತ್ಯದ ಚಿತ್ರಣ ಕೂಡ ಕಂಡು ಬರುತ್ತದೆ. ಗೀಜಗ ದಂಪತಿಗಳ ಸಂಭಾಷಣೆ, ದುಡಿದರೆ ಮಾತ್ರ ಅನ್ನ ಕಾಣಬಹುದಾದ ಮೀನುಗಾರನ ಹೆಂಡತಿ ಘಂಟೆಯು ಸೋಮಾರಿಗಳಾದ ಸನ್ಯಾಸಿಗಳಮೇಲೆ ತೋರುವ ಸಿಟ್ಟು, ವಿದ್ಯಾಧರನ ಹಾಗೂ ಗುಣಧರಶೆಟ್ಟಿಯರ ನಡವಳಿಕೆ ಅವರ ಮಡದಿಯರ ಅನುಮಾನ ಮತ್ತು ಸಂಚು, ಲಲಿತಾಂಗನಂತಹ ಲಂಪಟರು, ವೀರಕುಮಾರನಂತಹ ದಾರಿತಪ್ಪಿದ ಮಕ್ಕಳು, ಮನೆಯಲ್ಲೇ ಕಳ್ಳತನಮಾಡುವ ಶೆಟ್ಟಿಯ ಮಗ ಇವರೆಲ್ಲರ ಚಿತ್ರಗಳಿಂದ ಧರ್ಮಾಮೃತ ಇವತ್ತಿಗೂ ಪ್ರಸ್ತುತವಾಗಿದೆ.

**ಚಂಪೂ ಕಾವ್ಯ ಪ್ರಕಾರಕ್ಕೆ ವಿಡಂಬನೆಯ, ತಿಳಿಹಾಸ್ಯದ ಪರಿಮಳ**

ವಿಡಂಬನಾ ಕವಿಯಾಗಿ ನಯಸೇನನಿಗೆ ಮೊದಲಸ್ಥಾನವಿದೆ. ಚಂಪು ಕಾವ್ಯಗಳಲ್ಲಿ ನವರಸಗಳಿಗೆ ಅವಕಾಶವಿದೆಯಾದರು, ಅಲ್ಲಿ ಶೃಂಗಾರ ವೀರ ಹಾಗೂ ಶಾಂತ ರಸಗಳಿಗೆ ಪ್ರಾಧಾನ್ಯತೆ ಹೆಚ್ಚು. ತನ್ನ ಕೃತಿಯಲ್ಲಿ ನಯಸೇನ ತಿಳಿಹಾಸ್ಯ, ವಿಡಂಬನೆಗಳಿಗೆ ಹೆಚ್ಚು ಅವಕಾಶ ಕಲ್ಪಿಸಿ ಹೊಸತನ ತಂದಿದ್ದಾನೆ. ಇಂಥ ವಿಡಂಬನೆ ಚಂಪು ಪ್ರಕಾರಕ್ಕೆ ಹೊಸದು. ಪರಮತವನ್ನು ವಿಡಂಬಿಸಿ ಸ್ವಮತವನ್ನು ಪ್ರಸಾರಮಾಡುವ ಉದ್ದಿಶ್ಯವಿದ್ದರೂ ಇವನ ಪರಮತವಿಡಂಬನೆ ಬ್ರಹ್ಮಶಿವನಂತೆ ಎಲ್ಲೆ ಮೀರಿಲ್ಲ. ಇಲ್ಲಿ

ಅನ್ಯಧರ್ಮ ವಿಡಂಬನೆಗಾಗಿ ತಂದಿರುವ ಒಂದು ಸನ್ನಿವೇಶವನ್ನು ಗಮನಿಸಬಹುದು. ಹಕ್ಕಿಗಳು ಗೂಡುಕಟ್ಟುವಂತೆ ಜಟೆ, ಗಡ್ಡಗಳನ್ನು ಬೆಳೆಸಿ ಉಗ್ರ ತಪಸನ್ನು ಮಾಡುತ್ತಿದ್ದ ಋಷಿಯ ತಪಸ್ಸು ಹೇಗೆ ಜಾರಿಹೋಗುವುದೆಂಬುದನ್ನು ತೋರಿಸಲು ಕಪಿ ಯಾವುದೇ ರಂಬೆ ಊರ್ವಶಿಯರನ್ನು ತರದೆ ಒಂದು ಗೀಜಗ ದಂಪತಿಗಳ ಜಗಳದ ಪ್ರಸಂಗವನ್ನು ತಂದಿರುವುದು ಬಹಳ ವಿಶೇಷವಾಗಿದೆ. ಅನ್ಯಧರ್ಮ ವಿಡಂಬನೆ ಕೂಡ ಕಟುವಾಗದೆ ಎಷ್ಟು ಸೊಗಸಾಗಿ ಇರಬಹುದು ಎಂಬುದಕ್ಕೆ ಸಾಕ್ಷಿಯಾಗಿದೆ. ನಯಸೇನನು ತನ್ನಲ್ಲಿರುವ ಸಹಜ ಹಾಸ್ಯಪ್ರಜ್ಞೆ, ಸೂಕ್ಷ್ಮತೆಯಿಂದಾಗಿ ತನ್ನ ಸುತ್ತಿನ ಜನರ ಸ್ವಭಾವ ನಡವಳಿಕೆಗಳಲ್ಲಿ ಕಂಡುಬರುವ, ಢಾಂಬಿಕತೆ, ದುರಾಸೆ, ಸಣ್ಣತನ, ಲಂಪಟತನ, ದುರ್ನಡತೆ, ಮೋಸ ಇತ್ಯಾದಿ ವ್ಯಕ್ತಿದೋಷಗಳನ್ನು ಯಾವ ಧರ್ಮದವರೇ ಆಗಲಿ, ವರ್ಗದವರೇ ಆಗಲಿ ವಿಡಂಬಿಸದೆ ಇರಲಾರ. ಇದಕ್ಕೆ ಜೈನಧರ್ಮದವರೂ ಹೊರತಲ್ಲ! ವೇಷ ಧಾರಿ ಮುನಿಗಳಿಂದ ಇಡೀ ಮುನಿ ಸಮೂಹಕ್ಕೆ ಹಾಗೂ ಜೈನಧರ್ಮಕ್ಕೆ ಅವಮಾನ ಆಗಬಾರದೆಂಬ ನಯಸೇನ, ತನ್ನ ಕೃತಿಯಲ್ಲಿ ಕೇವಲ ಗಿಳಿಪಾಠದಂತೆ ಜಿನಾಗಮಗಳನ್ನು ಹೇಳುವ ಸಮ್ಯಕ್ತ್ವವಿಲ್ಲದ ಜಿನಮುನಿಗಳನ್ನು, ವೇಷದಾರಿ ಮುನಿಗಳನ್ನು ವಿಡಂಬಿಸಿದ್ದಾನೆ. ಮುನಿಗಳು ಸೋಮಾರಿಗಳು, ಕೊಳಕರು ಇತ್ಯಾದಿ ಜನಸಾಮಾನ್ಯರ ಅಭಿಪ್ರಾಯಗಳನ್ನು ಅಲ್ಲಲ್ಲಿ ಪಾತ್ರಗಳಿಂದ ಹೇಳಿಸಿದ್ದಾನೆ. ಜಿನ ಶ್ರಾವಕರ ದುಷ್ಟತನ, ಕಪಟಭಕ್ತಿ, ದುರಾಸೆಯನ್ನು ಖಂಡಿಸಿದ್ದಾನೆ. ಧನದ ಆಸೆಗೆ ವ್ರತಹಿಡಿದ ವಿಪ್ರನ ಪಾಡನ್ನು, ಬೋಳು ತಲೆಯನ್ನು ದರ್ಶನಮಾಡಿ ಉಣ್ಣುವ ವ್ರತ ಹಿಡಿದ ಜೈನ ಶ್ರಾವಕನ ಕಥೆಯ ಮೂಲಕ, ಅರ್ಥ ತಿಳಿಯದೆ ಆಚರಣೆ ಮಾಡುವವರನ್ನು ಲೇವಡಿ ಮಾಡಿದ್ದಾನೆ. ಈ ಪ್ರಸಂಗವಂತೂ ನಯಸೇನ ಹುಟ್ಟಾ ನಗೆಗಾರನೆಂಬುದನ್ನು ಸಾಬೀತುಮಾಡುತ್ತದೆ. ಸಂಪತ್ತು ಹಾಗೂ ಅಧಿಕಾರ ಮದದಿಂದ ಅಧಃಪತನಗೊಂಡು ಸ್ವೇಚ್ಛೆಯಾಗಿ ವರ್ತಿಸುತ್ತಿದ್ದ ವರ್ತಕವರ್ಗ ಹಾಗೂ ಅಧಿಕಾರೀ ವರ್ಗವನ್ನು ಕೂಡ ಅವನು ಧೈರ್ಯವಾಗಿ ವಿಡಂಬಿಸಿದ್ದಾನೆ. ಅವನ ವಿಡಂಬನೆ ತೀಕ್ಷ್ಣವಲ್ಲ ಅದು ತಿಳಿಹಾಸ್ಯದಿಂದ ಕೂಡಿ ಕಥೆಗೆ ಆಕರ್ಷಣೆ ತಂದಿದೆ. ಹಗುರಾದ ಮನಸ್ಸಿನಿಂದ ಓದುಗ ಉತ್ಸಾಹಗೊಳ್ಳುತ್ತಾನೆ. ಬಿಗುವು, ಗಾಂಭೀರ್ಯದ ಭಾರದಿಂದ ಚಂಪುವನ್ನು ಬಿಡಿಸಿ ತಿಳಿಹಾಸ್ಯದ ಕಂಪನ್ನು ಬೆರೆಸಿದ್ದಾನೆ.

**ಚಂಪುವಿನಲ್ಲಿ ಕನ್ನಡಪರತೆ, ದೇಸೀತನ, ಜನಪರ ನಲುವು.**

ಚಂಪು ಕವಿಯಾಗಿ ಆತನು ತಳೆದ ಕನ್ನಡ ಪರ ನಿಲುವು ಮೆಚ್ಚುವಂತದ್ದು. ಕವಿರಾಜ ಮಾರ್ಗದ ಕಾಲಕ್ಕಾಗಲೇ ದೇಸೀಗಾಳಿ ಬೀಸತೊಡಗಿದ್ದು, ಪಂಪನಲ್ಲಿ ಮಾರ್ಗ-ದೇಸಿಗಳ ಸಮನ್ವಯದ ಕಡೆಗೆ ಗಮನ ಹೆಚ್ಚಿತ್ತು. ಎರಡು ಶತಮಾನಗಳ ಅಂತರದಲ್ಲಿ ಕನ್ನಡ ಭಾಷೆಯಲ್ಲಾಗಿದ್ದ ಬದಲಾವಣೆಗಳನ್ನು ಗುರುತಿಸಿ ದೇಸಿತನವನ್ನು ಕೃತಿಯ ಒಳಮೈ, ಹೊರಮೈಯಲ್ಲಿ ಅಳವಡಿಸಿಕೊಂಡು, ವಚನಕಾರರಿಗಿಂತ ಎರಡು ದಶಕಗಳ ಮೊದಲೇ ಸಾಹಿತ್ಯವನ್ನು ಜನಪರಮಾಡಿದ ಶ್ರೇಯಸ್ಸು ಇವನಿಗೆ ಸಲ್ಲಬೇಕು. ಇದನ್ನು ಗಮನಿಸಿ ಎಂ.ಎಸ್. ಸುಂಕಾಪುರ್‌ರವರು 'ಕನ್ನಡದ ಕಹಳೆಯನ್ನು ಊದಿದವರಲ್ಲಿ ನಯಸೇನನೇ ಮೊದಲಿಗ' ಎಂದಿದ್ದಾರೆ.[೬] ಹೊಸಗನ್ನಡದ ಮುಂಗೋಳಿಯ ಕೂಗನ್ನು ಮುದ್ದಣನಲ್ಲಿ ಗುರುತಿಸುವಂತೆ, ಮಧ್ಯಕಾಲೀನ ಕನ್ನಡ ಸಾಹಿತ್ಯದ ಮುಂಗೋಳಿಯಾಗಿ ನಯಸೇನನನ್ನು ಗುರುತಿಸುವುದು ನ್ಯಾಯವೇ. 'ಸಾಹಿತ್ಯ ಜನತೆಗಾಗಿ ಎಂಬ ಹೊಸಗನ್ನಡದ ಮೊದಲ ಕೋಳಿಕೂಗು ನಯಸೇನನ ಕೃತಿಯಲ್ಲಿದೆ' ಎನ್ನುತ್ತಾರೆ ರಂ.ಶ್ರೀ ಮುಗಳಿಯವರು.[೭]

ಚಂಪೂ ಕಾವ್ಯಗಳಿಗಿಂತ ಭಿನ್ನರಾದ ಕಥಾನಾಯಕರನ್ನು ಇಲ್ಲಿ ಕಾಣುತ್ತೇವೆ. ಇಲ್ಲಿ ವರ್ತಕ ವರ್ಗಕ್ಕೆ ಹೆಚ್ಚು ಪ್ರಾಮುಖ್ಯತೆ ಇರುವುದು ಆಕಸ್ಮಿಕವಲ್ಲ. ಆ ಕಾಲಕ್ಕಾಗಲೇ ಜೈನಧರ್ಮ ಚಕ್ರವರ್ತಿಗಳ ಆಶ್ರಯವನ್ನು ಕಳೆದುಕೊಂಡಿತ್ತು. ಹೇಗಾದರೂ ಮಾಡಿ ಉಳಿದುಕೊಳ್ಳಬೇಕಾದ ಒತ್ತಡಕ್ಕೆ ಸಿಲುಕಿತ್ತು. ಆ ಕಾಲದ ಸಮಾಜವು ಅರ್ಥಮುಖಿಯಾಗಿದ್ದು, ವರ್ತಕ ಸಮಾಜ ಹೆಚ್ಚು ಸಂಪದ್ಭರಿತವಾಗಿಯೂ ಪ್ರಭಾವಶಾಲಿಯೂ ಆಗಿ ಬೆಳೆದಿತ್ತು. ಅದರ ಒಲವು, ಶ್ರದ್ಧೆಗಳನ್ನು ಪಡೆಯುವ ಅವಶ್ಯಕತೆ ಎಲ್ಲ ಧರ್ಮಕ್ಕೂ ಇತ್ತು. ಲೌಕಿಕ ಸಿದ್ಧಿಯ ಪ್ರತೀಕವಾಗಿದ್ದ ವಣಿಕವರ್ಗವನ್ನು ಈ ಕಥೆಗಳಲ್ಲಿ ಭೋಗ ಮತ್ತು ಭಕ್ತಿಗಳ ಸಮನ್ವಯದ ಪ್ರತೀಕಗಳಾಗಿ ನಯಸೇನ ಚಿತ್ರಿಸಿದ್ದಾನೆ. ದಯಾಮಿತ್ರ ಶೆಟ್ಟಿಯಲ್ಲಿ ಯಶಸ್ವಿ ವ್ಯಾಪಾರಸ್ಥನಿಗೆ ಇರಬೇಕಾದ ಸೇಲ್ಸಮನ್ ಗುಣಗಳು ಕಂಡುಬರುತ್ತವೆ. ವಸುಭೂತಿಯ ಬಯಕೆಗಳ ನಾಡಿಹಿಡಿದು ನಗುನಗುತ್ತಲೇ ಅವನನ್ನು ತನ್ನ ಧರ್ಮ ತತ್ವವಗಳ ಕಡೆಗೆ ತಿರುಗಿಸಿಕೊಳ್ಳುವ, ಸಮ್ಯಕ್ತ್ವದ ಸ್ವರೂಪವನ್ನು ಅದರ ಹಿರಿಮೆಯನ್ನು ಭೋಧಿಸುವ ಅವನ ಜಾಣತನ ಮೆಚ್ಚು ವಂತದ್ದು. ಅದೇ ರೀತಿ ಅಪಾರ ಧನವನ್ನು ವೆಚ್ಚ ಮಾಡಿ ಜಿನಾಲಯವನ್ನು ಕಟ್ಟಿಸಬಲ್ಲ ಶಕ್ತನೂ ಮಹಾ

ಜೈನಧರ್ಮ ಪರಾಯಣನೂ ಅದ ಜಿನಬಕ್ತಶೆಟ್ಟಿಯು ಸೂರ್ಪನೆಂಬ ಕಳ್ಳನನ್ನು ಮನ್ನಿಸಿ ಧರ್ಮ ವಾತ್ಸಲ್ಯದಿಂದ ರಕ್ಷಣೆ ನೀಡಿ ಅವನನ್ನು ತಿದ್ದುವುದು ವಿಶೇಷವಾಗಿದೆ. ಕುಬೇರನನ್ನು ಸರಿಕಟ್ಟುವ ಸಿರಿವಂತರೂ, ಧಾರ್ಮಿಕರೂ ಆದ ಇಲ್ಲಿನ ವರ್ತಕರು ಇತರರಿಗೆ ಧರ್ಮದ ಉಪದೇಶ ಮಾಡುವಷ್ಟರಮಟ್ಟಿನ ಧರ್ಮ ಪರಾಯಣತೆಯನ್ನು ಪಡೆದವರಾಗಿದ್ದರು!

ಪಂಪ ರನ್ನ ಪೊನ್ನರಿಗಿಲ್ಲದ ಒತ್ತದ ಜೈನಮುನಿಯಾದ ನಯಸೇನನಿಗಿತ್ತು. ಅವನು ತನ್ನ ಧರ್ಮಕ್ಕೆ ಬೆಸ್ತನಿಂದ ಹಿಡಿದು ಬ್ರಾಹಣನವರೆಗೆ, ಕಳ್ಳನಿಂದ ಹಿಡಿದು ಅರಸನವರೆಗೆ ಎಲ್ಲರನ್ನೂ ತೆರೆದ ಬಾಹುಗಳಿಂದ ಜೈನಧರ್ಮದ ರಕ್ಷೆಗೆ ಆಹ್ವಾನಿಸುತ್ತಾನೆ. ಜೈನಕಥೆ ಕೇಳಿ, ಮುನಿಗಳ ಹಿತೋಪದೇಶವನ್ನು ಕೇಳಿ ಧರ್ಮ ಪರಾಯಣರಾದವರ, ವ್ರತ ಹಿಡಿದವರ, ಬ್ರಹ್ಮಚರ್ಯ ಪಾಲಿಸಿದವರ ಬಗೆಗೆ ಹೇಳಿದ್ದಾನೆ ನಯಸೇನ. ಆದರೆ ಅವನ ಕಾಲದಲ್ಲಿ ಅವನಿದ್ದ ಮುಳುಗುಂದನಾಡಿನಲ್ಲಿ ಜೈನಧರ್ಮ ಸುಸ್ಥಿತಿಯಲ್ಲಿ ಇರಲಿಲ್ಲ. ಅಲ್ಲಿನ ಶಾಸನಗಳು ಬೇರೆಯ ಚಿತ್ರವನ್ನೇ ಕೊಡುತ್ತವೆ. ಶೈವ ಮುನಿಗಳ ಹಿತೋಪದೇಶದಿಂದ ಶಿವಪರಾಯಣರಾಗಿ ಶಿವಾಲಯಗಳಿಗೆ, ಯೋಗಿಗಳಿಗೆ ಹೇರಳವಾಗಿ ದಾನಮಾಡಿ, ಶಿವಕಥೆ ಕೇಳುವಲ್ಲಿ ಆಸಕ್ತರಾದ, ಶಿವಭಕ್ತ ಅಧಿಕಾರಿಗಳಾದ ನಾಕಿಗಾವುಂಡ, ಹೊಲ್ಲಗಾವುಂಡರ ಬಗೆಗೆ ಹೇಳುತ್ತವೆ[೮] ಭಾವಶಿವದೇವ ಯತಿಗಳ ಉಪದೇಶದಿಂದ ಪ್ರೇರಿತನಾದ ಶೋಭರಸನೆಂಬ ಅಧಿಕಾರಿ ಬ್ರಹ್ಮಚರ್ಯವನ್ನು ಪಾಲಿಸಿ ಅನೇಕ ಶಿವ ದೇವಾಲಯ ನಿರ್ಮಾಣ, ನಿರ್ವಹಣೆಗೆ ಪ್ರವೃತ್ತ ನಾದುದನ್ನು ೧೧೦೩ರ ಹೊಸೂರಿನ ಶಾಸನ[೯] ಹೇಳುತ್ತದೆ. ಇವನು ಮುಳುಗುಂದ ಮುಚ್ಚಂಡಿ, ಮಾಗಡಿ, ಹರ್ತಿ, ಕಣವಿಯಲ್ಲಿ ಅನೇಕ ಶಿವಾಲಯಗಳನ್ನು ಕಟ್ಟಿಸಿ, ನಿರ್ವಹಣೆಗೆ ದಾನ ನೀಡಿದ್ದಾನೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಶೈವಧರ್ಮ ರಾಜಧರ್ಮವಾಗಿ ಮಾನ್ಯತೆ ಪಡೆದಿತ್ತು. ಕಾಳಾಮುಖ ಶೈವ ಮುನಿಗಳ ವರ್ಚಸ್ಸಿನಿಂದ, ಸಮಾಜಮುಖಿ ಕಾರ್ಯಗಳಿಂದ ಎಲ್ಲ ವರ್ಗ, ಜಾತಿ, ವೃತ್ತಿಗಳವರು ಶಿವಾಲಯಗಳಿಗೆ ದಾನಬಿಟ್ಟಿರುವುದಕ್ಕೆ ಆಧಾರಗಳಿವೆ. ರಾಷ್ಟ್ರಕೂಟರ ಕಾಲದಲ್ಲಿ ವಿಶೇಷವಾಗಿದ್ದ ಜೈನಧರ್ಮಕ್ಕೆ ದಾನ ನೀಡಿದ ಶಾಸನಗಳ ಸಂಖ್ಯೆಯು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಮುಳುಗುಂದ ಪರಿಸರದಲ್ಲಿ ಕಡಿಮೆಯಾಗುತ್ತಾಬಂದು, ೧೨ನೇ ಶತಮಾನದಲ್ಲಿ ಕೇವಲ ಒಂದು ಶಾಸನ ಕಂಡುಬಂದಿರುವುದು, ಇಲ್ಲಿನ ಜೈನ ಧರ್ಮದ ಸ್ಥಿತಿಯನ್ನು ಸ್ಪಷ್ಟಪಡಿಸುತ್ತದೆ. ಇಂತಹ ಆತಂಕದ ವಾತಾವರಣವೂ ಧರ್ಮಾಮೃತದ ಪ್ರಯೋಗ ಶೀಲತೆಗೆ ಕಾರಣವೆನ್ನಬಹುದು.

**ಅಡಿಟಿಪ್ಪಣಿಗಳು**

೧. ಪೀಟಿಕಾಭಾಗ ಧರ್ಮಾಮೃತ ಸಂಗ್ರಹ
೨. ನಯಸೇನ, ಕನ್ನಡದ ಒಬ್ಬ ಜಾನಪದ ಚಂಪುಕವಿ. ಸಂಶೋಧನಾ ತರಂಗ–೨
೩. ೧/೪೯ ನಯಸೇನ ವಿರಚಿತ ಧರ್ಮಾಮೃತಂ. ಕೆ.ವೆಂಕಟರಾಮಪ್ಪ ಕ.ಸಾಪ. ೧೯೭೭
೪. ಡಾ. ಆರ್. ಶಾಮಾಶಾಸ್ತ್ರಿಗಳು (ಸಂ) ಧರ್ಮಾಮೃತ ಉಪೋದ್ಘಾತ
೫. .ಎಸ್. ವಿ ರಂಗಣ್ಣ ಶೈಲಿ–೩.
೬ ನಗೆಗಾರ ನಯಸೇನ
೭. ನಯಸೇನನ ಧರ್ಮಾಮೃತ. ಜೀವನ.೨/೫
೮. ಎಸ್.ಐ.ಐ ಸಂ.೧೧. ಎಲೆ ಶಿರೂರು. ಶಾ.ಸಂ.೧೫೫ .ಕ್ರಿ.ಶ.೧೧೧೯.
೯. ಅದೇ. ಶಾ.ಸಂ. ೧೫೨ ಕಣವಿ ೧೫೬.

****

# ಶರಣಕ್ರಾಂತಿಗೆ ನಾಂದಿ ಹಾಡಿದ 'ಮಂಗಳವಾಡ'

* ಡಾ. ಜಿ. ಎನ್. ಉಪಾಧ್ಯ

ಕನ್ನಡ ನಾಡು 'ಕಾವೇರಿಯಿಂದ ಗೋದಾವರಿಯವರೆಗೆ' ವ್ಯಾಪಿಸಿತ್ತು ಎಂದಿದ್ದಾನೆ ಕವಿರಾಜಮಾರ್ಗಕಾರ. ಕರ್ನಾಟಕ ಹಾಗೂ ಮಹಾರಾಷ್ಟ್ರ ಇವೆರಡು ನೆರೆಯ ರಾಜ್ಯಗಳು. ಇವುಗಳ ನಡುವಿನ ಸಂಬಂಧ 'ಕರುಳುಬಳ್ಳಿ'ಯ ಸಂಬಂಧ. ಕನ್ನಡ–ಮರಾಠಿ ಭಾಷೆಗಳ, ಸಂಸ್ಕೃತಿಗಳ ನಡುವಣ ನಂಟಿಗೆ ಶತಶತಮಾನಗಳ ಇತಿಹಾಸವಿದೆ. ಎಲ್ಲೋರ, ಸೊಲ್ಲಾಪುರ (ಸೊನ್ನಲಿಗೆ), ಕೊಲ್ಲಾಪುರ, ಮಾಸನೂರು, ಮೀರಜ್, ಕರ್ಹಾಡ, ಸಾಂಗಲಿ, ಅಕ್ಕಲಕೋಟೆ ಮೊದಲಾದ ಸಾಂಸ್ಕೃತಿಕ ತಾಣಗಳು. ಕನ್ನಡಿಗರ ಸಾಹಸ ಸಾಧನೆಗಳಿಗೆ ಇಂದಿಗೂ ಜ್ವಲಂತ ನಿದರ್ಶನಗಳಾಗಿವೆ.

ಇಂದಿನ ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಜಿಲ್ಲೆಯ ತಾಲೂಕು ಕೇಂದ್ರಗಳಲ್ಲಿ ಒಂದಾದ ಮಂಗಳವಾಡ(ಮಂಗಳಿವೇಡೆ)ವು ಪುರಾತನ ಪಟ್ಟಣವಾಗಿದೆ. ಹನ್ನೊಂದು ಹನ್ನೆರಡನೆಯ ಶತಮಾನದಲ್ಲಿ ಮಂಗಳವಾಡವು ಬಹುಮಹತ್ವವನ್ನು ವಹಿಸಿದ ಊರು. ಕನ್ನಡನಾಡಿಗೂ ಮಂಗಳವಾಡಕ್ಕೂ ಇರುವ ಪ್ರಾಚ್ಯ ಸಂಬಂಧ ಎಲ್ಲರೂ ಹೆಮ್ಮೆಪಡುವಂಥದ್ದು. ಮಂಗಳವಾಡಕ್ಕೆ ಸುಮಾರು ಒಂದು ಸಾವಿರ ವರ್ಷಗಳಷ್ಟು ಹಳಮೆಯಿದೆ. ಹನ್ನೊಂದನೆಯ ಶತಮಾನದಲ್ಲಿ ಇದು ಶೈವ–ವೀರಶೈವ ಧರ್ಮದ ನೆಲೆವೀಡಾಗಿತ್ತು. ರೇವಣಸಿದ್ಧ, ಬಸವಣ್ಣ, ಸಿದ್ಧರಾಮ, ಹಾವಿನಹಾಳ ಕಲ್ಲಯ್ಯ, ರುದ್ರಮುನಿ ಮೊದಲಾದ ಶಿವಶರಣರ ಸಂಚಾರಭೂಮಿಯಾಗಿಯೂ ಇದು ಹೆಸರುವಾಸಿಯಾಗಿತ್ತು. ಬಿಜ್ಜಳನ ರಾಜಧಾನಿಯಾಗಿದ್ದ ಮಂಗಳವಾಡದವಲ್ಲಿನ ಘಟನಾವಳಿಗಳು ಐತಿಹಾಸಿಕ ಸಾಮಗ್ರಿಕೆಗೆ ಅಮೂಲ್ಯ ಕಾಣಿಕೆಯಾಗಿವೆ.

ಮಂಗಳವಾಡವು ಧಾರ್ಮಿಕವಾಗಿ ರಾಜಕೀಯವಾಗಿ ಅನೇಕ ಸ್ಥಿತ್ಯಂತರಗಳನ್ನು ಕಂಡ ಊರು. ಬಸವಣ್ಣನವರಿಗಿಂತ ಹಿಂದೆಯೇ ಈ ಪಟ್ಟಣ ಅಪ್ಪಟಗನ್ನಡ ಸಂಸ್ಕೃತಿಯುಳ್ಳ ನಾಡಾಗಿ ಬಹು ಸಿದ್ಧಿಯನ್ನು ಹೊಂದಿತ್ತು. ಹತ್ತು–ಹನ್ನೆರಡನೆಯ ಶತಮಾನದಲ್ಲಿ ಈ ನಗರವು ಕರ್ನಾಟಕದ ರಾಜಮನೆತನಗಳ ಪ್ರಮುಖ ರಾಜ್ಯಾಂಗವಾಗಿ, ಧಾರ್ಮಿಕ ಕೇಂದ್ರವಾಗಿ, ಮುಖ್ಯ ಪಟ್ಟಣವಾಗಿ, ಆಡಳಿತ ಘಟಕವಾಗಿ ವಿಶೇಷವಾದ ಪಾತ್ರವನ್ನು ವಹಿಸಿತ್ತೆಂಬುದು ಚಾರಿತ್ರಿಕ ಸತ್ಯ. ಕರ್ನಾಟಕದ ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಈ ನಗರವನ್ನು ನಾವು ಮರೆಯುವಂತಿಲ್ಲ.

ಇಂದು ತಾಲೂಕು ಕೇಂದ್ರವಾಗಿರುವ ಮಂಗಳವಾಡ ಸೊಲ್ಲಾಪುರದಿಂದ ೩೫ ಮೈಲಿಗಳ ಅಂತರದಲ್ಲಿದೆ; ಮತ್ತು ಪಂಡರಾಪುರದಿಂದ ಆಗ್ನೇಯಕ್ಕೆ ೧೩ಮೈಲಿಗಳ ದೂರದಲ್ಲಿದೆ. ಪ್ರಾಚೀನ ಮಂಗಳವಾಡ ಇಂದು ಮಂಗಳಿವೇಡ ಎಂದೇ ಕರೆಯಲ್ಪಡುತ್ತಿದೆ. ಕನ್ನಡ ಶಾಸನಗಳಲ್ಲಿ ಕಾವ್ಯಕೃತಿಗಳಲ್ಲಿ ಈ ಪಟ್ಟಣವನ್ನು 'ಮಂಗಳವಾಡ' ಎಂದೇ ಸಂಬೋಧಿಸಲಾಗಿದೆ. ಸಂಸ್ಕೃತ ಶಾಸನಗಳಲ್ಲಿ ಈ ತಾಣವನ್ನು ಮಂಗಲವೇಷ್ಟಕ ಎಂದು ಕರೆದಿರುವುದನ್ನು ಕಾಣಬಹುದು. ಇಂದು ಆರ್ಥಿಕವಾಗಿ ಹಿಂದುಳಿದಿರುವ, ಸಾಮಾನ್ಯ ಪಟ್ಟಣದಂತೆ ಕಂಡುಬರುತ್ತಿರುವ ಮಂಗಳವಾಡ ಒಂದು ಕಾಲದಲ್ಲಿ ರಾಜಧಾನಿಯಾಗಿ ಮೆರೆದಿತ್ತೆ? ಎಂಬಷ್ಟು ಕಡೆಗಣಿಸಲ್ಪಟ್ಟಿದೆ. ಮಂಗಳವಾಡದ ಐತಿಹಾಸಿಕ ಸ್ಮಾರಕಗಳು, ವಾಸ್ತುಶಿಲ್ಪ, ಕೋಟೆಕೊತ್ತಲಗಳು ಬಹುತೇಕ ಶಿಥಿಲವಾಗಿವೆ. ಆದರೂ ನಗರದ ಬೇರೆ ಬೇರೆ ಕಡೆಗಳಲ್ಲಿ ಅಳಿದುಳಿದ ಸ್ಮಾರಕಗಳು, ರಚನೆಗಳು, ವಿಶಾಲವಾದ ಕೆರೆ, ಬಾವಿ, ದೇವಾಲಯಗಳು, ಪ್ರಾಚ್ಯ ಅವಶೇಷಗಳು ಈ ನಗರದ ಇತಿಹಾಸದ ಪುನಾರಚನೆಯಲ್ಲಿ ಮಹತ್ವದ ಪಾತ್ರವಹಿಸುತ್ತವೆ.

**ರಾಜಧಾನಿಯಾಗಿ ಮಂಗಳವಾಡ**

ಪ್ರಾಚೀನ ಕರ್ನಾಟಕ ಹಾಗೂ ಮಹಾರಾಷ್ಟ್ರದಲ್ಲಿ ರಾಜ್ಯಭಾರ ಮಾಡಿದ ಅರಸುಮನೆತನಗಳಲ್ಲಿ ಕಲಚುರಿ ಮನೆತನವೂ ಒಂದು. ಕಲಚುರಿಗಳು ಮೂಲತ: ಉತ್ತರಭಾರತದವರು. ಅವರ ಮೂಲತಾಣ ಕಾಲಂಜರ ಮಂಡಲವಾಗಿತ್ತೆಂಬ ಅಂಶ

* ಮುಖ್ಯಸ್ಥರು, ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ ಮುಂಬಯಿ

ಅನೇಕ ಶಾಸನಗಳಲ್ಲಿ ದಾಖಲಾಗಿದೆ. ಹೈಹಯ ಕುಲಕ್ಕೆ ಸೇರಿದ ಇವರನ್ನು ಫ್ಲೀಟ್ ಕಲ್ಯಾಣದ ಕಲಚುರಿಗಳು ಎಂದು ಕರೆದರೆ ಪಿ.ಬಿ. ದೇಸಾಯಿ ಅವರು ಕರ್ನಾಟಕದ ಕಲಚುರಿಗಳು[೧] ಎಂದು ಹೆಸರಿಟ್ಟಿದ್ದಾರೆ. ಕಲಚುರಿಗಳು ಕರ್ನಾಟಕದ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಳ್ಳುವ ಮೊದಲು ಮಂಗಳವಾಡ ಅವರ ರಾಜಧಾನಿಯಾಗಿತ್ತು. ಮಂಗಳವಾಡದಿಂದಲೇ ಕಲಚುರಿಗಳ ಹೆಸರು ಇತಿಹಾಸದ ಪುಟಗಳಲ್ಲಿ ದಾಖಲಾಗುತ್ತದೆ. ಹೀಗಾಗಿ ಕಲಚುರಿಗಳನ್ನು ಮಂಗಳವಾಡದ ಕಲಚುರಿಗಳೆಂದು ಕರೆದರೆ ಅದು ಸಮಂಜಸವಾದೀತು. ಕಲ್ಯಾಣದ ಚಾಲುಕ್ಯರು ದುರ್ಬಲರಾದ ಸಮಯ ಸಂದರ್ಭ ನೋಡಿಕೊಂಡು ಸ್ವತಂತ್ರರಾದ ಕಲಚುರಿಗಳು, ತಮ್ಮ ರಾಜ್ಯವನ್ನು ಸ್ಥಾಪಿಸಿದ್ದು ಐತಿಹಾಸಿಕ ಸತ್ಯ. ಹೀಗಾಗಿ ಕಲಚುರಿಗಳ ಮೊದಲ ರಾಜಧಾನಿ ಮಂಗಳವಾಡವೇ ಆಗಿತ್ತು ಎಂಬುದರಲ್ಲಿ ಎರಡು ಮಾತಿಲ್ಲ.

ಕಲಚುರಿಗಳು ಉತ್ತರದಿಂದ ಬಂದು ಮೊದಲು ನೆಲೆನಿಂತ ಪ್ರದೇಶ ಮಂಗಳವಾಡ. ಕಲಚುರಿ ವಂಶದ ರಾಜರಾದ ಅಮ್ಮುಗಿದೇವ, ಜೋಗಮ, ಸಂಕಮ, ಪೆರ್ಮಾಡಿ, ಬಿಜ್ಜಳ, ರಾಯಮುರಾರಿ ಸೋಯಿದೇವ ಮೊದಲಾದವರು ಮಂಗಳವಾಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಉಲ್ಲೇಖ ಮಹಾರಾಷ್ಟ್ರದ ಮೂವತ್ತಕ್ಕಿಂತ ಹೆಚ್ಚಿನ ಶಾಸನಗಳಲ್ಲಿ ದಾಖಲಾಗಿದೆ. ೧೧೭೪ರ ರಾಯ ಮುರಾರಿ ಸೋಯಿದೇವನ ಮಾಡಗಿಹಾಳ ಶಾಸನ (EI vol. 15 pg 315) ದಲ್ಲಿ.

**ಎನಿಪಾದೇಶದ ತಡವೆ**
**ದೆನಿಕುಂ ತರಿಕಾಡನಾಡು ತದವಿಷಯಕ್ಕಾ**
**ಸ್ಯನಿಭಂ ಮಂಗಳಿವೇಡಂ**
**ಜನರಮ್ಯಂ ತತು ಪುರೀಶ್ವರವರನ್ವಯದೊಳ್**

ತರಿಕಾಡುನಾಡು ಹಾಗೂ ಮಂಗಳವಾಡದ ಮಹತ್ವವನ್ನು ಬಣ್ಣಿಸಿ ಅದನ್ನು ರಾಜಧಾನಿಯನ್ನಾಗಿ[೨] ಮಾಡಿ ಆಳಿದ ದೊರೆಗಳ ಪ್ರಸ್ತಾಪವೂ ಇಲ್ಲಿನ ಶಾಸನಗಳಲ್ಲಿ ಕಾಣಸಿಗುತ್ತದೆ.

ಬಿಜ್ಜಳ ಸ್ವತಂತ್ರವಾದ ರಾಜ್ಯವನ್ನು ಕಟ್ಟಿದಾಗ ಕಲ್ಯಾಣ ಅವನ ರಾಜಧಾನಿಯಾದುದು ಚಾರಿತ್ರಿಕ ಸತ್ಯ. ಆದಾಗ್ಯೂ ಮಂಗಳವಾಡವನ್ನು ಅವನು ಮರೆಯಲಿಲ್ಲ. ಅದರ ಮೇಲ ಒ... ರೀತಿಯ ಪ್ರೇಮ ಅವರಲ್ಲಿತ್ತು. ಹೀಗಾಗಿ ಕಲ್ಯಾಣ ರಾಜಧಾನಿಯಾದಾಗ ಮಂಗಳವಾಡ ಯುವರಾಜನ ರಾಜಕೀಯ ಆಗುಹೋಗುಗಳ ಕೇಂದ್ರವಾಗಿ ಮಾರ್ಪಟ್ಟುದನ್ನು ನಾವು ಕಾಣಬಹುದು.

**ಬಿಜ್ಜಳನ ಕಾಲದಲ್ಲಿ ಮಂಗಳವಾಡ**

ಕಲಚುರಿ ವಂಶದ ದೊರೆಗಳಲ್ಲಿ ಬಿಜ್ಜಳನದು ದೊಡ್ಡ ಹೆಸರು. ಬಿಜ್ಜಳ ಸಾಹಸ ಸಾಧನೆಗಳಿಗೆ ಹೆಸರಾದವನು. ಈತ ಬಲಶಾಲಿ ಹಾಗೂ ಚಾಣಾಕ್ಷ ದೊರೆಯಾಗಿದ್ದ ಎಂಬ ಅಂಶ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿಶ ೧೧೩೫ರ ಸೊಲ್ಲಾಪುರ ಶಾಸನ (ISD No.9) ದಲ್ಲಿ ಎರಡನೇ ಬಿಜ್ಜಳನ ಧೈರ್ಯ ಸಾಹಸದ ವರ್ಣನೆಯಿದೆ. ೨ನೇ ಬಿಜ್ಜಳ ಇನ್ನೂ ಚಾಲುಕ್ಯರ ಸಾಮಂತನಾಗಿದ್ದ ಕಾಲದಲ್ಲಿ ಯುದ್ಧಗಳಲ್ಲಿ ಪಾಲ್ಗೊಂಡ ಅಂಶ ಇಲ್ಲಿ ದಾಖಲಾಗಿದೆ. ಮಹಾಮಣ್ಡಳೇಶ್ವರಂ ಬಿಜ್ಜಲ ದೇವರಸರು ಹಾನುಗಲ್ಲ ಕೋಟೆಯಲು ಮಣ್ಡಳಿಕ ಮಸಣೆಯನ್ನಾಕ್ರಮಿಸಿ ಕಪ್ಪವಂ' ಕೊಂಡ ಬಗೆಗೆ ವಿವರಣೆ ಈ ಶಾಸನದಲ್ಲಿ ಬಂದಿದೆ. ಬಿಜ್ಜಳ ಮಂಗಳವಾಡದಲ್ಲಿದ್ದರೂ ಕರ್ನಾಟಕದ ಮೇಲೂ ಆಗಾಗ ದಾಳಿಮಾಡಿ ಚಿಕ್ಕಪುಟ್ಟ ರಾಜರನ್ನು ಸದೆಬಡಿದ ಕೀರ್ತಿಗೆ ಪಾತ್ರನಾಗಿದ್ದ. ಮಹಾಪ್ರಧಾನ ರೇಯಿಮಯ್ಯ (ISD NO. 15), ಮನ್ನೆಯ ವಿಜಯಾದಿತ್ಯ ದಂಡನಾಯಕ (ISD No. 16) ವೆಂಣ್ಣಪರಸ, ಅಣಂದೂರು ಮೂನ್ನೂರರ ಗೊಯ್ದರಸ ಮೊದಲಾದವರು ಬಿಜ್ಜಳನ ಕೈಕೆಳಗೆ ಅಧಿಕಾರದಲ್ಲಿದ್ದರೆಂಬ ಅಂಶ ಶಾಸನಗಳಿಂದ ತಿಳಿದು ಬರುತ್ತದೆ. ಮಂಗಳವಾಡದಲ್ಲಿರುವಾಗಲೇ ಬಿಜ್ಜಳ ಸಮರ್ಥ ಮಹಾಮಂಡಳೇಶ್ವರನಾಗಿದ್ದ; ಅವನು ಇತಿಹಾಸದಲ್ಲಿ ಚಿತ್ರಿಸಲ್ಪಟ್ಟಂತೆ ಪುಕ್ಕಲು ದೊರೆಯಾಗಿರಲಿಲ್ಲ ಎಂಬುದು ಗಮನೀಯ ಅಂಶ. ಬಿಜ್ಜಳನ ಹೆಂಡತಿ 'ರಂಭಾದೇವಿ'ಯ ಉಲ್ಲೇಖ ಮೊತ್ತಮೊದಲು ಸಿಗುವುದು ಮಾಳಕವತೆ ಶಾಸನದಲ್ಲಿ (ISD No. 17) ಬಿಜ್ಜಳನು ಕಲ್ಯಾಣದ ಚಕ್ರವರ್ತಿಯಾದಾಗ ಅವನ ಮಗ ರಾಯಮುರಾರಿ ಸೊಯಿದೇವ ಮಂಗಳವಾಡದಲ್ಲಿ ಯುವರಾಜನಾಗಿ ಅಧಿಕಾರಕ್ಕೆ ಬರುತ್ತಾನೆ. ಕ್ರಿಶ ೧೧೬೫-೬೭ರ ಉಮ್ರಾಣಿ ಶಾಸನದಲ್ಲಿ ಮಂಗಳವಾಡದ ವರ್ಣನೆ ಹೀಗೆ ಬಂದಿದೆ.

**ಹಿರಿದುಂ ರಂಜಿಪುದದರೊಳು**
**ಭರಿತಂ ತರಿಕಾಡನಾಡು ತದ್ವಿಷೆಯಕ್ಕಾ**
**ಭರಣಂ ಮಂಗಳಿವಾಡಂ**
**ಪುರರತ್ನಂ ತತುಪುರೇಶ್ವರ ನೃಪನರಂನ್ವಯದೊಳ್**

ತರಿಕಾಡನಾಡಿನ ರಾಜಧಾನಿ ಮಂಗಳಿವಾಡವಾಗಿತ್ತು. ಈ ಮಂಗಳಿವಾಡವು ಕಲಚುರಿಗಳ ಪುಣ್ಯಭೂಮಿ ಹಾಗೂ ಕರ್ಮಭೂಮಿ ಎಂಬ ಉಲ್ಲೇಖವೂ ಇದೇ ಶಾಸನದಲ್ಲಿ ಬಂದಿದೆ.

ಮಹಾರಾಷ್ಟ್ರದ ಕೆಲವಾರು ಶಾಸನಗಳಲ್ಲಿ ತರಿಕಾಡನಾಡಿಗೆ ಕಲಶಪ್ರಾಯವಾಗಿ ಮಂಗಳವೇಡವಿತ್ತು ಎಂಬ ವಿವರ ಬಂದಿದೆ. ತರಿಕಾಡನಾಡು ಇಂದಿನ ಸೊಲ್ಲಾಪುರ ಜಿಲ್ಲೆಯ ಭಾಗವಾಗಿತ್ತು ಎಂಬ ಅಂಶ ಶಾಸನಗಳಿಂದ ವೇದ್ಯವಾಗುತ್ತದೆ. ಇಂಡಿ ತಾಲೂಕಿನ ಕಪ್ಪನಿಂಬರಗಿ ಶಾಸನದಲ್ಲಿ 'ತರಿಕಾಡನಾಡ ಮುನ್ನೂರು' ಎಂಬ ಉಲ್ಲೇಖ ಬಂದಿರುವುದರಿಂದ ಇದು ಮೂರುನೂರು ಗ್ರಾಮಗಳಿಂದ ಕೂಡಿದ ಪ್ರದೇಶವಾಗಿತ್ತು ಎನ್ನಬಹುದು. ಹೀಗಾಗಿ ಮಂಗಳಿವಾಡವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಕಲಚುರಿಗಳು ಇಂದಿನ ಸೊಲ್ಲಾಪುರ, ಸಾಂಗ್ಲಿ, ಬಿಜಾಪುರ ಜಿಲ್ಲೆಯ ಕೆಲವು ಪ್ರಾಂತಗಳನ್ನು ಆಳುತ್ತಿದ್ದರೆಂಬ ಅಂಶ ಸ್ಪಷ್ಟವಾಗುತ್ತದೆ. ಉತ್ತರದಿಂದ ವಲಸೆ ಬಂದ ಕಲಚುರಿಗಳು ಮಂಗಳವಾಡದಲ್ಲಿ ನೆಲೆಸಿ ಮಾಂಡಳಿಕರಾಗಿ ಆಳಿ ಅನಂತರ ಸ್ವತಂತ್ರ ರಾಜ್ಯ ಸ್ಥಾಪಿಸಿ ಇತಿಹಾಸದಲ್ಲಿ ಹೆಸರು ಮಾಡಿದ್ದು ಮಂಗಳವಾಡದ ಮೂಲಕವೇ. ಕಲಚುರಿಗಳ ಬಹುತೇಕ ಶಾಸನಗಳೆಲ್ಲ ಕನ್ನಡದಲ್ಲಿರುವುದು ಅವರ ಕನ್ನಡ ಪ್ರೇಮಕ್ಕೆ ಸಾಕ್ಷಿ.

**ಮಂಗಳವಾಡದಲ್ಲಿ ರೇವಣಸಿದ್ಧ!**

ಆಚಾರ್ಯ ರೇವಣಸಿದ್ಧರಿಗೆ ವೀರಶೈವಧರ್ಮದ ಇತಿಹಾಸದಲ್ಲಿ ವಿಶಿಷ್ಟವಾದ ಸ್ಥಾನಮಾನವಿದೆ. ರೇವಣಸಿದ್ಧರು ಚಾರಿತ್ರಿಕ ವ್ಯಕ್ತಿ. ಹನ್ನೊಂದನೆಯ ಶತಮಾನದ ವೀರಶೈವ ಉತ್ಕ್ರಾಂತಿಯಲ್ಲಿ ಅವರದು ದೊಡ್ಡ ಹೆಸರು. ರೇವಣಸಿದ್ಧರು ಮಂಗಳವಾಡದಲ್ಲಿ ಬಹುಕಾಲ ನೆಲೆಸಿದ್ದರೆಂಬುದಕ್ಕೆ ಹರಿಹರ ಕವಿಯ ಕೃತಿಗಳಲ್ಲಿ ಉಲ್ಲೇಖ ಸಿಗುತ್ತದೆ. ಶ್ರೀಶೈಲ, ಪೊಟ್ಟಲಕೆರೆ, ಮುದನೂರು, ಮಂಗಳವಾಡ, ಕಂದಾರ, ಕೊಂಡಗುಳಿ ಇವು ಹನ್ನೊಂದನೆಯ ಶತಮಾನದ ವೀರಶೈವ ಕ್ರಾಂತಿಯ ಕೇಂದ್ರಗಳಾಗಿದ್ದವು. ಅನುಭಾವಗೋಷ್ಠಿ, ಚಂಗಣಗಿಲ ಮಂಟಪ, ಕಂದಾರ ಗುರುಮಠ ಇವು ಗಮನಾರ್ಹವಾದವುಗಳು. ಚಂದ್ರಗುಂಡ ಶಿವಾಚಾರ್ಯರು. ದೇವರ ದಾಸಿಮಯ್ಯ, ರೇವಣಸಿದ್ಧ ಶಿವಾಚಾರ್ಯರು, ಮರುಳಸಿದ್ಧ ಶಿವಾಚಾರ್ಯರು, ಉರಿಲಿಂಗದೇವ ಶಿವಾಚಾರ್ಯ, ಕೊಂಡಗುಳಿ ಕೇಶಿರಾಜದಣ್ಣಾಯಕ ಇವರು ಉತ್ಕ್ರಾಂತಿಯ ಉದ್ಯಮದಲ್ಲಿ ಉದಾತ್ತರು ಎಂದು ಜ. ಚ. ನಿ. ಅವರು ಮಂಗಳವಾಡದ ಮಹತ್ವ ಹಾಗೂ ರೇವಣಸಿದ್ಧರ ವ್ಯಕ್ತಿತ್ವವನ್ನು (ವೀರಶೈವ ಉತ್ಕ್ರಾಂತಿ ೧೯೮೪. ಪುಟ ೨೨೭) ಎತ್ತಿ ಹಿಡಿದಿದ್ದಾರೆ. ದಕ್ಷಿಣ ಮಹಾರಾಷ್ಟ್ರದ ಭಾಗದಲ್ಲಿ ರೇವಣಸಿದ್ಧರು ಬಸವಣ್ಣನವರಿಗಿಂತ ತುಸು ಮುಂಚೆಯೇ ವೀರಶೈವ ಸಂಸ್ಕೃತಿಯ ಪ್ರಚಾರವನ್ನು ಆರಂಭಿಸಿದ ಅಂಶ ವಿವಿಧ ಮೂಲಗಳಿಂದ ತಿಳಿದುಬರುತ್ತದೆ.

ಭಕ್ತಿ ಭಂಡಾರಿ ಬಸವಣ್ಣನವರು ವೀರಶೈವ ಮತಸ್ಥಾಪಕರಲ್ಲ. ನಿಜವಾಗಿಯೂ ಅವರು ವೀರಶೈವ ಮತೋದ್ಧಾರಕರು. ಲಿಂಗವಂತ ಧರ್ಮದ ಕಲ್ಯಾಣ ಕಾರ್ಯವು ಬಸವಣ್ಣನರಿಗಿಂತ ಮುಂಚಿತವಾಗಿಯೇ ಆರಂಭವಾಗಿತ್ತು. ಆ ಕೆಲಸದಲ್ಲಿ ಭಾಗಿಯಾದವರಲ್ಲಿ ಆಚಾರ್ಯ ರೇವಣಸಿದ್ಧರದು ಮುಖ್ಯ ಹೆಸರು. ರೇವಣಸಿದ್ಧರು ಬಸವಣ್ಣನ ಕಾರ್ಯದಲ್ಲಿ ಮುಂಬಲ ಬೆಂಬಲವಾಗಿದ್ದರು. ವೀರಶೈವಧರ್ಮದ ಇತಿಹಾಸದಲ್ಲಿ ಆಚಾರ್ಯ ರೇವಣಸಿದ್ಧ ಹಾಗೂ ಅವರ ಮಗ ರುದ್ರಮುನಿ ಅವರ ಸ್ಥಾನ ಮಹತ್ವದ್ದು, ಎತ್ತರದ್ದು. ಭೀಮಾತೀರದಲ್ಲಿರುವ ಮಾಸನೂರು ರೇವಣಸಿದ್ಧರ ಸ್ಥಾನವಾದರೆ ಅವರ ಮಗ ರುದ್ರಮುನಿಯ ಸ್ಥಾನ ಸಿದ್ಧನಕೆರೆ ಆಗಿದೆ. ಮಾಸನೂರು ಸಿದ್ಧನಕೆರೆಗಳು ಮಂಗಳವಾಡಕ್ಕೆ ಸಮೀಪದಲ್ಲಿದ್ದ ಗ್ರಾಮಗಳು ಎಂಬುದಾಗಿ ಸಿಂಪಿಲಿಂಗಣ್ಣ ಅವರು (ಅದೇ ಕೃತಿ ಪುಟ. ೧೬೯) ಅಭಿಪ್ರಾಯಪಟ್ಟಿದ್ದಾರೆ. ರೇವಣಸಿದ್ಧರ ಕುರಿತು ಅನೇಕ ಕನ್ನಡ ಕವಿಗಳು ಕಾವ್ಯ ರಚನೆ ಮಾಡಿದ್ದಾರೆ. ಅವರ ಕುರಿತು ಸಾಕಷ್ಟು ಐತಿಹ್ಯಗಳು, ಜನಪದ ಗೀತೆಗಳು, ಭಕ್ತಿಗೀತೆಗಳು ಇಂದಿಗೂ ಚಾಲ್ತಿಯಲ್ಲಿವೆ.

ಆಚಾರ್ಯ ರೇವಣಸಿದ್ಧರು ಮಂಗಳವಾಡಕ್ಕೆ ಹೋಗಿ ಬಿಜ್ಜಳರಾಯನ ಅರಮನೆಯಲ್ಲಿ ಮಹಿಮೆ ತೋರಿದ ವಿಷಯ. ಬಿಜ್ಜಳ ಮಂಗಳವಾಡದಲ್ಲಿ ಚಕ್ರವರ್ತಿಯಾಗಿ ಆಡಳಿತ ನಡೆಸುತ್ತಿದ್ದ ವಿಚಾರ ಹರಿಹರನ ರೇವಣಸಿದ್ಧೇಶ್ವರ ರಗಳೆಯಲ್ಲಿ

ವಿವರವಾಗಿ ಬಂದಿದೆ. ರೇವಣಸಿದ್ಧರು ಬಿಜ್ಜಳನ ಅಳಿಯನಾದ ಪ್ರಸಂಗವನ್ನು ಸವಿಸ್ತಾರವಾಗಿ ಹರಿಹರ ತನ್ನ ಕೃತಿಯಲ್ಲಿ ನಿರೂಪಿಸಿದ್ದಾನೆ. ರೇವಣಸಿದ್ಧರ ಮಾಸನೂರು ಭೀಮಾತೀರದಲ್ಲಿದೆ. ನದಿಯಲ್ಲೊಂದು ದೊಡ್ಡ ಮಡುವಿದೆ. ಆ ಮಡುವಿನಲ್ಲಿ ಸುರಗಿಯೊಂದಿದೆ ಎಂಬ ಸಂಗತಿ ಬಿಜ್ಜಳನ ಕಿವಿಗೆ ಬಿತ್ತು. ಇನ್ನೇನು ಅದನ್ನು ಪಡೆಯಲೇಬೇಕು ಎಂಬ ಹಂಬಲವು ಆತನಲ್ಲಿ ಉಂಟಾಯಿತು. ಹೇಗೆ ಪಡೆಯುವುದು ಅದನ್ನು ಮೋಡಿ ಮಾಟಗಳನ್ನು ಬಲ್ಲ ಸಿದ್ಧಪುರುಷನೊಬ್ಬ ದೊರೆಗೆ ಸಿಕ್ಕನು. ಅವನ ಹೆಸರು ಖರ್ಪರಸಿದ್ಧ ಮಾಸನೂರ ಮಡುವಿನೊಳಗೆ ಸುರಗಿಯನ್ನು ಪಡೆಯುವ ಉಪಾಯವನ್ನು ಅವನು ದೊರೆಗೆ ಹೇಳಿಕೊಟ್ಟನು. ಅದೇನೆಂದರೆ ಹನ್ನೆರಡು ಸಾವಿರ ಕನ್ನಿಕೆಯರನ್ನು ಬಲಿಕೊಡಬೇಕು. ಈ ಮಾತು ದೊರೆಗೆ ಸಮ್ಮತವೂ ಆಯಿತು. ಅಷ್ಟೊಂದು ಜನ ಕನ್ನಿಕೆಯರನ್ನು ಸೆರೆ ಹಿಡಿದನು. ಅಲ್ಲದೆ ಬಲಿಕೊಡಲು ಸಿದ್ಧನಾದ ಆ ಸಮಯದಲ್ಲಿ ರೇವಣಸಿದ್ಧರು ವಾರಾಣಾಸಿಯಲ್ಲಿದ್ದರು.

ಅವರಿಗೆ ಮಾಸನೂರ ಭಕ್ತರ ಆರ್ತನಾದ ಕೇಳಿತು. ಮರುಕ್ಷಣ ಆಕಾಶಮಾರ್ಗದಿಂದ ಅವರು ಹೊರಟೇಬಿಟ್ಟರು. ಮಂಗಳವಾಡದಲ್ಲಿ ಇಳಿದವರೇ ಮೊದಲು ಆ ಕನ್ನಿಕೆಯರನ್ನು ಸೆರೆ ಬಿಡಿಸಿದರು. ಬಳಿಕ ಚಕ್ರವರ್ತಿ ಬಿಜ್ಜಳನಿಗೆ ಸುರಗಿಯ ಮಹಿಮೆಯನ್ನು ತೋರಿದರು. ಅದನ್ನು ಕಂಡು ದೊರೆ ರೇವಣಸಿದ್ಧರಿಗೆ ತಲೆ ಬಾಗಿದನು. ಅವರನ್ನು ಪೂಜಿಸಿದನು ಅಷ್ಟೇ ಅಲ್ಲ ರೇವಣಸಿದ್ಧರಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು. ಹೀಗೆ ರೇವಣಸಿದ್ಧರು ದೊರೆಯ ಅಳಿಯನಾಗಿ ರಾಜ ವೈಭವವನ್ನು ಅನುಭವಿಸಿದನು (ಸಿಂಪಿ ಲಿಂಗಣ್ಣ, ೧೯೮೨, ಪುಟ ೧೬೯-೧೭೦).

ಇದಲ್ಲದೆ ರೇವಣಸಿದ್ಧರು ಕಂಚಿಯಲ್ಲಿ ದೊರೆ ರಾಜೇಂದ್ರ ಚೋಳನ ಮಗಳನ್ನು ಮದುವೆಯಾಗಿ ಸತಿಯೊಂದಿಗೆ ಮಂಗಳವಾಡಕ್ಕೆ ತೆರಳಿದರು. ಚೋಳಪುತ್ರಿಯಲ್ಲಿ ರುದ್ರಮುನಿ ಜನಿಸಿದ. ಅವನಿಗೆ ವೀರಶೈವ ದೀಕ್ಷೆ ನೀಡಿದರು. ಮಂಗಳವಾಡದಲ್ಲಿ ತಂದೆ ಮಕ್ಕಳು ಗುರು-ಶಿಷ್ಯರಾಗಿ ಕೆಲವು ಕಾಲ ಸುಖದಲ್ಲಿ ಕಳೆದರು. ಮುಂದೆ ರೇವಣಸಿದ್ಧರು ಹಾವಿನಹಾಳಕ್ಕೆ ತೆರಳಿ ಕಲ್ಲಯ್ಯನಿಗೆ ರುದ್ರಮುನಿಯಿಂದ ದೀಕ್ಷೆ ಕೊಡಿಸಿದರು. ಸೊನ್ನಲಿಗೆಯಲ್ಲಿ ಮುಪ್ಪಿಗೀಡಾದ ಮಕ್ಕಳಿಲ್ಲದ ಸುಗ್ಗವ್ವೆ ಮುದ್ದಗೌಡರನ್ನು ಆಶೀರ್ವದಿಸಿದನು. ಅವರ ಮಗುವಾಗಿ ಸಿದ್ಧರಾಮ ಜನಿಸುತ್ತಾನೆ. ಹೀಗೆ ರೇವಣಸಿದ್ಧರು ಮಂಗಳವಾಡದಲ್ಲಿ ನೆಲೆಸಿ ತಮ್ಮ ಮಹಿಮೆಯನ್ನು ಮೆರೆದ ಸಂಗತಿ ವಾಸ್ತವವೇ ಆಗಿರಬೇಕು. ಇಂದಿಗೂ ಮಂಗಳವಾಡ, ಮಾಸನೂರು, ಸೊಲ್ಲಾಪುರ(ಸೊನ್ನಲಿಗೆ), ಕೊಲ್ಲಾಪುರ, ಸಿದ್ಧನಕೆರೆ, ಸಿರಿವಾಳ ಮೊದಲಾದ ಕಡೆ ರೇವಣಸಿದ್ಧರ ದೇವಾಲಯಗಳಿರುವುದನ್ನು ಕಾಣಬಹುದು. ಬಸವಣ್ಣ ಮಂಗಳವಾಡಕ್ಕೆ ಬರುವ ಹೊತ್ತಿಗೇ ಅಲ್ಲಿ ವೀರಶೈವಧರ್ಮಕ್ಕೆ ಹೊಸಕಳೆ ಬಂದಿರಬಹುದಾದ ಸಾಧ್ಯತೆಯನ್ನು ಅಲ್ಲಗಳೆಯಲಾಗದು.

**ಮಂಗಳವಾಡದಲ್ಲಿ ಬಸವಣ್ಣ**

ಕಲ್ಯಾಣವೇ ಬಸವಣ್ಣನವರ ಕರ್ಮಭೂಮಿಯಾದರೂ ಅವರು ಕೆಲ ಸಮಯ ಮಂಗಳವಾಡದಲ್ಲಿದ್ದರೆಂಬುದು ಚಾರಿತ್ರಿಕ ಸಂಗತಿ. ಬಸವಣ್ಣ ತಮ್ಮ ಆರಂಭದ ದಿನಗಳಲ್ಲಿ ಮಂಗಳವಾಡದಲ್ಲಿ ಕಲಚುರಿ ದೊರೆ ಬಿಜ್ಜಳನ ಆಸ್ಥಾನದಲ್ಲಿ ಅರ್ಥಮಂತ್ರಿಯಾಗಿ ಬೊಕ್ಕಸದ ಭಂಡಾರಿಯಾಗಿ ಕೆಲಸ ಮಾಡಿದ ವಿವರ ಕನ್ನಡ ಸಾಹಿತ್ಯ ಕೃತಿಗಳಲ್ಲಿ, ಬಸವಣ್ಣನವರ ವಚನಗಳಲ್ಲಿ ದಾಖಲಾಗಿದೆ. ಹನ್ನೆರಡನೆಯ ಶತಮಾನದ ಆರಂಭದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ವೀರಶೈವ ಧರ್ಮದ ಪುನರುತ್ಥಾನ ಕಾರ್ಯ ಚಾಲನೆ ಪಡೆಯಿತು. ಹರಿಹರನ ಬಸವರಾಜ ದೇವರ ರಗಳೆಯಲ್ಲಿ ಬಸವಣ್ಣನ ಬದುಕಿಗೆ ಸಂಬಂಧಿಸಿದ ಅನೇಕ ಚಾರಿತ್ರಿಕ ಅಂಶಗಳು ದಾಖಲಾಗಿವೆ. ಹರಿಹರನ ಪ್ರಕಾರ ಬಸವಣ್ಣ ಸಂಗಮೇಶ್ವರನ ಸೂಚನೆಯಂತೆ ಮಂಗಳವಾಡಕ್ಕೆ ಬರುತ್ತಾನೆ. ಅದು ಇಂತಿದೆ.

**ಬಸವ ಮನೋರಥಂ ನಿನಗೆ ಸಂದುದು ನಿನ್ನನಗಲ್ವದಿಲ್ಲ ಕೇ**
**ಳ್ವಸುಮತಿಗೆಯ್ದೆ ಪೂಣ್ದು ಮೆರೆದಪ್ಪುವು ಮಂಗಳವಾಡದಲ್ಲಿ ಚಿ**
**ತಿಸದೆ ಸಮಸ್ತ ಜಂಗಮಕ್ಕೆ ಮಾಡುತೆ ಬಿಜ್ಜಳರಾಯನಿಂದೆ ವಂ**
**ದಿಸಿಕೊಳುತಿರ್ಪುದೆಂದು ಬಸವಂ ಗುಸುರ್ದಂ ಗುರು ಸಂಗಮೇಶ್ವರಂ**

ಬಸವಣ್ಣ ಮಂಗಳವಾಡದಪುರಪ್ರವೇಶ ವಿವರವಿಂತಿದೆ

**ಮೃಡನೆ ಶರಣೆನುತ ಮಂಗಳವಾಡಮಂ ಪೊಕ್ಕು**
**ಪಟ್ಟಣದ ಕೇರಿ ಕೇರಿಗಳೊಳಗೆ ನಡೆವುತಂ**
.. .. .. .. .. .. ..
**ಬಂದು ಬಿಜ್ಜಳರಾಯನರಮನೆಗೆ ನಡೆವುತಂ**

ಬರುವ ವಿವರಣೆ ಸತ್ಯಾಂಶಗಳಿಂದ ಕೂಡಿದೆ. ಅಷ್ಟೇ ಅಲ್ಲ ಬಿಜ್ಜಳನ ಅರ್ಥಮಂತ್ರಿಯಾಗಿ ಆತ ಕೆಲಸ ಮಾಡಿದ್ದನ್ನು ಹರಿಹರ ಹೀಗೆ ಅಭಿವ್ಯಕ್ತಪಡಿಸಿದ್ದಾನೆ ತನ್ನ ರಗಳೆಯಲ್ಲಿ,

**ಬಸವಂ ಸಂಗವರ ಪ್ರಸಾದಂ ಮುಖನಾಗುತ್ತೆಯ್ದೆ ಒಂದಾದ ಸಂ**
**ತಸದಿಂ ಮಂಗಳವಾಡ ದೊಳ್ಪನಕ ಭಂಡಾರಾಜ್ಞೆಯಿಂ ದಂಡನಾ**
**ಥ ಸಮಗ್ರ ಪ್ರಭುವೃತ್ತಿಯಂ ಸಕಳ ಸಂಪದ್ವೈಭವಾಚಾರ್ಯದೊಂ**
**ದೆಸೆವಂ ಬಿಜ್ಜಳರಾಯನಿಂದೆ ಪಡೆದಂ ದಂಡೇಶ ದಿಕ್ಕುಂಜರಂ**

ಬಸವಣ್ಣ ಮಂಗಳವಾಡದಲ್ಲಿ ಬೊಕ್ಕಸದ ಭಂಡಾರಿಯಾಗಿ ಕೆಲಸ ಮಾಡಿದ್ದು ಐತಿಹಾಸಿಕ ಘಟನೆ. ಹೀಗಾಗಿ ಬಸವಣ್ಣ ಮಂಗಳವಾಡದಲ್ಲಿ ಕೆಲವು ವರ್ಷ ನೆಲೆಸಿದ್ದ ಅಂಶ ಸ್ಪಷ್ಟವಾಗುತ್ತದೆ. ಸಾಕಷ್ಟು ಮಂದಿ ಜಂಗಮರು ಬಸವಣ್ಣನವರ ಬೆಂಬಲಕ್ಕಿದ್ದುದು ಹರಿಹರನ ರಗಳೆಯಿಂದ ತಿಳಿದುಬರುತ್ತದೆ.

ಬಸವಣ್ಣ ಮಂಗಳವಾಡಕ್ಕೆ ಬಂದು ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಪದವಿಯನ್ನು ಸ್ವೀಕರಿಸಿದ ಬಳಿಕ ವೀರಶೈವ ಧರ್ಮದ ಪುನರುತ್ಥಾನ ಕಾರ್ಯವನ್ನು ಇಲ್ಲಿಂದಲೇ ಆರಂಭಿಸಿರುವ ಸಾಧ್ಯತೆಯನ್ನು ಅಲ್ಲಗೆಳೆಯಲಾಗದು. ಬಸವಣ್ಣ ಮಂಗಳವಾಡಕ್ಕೆ ಬಂದು ಮಂತ್ರಿಪದವಿಗೇರಿದ್ದು* ಅವನ ವೈಯಕ್ತಿಕ ಬದುಕಿನ ಮಹತ್ವದ ಘಟ್ಟ. ವೀರಶೈವಧರ್ಮದ ಇತಿಹಾಸದಲ್ಲಿಯೂ ಮಂಗಳವಾಡಕ್ಕೆ ಒಂದು ಮಹತ್ವದ ಸ್ಥಾನಮಾನ ಇದರಿಂದ ಪ್ರಾಪ್ತವಾಗುತ್ತದೆ. ಹರಿಹರ ರಾಘವಾಂಕರ ಕೃತಿಗಳು ಇತಿಹಾಸ ಪ್ರಧಾನ ಚರಿತ್ರೆಗಳು (ಕಲಬುರ್ಗಿ,ಎಂ.ಎಂ, ೧೯೮೮, ಪುಟ ೧೨೬) ಎಂಬ ಮಾತು ನಿಜವೇ ಆಗಿದೆ. ಕಲ್ಯಾಣಕ್ಕಿಂತ ಬಸವಣ್ಣನ ಮೊದಲಿನ ಕರ್ಮಭೂಮಿ ಮಂಗಳವಾಡವಾಗಿರುವ ಸಾಧ್ಯತೆ ಇದೆ. ಈ ಕುರಿತು ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ. ಮಹಾರಾಷ್ಟ್ರದ ಕನ್ನಡ ಶಾಸನಗಳಲ್ಲಿ ಬಸವಣ್ಣನ ಉಲ್ಲೇಖ ಸಿಗದಿದ್ದರೂ ಚಕ್ರವರ್ತಿಯಾದ ನಂತರವೂ ಬಿಜ್ಜಳ ಮಂಗಳವಾಡದಲ್ಲಿ ಕೆಲವು ಕಾಲ ಆಡಳಿತ ನಡೆಸಿದ್ದನ್ನು ಅವು ಹೇಳುತ್ತವೆ. ಬಸವಣ್ಣನವರ ವಚನಗಳಲ್ಲಿ ಮಂಗಳವಾಡದ ಉಲ್ಲೇಖ ಬಂದಿಲ್ಲವಾದರೂ ಬಿಜ್ಜಳನ ಮಂತ್ರಿಯಾಗಿ ಕೆಲಸ ಮಾಡಿದ ಪ್ರಸ್ತಾಪ ಬಂದಿದೆ.

೧) **ಬಿಜ್ಜಳನ ಭಂಡಾರ ಏನಗೇಕಯ್ಯ**
೨) **ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯ**
೩) **ಆನೀ ಬಿಜ್ಜಳಂಗೆ ಅಂಜುವೆನೆ?**

ಬಸವಣ್ಣ ಮಂಗಳವಾಡದಲ್ಲಿದ್ದ ಕಾಲವನ್ನು ಶೋಧಿಸುವ ಪ್ರಯತ್ನವನ್ನು ವಿದ್ವಾಂಸರು ಮಾಡಿದ್ದಾರೆ. Basavesvara lived at Mangalavedha for over two decades roughly from 1132 to 1152. A.D (Desai; P.B. Basavesvara and his times, 1968 page. No 352.)

ಪಿ. ಬಿ.ದೇಸಾಯಿ ಅವರ ಪ್ರಕಾರ ಬಸವಣ್ಣ ಮಂಗಳವಾಡದಲ್ಲಿ ಎರಡು ದಶಕಗಳ ಕಾಲ ಇದ್ದಿರುವ ಸಾಧ್ಯತೆಯ ಬಗ್ಗೆ ಹೇಳಿದ್ದಾರೆ. ಆತ ಮಂಗಳವಾಡದಲ್ಲಿ ಎರಡು ದಶಕಗಳ ಕಾಲ ಇದ್ದ ಎಂಬ ಮಾತನ್ನು ಒಪ್ಪುವುದಕ್ಕೆ ಯಾವುದೇ ಆಧಾರ ಸಿಗುವುದಿಲ್ಲ. ಕಲಚುರಿಗಳ ಸಾಮ್ರಾಜ್ಯ ಅಸ್ತಿತ್ವದಲ್ಲಿದ್ದುದೇ ಬಹಳ ಕಡಿಮೆ ಸಮಯ. ಹೀಗಿರುವುದರಿಂದ ಬಸವಣ್ಣ ಕೆಲಕಾಲ ಮಂಗಳವಾಡವಲ್ಲಿದ್ದ ಎಂದು ನಂಬಬಹುದು. ಕಾವ್ಯಗಳೂ ಇದನ್ನೇ ಹೇಳುತ್ತವೆ.

ಬಸವಣ್ಣ ಕಲ್ಯಾಣವನ್ನು ವಿಕ್ರಮದಲ್ಲಿ ಪ್ರವೇಶಿಸಿ ರಾಕ್ಷಸದಲ್ಲಿ ತ್ಯಜಿಸಿದನೆಂದು ಚೆನ್ನಬಸವಣ್ಣ ರುದ್ರಮುನಿ ಮತ್ತು ಚನ್ನಪ್ಪ ಕವಿಗಳು ಹೇಳುತ್ತಾರೆ. ಇದರಿಂದ ಸಿದ್ಧಾರ್ಥಿಯಲ್ಲಿ ಜನಿಸಿದ ಬಸವಣ್ಣ ರಾಕ್ಷಸದಲ್ಲಿ ಐಕ್ಯವಾಗುವಾಗ ೫೮ ವರ್ಷದವರಿದ್ದರೆನ್ನಲಾಗಿದೆ. (ಕಲಬುರ್ಗಿ ಎಂ. ಎಂ. ೧೯೮೮, ಮಟ ೨೩೬). ಕಲ್ಯಾಣ ಜೀವನದ ಮೂವತ್ತಾರು

ವರ್ಷಗಳಲ್ಲಿ ಅಥವಾ ಅದಕ್ಕೂ ತುಸು ಮೊದಲು ಬಸವಣ್ಣ ಮಂಗಳವಾಡದಲ್ಲಿ ಕೆಲವು ವರ್ಷ ಇದ್ದಿರಬಹುದಾದ ಸಾಧ್ಯತೆಯನ್ನು ಊಹಿಸಲಾಗಿದೆ. ಬಸವಣ್ಣನವರ ನೇತೃತ್ವದಲ್ಲಿ ನಡೆದ ಕಲ್ಯಾಣಕ್ರಾಂತಿಯ ಪ್ರಭಾವ ಮಂಗಳವಾಡದ ಮೇಲೂ ಆಯಿತು.

ಕಲಚುರಿಗಳು ವೀರಶೈವ ಧರ್ಮದ ಪ್ರಗತಿಗೆ ಕೊಟ್ಟ ಕಾಣಿಕೆ ಮಹತ್ವಪೂರ್ಣವಾದುದು. ಇದರಿಂದಾಗಿ ಇಂದಿನ ಮಹಾರಾಷ್ಟ್ರದ ಭಾಗದ ಕಾಳಾಮುಖ ದೇವಾಲಯಗಳೆಲ್ಲ ವೀರಶೈವ ದೇವಾಲಯಗಳಾಗಿ ರೂಪುಗೊಂಡವು. ಬಸವಣ್ಣ ಮಂಗಳವಾಡಕ್ಕೆ ಬಂದು ಹೋದುದರಿಂದ ಅಲ್ಲಿ ಹೊಸ ವಿದ್ಯುತ್ ಸಂಚಾರ ಉಂಟಾದುದು ಉಲ್ಲೇಖನೀಯ ಅಂಶ. ಹರಿಹರ ವಿರಚಿತ 'ಬಸವರಾಜದೇವರ ರಗಳೆ' ಬಸವಣ್ಣನವರ ಕುರಿತು ರಚಿತವಾದ ಮೊಟ್ಟಮೊದಲ ಕಾವ್ಯಕೃತಿ. ಹರಿಹರನ ಈ ರಗಳೆ ಇತಿಹಾಸದ ಹಿನ್ನೆಲೆಯಲ್ಲಿ ರಚಿತವಾಗಿದೆ. ಸಿದ್ಧದಂಡಾಧಿಪ ಬಿಜ್ಜಳನ ಆಸ್ಥಾನದಲ್ಲಿ ಮಂಗಳವಾಡದಲ್ಲಿ ಭಂಡಾರದ ಅಧಿಕಾರಿಯಾಗಿದ್ದ, ಆತನೂ ವೀರಶೈವ ಧರ್ಮಕ್ಕೆ ಸೇರಿದವನಾಗಿದ್ದ. ಬಸವಣ್ಣ ತಮ್ಮ ಕುಲ ಗೋತ್ರಗಳವನೇ ಎಂದು ತಿಳಿದು ಅವನ ಸೂಕ್ಷ್ಮಮತಿಗೆ ಮೆಚ್ಚಿ ಆಸ್ಥಾನದ ಭಂಡಾರದಲ್ಲಿ ಗಣಕನನ್ನಾಗಿ ನೇಮಿಸಿಕೊಳ್ಳುವಂತೆ ಸಿದ್ಧದಂಡಾಧಿಪನೇ ಬಿಜ್ಜಳನಲ್ಲಿ ಶಿಫಾರಸು ಮಾಡುತ್ತಾನೆ.

ಬಸವಣ್ಣ ಮಂಗಳವಾಡದಲ್ಲಿದ್ದಾಗಲೂ ತನ್ನ ಸಂಪಾದನೆಯ ಬಹುಭಾಗವನ್ನು ಜಂಗಮರ ದಾಸೋಹದಲ್ಲಿ ವ್ಯಯಮಾಡುತ್ತಿದ್ದನೆಂಬ ಅಂಶ ಹರಿಹರನ ರಗಳೆಯಲ್ಲಿ ದಾಖಲಾಗಿದೆ. ಬಸವಣ್ಣ ಜಾತಿ ಪಂಥಗಳ ವ್ಯತ್ಯಾಸವನ್ನು ಮಾಡದೆ ಭಕ್ತರನ್ನು ಆದರಿಸುತ್ತಿದ್ದನು. ಇದರಿಂದ ಆತನ ವರ್ಚಸ್ಸು ಬೆಳೆದು ವೀರಶೈವ ಭಕ್ತರಲ್ಲಿ ತುಂಬ ಪ್ರಖ್ಯಾತನಾದನು. ದೂರದ ಸ್ಥಳಗಳಿಂದ ಈತನನ್ನು ಕಾಣಲು ಭಕ್ತರು ಬರತೊಡಗಿದರು. ಅವರನ್ನೆಲ್ಲ ಅತ್ಯಂತ ಗೌರವಾದರಗಳಿಂದ ಬಸವಣ್ಣ ಉಪಚರಿಸಲು ತಮ್ಮ ಸಂಪತ್ತನ್ನು ವೆಚ್ಚ ಮಾಡುವೆನೆಂದು ನಿರ್ಧರಿಸಿ ಇತೋಪ್ಯತಿಶಯವಾಗಿ ಅದನ್ನು ಮುಂದುವರಿಸಿದರು.

(Thus, with in a short period after his arival at Mangalaveda, Basavesvara rose to a high Position in the court of Bijjala who reposed full trust in him and conferred honours upon him befitting his states P. B. Deasi : Basavesvara and his times, 1968 page No. 180)

ಈತನ್ಮಧ್ಯೆ (ಇದು ಯಾವಾಗ ಆಯಿತು ಎಂದು ಹೇಳಲು ಸಾಧ್ಯವಿಲ್ಲ) ಮಹತ್ವಾಕಾಂಕ್ಷಿಯಾದ, ಸಾಮಂತನಾಗಿದ್ದ ಬಿಜ್ಜಳನು ಸು. ಕ್ರಿ.ಶ. ೧೧೬೨ರ ಹೊತ್ತಿಗೆ ತನ್ನ ಅಧಿಪತಿಯಾದ: ಚಾಲುಕ್ಯ ಸಿಂಹಾಸನಾಧಿಪತಿಯಾದ ತೈಲಪ ಮತ್ತಿತರರನ್ನು ಕೊಂದು ತಾನೇ ಅಧಿಪತಿಯಾದ. ಅಲ್ಲಿಂದ ಮುಂದೆ ಚಾಲುಕ್ಯರ ರಾಜಧಾನಿಯಾಗಿದ್ದ ಕಲ್ಯಾಣಕ್ಕೆ ತನ್ನ ರಾಜಧಾನಿಯನ್ನು ಮಂಗಳವಾಡದಿಂದ ವರ್ಗಾಯಿಸಿದ. ಬಸವಣ್ಣ ಈಗ ಚಕ್ರವರ್ತಿಯ ಭಂಡಾರಾಧಿಪತಿಯಾಗಿ ಮೇಲಕ್ಕೇರಿದರು (ನಾರಾಯಣ.ಪಿ.ವಿ ೧೯೮೧ ಪುಟ ೨೩-೨೪) ಎಂಬ ಮಾತು ಐತಿಹಾಸಿಕ ಸತ್ಯ.

ಶಿವನ ಆಜ್ಞಾನುಸಾರವಾಗಿ ಬಸವಣ್ಣನು ಮಂಗಳವಾಡಕ್ಕೆ ಬರುವ ಮುಂಚೆ ಬಸವಣ್ಣ ತನ್ನ ಧಾರ್ಮಿಕ ಮಾರ್ಗವನ್ನು ನಿರ್ಧರಿಸಿದ್ದನೆಂದು ವಿದಿತವಾಗುತ್ತದೆ. ಬಸವಣ್ಣ ಮಂಗಳವಾಡಕ್ಕೆ ಕರಣಿಕನ ವೇಷಧರಿಸಿ 'ಅಕ್ಷರ ಜ್ಞಾನಮುಂಟನ್ನೆದೆ ಮಾರುವೆಂ' ಎಂದು ನಿರ್ಧರಿಸಿ ಬಂದು ಬಿಜ್ಜಳನ ಕರಣಶಾಲೆಗೆ ಬರುತ್ತಾರೆ. ಅಲ್ಲಿ ಸಿದ್ಧದಂಡಾಧಿಪನೆಂಬ ಭಂಡಾರಾಧಿಕಾರಿ ಲೆಕ್ಕವನು ನೋಡಲು ಬಂದಿದ್ದಾಗ ಗಣಕರು ಎಷ್ಟೇ ಲೆಕ್ಕಾಚಾರ ಮಾಡಿದರೂ ಲೆಕ್ಕವು ತಾಳೆಯಾಗದೇ ಹೋದಾಗ ಬಸವಣ್ಣ ಲೆಕ್ಕ ತಪ್ಪಿದ ಅಂಶವನ್ನು ಸೂಚಿಸಿ ಸರಿಪಡಿಸುತ್ತಾರೆ. ಅದರಿಂದ ಪ್ರೀತನಾದ ಸಿದ್ಧ ದಂಡಾಧಿಪನು ವರುಷಕ್ಕೆ ನೂರೊಂದು ಹೊನ್ನುಗಳ ಸಂಭಾವನೆಯ ಮೇಲೆ ಗಣಕನನ್ನಾಗಿ ನೇಮಿಸಿಕೊಳ್ಳಲು ಬಿಜ್ಜಳನಲ್ಲಿ ಶಿಫಾರಸು ಮಾಡುತ್ತಾನೆ. ಹೀಗೆ ಬಿಜ್ಜಳನ ಭಂಡಾರದಲ್ಲಿ ಗಣಕನಾಗಿ ಸೇರಿದ ಬಸವಣ್ಣ ತಮ್ಮ ಕುಲಗೋತ್ರಗಳವನೇ ಎಂಬುದನ್ನು ತಿಳಿದ ಸಿದ್ಧದಂಡಾಧಿಪನು ತೀರಿಕೊಂಡ ಮೇಲೆ ಆತನೇ ಬಿಜ್ಜಳನ ಅನುಮತಿಯಿಂದ ಅವನ ಸಂಸ್ಕಾರ ಮಾಡುತ್ತಾನೆ. ಅಪುತ್ರಕನಾಗಿದ್ದ ಸಿದ್ಧದಂಡಾಧಿಪನ ಆಸ್ತಿಯಲ್ಲದೆ ಅವನ ಭಂಡಾರಾಧಿಕಾರವೂ ಬಸವಣ್ಣನಿಗೇ ದೊರೆಯಿತು ಎಂಬುದಾಗಿ ಪಿ.ವಿ. ನಾರಾಯಣ ಅವರು

ಹರಿಹರನ ರಗಳೆಯ ಹಿನ್ನೆಲೆಯಲ್ಲಿ ಹೇಳಿದ್ದಾರೆ. ಈ ಮಾತು ಸತ್ಯಕ್ಕೆ ಹತ್ತಿರವಾಗಿದೆ. (ಬಸವೇಶ್ವರರ ಕಾಲ ಪ್ರಭಾವ ಜೀವನ ವ್ಯಕ್ತಿತ್ವ ಇತ್ಯಾದಿ. ಐ.ಬಿ.ಎಚ್. ಪ್ರಕಾಶನ ಬೆಂಗಳೂರು ೧೯೮೭ ಪುಟ ೭೭)ಬಸವಣ್ಣ ಮಂಗಳವಾಡದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿದ್ದಾಗಲೇ ತನ್ನ ಪ್ರತಿಭೆಯಿಂದ ಜಾಣಾಕ್ಷತನದಿಂದ ವೀರಶೈವರ ಪ್ರೀತಿ ವಿಶ್ವಾಸಕ್ಕೆ ಪಾತ್ರನಾಗಿದ್ದ ಅಲ್ಲದೆ ಅಲ್ಲಿನ ವೀರಶೈವ ಬಂಧುಗಳು ಬಸವಣ್ಣನನ್ನು ಬಹು ಗೌರವದಿಂದ ನಡೆಸಿಕೊಂಡಂತೆ ಕಾಣುತ್ತದೆ. ಮಕ್ಕಳಿಲ್ಲದ ಸಿದ್ಧದಂಡಾಧಿಪನಂತೂ ಬಸವಣ್ಣನನ್ನು ತನ್ನ ಮಗನೆಂದೇ ತಿಳಿದು ಆತ್ಮೀಯವಾಗಿ ನೋಡಿಕೊಳ್ಳುತ್ತಾನೆ.

ಸೊನ್ನಲಿಗೆಯ ರೂವಾರಿ ಸಿದ್ಧರಾಮ. ಸಿದ್ಧರಾಮ ಕೈಗೊಂಡ ಸಾಮಾಜಿಕ ಧಾರ್ಮಿಕ ಸಾಂಸ್ಕೃತಿಕ ಕಾರ್ಯಗಳಿಗೆ ರೇವಣಸಿದ್ಧರ ಪ್ರೇರಣೆಯೇ ಕಾರಣ. ಮಂಗಳವಾಡ ವೀರಶೈವ ಧರ್ಮದ ಕೇಂದ್ರವಾಗಿತ್ತೆಂದು ಸಿದ್ಧರಾಮ ವಿರಚಿತ ಒಂದು ವಚನದಿಂದ ಗೊತ್ತಾಗುತ್ತದೆ. ಅದು ಇಂತಿದೆ.

**ಮಂಗಳವಾಡದಲ್ಲಿಪ್ಪ ಲಿಂಗವಂತರಿಗೆಲ್ಲ**
**ಹಿಂಗದೆ ಮೆಲ್ಲಡಿಯ ಪ್ರಭುಲಿಂಗ ತೋರಿ**
**ಲಿಂಗಾಂಗ ಷಟ್ಸ್ಥಲದ ಸಂಗವ ಬೋಧಿಸಿ ಮೆರೆದ**
**ಮಂಗಳಪ್ರಭು ಶರಣ ಯೋಗಿನಾಥ.**

ಇಂದಿನ ಮಹಾರಾಷ್ಟ್ರದಲ್ಲಿ ಹನ್ನೊಂದು ಹನ್ನೆರಡನೆಯ ಶತಮಾನದ ಹೊತ್ತಿಗೆ ಸಾಕಷ್ಟು ಶರಣರು ನೆಲೆಸಿದ್ದರು. ಇದಕ್ಕೆ ಒಂದು ಶಾಸನಾಧಾರವನ್ನು ಕೊಡಬಹುದು. ಕ್ರಿಶ ೧೧೮೫ರ ಬಿಜಾಪುರ ಜಿಲ್ಲೆಯ ತಾಳಿಕೋಟೆ ಶಾಸನದಲ್ಲಿ (SII Vol.XV No.56) ಪರಿಯಳಿಗೆ, ಅಣಿಲೆವಾಡ, ಉಣಕಲ್ಲು, ಸಂಪಗಾವಿ ಅಬ್ಬಲೂರು ಮಾರುಡಿಗೆ ಅಣಂಪೂರು ಕರಹಾಡ ಮಂಗಳವಾಡ ಎಂಬ ಉಲ್ಲೇಖ ಬಂದಿದೆ. ಈ ಎಲ್ಲಾ ಆಧಾರಗಳಿಂದ ಮಹಾರಾಷ್ಟ್ರದ ಸತಾರ, ಸೊಲ್ಲಾಪುರ, ಸಾಂಗ್ಲಿ, ಉಸ್ಮಾನಾಬಾದ್, ಕೊಲ್ಲಾಪುರ ಮೊದಲಾದ ಜಿಲ್ಲೆಗಳಲ್ಲಿ ವೀರಶೈವಧರ್ಮ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿತ್ತೆಂಬುದು ಸ್ಪಷ್ಟವಾಗುತ್ತದೆ. ಬಸವಣ್ಣನವರ ನೇತೃತ್ವದಲ್ಲಿ ನಡೆದ ಕಲ್ಯಾಣಕ್ರಾಂತಿಗೆ ಮಂಗಳವಾಡ ದೊಡ್ಡ ಮಟ್ಟದಲ್ಲಿ ಪ್ರೇರಣೆ ನೀಡಿದೆ ಎಂಬುದರಲ್ಲಿ ಎರಡು ಮಾತಿಲ್ಲ.

ವೀರಶೈವ ಸಂಸ್ಕೃತಿ– ಸಾಹಿತ್ಯಗಳ ಸೃಜನ, ಪರಿಷ್ಕರಣ ಕಾರ್ಯ ಶ್ರೀಶೈಲದಿಂದ ಸೆಲೆಯೊಡೆದು ಪೊಟ್ಟಲಕೆರೆ, ಮುದನೂರು, ಮಂಗಳವಾಡ, ಇಂಗಳೇಶ್ವರ, ಶಿವಗಂಗೆ, ಕೊಲ್ಲಾಪುರ, ಕಂದಾರ, ನಂದವಾಡ, ಹಾವಿನಹಾಳ, ಕೊಂಡಗುಳಿ, ಕಂಚಿ, ಮಾಸನೂರು, ಸಿದ್ಧನಕೆರೆ ಮೊದಲಾದ ಊರುಗಳಿಗೆ ಹಬ್ಬಿ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರಾಂತಗಳಲ್ಲಿ ಹರವಾಗಿ ನಿಲ್ಲುತ್ತದೆ. ಎಂಬ ಜಚನಿ ಅವರ ಮಾತು ನಿಜವೇ ಆಗಿದೆ. ಹೀಗೆ ಮಂಗಳವಾಡ ಕಲಚುರಿಗಳ ರಾಜಧಾನಿಯಾಗಿ, ಧಾರ್ಮಿಕ ಕೇಂದ್ರವಾಗಿ, ಐತಿಹಾಸಿಕ ತಾಣವಾಗಿ, ಶರಣ ಕ್ರಾಂತಿಗೆ ನಾಂದಿ ಹಾಡಿರುವುದು ಉಲ್ಲೇಖನೀಯ ಅಂಶ.

**ಅಡಿಟಿಪ್ಪಣಿಗಳು**

೧. ಪಿ.ಬಿ. ದೇಸಾಯಿ ಅವರು 'ಕರ್ನಾಟಕದ ಕಲಚುರಿಗಳು' ಎಂಬ ಕೃತಿಯನ್ನೇ ರಚಿಸಿದ್ದಾರೆ.
೨. ಮಂಗಳವಾಡ ಕಲಚುರಿಗಳ ರಾಜಧಾನಿಯಾಗಿತ್ತೆಂಬ ಅಂಶವನ್ನು ಮಹಾರಾಷ್ಟ್ರ ಹಾಗೂ ಕರ್ನಾಟಕದ ಮೂವತ್ತಕ್ಕಿಂತ ಹೆಚ್ಚಿನ ಶಾಸನಗಳು ಶ್ರುತಪಡಿಸುತ್ತವೆ.

*****

# ಚೆನ್ನಬಸವಣ್ಣ: ನೆಲೆ-ಹಿನ್ನೆಲೆ

* ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ

ಮಧ್ಯಕಾಲೀನ ವಚನ ಸಾಹಿತ್ಯದ ಅಂಗಣದಲ್ಲಿ ಮೂವರು ವಚನಕಾರರ ಹೆಸರು ಗಣನೀಯವಾದುದು. ಅಲ್ಲಮಪ್ರಭು, ಬಸವಣ್ಣ ಮತ್ತು ಚೆನ್ನಬಸವಣ್ಣ ಇವರು ಬೇರೆ ಬೇರೆ ಕಾರಣಗಳಿಂದಾಗಿ ನಮ್ಮ ಗಮನವನ್ನು ಸೆಳೆಯುತ್ತಾರೆ. ಅಲ್ಲಮಪ್ರಭು ವ್ಯೋಮಮೂರ್ತಿಯಾದರೆ, ಬಸವಣ್ಣ ಜಗನ್ಮೂರ್ತಿ. ಆದರೆ ಇವರಿಬ್ಬರ ಆಂಶಿಕ ಸತ್ವವನ್ನು ಹೊಂದಿದ್ದ ಚೆನ್ನಬಸವಣ್ಣ ತತ್ತ್ವಜಿಜ್ಞಾಸುಮೂರ್ತಿ. ಈತ ಅಲ್ಲಮನಂತೆ ಎಲ್ಲವನ್ನೂ ತತ್ತ್ವೀಕರಿಸಿ ನೋಡಬಲ್ಲ ಹಾಗೂ ಬಸವಣ್ಣನಂತೆ ಸಾಮಾಜೀಕರಣದ ವಿನ್ಯಾಸದಲ್ಲಿಯೂ ಕಾಣಬಲ್ಲ. ಈತನ ವಚನಗಳನ್ನು ನಮ್ಮ ವಿಮರ್ಶಕ ವಿದ್ವಾಂಸರು ಮತೀಯ ಚೌಕಟ್ಟುಗಳ ಅಡಿಯಲ್ಲಿ ವ್ಯಾಖ್ಯಾನಿಸಿ ನಿಲ್ಲಿಸಿದ್ದು ಅರ್ಧಾಂಶಿಕ ಸತ್ಯ. ವಚನಸಾಹಿತ್ಯದಲ್ಲಿ ಈತನ ವಚನಗಳು ಅಷ್ಟು ಸಾಹಿತ್ಯಮೌಲ್ಯವನ್ನು ಹೊಂದಿಲ್ಲದಿದ್ದರೂ ಬೇರೆ ಬೇರೆ ಕಾರಣಗಳಿಂದಾಗಿ ನಮ್ಮ ಗಮನವನ್ನು ಅವು ಸೆಳೆಯುತ್ತವೆಂಬುದನ್ನು ಗಮನಿಸಬೇಕು.

ಚೆನ್ನಬಸವಣ್ಣನು ಜ್ಞಾನಿಗಳಲ್ಲಿ ಜ್ಞಾನಿ ಮಾತ್ರವಲ್ಲ ಆತ ಅವಿರಳಜ್ಞಾನಿ. ಈ ಜ್ಞಾನಿಯ ಗುಣ ಅವನಿಗೆ ಜನ್ಮಜಾತವಾಗಿ ಬಂದದ್ದು. ತನ್ನ ಸಮಕಾಲೀನ ಹಿರಿಯ ವಚನಕಾರ ಮತ್ತು ಕಿರಿಯ ವಚನಕಾರರ ನಡುವೆ ತನ್ನ ಅವಿರಳಜ್ಞಾನಿಯ ವ್ಯಕ್ತಿತ್ವದಿಂದಾಗಿ ವಿಶಿಷ್ಟ ವಚನಕಾರನಾಗಿ ಪಡಿಮೂಡಿದ. ಈತ ಉಳಿದ ಶರಣರಿಗಿಂತಲೂ ವಯಸ್ಸಿನಲ್ಲಿ ಕಿರಿಯನಾದರೂ ತತ್ತ್ವಾರ್ಥದಲ್ಲಿ ಹಿರಿಯ. ಆದರೆ ಈತನು ಸಮಯ, ಸಂದರ್ಭ ಮತ್ತು ಸನ್ನಿವೇಶಗಳಲ್ಲಿ ಆಗಾಗ ಒಡಮೂಡುತ್ತಿದ್ದ ಕ್ಲಿಷ್ಟ ಸಮಸ್ಯೆಗಳನ್ನು ಹಾಗೂ ಬಗೆಬಗೆಯ ಸಂದೇಹಗಳನ್ನು ನಿವಾರಿಸುತ್ತಿದ್ದ ರೀತಿ ಬಹುವಿಶಿಷ್ಟವಾದುದು. ಈ ವಿಶಿಷ್ಟ ಗುಣದಿಂದಾಗಿಯೇ ಹಿರಿ -ಕಿರಿಯ ಶರಣರಲ್ಲಿ ಪ್ರತ್ಯೇಕವಾದ ವ್ಯಕ್ತಿತ್ವವನ್ನು ನಿರ್ಮಾಣಮಾಡಿಕೊಂಡದ್ದು ನಮಗೆ ಎದ್ದು ಕಾಣುವ ಸಂಗತಿ. ಈತ ಅಣ್ಣ ಬಸವಣ್ಣನಿಗೆ ಸೋದರಳಿಯ. ಆದರೆ ಬಸವಣ್ಣನವರ ಸಾಧನೆಯ ಹಾದಿಯಲ್ಲಿ ಅನೇಕ ಎಡರು ತೊಡರುಗಳು ಬಂದಾಗ ಅದನ್ನು ನಿವಾರಿಸುವ ಮಾರ್ಗದರ್ಶಕನೂ ಈತನಾಗಿದ್ದುದು ಒಂದು ಹಿರಿಮೆ. ಕಲ್ಯಾಣಕ್ರಾಂತಿಯ ಸಂದರ್ಭದಲ್ಲಂತೂ ಚೆನ್ನಬಸವಣ್ಣ ವಹಿಸಿದ ಪಾತ್ರ ಇಂದಿಗೂ ಅವಿಸ್ಮರಣೀಯವಾದುದು. ಬಸವಣ್ಣನವರು ಲಿಂಗೈಕ್ಯರಾದ ನಂತರ ಅದನ್ನು ಲೋಕೋದ್ಧಾರದ ರೀತಿಯಲ್ಲಿ ಮುಂದುವರೆಸಿದ ಶ್ರೇಯಸ್ಸು ಚೆನ್ನಬಸವಣ್ಣನಿಗೆ ಸಲ್ಲುತ್ತದೆ.

ಬಸವಕಲ್ಯಾಣದಲ್ಲಿ ಕ್ರಾಂತಿಯ ಬಿರುಗಾಳಿ ಎದ್ದದ್ದು ಸರಿಯಷ್ಟೇ. ಈ ಬಿರುಗಾಳಿಯಲ್ಲಿ ಬಸವಣ್ಣ ಕೂಡಲಸಂಗಮದಲ್ಲಿ ಲಿಂಗೈಕ್ಯನಾದ. ಈ ಕ್ರಾಂತಿಯ ಘಾತಕ್ಕೆ ಭಕ್ತರೂ ಶರಣರೂ ಸಾವನ್ನಪ್ಪಿದರು. ಶರಣರು ರಚಿಸಿದ ವಚನಸಾಹಿತ್ಯದ ಕಟ್ಟುಗಳು ಕ್ರಾಂತಿಕಾರರ, ವಿಧ್ವಂಸಕರ ಕ್ರೂರದೃಷ್ಟಿಗೆ ಸಿಲುಕಿ ಬೆಂಕಿಗೆ ಬಲಿಯಾದವು. ಈ ಸಂದರ್ಭದಲ್ಲಿ ಚೆನ್ನಬಸವಣ್ಣ ವಹಿಸಿದ ಪಾತ್ರ ಬಹಳ ಮಹತ್ತರವಾದುದು. ಈತನ ತಾಯಿ ನಾಗಲಾಂಬಿಕೆ. ಆಕೆಯ ಮಾರ್ಗದರ್ಶನದಲ್ಲಿ ಕೆಲವು ಶರಣರೊಡನೆ ಕ್ರಾಂತಿಕಾರರ ವೈರಿಗಳ ಸೈನ್ಯವನ್ನು ಎದುರಿಸುತ್ತ ಉಳವಿಯ ಮಾರ್ಗವನ್ನು ಹಿಡಿದನು. ಇಂದಿನ ಉತ್ತರಕನ್ನಡ ಜಿಲ್ಲೆಯಲ್ಲಿರುವ ಉಳವಿ ಚೆನ್ನಬಸವಣ್ಣನ ಎರಡನೆಯ ಕಾರ್ಯಕ್ಷೇತ್ರವಾಯಿತು. ಉಳವಿಯು ಅಂದಿನ ಕಾಲಕ್ಕೆ ಒಂದು ಘೋರಾರಣ್ಯ. ಆ ಅರಣ್ಯದಲ್ಲಿ ಶರಣರು ಬರೆದ ವಚನಗಳನ್ನು ರಕ್ಷಿಸಿಟ್ಟರು. ಕಲ್ಯಾಣದ ಮಹಾಮನೆ ಮತ್ತು ಅನುಭವಮಂಟಪದ ಕಾರ್ಯ ಚಟುವಟಿಕೆಗಳೆಲ್ಲ ಉಳವಿಯ ನೆಲದಲ್ಲೇ ಪುನಃ ಆರಂಭಗೊಂಡವು. ಉಳವಿಯು ಬಸವಣ್ಣನವರು ಕಂಡ ಲೋಕೋದ್ಧಾರದ ದ್ವಿತೀಯ ಕಾರ್ಯಕ್ಷೇತ್ರವಾದುದು ಈ ವಿಶಿಷ್ಟ ಸಂದರ್ಭದಲ್ಲಿ ಎಂಬುದು ಅಷ್ಟೇ ಸತ್ಯ.

ಮಧ್ಯಕಾಲೀನ ವಚನಸಾಹಿತ್ಯದ ಸಂದರ್ಭದಲ್ಲಿ ಉಳವಿ ಕ್ಷೇತ್ರವನ್ನು ಕಲ್ಯಾಣದ ಮಹಾಕ್ಷೇತ್ರದಂತೆ ಬೆಳೆಸಿದ ಕೀರ್ತಿ ಚೆನ್ನಬಸವಣ್ಣನಿಗೆ ಸಲ್ಲುತ್ತದೆಯಷ್ಟೆ? ಈತ ತಾತ್ತ್ವಿಕ ಮೂರ್ತಿ ಹೇಗೋ ಹಾಗೆಯೇ ವೀರಮೂರ್ತಿಯೂ ಹೌದು. ಎಲ್ಲ

* ಉಪಕುಲಪತಿಗಳು, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ, ಚಾಮರಾಜೇಂದ್ರ ಸಂಸ್ಕೃತ ಕಾಲೇಜು ಆವರಣ, ಪಂಪ ಮಹಾಕವಿರಸ್ತೆ, ಚಾಮರಾಜಪೇಟೆ, ಬೆಂಗಳೂರು-೫೬೦೦೧೮, ದೂ: ೦೮೦೨೬೭೦೧೩೦೩.

ಶರಣರಿಗೂ ಈತ ದಂಡನಾಯಕ. ಚೆನ್ನಬಸವಣ್ಣನ ಈ ಬಗೆಯ ವ್ಯಕ್ತಿತ್ವ ಉಳಿದ ವಚನಕಾರರಲ್ಲಿ ನಾವು ಕಾಣಲಾರೆವು. ಶರಣರಲ್ಲಿ ಅರಿವನ್ನು ಮೂಡಿಸಿದುದಲ್ಲದೆ ಅವರಲ್ಲಿ ವಚನಗಳ ವಿಕಾಸಕ್ಕೆ ದಾರಿಯನ್ನು ಮಾಡಿಕೊಟ್ಟ ಕೀರ್ತಿ ಈತನಿಗೆ ಸಲ್ಲುತ್ತದೆ. ಬಸವಕಲ್ಯಾಣದಲ್ಲಿ ರಚನೆಗೊಂಡ ವಚನಗಳಿಗೆ ತಾತ್ತ್ವಿಕತೆಯ ಸ್ವರೂಪವನ್ನು ಒದಗಿಸಿಕೊಟ್ಟದ್ದು ಚೆನ್ನಬಸವಣ್ಣನಿಗೆ ಸೇರುತ್ತದೆಂಬುದು ಚಾರಿತ್ರಿಕ ಸತ್ಯ. ಈತನ ಕಾಲದಲ್ಲಿಯೇ ವಚನಗಳಿಗೆ ಸೈದ್ಧಾಂತಿಕ ಸ್ವರೂಪ ದೊರಕಿತು. ಚೆನ್ನಬಸವಣ್ಣನು ರಚಿಸಿದ ಬಹುತೇಕ ವಚನಗಳು ವೀರಶೈವ ಸಿದ್ಧಾಂತವನ್ನು ಪ್ರತಿಮೀಕರಿಸುತ್ತವೆ. ಅಲ್ಲಮಪ್ರಭುಗಳ ನಂತರ ಶೂನ್ಯಪೀಠದ ಚಕ್ರವರ್ತಿಯಾಗಿ ನಿಂತು ಅಲ್ಲಮನ ಕಾರ್ಯವನ್ನು ಎಚ್ಚರಿಕೆಯಿಂದ ನಿರ್ವಹಿಸಿದ್ದು ಚೆನ್ನಬಸವಣ್ಣನ ಹಿರಿಮೆಯಾಗಿದೆ. ಈ ಕಾರಣದಿಂದಾಗಿಯೇ ಹಿಂದಿನ ಕಾಲದ ಶರಣರು ಈತನನ್ನು ಷಟ್‌ಸ್ಥಲ ನಿರ್ಣಯಾಚಾರ್ಯನೆಂದು ಕರೆದು ಗೌರವಿಸಿದ್ದಾರೆ. ಈ ಗೌರವಕ್ಕೆ ಪಾತ್ರನಾಗುವ ಎಲ್ಲಾ ಅರ್ಹತೆಗಳು ಚೆನ್ನಬಸವಣ್ಣನಿಗಿತ್ತು. ಈತ ಷಟ್‌ಸ್ಥಲ ಸಾರ್ವಭೌಮನಲ್ಲ. ಅದರ ಬದಲು ಷಟ್‌ಸ್ಥಲ ನಿರ್ಣಯಾಚಾರ್ಯ. ಈ ಅಂಶವನ್ನು ಇನ್ನಷ್ಟು ವಿವರಿಸಿ ಕೊಳ್ಳಬಹುದು. ಷಟ್‌ಸ್ಥಲವೆಂಬುದು ಏಕಕಾಲಕ್ಕೆ ಸಿದ್ಧಾಂತವೂ ಹೌದು ಆನ್ವಯಿಕ ಕ್ರಮವೂ ಹೌದು. ಸಿದ್ಧಾಂತ ಮತ್ತು ಅನುಭವ  ಬೇರೆ ಬೇರೆಯಾಗದೆ ಅವು ಒಂದಾಗಿ ಉಳಿಯಬೇಕೆಂಬ ಅಲ್ಲಮಪ್ರಭು ಮತ್ತು ಬಸವಣ್ಣನವರ ಜೀವನತತ್ತ್ವವನ್ನು ಅಸಾಧಾರಣ ರೀತಿಯಿಂದ ಬಗೆದು ತೋರಿಸಿದ ಕೀರ್ತಿ ಚೆನ್ನಬಸವಣ್ಣನಿಗೆ ಸಲ್ಲುತ್ತದೆ.

ಮಧ್ಯಕಾಲೀನ ಶರಣರಲ್ಲಿ ಎರಡು ಬಗೆಯ ಷಟ್‌ಸ್ಥಲದ ನಿರ್ವಚನವನ್ನು ಮಾಡುತ್ತಾರೆ. ಮೊದಲನೆಯದು ಕ್ರಮಸಮುಚ್ಚಯ ಷಟ್‌ಸ್ಥಲ. ಎರಡನೆಯದು ಸಮಸಮುಚ್ಚಯ ಷಟ್‌ಸ್ಥಲ. ಶರಣ ಸ್ಥಲದಿಂದ ಐಕ್ಯಸ್ಥಲದ ವರೆಗೂ ಆರೋಹಣ ಕ್ರಮದಲ್ಲಿ ಪರಿಭಾವಿಸುವುದು ಕ್ರಮಸಮುಚ್ಚಯವಾದರೆ ಪ್ರತಿಯೊಂದು ಸ್ಥಲಕ್ಕೂ ಸಮಾನ ಕ್ರಮವನ್ನು ಪರಿಭಾವಿಸುವುದು ಸಮಸಮುಚ್ಚಯ, ಶರಣನೊಬ್ಬ ಒಂದೊಂದು ಸ್ಥಲವನ್ನು ಏರಿ ಅರಿವನ್ನು ಪಡೆಯುತ್ತಾನೆ ಎಂಬುದು ಕ್ರಮಸಮುಚ್ಚಯದ ನಿಲುವು. ಈ ಬಗೆಯ ತಾತ್ತ್ವಿಕ ದೃಷ್ಟಿಕೋನವು ಸಾಧಕನ ನೆಲೆಯಿಂದ ಪರಿಗ್ರಹಿತವಾಗುತ್ತದೆ. ಆದರೆ ಒಂದೊಂದು ಸ್ಥಲದಲ್ಲೂ ಇತರೇ ಸ್ಥಲಗಳ ಅನುಭವವು ಮಿಲಿತವಾಗುತ್ತದೆ ಎಂಬುದು ಸಮಸಮುಚ್ಚಯದ ನಿಲುವು. ಈ ನಿಲುವಿನ ಬಗ್ಗೆ ಅನೇಕ ಚರ್ಚೆಗಳನ್ನು ಬೆಳೆಸಬಹುದಾದರೂ ಚೆನ್ನಬಸವಣ್ಣ ಸಮಸಮುಚ್ಚಯದ ಹಾದಿಯನ್ನು ಹಿಡಿದವನು. ಈತ ಸಾಧಕನು ಹೇಗೋ ತಾತ್ತ್ವಿಕನೂ ಹೌದು. ಈ ಎರಡು ಗುಣಗಣಗಳು ಈತನ ಜೀವಾಳವಾಗಿದ್ದವು. ಸಾಧಕನ ನಿಲುಮೆ ಹಾಗೂ ತಾತ್ತ್ವಿಕನ ನಿಲುಮೆ ಬೇರೆ ಬೇರೆಯಲ್ಲ. ಅವು ಒಂದರೊಳಗೊಂದು ಸೇರಿ ಗಮ್ಯವಾಗುವುದು ಚೆನ್ನಬಸವಣ್ಣನಂಥ ಸಾಧಕರಲ್ಲಿ ಮಾತ್ರ, ಹೀಗಾಗಿ ಚೆನ್ನಬಸವಣ್ಣನು ಪಾರಂಪರಿಕವಾಗಿ ಬಂದ ಅನೇಕ ಸೈದ್ಧಾಂತಿಕ ನಿಲುಮೆಗಳನ್ನು ಪರಿಷ್ಕರಿಸಿದ್ದು ಮಾತ್ರವಲ್ಲ ಅದನ್ನು ತಿದ್ದಿದ್ದು ಇದಕ್ಕಾಗಿಯೇ. ಅವನು ಹೊಸ ವ್ಯವಸ್ಥೆಗೆ ತಕ್ಕಂತೆ ಒಳಪಡಿಸಿದನು. ಅವುಗಳ ಸರಿಯಾದ ಸ್ವರೂಪವನ್ನು ಪರಮೋದ್ದೇಶವನ್ನು ವಿವರಿಸಿ ಹೇಳಿದನು.

ಚೆನ್ನಬಸವಣ್ಣನ ವಚನಗಳು ಅಲ್ಲಮನ ವಚನಗಳಂತೆ ಬೆಡಗಿನ ಸ್ವರೂಪದ ವಚನಗಳಲ್ಲ. ಅಥವ ಬಸವಣ್ಣನವರಂತೆ ಶುದ್ಧ ಸಾಮಾಜಿಕ ಸ್ವರೂಪದ ವಚನಗಳೂ ಅಲ್ಲ. ಹಾಗೆ ನೋಡಿದರೆ ಬೆಡಗಿನ ಸ್ವರೂಪದ ವಚನಗಳನ್ನು ಬರೆಯಬಲ್ಲ ಸಾಮರ್ಥ್ಯ ಚೆನ್ನಬಸವಣ್ಣನಿಗಿತ್ತು. ಇದು ಒಂದು ಬಗೆಯ ಅನುಭಾವದ ಹಾದಿ. ಈ ಹಾದಿಯು ಭಾಷೆಯನ್ನು ಮುರಿದುನೋಡುತ್ತದೆ. ಆದರೆ ಚೆನ್ನಬಸವಣ್ಣನಿಗೆ ವಚನಭಾಷೆ ಮುರಿದು ನೋಡುವುದಕ್ಕಿಂತಲೂ ಅದನ್ನು ತಾತ್ತ್ವಿಕ ಪ್ರಮೇಯದಲ್ಲಿ ಮಂಡಿಸುವುದೇ ಹೆಚ್ಚು ಗ್ರಾಹ್ಯವೆಂದು ನನಗೆ ತೋರುತ್ತದೆ. ಬಸವಣ್ಣನವರಂತೆ ಅಂತರಂಗದ ನಿಲುಮೆಯನ್ನು ಬಹಿರಂಗದಲ್ಲಿಟ್ಟು ನೋಡುವ ವಚನಕ್ರಮವು ಚೆನ್ನಬಸವಣ್ಣನಿಗೆ ಅಷ್ಟಾಗಿ ಹಿಡಿಸದು. ಲೋಕಸತ್ಯದ ನಿಲುವುಗಳು ಬಸವಣ್ಣನ ವಚನಗಳಲ್ಲಿ ಮೂಡುವ ಪರಿ ಶುದ್ಧಾಂಗವಾಗಿ ಸಾಮಾಜಿಕವಾದುದು. ಚೆನ್ನಬಸವಣ್ಣನಿಗೆ ಲೋಕಸತ್ಯದ ನಿಲುವುಗಳನ್ನು ಧಾರ್ಮಿಕ ನೆಲೆಯಲ್ಲಿ ನೋಡುವುದೇ ಹೆಚ್ಚು ಸಂಗತ. ಈ ಕ್ರಮವನ್ನು ಗಮನಿಸಿದರೆ ಚೆನ್ನಬಸವಣ್ಣನ ವಚನಗಳ  ಹಿರಿಮೆ ಗರಿಮೆಗಳು ಹೆಚ್ಚು ಸ್ಪಷ್ಟವಾಗುತ್ತವೆ.

ಚೆನ್ನಬಸವಣ್ಣ ಬರೆದಿರುವ ವಚನಗಳಲ್ಲಿ ತತ್ತ್ವಾಂಶ ಮತ್ತು ಕಾವ್ಯಾಂಶಗಳು ಸಮಸಮವಾಗಿ  ಮಿಡಿಯುತ್ತವೆ. ಈತನ ವಚನಗಳಲ್ಲಿ ರೂಪಕ, ಸಾಮತಿ ಮತ್ತು ಪ್ರತಿಮಾ ನಿರ್ಮಾಣಗಳು ಬರುವುದು ತುಸು ಕಡಿಮೆಯೇ. ಅಲ್ಲಮನ ವಚನಗಳಲ್ಲಿ ರೂಪಕ ವೈಭವವೇ ಹೆಚ್ಚು. ಬಸವಣ್ಣನವರ ವಚನಗಳಲ್ಲಿ ಸಾಮತಿಗಳ ಆಧಿಕ್ಯ ಹೆಜ್ಜೆ ಹೆಜ್ಜೆಗೂ ಕಂಡುಬರುತ್ತದೆ. ಈ

ಹಿನ್ನೆಲೆಯಲ್ಲಿ ಚೆನ್ನಬಸವಣ್ಣನ ವಚನಗಳನ್ನು ಗಮನಿಸಿ ನೋಡುವುದು ಒಂದು ಕ್ರಮವಾದರೆ; ತಾತ್ತ್ವಿಕ ನೆಲೆಯಿಂದ ನೋಡುವುದು ಮತ್ತೊಂದು ಕ್ರಮ. ಈ ಕೆಳಗಿನ ಎರಡು ವಚನಗಳ ಮೂಲಕ ಇದನ್ನು ವಿವರಿಸಿ ನೋಡಬಹುದೆಂದು ತೋರುತ್ತದೆ.

**ತಪವೆಂಬುದು ಬಂಧನ,**
**ನೇಮವೆಂಬುದು ತಗಹು,**
**ಶೀಲವೆಂಬುದು ಸೂತಕ,**
**ಭಾಷೆಯೆಂಬುದು ಪ್ರಾಣಘಾತಕ,**
**ಈ ಚತುರ್ವಿಧದೊಳಗೆ ಇಲ್ಲ, ಕೂಡಲಚೆನ್ನಸಂಗಯ್ಯ ಏಕೋಗ್ರಾಹಿ.**

(ಚೆನ್ನಬಸವಣ್ಣನವರ ವಚನ ಸಂಪುಟ– ವಚನ ೫೮೦)

**ಮಡಿಲಲ್ಲಿ ಸುತ್ತಿದ ಹಾವಿನಂತೆ**
**ಮಡಿಲಲ್ಲಿ ಕಟ್ಟಿದಡೇನು?**
**ಕೊರಳಲ್ಲಿ ಸುತ್ತಿದ ಹಾವಿನಂತೆ**
**ಕೊರಳಲ್ಲಿ ಕಟ್ಟಿದಡೇನು?**
**ಕಳವು ಹಾದರ ಭವಿಯ ಸಂಗ ಅನ್ಯದೈವವ ಬಿಡದನ್ನಕ್ಕ**
**ಲಿಂಗಭಕ್ತನೆನಿಸಲು ಬಾರದಯ್ಯ**
**ಅನಾಚಾರದಿಂದ ನರಕ, ಆಚಾರದಿಂದ ಸ್ವರ್ಗ.**
**ಕೂಡಲಚೆನ್ನಸಂಗ್ಯನೊಲ್ಲ ಭೂಮಿಭಾರಕರ.**

(ಚೆನ್ನಬಸವಣ್ಣನವರ ವಚನ ಸಂಪುಟ– ವಚನ ೩೮)

ಈ ಎರಡು ವಚನಗಳಲ್ಲಿ ತಾತ್ತ್ವಿಕತೆ ಮತ್ತು ರಮ್ಯತೆಗಳು ಒಂದಕ್ಕೊಂದು ಸೇರಿಕೊಂಡಿವೆ. ಇಲ್ಲಿ ಬಳಸಿರುವ ಪದರೂಪಗಳು ತಾತ್ತ್ವಿಕತೆಯ [illegible]ಯನ್ನು ಪ್ರತಿಫಲಿಸುತ್ತವೆ. ಮನುಷ್ಯ ಸಂಬಂಧಿಯಾದ ನೆಲದ ಗು[illegible] ಇಲ್ಲಿ ಪ್ರತಿಮೆಗಳಾಗಿ ಬಂದಿವೆ.

ಚೆನ್ನಬಸವಣ್ಣ ಲೋಕದಲ್ಲಿ ಬಳಕೆಯಾಗುವ ಶಬ್ದಗಳನ್ನು ತಾತ್ತ್ವಿಕತೆಯ ಮಟ್ಟಕ್ಕೆ ಏರಿಸುವುದುಂಟು. ಅದೇ ರೀತಿ ಆ ತಾತ್ತ್ವಿಕತೆಗೆ ರಮ್ಯತೆಯ ಸೊಗಸನ್ನು ಸೇರಿಸುವುದೂ ಉಂಟು. ಲೋಕಕ್ಕೆ ತಪಸ್ಸು ಎಂಬುದು ಬಂಧನವೇ. ಅದೇ ರೀತಿ ವ್ರತಚಾರಣೆ ಎಂಬುದು ಯಾರಿಗಾದರೂ ಸಹ್ಯವಲ್ಲ. ಶೀಲವೆಂಬುದು ಸೂತಕ. ಭಾಷೆಯೆಂಬುದು ಪ್ರಾಣಘಾತಕ. ಈ ವಚನದಲ್ಲಿ ತಪಸ್ಸು, ನೇಮ, ಶೀಲ ಮತ್ತು ಭಾಷೆ ಎಂಬುವು ಕೇವಲ ಬಳಕೆಗಾಗಿ ಬರದೆ ಲೋಕವನ್ನು ಅರ್ಥೈಸಿಕೊಳ್ಳಲು ಈ ಶಬ್ದಪ್ರತಿಮೆಗಳು ಸಾಧ್ಯ ಮಾಡುತ್ತವೆ. ಇಲ್ಲಿಯವರೆಗೂ ಭಾಷೆಯು ಕಟ್ಟಿಕೊಂಡಿರುವ ಅರ್ಥದ ಸಾಧ್ಯತೆಗಳನ್ನು ಬಿಡಿಗೊಳಿಸಿಕೊಳ್ಳುವುದರಲ್ಲಿ ಹೆಚ್ಚು ಆಸಕ್ತಿಯನ್ನುಂಟು ಮಾಡಿಕೊಳ್ಳುತ್ತದೆ.

ಚೆನ್ನಬಸವಣ್ಣನ ಮತ್ತೊಂದು ವಚನವನ್ನು ಇದರ ಮುಂದುವರಿಕೆಯಾಗಿ ನೋಡಬಹುದು. ಲಿಂಗಭಕ್ತನೆನಿಸಬೇಕಾದರೆ ಆತನಿಗೆ ಲೋಕದ ವಿಕಾರಗಳು ಇರಕೂಡದು. ಈ ಲೋಕವು ಕಳವು, ಹಾದರ, ಭವಿಯ ಸಂಗ ಮತ್ತು ಅನ್ಯದೈವಗಳೊಡನೆ ಸಂಸರ್ಗವನ್ನು ಹೊಂದಿದೆ. ಪ್ರತಿಯೊಬ್ಬನೂ ಇವುಗಳಿಂದ ಬಿಡುಗಡೆ ಪಡೆಯಲಾರ. ಇದು ಮಡಿಲಲ್ಲಿ ಸುತ್ತಿಕೊಂಡಿರುವ ಹಾವಿನಂತೆ ಎಂಬ ಶಬ್ದಪ್ರತಿಮೆಯು ಲೋಕದ ನೈರಂತರ್ಯ ಸ್ಥಿತಿಯನ್ನು ಪ್ರತಿಮಿಸುತ್ತದೆ. ಈ ಲೋಕದ ವಿಕಾರಗಳಲ್ಲಿ ಮಗ್ನನಾಗಿರುವವನನ್ನು "ಭೂಮಿಭಾರಕರ" ಎಂಬ ಶಬ್ದ ಪ್ರತಿಮೆಯು ಚೆನ್ನಾಗಿ ಪ್ರತಿಮಿಸುತ್ತದೆ. ಚೆನ್ನಬಸವಣ್ಣನ ವಚನಗಳು ತಾತ್ತ್ವಿಕ ಸಂಸರ್ಗತೆಯನ್ನು ಹೊಂದಿದ್ದರೂ ಸಾಹಿತ್ಯಿಕ ಪ್ರತಿಮೆಗಳು ವಚನದ ಚೌಕಟ್ಟುಗಳಲ್ಲಿ ಪಡಿನುಡಿಯುತ್ತವೆ.

ಅಲ್ಲಮಪ್ರಭುದೇವರ ದೃಷ್ಟಿಯಲ್ಲಿ ಚೆನ್ನಬಸವಣ್ಣ ಅವಿರಳ ಜ್ಞಾನಿ, ಸ್ವಯಂಭು ಜ್ಞಾನಿ. ಈ ಜ್ಞಾನಕ್ಕೆ ಲೋಕ-ಅಲೋಕಗಳ ನಂಟನ್ನು ಒಂದುಮಾಡುವ ಶಕ್ತಿಯುಂಟು. ಈತ ವಿರಳತೆಯಲ್ಲಿ ಬದುಕುವವನಲ್ಲ. ಸಾಮಾನ್ಯ ಜ್ಞಾನವೆಂಬುದು

ಈತನಿಗೆ ಹೊರಗು. ಹೀಗಾಗಿ, ಚೆನ್ನಬಸವಣ್ಣ ಅವಿರಳಜ್ಞಾನಿ. ಶಿವಾನುಭವದಲ್ಲಿ ಅವಿರಳ ಜ್ಞಾನಿಯೆಂಬ ಮಾತಿಗೆ ವಿಶೇಷ ಅರ್ಥವುಂಟು. ಈ ಸಂಗತಿಯನ್ನು ಮಧ್ಯಕಾಲೀನ ಅನುಭಾವಿ ದೃಷ್ಟಿಯಿಂದ ಪರೀಕ್ಷಿಸುವುದು ಉಚಿತ. ಜ್ಞಾನಿಯಾದವನಿಗೆ ಒಳಗನ್ನು ಸೆರೆಹಿಡಿದು ಹೊರಗನ್ನು ನೋಡಬಲ್ಲ ಶಕ್ತಿಯಿರುತ್ತದೆ. ಈತನದು ಪರಾವಲಂಬಿ ಗುಣವಲ್ಲ. ಸ್ವಯಂ ಅನುಭವವೇ ಈತನ ಅಸ್ತ್ರವಾಗಿರುತ್ತದೆ. ಚೆನ್ನಬಸವಣ್ಣ ಅವಿರಳ ಜ್ಞಾನಿ ಹೇಗೋ ಸ್ವಯಂಭು ಜ್ಞಾನಿ ಕೂಡ. ಈ ಹಿನ್ನೆಲೆಯಲ್ಲಿ ಅಲ್ಲಮಪ್ರಭುದೇವರ ಮಾತಿಗೆ ವಿವರವಾದ ಲೋಕಾರ್ಥವುಂಟು.

ಚೆನ್ನಬಸವಣ್ಣನು ಷಟ್‌ಸ್ಥಲಗಳಲ್ಲಿ ಒಂದಾದ ಪ್ರಸಾದಿಸ್ಥಲದ ಹಾದಿಯನ್ನು ಹಿಡಿದವನು. ಲಿಂಗಕ್ಕೆ ಅರ್ಪಿಸಿದ ಪದಾರ್ಥವನ್ನು ಪ್ರಸಾದವನ್ನಾಗಿಸುವ ಅರ್ಪಣ ವಿಧಾನವನ್ನು ಷಟ್‌ಸ್ಥಲದ ಆಚರಣೆಯಲ್ಲಿ ಅಳವಡಿಸಿ ಇದೇ ಜನ್ಮದಲ್ಲಿ ಲಿಂಗಾಂಗ ಸಾಮರಸ್ಯ ರೂಪದ ಮುಕ್ತಿಯು ಸಾಧ್ಯವೆಂದು ತಾತ್ತ್ವಿಕವಾಗಿಯೂ ಆಚರಣಾತ್ಮಕವಾಗಿಯೂ ಹೇಳಿದ ಹಿರಿಮೆ ಈತನದು. ಈ ನೆಲೆಯಲ್ಲಿ ಉಳಿದ ಸಮಕಾಲೀನ ಶರಣರಿಗಿಂತ ವಿಶಿಷ್ಟನೆಂದು ಕರೆಯಲ್ಪಟ್ಟನು. ಈ ಕಾರಣದಿಂದ ಅಲ್ಲಮಪ್ರಭುದೇವರು ತಮ್ಮ ಒಂದು ವಚನದಲ್ಲಿ "ಪ್ರಸಾದದ ಹಾದಿಯನೆಲ್ಲರಿಗೆ ತೋರಿ ಮಹಾಪ್ರಸಾದದ ಬೆಳವಿಗೆಯ ಮಾಡಿದನು ಗುಹೇಶ್ವರನ ಶರಣ ಚೆನ್ನಬಸವಣ್ಣ" ಎಂದು ಹೇಳಿರುವುದನ್ನು ಕಾಣಬಹುದು. ಇದೇ ಅಭಿಪ್ರಾಯವನ್ನು ಸಿದ್ಧರಾಮ ಮತ್ತು ಉರಿಲಿಂಗಪೆದ್ದಿ ಶರಣರು ಖಚಿತ ವಾಣಿಯಲ್ಲಿ ಸ್ಪಷ್ಟಪಡಿಸಿದ್ದಾರೆ.

ಚೆನ್ನಬಸವಣ್ಣನು ಪ್ರಸಾದದ ಹಾದಿಯನ್ನು ತೋರಿಸಿರುವ ಜೊತೆಗೆ ಉಳಿದೆಲ್ಲ ಸ್ಥಲಗಳ ಕ್ರಿಯೆಗಳನ್ನು ಪ್ರಸಾದಿ ಸ್ಥಲದಲ್ಲಿಯೇ ಸಮನ್ವಯಗೊಳಿಸಿರುವಂತೆ ನನಗೆ ಕಾಣುತ್ತದೆ. ಇದು ಉಳಿದೆಲ್ಲ ವಚನಕಾರರಿಗಿಂತ ವಿಶಿಷ್ಟ ಜೀವನ ಯೋಗವನ್ನು ಸಾಧಿಸಿದ ಹಿರಿಮೆಯನ್ನು ತೋರಿಸುತ್ತದೆ. ಈತನ ವಚನಗಳಲ್ಲಿ ಶಿವಯೋಗದ ಬಗೆಗೂ ಗಮನಾರ್ಹವಾದ ವಿವರಣೆಗಳು ದೊರಕುತ್ತವೆ. ಇಷ್ಟಲಿಂಗದ ಅನುಸಂಧಾನದ ಮೂಲಕ ಈ ಕಾಯವನ್ನು ಪ್ರಸಾದಕಾಯವನ್ನಾಗಿಸುವ ದಾರಿಯನ್ನು ಚೆನ್ನಬಸವಣ್ಣ ಮುಖ್ಯವಾಗಿ ತೋರಿಸುತ್ತಾನಷ್ಟೆ. ಅದೇ ರೀತಿ ಪ್ರಾಣಲಿಂಗದ ಅನುಸಂಧಾನದ ಮೂಲಕ ಪ್ರಸಾದಕಾಯವನ್ನು ಪ್ರಕಾಶಕಾಯವನ್ನಾಗಿಸುವ ಹಾದಿಯನ್ನು ತೋರಿಸುತ್ತಾನೆ. ಭಾವಲಿಂಗದ ಅನುಸಂಧಾನದ ಮೂಲಕ ಪ್ರಕಾಶಕಾಯವನ್ನು ಆಕಾಶಕಾಯವನ್ನಾಗಿಸುವ ವಿವರ ಚೆನ್ನಬ...ಣ್ಣನವರ ವಚನಗಳಲ್ಲಿ ಎಳೆಎಳೆಯಾಗಿ ಬಿತ್ತರಗೊಂಡಿರುವುದನ್ನು ಕಾಣುತ್ತೇವೆ. ಹೀಗಾಗಿ, ಚೆನ್ನಬಸವಣ್ಣನವರ ವ್ಯಕ್ತಿತ್ವವನ್ನು ಷಟ್‌ಸ್ಥಲ ಸಿದ್ಧಾಂತ ಮತ್ತು ಅದರ ಆಚರಣೆಯ ನಿರ್ಣಯದಲ್ಲಿ ಅವರು ವಹಿಸಿದ ಮಹತ್ವಪೂರ್ಣವಾದ ಪಾತ್ರವನ್ನು ತಿಳಿಯಲು ಸಾಕಷ್ಟು ಸಾಮಗ್ರಿ ನಮಗೆ ದೊರೆಯುತ್ತದೆ. ಈಗ ಚೆನ್ನಬಸವಣ್ಣನ ಇತಿವೃತ್ತದ ಬಗೆಗೆ ಒಂದಿಷ್ಟು ಯೋಚಿಸಬಹುದು:

ಚೆನ್ನಬಸವಣ್ಣನ ಇತಿವೃತ್ತದ ಬಗೆಗೆ ಹಲವಾರು ಗೊಂದಲಗಳಿವೆ. ಇವನನ್ನು ಕುರಿತು ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ ಹಾಗೂ ಇತರೇ ಕೆಲವು ಕೃತಿಗಳಲ್ಲಿ ಒಂದೆರಡು ವಿಷಯಗಳ ಬಗೆಗೆ ಭಿನ್ನಾಭಿಪ್ರಾಯಗಳು ಇರುವುದುಂಟು. ಆದರೆ ಉಪಲಬ್ಧ ಸಾಮಗ್ರಿಯನ್ನೇ ಆಧರಿಸಿ ಚೆನ್ನಬಸವಣ್ಣನ ಜೀವನ ಚರಿತ್ರೆಯನ್ನು ಹೀಗೆ ನಿರೂಪಿಸಬಹುದು. ಚೆನ್ನಬಸವಣ್ಣನ ಸೋದರಿಯಾದ ಅಕ್ಕನಾಗಮ್ಮನ ಮಗ ಚೆನ್ನಬಸವಣ್ಣ ಎಂಬುದರಲ್ಲಿ ಯಾರೂ ಸಂದೇಹ ಪಡೆಯುವಂತಿಲ್ಲ. ಆದುದರಿಂದ ಚೆನ್ನಬಸವಣ್ಣನು ಬಸವಣ್ಣನವರ ಸೋದರಳಿಯನಾಗುತ್ತಾನೆ. ಚೆನ್ನಬಸವಣ್ಣನ ಜನ್ಮಸ್ಥಳ ಕಲ್ಯಾಣವೆಂದು ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ ಮತ್ತು ಸಂದರ್ಭಾನುಸಾರ ಚೆನ್ನಬಸವಣ್ಣನವರನ್ನು ಉಲ್ಲೇಖಿಸುವ ವೀರಶೈವ ಕೃತಿಗಳು ಹೇಳುತ್ತವೆ. ಆದರೆ ಇತ್ತೀಚಿನ ಕೆಲವು ವಿದ್ವಾಂಸರು ಬಸವಣ್ಣನವರು ಕಲ್ಯಾಣಕ್ಕೆ ಬರುವ ಪೂರ್ವದಲ್ಲಿಯೇ ಚೆನ್ನಬಸವಣ್ಣ ಜನಿಸಿರಬೇಕೆಂದು ಹೇಳುತ್ತಾರೆ. ಚೆನ್ನಬಸವಣ್ಣನವರ ತಂದೆಯ ಹೆಸರನ್ನು 'ಅಮಲಬಸವ ಚಾರಿತ್ರ್ಯ' (ಸಿಂಗಿರಾಜಪುರಾಣ) ವೊಂದನ್ನು ಬಿಟ್ಟು ಉಳಿದಾವ ಕೃತಿಗಳೂ ಹೇಳುವುದಿಲ್ಲ. ಸಿಂಗಿರಾಜ ಪುರಾಣದಲ್ಲಿ ಎರಡು ಮೂರು ಕಡೆ ಅಕ್ಕನಾಗಮ್ಮನ ಪತಿ ಶಿವಸ್ವಾಮಿ ಅಥವಾ ಶಿವದೇವನೆಂದು ತೋರಿಸುತ್ತದೆ.

ಹಲ ಕೆಲವು ವೀರಶೈವಗ್ರಂಥಗಳಲ್ಲಿ ಚೆನ್ನಬಸವಣ್ಣನು ಪ್ರಸಾದದಿಂದ ಜನಿಸಿದರೆಂಬ ಮಾತು ಬರುತ್ತದೆ. ಲಕ್ಕಣ್ಣದಂಡೇಶ (ಕ್ರಿ.ಶ. ಸು. ೧೪೨೮) ತನ್ನ ಶಿವತತ್ವಚಿಂತಾಮಣಿಯಲ್ಲಿ ಜಂಗಮದ ತೀರ್ಥ-ಪ್ರಸಾದ ಸೇವನೆಯಿಂದ ಅಕ್ಕನಾಗಮ್ಮ

ಚೆನ್ನಬಸವಣ್ಣನನ್ನು ಪಡೆದಳೆಂಬ ಅರ್ಥಬರುವಂತೆ ಹೇಳಲಾಗಿದೆ. ಲಕ್ಕಣ್ಣದಂಡೇಶನ ಸಮಕಾಲೀನನಾಗಿರಬಹುದಾದ ಚಾಮರಸ ತನ್ನ ಪ್ರಭುಲಿಂಗಲೀಲೆಯಲ್ಲಿ ಬಸವಣ್ಣನವರ ಒಕ್ಕುಮಿಕ್ಕ ಪ್ರಸಾದವನ್ನು ಅಕ್ಕನಾಗಾಯಿಗಳು ಉಣಲು, ಅದರಿಂದಾಗಿ ಮುಂದೆ ಚೆನ್ನಬಸವಣ್ಣನವರು ಜನಿಸಿದನೆಂದು ಹೇಳಿದೆ. ಪ್ರಾಯಶಃ ಕ್ರಿ.ಶ. ೧೫೦೩ರಲ್ಲಿ ಸಂಕಲನಗೊಂಡಿರಬಹುದಾದ ಹಲಗೆಯದೇವರ ಶೂನ್ಯಸಂಪಾದನೆಯಲ್ಲಿ ಕಕ್ಕಯ್ಯನ ಪ್ರಸಾದದಿಂದ ಚೆನ್ನಬಸವಣ್ಣ ಜನಿಸಿದರೆಂಬ ಮಾತು ಬರುತ್ತದೆ. ವಿರೂಪಾಕ್ಷಪಂಡಿತನ 'ಚೆನ್ನಬಸವ ಪುರಾಣ'ದಲ್ಲಿ ಶಿವನ ಪ್ರಸಾದದದಿಂದ ಅರ್ಥಾತ್ ಶಿವನ ಚಿತ್ಕಲೆಯಿಂದ ಚೆನ್ನಬಸವಣ್ಣ ಜನಿಸಿದಂತೆ ಹೇಳಿದೆ. ತದನಂತರ ಬರುವ ಸಿದ್ಧನಂಜೇಶ, ಶಾಂತಲಿಂಗದೇಶಿಕ, ಅದೃಶ್ಯಕವಿ, ಚೆನ್ನಪ್ಪ ಕವಿ ಮೊದಲಾದವರು ಕಕ್ಕಯ್ಯನ ಪ್ರಸಾದದಿಂದಲೇ ಅಕ್ಕನಾಗಮ್ಮ ಚೆನ್ನಬಸವಣ್ಣನ ಪಡೆದಳೆಂದು ಹೇಳುತ್ತಾರೆ. ಇವೆಲ್ಲದರ ಒಟ್ಟು ಮತಿತಾರ್ಥವೆಂದರೆ ಇವು ಕವಿಕಲ್ಪನೆಗಳೆಂದು ಭಾವಿಸುವುದು ಸರಿ.

*****



# ಕನ್ನಡ ಉತ್ತರರಾಮಾಯಣಗಳ ಕಥಾ ಸಂವಿಧಾನ

* ಸಂಧ್ಯಾ ವಿ.

'ರಾಮಾಯಣ' 'ಮಹಾಭಾರತ'ಗಳು ಭಾರತದ ಎರಡು ಮಹಾನ್ ಗ್ರಂಥಗಳು. ಕ್ರಮವಾಗಿ ವಾಲ್ಮೀಕಿ ವ್ಯಾಸರಿಂದ ಇವು ಸಂಸ್ಕೃತದಲ್ಲಿ ರಚಿತವಾದವು. ಆದರೆ ಮೂಲ ಗ್ರಂಥಗಳಿಗಿಂತಲೂ ಭಿನ್ನವಾದ ಕಥಾನಿರೂಪಣೆ, ಆಖ್ಯಾಯಿಕೆ, ವಿವರಣೆ, ಉಪದೇಶ, ತತ್ವನೀತಿ ಜೊತೆಗೆ ಸಾಹಿತ್ಯಿಕ ಸೊಬಗಿನೊಂದಿಗೆ ಈ ಗ್ರಂಥಗಳು ಅನೇಕ ಕವಿಗಳಿಂದ ಹೊಸ ಹೊಸ ರೂಪದಲ್ಲಿ ಅನೇಕ ಭಾಷೆಗಳಲ್ಲಿ ರಚಿತವಾಗಿ ಬಂದಿದೆ. ಮಹಾಕಾವ್ಯದಿಂದ ಹಿಡಿದು ಜನಪದ ಕಾವ್ಯಗಳವರೆಗೂ, ಕ್ರಿಸ್ತಪೂರ್ವದಿಂದ ಇಂದಿನವರೆಗೂ ಅನೇಕ ರಾಮಾಯಣ, ಭಾರತ ಕೃತಿಗಳು ಮೂಡಿಬರುತ್ತಿವೆ. ಈ ಗ್ರಂಥಗಳನ್ನು ಬೌದ್ಧ, ಜೈನ ಕವಿಗಳೂ ವಿಭಿನ್ನ ಶೈಲಿಗಳಲ್ಲಿ ರಚಿಸಿದ್ದಾರೆ ಅಲ್ಲದೆ ಇಂಡೋನೇಶಿಯ, ಥೈಲ್ಯಾಂಡ್, ಮಲೇಶಿಯಾ, ಬರ್ಮಾ ನೇಪಾಳ ಭಾಷೆಗಳಲ್ಲಿ ಕೂಡಾ ಪ್ರಾಚೀನಕಾಲದಲ್ಲಿ ರಚಿತವಾದ ರಾಮಾಯಣ ಕೃತಿಗಳನ್ನು ಕಾಣಬಹುದು. ಹತ್ತೊಂಬತ್ತನೆಯ ಶತಮಾನದಿಂದೀಚೆಗೆ ಪ್ರಪಂಚದಾದ್ಯಂತ ನಾನಾ ಭಾಷೆಗಳಲ್ಲಿ ಈ ಗ್ರಂಥಗಳು ಪುನರ್‌ರಚಿತವಾಗಿ ನಾನಾ ಮಾಧ್ಯಮದ ಮೂಲಕ ಜನರನ್ನು ತಲುಪುತ್ತಿವೆ.

ಮೂಲರಾಮಾಯಣವು ವಾಲ್ಮೀಕಿರಚಿತವಾದರೂ ಅಷ್ಟಾದಶ ಪುರಾಣಗಳೆನಿಸಿದ ವಾಯುಪುರಾಣ, ವಿಷ್ಣುಪುರಾಣ, ಕೂರ್ಮಪುರಾಣ, ಅಗ್ನಿಪುರಾಣ, ಬ್ರಹ್ಮ, ಸ್ಕಾಂದಪುರಾಣ, ನೃಸಿಂಹಪುರಾಣ, ಪದ್ಮಪುರಾಣಗಳಲ್ಲಿಯೂ, ನಾರದೀಯ ಬ್ರಹ್ಮಾಂಡ ಭಾಗವತ, ಹರಿವಂಶ, ಆನಂದ ಅಧ್ಯಾತ್ಮ ಅಗ್ನಿವೇಶ್ಯ ಶತಕಂಠಮೊದದೆಡೆಗಳಲ್ಲಿಯೂ ಭಿನ್ನಸಂಪ್ರದಾಯದ ರಾಮಾಯಣದ ಕಥೆಗಳನ್ನು ಕಾಣಬಹುದು. ಈ ರಾಮಾಯಣಗಳಲ್ಲಿ ಅಲ್ಲಲ್ಲಿ ಆಗಿರುವ ಮಾರ್ಪಾಟನ್ನು, ರಾಮಾಯಣವನ್ನು ರಚಿಸಿರುವ ಮುಂದಿನ ಕವಿಗಳು ಯಥೇಚ್ಚವಾಗಿ ಬಳಸಿಕೊಂಡು ನಾನಾರೀತಿಯ ಕಥಾನಿರೂಪಣೆಯಿಂದ ರಾಮಾಯಣವನ್ನು ರಚಿಸಿದ್ದಾರೆ. ಸಂಸ್ಕೃತದಲ್ಲಿ ಕಾವ್ಯ, ನಾಟಕ, ಗದ್ಯ, ಟೀಕು ಹೀಗೆ ನಾನಾ ಪ್ರಾಕಾರಗಳಲ್ಲಿ ಬಂದಿರುವ ಅಸಂಖ್ಯಾತ ರಾಮಾಯಣ ಕೃತಿಗಳಿವೆ, ಇವುಗಳನ್ನನುಸರಿಸಿ ಕನ್ನಡದಲ್ಲೂ ಸಾಕಷ್ಟು ರಾಮಾಯಣ ಕೃತಿಗಳು ಹೊರಬಂದಿವೆ. ಈ ಪ್ರಕಾರವಾಗಿ ಹೇರಳವಾಗಿ ರಚಿತವಾಗಿರುವ ರಾಮಾಯಣ ಕೃತಿಗಳನ್ನು ಕುರಿತು ಮುದ್ದಣನು ತನ್ನ ಅದ್ಭುತ ರಾಮಾಯಣದ ಪ್ರಥಾಮಾಶ್ವಾಸದಲ್ಲಿ "ಆ ಬ್ರಹ್ಮಲೋಕದೊಳೆಸೆವ ಶ್ರೀರಾಮ ಕಥಾಮೃತಭರಿತ ಶತಕೋಟಿ ರಾಮಾಯಣ ಮಹಾರ್ಣವದತ್ತಣಿಂ ಪಂಚವಿಂಶತಿಸಾಹಸ್ರ ಚಾರಿತ್ರ ಪೀಯೂಷಕಣಂಗಳ್ ಶಿವನ ಜಟಾಜೂಟದಿಂ ಕೆಳಗೆ ಜಗುಳ್ದ ವಿಯದ್ಗಂಗಾಸಲಿಲಬಿಂದುಗಳಂತೆ ಭೂಲೋಕಮ ಪೊರ್ದಿದುವು"[೧] ಬ್ರಹ್ಮಲೋಕದಲ್ಲಿ ನೂರುಕೋಟಿ ರಾಮಾಯಣಗಳಿರುವುವೆಂದೂ ಅಲ್ಲಿಂದ ಈ ಲೋಕಕ್ಕೆ ಇಪ್ಪತ್ತೈದುಸಾವಿರ ರಾಮಾಯಣಗಳು ಬಂದುವೆಂದೂ ಹೇಳುತ್ತಾನೆ.

ಈ ಪ್ರಕಾರವಾಗಿ ರಚಿತವಾಗಿ ಬಂದಿರುವ ರಾಮಾಯಣ ಕಾವ್ಯಗಳನ್ನು ನೋಡಿಯೇ ಕುಮಾರವ್ಯಾಸ ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ ತಿಂತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ[೨] ಎಂದು ಹೇಳಿದ್ದಾನೆ.

**ಉತ್ತರರಾಮಾಯಣ:** ರಾಮಾಯಣದಲ್ಲಿ ರಾಮ ರಾವಣನನ್ನು ಸಂಹರಿಸಿ ಸೀತಾ, ಲಕ್ಷ್ಮಣರೊಂದಿಗೆ ಅಯೋಧ್ಯೆಗೆ ಮರಳಿ ಪಟ್ಟಾಭಿಶೇಕಗೊಂಡ ನಂತರದ ಕಥೆಯನ್ನೊಳಗೊಂಡ ಭಾಗ ಉತ್ತರರಾಮಾಯಣ.

ಮೂಲ ಸಂಸ್ಕೃತರಾಮಾಯಣದಲ್ಲಿ ಉತ್ತರರಾಮಾಯಣ ಕಥೆಯನ್ನೊಳಗೊಂಡ ಉತ್ತರಕಾಂಡ ವಾಲ್ಮೀಕಿ ರಚಿತವಲ್ಲವೆಂದು ಅನೇಕ ವಿದ್ವಾಂಸರು ವಾದಿಸುತ್ತಾರೆ. ಅಷ್ಟೇಅಲ್ಲದೆ ಹರಿವಂಶ, ವಾಯುಪುರಾಣ, ವಿಷ್ಣುಪುರಾಣ, ನೃಸಿಂಹಪುರಾಣಗಳಲ್ಲಿಯೂ

* ಫ್ಲಾಟ್ ನಂ. ೨೦೩, ಎಸ್.ಸಿ.ಆರ್. ರೆಸಿಡೆನ್ಸಿ, ೫ನೆ ಅಡ್ಡರಸ್ತೆ, ಆರ್.ಕೆ. ಬಡಾವಣೆ ೩ನೆ ಹಂತ, ಪದ್ಮನಾಭನಗರ, ಬೆಂಗಳೂರು–೫೬೦ ೦೭೦

ರಾಮಾಯಣದ ಕಥೆ ರಾಮಪಟ್ಟಾಭಿಷೇಕದವರೆಗು ಮಾತ್ರ ಇದೆ. ಗುಣಭದ್ರನ 'ಉತ್ತರಪುರಾಣ'ದಲ್ಲಿಬರುವ ಜೈನರಾಮಾಯಣ, ಬೌದ್ಧರ 'ಅನಾಮಕ ಜಾತಕ'ದಲ್ಲಿಯೂ ಸೀತಾಪರಿತ್ಯಾಗದ ವಿಚಾರ ಬರುವುದಿಲ್ಲ. ವಾಲ್ಮೀಕಿ ಕೃತ ಮೂಲ ರಾಮಾಯಣದಲ್ಲಿ ಶ್ರೀರಾಮನ ಪಟ್ಟಾಭಿಷೇಕವಾದಮೇಲೆ ಆರೆನೆಯ ಕಾಂಡದಲ್ಲಿಯೇ ಕವಿ ವಾಲ್ಮೀಕಿಗಳು ಫಲಶ್ರುತಿಯನ್ನೂ ಹೇಳಿಬಿಟ್ಟಿದ್ದಾರೆ.

ಡಿ.ವಿ.ಜಿ ಅವರು ಉತ್ತರರಾಮಾಯಣದ ಕನ್ನಡ ಅನುವಾದದ ಉಪೋದ್ಘಾತದಲ್ಲಿ ವಾಲ್ಮೀಕಿರಾಮಾಯಣದ ಉತ್ತರಕಾಂಡ ಪ್ರಕ್ಷಿಪ್ತವಲ್ಲ ಎಂದು ವಾದಿಸುತ್ತಾರೆ. "ಉಳಿದ ಭಾಗಕ್ಕೂ ಈ ಉತ್ತರ ಕಾಂಡಕ್ಕೂ ವಿರೋಧವಾಗಲಿ, ಅಸಾಮಂಜಸ್ಯವಾಗಲಿ ಕಾಣುವುದಿಲ್ಲ"[೩] ಎನ್ನುತ್ತಾ ...ಸೀತಾಯಾಶ್ಚರಿತಂ ಮಹತ್... ಎನ್ನುವ ಬಾಲಕಾಂಡದ ಉಲ್ಲೇಖವನ್ನು ಹೇಳಿ ಮಹತ್ವಪೂರ್ಣವಾದ ಸೀತಾದೇವಿಯ ಚರಿತ್ರೆ ಉತ್ತರಕಾಂಡದಲ್ಲಿ ಸುಂದರವಾಗಿ ಮೂಡಿ ಬಂದಿದೆ ಸೀತಾದೇವಿಯ ಮಹತ್ವವೇನು? ಆಕೆಯನ್ನು ದೈವ ಪರೀಕ್ಷಿಸಿದ್ದು, ಆಕೆ ಆ ಪರೀಕ್ಷೆಯಲ್ಲಿ ಉತ್ತೀರ್ಣಳಾದದ್ದು, ಆಕೆಯ ವ್ರತನಿಷ್ಠೆ ಮತ್ತು ಧೈರ್ಯ ಇವುಗಳನ್ನು ಹೊರತುಪಡಿಸಿದ ಕಥೆಯಲ್ಲಿ ಸೀತಾಚರಿತ್ರೆ ಸಂಪೂರ್ಣವಾಗದು, ಆಗ 'ಚರಿತಂ ಮಹತ್' ಎಂಬುದಕ್ಕೆ ಅರ್ಥವಿರುವುದಿಲ್ಲ ಎಂಬ ತಮ್ಮ ವಾದದಮೂಲಕ ಉತ್ತರಕಾಂಡವೂ ರಾಮಾಯಣದ ಭಾಗವೆ ಎನ್ನುತ್ತಾರೆ.

ಪದ್ಮಪುರಾಣ, ಕಾಳಿದಾಸನ ರಘುವಂಶ, ಭವಭೂತಿಯ ಉತ್ತರರಾಮಚರಿತೆ, ಶೇಷರಾಮಾಯಣ, ಆನಂದರಾಮಾಯಣ ಮೊದಲಾದವುಗಳಲ್ಲಿ ಉತ್ತರರಾಮಯಣದ ವಿಚಾರ ವಿಭಿನ್ನವಾಗಿ ರಚಿತವಾಗಿದೆ. ಈ ಉತ್ತರರಾಮಾಯಣದ ಕಥೆಗಳಲ್ಲಿ ಏಕತೆ ಕಂಡುಬರುವುದಿಲ್ಲ. ಇಲ್ಲಿನ ವೈವಿಧ್ಯತೆ, ಚಮತ್ಕಾರಯುತ, ಕುತೂಹಲಕೆರಳಿಸುವ ಕಥಾನಿರೂಪಣೆಯಲ್ಲಿ ವಿವಿಧ ಕವಿಗಳ ವಿಭಿನ್ನಶೈಲಿಯನ್ನು ಗುರುತಿಸಬಹುದು.

ಕನ್ನಡ ಉತ್ತರರಾಮಾಯಣಗಳಿಗೆ ಆಕರವಾಗಿರುವ ಸಂಸ್ಕೃತ ರಾಮಾಯಣಗಳು

**ವಾಲ್ಮೀಕಿರಾಮಾಯಣ:** ವಾಲ್ಮೀಕಿ ರಾಮಾಯಣದ ಉತ್ತರ ಕಾಂಡದಲ್ಲಿ ರಾಮ ಜನಾಪವಾದಕ್ಕೆ ಹೆದರಿ ಸೀತೆಯನ್ನು ಪರಿತ್ಯಜಿಸುತ್ತಾನೆ, ಇಲ್ಲಿ ರಜಕ/ಅಗಸನ ವಿಚಾರ ಬರುವುದಿಲ್ಲ. ಕಾಡಿನಲ್ಲಿ ಒಂಟಿಯಾದ ಸೀತೆ ವಾಲ್ಮೀಕಿಆಶ್ರಮದಲ್ಲಿ ಆಶ್ರಯಪಡೆಯುತ್ತಾಳೆ ಅಲ್ಲಿಯೇ ಕುಶಲವರ ಜನನ ಮುಂದೆ ವಿದ್ಯಾಭ್ಯಾಸವೂ ನಡೆಯುತ್ತದೆ. ವಾಲ್ಮೀಕಿರಾಮಾಯಣದಲ್ಲಿ ರಾಮ ಅಶ್ವಮೇಧಯಾಗ ಮಾಡುತ್ತಾನಾದರೂ ಕುಶಲವರು ಯಾಗದ ಕುದುರೆಯನ್ನು ಕಟ್ಟಿಹಾಕುವ, ರಾಮ ಅಥವಾ ಅವನ ಸೈನ್ಯದೊಂದಿಗೆ ಯುದ್ಧಮಾಡುವ ಸನ್ನಿವೇಶವೂ ಇಲ್ಲ. ನೈಮಿಷಾರಣ್ಯದಲ್ಲಿ ಯಾಗಸಿದ್ಧತೆಯನ್ನು ಮಾಡಿರುವ ರಾಮ ಸಮಸ್ತ ಋಷಿಮುನಿಗಳನ್ನು ಆಹ್ವಾನಿಸಿರುತ್ತಾನೆ. ಅಂತೆಯೆ ವಾಲ್ಮೀಕಿಯೂ ಲವಕುಶರೊಂದಿಗೆ ಪಾಲ್ಗೊಳ್ಳುತ್ತಾರೆ. ಅಲ್ಲಿ ರಾಮನಿಗೆ ಕುಶಲವರು ತನ್ನಮಕ್ಕಳೆಂದು ತಿಳಿದು ಸೀತೆಯನ್ನೂ ಬರಮಾಡಿಕೊಳ್ಳುತ್ತಾನೆ. ಆದರೆ ಪಾತಿವ್ರತ್ಯವನ್ನು ಸಮರ್ಥಿಸಿಕೊಳ್ಳುವಂತೆ ಹೇಳಿದಾಗ ದುಃಖಿತಳಾದ ಸೀತೆಯು ತಾನು ಪತಿವ್ರತೆಯಾಗಿದ್ದಲ್ಲಿ ಭೂಮಿ ಬಾಯ್ಬಿರಿಯಲೆಂದುಕೇಳಿ ಭೂತಳಕ್ಕೆ ಸೇರುತ್ತಾಳೆ.

**ಪದ್ಮಪುರಾಣ:** ಪದ್ಮಪುರಾಣದಲ್ಲಿನ ಪಾತಾಳಖಂಡದ ಮೊದಲಭಾಗದಲ್ಲಿ [೧-೫-೪೭] ಬರುವ ರಾಮಾಯಣದ ಉತ್ತರಕಾಂಡದ ಕಥಾವಸ್ತುವಿನಲ್ಲಿ ಅಗಸ ಸೀತೆಯನ್ನು ನಿಂದಿಸುವ ವಿಚಾರ ಬರುತ್ತದೆ ಹಾಗೂ ಹನ್ನೆರಡು ವರ್ಷದ ಬಾಲಕರಾದ ಲವಕುಶರು ರಾಮನ ಯಾಗದ ಕುದುರೆಯನ್ನು ಕಟ್ಟಿಹಾಕಿ ರಾಮನ ಸೈನಿಕರನ್ನು ಯುದ್ಧದಲ್ಲಿ ಸೋಲಿಸುತ್ತಾರೆ ಆದರೆ ಕಡೆಗೆ ಲವನು ಅವರಿಗೆ ಸೆರೆಯಾಳಾಗುತ್ತಾನೆ. ವಿಚಾರ ತಿಳಿದು ಸೀತೆ ಅವರನ್ನು ಬಂಧನದಿಂದ ಬಿಡಿಸುತ್ತಾಳೆ. ಈ ವಾರ್ತೆಯನ್ನು ತಿಳಿದ ರಾಮ ಎಲ್ಲರನ್ನೂ ಅಯೋಧ್ಯೆಗೆ ಬರಮಾಡಿಕೊಂಡು ವಾಲ್ಮೀಕಿಗಳ ಮಾತಿನಂತೆ ಸೀತೆಯನ್ನು ಪರಿಗ್ರಹಿಸುತ್ತಾನೆ. ಇಲ್ಲಿ ದಿವ್ಯಪರೀಕ್ಷೆಯ ಹಾಗೂ ಭೂಮಿ ಬಿರಿಯುವ ವಿಚಾರ ಬರುವುದಿಲ್ಲ.

ಗ್ರೀಕ್ ನಾಟಕಗಳಂತೆ ಭಾರತೀಯ ಕಾವ್ಯ/ನಾಟಕಗಳಲ್ಲಿ ದುರಂತವಸ್ತುವನ್ನು ಹೊಂದುವ ಸಂಪ್ರದಾಯವಿಲ್ಲವಾದ್ದರಿಂದ ಇಲ್ಲಿ ರಾಮ ಸೀತೆಯನ್ನು ಸ್ವೀಕರಿಸಿದಂತೆ ಚಿತ್ರಿಸಿರುವುದನ್ನು ಕಾಣಬಹುದು. ಬಹುಶಃ ಮುಂದಿನ ಕವಿಗಳು ಅಗಸನ ವಿಚಾರ, ಲವಕುಶರು ಯಾಗಪಶುವನ್ನು ಕಟ್ಟಿಹಾಕಿ ರಾಮನ ಸೈನ್ಯವನ್ನು ಎದುರಿಸುವ ಸಂಗತಿಗಳನ್ನು ಪದ್ಮಪುರಾಣದಿಂದ ಪಡೆದುಕೊಂಡಿರಬಹುದು.

ರಾಮನಿಂದ ಪರಿತ್ಯಕ್ತಳಾದ ಸೀತೆಯ ಮುಂದಿನ ಜೀವನ, ಲವಕುಶರು ಬೆಳೆದು ವಿದ್ಯಾಭ್ಯಾಸ ನಡೆಸುವುದು, ರಾಮನ ಅಶ್ವಮೇಧಯಾಗ, ರಾಮ ಹಾಗೂ ಲವಕುಶರ ಭೇಟಿ, ರಾಮ ಸೀತೆಯರ ಭೇಟಿ, ಕಡೆಯಲ್ಲಿ ರಾಮ ಪತ್ನಿ ಪುತ್ರರನ್ನು ಸ್ವೀಕರಿಸುವುದು ಅಥವ ಸೀತೆ ಶಾಶ್ವತವಾಗಿ ರಾಮನನ್ನಗಲುವುದು. ಇದರೊಂದಿಗೆ ಲವಣಾಸುರವಧೆ, ಶಂಭುಕವಧೆ ಮೊದಲಾದ ಪ್ರಸಂಗಗಳು. ಇವು ಉತ್ತರರಾಮಾಯಣದಲ್ಲಿ ಬರುವ ಸಾಮಾನ್ಯ ಪ್ರಸಂಗಗಳಾಗಿವೆ. ಕವಿಗಳು ತಮಗುಚಿತವಾದ ರೀತಿಯಲ್ಲಿ ಈ ಪ್ರಸಂಗಗಳಲ್ಲಿ ಮಾರ್ಪಾಟು ಮಾಡಿಕೊಂಡಿದ್ದಾರೆ.

ಸಂಸ್ಕೃತಕಾವ್ಯಗಳನ್ನನುಸರಿಸಿ ಕನ್ನಡದಲ್ಲಿಯೂ ಅನೇಕ ಉತ್ತರರಾಮಾಯಣದ ಕಾವ್ಯಗಳು ರಚಿತವಾಗಿವೆ. ಕೆಲವು ಕೃತಿಗಳು ರಾಮಾಯಣದ ಸಮಗ್ರ ಕಥೆಯೊಂದಿಗೆ ಉತ್ತರ ರಾಮಾಯಣದ ಭಾಗವೂ ರಚಿತವಾಗಿದ್ದರೆ ಕೆಲವು ಕೇವಲ ಉತ್ತರ ರಾಮಾಯಣದ ಪ್ರಸಂಗಗಳನ್ನೇ ಒಳಗೊಂಡ ಕೃತಿಗಳಾಗಿವೆ. ನಾರಾಯಣ ಕವಿಯ 'ಉತ್ತರ ರಾಮಾಯಣ', ತಿರುಮಲೆ ವೈದ್ಯನ 'ಉತ್ತರ ರಾಮಾಯಣ', ನಂ.ಸುಬ್ಬಾಶಾಸ್ತ್ರಿಯವರ 'ಉತ್ತರ ಸೀತಾ ಚರಿತ್ರೆ', ಲಕ್ಷ್ಮೀಶನ 'ಜೈಮಿನಿಭಾರತ'ದೊಳಗಿನ ಉತ್ತರ ರಾಮಾಯಣ, ಪದ್ಮಸಾಲೆ ತಿಮ್ಮಣನ 'ಕುಮಾರ ಕಾಳಗ', ಮುದ್ದಣನ ಶ್ರೀರಾಮಾಶ್ವಮೇಧಂ', ಸೋಸಲೆ ಅಯ್ಯಾಶಾಸ್ತ್ರಿಯವರ'ಶೇಷರಾಮಾಯಣಂ', ಹೆಳವನಕಟ್ಟೆಗಿರಿಯಮ್ಮನ 'ಲವಕುಶರ ಕಾಳಗ' (ಪಟದಸಂಧಿ), ಮೂಲಕರಾಮಾಯಣ ಮೊದಲಾದವು ಕೇವಲ ಉತ್ತರ ರಾಮಾಯಣವನ್ನೊಳಗೊಂಡ ಕಾವ್ಯಗಳಾದರೆ ಕುಮುದೇಂದುವಿನ 'ಕುಮುದೇಂದು ರಾಮಾಯಣ', ಬತ್ತಲೇಶ್ವರನ 'ಕೌಶಿಕರಾಮಾಯಣ', ಚಂದ್ರಸಾಗರವರ್ಣಿಯ 'ಜಿನರಾಮಾಯಣ', ನಾಗಚಂದ್ರನ 'ರಾಮಚಂದ್ರಚರಿತಪುರಾಣಂ' (ಪಂಪರಾಮಾಯಣ), ತಿಮ್ಮಾಮಾತ್ಯನ 'ಶ್ರೀರಾಮಾಭ್ಯುದಯ ಕಥಾಕುಸುಮಮಂಜರಿ' ಎಂಬ ಕನ್ನಡ ಆನಂದ ರಾಮಾಯಣವು', ಚಾಮರಾಜ ಒಡೆಯರ್'ರ' ಶ್ರೀಚಾಮರಾಜೋಕ್ತಿವಿಲಾಸವೆಂಬ ಕನ್ನಡ ರಾಮಾಯಣ' ಮೊದಲಾದವು ಉತ್ತರರಾಮಾಯಣದ ಕಥಾಪ್ರಸಂಗವೂ ಇರುವ ಸಂಪೂರ್ಣ ರಾಮಾಯಣದ ಕೃತಿಗಳಾಗಿವೆ.

**ಕಥಾಸಾಮ್ಯತೆಯಿರುವ ಕೃತಿಗಳು:** ಉತ್ತರರಾಮಾಯಣದ ಕತೆಗಳಲ್ಲಿ ಏಕರೂಪತೆ ಇಲ್ಲವಾದರೂ ಒಂದೇಮೂಲದಿಂದ ಬಂದಿರುವ ಕೆಲವು ಕನ್ನಡದ ಉತ್ತರರಾಮಾಯಣ ಕೃತಿಗಳಲ್ಲಿ ಅಲ್ಪಸ್ವಲ್ಪ ಮಾರ್ಪಾಟುಗಳನ್ನು ಹೊಂದಿದ್ದರೂ ಹೊರನೋಟಕ್ಕೆ ಸಾದೃಶ್ಯವನ್ನು ಗುರುತಿಸಬಹುದಾಗಿದೆ. ಈ ಕೃತಿಗಳು ಹೆಚ್ಚಾಗಿ ವಾಲ್ಮೀಕಿ ರಾಮಾಯಣವನ್ನೋ ಅಥವಾ ಪದ್ಮಪುರಾಣದ ಉತ್ತರ ರಾಮಾಯಣವನ್ನು ಅನುಸರಿಸಿಯೋ ರಚಿತವಾಗಿರುವ ಕಾವ್ಯಗಳಾಗಿವೆ.

**ಅ) ವಾಲ್ಮೀಕಿರಾಮಾಯಣವನ್ನನುಸರಿಸಿರುವ ಕೃತಿಗಳು**

ತಿರುಮಲೆ ವೈದ್ಯನ ಉತ್ತರರಾಮಾಯಣ: ಇದು ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿರುವ ಕಾವ್ಯ. ೨೦ ಸಂಧಿಗಳಲ್ಲಿನ ೧೦೨೧ ಪದ್ಯಗಳಲ್ಲಿ ಉತ್ತರರಾಮಾಯಣದ ಕಥೆಯನ್ನು ಹೇಳಲಾಗಿದೆ. ಇದು ಸಂಪೂರ್ಣವಾಗಿ ವಾಲ್ಮೀಕಿರಾಮಾಯಣವನ್ನು ಅನುಸರಿಸಿ ರಚಿಸಲಾಗಿದೆ. ಕಾವ್ಯಾಂಶವು ಹೆಚ್ಚಾಗಿ ಕಂಡುಬಂದಿಲ್ಲ ಅಂತೆಯೇ ಕವಿ ಮೂಲಕೃತಿಯಲ್ಲಿನ ಕಥೆಯನ್ನೂ ಸ್ವಲ್ಪವೂ ಮಾರ್ಪಾಟುಗೊಳಿಸದೆ ಕನ್ನಡದಲ್ಲಿ ಅನುವಾದಿಸಿದ್ದಾನೆ.

ಶ್ರೀಚಾಮರಾಜೋಕ್ತಿವಿಲಾಸ: ಇದು ಸಂಪೂರ್ಣರಾಮಾಯಣವನ್ನೊಳಗೊಂಡ ಕೃತಿ. ಇದರ ಕರ್ತೃ ಖಾಸಾ ಚಾಮರಾಜ ಒಡೆಯರ್ ಎಂದಿದ್ದರೂ ಚಾಮರಾಜನ ಅಂಕಿತದಲ್ಲಿ ವಿರೂಪಾಕ್ಷನೆಂಬ ವಿದ್ವಾಂಸ ರಚಿಸಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಬಾಲಕಾಂಡದಿಂದ ಉತ್ತರಕಾಂಡದವರೆಗಿನ ಇಲ್ಲಿಯ ಕಥೆಯನ್ನು ವಾಲ್ಮೀಕಿ ರಾಮಾಯಣವನ್ನನುಸರಿಸಿ ರಚಿಸಲಾಗಿದೆ. ಇದನ್ನು ಸಂಪಾದಿಸಿರುವ ಎನ್.ರಂಗನಾಥ್ ಶರ್ಮರವರು ಸಂಪಾದನೆಯ ಸಂದರ್ಭದಲ್ಲಿ ಮೂಲಕ್ಕೆ ಸರಿಹೊಂದುವಂತೆ ಕೆಲವು ತಿದ್ದುಪಡಿಗಳನ್ನು ಮಾಡಿಕೊಂಡಿರುವುದಾಗಿ ಮುನ್ನುಡಿಯಲ್ಲಿ ತಿಳಿಸಿರುತ್ತಾರೆ.

ನಾರಾಯಣ ಕವಿಯ ಉತ್ತರ ರಾಮಾಯಣ: ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿರುವ ಈ ಕಾವ್ಯದಲ್ಲಿ ೪೪ ಸಂಧಿ ಹಾಗೂ ೨೦೩೬ ಪದ್ಯಗಳ ಉತ್ತರರಾಮಾಯಣದ ಕಥಾಭಾಗವು ಹೇಳಲ್ಪಟ್ಟಿದೆ.

**ಉತ್ತರಸೀತಾ ಚರಿತ್ರೆ;** ನಂ ಸುಬ್ಬಾಶಾಸ್ತ್ರಿಗಳಿಂದ ರಚಿತವಾದ ಈ ಕೃತಿಯು ೧೮೮೮ರಲ್ಲಿ ಗೀತಾ ಪ್ರೆಸ್ ನಿಂದ ಪ್ರಕಟವಾಗಿದೆ. ಇದು ವಾರ್ಧಕಷಟ್ಪದಿಯಲ್ಲಿ ರಚಿತವಾಗಿರುವ ಕಾವ್ಯ.

ಆ) ಪದ್ಮಪುರಾಣವನ್ನನುಸರಿಸಿರುವ ಕೃತಿಗಳು

ಶೇಷರಾಮಾಯಣ: ಸೋಸಲೆ ಅಯ್ಯಾಶಾಸ್ತ್ರಿಯವರು ರಚಿಸಿರುವ ಈ ಕಾವ್ಯವು ವಾರ್ಧಕ ಷಟ್ಪದಿಯಲ್ಲಿದೆ. ೩೪ ಸಂಧಿಗಳಲ್ಲಿ ೧೩೪೦ ಪದ್ಯಗಳಲ್ಲಿ ಇಲ್ಲಿನ ಉತ್ತರರಾಮಾಯಣವು ಪದ್ಮಪುರಾಣವನ್ನನುಸರಿಸಿ ರಚಿಸಲ್ಪಟ್ಟಿದೆ.

ಕನ್ನಡ ಜೈಮಿನಿಭಾರತ: ಕವಿ ಲಕ್ಮೀಶ ರಚಿಸಿರುವ ಜೈಮಿನಿಭಾರತದ ೧೮ ರಿಂದ ೨೧ನೆಯ ಸಂಧಿಯವರೆಗೂ ಉತ್ತರರಾಮಾಯಣದ ಸೀತಾವಿಯೋಗದ ವೃತ್ತಾಂತ ಬಂದಿದೆ. ಇದನ್ನು ಕವಿ ಪದ್ಮಪುರಾಣವನ್ನನುಸರಿಸಿ ರಚಿಸಿರುವುದೆಂದು ಗುರುತಿಸಬಹುದು. ಲವಕುಶರು ಯಜ್ಞಾಶ್ವವನ್ನು ಕಟ್ಟಿ ಯುದ್ಧಮಾಡುವುದು, ಅಂತ್ಯದಲ್ಲಿ ರಾಮ ಪತ್ನಿಪುತ್ರರನ್ನು ಸ್ವೀಕರಿಸುವ ಸುಖಾಂತದ ವಿಚಾರಗಳೆಲ್ಲ ಪದ್ಮಪುರಾಣದ ಕಥಾವಸ್ತುವಾಗಿದೆ.

ಶ್ರೀರಾಮಾಶ್ವಮೇಧ: ಗದ್ಯಕಾವ್ಯವಾದ ಮುದ್ದಣ ಕೃತ ಶ್ರೀರಾಮಾಶ್ವಮೇಧವು ಶೇಷರಾಮಾಯಣ, ಪದ್ಮಪುರಾಣಗಳನ್ನನುಸರಿಸಿರುವುದಲ್ಲದೆ. ಲಕ್ಷ್ಮೀಶನ ಪ್ರಭಾವವನ್ನೂ ಇವನ ಕೃತಿಯಲ್ಲಿ ಗುರುತಿಸಬಹುದು.

ಸಂಕ್ಷೇಪ ಉತ್ತರಕಾಂಡ ರಾಮಾಯಣ: ಎಂ.ವೆಂಕಟರಮಣಯ್ಯನವರು ರಚಿಸಿರುವ ಈ ಕಾವ್ಯವು ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿರುವ ಕಾವ್ಯ. ಇದು ೧೯೩೦ರಲ್ಲಿ ಉಡುಪಿಯ ಶ್ರೀಮನ್‌ಮಧ್ವಸಿದ್ಧಾಂತ ಗ್ರಂಥಾಲಯದಿಂದ ೧೯೩೦ರಲ್ಲಿ ಪ್ರಕಟವಾಗಿದೆ.

ವಿಭಿನ್ನಶೈಲಿಯ ಕಥಾನಿರೂಪಣೆಯಿರುವ ಕೃತಿಗಳು:

ಲವಕುಶರ ಕಾಳಗ (ಪಟದ ಸಂಧಿ) ೫೦೦ ನುಡಿಗಳಿರುವ ಹೆಳವನಕಟ್ಟೆಗಿರಿಯಮ್ಮರಚಿಸಿರುವ ಈ ಕಥನ ಕಾವ್ಯದಲ್ಲಿ ಲವಕುಶರ ಕಾಳಗದ ಪ್ರಸಂಗ ಬರುತ್ತದೆ. ಇದೊಂದು ಹೊಸರೀತಿಯ ಪರಿಕಲ್ಪನೆಯಾಗಿದೆ. ಇಲ್ಲಿ ಅಗಸನ ನಿಂದೆಯು ಬರುವುದಿಲ್ಲ ಬದಲಿಗೆ ಶೂರ್ಪನಖಿಯು ಕೊರವಿಯಾಗಿ ಬಂದು ಉಪಾಯದಿಂದ ರಾವಣನ ಚಿತ್ರವನ್ನು ಮಾಯಾ ಪಟದಲ್ಲಿ ಸೀತೆಯಿಂದಲೇ ಬಿಡಿಸುತ್ತಾಳೆ. ಕತ್ತರಿಸಿದರೆ ಹರಿಯದ, ಬೆಂಕಿಗ್ಹಾಕ್ಲಿ ಸುಡದ, ನೀರಿನಲ್ಲಿಟ್ಟರೆ ನೆನೆಯದ ಆ ಪಟವನ್ನು ನೋಡಿ ಕೋಪಗೊಂಡ ರಾಮ ಸೀತೆಯನ್ನು ಕಾಡಿಗೆ ಕಳಿಸುತ್ತಾನೆ. ಮುಂದಿನ ಕಥೆಯು ಪದ್ಮಪುರಾಣದ ಕಥೆಯಂತೆಯೇ ರಾಮನ ಅಶ್ವವನ್ನು ಕಟ್ಟಿಹಾಕಿ ಕುಶಲವರು ಯುದ್ಧಮಾಡುವುದು, ಅಂತ್ಯದಲ್ಲಿ ನಿಜವನ್ನರಿತ ರಾಮ ಪತ್ನಿಪುತ್ರರನ್ನು ಸೇರುತ್ತಾನೆ.

ಮೂಲಕರಾಮಾಯಣ: ಮೂಲಕಾಸುರನು ವಿಭೀಷಣ, ರಾಮ ಲಕ್ಷ್ಮಣ, ಭರತಾದಿಗಳನ್ನು ಸೋಲಿಸಿ ಕುಶನಿಂದ ಹತನಾಗುವ ವಿಶಿಷ್ಟಕಥೆಯನ್ನು ಹೊಂದಿರುವ ಈ ಕಾವ್ಯವು ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ. ೬ ಸಂಧಿ ಗಳಲ್ಲಿ ೩೬೯ ಪದ್ಯಗಳಲ್ಲಿ ಕವಿಯು ಕಥೆಯನ್ನು ನಿರೂಪಿಸಿದ್ದಾನೆ.

ಕುಮಾರ ಕಾಳಗ: ಪದ್ಮಸಾಲೆ ತಿಮ್ಮಣನ ಈ ಕೃತಿಯನ್ನು ಸಾಂಗತ್ಯದಲ್ಲಿ ರಚಿಸಿದ್ದಾನೆ. ಇಲ್ಲಿ ೬ಸಂಧಿಗಳಲ್ಲಿ ವರ್ಣಿತವಾಗಿರುವ ಕತೆಯು ಪೂರ್ಣಭಿನ್ನವಾಗಿದೆ. ಇಲ್ಲಿ ತಾಟಕಿ ಇನ್ನೂ ಬದುಕಿರುತ್ತಾಳೆ ಅಲ್ಲದೆ ಇವಳನ್ನು ರಾವಣನ ತಂಗಿಯೆಂದು ಚಿತ್ರಿಸಲಾಗಿದೆ. ಇವಳು ಅಯೋಧ್ಯೆಯ ಜನಕ್ಕೆ ತೊಂದರೆ ಕೊಡುವುದಲ್ಲದೆ, ಕೊರವಂಜಿಯಾಗಿ ಬಂದು ಸೀತೆಯಿಂದ ರಾವಣನ ಚಿತ್ರಬರೆಸಿ, ರಾಮ ಕೋಪಗೊಳ್ಳುವಂತೆ ಮಾಡುತ್ತಾಳೆ. ಇಲ್ಲಿಯ ಲಕ್ಷ್ಮಣ ಅತ್ತಿಗೆಯನ್ನು ಹತ್ಯೆಗೆಯ್ಯಲು ಮುಂದಾಗುತ್ತಾನೆ ಅದು ಫಲಿಸದಿರಲು ಕಾಡಿನಲ್ಲಿ ಬಿಟ್ಟುಬರುತ್ತಾನೆ. ಕಾಡಿನಲ್ಲಿ ಸೀತೆಯು ತನ್ನ ತಂದೆ ಜನಕನ ಆಶ್ರಮಸೇರುತ್ತಾಳೆ. ಸೀತೆಗೆ ಜನಿಸುವುದು ಲವಮಾತ್ರ, ನದಿಗೆ ಹೋಗಿದ್ದ ಸೀತೆ ತಂದೆಗೆ ಹೇಳದಂತೆ ಮಗುವನ್ನು ಕರೆದೊಯ್ಯುತ್ತಾಳೆ. ತೊಟ್ಟಿಲಲ್ಲಿ ಮಗುವಿಲ್ಲದಿರುವುದನ್ನು ನೋಡಿ ಜನಕನು ದರ್ಭೆಯನ್ನು ಮಂತ್ರಿಸಿ ಮಗುವನ್ನು ಮಾಡಿ ತೊಟ್ಟಿಲಲ್ಲಿಡುತ್ತಾನೆ, ಮರಳಿಬಂದ ಸೀತೆಯಸಂಗಡ ಮಗುವಿರುವುದನ್ನು ಕಂಡಮೇಲೆ ತೊಟ್ಟಿಲಲ್ಲಿರುವ ಮಗುವೂ ಸೀತೆಯದೇ ಪ್ರಸವದವೇಳೆಯಲ್ಲಿ ಹೇಳಿರಲಿಲ್ಲವೆಂದು ತಿಳಿಸಿ ಅದಕ್ಕೆ ಕುಶನೆಂದು ಹೆಸರಿಡುತ್ತಾನೆ. ಲವಕುಶರು ಬೆಳೆಯುತ್ತಾ ಸಹಜವಾದ ಕ್ಷತ್ರಿಯಗುಣಗಳನ್ನು ತೋರುತ್ತಾ ಪ್ರಾಣಿಪಕ್ಷಿಗಳ ಬೇಟೆಯಾಡುತ್ತಾರೆ. ತಾಯಿಯಿಂದ ತಮ್ಮ ತಂದೆಯ ವಿಚಾರ ತಿಳಿದ ಲವಕುಶರು ಕಾಡಿನ ದಾರಿಯಲ್ಲಿ ಬರುತ್ತಿರುವಾಗ ಇವರನ್ನು ಸಾಯಿಸಲೆಂದು ಬಂದ ತಾಟಕಿಯ ಮೂಗುಮುರಿದು

ಕಳಿಸುತ್ತಾರೆ. ಕೋಪಗೊಂಡ ತಾಟಕಿ ಅಣ್ಣ ವಿಭೀಷಣನಿಗೆ ದೂರು ನೀಡುತ್ತಾಳೆ. ತಂಗಿಯ ಮಾತುಕೇಳಿ ವಿಭೀಷಣ ಲವಕುಶರನ್ನೆದರಿಸಲು ಬಂದು ಸೋತು ಲಂಕೆಗೆ ಹಿಂದಿರುಗುತ್ತಾನೆ. ಹೇಗಾದರೂ ಇವರನ್ನು ಸಾಯಿಸಬೇಕೆಂದು ತಾಟಕಿಯು ಅಯೋಧ್ಯೆಯ ಜನರ ಮುಂದೆ ಕೊರವಂಜಿಯಾಗಿ ಮೈಮೇಲೆ ದೇವರು ಬಂದಂತೆ ನಟಿಸುತ್ತಾ ಕಾಡಿನ ಇಬ್ಬರು ವೀರರನ್ನು ಬಲಿಕೊಟ್ಟಲ್ಲಿ ಊರು ಉಳಿಯುತ್ತದೆಯೆಂದು ತಿಳಿಸಿ ಮೂರುಮೊಗದ ದೇವತೆಯಂತೆ ನಿಲ್ಲುತ್ತಾಳೆ. ವಿಷಯ ತಿಳಿದ ರಾಮ ಲವಕುಶರನ್ನು ಸೆರೆಹಿಡಿದುತರಲು ಸೈನ್ಯವನ್ನು ಕಳಿಸುತ್ತಾನೆ. ವೀರಾವೇಶದಿಂದ ಹೋರಾಡಿ ಕಡೆಗೆ ಲವ ಸೆರೆಯಾಳಾಗಿ ಅಯೋಧ್ಯೆಯ ಕಾರಾಗೃಹದಲ್ಲಿ ಬಂಧಿತನಾಗುತ್ತಾನೆ. ಅವನನ್ನು ಬಿಡಿಸಿತರಲೆಂದು ಬಂದ ಕುಶನಿಗೆ ತಾಟಕಿಯ ವಿಚಾರ ತಿಳಿಯುತ್ತದೆ. ತಾಯಿಕೊಟ್ಟ ಉಂಗುರದ ಮಹಿಮೆಯಿಂದ ಲವನನ್ನು ಬಿಡಿಸಿಕೊಂಡು ತಾಟಕಿಯನ್ನು ಸಂಹರಿಸುತ್ತಾನೆ. ಅಂತಿಮವಾಗಿ ರಾಮನಿಗೆ ಲವಕುಶರು ತನ್ನಮಕ್ಕಳೆನ್ನುವ, ಸೀತೆ ನಿರಪರಾಧಿಎನ್ನುವ ವಿಚಾರ ತಿಳಿದು ಎಲ್ಲರನ್ನೂ ಸ್ವೀಕರಿಸುತ್ತಾನೆ.

ಶ್ರೀರಾಮಾಭ್ಯುದಯ ಕಥಾಕುಸುಮಮಂಜರಿ: ಈ ಕೃತಿಯನ್ನು ಕನ್ನಡ ಆನಂದ ರಾಮಾಯಣವೆಂದೂ ಕರೆಯಲಾಗುತ್ತದೆ. ತಿಮ್ಮಾಮಾತ್ಯ ಇದರ ಕರ್ತೃ. ಇಲ್ಲಿಯೂ ರಾವಣನ ಚಿತ್ರವೇ ಸೀತಾವಿಯೋಗಕ್ಕೆ ಕಾರಣವಾಗುತ್ತದೆ. ಆದರೆ ರಾವಣನ ಚಿತ್ರ ಬರೆಯುವವಳು ಕೈಕೇಯಿ. ಇವಳು ಸೀತೆಯಿಂದ ರಾವಣನ ಅಂಗುಷ್ಠವನ್ನು ತನ್ನರಮನೆಯ ಗೋಡೆಯಮೇಲೆ ಬರೆಯಿಸಿ ಅವಳು ಹೋದನಂತರ ಆ ಅಂಗುಷ್ಠಕ್ಕನುಗುಣವಾಗಿ ಪಾದ, ಕೈಕಾಲು ದಶಶಿರಗಳನ್ನು ರಚಿಸಿ, ರಾಮನಿಗೆ ಸೀತೆಯಮೇಲೆ ಸಂಶಯ ಬರುವಂತೆ ಮಾಡುತ್ತಾಳೆ. ಇದರ ಜೊತೆಗೆ ಅಗಸನ ವಿಚಾರವೂ ಬರುತ್ತದೆ. ಹೀಗಾಗಿ ರಾಮನು ಸೀತೆಯನ್ನು ತ್ಯಜಿಸಲು ನಿರ್ಧರಿಸುತ್ತಾನೆ. ಇಲ್ಲಿ ರಾಮನು ಲಕ್ಷ್ಮಣನಿಗೆ ಸೀತೆಯನ್ನು ಕೊಂದು ಕುರುಹನ್ನು ತರುವಂತೆ ಆಜ್ಞೆಮಾಡಿರುತ್ತಾನೆ. ಹಾಗಾಗಿ ಲಕ್ಷ್ಮಣ ವಿಶ್ವಕರ್ಮನ ನೆರವಿಂದ ಕೃತಕ ಮುಂಗೈಯನ್ನು ತಂದು ರಾಮನಿಗೆ ಕೊಡುತ್ತಾನೆ. ಇಲ್ಲಿ ರಾಮ ತೊಂಬತ್ತೊಂಬತ್ತು ಅಶ್ವಮೇಧಯಾಗ ಮಾಡಿರುತ್ತಾನೆ, ನೂರನೆಯ ಯಜ್ಞಮಾಡಲು ನಿರ್ಧರಿಸುತ್ತಾನೆ. ಇತ್ತ ವಾಲ್ಮೀಕಿ ಆಶ್ರಮ ಸೇರಿದ ಸೀತೆ ಲವನಿಗೆ ಜನ್ಮನೀಡುತ್ತಾಳೆ. ಕುಮಾರಕಾಳಗದಲ್ಲಿಯ ಪ್ರಸಂಗದಂತೆಯೆ ಕುಶನನ್ನು ಪಡೆಯುತ್ತಾಳೆ. ಇಲ್ಲಿ ಸೀತೆ ರಾಮನ ಸಮಾಗಮನವನ್ನು ಬಯಸಿ ವಾಲ್ಮೀಕಿಮುನಿಗಳು ಹೇಳಿದಂತೆ ರಾಮನ ಪಾದುಕೆಗಳನ್ನು ಮಾಡಿಸಿ ಒಂಬತ್ತು ದಿವಸಗಳವರೆಗೆ ಸು[illegible] ಕಮಲಗಳಿಂದ ಪೂಜಿಸುವ ವ್ರತಹಿಡಿಯುತ್ತಾಳೆ. ತಾಯಿಗಾಗಿ ಲವನು ನಿತ್ಯವೂ ರಾಮನ ಅರಮನೆಯ ಉದ್ಯಾನವನದಲ್ಲಿ ಬೆಳೆಯುವ ಸುವರ್ಣಕಮಲವನ್ನು ತಂದುಕೊಡುತ್ತಾನೆ. ಹೂ ತರುವಾಗ ರಾಮನ ಸೈನಿಕರು ಎಷ್ಟೇಹೋರಾಡಿದರೂ ಅವರನ್ನೆಲ್ಲ ಸೋಲಿಸಿ ಪರಾಕ್ರಮದಿಂದ ಹೂವಿನೊಡನೆ ಮರಳುತ್ತಿರುತ್ತಾನೆ. ಸೈನಿಕರ ದೂರಿನ ಮೇರೆಗೆ ರಾಮನು ವಾಲ್ಮೀಕಿಗಳಿಗೆ ಲವನನ್ನು ಕರೆದುಕೊಂಡು ಕೂಡಲೇ ಬರಬೇಕೆಂದು ತಿಳಿಸುತ್ತಾನೆ. ರಾಮನಬಳಿಗೆ ಬಂದ ಲವಕುಶರು ಹಾಡಿದ ರಾಮಾಯಣಕಾವ್ಯವನ್ನು ಕೇಳಿ ರಾಮನು ಅವರನ್ನು ಕ್ಷಮಿಸಿ ಕಳಿಸುತ್ತಾನೆ. ಮುಂದೆ ಪದ್ಮಪುರಾಣದ ಧಾಟಿಯಲ್ಲಿ ಲವಕುಶರು ರಾಮನ ಯಜ್ಞಾಶ್ವವನ್ನು ಕಟ್ಟಿ ಯುದ್ಧಮಾಡುತ್ತಾರೆ. ಲವಕುಶರು ತನ್ನಮಕ್ಕಳೆಂದು ತಿಳಿದ ರಾಮ ಲವಕುಶರೊಂದಿಗೆ ಸೀತೆಯನ್ನೂ ಬರಮಾಡಿಕೊಳ್ಳುತ್ತಾನೆ. ಸೀತೆಗೆ ಎಲ್ಲರೆದುರು ಪರಿಶುದ್ಧಳೆಂದು ಸಾಬೀತುಪಡಿಸುವಂತೆಕೇಳಿದಾಗ ವಾಲ್ಮೀಕಿರಾಮಾಯಣದಂತೆ ಭೂಮಿ ಬಿರಿದು ಭೂದೇವಿ ಸೀತೆಯನ್ನು ಕರೆದುಕೊಂಡು ಹೊರಡುತ್ತಾಳೆ. ಕೋಪಗೊಂಡರಾಮ ಬಿಲ್ಲಿಗೆ ಬಾಣಹೂಡಲು ಭೂದೇವಿ ಸೀತೆಯನ್ನು ತಂದೊಪ್ಪಿಸುತ್ತಾಳೆ. ಸುಖಾಂತವಾಗುತ್ತದೆ.

ಇಲ್ಲಿ ಜಾನಪದ ರಾಮಾಯಣ, ಪದ್ಮಪುರಾಣ, ವಾಲ್ಮೀಕಿರಾಮಾಯಣ ಎಲ್ಲವನ್ನೂ ಸೇರಿಸಿ ಕಥೆಯನ್ನು ನಿರೂಪಿಸಲಾಗಿದೆ.

ರಾಮಾಯಣದರ್ಶನಂ: ಕುವೆಂಪು ವಿರಚಿತ ರಾಮಾಯಣ ದರ್ಶನಂ ಕೃತಿಯಲ್ಲಿ ಉತ್ತರಕಾಂಡವನ್ನು ರಚಿಸಿಲ್ಲವಾದರೂ ಶ್ರೀ ಸಂಪುಟದಲ್ಲಿ ರಾವಣನು ಶಿವೆಯಲ್ಲಿ ತಾನು ರಾಮನನ್ನು ಸೋಲಿಸಬೇಕೆಂದು, ತನಗೆ ಸೀತೆಯು ಸೋಲಬೇಕೆಂದು ಕೇಳಿಕೊಳ್ಳುತ್ತಾನೆ. ಅವನ ಕೋರಿಕೆಯನ್ನು ಸಲ್ಲಿಸುವೆನೆಂಬ ಅಭಯವಿತ್ತ ದೇವಿ. ಮುಂದೆ ರಾವಣನು ಸೀತೆಯ ಮಗನಾಗಿ ಜನಿಸುವನೆಂದು ಆಗ ಸೀತೆಯು ಒಲಿದು ಅವನನ್ನು ಮುದ್ದಿಸುವಳೆಂದೂ ಆಗ ರಾಮನೊಡನೆ ಯುದ್ಧಮಾಡಿ ಅವನನ್ನು ಸೋಲಿಸುವುದಾಗಿ ವರನೀಡಿ ಅದೃಶ್ಯಳಗುತ್ತಾಳೆ. ರಾವಣನಿಗೆ ಮುಂದಿನದು ಗೋಚರಿಸುವಂತೆ ರಾವಣ ಕುಂಭಕರ್ಣರು ಲವಕುಶರಾಗಿ ಆಶ್ರಮದಲ್ಲಿ ಸೀತೆಯ ಮಡಿಲಿನಲ್ಲಿ ಬೆಳೆಯುತ್ತಿರುವ ದೃಶ್ಯಕಂಡು ರಾವಣ ಬೆಚ್ಚಿಬೀಳುತ್ತಾನೆ.

ಇಲ್ಲಿ ಕುವೆಂಪುರವರು ಉತ್ತರಕಾಂಡದ ವಿಚಾರವನ್ನು ಸೂಕ್ಷ್ಮವಾಗಿ ತಿಳಿಸಿದ್ದಾರೆ. ಇವರು ಮಾಡಿಕೊಂಡ ಮಾರ್ಪಾಟಿನಪ್ರಕಾರ ರಾವಣ ಕುಂಭಕರ್ಣರೇ ಲವಕುಶರಾಗಿ ಜನಿಸುತ್ತಾರೆ.

ಜೈನರಾಮಾಯಣದಲ್ಲಿನ ಉತ್ತರರಾಮಾಯಣಗಳು: ಜೈನರಾಮಾಯಣವು ಸಂಪೂರ್ಣ ಭಿನ್ನವಾಗಿ ಚಿತ್ರಿತವಾಗಿರುವಂತೆಯೇ ಉತ್ತರರಾಮಾಯಣವೂ ಭಿನ್ನವಾಗಿಯೇ ಇದೆ. ಇಲ್ಲಿಯೂ ಸೀತೆಯನ್ನು ಜನಾಪವಾದದ ಕಾರಣದಿಂದಲೇ ರಾಮ ತ್ಯಜಿಸುತ್ತಾನೆ. ಸೀತೆಯನ್ನು ಕಾಡಿಗೆ ಬಿಡುವುದ ಲಕ್ಷ್ಮಣನಲ್ಲ ಬದಲಿಗೆ ಕೃತಾಂತವಕ್ತ್ರ. ಈ ಹಿಂದೆ ಸೀತೆಗೆ ಶರಭಗಳೆರಡು ತನ್ನ ಮುಖವನ್ನು ಹೊಕ್ಕಹಾಗೆ ಮತ್ತು ಪುಷ್ಪಕವು ಭೂಮಿಗೆ ಅಪ್ಪಳಿಸಿದ ಹಾಗೆ ಕನಸುಬೀಳುತ್ತದೆ. ಅಂತೆಯೆ ಮೊದಲನೆಯ ಶುಭ ಸ್ವಪ್ನದಂತೆ ಸೀತೆ ಗರ್ಭಿಣಿಯಾಗುತ್ತಾಳೆ, ಎರಡನೆಯ ದುಃಸ್ವಪ್ನದಂತೆ ಕಾಡಿಗೆ ಹೋಗುವ ಪ್ರಸಂಗ ಬರುತ್ತದೆ. ಕಾಡಿನಲ್ಲಿ ಬೇಟೆಗೆಂದು ಬಂದಿದ್ದ ಸೋಮವಂಶದ ದ್ವಿರದವಾಹನ ಮತ್ತು ಸುಬಂಧುದೇವಿಯ ಮಗ ಪುಂಡತೀಕಿಣೀಪುರದ ಅರಸು ವಜ್ರಜಂಘನು, ಸೀತೆಯನ್ನು ಕಂಡು ಅವಳ ವೃತ್ತಾಂತವನ್ನು ತಿಳಿದು ಜಿನಧರ್ಮದ ಕಾರಣದಿಂದಾಗಿ ಅವಳು ತನ್ನ ತಂಗಿ ಎಂದು ಬಗೆದು ತನ್ನೊಡನೆ ಕರೆದೊಯ್ದು ತನ್ನಕ್ಕ ಶೀಲವತಿಯ ಅರಮನೆಯಲ್ಲಿರಿಸುತ್ತಾನೆ. ಅಲ್ಲಿ ಲವಕುಶರ ಜನನವಾಗುತ್ತೆ. ಬೆಳೆದ ಲವಕುಶರು ಪೃಥುವೆಂಬ ರಾಜನನ್ನು ಜಯಿಸಲು ಅವನ ಮಗಳು ಕುಶನನ್ನು ವರಿಸುತ್ತಾಳೆ. ತಮ್ಮತಾಯಿಯ ವೃತ್ತಾಂತ ತಿಳಿದ ಕುಶಲವರು ಅಯೋಧ್ಯೆಯನ್ನು ಮುತ್ತಿ ಯುದ್ಧಮಾಡಿ ಲಕ್ಷ್ಮಣನನ್ನು ಸೋಲಿಸುತ್ತಾರೆ. ಇವರು ತನ್ನ ಮಕ್ಕಳೆಂದು ತಿಳಿದ ರಾಮ ಇವರನ್ನು ಸ್ವೀಕರಿಸುತ್ತಾನೆ. ಸೀತೆಯನ್ನೂ ಇವರು ಬರಮಾಡಿಕೊಂಡು ಲೋಕಪ್ರತ್ಯಯವಾಗುವಂತೆ ಸಚ್ಚಾರಿತ್ರ್ಯವನ್ನು ಮೆರೆಯುವಂತೆ ರಾಮ ಸೂಚಿಸಲು ಸೀತೆ ಅಗ್ನಿಪ್ರವೇಶಿಸಿ ಪುನೀತಳೆಂದು ಸಾಬೀತು ಪಡಿಸುತ್ತಾಳೆ. ಆದರೆ ಕೂಡಲೆ ಜಿನಧರ್ಮವನ್ನು ಸ್ವೀಕರಿಸಿ ಪೃಥುಮತಿ ಕಂತಿಯರ ಸಮ್ಮುಖದಲ್ಲಿ ದೀಕ್ಷೆಪಡೆಯುತ್ತಾಳೆ. ಮುಂದೆ ಸೀತೆ, ರಾಮ, ಲಕ್ಷ್ಮಣ, ರಾವಣ ಮೊದಲಾದವರ ಭವಾವಳಿಗಳನ್ನು ಕೇವಲಿಗಳಿಂದ ಕೇಳಿತಿಳಿಯುತ್ತಾರೆ. ಒಮ್ಮೆ ರತ್ನಚೂಲನೆಂಬುವನ ಮಾಯೆಗೆ ಸಿಲುಕಿ ಲಕ್ಷ್ಮಣ ಅಸುನೀಗುತ್ತಾನೆ. ಅತ್ಯಂತ ದುಃಖಿಯಾದ ರಾಮ ಅವನ ಶವವನ್ನು ಹೊತ್ತು ತಿರುಗುತ್ತಿರುತ್ತಾನೆ. ಜಟಾಯು ಮೊದಲಾದವರು ನಾನಾ ಉಪಾಯಗಳಿಂದ ಲಕ್ಷ್ಮಣನ ಶವಸಂಸ್ಕಾರ ನಡೆಯುವಂತೆ ಮಾಡುತ್ತಾರೆ. ಕಡೆಗೆ ರಾಮ ಭಟ್ಟಾರಕನಾಗಿ ಉಗ್ರೋಗ್ರ ತಪವನ್ನು ಕೈಗೊಳ್ಳುತ್ತಾನೆ. ಲವಕುಶರು, ಹನುಮ ಸುಗ್ರೀವಾದಿ ಸಕಲರೂ ತಮ್ಮ ತಮ್ಮ ಮಕ್ಕಳಿಗೆ ಪಟ್ಟಕಟ್ಟಿ ದೀಕ್ಷೆಪಡೆದು ಮೋಕ್ಷಹೊಂದುತ್ತಾರೆ. ಸೀತೇಂದ್ರನೆಂಬುವನು ಅಚ್ಯುತಕಲ್ಪದಿಂದ ಬಂದು ಸೀತೆಯ ರೂಪಧರಿಸಿ ರಾಮನನ್ನು ಅನೇಕರೀತಿಯಲ್ಲಿ ಪರೀಕ್ಷಿಸಲು ರಾಮನು ಇನ್ನೂ ಕಠೋರವಾಗಿ ತಪಸ್ಸುಮಾಡುತ್ತಾನೆ ಹಾಗೂ ಕೇವಲಜ್ಞಾನ ಪಡೆಯುತ್ತಾನೆ.

ನಾಗಚಂದ್ರನ 'ರಾಮಚಂದ್ರಚರಿತಪುರಾಣಂ' (ಪಂಪರಾಮಾಯಣ), ಕುಮುದೇಂದುವಿನ 'ಕುಮುದೇಂದು ರಾಮಾಯಣ', ಚಂದ್ರಸಾಗರವರ್ಣಿಯ 'ಜಿನರಾಮಾಯಣ' ಮೊದಲಾದವು ಜೈನ ಸಂಪ್ರದಾಯದಲ್ಲಿ ರಚಿತವಾಗಿರುವ ಉತ್ತರರಾಮಾಯಣದ ಕೃತಿಗಳು.

ಮೇಲೆ ತಿಳಿಸಿರುವ ವಿಭಿನ್ನ ಸಂಪ್ರದಾಯದ ಸಂಸ್ಕೃತ ಉತ್ತರ ರಾಮಾಯಣ ಕಾವ್ಯಗಳೊಂದಿಗೆ ಪ್ರಸಿದ್ಧವಾದ ಮತ್ತೊಂದು ಕಾವ್ಯ ಭವಭೂತಿಯ 'ಉತ್ತರರಾಮ ಚರಿತ' ಭವಭೂತಿಯು ತನ್ನ 'ಉತ್ತರರಾಮಚರಿತೆ'ಯಲ್ಲಿ ಇನ್ನೂ ಹೆಚ್ಚಿನ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಇದೊಂದು ನಾಟಕವಾಗಿರುವುದರಿಂದ ಇದರಲ್ಲಿ ೭ ಅಂಕಗಳಲ್ಲಿ ಕಥೆಯನ್ನು ನಿರೂಪಿಸಲಾಗಿದೆ. ಇಲ್ಲಿ ಸೀತೆಯನ್ನು ಪರಿತ್ಯಜಿಸುವ ಸಂದರ್ಭದಲ್ಲಿ ಕೌಸಲ್ಯ ಮೊದಲಾದ ರಾಜಮಾತೆಯರು ಋಷ್ಯಶೃಂಗನು ೧೨ ವರ್ಷಕಾಲ ನಡೆಸುತ್ತಿದ್ದ ಯಜ್ಞದಲ್ಲಿ ಭಾಗವಹಿಸಲು ಹೋಗಿರುತ್ತಾರೆ, ೧೨ ವರ್ಷಗಳ ನಂತರ ಅಲ್ಲಿಂದ ನೇರವಾಗಿ ವಾಲ್ಮೀಕಿ ಆಶ್ರಮಕ್ಕೆ ಬರುತ್ತಾರೆ. ಸೀತೆಯು ವಾಲ್ಮೀಕಿಯ ಆಶ್ರಮವನ್ನು ಸೇರುವುದಿಲ್ಲ. ಪ್ರಸವವೇದನೆಯನ್ನು ಸಹಿಸಲಾರದೆ ಗಂಗಾನದಿಗೆ ಹಾರಿಕೊಳ್ಳುತ್ತಾಳೆ. ಆಗ ಗಂಗೆ ಹಾಗೂ ಪೃಥ್ವಿಯರು ಅವಳನ್ನು ರಕ್ಷಿಸಿ, ಜನಿಸಿದ ಲವಕುಶರನ್ನು ಸ್ವಲ್ಪದಿನಗಳ ನಂತರ ವಾಲ್ಮೀಕಿ ಆಶ್ರಮಕ್ಕೆ ತಂದು ಬಿಡುತ್ತಾರೆ. ವಾಲ್ಮೀಕಿಯರೇ ಅವರಿಗೆ ಚೌಲ, ವಿದ್ಯಾಭ್ಯಾಸಗಳನ್ನು ಮಾಡಿಸುತ್ತಾರೆ. ಅಶ್ವಮೇಧಯಾಗವನ್ನು ಮಾಡಬಯಸಿದ ರಾಮ ಯಾಗದ ಕುದುರೆಯ ಜೊತೆಗೆ ಲಕ್ಷ್ಮಣನ ಮಗನನ್ನು ನೇಮಿಸುತ್ತಾನೆ. ಇಲ್ಲಿ ಶಂಬೂಕನ ವಧೆಯ ಪ್ರಸಂಗ ರಾಮನಿಗೆ ಸೀತಾ ಹಾಗು ಲವಕುಶರನ್ನು ಭೇಟಿಮಾಡಿಸುತ್ತದೆ. ಶಂಭುಕನನ್ನು ವಧಿಸಿ

ಹಿಂತಿರುಗಿಬರುತ್ತಿದ್ದ ರಾಮ ಚಂದ್ರಕೇತು(ಲಕ್ಷ್ಮಣನ ಮಗ) ಹಾಗೂ ಲವನ ನಡುವೆ ನಡೆಯುತ್ತಿದ್ದ ಯುದ್ಧವನ್ನುನೋಡಿ ಪುಷ್ಪಕವಿಮಾನದಿಂದ ಇಳಿದು ಬಂದು ಲವನ ಶೌರ್ಯವನ್ನು ಪ್ರಶಂಸಿಸುತ್ತಾ ಕುಶ ಹಾಗೂ ವಾಲ್ಮೀಕಿ ಆಶ್ರಮದವರೊಡನೆ ತನ್ನ ತಾಯಿ, ಜನಕ ವಸಿಷ್ಠ ಮೊದಲಾದವರನ್ನು ಭೇಟಿಮಾಡುತ್ತಾನೆ.

ಇಲ್ಲಿನ ಇನ್ನೊಂದು ಮಾರ್ಪಾಡೆಂದರೆ ವಿಶ್ವಾಮಿತ್ರರು ರಾಮನಿಗೆ ಕೊಟ್ಟಿದ್ದ ಜೃಂಭಕಾಸ್ತ್ರವು ಅವನ ಮಕ್ಕಳಾದ ಲವಕುಶರಿಗೆ ಜನನದಾರಭ್ಯ ದೊರೆತಿರುತ್ತದೆ. ರಾಮನಿಗೆ ಸೀತೆಯ ಗರ್ಭದಲ್ಲಿ ಅವಳಿ ಮಕ್ಕಳಿರುವುದೂ ತಿಳಿದಿರುತ್ತದೆ. ಲವಕುಶರು ಸೀತೆಯ ಮಕ್ಕಳಿರಬಹುದೆಂದು ಗುರುತಿಸಲು ಇದೂ ಒಂದು ಸಾಧನ. ೩ನೆಯ ಅಂಕದಲ್ಲಿ ಭೂನಿವಾಸಿಗಳಿಗ ಅಗೋಚರಳಾಗಿದ್ದ ಸೀತೆ ಅನೇಕಬಾರಿ ಮೂರ್ಚೆಗೊಂಡ ರಾಮನನ್ನು ಉಪಚರಿಸುತ್ತಾಳೆ. ಈ ನಾಟಕದಲ್ಲಿ ಸರಯೂ, ಮುರಲಾ, ಗೋದಾವರಿ, ಗಂಗಾನದಿಗಳು, ವನದೇವತೆ, ವಾಸಂತಿಕ ಮೊದಲಾದ ಸ್ತ್ರೀಯರೆಲ್ಲಾ ಪಾತ್ರಧಾರಿಗಳು. ಏಳನೆಯ ಅಂಕದಲ್ಲಿ ಗಂಗಾನದಿಯ ತೀರದಲ್ಲಿ ರಾಮ ಮೊದಲಾದವರು ನಾಟಕವೊಂದನ್ನು ವೀಕ್ಷಿಸುತ್ತಿರುತ್ತಾರೆ, ಅದು ಸೀತಾವಿಯೋಗವ ನಂತರದ ಸೀತೆಯ ಕಥೆ. ನಾಟಕ ನಡೆಯುತ್ತಿರುವಂತೆಯೇ ಗಂಗೆ ಹಾಗು ಪೃಥ್ವಿಯರು ಸೀತೆಯನ್ನು ತಂದು ರಾಮನಿಗೆ ಒಪ್ಪಿಸಿ ಅವಳ ಚಾರಿತ್ರವನ್ನು ಹೊಗಳುತ್ತಾರೆ. ರಾಮ ತನ್ನ ಪತ್ನಿ ಪುತ್ರರನ್ನು ಒಡಗೂಡುತ್ತಾನೆ. ಹೊಸಗನ್ನಡ ಕಾಲಘಟ್ಟದಲ್ಲಿ ಭವಭೂತಿಯನ್ನನುಸರಿಸಿರುವ ಕೆಲವು ಉತ್ತರರಾಮಾಯಣಗಳೂ ಕನ್ನಡದಲ್ಲಿ ರಚಿತವಾದವು.

ಲೋಕದಲ್ಲಿ ಮನುಷ್ಯನು ತಂದುಕೊಳ್ಳುವ ಅವಘಡಗಳೆಲ್ಲಾ ಹೊನ್ನು ಹೆಣ್ಣು ಮಣ್ಣಿಗಾಗಿಯೇ ಎನ್ನುವುದೊಂದು ಲೋಕೋಕ್ತಿ. ರಾಮಾಯಣವು ಹೆಣ್ಣಿಗಾಗಿ ನಡೆದಂತಹ ಮಹಾಸಮರವನ್ನು ವರ್ಣಿಸುವ ಕಥೆ. ಸಹಜವಾಗಿ ಇಲ್ಲಿ ಸೀತೆಯ ಪ್ರಮುಖ ಪಾತ್ರವಾಗಿದ್ದಾಳೆ. ತಂದೆಯವಚನವನ್ನು ಪರಿಪಾಲಿಸಲೆಂದು ರಾಜ್ಯವನ್ನು ತೊರೆದು ಬಂದ ರಾಮ, ಸೀತೆಗಾಗಿ ರಾವಣನೊಂದಿಗೆ ಯುದ್ಧಮಾಡುತ್ತಾನೆ. ಅಧರ್ಮದಿಂದ ಸೀತೆಯನ್ನು ಕದ್ದೊಯ್ದಿದ್ದ ರಾವಣ ರಾಮನಿಂದ ಹತನಾಗುತ್ತಾನೆ. ಹೀಗೆ ಸಜ್ಜನಿಕೆ ಸೌಜನ್ಯದೊಂದಿಗೆ ಶೂರ, ಪರಾಕ್ರಮಿಯಾದ ರಾಮ ಸೀತೆಯ ಪಾತ್ರವನ್ನೂ ಮೀರಿ ನಿಲ್ಲುತ್ತಾನೆ. ಈ ಪ್ರಕಾರವಾಗಿ ಕೊಂಚ ಗೌಣವೆನಿಸಿದ ಸೀತೆಯ ಪಾತ್ರವನ್ನು ಎತ್ತಿಹಿಡಿಯಬೇಕೆಂದೆ ಉತ್ತರರಾಮಾಯಣ ನಿರ್ಮಿತವಾದಂತಿದೆ.

ಉತ್ತರರಾಮಾಯಣ ಮೂಲರಾಮಾಯಣದೊಂದಿಗೇ ರಚಿತವಾದುದೇ ಅಥವಾ ಪ್ರಕ್ಷಿಪ್ತಭಾಗವೇ ಎನ್ನುವ ಚರ್ಚೆಗಿಂತ ಪೂರ್ವರಾಮಾಯಣದಷ್ಟೇ ಜನಪ್ರಿಯವಾಗಿ, ಜನಮನವನ್ನು ಗೆದ್ದಿದೆ ಎನ್ನುವ ಸಂಗತಿ ಪೂರ್ವರಾಮಾಯಣದಷ್ಟೇ ಸಂಖ್ಯೆಯಲ್ಲಿ ಅಥವ ಅಧಿಕಸಂಖ್ಯೆಯಲ್ಲಿ ರಚಿತವಾಗಿರುವ ಉತ್ತರರಾಮಾಯಣ ಕೃತಿಗಳಿಂದ ಸಾಬೀತಾಗಿದೆ.

ಉತ್ತರರಾಮಾಯಣದ ರಚನೆಗೆ ಕನ್ನಡದ ಕವಿಗಳು ಏಕೈಕ ಆಕರವನ್ನು ಹಿಡಿಯದೆ ವಿಭಿನ್ನ ಆಕರಗಳ ಕಥೆಗಳನ್ನೂ ಪದ್ಧತಿಗಳನ್ನೂ ಅನುಸರಿಸಿದ್ದಾರೆ. ಮೂಲ ವಾಲ್ಮೀಕಿರಾಮಾಯಣವೇ ಮುಂದೆ ಕಾಲಕಾಲಕ್ಕೆ ಸಂಸ್ಕೃತಸಾಹಿತ್ಯದಲ್ಲಿ ಜನಪ್ರಿಯವಾಗುತ್ತ ಬಂದಂತೆ ನಾನಾ ವಿಧವಾದ ಮತಶ್ರದ್ಧೆಗಳು, ಅಭಿರುಚಿಗಳು, ಪ್ರಭಾವಗಳಿಗೊಳಗಾಗಿ ವಿವಿಧ ಸಂಪ್ರದಾಯದ ಕಥೆಗಳಾಗಿ ಕವಲೊಡೆಯಿತು. ರಾಮಕಥೆಗಳ ವಸ್ತು ಪಾತ್ರ ಸನ್ನಿವೇಶ ನೀತಿ ಮೊದಲಾದವು ಸಹಜವಾಗಿ ಜನಜೀವನದಲ್ಲಿಯೂ ಸಾಹಿತ್ಯದಲ್ಲಿಯೂ ಪ್ರಭಾವಕಾರಿಯಾದುವು. ಕವಿಗಳು ತಮ್ಮ ತಮ್ಮ ಅಭಿರುಚಿ ಮತಶ್ರದ್ಧೆ ಮೊದಲಾದವುಗಳಿಂದ ಪ್ರೇರಿತರಾಗಿ ಸಮಗ್ರವಾಗಿಯೂ ಸಂಕ್ಷೇಪವಾಗಿಯೂ ಪೂರ್ಣವಾಗಿಯೂ ಆಖ್ಯಾನೋಪಾಖ್ಯಾನಗಳ ರೂಪವಾಗಿಯೂ ಕೃತಿರಚನೆ ಮಾಡಿದರು. ಪ್ರಾಯಃ ವಾಲ್ಮೀಕಿರಾಮಾಯಣಕ್ಕಿಂತ ಈ ಕವಲುಸಂಪ್ರದಾಯದ ರಾಮಾಯಣಗಳೇ ವಿಶೇಷವಾಗಿ ಕನ್ನಡಕವಿಗಳ ಮನಸೆಳೆದಂತೆ ತೋರುತ್ತದೆ. ಸಂಪೂರ್ಣ ರಾಮಾಯಣದ ರಚನೆಗಿಂತ ಅದರ ಬಿಡಿಬಿಡಿಯಾದ ಕಥಾಭಾಗಗಳ ರಚನೆಯೇ ಅವರಿಗೆ ಹೆಚ್ಚು ಹಿಡಿಸಿದಂತೆ, ಸುಲಭವೆನಿಸಿದಂತೆ ತೋರುತ್ತದೆ[೮]. ಇಷ್ಟೆಲ್ಲಾ ವಿಭಿನ್ನ ಉತ್ತರರಾಮಾಯಣಗಳು ಬಂದಿದ್ದರೂ ಎಸ್.ವಿ.ರಂಗಣ್ಣನವರು ಮುದ್ದಣನ ಕೃತಿ ವಿಮರ್ಶೆಯ ಸಂದರ್ಭದಲ್ಲಿ ರಾಮಾಶ್ವಮೇಧ ಕಥೆಯನ್ನು ಉನ್ನತವಾಗಿ ರಚಿಸುವ ವರಕವಿಗೆ ಇನ್ನೂ ಕನ್ನಡದಲ್ಲಿ ಜಾಗ ತೆರವಾಗಿದೆ[೯] ಎಂದಿದ್ದಾರೆ.

**ಅಡಿಟಿಪ್ಪಣಿಗಳು**

೧. ಮುದ್ದಣ 'ಅದ್ಭುತ ರಾಮಾಯಣ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಜೆ.ಸಿ.ರಸ್ತೆ, ಬೆಂಗಳೂರು.
೨. ಕುಮಾರವ್ಯಾಸ, ಕರ್ಣಾಟಭಾರತ ಕಥಾಮಂಜರಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.
೩. ಡಿ.ವಿ.ಜಿ, ಉಪೋದ್ಘಾತ, ಶ್ರೀಮದ್ವಾಲ್ಮೀಕಿ ರಾಮಾಯಣದ ಕನ್ನಡ ಅನುವಾದ.
೪. ಟಿ.ವಿ. ವೆಂಕಟಾಚಲಶಾಸ್ತ್ರಿ, ಶಾಸ್ತ್ರೀಯ, ಸಪ್ನ ಬುಕ್‌ಹೌಸ್, ಬೆಂಗಳೂರು.
೫. ಎಸ್.ವಿ.ರಂಗಣ್ಣ, ಶತಮಾನದ ಸಾಹಿತ್ಯ ವಿಮರ್ಶೆ ಪು.೧೦೭.

**ಆಕರಗ್ರಂಥ**


೧. ಶ್ರೀಮದ್ವಾಲ್ಮೀಕಿ ರಾಮಾಯಣ (ಉತ್ತರಕಾಂಡ) ಕನ್ನಡ ಅನುವಾದ.
೨. ತಿರುಮಲೆ ವೈದ್ಯ, 'ಉತ್ತರರಾಮಾಯಣ', (ಸಂ)ರಾಮಾನುಜಯ್ಯಂಗಾರ್.
೩. ಖಾಸಾ ಚಾಮರಾಜ ಒಡೆಯರ್ ಶ್ರೀಚಾಮರಾಜೋಕ್ತಿವಿಲಾಸ (ಸಂ) ಎನ್.ರಂಗನಾಥ್ ಶರ್ಮ
೪. ನಂ ಸುಬ್ಬಾಶಾಸ್ತ್ರಿ ಉತ್ತರಸೀತಾ ಚರಿತ್ರೆ, ಗೀತಾ ಪ್ರೆಸ್, ೧೮೯೮
೫. ಲಕ್ಮೀಶ 'ಕನ್ನಡ ಜೈಮಿನಿಭಾರತ (ಸಂ) ದೇವುಡು ನರಸಿಂಹಶಾಸ್ತ್ರೀ, ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು. ೧೯೫೬.
೬ ಮುದ್ದಣ, 'ಶ್ರೀರಾಮಾಶ್ವಮೇಧ' ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಜೆ.ಸಿ.ರಸ್ತೆ, ಬೆಂಗಳೂರು.
೬ ಎಂ.ವೆಂಕಟರಮಣಯ್ಯ ಸಂಕ್ಷೇಪ ಉತ್ತರಕಾಂಡ ರಾಮಾಯಣ ೧೯೩೦ರಲ್ಲಿ ಉಡುಪಿಯ ಶ್ರೀಮನ್‌ಮದ್ವಸಿದ್ಧಾಂತ ಗ್ರಂಥಾಲಯ೧೯೩೦.
೭. ಹೆಳವನಕಟ್ಟೆಗಿರಿಯಮ್ಮ, ಲವಕುಶರ ಕಾಳಗ (ಪಟದ ಸಂಧಿ), ಗಿರಿಯಮ್ಮನ ಹಾಡುಗಳು, (ಸಂ) ಟಿ.ಕೆ.ಇಂದುಬಾಯಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ. ೧೯೮೭
೮. ಪದ್ಮಸಾಲೆ ತಿಮ್ಮಣ, 'ಕುಮಾರ ಕಾಳಗ' (ಸಂ) ಕೆ.ರಾಘವೇಂದ್ರ ರಾವ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ. ೧೯೭೩.
೯. ತಿಮ್ಮಾಮಾತ್ಯ ಶ್ರೀರಾಮಾಭ್ಯುದಯ ಕಥಾಕುಸುಮಮಂಜರಿ (ಕನ್ನಡ ಆನಂದ ರಾಮಾಯಣ)
೧೦. ಕುವೆಂಪು, ರಾಮಾಯಣ ದರ್ಶನಂ,
೧೧. 'ಭವಭೂತಿ' ಅನು: ಜಿ.ಎಸ್.ಗಾಯಿ, ಪ್ರಸಾರಾಂಗ, ಮೈಸೂರು ವಿಶ್ವಿವಿದ್ಯಾನಿಲಯ, ೧೯೯೧
೧೨. ನಾಗಚಂದ್ರ ಕವಿಯ ಪಂಪರಾಮಾಯಣ (ರಾಮಚಂದ್ರಚರಿತಪುರಾಣಂ) ಗದ್ಯ ಕಥನ, ಡಾ.ಪಿ.ವಿ.ನಾರಾಯಣ, ವಸಂತ ಪ್ರಕಾಶನ, ಬೆಂಗಳೂರು.
೧೩. ಕುಮುದೇಂದು 'ಕುಮುದೇಂದು ರಾಮಾಯಣ',
೧೪. ಚಂದ್ರಸಾಗರವರ್ಣಿ 'ಜಿನರಾಮಾಯಣ'


****

# ಕುಮಾರವ್ಯಾಸನ ಭೀಷ್ಮಪರ್ವ ಸಂಗ್ರಹ ಪಠ್ಯಕ್ಕೆ ಅಂಗಡಿನೋಟ್ಸಿನ ಹೊಸ ಪಾಠಾಂತರಗಳು

* ಪ್ರೊ॥ ಜಿ. ಅಶ್ವತ್ಥನಾರಾಯಣ

ಕನ್ನಡದಲ್ಲಿ ಕುಮಾರವ್ಯಾಸ ಭಾರತದ ಹಸ್ತಪ್ರತಿಗಳು ನೂರಾರಿವೆ. ಕಾರಣವೆಂದರೆ ಅವನಂತಹ ಜನಪ್ರಿಯ ಕವಿ ಇನ್ನೊಬ್ಬನಿಲ್ಲ ಎಂದರೆ ತಪ್ಪಾಗಲಾರದು. ಪಂಪ, ರನ್ನ ಮೊದಲಾದ ಕವಿಗಳು ಪಂಡಿತ ವಲಯದಲ್ಲಿ ಪ್ರಸಿದ್ಧರು. ಆದರೆ ಕುಮಾರವ್ಯಾಸ ಪಂಡಿತ ಪಾಮರ, ಉಭಯ ವಲಯಗಳಲ್ಲೂ ಪ್ರಸಿದ್ಧನಾದವನು. ನಾಡಿನಾದ್ಯಂತ ಅವನ ಕೃತಿಯ ಹಸ್ತಪ್ರತಿಗಳು ಸಿಗುತ್ತವೆ. ಸಂಸ್ಥೆಗಳಲ್ಲಿ, ಖಾಸಗೀ ಸಂಗ್ರಹಗಳಲ್ಲಿ ಇರುವ, ಅಚ್ಚಾದ ಗ್ರಂಥಗಳಲ್ಲಿ ದೊರಕುವ ಕುಮಾರ ವ್ಯಾಸ ಭಾರತದ ಸಮಗ್ರ, ಪಾಠಾಂತರಗಳನ್ನು ಇನ್ನೂ ಗುರುತಿಸಲಾಗಿಲ್ಲ. ಕೇವಲ ೧೫–೨೦ ತಾಳೆಗರಿ ಆಧಾರಿತ ಪಾಠಾಂತರಗಳಷ್ಟೆ ಸಿಕ್ಕಿವೆ. ಇದುವರೆಗೆ ಅಚ್ಚಾಗಿರುವ ಕುಮಾರವ್ಯಾಸ ಭಾರತದ ಪೂರ್ಣಪಠ್ಯ ಮತ್ತು ಸಂಗ್ರಹಗಳಲ್ಲಿ ತಾಳೇಗರಿ ಅಥವಾ ಕೋರಿಕಾಗದ ಪ್ರತಿಗಳ ಆಧಾರದ ಮೇಲೆ ಸಂಪಾದಿತವಾಗಿ ಪ್ರಕಟವಾದ ಗ್ರಂಥಗಳು ಕೆಲವೇ ಕೆಲವು. ೮–೧೦ ತಾಳೆಗರಿಗಳ ಆಧಾರಿತ ಡಿಎಲ್ಎನ್ ಸಂಪಾದಿತ ಭೀಷ್ಮಪರ್ವ ಪೂರ್ಣ ಪಠ್ಯ ಮತ್ತು ಸಂಗ್ರಹಗಳು, ಧಾರವಾಡ್ಕರ್ ಎಂ.ವಿ.ಸೀ. ಶೇಷಗಿರಿ ರಾವ್ ಮೊದಲಾದವರು ಪ್ರಕಟಿಸಿರುವ ಭೀಷ್ಮಪರ್ವ ಸಂಗ್ರಹಗಳು. ತಾಳೆಗರಿಗಳ ಪಾಠಗಳನ್ನು ಆಧರಿಸಿವೆ. ಅನೇಕ ಸಂಗ್ರಹಗಳು ಪಠ್ಯ ಪುಸ್ತಕ ಮಾಡುವುದಕ್ಕಾಗಿ ಅಚ್ಚಾದ ಗ್ರಂಥಗಳಿಂದ ಕಿತ್ತು ಹಾಕಿಕೊಂಡ ಪಠ್ಯಗಳ ಸಂಗ್ರಹಗಳಾಗಿವೆ. ಇನ್ನು ಕುಮಾರವ್ಯಾಸ ಭಾರತದ ಪಠ್ಯಗಳಿಗೆ ಹಲವಾರು  ಮಂದಿ ಗದ್ಯಾನುವಾದ ಬರೆದಿದ್ದಾರೆ. ಎಲ್. ಗುಂಡಪ್ಪ, ಎನ್ಕೆ ಭಾರತದ ಬಿಂದೂರಾಯರು, ಅರಾಸೇ ಅವರು ಮುಖ್ಯರು. ಅವರೆಲ್ಲರ ಕೃತಿಗಳಲ್ಲಿ ಪದಶಃ ಅರ್ಥಾನುಸಾರವಾದ ಗದ್ಯಾನುವಾದವಿಲ್ಲ. ತಾತ್ಪರ್ಯಾನುವಾದವಾಗಿದೆ.

ಇನ್ನು ಕುಮಾರವ್ಯಾಸ ಭಾರತದ ಪರ್ವಗಳನ್ನು ಅವುಗಳ ಸಂಗ್ರಹಗಳನ್ನು ಅನೇಕ ಬಾರಿ ಪಠ್ಯಪುಸ್ತಕವನ್ನಾಗಿ ಶಾಲೆಕಾಲೇಜುಗಳಿಗೆ ಗೊತ್ತು ಮಾಡಿದ್ದಾರೆ ಈಗಲೂ ಗೊತ್ತು ಮಾಡುತ್ತಿದ್ದಾರೆ. ಇವುಗಳಿಗೆ ಹಲವಾರು ಜನ ನೋಟ್ಸ್‌ಗಳನ್ನು ಪರೀಕ್ಷಾ ದೃಷ್ಟಿಯಲ್ಲಿ ವಿದ್ಯಾರ್ಥಿಗಳಿಗೆ ಪ್ರಯುಕ್ತವಾಗುವಂತೆ ಬರೆದಿದ್ದಾರೆ. ಈ ನೋಟ್ಸ್‌ಗಳನ್ನು ಬರದಿರುವಲ್ಲಿ ಕುಮಾರವ್ಯಾಸನ ಕಾವ್ಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ತಪ್ಪು ತಪ್ಪಾಗಿ ಬರೆದವರೂ ಇದ್ದಾರೆ. ಘನ ವಿದ್ವಾಂಸರಿಂದ ಸಂಪಾದಿತವಾದ ಕುಮಾರವ್ಯಾಸನ ವಿದ್ಯಸಂಗ್ರಹಗಳಿಗೆ ಸೊಗಸಾದ ವಿದ್ಯತ್ಪೂರ್ಣವಾದ ಅಂಗಡಿನೋಟ್ಸ್ ಬರೆದವರೂ ಇದ್ದಾರೆ. ಬೆಳ್ಳಾವೆ ನರಹರಿಶಾಸ್ತ್ರಿ, ವೆಂಕಟಸುಬ್ಬಾಚಾರ್ಯ, ಎಚ್. ಶೇಷಯ್ಯಂಗಾರ್ ಮುಂತಾದ ವಿದ್ಯಾಂಸರಿದ್ದಾರೆ. ಅವರಲ್ಲಿ ಎಚ್. ಶೇಷಯ್ಯಂಗಾರ್ (ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪಂಡಿತರಾಗಿದ್ದವರು) ಡಿ.ಎಲ್.ಎನ್ ಅವರು ೧೯೩೧ನೇ ಇಸವಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ವಿದ್ಯಾಭ್ಯಾಸ ಇಲಾಖೆಗಾಗಿ ಸಿದ್ಧಪಡಿಸಿದ ಭೀಷ್ಮಪರ್ವ ಸಂಗ್ರಹ (ಸು. ೨೦೦ ಪದ್ಯಗಳು)ವನ್ನು ೮ ತಾಳೆಗರಿ ಪ್ರತಿಗಳಿಂದ ಸಂಪಾದಿಸಿ ವಿದ್ಯತ್ಪೂರ್ಣವಾಗಿ ಪಾಠಾಂತರಗಳನ್ನು ಕೊಟ್ಟು ಪ್ರಕಟಿಸಿದ್ದಾರೆ. ಈ ಅನುಭವದ ಮೇಲೆ ಭೀಷ್ಮಪರ್ವವನ್ನು ಇನ್ನಷ್ಟು ಪರಿಷ್ಕಾರವಾಗಿ ಓರಿಯೆಂಟಲ್ ಲೈಬ್ರರಿಯು ಕುಮಾರವ್ಯಾಸ ಭಾರತದ ಸಮಗ್ರ ಪ್ರರ್ಕದನೆ ಮಾಲೆಯಲ್ಲಿ ಭೀಷ್ಮಪರ್ವವನ್ನು ಪೂರ್ಣವಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ.

ಡಿ.ಎಲ್.ಎನ್. ಅವರು ೧೯೩೧ರಲ್ಲಿ ಸಂಪಾದಿಸಿದ ಭೀಷ್ಮಪರ್ವ ಸಂಗ್ರಹ ಪಠ್ಯಕ್ಕೆ (SSLC ಪರೀಕ್ಷೆಗೆ ಪಠ್ಯವಾಗಿತ್ತು) ಅದಕ್ಕೆ ಎಚ್ ಶೇಷಯ್ಯಂಗಾರ್ ಅವರು ತಮ್ಮಲ್ಲಿದ್ದ ಕುಮಾರವ್ಯಾಸನ ಕಾವ್ಯದ ತಾಲೆಗರಿ ಆಧಾರದ ಮೇಲೆ ಹೊಸ ಪಾಠಾಂತರಗಳನ್ನು ನೋಟ್ಸ್‌ನಲ್ಲಿ ಕೊಟ್ಟಿದ್ದಾರೆ. ಸುಮ್ಮನೆ ಪಾಠಾಂತರಗಳನ್ನು ಕೊಟ್ಟಿಲ್ಲ. ಡಿ.ಎಲ್.ಎನ್. ಅವರು ಪಠ್ಯದಲ್ಲಿ ಕೊಟ್ಟಿರುವ ಪಾಠಾಂತರ ಯಾಕೆ ಸಮಂಜಸವಲ್ಲ ಎಂಬುದನ್ನು ವಿವರಿಸಿ ತಮ್ಮ ಪಾಠಾಂತರ ಹೆಚ್ಚು ಸೂಕ್ತ ಎಂಬುದನ್ನು ವಿವರಿಸಿದ್ದಾರೆ. ಈ ಅಂಗಡಿನೋಟ್ಸ್ ಈ ದೃಷ್ಟಿಯಿಂದ ಅಮೂಲ್ಯ ಆಕರವಾಗಿದೆ. ಈ ಪಾಠಾಂತರಗಳನ್ನು ಯಾರೂ ಗಮನಿಸಿದಂತಿಲ್ಲ. ಈ ಅಂಗಡಿನೋಟ್ಸಿನ ಮತ್ತೊಂದು ವಿಶೇಷವೆಂದರೆ ಪಠ್ಯ ಪುಸ್ತಕದಲ್ಲಿ ಪಾಠಾಂತರಗಳನ್ನು ಕೊಟ್ಟವರಲ್ಲಿ ಡಿಎಲ್ಎನ್ ಕನ್ನಡದಲ್ಲಿ ಮೊದಲಿಗರಾದ

---

* ನಂ ೯೫ ೩೪ನೆ ಬಿ ಅಡ್ಡರಸ್ತೆ ೧೬ನೆ ಮುಖ್ಯರಸ್ತೆ ೪ನೆ ಟಿ ಬ್ಲಾಕ್ ಜಯನಗರ ಬೆಂಗಳೂರು – ೪೧

ಅಂಗಡಿನೋಟ್ಸ್‌ನಲ್ಲಿ ಪಾಠಾಂತರಗಳನ್ನು ಕೊಟ್ಟವರಲ್ಲಿ ಎಚ್. ಶೇಷಯ್ಯಂಗಾರ್ಯರೇ ಮೊದಲಿಗರು ಮತ್ತು ಕನ್ನಡದಲ್ಲಿ ಪಾಂಡಿತ್ಯ ಪೂರ್ಣ ಪ್ರತಿ ಪದಾರ್ಥ ತಾತ್ಪರ್ಯ ಟಿಪ್ಪಣಿಗಳನ್ನು ಕುಮಾರವ್ಯಾಸ ಭಾರತಕ್ಕೆ ಅಂಗಡಿನೋಟ್ಸಿಗೆ ಬರೆದವರಲ್ಲಿ ಎಚ್ ಶೇಷಯ್ಯಂಗಾರರೇ ಮೊದಲಿಗರು ಎನ್ನಬಹುದು. ಇದೇ ರೀತಿ ರಾಜಶೇಖರ ವಿಳಾಸ, ಶಬರ ಶಂಕರವಿಳಾಸ ಮೊದಲಾದ ಪಠ್ಯ ಸಂಗ್ರಹಗಳಿಗೆ ವಿದ್ವತ್ಪೂರ್ಣ ಟಿಪ್ಪಣಿಗಳನ್ನು ಬರೆದ ವಿದ್ವಾಂಸರಿದ್ದಾರೆ. ಇವರೆಲ್ಲ ಸ್ವಾತಂತ್ರ್ಯಪೂರ್ವದ ಕನ್ನಡ ವಿದ್ವಾಂಸರು ಎಂಬುದನ್ನು ಗಮನಿಸಬೇಕು. ಈವತ್ತು ಅಂಗಡಿ ನೋಟ್ಸುಗಳು ಬರುತ್ತಿವೆ. ಅವುಗಳ ಗುಣಮಟ್ಟ ಕಳಪೆ ಎಂದಷ್ಟೇ ಹೇಳಬಹುದಾಗಿದೆ ಮತ್ತು ಈ ಅಂಗಡಿನೋಟ್ಸ್ ಬರೆಯುತ್ತಿರುವವರು ವಿದ್ವಾಂಸರಲ್ಲಿ ಎಂದು ನನ್ನೆಣಿಕೆ.

ವಿದ್ವಾಂಸರೊಬ್ಬರು ಶಾಲಾ ಪಠ್ಯಕ್ಕೆ ಟಿಪ್ಪಣಿ ಬರೆದರೆ ಹೇಗಿರುತ್ತದೆ ಹೇಗೆ ಶ್ರೇಷ್ಠ ಸಂಪಾದಿತ ಗ್ರಂಥವಾಗುತ್ತದೆ ಎಂಬುದನ್ನು ಎಚ್. ಶೇಷಯ್ಯಂಗಾರ್ಯರ ಭೀಷ್ಮಪರ್ವ ಸಂಗ್ರಹ ನೋಟ್ಸ್ ಉದಾಹರಣೆಯಾಗಿದೆ. ಗ್ರಂಥ ಸಂಪಾದನಾ ದೃಷ್ಟಿಯಿಂದ ಡಿ.ಎಲ್.ಎನ್. ಅವರು ಸಂಪಾದಿಸಿರುವ ಭೀಷ್ಮಪರ್ವದ ಸಂಗ್ರಹಕ್ಕೆ ಶೇಷಯ್ಯಂಗಾರ್ ಸೂಚಿಸಿರುವ ಹೊಸ ಪಾಠಗಳನ್ನು ತೌಲನಿಕವಾಗಿ ಈ ಲೇಖನದಲ್ಲಿ ಸಂಗ್ರಹಿಸಿ ವಿದ್ವಾಂಸರ ಅವಗಾಹನೆಗಾಗಿ ಕುಮಾರವ್ಯಾಸ ಭಾರತವನ್ನು ಸಂಪಾದಿಸುವುದಾಗಿ ಕೊಡಲಾಗಿದೆ.

**ಡಿಎಲ್‌ಎನ್ ಪಾಠಗಳು ಮತ್ತು ಎಚ್. ಶೇಷಯ್ಯಂಗಾರ್ ಪಾಠಗಳು**

ಭೀಷ್ಮಪರ್ವ ಸಂಪಾದನೆಗೆ ಬಳಸಿದ ಪ್ರತಿಗಳ ವಿವರ ಹೀಗಿದೆ.

ಮೈಸೂರು ಪ್ರಾಚ್ಯಕೋಶಾಗಾರದ ೫ ಪ್ರತಿಗಳನ್ನು ಬಳಸಿದೆ.

೧. ಕ = ೨೦೫ನೇ ನಂಬರಿನ ಪ್ರತಿ. ಕ್ರಿ.ಶ. ೧೫೫೪ರಲ್ಲಿ ಪ್ರತಿಮಾಡಲ್ಪಟ್ಟಿದೆ. ನಮಗೆ ದೊರೆತ ಕನ್ನಡ ಭಾರತದ ಕೈ ಬರಹ ಪ್ರತಿಗಳಲ್ಲಿ ಅತ್ಯಂತ ಪ್ರಾಚೀನವಾದುದು. ಇದರಲ್ಲಿ ಪಾಠವು ಶುದ್ದವಾಗಿರುವುದರಿಂದ ಸಾಮಾನ್ಯವಾಗಿ ಇದನ್ನೇ ಮೂಲಪಾಠವನ್ನಾಗಿ ಅಂಗೀಕರಿಸಿದೆ.

೨. ಗ = ಕೆ ೭೦ನೇ ನಂಬರಿನ ಪ್ರತಿ. ಶಾ.ಶ. ೧೭೬೩ (ಕ್ರಿ.ಶ. ೧೮೪೧)ರಲ್ಲಿ ಪ್ರತಿಯಾದುದು.

೩. ಜ = ಕೆ ೩೭೫ ನಂಬರಿನ ಪ್ರಾಚೀನ ಪ್ರತಿ. ಇದರಲ್ಲಿ ಱ ಕಾರವು ಕ್ರಮವಾಗಿ ಉಪಯೋಗಿಸಲ್ಪಟ್ಟಿದೆ.

೪. ಟ = ಇದು ಕೆ. ೨೫೧ನೇ ನಂಬರಿನ ಪ್ರತಿ

೫. ದ = ಕೆ ೧೬೩ನೇ ನಂಬರಿನ ಪ್ರತಿ ಪಾಠವು ಶುದ್ಧವಾಗಿದೆ.

**ಖಾಸಗೀಸಂಗ್ರಹದ ಪ್ರತಿಗಳ ವಿವರ**

೬. ಚ = ಅಳಿಲುಘಟ್ಟಾದ ಶಾನುಭೋಗರು ದಯವಿಟ್ಟು ಕೊಟ್ಟ ಪ್ರತಿ

೭. ತ = ಗೌಜು ಗ್ರಾಮದ ಬ್ರಹ್ಮ ಶ್ರೀ ಗಣೇಶಭಟ್ಟರ ಪ್ರತಿ. ಶಾಸನ ಇಲಾಖೆ ಅಸಿಸ್ಟೆಂಟ್ ಆರ್. ರಾಮರಾಯರ ಮೂಲಕ ಬಂದ ಪ್ರತಿ.

೮. ಪ =ಮದ್ರಾಸ್ ಪ್ರಾಚ್ಯಕೋಶಾಲಯದ ೧೬-೧೮-೧೦ ನಂಬರಿನ ಪ್ರತಿ. ಇದು ಪ್ರಾಚೀನ ಪ್ರತಿಯಂತೆ ತೋರುತ್ತದೆ.

ಎಚ್. ಶೇಷಯ್ಯಂಗಾರ್ ತಮ್ಮ ಸಂಗ್ರಹರಲ್ಲಿ ಇದ್ದ ತಾಳೆಗರಿ ಪ್ರತಿಗಳನ್ನು ಪಾಠಗಳಿಗೆ ಅವಲಂಬಿಸಿದ್ದಾರೆ. ಆದರೆ ಅವರು ತಾವು ಬಳಸಿದ ಪ್ರತಿಗಳ ವಿವರ ಕೊಟ್ಟಿಲ್ಲ. ಅವರಲ್ಲಿದ್ದ ಪ್ರತಿಗಳ ಪಾಠ ಆಐಟ ಕಂಡ ಪ್ರತಿಗಳ ಪಾಠಗಳಿಗಿಂತ ಭಿನ್ನವಾಗಿವೆ.

೧೯೩೧ನೇ ಇಸವಿಯಲ್ಲಿ ಋಋಐಅ ಗೆ ಪಠ್ಯಗ್ರಂಥವಾಗಿ ಡಿ.ಎಲ್. ನರಸಿಂಹಾಚಾರ್ ಅವರು ಟಿ.ಎಸ್. ವೆಂಕಣ್ಣಯ್ಯ ಮತ್ತು ಬಿ.ಎಂ.ಶ್ರೀ. ಅವರ ನೆರವಿನಿಂದ ಭೀಷ್ಮಪರ್ವ ಸಂಗ್ರಹವನ್ನು ಸಿದ್ಧಪಡಿಸಿದರೆಂದು ಹೇಳಲಾಗಿದೆ. ಏಕೆಂದರೆ ಪಠ್ಯದ ಮೇಲೆ ಸಂಪಾದಕರ ಹೆಸರಿಲ್ಲ. ಸುಮಾರು ೨೦೦ ಪದ್ಯಗಳನ್ನು ಈ ಸಂಗ್ರಹ ಒಳಗೊಂಡಿದೆ.

ಈ ಪಠ್ಯದ ಮೂಲ ಪಾಠ ನಿರ್ಣಯಿಸುವುದಕ್ಕೆ ಆಧಾರವಾಗಿಟ್ಟುಕೊಂಡಿರುವ ಪ್ರತಿಗಳು ಮೂರು.

ಕ = ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ ಓಲೆಗರಿಯ ಪ್ರತಿ

ಖ = ಬೇರೆ ಕಡೆ ದೊರೆತ ಓಲೆಯ ಇನ್ನೊಂದು ಪ್ರತಿ

ಗ = ಅಚ್ಚಿನ ಪ್ರತಿ

ಖ, ಗ ಪ್ರತಿಗಳ ಬಗ್ಗೆ ವಿವರ ಕೊಟ್ಟಿಲ್ಲ.

ಈ ಮೂರು ಪ್ರತಿಗಳಲ್ಲಿ ಕಂಡು ಬರದಿರುವ ಪಾಠಗಳನ್ನು ತಮ್ಮ ಬಳಿ ಇದ್ದ ತಾಳೆಗರಿ ಪ್ರತಿಯಿಂದ ಹೆಚ್. ಶೇಷಯ್ಯಂಗಾರ್ಯರು ಪಾಠಾಂತರಗಳನ್ನು ಕೊಟ್ಟು ಅಂಗಡಿನೋಟ್ಸಿನಲ್ಲಿ ಬರೆದಿದ್ದಾರೆ. ಸ್ವಾತಂತ್ರ ಪೂರ್ವದಲ್ಲಿ ಪಠ್ಯಗಳಿಗೆ ನೋಟ್ಸ್ ಬರೆಯುತ್ತಿದ್ದವರು. ಪಂಡಿತರಾಗಿರುತ್ತಿದ್ದರು; ಘನ ವಿದ್ವಾಂಸರಾಗಿರುತ್ತಿದ್ದರು. ಬಹುಶಃ ಆರ್ಥಿಕ ಬವಣೆಯಿಂದ ಈ ನೋಟ್ಸುಗಳನ್ನು ಬರೆಯಲು ಒಪ್ಪಿಕೊಂಡಂತೆ ಕಂಡುಬರುತ್ತದೆ.

ಭೀಷ್ಮಪರ್ವವನ್ನು ಪೂರ್ಣವಾಗಿ ಡಿ.ಎಲ್. ನರಸಿಂಹಾಚಾರ್ ಅವರು ಸಂಪಾದಕ ಮಂಡಳಿಯ ಸಹಕಾರದೊಡನೆ ಓರಿಯೆಂಟಲ್ ಲೈಬ್ರರಿ ಮಾಲೆಯಲ್ಲಿ ಸಂಪಾದಿಸಿದ್ದಾರೆ. ೧೯೫೦ ರಲ್ಲಿ ೨ನೇ ಮುದ್ರಣದ ಮುನ್ನುಡಿಯಲ್ಲಿ ಈ ವಿವರಗಳನ್ನು ನೀಡಲಾಗಿದೆ.

ಈ ಪರ್ವವನ್ನು ೧೯ ೈ ಬರಹದ ಪ್ರತಿಗಳ ಆಧಾರದಿಂದ ತಿದ್ದಿದೆ.

"ಈ ಪರ್ವವನ್ನು ಶೋಧನೆ ಮಾಡುವುದರಲ್ಲಿ ಎಲ್ಲ ಪ್ರತಿಗಳಲ್ಲಿಯೂ ದೊರೆಯುವ ಪಾಠವನ್ನೇ ಮೂಲ ಪಾಠವನ್ನಾಗಿಟ್ಟುಕೊಂಡು ಕೆಲವು ಪ್ರತಿಗಳಲ್ಲಿ ಮಾತ್ರ ದೊರೆಯುವ ಪಾಠಗಳಲ್ಲಿ ಸೂಕ್ತವಾಗಿ ಕಂಡುಬಂದವುಗಳಲ್ಲಿ ಒಂದೆರಡು ದಿದ್ಯಗಳಾಗಿದ್ದರೆ ಮಟದಡಿಯಲ್ಲಿಯೂ ಅನೇಕ ಪದ್ಯಗಳಾಗಿದ್ದರೆ ಕೊನೆಯಲ್ಲಿ ಪರಿಶಿಷ್ಟವಾಗಿಯೂ ಕೊಟ್ಟಿದೆ" ಎಂದು ಸಂಪಾದಕರು ಹೇಳಿದ್ದಾರೆ (ಮುನ್ನುಡಿ ಪುಟ ಋಋ).

ಭೀಷ್ಮಪರ್ವ ಸಂಗ್ರಹವನ್ನು ಇತರರು ಕೆಲವರು ತಮ್ಮದೇ ಆದ ಪ್ರತಿಗಳನ್ನು ಆಧರಿಸಿ ಸಂಗ್ರಹಿಸಿದ್ದಾರೆ. ಅವುಗಳನ್ನು ಇಲ್ಲಿ ಗಮನಿಸಿಲ್ಲ ಇಲ್ಲಿ ಡಿ.ಎಲ್.ಎನ್. ಅವರ ಭೀಷ್ಮಪರ್ವ ಪೂರ್ಣ ಪಠ್ಯ ಮತ್ತು ಸಂಗ್ರಹ ಪಠ್ಯ ಇವುಗಳೊಡನೆ ಎಚ್. ಶೇಷಯ್ಯಂಗಾರ್ಯರು ನೀಡಿದ ಪಾಠಾಂತರಗಳನ್ನು ಗಮನಿಸಿದೆ. ಡಿ.ಎಲ್.ಎನ್. ಅವರು ನೀಡಿದ ಪಾಠಗಳಿಗಿಂತ ಉತ್ತಮ ಪಾಠ ಕೆಲವೆಡೆ ಶೇಷಯ್ಯಂಗಾರ್ ಸೂಚಿಸಿದ್ದಾರೆ. ಶೇಷಯ್ಯಂಗಾರ್ ಅವರು ನೀಡಿದ ಪಾಠಾಂತರಗಳನ್ನು ತೌಲನಿಕವಾಗಿ ಇಲ್ಲಿ ಪ್ರಸ್ತಾಪಿಸಿದೆ.

೧. ಮೊದಲನೆಯ ಸರಧಿಯ ಸೂಚನಾವಿದ್ಯದಲ್ಲಿ ಉದಾರತೇಜೋಭದ್ರನಾ... ಎಂಬುದಕ್ಕೆ ಶೇ ಅವರು ಉದಾರತೇಜೋ ಭ್ರದ್ನನು ಎಂಬ ಪಾಠವು ಸುರಸವು ಭ್ರದ್ನ ಸೂರ್ಯನು (ಅಧಿಕವಾದ ತೇಜಸ್ಸಿಗೆ ಸೂರ್ಯನಂತಿರುವನು) ಈ ಪಾಠ ಸ್ವೀಕಾರಾರ್ಹವಾಗಿದೆ.

೨. ಭೀಷ್ಮಪರ್ವದ ಸಂಗ್ರಹದಲ್ಲಿ (ಸಂಧಿ ೧ ಪದ್ಯ ೨) ರವಿಜ ಗುರುಸೂತ ಶಲ್ಯ ಕಲಶೋದ್ಭವರು ಎಂಬ ಪದ್ಯದ ಕೊನೆಯ ಸಾಲಿನಲಿ 'ಕರಸಿದ ಪರಿಮಿತಕೆ ತನ್ನಾಪ್ತಮಂತ್ರಿಗಳ' ಪಾಠ ಕೊಟ್ಟಿದ್ದಾರೆ. (ಓರಿ) ಭೀಷ್ಮಪರ್ವದಲ್ಲಿ 'ಕರೆಸಿದನಾಪ್ತರನು ಪರಿಮಿತಕೆ ಮಂತ್ರಿಗಳ' ಎಂಬ ಪಾಠ ಕೊಟ್ಟಿದ್ದಾರೆ. ಅರ್ಥ ವ್ಯತ್ಯಾಸವಿಲ್ಲದಿದ್ದರೂ ಸಂಗ್ರಹದಿಂದ ಬೇರೆ ಆದ ಪಾಠವನ್ನು ಶೇಷಯ್ಯಂಗಾರ್ಯರು ಡಿ.ಎಲ್.ಎನ್ ಕೊಟ್ಟಿದ್ದಾರೆ. ಮಂತ್ರಾಲೋಚನಕೆ ಜನಗಳು ಸ್ವಲ್ಪಮಂದಿಯೇ ಇರಬೇಕಾದುದರಿಂದ

ಅಪರಿಮಿತ ಮಂತ್ರಿಗಳ ಎಂಬ ಪದವು ಉಚಿತವಾಗಿಲ್ಲ. ಪರಿಮಿತದ ತನ್ನಾಪ್ತ ಮಂತ್ರಿಗಳ ಎಂದಿರಬಹುದು ಎಂದು ಹೇಳಿದ್ದಾರೆ.

೩. ಭೀ (ಓರಿ) ೧-೫ರಲ್ಲಿ ಡಿ.ಎಲ್.ಎನ್. ನಾಡಮನ್ನೆಯಗಿನ್ನೆಯರುಗಳ ಎಂಬ ಪಾಠ ನೀಡಿದ್ದಾರೆ. ಸಂಗ್ರಹದಲ್ಲಿ ನಾಡಮನ್ನೆಯಸನ್ನೆಯರುಗಳ  ಪಾಠವಿದೆ.

ಸಂಗ್ರಹದ ಪಾಠದ ಬಗ್ಗೆ 'ಶೇ' ಅವರು ಕೊಟ್ಟಿರುವ ಟಿಪ್ಪಣಿ ಇದು. ಸನ್ನೆಯರು ಸಂಕೇತವುಳ್ಳವರು ಮನ್ನೆಯರು ಮರಡಳಿತ ರಾಜರು ಎಂದು ಸಂಗ್ರಹದ ಪಾಠವನ್ನು ಸಮರ್ಥಿಸಿದ್ದಾರೆ.

೪. ಭೀ (ಓರಿ) ೧-೭ ರಲ್ಲಿ ತಲೆಗಳ ಕಳುಹುವೆನು ಕದನದಲಿ ಕದನದಲಿಕೈದೋರಿದಕುಠಾರರನು ಎಂದಿದೆ. ಸಂಗ್ರಹದಲ್ಲೂ ಇದೇ ಪಾಠವಿದೆ.

'ಶೇ' ಅವರು ಕುಠಾರರನು ಎಂಬುದನ್ನು ಕುಠಾರಕರ ಎಂದು ತಿದ್ದಿದ್ದಾರೆ. ತಲೆಗಳನಿಳುಹುವೆನು ಎಂದು ತಲೆಗಳ ಕಳುಹುವೆನು ಪಾಠವನ್ನು ತಿದಿದ್ದಾರೆ. ಇದು ಊಹಾಪಾಠವೋ ಅವರ ಬಳಿ ಇದ್ದ ಪ್ರತಿಯೋ ತಿಳಿಯದು.

೫. ಹರಿಯ ಹಿಸುಣಿಕೆಯವರ ಚಿತ್ತವ ಬೆರಸಿ ವೈರವ ಬೆಳಸಿ ಬಂದರು... (ಭೀ ೧-೧೯) (ಓರಿ) ಮತ್ತು ಸಂಗ್ರಹ ಎರಡರಲ್ಲೂ ಇದೇ ಪಾಠವಿದೆ. ಶೇ ಅವರು ಬೆರಸಿ ಎಂಬುದನ್ನು ಬೆರಸೆ ಎಂದು ತಿದ್ದಿದ್ದಾರೆ.

೬. ಮಿಕ್ಕ ಮಾತೇಕಿನ್ನು ನೀ ಹಿಂದಿಕ್ಕಿ ಕೊಂಬರೆ ಎಂಬ (ಓರಿ) ಭೀ ೧-೨೨ ನೇ ಪದ್ಯವನ್ನು ಕುರಿತು ಶೇ ಅವರು ಬರೆದಿರುವ ಟಿಪ್ಪಣಿ ಇದು.

"ಈ ಎರಡು ಪದ್ಯಗಳ ನಡುವೆ (೨೨-೨೩) ದುರ್ಯೋಧನನು ಭೀಷ್ಮನೊಡನೆ ಮಾತನಾಡಲಾರಂಭಿಸಿದನು ಎಂಬರ್ಥವನ್ನು ಕೊಡುವ ಪದ್ಯವಿರಬೇಕೆಂದು ಕಾಣುವುದು ಅಥವಾ ಇದು ೨[illegible] ಪದ್ಯವಾಗಿರಬಹುದು. ಅಂತು ಇದು ಈ ಸ್ಥಳದಲ್ಲಿರುವುದು ಸಂಗತವಲ್ಲ"

೭. (ಓರಿ) ಭೀ ೧-೨೩ರಲ್ಲಿ ಮುಯ್ಯನಾನ್ನುವದವರ್ಗೆ ಎಂಬ ಪಾಠವನ್ನು ಸಂಗ್ರಹದಲ್ಲಿ ಮಲಯ್ವನಾ(ನು)ವುದವರ್ಗೆ ಎಂಬ ಪಾಠವನ್ನು ಡಿ.ಎಲ್.ಎನ್ ಕೊಟ್ಟಿದ್ದಾರೆ. ಈ ಬಗ್ಗೆ ಶೇ ಅವರು ಮೆಯ್ಯ ನಾನುವುದವರ್ಗೆ ಎಂಬ ಪಾಠ ಉಚಿತವೆಂದಿದ್ದಾರೆ.

ಅದಕ್ಕೆ ಅವರು ಕೊಟ್ಟಿರುವ ವಿವರಣೆ ಇದು:

"ಮಯ್ವನಾನ್ನುದವರ್ಗೆ ಎಂಬ ಪಾಠ್ಯಪಾಠಕ್ಕೆ ಸಂಗ್ರಹದಲ್ಲಿ ಮೈಯನಾನುದರ್ಗೆ (ಕ): ಮೈಯನಾನೂದವರ್ಗ್ಗೆ (ಖ) ಪಾಠಾಂತರಗಳನ್ನು ಡಿ.ಎಲ್.ಎನ್. ಕೊಟ್ಟಿದ್ದಾರೆ. ಇದನ್ನು ಕುರಿತು ಶೇ ಚರ್ಚಿಸಿದ್ದಾರೆ."

ಮಯ್ವನಾನ್ನುವದವರ್ಗ್ಗೆ ಮಯ್ವು ಅಥವಾ ಮುಯ್ಪು ಎಂಬುದಕ್ಕೆ ಭುಜ ಎಂದರ್ಥವು. ಭುಜವನ್ನು ಆಗುವುದು ಎಂಬುದಕ್ಕೆ ಪ್ರತಿಭಟಿಸುವುದು ಎಂಬರ್ಥವೇ ರೂಢಿಯಾದುದು ಅಲ್ಲದೆ ಆನ್ವುದು ಎಂಬುದು ಹಳಗನ್ನಡ ರೂಪ. ಅವರ್ಗ್ಗೆ ಎಂಬುದಕ್ಕೆ ಶೈಥಿಲ್ಯವನ್ನು ಬಿಡಬೇಕಾಗುವುದು ಆದುದರಿಂದ ಈ ಪಾಠ ಉಚಿತವಲ್ಲ. ಮೈಯನಾನುವುದವರ್ಗೆ (ಖ) ಈ ಪಾಠದಲ್ಲಿಯೂ ಅವರ್ಗ್ಗೆ ಎಂಬಲ್ಲಿ ಶೈಥಿಲ್ಯವಲ್ಲ ಮೈಯನಾನೂದವರ್ಗೆ ಎಂಬಲ್ಲಿ ನಾನೂದು ಎಂಬುದು ಸಾಧು ಶಬ್ದವಲ್ಲ ಆದುದರಿಂದ ಈ ಮೂರು ಪಾಠಕ್ಕಿಂತಲೂ ಮೈಯ್ಯ ನಾನುವುದವರ್ಗೆ ಎಂಬುದು ಉಚಿತಪಾಠವು ಎಂದಿದ್ದಾರೆ. ಆದರೆ ಡಿ.ಎಲ್.ಎನ್. ಮುಯ್ವನಾನ್ನುವದವರ್ಗೆ ಪಾಠ ಸ್ವೀಕರಿಸಿದ್ದಾರೆ ಅವರ್ಗ್ಗೆ ಸರಿಯಲ್ಲ ಎಂದ 'ಶೇ' ಮಾತನ್ನು ಒಪ್ಪಿದ್ದಾರೆ. ಆದರೆ ಮುಯ್ವ ಎಂಬುದಕ್ಕೆ ಬದಲು ಮೈಯ್ಯ ಎಂಬುದನ್ನು ಸ್ವೀಕರಿಸಿಲ್ಲ.

೮. ಭೀ (೬೧) ಮತ್ತು ಸಂಗ್ರಹದಲ್ಲಿ ಡಿ.ಎಲ್.ಎನ್. ಸಂ-೨೫ ರಲ್ಲಿ ಹೀಗಿದೆ :

ಉಚಿತವನು ನೀನರಿಯೆ ವಾರ್ಧಕ
ರುಚಿತನಿಜವನು ನುಡಿಯೆ ನಿನಗವು
ರುಚಿಸವೇ ಮಾಣಲಿಯದಂತಿರಲೀ ಕುಮಂತ್ರಿಗಳ
ವಚನವತಿಗಾಡದಲಿ ನಟ್ಟುದು
ಸಚಿವನಯವಿನ್ನೇಕೆ ಸೇನಾ
ನಿಚಯಕೆಮ್ಮನು ಮೊದಲಿಗನ ಮಾಡರಸ ಕೇಳೆರದ

ಈ ಪದ್ಯದಲ್ಲಿ ಬಂದಿರುವ 'ರುಚಿಸವೇ ಮಾಣಲಿಯದಂತಿರಲಿ ಕುಮಂತ್ರಿಗಳ' ಎಂಬ ಸಾಲಿಗೆ ಬದಲಾಗಿ ರುಚಿಸದಿರ್ದೊಡೆ ಮಾಣಲಹಿತವ ನುಡಿವರಾವಲ್ಲ (ನಿನಗೆ ಇಷ್ಟವಾಗದಿದ್ದರೆ ಹೋಗಲಿ ನಾವೇನೂ ನಿನಗೆ ಕೆಟ್ಟುದನ್ನು ಹೇಳತಕ್ಕವರಲ್ಲ) ಎಂದು ಮುದ್ರಿತವಾದ ಕೆಲವು ಪುಸ್ತಕಗಳಲ್ಲಿ ಈ ಪಾಠಕ್ಕೆ ಬದಲಾದ ಪಾಠವಿದೆ ಈ ಪಾಠವೇ ಲಲಿತ್ವವಾಗಿದೆ ಎಂದಿದ್ದಾರೆ.

ಮತ್ತು ರುಚಿಸದೇ ಎಂಬ ಈಗಿನ ಪಠ್ಯದ ಮಾತಿಗೆ ಕೊಟ್ಟಿರುವ ವಿವರಣೆ ಹೀಗಿದೆ :

"ರುಚಿಸವು + ಏ = ರುಚಿಸವೇ ಎಂಬುದು ಅವಧಾರಣಾರ್ಥಕವು ಪ್ರಶ್ನಾರ್ಥಕವಲ್ಲ. ಪ್ರಶ್ನಾರ್ಥಕವಾದರೆ ರುಚಿಸವೇ = ರುಚಿಸುವುದಿಲ್ಲವೇ ಎಂಬ ಕಾಕುವಿನಿಂದ ರುಚಿಸಿಯೇ ರುಚಿಸುವುದು ಎಂಬ ವಿರೋಧಾರ್ಥವು ಬರುವುದು. ಎಂದು ಹೇಳಿ ಅಂಗಡಿಮುದ್ರಿತ ಪಾಠವನ್ನು 'ಶೇ' ಒಪ್ಪಿದ್ದಾರೆ.

ಈ ಪದ್ಯದಲ್ಲಿ (೧-೨೫) ಸಂಗ್ರಹದಲ್ಲಿ ವಾರ್ಧಕರುಚಿತ ನಿಜವನು ಎಂಬ ಪಾಠವನ್ನು ಸ್ವೀಕರಿಸಿದ್ದು ಭೀ (೬೧)ನಲ್ಲಿ ಅದನ್ನು ಕೈಬಿಟ್ಟು (ಕ) (ಗ) ಪ್ರತಿಗಳ ವಾರ್ಧಕ ರಚಿತ ನಿಜವನು ಎಂಬ ಪಾಠ ಸ್ವೀಕರಿಸಿದ್ದಾರೆ.

ವಾರ್ಧಕರು + ಉಚಿತ ನಿಜವನು ನುಡಿಯೆ ಎಂಬ ಸಂಗ್ರಹದ ಪಾಠವು ವಾರ್ಧಕರಚಿತ + ನಿಜವನು ನುಡಿಯೆ ಎಂಬ ಪಾಠಕ್ಕಿಂತ ಸೂಕ್ತ ಎನಿಸುತ್ತದೆ. ಸಂಗ್ರಹದ ಪಾಠವನ್ನು 'ಶೇ' ಅವರು ಒಪ್ಪಿದ್ದಾರೆ.

೯.

ಮಗನೊಡನೆ ಮೂದಲಿಸಿ ಭೀಷ್ಮನು
ಹೊಗುವಗಡ ಪರಸೇನೆಯನು ಕಾ
ಳೆಗವ ನೋಡುವೆನೆಂಬವೊಲು ತಲೆದೋರಿದನು ದಿನಪ
ನಗೆಯುಡುಗಿ ನಾಚಿದವು ಕುಮುದಾ
ಳಿಗಳು ಮುಂಗಾಣಿಕೆಯ ಹರುಷದೊ
ಳಗಿದು ವಿರಹವ ಬಿಳು ಕೊಟ್ಟುವು ಜಕ್ಕವಕ್ಕಿಗಳು. (ಭೀ (೬೧) ೧-೨೮)

ಸಂಗ್ರಹದಲ್ಲಿ ಡಿ.ಎಲ್.ಎನ್ ಹೊಂಗಾಣಿಕೆಯ ಎಂಬ ಪಾಠವನ್ನು ಪಠ್ಯದಲ್ಲಿ ಕೊಟ್ಟಿದ್ದಾರೆ ಕ, ಗ ಪ್ರತಿಗಳಲ್ಲಿರುವ ಮುಂಗಾಣಿಕೆಯ ಪದವನ್ನು ಟಿಪ್ಪಣಿಯಲ್ಲಿ ಸೂಚಿಸಿದ್ದಾರೆ ಆದರೆ ಭೀ (೬೧)ನಲ್ಲಿ ಹೊಂಗಾಣಿಕೆಯ ಪಾಠ ಸ್ವೀಕರಿಸಿದ್ದಾರೆ ಮುಂಗಾಣಿಕೆಯ ಮತ್ತು ಹೊಂಗಾಣಿಕೆಯ ಎಂಬ ಎರಡು ಪಾಠಗಳಲ್ಲಿ 'ಶೇ' ಅವರು ಮುಂಗಾಣಿಕೆಯ ಎಂಬ ಡಿ.ಎಲ್.ಎನ್ ಕೊಟ್ಟಿರುವ ಪಾಠವನ್ನು ಒಪ್ಪಿಲ್ಲ ಏಕೆಂದರೆ "ಹೊಂಗಾಣಿಕೆಯ ಎಂಬಲ್ಲಿ ಮುಂಗಾಣಿಕೆಯ ಎಂಬ ಪಾಠವುಂಟು. ಆಗ ಮೊದಲ ಕಾಣಿಕೆಯನ್ನು ಕೊಟ್ಟು ಎರಡು ಅರ್ಥವು (ಚಕ್ರವಾಕಗಳು ಸಹಜವಾಗಿ ಯಾವ ಕಾಣಿಕೆಯನ್ನು ಕೊಡಲಿಲ್ಲವಾಗಿ ಈ ಅರ್ಥವೂ ಸಮಂಜಸವಲ್ಲ ಆದ್ದರಿಂದ ಕಂಗಾಣಿಕೆಯ ಎಂಬ ಪಾಠವು ಸುರಸವಾಗಿರುವುದು ಕಣ್ಣುಗಳು ಕಾಣುವಂತಾದುದರಿಂದ ಉಂಟಾವ ಹರುಷದೊಳು ಸಂತೋಷದಿಂದ ಎಂಬುದು ಇದರರ್ಥ" ಎಂದಿದ್ದಾರೆ ೧೯೦೨ರಲ್ಲಿ ಅಚ್ಚಾದ ರಾಜರಾಜೇಶ್ವರಿ ಮುದ್ರಣಾಲಯ ಪ್ರತಿಯಲ್ಲಿರುವ ಹೊಂಗಾಣಿಕೆಯ ಪಾಠವನ್ನು ಡಿ.ಎಲ್.ಎನ್ ಸ್ವೀಕರಿಸರಬೇಕು ಸಂಗ್ರಹ ಮಾಡುವ ಕಾಲಕ್ಕೆ ಎಂದೆನ್ನಿಸುತ್ತದೆ.

೧೦. ಭೀ ೧-೨೯ ರಲ್ಲಿ ಸಂಗ್ರಹ ಮತ್ತು ಮೂಲ ಎರಡರಲ್ಲೂಈ ವಿಸ್ತರಿಸಿದನು ಚಾವಡಿಗೆ ಬಂದನು ಎಂಬ ಪಾಠ ಕೊಟ್ಟಿದ್ದಾರೆ ಇದಕ್ಕೆ ಶೇ ಅವರು ವಿಸ್ತರಿಸಿ ಸಿಂಹಾಸನಕೆ ಬಂದನು ಎಂಬ ಪಾಠ ಕೊಟ್ಟಿದ್ದಾರೆ ವಿವರಗಳನ್ನೇನೂ ಕೊಟ್ಟಿಲ್ಲ ಈ ಪಾಠಾಂತರದ ಆಕಾರ ಸೂಚಿಸಿಲ್ಲ.

೧೧. ಆರತಿಗಳೆತ್ತಿದವು ಬಳಿಕುಪ್ಪಾರತಿಯ ಸೂಚಿಸಿದವು ಎಂಬ ಪಾಠವನ್ನು ಶೇ ಅವರು ಸಂಧಿ ೧-೩೭ರಲ್ಲಿ ಡಿ.ಎಲ್.ಎನ್ ಕೊಟ್ಟಿರುವ ಆರತಿಯನೆತ್ತಿದರು ತಂದುಪ್ಪಾರತಿಯ ಸೂಸಿದರು ಎಂಬ ಪಾಠಕ್ಕೆ ಪ್ರತಿಯಾಗಿ ಸೂಚಿಸಿದ್ದಾರೆ ಈ ಪಾಠ ಬೇರೆಲ್ಲೂ ಕಂಡಿಬಂದಲ್ಲ.

೧೨. ೧-೩೩ ಸಂಗ್ರಹದಲ್ಲಿ ಸೂನುಗಳಿಗಾರಣ್ಯವೇ ಇನ್ನವರಿಗಿಳೆಯೇಕೆ ಎಂಬ ಪಾಠ ಕೊಟ್ಟ ಡಿ.ಎಲ್.ಎನ್ ಭೀ (ಓರಿ)ನಲ್ಲಿ ಸೂನುಗಳಿಗಾರಣ್ಯವೇ ಇನ್ನವರಿಗಿಲೆಯೇಕೆ ಎಂಬ ಪಾಠ ಇಟ್ಟು ಕೊಂಡಿದ್ದಾರೆ. ನೋಟ್ಸಿನಲ್ಲಿ ಭೀ(ಓರಿ)ನಲ್ಲಿಟ್ಟುಕೊಂಡ ಪಾಠವನ್ನು 'ಶೇ' ಅವರು ಸೂಚಿಸಿದ್ದಾರೆ. ಈ ಪಾಠ ಪಾಠಾಂತರಗಳಿಲ್ಲ.

೧೩. ಸಂಧಿ ೧ ಪದ್ಯ ೩೯ ನಿನ್ನೊಡನೊರಲಿ (ಭೀ (ಓರಿ) ನಿನ್ನೊಡನೆಂದು (ಶೇ) ಭೀ ಓರಿನಲ್ಲಿ ಈ ಪಾಠವಿಲ್ಲಿ

**ಸಂಧಿ ೨ ಪಾಠಾಂತರಗಳ**

೧೪. ಡಿ.ಎಲ್.ಎನ್ (ಸಂ)೨-೩ ಭೀ (ಓರಿ) ೨-೨೩ ನಿಂದು ನೀವು ಕಾದುವರೆನವಾಗಿನ್ನೆಂದು ಹರಿವುದು ಬವರ ಭೀ ಓರಿ (೨-೨೩)

ಊ ಶೇ ಪಾಠ (೨-೩)

ನಿಂದು ನೀವು ಕಾದುವೊಡೆಯಗೆಯಿನ್ನೆಂದೆಂದು ಹರಿಯದು ಬವೇ

೧೫. ಭೀ (ಓರಿ) ೨-೨೪ (ಸಂ) ೨-೪

ಹದವೆರದೆವಗೆ ನೇಮವಕೊಟ್ಟು ಕಳುಹೆಂದ

ಊ ಶೇ ಪಾಠ ೨-೪ (ನೋಟ್ಸ್) ನಮಗೆ ನೇಮಿಸಿ ಕಳುಹಬೇಕೆಂದ

೧೬. ಭೀ (ಓರಿ) ೨-೨೭ & ಭೀ (ಸಂ) ೨-೭ ಧನವೆಂಬ ಘನ ಸಂಸಾರಗುಣದೊಳು.

(೨-೭) ಊ ಶೇ (ನೋಟ್ಸ್) ಹಣವೆಂಬ ಬಲು ಹುರಿದಾರದಲಿ ಸಂಸಾರವೆಂಬ ಶಬ್ದದ ಅರ್ಥ ಸುರಸವಲ್ಲವಾಗಿ ಈ ಪಾಠವೇ ಸಾಧುವಾಗಿದೆ.

೧೭. ಧಾನವನು ನೆರೆಬುದ್ಧಿಕಲಿಸುವೆನೀಗಮರಳೆಂದ (ಭೀ (ಓರಿ) + (ಸಂ) ೨-೨೮

(ಊ ಶೇ ೨-೮) ಧಾನ ಬುದ್ಧಿಯ ಕಲಿಸಿ ಕಳುಹುದೆ ಮರಳು

೧೮ ಭೀ (ಓರಿ) ೨-೩೮ ರಲ್ಲಿ ಮರೆಯೊಗ ಭೀಸಂ ೨-೧೦ ರಲ್ಲಿ ಮರೆಯೊಗ ಎಂದು ಡಿ.ಎಲ್.ಎನ್ ಕೊಟ್ಟಿದ್ದಾರೆ

ಊ ಶೇ (೨-೧೦) ಈ ಪದದ ಬಗ್ಗೆ ಹೇಳುತ್ತಾ

ಮರೆ+ಪುಗಲ್ > ಮರೆ+ವುಗಲ್ ಆಗುತ್ತದೆ ಹೊಸ ಗನ್ನಡದಲ್ಲಿ ಪುಗಲು>ಹೊಗಲು ಆಗುತ್ತದೆ ಹಸಾರ ವಕಾರ ಬರುವ ನಿಯಮವಿಲ್ಲದ್ದರಿಂದ ಮರೆಹೊಗಲು ಆಗಬೇಕು ಮರೆಯೊಗಲು ರೂಪ ಸಿದ್ಧಿಸುವುದಿಲ್ಲ ಎಂದಿದ್ದಾರೆ.

ಸಂಧಿ ೬

ಡಿ.ಎಲ್.ಎನ್. ಅವರು ಭೀಷ್ಮಪರ್ವ ಸಂಗ್ರಹದಲ್ಲಿ ಮೂಲದ ೧,೨ನೇ ಸಂಧಿಗಳಿಂದ ಪದ್ಯಗಳನ್ನು ಸಂಗ್ರಹಿಸಿದ ಮೇಲೆ ನೇರವಾಗಿ ೬ನೇ ಸಂಧಿಗೆ ಹಾರಿದ್ದಾರೆ ಆದ ಕಾರಣ ಸಂಧಿ ೩ ಸಂಗ್ರಹದಲ್ಲಿ ಎಂದರೆ ಮೂಲದ ೬ನೇ ಸಂಧಿ ೧ನೇ ಸಂಧಿ ಮೂಲದಲ್ಲಿ ೧ನೇ ಸಂಧಿ ೨ನೇ ಸಂಧಿ ಆಗಿದೆ.

೧೯. ಭೀ (ಓರಿ) ೬-೧೩ ಮತ್ತು ಸಂಗ್ರಹದ ಸಂಧಿ ೩ ಪದ್ಯ ೪ ರಲ್ಲಿ ಈ ಪದ್ಯವಿದೆ.

ಸೋಲಮಿಗಲೊಖಸರಿವ ಬಿರುದರ
ಬೀಳುಗೆಡಹಿಸಿ ಕವಿಯ ಹಳವಿಗೆ
ಗೋಲನೆತ್ತಿಸಿ ಕೆಲಬಲದ ಮನ್ನೆಯರ 'ಕೈವೀಸಿ'
ಆಲಿಯಲಿ ಕಿಡಿ ಸೂಸೆ ಮೀಸೆಯ
ಮೇಲು ದಿರುಹುತ ಲೌಡುಗಚ್ಚಿ ಕ
ರಾಳ ರೋಷ ಮಹೋಗ್ರವೀರನು ಪಾರ್ಥನಿದಿರಾದ ॥

ಇಲ್ಲಿ ಕೈವೀಸಿ ಪಾಠಕ್ಕೆ ಜ,ಚ,ಟ,ಪ ಪ್ರತಿಗಳಲ್ಲಿರುವ ಮೂದಲಿಸಿ ಎಂಬ ಪಾಠವನ್ನು ಡಿ.ಎಲ್.ಎನ್. ಆ ಪಾಠಾಂತರವನ್ನಾಗಿ ಕೊಟ್ಟಿದ್ದಾರೆ. ಶೇಷಯ್ಯಂಗಾರ್ಯರು ಅಡಿ ಟಿಪ್ಪಣಿಯ ಪಾಠಾಂತರ ಸೂಕ್ತವಾಗಿದೆ ಎಂದು ಹೇಳಿ ಅದಕ್ಕೆ ಈ ರೀತಿ ವಿವರಣೆ ನೀಡಿದ್ದಾರೆ.

ತನ್ನ ಅಕ್ಕಪಕ್ಕದಲ್ಲಿ ಓಡಾಡುತ್ತಿದ್ದ ತನ್ನ ಮನ್ನೆಯರನ್ನು ಹೀಯಾಳಿಸಿ ಅಥವಾ ತಾನು ಕೌರವರ ದಳದಲ್ಲಿ ನುಗ್ಗುವಾಗ ಅಕ್ಕಪಕ್ಕದಲ್ಲಿ ಸಿಕ್ಕಿದ ಕೌರವನ ಕಡೆಯ ಮನ್ನೆಯರನು ಧಿಕ್ಕರಿಸಿ (ಮುನ್ನಡೆದನು) ಎಂದರ್ಥದಲ್ಲಿ ಮೂದಲಿಸಿ ಪಾಠವೇ ಸೂಕ್ತ ಎಂದಿದ್ದಾರೆ ಕೈವೀಸಿ ಎನ್ನುವ ಪಾಠವಿಟ್ಟುಕೊಂಡರೆ ಏಕ ವೀರನಾದ ಪಾರ್ಥನು ತನ್ನ ಕಡೆಯವರನ್ನು ಕೈವೀಸಿ ಸಹಾಯಕ್ಕೆ ಕರೆದನೆಂಬುದು ಅಷ್ಟು ಉಚಿತವಾಗಿಲ್ಲ.

೨೦. ಭೀ (ಓರಿ) ೬-೧೮ ಸಂಗ್ರಹದ ೩-೫ ರಲ್ಲಿ ಪದ್ಯದ ಉತ್ತರಾರ್ಧ ಹೀಗಿದೆ.

ತುಳುಕಿದನು ಕೆಂಗೋಲ ಜಲಧಿಯ
ನೆಲನದಾವುದು ದಿಕ್ಕದಾವುದು
ಸಲೆ ನಭೋಮಂಡಲವದಾವುದೆನ್ನುನಕ್ಕಿ ಕಲಿಪಾರ್ಥ.

ಇಲ್ಲಿ ಜಲಧಿಯ ಎಂಬುದಕ್ಕೆ ಯಾವ ಪಾಠಾಂತರವನ್ನೂ ಡಿ.ಎಲ್.ಎನ್. ಕೊಟ್ಟಿಲ್ಲ. ಆದರೆ ಶೇಷಯ್ಯಂಗಾರ್ ಅವರು ಮಳೆಯನು ಎಂಬ ಪಾಠ ಸೂಚಿಸಿದ್ದಾರೆ. ಅದಕ್ಕೆ ನೀಡಿದ ವಿವರಣೆ ಹೀಗಿದೆ. "ಬಾಣವನು ಸುರಿಸಿದನು ಎನ್ನುವ ಸಂದರ್ಭದಲ್ಲಿ ಬಾಣದ ಮಳೆಯನ್ನು ಸುರಿಸಿದನು ಎಂದು ಹೇಳುವುದೇ ಕವಿ ಸಂಪ್ರದಾಯವು ಮತ್ತು ಅಪಾರವಾದ ಬಾಣಗಳೊಳಗೆ ಸಿಕ್ಕಿ ಬಿದ್ದನು ಎಂಬಲ್ಲಿ ಬಾನ ಸಮುದ್ರದಲ್ಲಿ ಮುಳುಗಿದನು ಎಂದು ಹೇಳುವುದುಂಟು ಪ್ರಕೃತದಲ್ಲಿ ಜಲಧಿಯ ಎಂಬ ಪಾಠಕ್ಕಿಂತಲೂ ಮಳೆಯನು ಎಂಬ ಪಾಠವೇ ಉಚಿತವು" ಎಂದಿದ್ದಾರೆ.

೨೧. ಡಿ.ಎಲ್.ಎನ್ ಭೀ (ಓರಿ) ಸಂಗ್ರಹ ೩-೬ ರಲ್ಲಿ

ಆತುಕೊಳ್ಳಾದರೆಯೆನುತ ಕಪಿ
ಕೇತನನ ಶರಹತಿಯನಾಂತಾ

ಮಾತು ಓಂಚಿತು ಕಡಿದುಬಿಸುಟನು. ಕೃಷ್ಣ ಬೆಲುಗಾಗೆ ಎಂದು ಅರ್ಜುನನ ಮೇಲೆ ಭೀಷ್ಮ ಬಾಣಗಳ ಧಾಳಿ ಮಾಡಿದ್ದನ್ನು ಕವಿ ಹೇಳುತ್ತಾನೆ.

ಇಲ್ಲಿ ಶರಹತಿ ಎಂಬುದಕ್ಕೆ ಶೇಷಯ್ಯಂಗಾರ್ ಶರಪತಿಯ ಎಂಬ ಪಾಠ ನೀಡಿದ್ದಾರೆ ಈ ಪಾಠ ಡಿ.ಎಲ್.ಎನ್ ಮೂಲ ಪದ್ಯದಲ್ಲಾಗಲಿ ಸಂಗ್ರಹದಲ್ಲಾಗಲಿ ಇಲ್ಲ. ಶರತತಿ ಪಾಠವೇ ಉಚಿತ ಎಂಬುದಕ್ಕೆ ಶೇಷಯ್ಯಂಗಾರರ ವಿವರಣೆ ಹೀಗಿದೆ. ಇಲ್ಲಿ

ಭೀಷ್ಮನು ಬಾಣಗಳ ಹೊಡೆತವನು (ಶರಹತಿಯನು) ಕಡಿದು ಬಿಸುಟನು ಎಂಬರ್ಥವು ಅಸಂಬದ್ಧವಾಗಿರುವುದು ಅಥವಾ ಇದಿರಿಸಿ ಆ ಬಾಣಗಳನ್ನು ಕಡಿದು ಬಿಸುಟನು ಎಂದು ಹೇಳಿದರೂ ಭೀಷ್ಮನಿಗೆ ಪ್ರಾಶಸ್ತ್ಯ ಇರುವುದಿಲ್ಲ. ಆ ಬಾಣಗಳನ್ನು ತನಗೆ ತಗಲದ ಮುಂಚೆಯೇ ಭೀಷ್ಮನು ಕಡಿದನೆಂಬ ಅರ್ಥವೇ ಪ್ರಕೃತ ಪೋಷಕವಾದುದರಿಂದ ಶರಪತಿಯೆಂದು ಎರಡೂ ತಿದ್ದಿದೆ.

೨೨.

ಆ ಸಮಯದೊಳು ರಣದೊಳೌಕಿದ
ರಾ ಸುಯೋಧನ ಶಲ್ಯ ಸಲೆ ದು
ಶ್ಯಾಸನನು ಕೃಪ ಶಕುನಿ ಗುರುಸುತರಾದಿಯಾದವರು

ಭೀ (ಓರಿ) ೬–೧೬ ಸಂಗ್ರಹ ೩–೭ ಪದ್ಯದ ಪೂರ್ವಾರ್ಧ.

ಶೇಷಯ್ಯಂಗಾರ್ಯರು ಈ ಪೂರ್ವಾರ್ಧದ ಪದ್ಯಕ್ಕೆ ೩ ತಿದ್ದುಪಡಿ (ಪಾಠಾಂತರ)ಗಳನ್ನು ಕೊಟ್ಟಿದ್ದಾರೆ. ಶೇಷಯ್ಯಂಗಾರ್ ಪಾಠಾಂತರ (ಪಾ) ಮತ್ತು ತಿದ್ದುಪಡಿ (ತಿ) ಎಂದು ಎರಡೂ ಪದಗಳನ್ನು ಬಳಸುತ್ತಾರೆ.

೧. ಸಲೆ ದುಶ್ಯಾಸನ ಎಂಬಲ್ಲಿ ಸಲೆ = ಚೆನ್ನಾಗಿ ಎಂಬರ್ಥವು ದುಶ್ಯಾಸನ ಎಂಬ ನಾಮದೊಡನೆ ಅನ್ವಯವಾಗುವುದಿಲ್ಲವಾಗಿ ಕಲಿ ಎಂದು ತಿದ್ದಿದೆ.

೨. ಗುರುಸುತರಾದಿಯಾದವರು = ಮೊದಲಾದ ಎಂಬರ್ಥವನ್ನು ಕೊಡುವ ಆದಿ ಶಬ್ದವು ಮತ್ತೊಂದು ಶಬ್ದದೊಡನೆ ಸಮಾನವಾಗಿರಬೇಕು ಇಲ್ಲಿ ಸಮಾಸವಾಗಿಲ್ಲ (ಸಂಧಿಯಾಗಿದೆ) ಅಲ್ಲದೆ ಗುರುಸುತನು ಯಾದವನಲ್ಲ ಆದುದರಿಂದ ಕೃತವರ್ಮಾದಿ ಯಾದವರು ಎಂದು ತಿದ್ದಬೇಕು.

೩. ಕೃತವರ್ಮ ಯಾದವರ ಸೇನಾಪತಿಯು ಆದ್ದರಿಂದ ಶಲ್ಯ ಸ[illegible] ಶ್ಯಾಸನನು ಕೃಪಶಕುನಿ ಗುರುಸುತರಾದಿಯಾದವರು ಎಂಬ ಪಠ್ಯವನ್ನು ಶಲ್ಯ ಕೃಪ ದುಶ್ಯಾಸ ಗುರುಸುತ ಶಕುನಿ ಕೃತವರ್ಮಾದಿ ಎಂದು ತಿದ್ದಿದರೆ ಯಾವ ದೋಷವು ಇಲ್ಲ.

ಹೀಗೆ ಇಲ್ಲಿ ಊಹಾ ಪಾಠವನ್ನು (ಕಲಿ, ಅಧಿಪಾಕೃಪ) ಮತ್ತು ಪರಿಷ್ಕರಣ ಪಾಠವನ್ನು ಶೇಷಯ್ಯಂಗಾರ್ ಕೊಟ್ಟಿದ್ದಾರೆ.

೨೩.

ಹರಿಯ ಸಿರಿಯೊಡಲಿನಲಿ ಸರಳಿನ
ಸರಿವಳೆಯ ಸೈಗರೆಯೆ ಜೋಡಿನ
ಸರಪಳಿಯಕ್ಕಾಡಿದವು ಕಲಿಭೀಷ್ಮನಂಬುಗಳು

(ಭೀ (ಓರಿ) ೬–೨೩ ಸಂಗ್ರಹ ೩–೧೪

ಸರಿಪಳಿ ಅಕ್ಕಾಡಿದವು = ಸರಪಳಿಯಕ್ಕಾಡಿದವು ಇಲ್ಲಿ ಅಕ್ಕಾಡು (ಅಳ್ಕಾಡು) ಎಂಬ ಶಬ್ದಕ್ಕೆ ನಿಶ್ಶೇಷವಾಗಿ ನಾಶವಾಗು ಎಂದರ್ಥವು. ಇಲ್ಲಿ ಈ ಅರ್ಥವು ಸಮಂಜಸವಲ್ಲವಾಗಿ ಒಕ್ಕಾಡಿದವು ಎಂದು ತಿದ್ದಿದೆ. ಒಕ್ಕಾಡಿದವು ಎಂದರೆ ಹೊಕ್ಕು ದೇಹದಲ್ಲಿ ವ್ಯಾಪಿಸಿದುವು ಎಂದರ್ಥ ಎಂದು ಶೇಷಯ್ಯಂಗಾರ್ ವಿವರಿಸಿ ಒಕ್ಕಾಡಿದವು ಪಾಠಾಂತರ ನೀಡಿದ್ದಾರೆ.

೨೪.

ಮತ್ತೆ ರಥವನು ಹರಿಸಿ ಭೀಷ್ಮನ
ಹತ್ತೆ ಬರೆ ಕಟ್ಟಳನಿಯಲಿ ಹಾ
ಮುತ್ತಯನು ಸಿಲುಕಿದನು ಶಿವಶಿವಯೆನುತ ಬಲ ಬೆದರೆ

ಭೀ (ಓರಿ) ೬-೨೪ ರಲ್ಲಿ ಡಿ.ಎಲ್.ಎನ್. ಅವರು ಭೀಷ್ಮನ ಹತ್ತ ಬರೆ ಎಂದು ಸರಿಪಾಠ ಕೊಟ್ಟಿದ್ದಾರೆ. ಆದರೆ ಅವರು ಭೀಷ್ಮನು ಎಂಬ ಪಾಠವನ್ನು ಸಂಗ್ರಹದಲ್ಲಿ ಕೊಟ್ಟಿದ್ದಾರೆ ಶೇಷಯ್ಯಂಗಾರ್ ೧೯೩೫ರಲ್ಲಿ ಡಿ.ಎಲ್.ಎನ್ ಅವರ ಸಂಗ್ರಹಕ್ಕೆ 'ಬಜಾರ್‌ನೋಟ್ಸ್' ಬರೆದಾಗ ಅದರಲ್ಲಿ ಭೀಷ್ಮನು ಎಂಬ ಸರಿಪಾಠ ಕೊಟ್ಟಿದ್ದಾರೆ. ಭೀಷ್ಮನು ಪ್ರಕೃತದಲ್ಲಿ ಅರ್ಜುನನ ಹತ್ತಿರ ಬರಲು ಎಂದರ್ಥ ಸಮಂಜಸವಲ್ಲವಾಗಿ ಭೀಷ್ಮನ ಎಂದು ಭೀಷ್ಮನ ಪಾಠವನ್ನು ತಿದ್ದಿದೆವೆಂದಿದ್ದಾರೆ ಡಿ.ಎಲ್.ಎನ್ 'ಶೇ' ಅವರ ಪಾಠ ಒಪ್ಪಿದ್ದಾರೆ. ಭೀ (ಓರಿ)ನಲ್ಲಿ ಪಾಠ ಹಾಕಿದ್ದಾರೆ.

೨೪. ಭೀ (ಓರಿ) ೨೪ನೇ ಪದ್ಯದಲ್ಲಿ ಮತ್ತು ಸಂಗ್ರಹದಲ್ಲಿ ಆಐಓ ಮುಸುಕಿದ ಎಂದು ಪಠ್ಯಪಾಠ ಇಟ್ಟುಕೊಂಡಿದ್ದಾರೆ. ಇಲ್ಲಿ ಮುಸುಕಿದು ಪಾಠ ಸೂಕ್ತ ಎಂದು ಶೇಷಾಯ್ಯಂಗಾರ್ ಹೇಳುತ್ತಾರೆ. ಏಕೆಂದರೆ ಮುಸುಕಿದ ಎಂದರೆ ಮುಸುಕಿದನ ಎಂದರ್ಥದಲ್ಲಿ ಬೇರೆಯ ವಾಕ್ಯವನ್ನು ಮಾಡಿ ಮತ್ತೊಂದು ಸಲ ಕರ್ತೃ ಪದವನ್ನು ಅಧ್ಯಾಹಾರ ಮಾಡುವುದು ಸುರಸವಲ್ಲ ಆದ್ದರಿಂದ ಮುಸುಕಿದು ಪಾಠ ಸೂಕ್ತ ಎಂದಿದ್ದಾರೆ.

೨೫.

ತರಳ ತರಣೀ ಚಕ್ರವನು ಸಂ
ಗರವಿನಿರ್ಜಿತ ಚಕ್ರವನು ಭಯ
ಭರವಿನರ್ಜಿತ ಚಕ್ರವನು ಕಡುಗೋಪಕುಡಿಯಿಡಲು (ಭೀ (ಓರಿ) ೬-೩೧ ಸಂಗ್ರಃ ೩-೨೦

DLN ಅವರು ಪಠ್ಯದಲ್ಲಿ ಕೊಟ್ಟಿರುವ ಭಯ ಭರ ವಿವರ್ಜಿತ ಚಕ್ರವನು ಎಂಬ ಪಾಠವನ್ನೆ ಪೂರ್ಣವಾಗಿ ಭಯವನ್ನು ಹೋಗಲಾಡಿಸುವ ಚಕ್ರವನ್ನು ಎಂಬರ್ಥಕ್ಕಿಂತ ಅಸಾಧ್ಯವಾದ ಚಕ್ರವು ಭಯ ಭರಿತ ನಿರ್ಜರ ಚಕ್ರವನು ಲೋಕವನ್ನೆಲ್ಲಾ ದಹಿಸುವುದು ಎಂದು ಭಯಪಟ್ಟ ದೇವತೆಗಳ ಸಮೂಹವುಳ್ಳ ಚಕ್ರವನ್ನು ಎಂಬ ಪಾಠವನ್ನು 'ಶೇ' ಅವರು ಸೂಚಿಸಿದ್ದಾರೆ.

೨೬. ಭೀ (ಓರಿ) ೭-೧ ಸಂಗ್ರಹ ೪-೧ ರಲ್ಲಿ "ಭೀಷ್ಮನ ಕಾಳೆಗದೊಳಲ್ಲಿಂದ ಮೇಲಣ ಕಥನಕೌತುಕವ" ಎಂಬಲ್ಲಿ ಕಥನ ಕೌತುಕವ ಎಂಬುದಕ್ಕೆ ಶೇಷಯ್ಯಂಗಾರ್ಯರವರ ಕಥಾಮೃತವ ಎಂಬ ಪಾಠವನ್ನು ಸೂಚಿಸಿದ್ದಾರೆ.

ಇದು ಬೇರಾವ ಪ್ರತಿಗಳಿಲ್ಲ 'ಶೇ' ಅವರು ಸೂಚಿಸಿದ ಪಾಠ ಇದನ್ನು ಊಹಾಪಾಠವೆನ್ನಲಾಗದು ಸಂಪಾದಕರ ಪರಿಷ್ಕರಣ ಪಾಠವೆನ್ನಬಹುದು ಅಕ್ಷರಗಳು ಪದಗಳು ಇಲ್ಲದಾಗ ಊಹಿಸುವುದನ್ನು ಊಹಾಪಾಠ ಎನ್ನುವುದು ಸೂಕ್ತ.

೨೭.

ಕೆಲ್ಲೆಗೆಡೆದವು ಕಂಗಳಸುಗಳ
ಚೆಲ್ಲಿದವು ತೇಜಿಗಳು ರಥಕುಳ
ವೆಲ್ಲ ಹುಡಿ ಹುಡಿ ಪಾಯದಳ ನಿರ್ನಾಮವಾಯ್ತೆಂದ ಭೀ (ಓರಿ) ೭-೨ ಸಂಗ್ರಹ ೭-೨

ಚೆಲ್ಲಿದವು ತೇಜಿಗಳು ರಥಕುಳವೆಲ್ಲ ಹುಡಿಹುಡಿಯಾಯ್ತು ದಳ ಎಂಬ ಪಾಠಕ್ಕೆ ಬದಲಾಗಿ ಶೇಷಾಯ್ಯಂಗಾರ್ ಸೂಚಿಸಿರುವ ಪಾಠವಿದು. ಚೆಲ್ಲುತಳಿದವು ತೇಜಿಗಳು ರಥನೆಲ್ಲ ಹುಡಿಹುಡಿಯಾಯ್ತು ದಳ ನಿರ್ನಾಮವಾಯ್ತೆಂದ

ಇನ್ನು ಕೆಲ್ಲೆಗೆಡೆದವು (ಎಂಬುದಕ್ಕೆ ಗೆಲ್ಲಗೆಡೆ (ಖ) ಗಲ್ಲೆಗೆಡೆ (ಕ) ಎಂಬ ಪಾಠಾಂತರಗಳಿವೆ. ಇವುಗಳಲ್ಲಿ ಗೆಲ್ಲಗೆಡೆದವು ಎಂಬ ಪಾಠಾಂತರವೇ ಪ್ರಕೃತದಲ್ಲಿ ಉಚಿತವಾಗಿದೆ ಶೇ ಅವರು ಎಂದಿದ್ದಾರೆ ಈ ಪಾಠಗಳಲ್ಲಿ ಕೆಲ್ಲ ಎಂಬುದಕ್ಕೆ ಕೆಲ್ಲೆಸಿನೋಡು ಎಂಬ ಪ್ರಯೋಗದಿಂದ ಕೆಕ್ಕಳಿಸಿ ಎಂದರ್ಥ ಕೆಲ್ಲೆಗೆಡೆದವು ಕೆಕ್ಕಳಿಸಿ ಬಿದ್ದವು ಎಂಬರ್ಥದಲ್ಲಿ ಪಾಠಾಂತರಗಳು ಸೂಕ್ತವಲ್ಲ ಎಂದು ಆಐಓ ಪಾಠವನ್ನು ಸಮರ್ಥಿಸಿದ್ದಾರೆ.

೨೮.

ಹಾರಿದವು ಹೆಸರುಗಳು ಭಂಗದ
ಸೂರೆಗಳು ಕಟ್ಟಿದವು ಮಿಗೆ ತಲೆ
ಮಾರಿಗಳು ಮರಳಿದರು ರಣ ಹೇಡಿಗಳ ಬಗೆಯಂತೆ (ಭೀ (ಓರಿ) ೭-೮ ಸಂಗ್ರಹ ೪-೮

ಶೇಷಯ್ಯಂಗಾರ್ ತಲೆಗಳ ಮಾರುಗಳು ಮರಳಿದವು (ತಲೆಗಳನ್ನು ಮರುವ ಕೆಲಸಗಳು ಹಿಂದಾದವು = ಎಲ್ಲವೂ ತಲೆಯನ್ನುಳಿಸಿಕೊಳ್ಳುವುದಕ್ಕಾಗಿ ಹಿಂಜರಿದರು) ಡಿ.ಎಲ್.ಎನ್. ಸಂಗ್ರಹದಲ್ಲಿ ಮಿಗೆ ತಲೆ ಮಾರಿದರು ಎಂದು ಕೊಟ್ಟಿದ್ದು ಭೀ (ಓರಿ)ನಲ್ಲಿ ತಲೆಮಾರಿಗಳು ಎಂಬ ಪಾಠ ಇಟ್ಟುಕೊಂಡಿದ್ದಾರೆ ಶೇಷಯ್ಯಂಗಾರ್ ಮಾರುವಿದರು (ಕ) ಪ್ರತಿ ಒಪ್ಪಿದ್ದಾರೆ.

ಮಾರುಗಳ ಎಂಬ ಪಾಠವೂ (ಚ,ಟ,ಪ) ಪ್ರತಿಗಳಲ್ಲಿದೆ.

೨೯. ಭೀ (ಓರಿ) ೭-೯ ಸಂಗ್ರಹ ೪-೯ರಲ್ಲಿ ಕಲಿತ ಬಲಶತಕೋಟಿಗಿದಿರಗಳಿದವದ್ರಿಗಳಂತೆ ಎಂಬಲ್ಲಿ ಪಳಿತ ಪಾಠವು ಯುಕ್ತವು ಎಂಬಿದ್ದಾರೆ.

೩೦.

ದಂಡನೆಯ ತರುಬಿದರೆ ಗುಣದಲಿ
ಖಂಡಿಸುವುದಿದಿರಾದ ತರುಗಳು
ದಿಂಡುಗೆಡೆದವು ತೊರೆಗೆ ಮಣಿದರೆಗೇಕು ಬದುಕುವುದು (ಭೀ (ಓರಿ) ೭-೧೩ ಸಂ ೪-೧೩)

ಪೂರ್ವಾರ್ಧದ ಈ ಪದ್ಯಕ್ಕೆ ಶೇಷಯ್ಯಂಗಾರ್ ಅವರೂ ಪೂರ್ಣ ಭಿನ್ನಪಾಠ ತಿಳಿಸಿದ್ದಾರೆ. ಇದು ಅವರ ಬಳಿ ಇರುವ ತಾಳಪತ್ರ ಅಥವಾ ಇತರ ಅಚ್ಚಿನ ಪ್ರತಿಯೊಂದು ತಿಳಿಯದು ಆದರೆ ಹೊಸ ಪಾಠಾಂತರ ದೊರಕಿದಂತಾಗಿದೆ ಅವರು ಸೂಚಿಸುವ ಪಾಠ ಹೀಗಿದೆ.

"ದಂಡನಾಯಕ ತರುಬೆ ರಣದಲಿ
ಖಂಡಿಸುವುದಿದಿರಾದ ರಿವುಗಳ
ದಿಂಡುಗೆಡೆಹುತ ತೋರಿ ಮಣಿದಡೆ ಜೈಸಿ ಬದುಕುವೆವು"

೩೧. ಇದೇ ರೀತಿ ಭೀ (ಓರಿ) ೭-೧೫ ಮತ್ತು ಸಂ ೪-೧೫ ರಲ್ಲಿ ಪೂರ್ವಾರ್ಧದ ೩ ಸಾಲುಗಳ ಪೂರ್ಣ ಭಿನ್ನ ಪಾಠವನ್ನು ಶೇಷಯ್ಯಂಗಾರ್ ಸೂಚಿಸಿದ್ದಾರೆ.

ಬರದನೇ ಧರ್ಮಜನು ಮುರರಿಪು
ತರದನೇ ಕೌರವರನ ಕಟಾ
ಕೊಂದನೇ ಶಿವ ಶಿವಯೆನುತ ಮೌನದಲಿ ಮುಳುಗಿರ್ದು. (ಭೀ (ಓರಿ) ೬-೧೫)

ಬಂದನೇ ಧರ್ಮಜನು ಕಟಕಟ
ಕೊಂದನೇ ಕೌರವನ ನಿನ್ನೇ
ನೆಂದು ಮನದಲಿ ಮರುಗಿ ಮೌನದಲ್ಲಿದ್ದು ನಿಮಿಷದಲಿ ಭೀ (ಸಂಗ್ರಹ ನೋಟ್ಸ್ ಶೇ ೧೯೩)

೩೨. ಭೀ (ಓರಿ) ೭-೧೮ ರಲ್ಲಿರುವ ಪಾಠ ಇದು.

ಸಾಕಿನ್ನೇನು ಬಂದಾದು ಹೇಳು ನೀನೆಂದ

ಶೇಷಯ್ಯಂಗಾರ್ ಇದಕ್ಕೆ ಸೂಚಿಸಿದ ಪಾಠ (ಸಂ ೭-೧೮)

ಸಾಕಿನ್ನೆನು ಬಿನ್ನಹಮಾಡು ನಿಜಮತವ

೩೩. ಭೀ (ಓರಿ) ೭–೨೧ ರಲ್ಲಿರುವ ಹಲವು ಮಾತೇನು ಎಂಬುದಕ್ಕೆ ರಾಜಕುಲಸಹಿತ ಎಂದೂ ಬೇಡೆಂಬವರ ಕಾಣೆನು ಎಂಬುದಕ್ಕೆ ಬೇಡೆಂಬವರದಾರೆನೆ ಎಂಬ ಪಾಠವನ್ನು ಶೇಷಯ್ಯಂಗಾರ್ ಸೂಚಿಸಿದ್ದಾರೆ.

ಗಂಡುತನ ತಾ ನೆರವು ನಿಮ್ಮ ಎಂಬ ಪದ್ಯದಲ್ಲಿ ಬರುವ ಚಂಡಿತನವನು ಮಾಡು ಎಂಬ ಪಾಠಾಂತರ (ಸಂಗ್ರಹ ೪–೨೬)ವನ್ನು ಆಐಓ ಭೀ (ಓರಿ)ನಲ್ಲಿ (೭–೨೬) ಮಾಡು ಎಂದು ಬದಲಿಸಿದ್ದಾರೆ. ಆದರೆ ಶೇಷಯ್ಯಂಗಾರ್ ಅವರು ಮಡು ಎಂಬುದನ್ನು ಮಾಣ್ದು ಅಥವಾ ಮಾಣು ಎಂದು ತಿದ್ದಬೇಕೆಂದು ಸೂಚಿಸಿದ್ದಾರೆ ಅದಕ್ಕೆ ಅವರು ಕೊಟ್ಟಿರುವ ವಿವರಣೆ ಹೀಗಿದೆ.

ಚಂಡಿತನವನು ಮಾಡು ಎಂಬುದನ್ನು ಚಂಡಿತನವನು ಮಾಣ್ದು

ಎಂದು ತಿದ್ದಿದರೆ ಅರ್ಥ ಸ್ವಾರಸ್ಯವುಂಟು ಇಲ್ಲದಿದ್ದರೆ ಚಂಡಿತನ = ಹಠ ಅಥವಾ ಛಲ ಎಂಬ ಪ್ರಸಿದ್ಧಾರ್ಥವು ಅನನ್ವಿತವಾಗುವುದು ವೀರಾಗ್ರೇಸರನಾದ ಅರ್ಜುನನು ಚಂಡಿತನವನು – ಯುದ್ಧದಲ್ಲಿ ನಿರಾಯುಧರ ಮೇಲೆ ಬಾಣ ಪ್ರಯೋಗ ಮಾಡುವುದಿಲ್ಲವೆಂಬ ಆತನ ಛಲವನ್ನು ಮಾಣ್ದು = ಬಿಟ್ಟು ನನ್ನನ್ನು ಇಸಲಿ ಎಂಬುದು ಈ ಪಾಠದ ಅರ್ಥವು ಅಥವಾ ನೀನು ಚಂಡಿತನವನು – ಅಸತ್ಯದಲಿ ವರ್ತಿಸುವುದಿಲ್ಲವೆಂಬ ನಿನ್ನ ಪ್ರತಿಜ್ಞೆಯನ್ನು ಮಾಣು=ಬಿಡು ಎಂದಾದರೂ ತಿದ್ದಬಹುದು.

**೮ನೇ ಸಂಧಿ**

೩೪. ಭೀ (ಓರಿ) ೭–೩೦ ರಲ್ಲಿ ಮತ್ತು ಸಂಗ್ರಹ ೪–೩೦ ರಲ್ಲಿ ಬಂದಿರುವ ನಿನ್ನ ಕಾರಣವಲ್ಲ ಪಾಠಕ್ಕೆ ನಿನ್ನ ಕೈವಶವಲ್ಲ ಎಂಬ ಪಾಠ ಸೂಚಿಸಿದ್ದಾರೆ ಬೇರೆ ಪಾಠಗಳು ಇದಕ್ಕಿಲ್ಲ.

೩೫. (ಭೀ (ಓರಿ) ೮–೧ ಸಂಗ್ರಹ ೫–೧)

ಘೋಳಾಘೋಳಿ ಎಂದು ಮೂಲ ಮತ್ತು ಸಂಗ್ರಹದಲ್ಲಿದೆ ಇವುಗಳ ಪಾಠಾಂತರಗಳಿಲ್ಲ ಎಚ್. ಶೇ ಅವರು ದಾಳಾದಾಳಿ ಪಾಟ ಸುರಸ ಎಂದಿದ್ದಾರೆ.

೩೬. ಭೀ (ಓರಿ) ೮–೬೧ ಸಂಗ್ರಹ ೫–೭ ರಾಣಿಯರ ರಮಣಿಯರ

**೯ನೇ ಸಂಧಿ**

೩೭. ಭೀ (ಓರಿ) ೯–೧ ಸಂಗ್ರಹ ೫–೧೦ ರಲ್ಲಿ ಸಂಗ್ರಹದಲ್ಲಿರುವ ಜೀಯ ಚಿತ್ತೈಸುವುದು ಪಾಠಕ್ಕೆ ಚಿತ್ತೈಸಿದರೆ ಎಂದು ಎಚ್. ಶೇ ಸೂಚಿಸಿದ್ದಾರೆ.

ಹೆಬ್ಬೆಳಸನೋಡೆನೆ = ಹೆಚ್ಚುಗೆಯ ನೋಡನೆ ಎಂದು ಎಚ್. ಶೇ ಸಂಗ್ರಹದಲ್ಲಿ ಹೇಳಿದ್ದಾರೆ.

DLN ಭೀ(ಓರಿ)ನಲ್ಲಿ ಚಿತ್ತೈಸಿದರೆ ಪಾಠ ಇಟ್ಟುಕೊಂಡಿದ್ದಾರೆ ಹೆಬ್ಬೆಳಸನೊಡನೆ ಎಂಬ ಸಂಗ್ರಹದ ಪಾಠವನ್ನು ಹೆಬ್ಬೆಳಸನೀದೆನೆ ಎಂದು ಸ್ವೀಕರಿಸಿದ್ದಾರೆ ನೋಡನೆ ನೀವೆನೆ ಆಗಿದೆ ಎಚ್. ಶೇ. ನೊಡನೆ ಪಾಠಕ್ಕೆ ನೀಡಿರುವ ಪಾಠವನ್ನು ನೀವನೆ DLN ಸ್ವೀಕರಿಸಿದ್ದಾರೆ.

**ಸಂಧಿ ೯ (ಭೀ–ಓರಿ)**

೩೮. ಸರಿದರಿದಿರುವನರಿದು = ಸದರಗಿದರವನರಿದು ಭೀ (ಓರಿ) ೯–೨

ಎಚ್. ಶೇ. (ಸಂಗ್ರಹ) ೫–೧೧

(ಸರಿದರೆ+ಇದಿರುವನು+ಅರಿದು ಹಿಂದಕ್ಕೆಸೆದರೆ+ಪ್ರತಿಭಟಿಸುವುದು ತಿಳಿದು.)

೩೯. ಭೀ (ಓರಿ) ೯–೨೫ ಸಂಗ್ರಹ ೫–೨೧ ಸರಳಗಾಳಿಗೆ = ಸರಳಘಾತಿಗೆ (ಎಚ್. ಶೇ.)

ವೈರಿಬಲ ಮೇಘ = ವೈರಿಬಲ ಹೆದರಿ (ಎಚ್. ಶೇ)

೪೦. ಭೀ (ಓರಿ) ೯–೨೮ ಸಂಗ್ರಹ ೫–೨೪

ವಿಕಳರೋಡಿದರೊಡಲಿದಿರಿಗೆ ರಥವ ಹರಿಸೆಂದ
ವಿಕಳರೋಡಿದರೈ ಮುರಾಂತಕ ರಥವ ಹರಿಸೆಂದ (ಎಚ್. ಶೇ)

೪೧. ಭೀ (ಓರಿ) ೯–೩೨ ಸಂಗ್ರಹ ೫–೨೮

ಪರಶುರಾಮನ ಪಟುತನಕೆ ಮದ್ದರೆದನೆಂಬೀ
ಪರಶುರಾಮ ಪಟುತನಕೆ ಮದ್ದರೆದನೆಂಬರು
ಈಶ್ವರನು ಪರಶುರಾಮನನ್ನು ಸೋಲಿಸಿದ ಎಂಬ
ಪುರಾಣಸಥೆ ಇಲ್ಲದಿರುವುದರಿಂದ ಮದ್ದರೆದನೆಂಬ
ಎಂಬದಕ್ಕಿರು ಮದ್ದರೆದನೆಂಬರು ಎಂದರು ಪಾಠವೇ
ಉಚಿತ (ಶೇ) ಹೇಳುವುದು ಸೂಕ್ತವಾಗಿದೆ.

೪೨. ಭೀ (ಓರಿ) ೯–೩೫ ಸಂಗ್ರಹ ೫–೩೧

ಒಳ್ಳೆಗರನೋಡಿಸಿದ ಸಹಸನ
ಅಳ್ಳೆಗರನೋಡಿಸಿದ ಸಹಸನ

(ಎಚ್. ಶೇ) ಪಾಠ ಹೇಳುತ್ತಾರೆ ಇದಕ್ಕೆ ಅವರು ಕೊಟ್ಟಿರುವ ಟಿಪ್ಪಣಿ ಇದು:

"ಒಳ್ಳೆಗರು ಒಳ್ಳೆಯೆಂದರೆ ನೀರಹಾವು ಇದರಲ್ಲಿ ವಿಷವಿಲ್ಲ ಕೇವಲ ಹಾವಿನ ಆಕಾರ ಮಾತ್ರವಿರುವುದು ಒಳ್ಳೆ ಶಬ್ದದ ಮೇಲೆ 'ಗ' ಪ್ರತ್ಯಯ ಹಚ್ಚುವುದು ಸಾಧುವಲ್ಲ. ಒಂದು ಕೆಲಸದಲ್ಲಿ ವರ್ತಿಸುವುದು ಎಂಬರ್ಥದಲ್ಲಿ 'ಗ' ಪ್ರತ್ಯಯವು ಬರುವುದು ಅಳ್ಳೆಗಾರ ಎಂದು ತಿದ್ದಿ ಭಯಪಡತಕ್ಕವರು (ಧೈರ್ಯವಿಲ್ಲದವರು) ಎಂದು ಅರ್ಥವನ್ನು ಹೇಳಬೇಕು ಅಳ್ಳೆರ್ದೆಯ ಹೊರಬಿಗರು ಪಾಠವೂ ಉಂಟು.

೪೩.

ಕೆತ್ತಿದವರಿಯ ಸೀಸಕ ಜೋಡು ಮೊಚ್ಚೆಯವ
ಕೆತ್ತಿದವರಿಯ ಸೀಸಕ ಜೋಡು ಮೊಚ್ಚೆಯವ (ಭೀ (ಓರಿ) ೯–೩೭ ಸಂಗ್ರಹ ೫–೩೩)

ಭೀ (ಓರಿ)ನಲ್ಲಿ ಟೆಕ್ಕೆ (ಚ.ಪ.) ಪಾಠಾಂತರವನ್ನು ಸಂಗ್ರಹದಲ್ಲಿ ಠೆಕ್ಕೆ (ಖ) ಪಾಠಾಂತರವನ್ನು ಕೊಟ್ಟಿದೆ ಶೇಷಯ್ಯಂಗಾರರು ಠೆಕ್ಕೆಯವ ಪಾಠವೇ ಸಾಧುವಾದುದು ಎಂದಿದ್ದಾರೆ. ಮೊಚ್ಚೆಯವ ಎಂಬ ಮುದ್ರಿತ ಪಾಠಕ್ಕೆ ಪಾದರಕ್ಷೆ ಎಂದು ಅರ್ಥ ಹೇಳುವುದು ಸಮಂಜಸವಲ್ಲ ಯುದ್ಧ ವಿಷಯದಲ್ಲಿ ಪಾದರಕ್ಷೆ ಅಷ್ಟು ಮುಖ್ಯವಾದ ಉಪಕರಣವಲ್ಲ ಪಾದರಕ್ಷೆಯು ಕತ್ತರಿಸಲ್ಪಟ್ಟಿತು ಎಂದು ಎಲ್ಲಿಯೂ ವರ್ಣನೆಯಿಲ್ಲ ಮುಂದಣ ದಿವ್ಯದಲ್ಲಿ ಹನುಮ ಮಸೊರಚನಾ ಧ್ವಜದಲ್ಲಿಯ ಹನುಮನಿಗೆ ಗಾಯವಾಯಿತು ಎಂಬ ಮಾತು ಠೆಕ್ಕೆಯವ ಎಂಬ ಪಾಠಕ್ಕೆ ಸಮರ್ಥನೆ ಆಗಿದೆ ಎಂದಿದ್ದಾರೆ ಶೇಷಯ್ಯಂಗಾರರು.

೪೪. ಭೀ (ಓರಿ) ೯–೩೮ ಸಂಗ್ರಹ ೫–೩೪

ಮೊನೆಯಲುಗು ಮುಕ್ಕುರಿಕೆ
ದೊನೆಗಣೆಯು ಮುಖದೋರೆ ಭೀ (ಓರಿ) ಎಚ್. ಶೇ. ೫–೩೪)

೪೫. ತನಿಗೊಡಹಿ ಮಗಿದವು ತೇಜಿಗಳು ಎಂದು ಸಂಗ್ರಹದ ಪಠ್ಯದಲ್ಲಿ ಭೀ (ಓರಿ)ನಲ್ಲಿ ಮುಗ್ಗಿದವು ಎಂದು ಪಾಠವಿದೆ.

ಮುಗ್ಗಿದವು ಎಂಬ ಕ್ರಿಯಾಪದಕ್ಕಿಂತ ತರಹರಿಸಿ ಸಾಧಾರಿಸಿಕೊಂಡು ಹಿಂದಿರುಗಿದವು ಎಂಬ ಪದವು ಉಚಿತವಾದುದು ಎಂದಿದ್ದಾರೆ ಶೇ.

**ಸಂಧಿ ೧೦ ಭೀ (ಓರಿ) (ಸಂಗ್ರಹ ೬)**

೪೬. ಸಂಧಿ ೧೦-೧ ಸೂಚನಾದಿದ್ಯಾ (ಭೀ (ಓರಿ)ದಲ್ಲಿ ಪಾಂಡವಬಲಕೆ ಎಂಬ ಪಾಠಕೊಟ್ಟಿದ್ದಾರೆ ಸಂಗ್ರಹದಲ್ಲಿ ಕುಲಕೆ ಎಂಬ ಪಾಠವಿದೆ.

ಊ ಶೇ. ಅವರು ಇಡಿ ವಿದ್ಯಕ್ಕೆ ಮುದ್ರಿತ ಪುಸ್ತಕ ಕೊಟ್ಟು ಅದು ಉಚಿತವಾಗಿದೆ ಎಂದಿದ್ದಾರೆ

ಭೀ (ಓರಿ) ೧೦-೧ ಸೂ ವಿದ್ಯ ಪಾಠ.

ಕುಲಕಮಲ ಖರಕಿರಣ ಪಾಂಡವ
ಬಲಕೆ ಶರಣಾಗತ ಜಲಧಿವರ
ನಿಲಯವೆನೆ ರಂಜಿಸಿತು ಗಂಗಾಸುತನ ಶರಶಯನ

ಇದಕ್ಕೆ ಡಿ.ಎಲ್.ಎನ್. ಅವರೇ ಬೇರೆ ಪಾಠವನ್ನು ಅಡಿ ಟಿಪ್ಪಣಿಯಲ್ಲಿ ಕ.ಟ. ಪ್ರತಿಗಳಲ್ಲಿ ಇರುವುದನ್ನು ಕೊಟ್ಟಿದ್ದಾರೆ.

ಗಂಡುಗಲಿ ಗಾಂಗೇಯ ರಣದು
ದ್ದರಾತ ಕ್ಷತ್ರಿಯ ಕುಲವನೆಲ್ಲವ
ದಿಂಡುದೀರುದು ಶಿಖರಡಿಯದಿರಲಿ ಬಿಲ್ಲನಿಳುಹಿದನು.

ಊ ಶೇ. ಅವರು ತಮ್ಮ [illegible]ಗಡಿ ನೋಟ್ಸ್‌ನಲ್ಲಿ ಸೂಚಿಸಿರುವ ಮುದ್ರಿತ ಪ್ರತಿ ಪಾಠಾಂತರವಿದ್ಯ ಹೀಗಿದೆ.

ಮಿಳಿತ ಕುರುಪಾಂಡವ ಮಹೀಮಂ
ಡಲದ ಭಟರಾಹವ ಧರಿತ್ರೀ
ನಿಲಯದಲಿ ಗಂಗಾಸುತನ ಶರಶಯನವು ರಾಜಿಸಿತು ॥

ಈ ಪಾಠವು ಉಚಿತವಾಗಿದೆ ಎಂದಿದ್ದಾರೆ ಶೇಚಯ್ಯಂಗಾರರು

೧೯೦೨ ರಲ್ಲಿ ಬೆಂಗಳೂರಿನ ರಾಜರಾಜೇಶ್ವರೀ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿತ ಬೆಂಗಳೂರು ಚಿಕ್ಕಪೇಟೆಬುಕ್ ಡಿಪೊಮಂಡಿ ರಾಮಂಣನವರ ಲಿಂಗಣನವರಿಗಾಗಿ ಪ್ರಿಂಟು ಮಾಡಲ್ಪಟ್ಟು ದಶವಿರ್ಯದ ಪ್ರತಿಯಲ್ಲಿ ೯ನೇ ಸೂಚನಾವಿದ್ಯ (ಇದು ೧೦ನೇ ಸಂಧಿ ಬೇರೆ ಪ್ರತಿಗಳಲ್ಲಿ) ಹೀಗಿದೆ.

ಮಲಕುರುಪಾಂಡವ ಮಹೀಮಾ
ಡಲದ ಬುಧರಾಹವ ಧರಿತ್ರೀ
ದಿಳಯದಲಿ ರಂಜಿಸಿತು ಗಂಗಾಸುತನ ಶರಶಯನ

ಕುವೆಂಪು ಮಾಸ್ತಿ ಸಂಪಾದಿತ ಮುದ್ರಿತ ಪಾಠವು ಡಿ.ಎಲ್.ಎನ್. ಅವರ ಪ್ರತಿಯ ಪಾಠವೇ ಆಗಿದೆ.

೪೭. ಭೀಷ್ಮ (೧-೧) ಓರಿ ಆಲಿದನು = ಆರಿದನು (ಎಚ್. ಶೇ ಪಾಠ)

ಆಲು-ಗರ್ಜಿಸು ಎಂದು ಕಲ್ಪಿಸುವುದು ಸಮಂಜಸವಲ್ಲ ಆದ್ದರಿಂದ ಆಲಿದನು ಪಾಠ ಸರಿ ಅಲ್ಲಿ ಆರಿದನು ಸೂಕ್ತಪಾಠ ಎಂದಿದ್ದಾರೆ ಎಚ್. ಶೇ.

ಭೀ (೧೦-೨) (ಸಂಗ್ರಹ ೬-೨)

ಒದರಿ ಜೇನೆಡೆಗೈದು ಬಾಣವ
ಕೆದರಿದನು ಥಟ್ಟೈಸಿ ಚಾಪವ
ನೊದೆದು ಹಾಯ್ದವು ಕೋದವಂಬುಗಳಯ ನೆತತಿಯಲಿ

ಇಲ್ಲಿ ಥಟ್ಟೈಸಿ ಎಂಬುದನ್ನು ದಟ್ಟೈಸಿ ಎಂದು ತಿದ್ದಬೇಕು ಎಂದು ಹೇಳಿ ಶೇಷಯ್ಯಂಗಾರ್ ಈ ಕೆಳಕಂಟ ಉದಾಹರಣೆ ನೀಡಿದ್ದಾರೆ.

ಥಟ್ಟು ಎಂಬ ಶಬ್ದವು "ಕೌರವರು ಥಟ್ಟು ಗೆಡೆದರು ಅಂಬುಗಳು ಥಟ್ಟುಗಿದು ಎದೆಯನು ಹಾಯ್ದವು ಮೊದಲಾದೆಡೆಗಳಲ್ಲಿ ಪ್ರಯೋಗಿಸಲ್ಪಟ್ಟಿರುವುದು ಅಲ್ಲದೆ ವ್ಯವಹಾರದಲ್ಲೂ ಅವನು ಬಹುದೂರ ನಡೆದು ಥಟ್ಟಾಗಿ ಬಿದ್ದಿರುವನು ತಾರುಥಟ್ಟಾಗಿ ಬಿದ್ದುವು ಎಂಬ ಪ್ರಯೋಗಗಳಿವೆ ಇಲ್ಲೆಲ್ಲಾ ಥಟ್ಟು ಶಬ್ದಕ್ಕೆ ದಣಿ ಅತಿಯಾಗಿ ಆಯಾಸಪಡು ಎಂಬರ್ಥವಿರುವಂತೆ ಕಾಣುತ್ತದೆ. ಆದುದರಿಂದ ಥಟ್ಟು ಶಬ್ದಕ್ಕೆ ಗುಂಪೆರದು ಹೇಳುವುದು ವಿಚಾರಣೀಯವಾದುದು ಅಲ್ಲದಿದ್ದರೆ ಎರಡರ್ಥವನ್ನು ಹೇಳಬೇಕಾಗುವುದು ಎರಡು ಎಂಬರ್ಥವೂ ಇರುವಂತೆ ಕಾಣುವುದು.

೪೮. ಇದೇ ಪದ್ಯದಲ್ಲಿ (೧೦-೨ ಭೀ ಓರಿ)

ಕೋದವಂಬುಗಳರಿಯ ನೆತ್ತಿಯಲಿ ಎಂಬುದಕ್ಕೆ ಎಚ್. ಶೇ ಅವರು ತೋದವಂಬುಗಳರಿಯ ರಕುತದಲಿ ಎಂಬ ಪಾಠ ನೀಡಿದ್ದಾರೆ.

೪೯. ಭೀ (೧೦-೪ ಓರಿ) (೬-೪ ಸಂಗ್ರಹ)ದ ಪಾಠ ಕೊಟ್ಟರೆ ಮುರಿದು ರಥದಲಿ ನಿರದು ಕೊಟ್ಟನು ಮುರಿದು ರಥವನು ನೆಮ್ಮಿ (ಎಚ್. ಶೇ ಪಾಠ)

೫೦. ಭೀ (ಓರಿ) ೧೦-೧೫ (ಸಂಗ್ರಹ ೬-೧೦)

ತಲ್ಲಳಿಸಿದನು = ಕಳವಳಿಸಿದನು (ಊ. ಶೇ ಪಾಠ)

ಕಳಕಳದ = ಗಳಗಳದ (ಗಳಗಳನೆ ಹರಿಯುವ) (ಊ ಶೇ ಪಾಠ)

ತಳ್ಳುವಾರಿದನು = ತಳ್ಳುಬಾರು ಎಂಬುದಕ್ಕೆ ಬದಲು ಅಳ್ಳೆಬಾರಿದನು ಪಾಠ ಉಚಿತವು ಊ ಶೇ.

೫೧. ಭೀ (ಓರಿ) ೧೦-೧೯ (ಸಂಗ್ರಹ)

ದಿವಿಜಪತಿ ಸುತರಾದಿ ಯಾದವರವಿರಳದ
ದಿವಿಜಪತಿಸುತ ಯಾದವಾದಿಗಳ ವಿರಳಯಾದವ (H ಶೇ. ಪಾಠ)

೫೨. ಭೀಷ್ಮಪರ್ವ (ಓರಿ) ೧೦-೨೭ (ಸಂಗ್ರಹ ೧೦-೨೧) (ಭೀ ಓರಿ ೧೦-೨೭) ತಪ್ತ ಲೋಹದ ಜಲದವೊಲು ತನಿಹೊಳೆವ ಸಲಿಲದ ಬಹಳ ಧಾರೆಗಳ

DLN ಕೊಟ್ಟ (ಕ) (೧ ಪ್ರತಿಗಳ ಪಾಠಾಂತರ ಹೀಗಿದೆ

ತಪ್ತಬಾಣದ ಜಳಹುಯಲು ತನಿಗುಂದೆ ಬಹಳದ ಸಲಿಲ ಧಾರೆಯನು (ಕ)
ತಪ್ತಬಾಣದ ಝಳಹೊಯ್ದು ತನಿಗುಂದೆ ಬಹಳದ ಸಲಿಲ ಧಾರೆಯಲಿ (ಪ)

H. ಶೇಷಯ್ಯಂಗಾರ್ ಪಾಠ ಇದು :

ತಪ್ತಲೋಹದ ಬೆಳಕಿನಂತಿರೆ ಹೊಳೆವ ಸುಲಲಿತ ಬಹಳ ಧಾರೆಗಳ

೫೩.

> ಬಳಿಗೆ ಬಿಡೆ ಬಹಳಾರ್ತ ಭಿಷ್ಮನು
> ಗೆಲಿದನಂತಸ್ತಾಪವನು ನರನಾಥಕೇಳೆಂದ (ಭೀ ಓ೮) ೧೦-೨೭
>
> ಬಳಿಗೆ ಬಲುತೃಷ್ಣೆಯನು ಭೀಷ್ಮನು
> ತೊಲಗಿಸಿದನಾ ತಾಪವಪಗಿತು ಜಲದಧಾರೆಯಲಿ (H. ಶೇ ಪಾಠ)

೫೪. ನೀನಿಂದೆ ಕಾಣಲು (ಭೀ ಓ೮ ೧೦-೨೯)

ಹಿಂದಣೆಡೆಯಲಿ (H. ಶೇ ೧೦-೨೩)

೫೫. ನರದನಾದಿಗಳೆಲ್ಲ ಕೇಳ್ಮೆ (ಭೀ ಓ೮ ೧೦-೨೯)

ಗಂದನಾದಿಗಳೆಲ್ಲ ಬಲ್ಲರು (H. ಶೇ)

೫೬.

> ಮಂದಮತಿ ತನ ಬೇಡನನ್ನು ಕೃಪಾಳುವಾಗೆಂದ ಭೀ (ಓ೮) ೧೦-೨೯)
> ಮಂದಮತಿಯನು ಬಿಡುವುದರಸ ಕೃಪಾಳುವಾಗೆಂದ (H. ಶೇ ಪಾಠ)

೫೭.

> ನೇನ ಬೆಸಸಿದುದಡೆ ಹಸಾದವು (ಭೀ. ಓ೮. ೧೦-೩೭)
> ನೇನ ಬೆಸಸಿದನದೆ ಹಸಾದವು (H. ಶೇ ಪಾಠ ೬-೩೧)
>
> ಬಿಡುಗುರಿತನವ ಮಾಣೆಯಲ (ಭೀ ಓ೮ ೧೦-೩೭)
> ಮಿಡುಗುಯಿತನು (ಗ.ಜ.ಟ.ತ) (ಭೀ ಓ೮ ೧೦-೩೭)
> ಮಿರಿಗುರುತನವ (ಚ.ಪ) (ಭೀ ಓ೮ ೧೦-೩೭)

ಬಿಡುಕುರಿತನವ ಬಿಡುಗುರಿ ಮಿಡುಗುರಿತನವ ಈ ೩ ಪಾಠಗಳಿಗಿಂತಲೂ ಮಿಡುಕುರಿತನ (ಥಟ್ಟನೆ ಮೇಲೆ ಬೀಳುವಂತೆ) ಎಂಬುದು ಉಚಿತವೆಂದು ಕಾಣುತ್ತದೆ (H. ಶೇ ೬-೩೧)

ಈ ಪಾಠಾಂತರಗಳನ್ನು ಗಮನಿಸಿದಾಗ, ಡಿ.ಎಲ್.ಎನ್. ಮತ್ತು ಹೆಚ್. ಶೇಷಯ್ಯಂಗಾರಂಥ ವಿದ್ವನ್ಮಣಿಗಳ ಮಂಡಳಿಯಿಂದ ಕನ್ನಡನಾಡಿನಲ್ಲಿ ದೊರೆಯುವ ಕುಮಾರವ್ಯಾಸ ಭಾರತದ ಅಚ್ಚಿನ ಪ್ರತಿಗಳನ್ನು ಹಾಗೂ ಎಲ್ಲ ಹಸ್ತ ಪ್ರತಿಗಳನ್ನು ಸಂಗ್ರಹಿಸಿ ಸಂಪಾದಿಸಿ ಅಧಿಕೃತ ಕುಮಾರವ್ಯಾಸ ಭಾರತ ಕಾವ್ಯವನ್ನು ಹೊರತರುವ ಅಗತ್ಯವಿದೆ. ಅಲ್ಲಿವರೆಗೆ ಈಗ ದೊರೆಯುತ್ತಿರುವ ಅಪೂರ್ಣ, ಅಶುದ್ಧ, ಅಲ್ಪಶುದ್ಧ ಅಪರಿಪೂರ್ಣ ಕುಮಾರವ್ಯಾಸ ಕಾವ್ಯದ ಪ್ರತಿಗಳನ್ನೇ ಗಮಕಿಗಳು, ಓದುಗರು, ವಿದ್ವಾಂಸರು ಅವಲಂಬಿಸಬೇಕಾಗಿದೆ.

*****

# ತೆಲುಗದೇಕೆಯನಲು

* ಗುತ್ತಿ ಚಂದ್ರಶೇಖರ ರೆಡ್ಡಿ

**ಆ॥ ವೆ॥ ತೆಲುಗದೇಕೆ ಯನಲು ದೇಶವುತೆಲುಗಾನು**
**ತೆಲುಗುವಲ್ಲಭನಿಹೆ ತೆಲುಗೆನೊಬ್ಬ !**
**ಸೇವಿಸೆಲ್ಲನೃಪರು ಅರಿಯೆಯೇ ಬಾಸಾಡಿ**
**ದೇಶಭಾಷೆಗಳಲಿ ತೆಲುಗುಲೇಸು**

ಮೇಲಿನ ಪದ್ಯದ ಮೂಲವಾದ ತೆಲುಗು ಪದ್ಯವನ್ನು ಬರೆದವನು ವಿಜಯನಗರ ಸಾಮ್ರಾಜ್ಯದ ಸ್ವರ್ಣಯುಗ ಕರ್ತನೆಂದು ಹೆಸರಾದ ಕನ್ನಡ ರಮಾರಮಣನೂ, ಆಂಧ್ರಭೋಜನೂ ಆದ ಶ್ರೀಕೃಷ್ಣದೇವರಾಯನು. ಗಜಪತಿಗಳ ಮೇಲೆ ಕೈಕೊಂಡ ದಂಡಯಾತ್ರೆಯ ನಡುವೆ, ಬೆಜನಾಡದಲ್ಲಿ ತಂಗಿದ್ದ ರಾಯನು ಸಮೀಪದಲ್ಲಿದ್ದ ಶ್ರೀಕಾಕುಳ ಆಂಧ್ರ ಮಧುಮದನನನ್ನು ಸೇವಿಸಿ ಆರಾತ್ರಿ ಅಲ್ಲಿಯೇ ವಿಶ್ರಾಂತಿ ಪಡೆಯುವಾಗ ಮುಂಜಾವಿನ ಕನಸಿನಲ್ಲಿ ಕಾಣಿಸಿಕೊಂಡು ಆ ಆಂಧ್ರವಲ್ಲಭನು ರಾಯನನ್ನು ತನಗೆ ಪ್ರಿಯವಾಗುವಂತೆ ಒಂದು ತೆಲುಗು ಕೃತಿ ರಚಿಸಬೇಕೆಂದೂ, ಅದು ತಾನು ಧರಿಸಿ ಆಮೇಲೆ ದೇವರಿಗರ್ಪಿಸಿದ ಮಾಲೆಯನ್ನಿತ್ತ ಗೋದಾದೇವಿಯನ್ನು ಶ್ರೀರಂಗಂನಲ್ಲಿ ಮದುವೆಯಾದ ವಿಷಯವಾಗಿರಬೇಕೆಂದೂ ವಸ್ತುನಿರ್ದೇಶನ ಮಾಡಿ ಆಮೇಲೆ ತೆಲುಗೇಕೆ ಎಂಬ ಸಂಶಯವನ್ನು ಹೋಗಲಾಡಿಸುತ್ತ ಆ ಆಂಧ್ರದೇವನೇ ಕಾರಣವನ್ನು ತಿಳಿಸಿದ ಪದ್ಯವಿದು.

ಯಾರಾದರೂ, ಯಾವುದಾದರೂ ಕೃತಿ ರಚನೆಗೆ ಕೈ ಹಾಕಿದಾಗ, ಸಾಮಾನ್ಯವಾಗಿ, ಅಂದಿನರಾಜ ಭಾಷೆಯಲ್ಲಿ, ಅಥವಾ ತನ್ನ ಮಾತೃ ಭಾಷೆಯಲ್ಲಿ ಬರೆಯುವುದು ಸಹಜವಾದುದು. ದೇಶೀಯಭಾಷೆಗಳು ಸಂಪನ್ನವಾಗಿದ್ದರೂ ಕೂಡ, ಚಕ್ರವರ್ತಿಗಳು ಸಂಸ್ಕೃತ ಮತ್ತು ಪ್ರಾಕೃತಗಳಲ್ಲಿ ತಮ್ಮ ಪ್ರತಿಭೆಯನ್ನು ಮೆರೆಸಿದರು. ದೇಶೀಯಭಾಷೆಗಳಲ್ಲೂ ಕವಿಗಳನ್ನಾದರಿಸಿ ಪ್ರೋತ್ಸಾಹಿಸಿದರೂ, ತಾವಾಗಿ ದೇಶೀಯಭಾಷೆಗಳಲ್ಲಿ ಕೃತಿಗಳನ್ನು ಬರೆಯಲಿಲ್ಲ. ಇದಕ್ಕೆ ಉದಾಹರಣೆಯಾಗಿ ರಾಜ ಕವಿಗಳಾದ ಅನೇಕರ ಕೃತಿಗಳು ಸಂಸ್ಕೃತ ಪ್ರಾಕೃತಗಳಲ್ಲೇ ಇರುವುದನ್ನು ಕೆಳಗಿನ ಪಟ್ಟಿಯಿಂದ ಅರಿಯಬಹುದು.

| ಚಕ್ರವರ್ತಿಗಳು | ಕಾವ್ಯಗಳು/ಕೃತಿಗಳು | ಭಾಷೆ |
|---|---|---|
| ಹಾಲ(ಶಾತವಾಹನ) | ಶಾಲಿವಾಹನ ಸಪ್ತಶತಿ | ಪ್ರಾಕೃತ |
| ಹರ್ಷಚಕ್ರವರ್ತಿ | ರತ್ನಾವಳಿ, ನಾಗಾನಂದಂ | ಸಂಸ್ಕೃತ |
| ಭೋಜ ಮಹಾರಾಜ | ಚಂಪೂರಾಮಾಯಣ | ಸಂಸ್ಕೃತ |
| ರಾಷ್ಟ್ರಕೂಟ ನೃಪತುಂಗ(ಶರ್ವ) | ಪ್ರಶ್ನೋತ್ತರ ರತ್ನಮಾಲಿಕಾ | ಸಂಸ್ಕೃತ |
| (ಕೊಂಡವೀಡು)ಕೋಮಟಿವೇಮಾರೆಡ್ಡಿ | ಸಂಗೀತ ಕೃತಿಗೆ ಭಾಷ್ಯ | ಸಂಸ್ಕೃತ |
| (ಕೊಂಡವೀಡು) ಕುಮಾರಗಿರಿರೆಡ್ಡಿ | ವಸಂತರಾಜೀಯಂ | ಸಂಸ್ಕೃತ |
| ಕಾಟಿಯವೇಮಾರೆಡ್ಡಿ | ಕಾಳಿದಾಸತ್ರಯಕ್ಕೆ ಭಾಷ್ಯ | ಸಂಸ್ಕೃತ |
| ಸಾಳುವ ವೀರನರಸಿಂಹ | ರಾಯಬಾಲರಾಮಾಯಣ ವ್ಯಾಖ್ಯೆ | ಸಂಸ್ಕೃತ |

ದೇಶೀಯಭಾಷೆಗಳಲ್ಲಿ ಕೃತಿಗಳನ್ನು ಬರೆದ ರಾಜರು ಕೆಲವರಿದ್ದಾರೆ. ಆದರೆ ಅವರಾರೂ ಸಾರ್ವಭೌಮರಲ್ಲ. ಚಿಕ್ಕ ಪುಟ್ಟ ಭೂಭಾಗಗಳ ಒಡೆಯರು. ಉದಾಹರಣೆಗೆ,

---

* ನಂ. ೧೫, ಮೊದಲನೆಯ ಹಂತ, ಜಯಪ್ರಕಾಶ್ ನಾರಾಯಣ್ ನಗರ, ವಯಾ ಮಿಯಾಪುರ, ಹೈದರಾಬಾದ್.

| ಕವಿ | ಕೃತಿ | ಭಾಷೆ |
|---|---|---|
| ನನ್ನೆಚೋಡನು | ಕುಮಾರಸಂಭವಂ | ತೆಲುಗು |
| ಸರ್ವಜ್ಞಸಿಂಗನುನೀಡು | ರಸಾರ್ಣವ ಸುಧಾಕರಂ | ಸಂಸ್ಕೃತ/ಕನ್ನಡ |
| ಶ್ರೀ ವಿಜಯ | ಕವಿರಾಜಮಾರ್ಗ | ಕನ್ನಡ |
| ಕೆಂಪೇಗೌಡ | ಗಂಗಾಗೌರೀವಿಲಾಸಮು | ತೆಲುಗು |
| ಮೈಸೂರಿನ ಒಡೆಯರುಗಳು | ಅನೇಕ ಕಾವ್ಯಗಳು | ಸಂಸ್ಕೃತ, ಕನ್ನಡ, ತೆಲುಗು |
| ತಂಜಾವೂರು ರಘುನಾಥ ನಾಯಕ | ವಾಲ್ಮೀಕಿಚರಿತ್ರ, ಇತರೆ | ತೆಲುಗು |
| ವಿಜಯ ರಾಘವನಾಯಕ | ಅನೇಕ ಯಕ್ಷಗಾನಗಳು | ತೆಲುಗು |

ತಮ್ಮ ರಾಜ್ಯದಲ್ಲಿ ಅನೇಕ ಭಾಷಿಕ ಜನರಿದ್ದಾಗ ಸಾಮ್ರಾಟರು ಆಕಾಲದ ಪಂಡಿತ ಮತ್ತು ಹೆಚ್ಚಾಗಿ ಶಾಸನ ಭಾಷೆಯಾಗಿದ್ದ ಸಂಸ್ಕೃತ ಭಾಷೆಯಲ್ಲೇ ಕೃತಿಗಳನ್ನು ರಚಿಸಿದುದು. ಎಲ್ಲರನ್ನೂ ಸಮವಾಗಿ ಕಾಣಬೇಕಾದ ಚಕ್ರವರ್ತಿಯು ಒಂದು ದೇಶೀಯ ಭಾಷೆಯ ಕಡೆವಾಲಿದರೆ, ಅದು ಇತರರಲ್ಲಿ ಅಸಹನೆಯನ್ನುಂಟು ಮಾಡಬಹುದೆಂಬ ಎಚ್ಚರಿಕೆ ಅವರು ಹೀಗೆ ಮಾಡಲು ಕಾರಣವಿರಬಹುದು.

ಆಂಧ್ರಭೋಜನೆಂದೇ ಬಿರುದು ಹೊತ್ತ ವಿಜಯನಗರದ ತುಳುವ ಮನೆತನದ ರಾಜನಾದ ಶ್ರೀಕೃಷ್ಣದೇವರಾಯನೂ ಮೇಲಿನ ಆಲೋಚನಗಳಿಗೆ ಹೊರತಾಗಿರಲಿಲ್ಲ. ಅದರಿಂದಾಗಿ ಅವನ ಮೊದ ಮೊದಲಿನ ಕೃತಿಗಳೆಲ್ಲವೂ ಸಂಸ್ಕೃತ ಭಾಷೆಯಲ್ಲೇ ಮೂಡಿ ಬಂದವು. ಅವನ ಸಂಸ್ಕೃತ ಕೃತಿಗಳು ಹೀಗಿವೆ:

**೧ ಮದಾಲಸ ಚರಿತ್ರ–ಅಲಭ್ಯ**
**೨ ಸತ್ಯಾವಧೂಷೀಣನಂ–ಕೆಲವೊಂದು ಶ್ಲೋಕಗಳು ಮಾತ್ರ ಲಭ್ಯ**
**೩ ಜ್ಞಾನ ಚಿಂತಾಮಣಿ–ಕೆಲವೊಂದು ಶ್ಲೋಕಗಳು ಮಾತ್ರ ಲಭ್ಯ**
**೪ ಸಕಲಕಥಾಸಾರ ಸಂಗ್ರಹಂ–ಪೀಠಿಕೆಯ ಶ್ಲೋಕಗಳಷ್ಟೇ ಲಭ್ಯ**
**೫ ರಸಮಂಜರಿ–ಅಲಭ್ಯ**
**೬ ಜಾಂಬವತೀ ಪರಿಣಯಂ–ಸದ್ಯಕ್ಕೆ ಲಭ್ಯವಿರುವ ಏಕೈಕ ಸಂಸ್ಕೃತ ನಾಟಕ**

"ಆಮುಕ್ತಮಾಲ್ಯದ" ಕೃತಿಯಲ್ಲಿನ ಅವನ ಹೇಳಿಕೆಯಂತೆ (ರಸಮಂಜರೀ ಮುಖ್ಯ ಮಧುರ ಕಾವ್ಯರಚನೆ) ಅವನಿಂದ ರಚಿತವಾದ ಸಂಸ್ಕೃತ ಕೃತಿಗಳು ಇನ್ನೂ ಇರಬಹುದಾದರೂ ಪ್ರಸಕ್ತ ಅಲಭ್ಯವಾಗಿವೆ.

ಜೀವನದ ಉತ್ತರಾರ್ಧದಲ್ಲಿ ಸಂಸ್ಕೃತ, ತೆಲುಗು, ಕನ್ನಡ, ತಮಿಳು ಮತ್ತು ಇತರ ದೇಶೀಭಾಷೆಗಳಿಗೆ ಅಪಾರವಾದ ಪ್ರೋತ್ಸಾಹವನ್ನಿತ್ತು ಮೆರೆದ ಕೃಷ್ಣರಾಯನು ತೆಲಗು ಭಾಷೆಯಲ್ಲೇಕೆ ತನ್ನ ಅಮೋಘ ಕೃತಿಯಾದ "ಆಮುಕ್ತ ಮಾಲ್ಯದ"ವನ್ನು ನಿರ್ಮಿಸಿದ? ಇದೊಂದು ಜಟಿಲವಾದ ಪ್ರಶ್ನೆ! ಇದಕ್ಕೆ ಕಾರಣವೇನಿರಬಹುದು?

ತಾನು ಆಳುತ್ತಿದ್ದುದು ಕರ್ನಾಟಕ ರಾಜ್ಯವಾದ್ದರೂ ಅದು ಬಹುತೇಕ ತಮಿಳು ಸೀಮೆಯನ್ನೂ, ಸುಮಾರು ಅಲ್ಪ ಶತಾಂಶ ಕರ್ನಾಟಕವನ್ನೂ, (ಬೀದರ್, ಬಿಜಾಪುರ, ಬೆಳಗಾವಿ, ಗುಲಬರ್ಗಾ, ಹಾವೇರಿ, ಗದಗ, ಧಾರವಾಡ ಸೀಮೆಗಳು ಬಹುಮನಿ ಸುಲ್ತಾನರ ಕೆಳಗೆ, ಭಟ್ಕಳ ಮುಂತಾದ ಕೆಲವು ಉತ್ತರ, ದಕ್ಷಿಣ ಕನ್ನಡ ಜಿಲ್ಲೆಯ ಭಾಗಗಳು ಪೋರ್ಚುಗೀಸರ ಕೈಯಲ್ಲಿ ಇದ್ದುವು) ಆಂಧ್ರಪ್ರದೇಶದ ೫೦ ಶತಾಂಶ ತನ್ನಲ್ಲಿದ್ದು ಮತ್ತು ೨೫% ಶತಾಂಶ ತನ್ನ ಸಾಮಂತನಾದ ಜಗಪತಿಯ ಅಧೀನದಲ್ಲೂ, ತೆಲಂಗಾಣದ ಹೆಚ್ಚಿನಭಾಗವು ಕುತುಬ್‌ಷಾಹಿಗಳ ಕೈಯಲ್ಲೂ ಇದ್ದವು) ಕೇರಳದ ಹೆಚ್ಚಿನ ಭಾಗ ಸೇರಿದ ಬೃಹದ್ದಕ್ಷಿಣ ಭಾರತವು ಈತನದಾಗಿತ್ತು. ನಾಲ್ಕಾರು ಮತಗಳ ಅನುಯಾಯಿಗಳು, ನಾಲ್ಕಾರು ಭಾಷೀಯರೂ ನಾಲ್ಕಾರು ಬಗೆಯ ನೆರೆಹೊರೆಯವರು ಇದ್ದ ರಾಜ್ಯವದು. ಸಮಭಾವದಿಂದ ರಾಜ್ಯಭಾರ ಮಾಡಬೇಕಾದುದು ರಾಜನ ಕರ್ತವ್ಯ. ಯಾರೂ ನೋಯದಂತೆ, ರಾಜ್ಯದಲ್ಲಿರುವ ವಿವಿಧ ಮತ, ಭಾಷೆ, ವರ್ಗ, ಕುಲಗಳ ನಡುವೆ ಕಲಹಗಳು ತಲೆದೋರದಂತೆ ಶಿಸ್ತನ್ನು ಕಾಪಾಡಿಕೊಂಡು ಹೋಗುವುದು ಅರಸನ ಆದ್ಯ ಗುರಿಯಾಗಿರಬೇಕು. ಭಕ್ತಿ ಭಂಡಾರಿ ಬಸವಣ್ಣ ಹೇಳಿದಂತೆ

ಎಲ್ಲರೊಡನೆಯೂ "ಇವನಮ್ಮವ, ಇವನಮ್ಮವ, ಇವನಮ್ಮವ" ನೆಂದೆನಿ ಸಿಕೊಂಡು ಬಂದ, ಅಸಿಧಾರಾವ್ರತ ರಾಯನದು. ಅಂತಹವನು ತೆಲುಗು ಕೃತಿಯನ್ನೇಕೆ ಬರೆದ?

ಸಂಗಮರಾಜರೊಂದಿಗೆ ಸೈನ್ಯದಲ್ಲಿ ಭಾಗಿಗಳಾಗಿ ಅನೇಕ ಯುದ್ಧಗಳಲ್ಲಿ ಪಾಲ್ಗೊಂಡ ಕೃಷ್ಣರಾಯನ ಪೂರ್ವಜರು ಇಂದಿನ ಬಳ್ಳಾರಿ, ಅನಂತಪುರ ಜಿಲ್ಲೆಗಳಿಗೆ ಸೇರಿದ ವ್ಯವಸಾಯ ವೃತ್ತಿಯ (ಸಂಪೆಟ) ಹೆಸರಿನ ಮನೆತನದವರು. ತಮ್ಮ ಶೌರ್ಯ ಪ್ರತಾಪಗಳನ್ನು ಪ್ರದರ್ಶಿಸಿ ಚಕ್ರವರ್ತಿಗಳಿಗೆ ವಿಶ್ವಾಸದಿಂದ ನಡೆದುಕೊಂಡು ತುಳುವ ಪ್ರಾಂತ್ಯದಲ್ಲಿ ಚಿಕ್ಕ ಅಧಿಕಾರಿಗಳಾಗಿ ನೇಮಕಗೊಂಡಿದ್ದರು. ತಿಮ್ಮರಾಜನ ಕಾಲಕ್ಕೆ ಅಮರನಾಯಕರಾಗಿ ತಮ್ಮ ಹುದ್ದೆಯನ್ನು ಬೆಳೆಸಿಕೊಂಡವರು. ಇಂದಿನ ತಮಿಳುನಾಡಿನ ಅಂದಿನ ತೆಲುಗು ಪ್ರಾಂತಗಳಾದ ದಕ್ಷಿಣ ಆರ್ಕಾಟ್ ಪ್ರಾಂತ್ಯಕ್ಕೆ ಅಧಿಪತಿಗಳಾಗಿ ವರ್ಗಾಯಿಸಲ್ಪಟ್ಟವರು. ಕೃಷ್ಣರಾಯನ ತಾತ ಈಶ್ವರ ನಾಯಕನು ತನ್ನ ತಾಯಿಯ ಹೆಸರಿನಲ್ಲಿ ನಿರ್ಮಿಸಿದ ದೇವಕಿಪುರಂ ಅವರ ನೆಲೆಯಾಯಿತು. ತುಳು ಪ್ರಾಂತದಿಂದ ಬಂದವ ರಾದ್ದರಿಂದ ತುಳುವರೆಂದೂ ಕರೆಸಿಕೊಂಡರು. ರಾಯನತಂದೆ ನರಸನಾಯಕನು ಸಾಳುವ ವೀರನರಸಿಂಹನ ಆಪ್ತ ದಳಪತಿ ಯಾದಂದಿನಿಂದ ಚಂದ್ರಗಿರಿ, ಪೆನುಗೊಂಡಗಳಲ್ಲಿ ನಲೆಸಿರಬೇಕಾಯಿತು. ನಾರಾಯಣವನದ ಸಮೀಪದ ಗ್ರಾಮ (ಇಂದು ಅದರ ಹೆಸರು ನಾಲಂಪುರಂ)ದ ನಾಗಾಂಬಿಕೆಯನ್ನು ಎರಡನೆಯ ಮಡದಿಯಾಗಿ ನರಸನಾಯಕನು ವರಿಸಿದನು. ಅವರ ಮಗನೇ ಶ್ರೀಕೃಷ್ಣದೇವರಾಯನು.

ಹುಟ್ಟು ತೆಲುಗನಾಗಿದ್ದರೂ ಕೃಷ್ಣದೇವರಾಯನು ದಕ್ಷಿಣ ಭಾರತ ಭಾಷೆಗಳೆಲ್ಲವನ್ನೂ ಬಲ್ಲವ ನಾಗಿದ್ದನು. ಸಂಸ್ಕೃತವನ್ನಂತೂ ತಿಮ್ಮರಸವಿನ ನೆರವಿನಿಂದ ಚೆನ್ನಾಗಿ ಕಲಿತಿದ್ದನು. ತೆಲುಗು, ತಮಿಳು, ಕನ್ನಡದ ಪೂರ್ವ ಕಾವ್ಯಗಳ ಬಗ್ಗೆ ಹೆಚ್ಚಿನ ಪರಿಚಯವಿದ್ದಿತು. ಮುಖ್ಯವಾಗಿ ತೆಲುಗಿನ 'ಭಾರತ', ಪೋತನನ 'ಭಾಗವತಂ', (ನನ್ನೆ ಚೋಡನ) 'ಕುಮಾರಸಂಭವಮು', ಶ್ರೀನಾಥನ 'ಶೃಂಗಾರನೈಷಧಮು' ಸಾಲ್ಕುರ್ಕಿ ಸೋಮನ 'ಬಸವಪುರಾಣಮು' ಇತ್ಯಾದಿಗಳಿಂದ ಪ್ರಭಾವಿತನಾಗಿದ್ದನು. ಅಂತೆಯೇ ಕುಮಾರ ವ್ಯಾಸನ ಭಾರತವೂ ಅವನಿಗೆ ಅಚ್ಚುಮೆಚ್ಚಾಗಿತ್ತು. ತಮಿಳಿನ ಆಳ್ವಾರರ ಪಾಶುರಗಳು ಅವನನ್ನು ಬಹುವಾಗಿ ಆಕರ್ಷಿಸಿದ್ದವು.

ದಂಗೆಯೆದ್ದ ಸಾಮಂತರನ್ನು ಹತೋಟಿಗೆ ತಂದುಕೊಂಡರಾಯನು, ಹಿಂದೆ ತಮ್ಮ ಅಧೀನವಾಗಿದ್ದ, ಈಗ ಗಜಪತಿಗಳೂ, ಬಹುಮನಿಯವರೂ ಆಕ್ರಮಿಸಿಕೊಂಡಿದ್ದ ತನ್ನ ರಾಜ್ಯದ ಹಳೆಯಭಾಗಗಳನ್ನು ಮರಳಿ ಪಡೆಯುವಲ್ಲಿ ಸಂಪೂರ್ಣ ಯಶಸ್ವಿಯಾದನು. ಅಂದಿಗೆ ರಾಜ್ಯವು ಸಂಪದ್ಭರಿತವಾಗಿತ್ತು. ದೇಶದಲ್ಲೆಲ್ಲಾ ಶಾಂತಿ ನೆಲೆಸಿತ್ತು. ನಗರ ಜೀವನವು ಧರ್ಮಬದ್ಧವಾಗಿ ಸಾಗುತ್ತಾ ಮಧುರತೆಯ ಕಡೆವಾಲಿತ್ತು. ಶೃಂಗಾರ ರಸಿಕತೆಯಷ್ಟೇ ಆಧ್ಯಾತ್ಮಿಕ ಜೀವನವು ಹಸನಾಗಿ ಸಾಗಿತ್ತು. ಯುದ್ಧಗಳು ಮುಗಿದು ನೆರೆಹೊರೆಯ ದೊರೆಗಳು ಸಂಧಿಮಾಡಿಕೊಂಡು ಶಾಂತಿಯಿಂದಿರುತ್ತಿದ್ದರು. ತೆಲುಗು ಭಾಷೆಯಲ್ಲಿ ಪ್ರಬಂಧಗಳ ಯುಗೋದಯವಾಗಿ ಅದ್ಭುತ ಸಾಂಸ್ಕೃತಿಕ ಜೀವನವು ಪ್ರಾರಂಭವಾಗಿದ್ದಿತು.

ಅಷ್ಟರಲ್ಲಿ ಗಜಪತಿಗಳಿಂದ ತನ್ನ ಹುಟ್ಟಿದ ಬಗ್ಗೆ ಸಲ್ಲದ ಮಾತುಗಳು ರಾಯನಿಗೆ ಕೇಳಿ ಬಂದವು. ಈಗಾಗಲೇ ಉದಯಗಿರಿ, ಕೋಡವೀಡು, ಕೊಂಡಪಲ್ಲಿ ಮುಂತಾದ ದೊಡ್ಡ ದೊಡ್ಡ ಕೋಟೆಗಳು ರಾಯನ ರಾಜ್ಯಕ್ಕೆ ಸೇರಿಕೊಂಡಿದ್ದವು. ಹೆಚ್ಚು ಕಡಿಮೆ ಗೋದಾವರಿವರೆಗಿನ ಸೀಮೆಗಳೆಲ್ಲವೂ ರಾಯನ ಆಡಳಿತಕ್ಕೆ ಒಳಪಟ್ಟಿದ್ದವು.

ಕಳಿಂಗದ ಗಜಪತಿಗಳ ಅನುಚಿತ ನಿಂದೆಗಳು ರಾಯನನ್ನು ಕ್ಷುದ್ರನನ್ನಾಗಿ ಮಾಡಿದವು. ಹಿಂದಿನ ಗಜಪತಿಯು ಪಾಳ್ಯ ನರಸಿಂಹನ ಮಗಳನ್ನು ಕೊಂಡೊಯ್ದು ದಾಸಿಯನ್ನಾಗಿ ಮಾಡಲಣಿಸಿ, ತನ್ನ ಮಂತ್ರಿಯ ಔದಾರ್ಯದಿಂದ ಮದುವೆ ಮಾಡಿಕೊಂಡಿದ್ದು, ರಾಯನ ಮನದಲ್ಲಿ ಮರುಕಳಿಸಿತು. ಕೂಡಲೇ ಸೈನ್ಯ ಸಮೇತನಾಗಿ ಗಜಪತಿಯ ಮೇಲೆ ಯುದ್ಧ ಹೂಡಿದನು. ತುಂಗಭದ್ರಾತೀರದಲ್ಲಿ ವಾಹ್ಯಾಳಿಗೆ ಹೋದಾಗ ಅಲ್ಲಿ ಬಟ್ಟೆ ಒಗೆಯುತ್ತಿದ್ದ ಅಗಸನೊಬ್ಬ ಹಾಡಿದ

**ಕೊಂಡವೀಡಿ ಮನದೇರಾ ಕೊಂಡಪಲ್ಲಿ ಮನದೇರಾ**
**ಕಾದನಿ ಎವರೈನಾ ವಾದುಕು ವಸ್ತೇ**
**ಕಟಕಂದಾಕಾಮನದೇರಾ . . . .**

ಶುಭಪರಿಣಾಮದ ಹಾಡನ್ನು ಕೇಳಿ ಅವನಿಗೆ ಮತ್ತಷ್ಟು ಉತ್ಸಾಹ ಉಂಟಾಯಿತು. ದಾರಿಯಲ್ಲಿ ವಿಜಯವಾಡದ ಹತ್ತಿರ ರಾಯನು ಸ್ವಲ್ಪಕಾಲ ತಂಗಿದ್ದನು. ತನ್ನ ಇಷ್ಟದೈವವಾದ ವೇಂಕಟಪತಿಯ ಕರುಣೆಯಿಂದ ಜಯಗಳಿಸುವುದರಲ್ಲಿ ಸಂದೇಹವೇ ಇರಲಿಲ್ಲ ಮೇಲಾಗಿ ತಿಮ್ಮರಸುವಿನ ಮಂತ್ರಾಂಗವೂ ಜೊತೆಗಿತ್ತು. ರಾಯನ ಮನಸ್ಸು ಆಗಲೇ ಅಧ್ಯಾತ್ಮದ ಕಡೆವಾಲಿತ್ತು. ಮುಖ್ಯವಾಗಿ ರಾಮಾನುಜಾಚಾರ್ಯರ ಭಕ್ತಿಮಾರ್ಗವು ಅವನಿಗೆ ಬಹಳ ಓಡಿಸಿತ್ತು. ಆಳ್ವಾರುಗಳಲ್ಲಿ ಹೆಸರಾದ ಪೆರಿಯಾಳ್ವಾರ್ (ವಿಷ್ಣುಚಿತ್ತ) ಮತ್ತು ಕೋತ್ಯೆ ಆಂಡಾಳ್ (ಗೋದಾದೇವಿ) ಅವರಭಕ್ತಿ ವಿಧಗಳು ಅವನ್ನು ಗದ್ದಿದ್ದವು. ವಿಷ್ಣುಚಿತ್ತನ ಕರ್ಮ ಭಕ್ತಿ, ಯೋಗಭಕ್ತಿ, ಯಾಮುನಾಚಾರ್ಯರ ಜ್ಞಾನ ಭಕ್ತಿ, ಗೋದಾದೇವಿಯ ಮಧುರಭಕ್ತಿ, ಗೋಸಂಗಿದಾಸನ ಗಾಯನದ ದಾಸ್ಯಭಕ್ತಿ ಅವನ ಹೃದಯದಲ್ಲಿ ತುಂಬಿದ್ದಿತು. ಋತುಗಳ ಜೀವನಾನುಭವ, ತಾನು ಸ್ವಯಂ ಅನುಭವದಿಂದಗಳಿಸಿದ್ದ ರಾಜನೀತಿ ಎಲ್ಲವೂ ಹೊರಗೆ ಬರಬೇಕೆಂದು ಆತುರದಿಂದಿದ್ದವು. ತನ್ನ ಸ್ವಕೀಯಾನುಭವಗಳನ್ನು ಪ್ರಕಟಿಸಲು ಅವನಿಗೆ ಮಾತೃಭಾಷೆಯಾದ ತೆಲುಗಿನಲ್ಲಿಯಾದರೆ ಉತ್ತಮವಾಗಿ ಬರೆಯಬಹುದೆಂದು ಅನಿಸಿರಬೇಕು. ಆದರೆ ನಾಲ್ಕು ಭಾಷೆಗಳನ್ನಾಡುವ ಜನರುಳ್ಳ ನಾಡಿನಲ್ಲಿ ತಾನು ತೆಲುಗಿನಲ್ಲಿ ಬರೆದರೆ ಜನ ಏನು ತಿಳಿದಾರು? ಅವರು ರಾಜನಿಗೆ ತನ್ನ ತೆಲುಗು ಮಾತ್ರವೇ ಇಷ್ಟ ಎಂದು ಕೊಳ್ಳುವ ಸಂಭವವಿತ್ತು. ಇದು ರಾಯನಿಗೆ ಎಳ್ಳಷ್ಟೂ ಇಷ್ಟವಿರಲಿಲ್ಲ.

ಆಗ ರಾಯನಿಗೆ ಸಮೀಪದ ಶ್ರೀಕಾಕುಳಂನಲ್ಲಿ ನೆಲೆಸಿದ್ದ ತೆಲುಗು ವಲ್ಲಭನೆಂದೂ, ಆಂಧ್ರ ವಿಷ್ಣುವೆಂದೂ, ತೆಲುಗುರಾಯನೆಂದೂ ಕರೆಸಿಕೊಳ್ಳುತ್ತಿದ್ದ ದೈವದ ನೆಲೆಯಾದ ವೈಷ್ಣವದೇವಾಲಯದ ಬಗ್ಗೆ ತಿಳಿಯಿತು. ತನ್ನ ಮನದಾಳದಲ್ಲಿಯ ಕೃತಿ ನಿರ್ಮಾಣದ ತುಮುಲವನ್ನು ಆ ಆಂಧ್ರ ಮಧುಮಥನನಿಗೆ ನಿವೇದಿಸಿಕೊಳ್ಳುವುದೆಂದು ಯೋಚಿಸಿ ಅಲ್ಲಿಗೆ ಪಯಣ ಬೆಳೆಸಿದನು. ಗುರುವಾರದ ಸಾಯಂಕಾಲ ಸ್ವಾಮಿಯನ್ನು ದರ್ಶಿಸಿ ತನ್ನ ಮನದ ತುಮುಲವನ್ನು ದೇವರ ಮುಂದೆ ತೋಡಿಕೊಂಡು ಅಲ್ಲಿಯ ಒಂದು ಮಂಟಪದಲ್ಲಿ ವಿಶ್ರಮಿಸಿದನು.

ಆಶ್ಚರ್ಯ! ತನ್ನ ಭಕ್ತನ ಮನೋವ್ಯಾಕುಲತೆಯನ್ನು ಹೋಗಲಾಡಿಸಿ ಪರಿಹಾರ ಸೂಚಿಸಲು ಬೆಳಗಿನ ಜಾವದಲ್ಲಿ ಆ ಭಕ್ತಪರಾಧೀನನೇ ರಾಯನಿಗೆ ಕನಸಿನಲ್ಲಿ ಕಾಣಿಸಿಕೊಂಡು. ತನಗೆ ಸಂತೋಷವಾಗುವಂತೆ ತೆಲಗುಭಾಷೆಯಲ್ಲಿ ಕಾವ್ಯ ನಿರ್ಮಿಸಲು ಕೇಳಿಕೊಂಡುದ್ದಲ್ಲದೆ, ತಾನು ಶ್ರೀರಂಗಂನಲ್ಲಿ ಆಮುಕ್ತಮಾಲ್ಯದಳನ್ನು ಮದುವೆಯಾದ ಕಥೆಯನ್ನು ಕಾವ್ಯದಲ್ಲಿ ವಿವರಿಸಬೇಕೆಂದು ವಸ್ತುನಿರ್ದೇಶನವನ್ನೂ ಮಾಡಿದನು. ಆಗಲೇ ನೀನು 'ತೆಲುಗು ಮತ್ತು ಕನ್ನಡರಾಯ' ಎಂದು ರಾಯನನ್ನು ಸಂಬೋಧಿಸಿದ. ರಾಜ್ಯವು ಕರ್ನಾಟಕವಾದರೂ ದೇಶವು ತೆಲುಗೆಂದು ಸಾರಿದ. ರಾಯನು ತನ್ನನ್ನು ಸೇವಿಸುತ್ತಿದ್ದ ಅನೇಕ ನೃಪರೊಡನೆ ಅವರ ಭಾಷೆಗಳಲ್ಲಿ ಸಂಭಾಷಿಸುತ್ತಿದ್ದುದು. ದೇಶಭಾಷೆಗಳಲ್ಲಿ ತೆಲುಗುಲೇಸೆಂದು ತಿಳಿದಿದ್ದುದನ್ನು ದೇವರಿಗೆ ತಿಳಿಸಿದ. (ಅದನ್ನು ಅಂಕಿತವಾಗಿ ತನ್ನ ಪ್ರಿಯದೈವವಾದ ಶ್ರೀವೇಂಕಟೇಶ್ವರನಿಗೆ ಅರ್ಪಿಸಲು ತಿಳಿಸಿದ.)

ರಾಯನ ಸಂದೇಹಗಳೆಲ್ಲವೂ ಮಾಯವಾದವು. ತಾನು ಭಾಷಾವಿಷಯವಾಗಿ ಸಮಭಾವವನ್ನು ಹೊಂದಿದ್ದರೂ ದೇವರೇ ತೆಲುಗಿನಲ್ಲಿ ಕೃತಿಯನ್ನು ಕೇಳಿ ತನ್ನ ಮನದಹೊಯ್ದಾಟವನ್ನು ಹೋಗಲಾಡಿಸಿದ. ಹಾಗೆ ಬರೆದರೂ ರಾಯನು ತಾನು ಕನ್ನಡ ರಾಯನೆಂದೇ ತಿಳಿಸಿದ. ಭಾಷೆಯ ಬಗೆಗಿನ ತನ್ನ ಮನೋಭಿಪ್ರಾಯವನ್ನೂ ಬಹಿರಂಗಪಡಿಸಿದ. ದೇವರ ಬಾಯಿಂದ ತೆಲುಗು ಭಾಷೆಯ ಬಗೆಯ ಹೊಗಳಿಕೆ ಬಂದುದು ರಾಯನಿಗೆ ಮತ್ತಷ್ಟು ಶಾಂತಿ, ಉತ್ಸಾಹಗಳನ್ನು ತಂದುಕೊಟ್ಟಂತಾಯಿತು. ಇದರ ಫಲವಾಗಿ ತೆಲುಗು ಪಂಚಕಾವ್ಯಗಳಲ್ಲಿ ಮೇರುಸದೃಶವಾದ, ಅಸದೃಶ ಕಾವ್ಯಪ್ರೌಢಿಮೆಯಿಂದ ಕೂಡಿದ "ಆಮುಕ್ತ ಮಾಲ್ಯದ" ಕೃತಿ ರಚಿತವಾಯಿತು.

****

# ಶ್ರೀ ಕೃಷ್ಣದೇವರಾಯನ ಅರಸಿ ತುಕ್ಕಾದೇವಿ ವಿರಚಿತ 'ತುಕ್ಕಾ ಪಂಚಕಂ'

* ಗುರುಮೂರ್ತಿ ಪೆಂಡಕೂರು

ಹಿಂದೂ ಧರ್ಮ, ಸಂಸ್ಕೃತಿಯನ್ನು ರಕ್ಷಿಸಲು ಕ್ರಿ.ಶ. ೧೩೩೬ ರಲ್ಲಿ ವಿಜಯನಗರ ಸ್ಥಾಪನೆಯಾಯಿತು. ಈ ಧರ್ಮ ಸಾಮ್ರಾಜ್ಯವನ್ನು ಸಂಗಮವಂಶದ ದೊರೆಗಳು ಪರಾಕ್ರಮದಿಂದ ಆಡಳಿತ ನಡೆಸಿ ರಾಜ್ಯವನ್ನು ವಿಸ್ತರಿಸಿ ಭದ್ರಗೊಳಿಸಿದರು. ಕೆಲಕಾಲ ಸಾಳುವ ನರಸಿಂಹನು ಆಳಿದ ಮೇಲೆ ತುಳುವಂಶವ ವೀರನರಸಿಂಹ ರಾಯನು ಸಿಂಹಾಸನವೇರಿದನು. ಕ್ರಿ.ಶ. ೧೪೭೧ರಲ್ಲಿ ತುಳುವ ದಂಡನಾಯಕ-ನಾಗಲಾಂಬೆಗೆ ಜನಿಸಿದ ಕೃಷ್ಣರಾಯರು ಕ್ರಿ.ಶ. ೧೫೦೯ರಲ್ಲಿ ವಿಜಯನಗರದ ವಜ್ರಸಿಂಹಾಸನವನ್ನೇರಿದ ಮೇಲೆ ಹೊಸದೊಂದು ವೈಭವದ ಯುಗವೇ ಆರಂಭವಾಯಿತು.

ಶ್ರೀ ಕೃಷ್ಣರಾಯರು ಕ್ರಿ.ಶ. ೧೫೦೯ರಲ್ಲಿ ಪಟ್ಟವೇರುವ ಮೊದಲು ಅವರಿಗೆ ತಿರುಮಲಾಂಬಾ ಮತ್ತು ಚಿನ್ನಾದೇವಿ ಎಂಬ ಅರಸಿಯರಿದ್ದರು. ಆದರೆ ಅನಂತರ ನಡೆದ ಸುದೀರ್ಘ ಕಳಿಂಗ ದಿಗ್ವಿಜಯದ ಅಂತಿಮ ಘಟ್ಟದಲ್ಲಿ ಗಜಪತಿಕುಮಾರಿ ತುಕ್ಕಾದೇವಿಯನ್ನು ಅವರು ಮದುವೆ ಮಾಡಿಕೊಂಡರು. ತುಕ್ಕಾ ಅತ್ಯಂತ ಸುಂದರಿಯಾಗಿದ್ದ ಕಾರಣ ಆಕೆಯನ್ನು ಜಗನ್ಮೋಹಿನಿಯೆಂದು ಕರೆಯಲಾಗುತ್ತಿತ್ತು. ಸ್ವತಃ ಕೃಷ್ಣರಾಯರು ತಮ್ಮ ಕಾವ್ಯ 'ಆಮುಕ್ತ ಮೌಲ್ಯದ'ದಲ್ಲಿ ಗಜಪತಿ ಕುಮಾರಿಯನ್ನು ಅನ್ನಪೂರ್ಣ ಎಂದು ಕರೆದಿದ್ದಾರೆ. ಆದರೆ ಅದೇಕೋ ಈ ಮದುವೆ ಹೊಂದಾಣಿಕೆಯಾಗಲಿಲ್ಲ. ಆಗ ಓಢ್ರರಾಜಕುಮಾರನೊಬ್ಬನ ಚಿತಾವಣೆಯಿಂದ ತುಕ್ಕಾದೇವಿಯು ಕೃಷ್ಣರಾಯರನ್ನು ಕೊಲ್ಲುವ ಪ್ರಯತ್ನ ಮಾಡಿದಳೆಂದೂ, ಮಹಾಮಂತ್ರಿ ತಿಮ್ಮರಸನ ಮುಂಜಾಗರೂಕತೆಯು ರಾಯರನ್ನು ರಕ್ಷಿಸಿತೆಂದೂ ಕತೆಯುಂಟು. ಪ್ರಾಯಃ ಈ ಘಟನೆಯಿಂದ ಕುಪಿತರಾದ ಕೃಷ್ಣರಾಯರು ತುಕ್ಕಾದೇವಿಯನ್ನು ಪರಿತ್ಯಾಗ ಮಾಡಿದರೆಂದೂ ಹೇಳಲಾಗಿದೆ. ರಾಯರಿಂದ ಪರಿತ್ಯಕ್ತಳಾದ ತುಕ್ಕಾದೇವಿಯು ಕರ್ನೂಲು ಜಿಲ್ಲೆಯ ಕಂಬಂ ಗ್ರಾಮದಲ್ಲಿ ನೆಲೆಸಿದಳಂತೆ. ಆ ಭಾಗದ ಜನರ ಅಭಿವೃದ್ಧಿಗಾಗಿ ತನ್ನ ಸಮಸ್ತ ಒಡವೆ-ವಸ್ತುಗಳನ್ನು ಕೊಟ್ಟು ದೊಡ್ಡದೊಂದು ಕೆರೆಯನ್ನು ನಿರ್ಮಿಸಿದಳಂತೆ. ಈಗಲೂ ಈ ವಿಶಾಲವಾದ ಕೆರೆಯು ಸಾವಿರಾರು ಎಕರೆ ನೀರಾವರಿಗೆ ನೀರುಣ್ಣಿಸುತ್ತದೆ. ಜನಸಾಮಾನ್ಯರು ತುಕ್ಕಾದೇವಿಯನ್ನು ಕೃತಜ್ಞತೆಯಿಂದ ನೆನೆಯುತ್ತಾರೆ.

ಕೃಷ್ಣರಾಯರಿಂದ ಪರಿತ್ಯಕ್ತಳಾದ ತುಕ್ಕಾದೇವಿಯು ಸಂಸ್ಕೃತದಲ್ಲಿ ರಚಿಸಿದ ಐದು ಪದ್ಯಗಳು ದೊರಕಿವೆ. ಅವುಗಳನ್ನು ತುಕ್ಕಾ ಪಂಚಕವೆಂದು ಕರೆಯಲಾಗುತ್ತದೆ. ಕರುಣಾರಸಭರಿತವಾದ ವಿರಹಭಾವದಿಂದ ತುಳುಕುವ ಈ ಐದು ಶ್ಲೋಕಗಳು ಸಂಸ್ಕೃತ ಸಾಹಿತ್ಯದಲ್ಲಿ ಅಜರಾಮರವಾಗಿದೆ. ವಿಪ್ರಲಂಬ ಶೃಂಗಾರದ ಶ್ರೇಷ್ಠ ಉದಾಹರಣೆಯಾಗಿವೆ. ತುಕ್ಕಾ ಪಂಚಕವನ್ನು ಭೃಂಗ ಪಂಚಕವೆಂತಲೂ ಕರೆಯುತ್ತಾರೆ.

ಈ ಐದು ಶ್ಲೋಕಗಳಲ್ಲಿ ತುಕ್ಕಾದೇವಿಯು ತನ್ನ ಪತಿಯಾದ ಕೃಷ್ಣರಾಯರನ್ನು ದೊಡ್ಡ ಭ್ರಮರಕ್ಕೆ ಹೋಲಿಸಿದ್ದಾಳೆ. ಈ ಭ್ರಮರವು ಸುಗಂಧಮಯವಾದ ಚಂಪಕ ಹೂವಿನ ಮೇಲೆ ಎರಗದೇ ತಿರುಗುತ್ತಿದೆಯಲ್ಲಾ? ಇದಕ್ಕೆ ಈಶ್ವರೇಚ್ಛೆಯೇ ಕಾರಣ ಎನ್ನುತ್ತಾಳೆ.

ಅಯ್ಯೋ ಈ ಭೃಂಗವು ಬಣ್ಣಕ್ಕೆ ಮೋಸಹೋಗಿ ಮುತ್ತುಗದ ಹೂವಿನ ಮೇಲೆ ಕೂಡುತ್ತಿದೆಯಲ್ಲಾ! ವಿರಹ ವೇದನೆಯಿಂದ ಪರಿತಪಿಸುತ್ತಿರುವ ಮಲ್ಲಿಗೆಯ ಬಳ್ಳಿಯು ಈ ಭೃಂಗಕ್ಕೆ ಕಾಣದೇ? ಅಯ್ಯೋ ಭೃಂಗವೇ ಮಲ್ಲಿಗೆಯ ಬಳ್ಳಿಗಿಂತ, ಹೂವಿಗಿಂತ ಮಧುರವಾದ, ಅಂದವಾದ ಪುಷ್ಪವನ್ನೆಲ್ಲಾದರೂ ಕಂಡಿರುವೆಯಾ? ನಿಜ ಹೇಳು ನೋಡೋಣ?

ಅಯ್ಯೋ ದೇವರೇ! ನುರಿತ ಗುಡಿಗಾರನು ಮಾಡಿದ ಕಾಗದದ ಹೂವ ಕಂಡು ಮರುಳಾದ ಭೃಂಗವೇ? ಅಲ್ಲಿ ನಿನಗೆ ಮಧುವಾಗಲೀ, ಮಕರವಾಗಲೀ ಸಿಗಲಾರದು.

* ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿಜಿಲ್ಲೆ-೫೮೩೨೧೨. ಮೊ.: ೯೬೧೧೨೧೩೫೮೪.

ಏನು ಮಾಡುವುದು ನಾಲ್ಕು ಕಾಲಿನ ಪ್ರಾಣಿಗಳು ಪಶುಗಳಾದಂತೆ, ಆರು ಕಾಲಿನ ಭೃಂಗವೂ ಪಶುವಿನಂತೆ ವರ್ತಿಸುತ್ತಿದೆಯಲ್ಲಾ? ಮಲ್ಲಿಗೆಯ ಲತೆಯನ್ನು ಬಿಟ್ಟು ಉಳಿದೆಲ್ಲಾ ಕಡೆ ಓಲಾಡುತ್ತಿದೆಯಲ್ಲಾ! ಎಂದು ಪರಿತಪಿಸುತ್ತಾಳೆ.

ತುಕ್ಕಾದೇವಿಯು ಈ ಐದು ಪದ್ಯಗಳಲ್ಲಿ ಸ್ಪಷ್ಟವಾಗಿ ಕೃಷ್ಣರಾಯರ ಮೇಲಿನ ತನ್ನ ಪ್ರೀತಿಯನ್ನು ಭೃಂಗದ ಉಪಮೆಯ ಮೂಲಕ ವ್ಯಕ್ತಪಡಿಸಿದ್ದಾಳೆ. ಪತಿಯಿಂದ ದೂರವಾದ ಸತಿಯು ಸಹಜವಾಗಿ ಅನುಭವಿಸುವ ವಿರಹ ವೇದನೆಯು ಈ ಶ್ಲೋಕಗಳ ಪ್ರತಿ ಪದ್ಯದಲ್ಲಿಯೂ ಕಂಡು ಬರುತ್ತದೆ. ಇತಿಹಾಸದಲ್ಲಿ ಅಪೂರ್ವವಾದ ಮಾನವಿಕ ಭಾವನೆಗಳ ಸಾಮಾನ್ಯ ಹೆಣ್ಣು ಅನುಭವಿಸುವ ನೋವಿನ ಮನಮುಟ್ಟುವ ಅಭಿವ್ಯಕ್ತಿ ಇಲ್ಲಿದೆ. ಭಾರತೀಯ ಇತಿಹಾಸದಲ್ಲಿ ಅನೇಕ ರಾಜ-ರಾಣಿಯರು ಆಗಿ ಹೋಗಿದ್ದಾರೆ. ಯಾವುದೇ ರಾಣಿಯು ತನ್ನನ್ನು ಪರಿತ್ಯಾಗ ಮಾಡಿದ ಅಥವಾ ಅಲಕ್ಷ್ಯ ಮಾಡಿದ ರಾಜನ ಬಗ್ಗೆ ಈ ರೀತಿಯ ಕಾವ್ಯಮಯ ಪ್ರತಿಕ್ರಿಯೆಯನ್ನು ಕೊಟ್ಟಿಲ್ಲವೆಂದು ಹೇಳಬಹುದು.

**ಭೃಂಗ ಪಂಚಕಮ್ – (ತುಕ್ಕಾ ಪಂಚಕಮ್)**

**ವನಾನ್ತೇ ನವಮಂಜರೀಷು ಚರನ್ ಷಟ್ಪದ:**
**ಗಂಧಫಲೀಮ್ ನ ಅಜಿಘ್ರತ್**
**ಡಾ ಕಿಂ ರಮ್ಯಾ ನ ಸ ಚ ರಂ ಎನ್ತಾ ನ**
**ಕೇವಲಂ ಈಶ್ವರಾಜ್ಞಾ ವಲೀಯ ಸೀ ॥ ೧ ॥**

ಭ್ರಮರವೆ, ನೀನು ಕಾಡುಗಳಲ್ಲಿ ಸುತ್ತುತ್ತ ಬಳ್ಳಿಗಳ ಮೇಲೂ ಸಂಚರಿಸುತ್ತೀಯೆ. ನೀನು ಗಂಧಫಲ ಹೂವನ್ನು ಆಸ್ವಾದಿಸದೆ ಇರುತ್ತೀಯೇನು? ಆ ಬಳ್ಳಿ ರಮ್ಯವಾಗಿಲ್ಲವೆ? ಆ ಭ್ರಮರವು ರಸಿಕವಲ್ಲವೆ? ಈಶ್ವರನ ಆಣತಿಯು ಯಾವಾಗಲೂ ಬಲವಾದುದು.

**ಕಂ ಶುಕ! ಆತ್ಮನಿಮೇತಮಾತ್ರಂ ಮಾಪ್ರಕಟಯ ಯತ್ ಮನ್ಮಸ್ತಕೇ**
**ಅಯಂ ಮಧುವ್ರತಃ ವಿಹರೆತಿ ಇತಿ ।**
**ಕಿಂ ಮೂಲತೇ ವಿರಹ ವಾದನಯಾ ತ್ವದಂಃ**
**ಪ್ರಸೂನಮ್ ದೃಷ್ಟ್ವಾ ಅಚಿರಾತ್ ಅನಲ ಭ್ರಮೇಣ**

ಮುತ್ತುಗದ ಹೂವೆ, ನಿನ್ನ ತಲೆಯ ಮೇಲೆ ದುಂಬಿಯು ಕ್ಷಣಕಾಲ ಸುತ್ತುತ್ತಿದೆಯೆಂದು ದುರಹಂಕಾರ ಪಡಬೇಡ. ನಿನ್ನ ಹೂವನ್ನು ನೋಡಿದ ತಕ್ಷಣ ಬೆಂಕಿಯ ಭ್ರಮೆಯಿಂದ ನಿನ್ನನ್ನು ಬಿಟ್ಟು ಬಿಡುತ್ತದೆ. ಆಮೇಲೆ ದುಂಬಿಯು ಮಾಲತೀ ಕುಸುಮದ ಕಡೆ ಹೋಗುತ್ತದೆ. ಅಲ್ಲಿಯೇ ರಮಿಸುತ್ತದೆ.

**ಭ್ರಮರ ದಿಗಂತರಾಲೇ ಭ್ರಮತಾ ಕ್ವಚಿತ್**
**ಯದಿ ಜಾತಿ ಕುಸುಮಾನುಕಾರಿ ಪುಷ್ಪಮ್**
**ಅಸ್ವಾದಿತಮ್ ಈಕ್ಷಿತಂ ಶೃತ್ವಾ ವಾ ಪಕ್ಷಪಾತಂ**
**ಅತಾಸ್ಯ ಸತ್ಯಂ ವದ**

ಭ್ರಮರವೆ; ನಿನ್ನಿಂದ ಜಾತಿ ಕುಸುಮಕ್ಕೆ ಸಮನಾದ ಹೂವಿದೆಯೆಂದು ಕೇಳಿರುವಿಯೇನು? ಅಥವ ನೋಡಿರುವಿಯೇನು ಪಕ್ಷಪಾತವಿಲ್ಲದೆ ನಿಜ ಹೇಳು.

**ಕತಿಚಿತ್ ಕಾರು ವಿಶೇಷರೂಢ ಶಿಕ್ಷಾ:**
**ಚಿತ್ರೆ ಕುಸುಮಾನಿ ಲಿಖಿಂತಿ ನಾಮ ಕಿಮು ಚ**
**ಸಪ್ತೇಷು ಭೃಂಗಾಃ ತುರಭಿತ್ವಂ ಲಭಂತೇ**
**ಕಿಮು ಚೈತೇಷು ರಸಂ ಮಿಬಾನ್ತಿ?**

ಹೂವುಗಳು ಅಂದವಾಗಿವೆ. ಅವು ಶಿಲ್ಪಿಯ ವಿಶೇಷ ಕಲಾ ಶಿಕ್ಷಣವನ್ನು ಮನಸ್ಸಿನಲ್ಲಿಯೇ ಬರೆಯುತ್ತವೆಯೇನೋ? ಇವುಗಳಲ್ಲಿ ಪರಿಮಳ ಇರಲಾರವೆಯೇನು? ದುಂಬಿಗಳೆಲ್ಲ ಒಂದೇ ಹೂವಿನಲ್ಲಿ ರಸಾಸ್ವಾದನ ಮಾಡುತ್ತದೆಯೆ?

**ಕಿಂ ಮಾಂ ಮಾಂತಾಮ್ ಅಯಾಸಿ**
**ವಿಹಾಯ ತುಮ್ಬೀಕುಸುಮಂ ಷಡಂಗಿ: ಚುಚುಂಬ**
**ಶ್ಲೋಕೇ ಚತುರ್ಥಃ ಚರಣೇಃ ಪಶುಃ ಸ್ಯಾತ್**
**ನ ಷಡ್ಭಿ: ಅತ್ಯಸ್ತಿಪಶುಃ ಕಿಂ ನ ಸ್ಯಾತ್**

ನೀನು ನನ್ನನ್ನು ಬಿಟ್ಟು ಹೋಗುವುದಾದರೂ ಎಲ್ಲಿಗೆ? ನೀನು ಮಾಲತೀ ಕುಸುಮವನ್ನು ಅರಸಿ ಹೋಗಿರುವುದು ಏಕೆಂದು ನಿಜ ತಿಳಿಯೆನು! ದುಂಬಿಯು ತುಂಬೆ ಹೂವನ್ನು ಚುಂಬಿಸಿತು. ಜಗತ್ತಿನಲ್ಲಿ ನಾಲ್ಕು ಕಾಲುಗಳು ಇರುವವು ಪಶುಗಳು ತಾನೆ? ಅದರಂತೆ ಆರುಕಾಲುಗಳು ಇರುವವೆಲ್ಲ ದುಂಬಿಗಳೇ ಆಗಿರಬೇಕಲ್ಲ?

ವಿ.ಸೂ:

ತುಕ್ಕಾ – ದುಂಬಿಯೆಂಬುದು ನೇರ ಅರ್ಥ.

– ಅನ್ಯಸ್ತ್ರೀ ಎಂಬುದು ಪರೋಕ್ಷ ಅರ್ಥ.

ದುಂಬಿ – ತುಂಬಿ(ತ್ಭ)

ತುಂಬಿ – ತುಕ್ಕಾ (ಇದು ಪ್ರಾಕೃತ ರೂಪ ಇರುವಂತಿದೆ)

*****

# ಸೆಜ್ಜೆಯ ಸಿದ್ಧಲಿಂಗಾರ್ಯನ 'ಮಳೆಯರಾಜ ಚಾರಿತ್ರ' ಕಾವ್ಯಾವಲೋಕನ

* ಗಂಗಾಂಜಿಕೆ. ಎಸ್.

**ಕವಿ; ಕಾಲ; ಕೃತಿ**

ಸೆಜ್ಜೆಯ ಸಿದ್ಧಲಿಂಗಾರ್ಯ ಕವಿ 'ಮಳೆಯರಾಜ ಚಾರಿತ್ರ'ದ ಕರ್ತೃ. ಕವಿಯ ಕಾಲ ಕ್ರಿ.ಶ. ೧೬೭೨. ಈ ಕಾವ್ಯ ಮತ್ತು ಶಾಸನಾಧಾರಗಳಿಂದ ಸೆಜ್ಜೆಯ ಸಿದ್ಧಲಿಂಗಾರ್ಯನ ವಂಶಾವಳಿಯನ್ನು ಹೀಗೆ ನಿರ್ಧರಿಸಬಹುದು:




'ಮಳೆಯರಾಜ ಚಾರಿತ್ರ'ದ ಪ್ರಕಾರ ಸೆಜ್ಜೆಯ ಸಿದ್ಧಲಿಂಗಾರ್ಯನ ಗುರುಪರಂಪರೆ ಇಂತಿದೆ:




ಕವಿಯ ವಿದ್ಯಾಗುರು ಸಿದ್ಧರಾಮಾರ್ಯ. ಕವಿಯು ಮೊದಲು ವಿಜಯನಗರದ ಹಿರಿಯಮಠದ ಸಿದ್ಧನಂಜೇಶನಲ್ಲಿ ಶಿಷ್ಯನಾಗಿದ್ದು, ಕಾಲಾಂತರದಲ್ಲಿ ಕೊಟ್ಟೂರಿಗೆ ಬಂದು ಸಿದ್ಧರಾಮಾರ್ಯನಿಂದ ಬಹುಶಾಸ್ತ್ರಗಳನ್ನು ಕಲಿತನು. ಇಷ್ಟಲಿಂಗಕ್ಕೆ ಸೆಜ್ಜೆಗಳನ್ನು ಸಿದ್ಧಮಾಡುತ್ತಿದ್ದರಿಂದ ಈತನಿಗೆ 'ಸೆಜ್ಜೆಯ ಸಿದ್ಧಲಿಂಗಾರ್ಯ'ಎಂದು ಹೆಸರಾಯಿತು. ಕೊಟ್ಟೂರಿನ ಬಸವಲಿಂಗೇಶನ ಬಳಿ ೯ ವರ್ಷಗಳಿದ್ದು ಆನಂತರ ಸುಗುಟೂರು ಸಂಸ್ಥಾನದ ದೊರೆ ಮುಮ್ಮಡಿ ತಮ್ಮೇಗೌಡ (ಕ್ರಿ.ಶ> ೧೬೦೫-೧೬೪೨)ನ ಆಶ್ರಯಕ್ಕೆ ಬಂದು ನೆಲೆಸುತ್ತಾನೆ. ಇವನಿಗೆ "ರಸಿಕರಾಜೇಂದ್ರ". "ಸಕ್ಕದ ಕನ್ನಡದ ಕವಿತೆಯ ಚದುರ" ಎಂಬ ಬಿರುದುಗಳಿದ್ದವು.

'ಮಳೆಯರಾಜ ಚಾರಿತ್ರ'ಕ್ಕೆ ಹರಿಹರನ 'ಮಲಯರಾಜ ದೇವರ ರಗಳೆ'ಯು ಆಕರವಾಗಿದೆ. 'ಮಳೆಯರಾಜಚಾರಿತ್ರ'ದಲ್ಲಿ ೩ ಆಶ್ವಾಸಗಳಿವೆ. ಮೊದಲನೆಯ ಆಶ್ವಾಸದಲ್ಲಿ ೧೪, ಎರಡನೆಯ ಆಶ್ವಾಸದಲ್ಲಿ ೧೧, ಮೂರನೆಯ ಆಶ್ವಾಸದಲ್ಲಿ ೧೧ - ಹೀಗೆ ಒಟ್ಟು ೩೬ ಸಂಧಿಗಳಿದ್ದು, ೧೫೨೧ ವಾರ್ಧಕ ಷಟ್ಪದಿಯ ಪದ್ಯಗಳಿವೆ.

"ಧರೆಸಹಿತ ಕೈಲಾಸಕೆ ತೆರಳಿದ ಮಹಾತ್ಮನಾವಂ ಭಕ್ತರೊಳಗೆ"ಂದು ತನ್ನ ಮೊಮ್ಮಕ್ಕಳು ಕೇಳಿದಾಗ, ಸೆಜ್ಜೆಯ ಸಿದ್ಧಲಿಂಗಾರ್ಯನು ಈ 'ಮಳೆಯರಾಜಚಾರಿತ್ರ'ವನ್ನು ಹೇಳಿದುದಾಗಿ ತಿಳಿಸಿದ್ದಾನೆ. "ರನ್ನಗಬ್ಬ"ವಾದ ಈ ಕಾವ್ಯದ ನಾಯಕ ಭೋಗಲಿಂಗೇಶ್ವರ; ಕಾವ್ಯಕ್ಕಿರುವ ಇನ್ನೊಂದು ಹೆಸರು ಕವಿಕರ್ಣಭೂಷಣ; ಈ ಕಾವ್ಯದಲ್ಲಿ ಮಳೆಯರಾಜನ ಕಥೆ ಇದೆ; ಪ್ರತಿಸಂಧಿಯ

---

* ಕನ್ನಡ ಉಪನ್ಯಾಸಕರು, ಸರಕಾರಿ ಸ್ವತಂತ್ರ ಪದವಿಪೂರ್ವ ಕಾಲೇಜು, ಸೂಲಿಬೆಲೆ ಹೊಸಕೋಟೆ ತಾಲ್ಲೂಕು

ಪ್ರಾರಂಭದ ಮೂರು ಸಾಲುಗಳಲ್ಲಿ ಆ ಸಂಧಿಯ ಮುಖ್ಯಸಾರವನ್ನು ಸೂತ್ರರೂಪದಲ್ಲಿ ಹೇಳಿದ್ದಾನೆ. ಪ್ರತಿ ಸಂಧಿಯೂ ಭೋಗಲಿಂಗನ ಸ್ತುತಿಯೊಂದಿಗೆ ಆರಂಭವಾಗುತ್ತದೆ. ಈ ಭೋಗಲಿಂಗೇಶ್ವರನು ಚಿಕ್ಕಬಳ್ಳಾಪುರದ ಸಮೀಪವಿರುವ ನಂದಿಯ ಭೋಗಲಿಂಗೇಶ್ವರ ದೈವವೇ ಸರಿ.

ಸೆಜ್ಜೆಯ ಸಿದ್ಧಲಿಂಗಾರ್ಯ, ತನ್ನ ಕಾವ್ಯದ ಪ್ರಥಮಾಶ್ವಾಸದ ಪ್ರಥಮ ಸಂಧಿಯಲ್ಲಿ ವ್ಯಾಸ, ವಾಲ್ಮೀಕಿ, ಕೆರೆಯ ಪದ್ಮರಸ, ಹಲಾಯುಧ, ಸೋಮಾರಾಧ್ಯ, ಶಿವಮೂರ್ತಿ ಮೊದಲಾದ ಪೂರ್ವಕವಿಗಳಿಗೆ ವಂದಿಸಿದ್ದಾನೆ. ಕವಿ ಕುಕವಿಗಳನ್ನು ನಿಂದಿಸುವ ಪರಿ ಮನೋಜ್ಞವಾಗಿಯೇ ಇದೆ.

**ಕನ್ನಡಿಯನಂಧಕಂ ಸೂರ್ಯನಂ ಗೂಗೆ ತಿಳಿ**
**ಜೊನ್ನಮಂ ಕಾಗೆ ಷಂಡಂ ಬಾಲೆಯರ ನಾಟ್ಯ**
**ದುನ್ನತಿಕೆಯಂ ಕಳ್ತೆ ಬಟ್ಟವಾಲಂ ಬಕಂ ಕಿನ್ನರಿಯನತಿ ಬಧಿರನು**
**ಚುನ್ನವಾಡುವ ತೆರದೆ ಕುಕವಿಗಳು ಜಟಿದೊಡೇಂ**
**ಬಿನ್ನಣದ ಕೃತಿಯಂ ಸುಕವಿಗಳೋದೆದೆ ಸಾಕು**
**ರನ್ನಮಂ ಕಪಿ ಕಡಿದು ಫಲವಿಲ್ಲವೆನಲದು ಚನ್ನೆಸೆವ ಮಣಿಯಲ್ಲವೆ!**

ಎಂದು ಹೇಳಿರುವ ಕವಿಗೆ ತನ್ನ ಕಾವ್ಯಸೊಬಗಿನ ಬಗ್ಗೆ ಎಷ್ಟು ಆತ್ಮವಿಶ್ವಾಸ ಇತ್ತೆಂಬುದು ತಿಳಿಯುತ್ತದೆ. ಇಷ್ಟೆಲ್ಲವನ್ನು ಹೇಳಿದ ಕವಿ, ವ್ಯುತ್ಪತ್ತಿಯ ಜೊತೆಗೆ ಕಾವ್ಯ ನಿರ್ಮಾಣ ಸಾಮರ್ಥ್ಯ ಅತಿಶಯವಾದುದೆಂಬುದನ್ನು ಹೇಳಲು ಮರೆತಿಲ್ಲ. ಇದರೊಂದಿಗೆ ತನ್ನ ಕಾವ್ಯದ ಅಗ್ಗಳಿಕೆಯನ್ನು ಕುರಿತು, ತನ್ನ ಕೃತಿಯನ್ನು ರಸಿಕರು ತಮ್ಮ ಕರ್ಣಗಳಲ್ಲಿ ಪ್ರೀತಿಯಿಂದ ಆಲಿಸುವವರಾದ್ದರಿಂದ, ಧರಿಸುವವರಾದ್ದರಿಂದ ಇದಕ್ಕೆ "ಕವಿಕರ್ಣಭೂಷಣ" ಎಂಬ ಹೆಸರನ್ನೂ ಇಟ್ಟಿರುವುದಾಗಿ ಬಣ್ಣಿಸುವಲ್ಲಿ ಕವಿ ಹಿಂದೆ ಬಿದ್ದಿಲ್ಲ.

**ಸಂಕ್ಷಿಪ್ತ ಕಥಾಸಾರ**

"ಇಳೆಗೆ ತೊಳಗಿ ಬೆಳಪ ತಿಳಕವೆನಿಪ ಮಲಯದೇಶದ ಮಲಯವತಿಪಟ್ಟಣದ" ದೊರೆ ದೇವರಾಜ. ಒಂದು ದಿನ ದೇವರಾಜನು ಆಸ್ಥಾನದ ಕಾರ್ಯಗಳನ್ನು ಪೂರ್ಣಗೊಳಿಸಿದ ತರುವಾಯ ವೇದ ಪೂರ್ಣಾಚಾರ್ಯರೆಂಬ ಮುನಿವರನನ್ನು ಕರೆದು, ಪೌರಾಣಬಲನ ಮಕ್ಕಳು ತಮ್ಮ ಪಿತೃಗಳನ್ನು ಕೈಲಾಸಕ್ಕೆ ಒಯ್ದು ಮೋಕ್ಷಪಡೆಯುವಂತೆ ಮಾಡಿದ ಕಥೆಯನ್ನು ಹೇಳಿ ಎಂದು ವಿಜ್ಞಾಪಿಸುತ್ತಾನೆ. ಆಗ ಆಚಾರ್ಯನು ಬಹಳ ಸಂತೋಷದಿಂದ ಆ ಕಥೆಯನ್ನು ನಿರೂಪಿಸುತ್ತಾನೆ. ಪೌರಾಣಬಲನ ಕಥೆಯನ್ನು ಆಲಿಸಿದ ದೇವರಾಜನು ತನ್ನ ಪುತ್ರಹೀನತ್ವವನ್ನು ನೆನೆದು ಚಿಂತಾಕ್ರಾಂತನಾಗುತ್ತಾನೆ. ಶಿವಮಹಿಮೆಯುಳ್ಳ ಕಥೆಯನ್ನು ಮನದಣಿಯುವಂತೆ ಕೇಳಿದ್ದರಿಂದ ಅವನಿಗೆ ಪುತ್ರಾರ್ಥಿಯಾಗಿ ಹರನನ್ನು ಒಲಿಸುವ ಆಸೆ ಅಂಕುರಿಸುತ್ತದೆ. ತನ್ನ ಇಷ್ಟಾರ್ಥವನ್ನು ಸಿದ್ಧಿಸಿಕೊಳ್ಳಲು ಮೃಡನನ್ನು ಕುರಿತು ದೇವರಾಜನು ತಪಗೈಯ್ಯುತ್ತಾನೆ. ದೇವರಾಜನ ತಪಃಶಕ್ತಿಗೆ ಮೆಚ್ಚಿ ಶಿವನು ಪ್ರತ್ಯಕ್ಷನಾಗಿ "ಶತಾಯುಷಿಯಾದ ದಡ್ಡಮಗ ಬೇಕೋ ಹದಿನಾರುವರ್ಷ ಆಯುಷ್ಯವುಳ್ಳ ಕಡುಜಾಣನಾದ ಮಗ ಬೇಕೋ" ಎಂದು ಕೇಳುತ್ತಾನೆ. ಆಗ ದೇವರಾಜನು "ಮೃಡನೆ ಹೆಡ್ಡನದೇಕೆ ಕಿಜಿದಾಯುವಾದಡೇಂ ನುಡಿದ ನೀಂ ಕೋವಿದನೆನುತ್ತಿತ್ತವಂ ಸಾಕು ಪಡೆವನಾತನೆ ನಿತ್ಯತೆಯಂ" ಎಂದು ಬಿನ್ನವಿಸುತ್ತಾನೆ. ಆಗ ಹರನು ಪಾರಿಜಾತ ಪುಷ್ಪವೊಂದನ್ನು ನೀಡಿ "ಧೀರಮ್ಯ ಸರ್ವೋಪಕಾರಿ ಸದ್ಗುಣಿಯಹ ಕುಮಾರಕಂ ನಿಮ್ಮೊಂದರವಾರಿಧಿಯೊಳೊಗೆ ವನಜ್ಜಾರಿಯಂತೆ" ಎಂದು ಅಭಯವನ್ನೀಯುತ್ತಾನೆ. ಪುತ್ರಪ್ರಸಾದದಿಂದ ಸಂತೋಷಗೊಂಡ ರಾಜದಂಪತಿಗಳು ಗುರುಜಂಗಮಸೇವೆ ಮಾಡಿ, ಶಿವನ ವರಫಲವು ಮಾಗುವಂತೆ 'ಸುರತೇಚ್ಛೆಯೊಳೊಂ'ದಾಗುತ್ತಾರೆ. ರಾಣಿ ಶಚಿಯು ಗರ್ಭವತಿಯಾಗುತ್ತಾಳೆ. ನವಮಾಸಗಳು ತುಂಬಿ "ಪೂರ್ವಗಿರಿಯಿಂ ಬಾಲರವಿಬಿಂಬಮುದದಿಜಂದೆಳೆಯಂಚೆ ತಾಂ ಬಿಮವಟ್ಟಂ ಬಳಿಯ ಮುಗಿಲಿಂ ಪೊಱಟು ಬರ್ಪಂತೆ" ಗಂಡು ಮಗುವಿನ ಜನನವಾಗುತ್ತದೆ. ಆ ಕುಮಾರನೆ ಮಳೆಯರಾಜ. ಮಳೆಯದೇಶವನ್ನು ಆಳುವಂತಹವನಾದ್ದರಿಂದಲೇ ಅವನಿಗೆ 'ಮಳೆಯರಾಜ' ಎಂದು ನಾಮಕರಣ ಮಾಡುತ್ತಾರೆ. ಶಿವಭಕ್ತಿಯ 'ಸುರದ್ರುಮಸುಮ'ದಂತೆ ಮಳೆಯರಾಜ ಬೆಳೆಯುತ್ತಾನೆ. ವೇದಪೂರ್ಣಾಚಾರ್ಯರಿಂದ ಸಕಲಶಾಸ್ತ್ರಗಳಲ್ಲಿ ಬಲ್ಲಿದನಾಗುತ್ತಾನೆ. ಅವನಿಗೆ ಯೌವನೋದಯವಾಗಲು ಮಹಾರಾಜನು ಅವನಿಗೆ

ಯುವರಾಜಪಟ್ಟವನ್ನು ಕಟ್ಟುತ್ತಾನೆ. ಯುವರಾಜನಾಗಿ ತನ್ನ ಅಪಾರ ಸೈನ್ಯದೊಡನೆ ಚೈತ್ರಯಾತ್ರೆಗೆ ತೆರಳುತ್ತಾನೆ. ಷಡ್ದ್ವೀಪದರಸರನ್ನು, ದಾನವರನ್ನು ತನ್ನ ಅಧೀನರನ್ನಾಗಿಸಿಕೊಳ್ಳುತ್ತಾನೆ. ವಿಜಯೋತ್ಸವವನ್ನು ಕಂಡು ಮುದಗೊಂಡ ಮರುಕ್ಷಣವೇ ಮಳೆಯರಾಜನ ತಂದೆತಾಯಿಗಳು ಮಗನ ಅಲ್ಪಾಯುಷ್ಯದ ಅವಧಿ ಮುಗಿಯುತ್ತ ಬಂದುದನ್ನು ನೆನೆದು "ಕಾಳ್ಗಿಚ್ಚಿನಿಂದಮರೆವೆಂದಂ ನೆಜೆಸೊಂದ ಹಂಸಮಿಥುನಗಳಂತೆ" ಚಿಂತಾಗ್ನಿಯಲ್ಲಿ ಬೇಯುತ್ತಾರೆ. ಮಾತಾಪಿತರ ದುಃಖಕ್ಕೆ ಕಾರಣವನ್ನರಿತ ಮಳೆಯರಾಜ "ಕೊಟ್ಟವನಿಲ್ಲವೇ ಬಿಡಿ ದುಃಖವೇಕೆಂದನು". ತನ್ನಾಯುಷ್ಯದಲ್ಲಿ ಇನ್ನು ೭ ದಿನಗಳು ಉಳಿದಿರಲು ಮಳೆಯರಾಜನು ಊರಹೊರಗಿನ ಸ್ವಯಂಭೇಶ್ವರ ದೇಗುಲಕ್ಕೆ ಬಂದು ಸದಾತ್ಮನಾಗಿ ತದೇಕಚಿತ್ತದಿಂದ ಶಿವನನ್ನು ಭಜಿಸಿದನು. ಪಂಚವಕ್ತ್ರ, ದಶಭುಜ, ಖಡ್ಗಪರಶುವೇ ಮೊದಲಾದ ಆಯುಧಗಳನ್ನುಧರಿಸಿ, ಹರನವತರಿಸಿ "ಎಲೆ ಮಗನೆ ನಿನ್ನಿಷ್ಟವೇನುಳ್ಳೊಡಂ ಕುಡುವೆನೀಕ್ಷಣದಲ್ಲಿ ಬೇಡು ಬೇಡು" ಎನ್ನಲು ಮಳೆಯರಾಜನು ಅಂಜಲೀಬದ್ಧನಾಗಿ ಸಂಭ್ರಮೋತ್ಸಾಹದಿಂದ "ಶಬ್ದಾಬ್ದದಾಯುಷ್ಯಮಂ ಕರುಣಿಸು" ಎಂದು ಕೇಳಿದನು. ಜೊತೆಗೆ ತಂದೆತಾಯಿ, ನೆಂಟರಿಷ್ಟರು, ಆಬಾಲವೃದ್ಧರು, ಸಕಲಜೀವಿಗಳನ್ನು ನೂರುವರ್ಷ ಕಳೆದಮೇಲೆ ನನ್ನೊಡನೆ ಧರೆಸಹಿತವಾಗಿ ಕೈಲಾಸಕ್ಕೆ ಕರೆದುಕೋ ಎಂದು ಬೇಡುತ್ತಾನೆ. "ಕಂದ ಕೊಟ್ಟೆಂ ಕೊಟ್ಟೆನಾಂ ನೀನೆನೆದೊಡಿರದೆ ಬಂದಿಚ್ಚೆಯಂ ಸಲಿಪೆನಾಕ್ಷಣದೆ ಸುಖದೊಳಾನಂದದಿಂ ಬಾಳ್ವುದು" ಎಂದು ಹರಸಿ ಅಂತರ್ಧಾನನಾಗುತ್ತಾನೆ. ಈ ಶುಭವಾರ್ತೆಯನ್ನು ಎಲ್ಲರಿಗೂ ಅರುಹುತ್ತಾನೆ. ಮುಂದೆ ಮಳೆಯರಾಜ ಧರ್ಮದಿಂದ ರಾಜ್ಯವಾಳುತ್ತಾನೆ. ಮಹಾರಾಜನು ಸಿಂಧುದೇಶದ ರಾಜಧಾನಿ ಗಂಧವತಿಯ ರಾಜ ಶಾಂತಕಾಯ ಮತ್ತು ಸತ್ಯವತಿಯರ ಪುತ್ರಿ ಮಾಂಗಲ್ಯವತಿಯನ್ನು ತಂದು ಮಳೆಯರಾಜನೊಂದಿಗೆ ವಿವಾಹಮಾಡುತ್ತಾನೆ. ತದನಂತರದಲ್ಲಿ ಮಳೆಯರಾಜನು "ಸದ್ಭಕ್ತಗುರುಲಿಂಗ ಜಂಗಮದ ಲೋಲುಪ್ತಿಯಿಂದೆ ಪಿತಮಾತೆರ್ಗಾನಂದಲೀಲೆಯೊಗೆವಂತೆ ಗೆಲವಿಂ ಶೀಲಸುದಯಾ ದಾನದಾಕ್ಷಿಣ್ಯ ಧರ್ಮದಿಂ ಮೂಲೋಕದೊಳ್ ಜಸಂ ಪರ್ವೆ" ಬಾಳುತ್ತಿರುತ್ತಾನೆ. ಶಿವಚಿತ್ತ ಮುನಿಗಳಿಂದ ಶಿವ ತತ್ವಶಾಸ್ತ್ರವನ್ನು ಕೇಳಿ ಶಿವಭಕ್ತಿಸಂಗಿಯಾಗಿ ಅಮಿತಾತ್ಮನಂದದಲ್ಲಿ ಪೊಣ್ಮುತ್ತಿರುತ್ತಾನೆ. ಇಷ್ಟಲಿಂಗ ಧ್ಯಾನದಲ್ಲಿ ಮುಳುಗಿರುವಾಗಲೇ ಶಿವನು ನಿಜರೂಪ ತೋರುವನು. ಆಗ ಮಳೆಯರಾಜನು "ನೀನಿತ್ತ ಭೂತಿಯಿಂ ಸುಖಮಿರ್ದೆನಿಳೆಯಲಿ ನೀನಿರೆಂದುಸುರ್ದ ಶತಸಂವತ್ಸರಂ ಕಳೆದುದೆನ್ನಂ ಮಳೆಯ ದೇಶಂಬೆರಸಿ ಭವಂ ನಿಳಯಕಿನ್ನೊಯ್ವುದು" ಎನ್ನಲು, ಶಿವನು ನವಲಕ್ಷಮಳೆಯದೇಶ ಸಹಿತವಾಗಿ ಮಳೆಯರಾಜನ್ನು ಕೈಲಾಸಕ್ಕೆ ಕರೆದೊಯ್ಯುತ್ತಾನೆ. ಕೈಲಾಸದ ನಂದಿಬಾಗಿಲಿನಲ್ಲಿ ಮಳೆಯದೇಶವನ್ನಿಟ್ಟು ಮಳೆಯರಾಜನನ್ನು ತನ್ನ ತೊಡೆಯ ಮೇಲಿಟ್ಟು ವಾತ್ಸಲ್ಯದಿಂದ ಮುದ್ದಿಸುತ ಶೋಭಿಸುತ್ತಿರುತ್ತಾನೆ. ಇಲ್ಲಿಗೆ ಕಾವ್ಯ ಮುಕ್ತಾಯವಾಗುತ್ತದೆ.

**ಹರಿಹರ – ಸಿದ್ಧಲಿಂಗಾರ್ಯರಲ್ಲಿ ಕಥಾವಸ್ತು ಮತ್ತು ಪ್ರಸಂಗಗಳಲ್ಲಿನ ಮಾರ್ಪಾಡು**

ಹರಿಹರನ 'ಮಲಯರಾಜಚಾರಿತ್ರ'ಕ್ಕೂ ಈ "ಮಳೆಯರಾಜಚಾರಿತ್ರ್ಯ"ಕ್ಕೂ ಕಥಾವಸ್ತುವಿನಲ್ಲಿ, ಪ್ರಸಂಗಗಳಲ್ಲಿ ಪಾತ್ರನಿರ್ಮಾಣದಲ್ಲಿ ಭಿನ್ನತೆಯಿದೆ.

**"ಇಳೆಗೆ ತೊಳಗಿ ಬೆಳಪ ತಿಳಕವೆನಿಪ ಮಲಯ ದೇಶದಲ್ಲಿ**
**ಮಲಯವತಿ ಪಟ್ಟಣಂ ವಿರಾಜಿಸಿರ್ಪುದಲ್ಲಿ"**

ಎಂದು ಒಂದೇ ವಾಕ್ಯದಲ್ಲಿ ತನ್ನ ಎಂದಿನ ಉತ್ಸಾಹಲಯದಲ್ಲಿ ಹರಿಹರದ ಕಾವ್ಯಕಥೆಗೆ ಧುಮುಕಿಬಿಡುತ್ತಾನೆ. ಆದರೆ ಸೆಜ್ಜೆಯ ಸಿದ್ಧಲಿಂಗಾರ್ಯ ಮಲಯದೇಶವನ್ನು ವಾರ್ಧಕ ಷಟ್ಪದಿಗಳುಳ್ಳ ೩ ಸಂಧಿಗಳ ಅದ್ಭುತವಾದ ಕಾವ್ಯ ಚಿತ್ರಗಳಿಂದ, ದೇಸೀ ಪ್ರಯೋಗಗಳಿಂದ, ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ಇನ್ನು ಮಲಯವತಿ ಪಟ್ಟಣವು ಕೋಟೆಕೊತ್ತಲ, ರಮ್ಯವಾದ ಬೀದಿಗಳು, ಕೆರೆತೊರೆಗಳು ಮೊದಲಾದ ಸಂಪದಗಳಿಂದ ಕಂಗೊಳಿಸುತ್ತಿದ್ದುದನ್ನು ೪೦ ವಾರ್ಧಕ ಷಟ್ಪದಿಗಳಲ್ಲಿ ಬಣ್ಣಿಸಿದ್ದಾನೆ. ಮಲಯವತಿಯ ಒಡೆಯ ದೇವರಾಜನು –

**"ಧರೆಗೆ ದೇವರಾಜನೆಂಬ ಪೆಸರ ಪೆರ್ಮೆ ಬಸವನೀಯೆ**
**ಧರಣಿಗೆಲ್ಲ ತನ್ನ ಕೊಡೆಯ ನೆಳಲ ತಂಪು ಸೊಂಪನೀಯೆ"**

ಎಂದು ಮುಂತಾಗಿ ೨೪ ಸಾಲುಗಳಲ್ಲಿ ದೇವರಾಜನ ಗುಣಗಾನ ಮಾಡಿದ್ದಾನೆ ಹರಿಹರ. ಆದರೆ ಸಿದ್ಧಲಿಂಗಾರ್ಯನು, ದೇವರಾಜನು ಹರಿಶ್ಚಂದ್ರ, ರಘುಪತಿ, ಧರ್ಮಜರಂತೆ, ಭೀಮಾರ್ಜುನರಂತೆ ಭಕ್ತಿಶಕ್ತಿ ಸಮನ್ವಿತನಾಗಿದ್ದುದಲ್ಲದೆ, ಆತ ರೂಪು

ಯೌವ್ವನಗಳಲ್ಲಿ ಮದನನನ್ನು ಹೋಲುತ್ತಿದ್ದನು; ಬಂಧು ಬಳಗವ ಬೆರಸಿ ಜಸವೆತ್ತಿ ಬಾಳುತ್ತಿದ್ದುದನ್ನು ೬ ಷಟ್ಪದಿಗಳಲ್ಲಿ ಹರಿಹರನಿಗಿಂತಲೂ ಮನೋಜ್ಞವಾಗಿ ತಿಳಿಸುತ್ತಾನೆ. ದೇವರಾಜನಿಗೆ ಧರ್ಮಬೋಧನೆಗೆಂದೇ ಸನಿಹವಿದ್ದ ವೇದಪೂರ್ಣಾಚಾರ್ಯನೆಂಬ ಗುರುವಿನ ಮತ್ತು ಶಿವಚಿತ್ತ ಮುನಿಗಳ ಪ್ರಸ್ತಾಪ ಹರಿಹರನಲ್ಲಿ ಇಲ್ಲವೇ ಇಲ್ಲ. ದೇವರಾಜನು ಸಂಗಡಿಗರೊಡನೆ ಸೂಳೆಗೇರಿಯ ಸಂಚಾರಕ್ಕೆಂದು ಹೊರಟಾಗಿನ ವೇಶ್ಯಾವಾಟಿಕೆಯ ವರ್ಣನಾಭಾಗ ಹರಿಹರನಂತಹ ಶಿವಕವಿಯ ಲೇಖನಿಯಿಂದ ಜಾರಿಹೋಗಿದೆ. ಬಹುಶಃ ಹರಿಹರನ ಭಕ್ತಹೃದಯಕ್ಕೆ ಈ ವರ್ಣನೆಯಲ್ಲಿ ಮುದವಿಲ್ಲ. ಸಿದ್ಧಲಿಂಗಾರ್ಯನಾದರೂ ೫೫ ಪದ್ಯಗಳುಳ್ಳ ೧ ಸಂಧಿಯನ್ನೇ ಇದಕ್ಕೆಂದು ಮೀಸಲಿರಿಸಿ ಬಿಟ್ಟಿದ್ದಾನೆ.

ಸಿದ್ಧಲಿಂಗಾರ್ಯನು, ದೇವರಾಜನಿಗೆ ಪುತ್ರಹೀನರಿಗೆ ಮೋಕ್ಷವಿರುವುದಿಲ್ಲ ಎಂಬುದನ್ನು ಮನದಟ್ಟು ಮಾಡಿಸಲು ವೇದಪೂರ್ಣಾಚಾರ್ಯನಿಂದ ಪೌರಾಣಬಲನ ಕಥೆಯನ್ನು ಹೇಳಿಸಿದ್ದಾನೆ. ಹರಿಹರನಾದರೊ ಒಂದೇ ಸಾಲಿನಲ್ಲಿ ಇದನ್ನು ತೇಲಿಸಿ ಮುಂದೆ ಸಾಗಿಬಿಡುತ್ತಾನೆ. ಸಿದ್ಧಲಿಂಗಾರ್ಯನಲ್ಲಿ ಈ ಕಥೆಯು ಸಾಕಾರದರ್ಪಕನೆಂಬ ರಾಜ, ಶೃಂಗಾರ ಮೋಹಿನಿಯೆಂಬ ರಾಣಿ, ಅಮೃತಸಾರಂಗ, ಕಾಲವರ್ಮ, ಕಾಂಚನಪ್ರಭೆ, ಶೃಂಗಾರಾಂಗ, ಸುಮನೆ, ಅತಿಧೂರ್ತ, ಸೌಂಧಿನಿ, ಗೃಹವರ್ಮ, ಪೌರಾಂಬಲ, ಸಾಮಾನ್ಯಂಗಸುತೆ, ಸುಕೇಶಿ, ಪೂರ್ಣಭದ್ರ, ಪೂರ್ಣವಿತ್ತ, ಸಾನಂದ – ಈ ಪಾತ್ರಗಳಿಂದ, ಬೇಟೆ, ವಿವಾಹವರ್ಣನೆ, ಪ್ರವಾಹದ ಭೀಕರತೆ, ಅರಣ್ಯವಾಸ, ಶಿವಪೂಜಾ ಮಹಿಮೆ, ರುದ್ರಾಕ್ಷಿ, ವಿಭೂತಿ, ಪಂಚಾಕ್ಷರಿ ಮಂತ್ರಗಳ ಪಾರಮ್ಯತೆಗಳನ್ನು ಒಳಗೊಂಡ ಹಲವು ಪ್ರಸಂಗಗಳಿಂದ ಸನ್ನಿವೇಶಗಳಿಂದ ಕೂಡಿ ೧೦ ಸಂಧಿಗಳಲ್ಲಿ ನಿರೂಪಿತವಾಗಿದೆ.

ದೇವರಾಜನು ಪೌರಾಣಬಲನ ಕಥೆಯನ್ನು ಕೇಳಿ ಪುತ್ರಾಕಾಂಕ್ಷೆಯಿಂದ ಶಿವನನ್ನು ಭಜಿಸಿ ಮಗನನ್ನು ಪಡೆದ ಪ್ರಸಂಗದ ಚಿತ್ರಣ ಹರಿಹರ–ಸಿದ್ಧಲಿಂಗಾರ್ಯನಲ್ಲಿ ಒಂದೆ ತೆರನಾಗಿದೆ. ಮಳೆರಾಯನ ಜನನ, ಪುತ್ರೋದಯದಿಂದ ಉಂಟಾದ ಪರಿತೋಷಗಳ ಸಂದರ್ಭಗಳಲ್ಲಿ ಸಂಪೂರ್ಣವಾಗಿ ಸಿದ್ಧಲಿಂಗಾರ್ಯ ಹರಿಹರನನ್ನು ನಿಷ್ಠವಾಗಿ ಅನುಕರಿಸಿದ್ದಾನೆ. ಮಲಯದೇಶದ ಅರಸಾಗಲಿರುವುದರಿಂದ ಶಿಶುವಿಗೆ 'ಮಳೆಯರಾಜ' ನೆಂಬ ಹೆಸರನ್ನಿಡಲಾಯಿತೆಂಬುದನ್ನು ಇರ್ವರೂ ಹೇಳಿದ್ದಾರೆ. ರಾಣಿ ಶಚಿಯು ಶಿಶುವಿಗೆ ಹಾಲ್ಕುಡಿಸುವ ಸಂದರ್ಭ "ದಿಟ್ಟಿಗುಮ್ಮಂಕಜೆುದು ಮೊಲೆಯನಾಕಂದಂಗೆ ಕೊಡುತಿರ್ಪಳು" ಎಂಬ ವಾಸ್ತವ ಚಿತ್ರಣ ಸಿದ್ಧಲಿಂಗಾರ್ಯನಲ್ಲಿ ಸೊಗಸಾಗಿ ಮೂಡಿದೆ. ಆದರೆ ಹರಿಹರ ತನ್ನ ಭಕ್ತಿಯ ಲಹರಿಯಲ್ಲಿಯೇ ಮುಂದೆ ಸಾಗಿಬಿಟ್ಟಿದ್ದಾನೆ. ಮಲಯರಾಜನ ಬಾಲವಿನೋದಗಳನ್ನು, ದೇವರಾಜ–ಶಚಿ ದಂಪತಿಗಳು ಮಗುವನ್ನು ಮುದ್ದಾಡುವ ನಾನಾಪರಿಗಳನ್ನು, ಮಲಯರಾಜನ ವಿದ್ಯಾಭ್ಯಾಸ, ಪಟ್ಟಾಧಿಕಾರ, ಚೈತ್ರಯಾತ್ರೆ, ಷಟ್‌ದ್ವೀಪದರಸರನ್ನು ಮಲಯರಾಜನು ಸೋಲಿಸಿದ್ದು, ಮೊದಲಾದ ಪ್ರಸಂಗಗಳನ್ನು ಸಿದ್ಧಲಿಂಗಾರ್ಯ ತನ್ನ ಕಾವ್ಯ ಶಕ್ತಿಯನ್ನೆಲ್ಲ ಬಸಿದು ಬಣ್ಣಿಸಿದ್ದಾನೆ. ಇದಾದ ನಂತರದಲ್ಲಿ ಮಲಯರಾಜನ ಆಯುಷ್ಯ ಮುಗಿಯುತ್ತಿರುವ ಸಮಯವನ್ನು ನೆನೆದು ರಾಜದಂಪತಿಗಳು ವ್ಯಥಿಸುವ ಪರಿ ಇರ್ವರಲ್ಲೂ ಒಂದೇ ರೀತಿಯಲ್ಲೇ ಇದೆ. ಆದರೆ ಹರಿಹರನ ಮಲಯರಾಜ ಸಿದ್ಧಲಿಂಗಾರ್ಯನ ಮಳೆಯರಾಜನಿಗಿಂತ ಹೆಚ್ಚು ಆತ್ಮವಿಶ್ವಾಸಿ. ಸಿದ್ಧಲಿಂಗಾರ್ಯನ ಮಳೆಯರಾಜ "ಕೊಟ್ಟನಿಲ್ಲವೇ ಬಿಡಿ ದುಃಖವೇಕೆ" ಎಂದು ತಾಯ್ತಂದೆಯರನ್ನು ಸಮಾಧಾನಪಡಿಸಿದರೆ, ಹರಿಹರನ ಮಲಯರಾಜ

**"ಇದಕ್ಕಿನಿತೇಕೆ, ಕೊಟ್ಟ ಶಿವನಿರ್ದಪಂ ಪಡೆದರು ನೀವಿರ್ದಪಿರಿ,**
**ಪುಟ್ಟಿದವಂ ನಾನಿರ್ದಪೆನು ಇನ್ನೊಂದಂ ವರುಪವಿರ್ದಪುದು,**
**ಶಿವಂ ಕರುಣೆ, ಎನಗೆ ಸಾವಿಲ್ಲ"**

ಎಂದು ಹೇಳಿ ತಾಯ್ತಂದೆಯರನ್ನು ಸಂತವಿಸುತ್ತಾನೆ.

ಸಿದ್ಧಲಿಂಗಾರ್ಯ ತನ್ನ ಕಾವ್ಯದಲ್ಲಿ ಪದೇ ಪದೇ "ಗುರುಲಿಂಗ ಜಂಗಮಕೆ ಚಿತ್ತಶುದ್ಧಿಯಿಂ ಪೂಜಿಸಿ" ಎಂದು ಹೇಳುತ್ತಿರುತ್ತಾನೆ. ಹರಿಹರ ಇವುಗಳ ಉಸಿರೇ ಎತ್ತುವುದಿಲ್ಲ. ತನ್ನ ಗಂಭೀರಶೈಲಿಯಲ್ಲಿ ಕಾವ್ಯವನ್ನು ನಡೆಸಿಕೊಂಡು ಹೋಗುತ್ತಾನೆ. ಹರಿಹರ–ಸಿದ್ಧಲಿಂಗಾರ್ಯರಲ್ಲಿ, ಮಲಯರಾಜನ ಭಕ್ತಿನಿರ್ಭರತೆಗೆ ಮೆಚ್ಚಿ ಶಿವನು ಪ್ರತ್ಯಕ್ಷನಾದ ಸನ್ನಿವೇಶದಲ್ಲಿ ಸಾಮ್ಯವಿದೆ. ಆದರೆ ಹರಿಹರನ ಮಲಯರಾಜನು ಶಿವನನ್ನು ಸ್ತುತಿಸುವ ವೈಖರಿಯನ್ನು ಸರಿಯಾಗಿ ಗಮನಿಸಿದರೆ, ಹರಿಹರನೇ ಮಲಯರಾಜನಾಗಿ ಬಿಟ್ಟಿದ್ದಾನೇನೋ ಎಂಬಂತೆ ಭಾಸವಾಗುತ್ತದೆ "ದೇವ ಭರ್ಗ ಭೀಮ ಸರ್ವ ಭುವನ ಭವನ ತಿಮಿರಹರಣ . . . ."

ಭಾಗದಲ್ಲಿ ಎಷ್ಟು ತನ್ಮಯತೆ ಸಾಧಿಸಿದ್ದಾನೆ ಹರಿಹರ ಎಂದೆನಿಸದಿರದು! ಅವನ ರಗಳೆಗಳಲ್ಲಿ ಸರ್ವೇ ಸಾಮಾನ್ಯವೆಂಬಂತೆ ಕಂಡುಬರುವ ಅವನದೇ ಶೈಲಿಯಲ್ಲಿ ಹರಿಹರ ಈ ಭಾಗವನ್ನು (ಮುದವಾಗಿ) ವ್ಯಂಜಿಸಿದ್ದಾನೆ. ಸಿದ್ಧಲಿಂಗಾರ್ಯನಾದರೋ ಶಿವನು ಪಂಚವಕ್ತ್ರಗಳಿಂದ, ಆಯುಧಪಾಣಿಯಾಗಿ ಪ್ರತ್ಯಕ್ಷನಾದುದನ್ನು, ಅವನ ರೂಪ-ಲಾವಣ್ಯಗಳನ್ನು ಸಮಾಧಾನವಾಗಿ ಹೇಳುತ್ತಾ ನಿಂತು ನಿಂತು ಸಾಗುತ್ತಾನೆ; ಸವಿವರವಾಗಿ ವರ್ಣಿಸುತ್ತಾನೆ. ಮಳೆಯರಾಜನು "ಧರೆಸಹಿತವಾಗಿ ಎಲ್ಲ ಜೀವರನ್ನು ನೂರುವರ್ಷಸಂದ ಬಳಿಕ ಕೈಲಾಸಕ್ಕೆ ಕರೆದುಕೋ" ಎಂದು ಬೇಡಿದ ಪ್ರಸಂಗ, ಅದಕ್ಕೆ ಶಿವನು ಅನುಗ್ರಹಿಸಿದ ಸನ್ನಿವೇಶ ಚಿತ್ರಣ ಇರ್ವರು ಕವಿಗಳಲ್ಲೂ ಏಕರೀತಿಯಾಗಿದೆ. ಮಲಯರಾಜನು ಶಿವನು ನೀಡಿದ ವರದಿಂದ ಸಂಪ್ರೀತನಾಗಿ ದೇಶದ ಮೂಲೆಮೂಲೆಯಲ್ಲಿ ಶಿವಾರ್ಚನೆ ನಡೆಸಿದ ಪರಿಯಲ್ಲಿ ಹರಿಹರ-ಸಿದ್ಧಲಿಂಗಾರ್ಯನಲ್ಲಿ ವ್ಯತ್ಯಾಸವಿದೆ. ಸಿದ್ಧಲಿಂಗಾರ್ಯನ ಮಳೆಯರಾಜನು ಶಿವಪ್ರಸಾದದ ವಿಷಯವನ್ನು ತಿಳಿಸಿ ಅಂತಃಪುರಕ್ಕೆ ಹೊರಟುಹೋಗುತ್ತಾನೆ. ಆದರೆ ಹರಿಹರನ ಮಳೆಯರಾಜನು ಮಲಯದೇಶದಾದ್ಯಂತ ನಡೆಯುತ್ತಿದ್ದ ಶಿವಪೂಜಾ ವೈಭವವನ್ನು ಕೇಳಿ, ನೋಡಬೇಕೆಂದು ಉದ್ಯುಕ್ತನಾಗಿ "ಬರ್ಪೆನಯ್ಯ ದೇವಲೋಕವಾದ ಪರಿಯನೊಪ್ಪಿ ನೊಡಿ ಬರ್ಪೆನಯ್ಯ" ಎಂದು ಉತ್ಸಾಹದಿಂದ ಪುರ, ಮನೆ, ಕೇರಿಗಳಲ್ಲೆಲ್ಲ ಶಿವಪೂಜಾ ಸಡಗರವನ್ನು ಈಕ್ಷಿಸುತ್ತಾನೆ.

**"ಪಟ್ಟಣಂಗಳೊಳಗೆ ನಮ್ಮ ದಿಟ್ಟಮೂರರವನ ಪೂಜೆ**
**ಬಟ್ಟೆಯೂರೊಳೆಯ್ದೆ ಶಿವನ ನಿಷ್ಠೆ ಬಲಿದ ಭಾವಪೂಜೆ**
**ನಗರಿನಗರಿಯಲ್ಲಿ ನಾಗಕುಂಡಲ ಪ್ರಸಿದ್ಧ ಪೂಜೆ**
**ಸೊಗಯಿಪಗ್ರಹಾರದಲ್ಲಿ ಕುಸುಮಶರವಿರುದ್ಧ ಪೂಜೆ"**

ಸುಮಾರು ೨೦-೩೦ ಬಾರಿ "ಪೂಜೆ" ಎಂಬ ಪದ ಪದೇ ಪದೇ ಬಂದರೂ ಆ ಪದ ಪ್ರಯೋಗದಲ್ಲಿ ಕವಿ ಶಿವಭಾವವನ್ನು ಅದ್ದಿ ಅದ್ದಿ ತೆಗೆದು, ಕಾವ್ಯ ಬಂಧಕ್ಕೆ ಚ್ಯುತಿಯೊದಗದಂತೆ ಎಚ್ಚರವಹಿಸಿರುವಲ್ಲಿ ಅವನ ಪ್ರತಿಭಾಸಂಪನ್ನತೆ ಗೋಚರವಾಗುತ್ತದೆ, "ಆನೆಗೆಲ್ಲ ಜ್ಞಾನಪೂಜೆ ಕುದುರೆಗೆಲ್ಲ ಧ್ಯಾನಪೂಜೆ" ಎನ್ನುವಲ್ಲಂತೂ ಹರಿಹರನ ಮುಗ್ಧಭಕ್ತಿ ಮನಮುಟ್ಟುವುದು ಮಾತ್ರವಲ್ಲ ಮನತಟ್ಟುತ್ತದೆ.

ಮಳೆಯರಾಜನಿಗೆ ಶಿವನು ಕೊಟ್ಟ ನೂರುವರ್ಷ ಆಯುಷ್ಯ ಮುಗಿಯಲು ಮಲಯದೇಶಸಹಿತವಾಗಿ ಕೈಲಾಸಪುರಕ್ಕೈದುವ ಪ್ರಸಂಗ ಹರಿಹರ-ಸಿದ್ಧಲಿಂಗಾರ್ಯರಲ್ಲಿ ಒಂದೇ ಆದರೂ ಚಿತ್ರಣದಲ್ಲಿ ಸ್ವಲ್ಪ ಭಿನ್ನತೆಯಿದೆ. ಹರಿಹರನಲ್ಲಿ -

"ನೆಗೆಯವೇಳೆನಲ್ಕೆ ನೆಗೆರವಲ್ಲಿ ನವಮಲಕ್ಕದೇಶ"

ಎಂಬ ಒಂದೇ ವಾಕ್ಯ ಎಷ್ಟು ರಮ್ಯವಾಗಿದೆ ! ಕಾಯುತ್ತ ಕುಳಿತಿದ್ದ ಅಮೃತಘಳಿಗೆ ಬಂದ ಕೂಡಲೇ ಕೊಂಚವೂ ನಿಧಾನಿಸದೆ ಮಲಯದೇಶ ಕೈಲಾಸಕ್ಕೈದುದನ್ನು ಕವಿ ಎಷ್ಟು ಸಹಜವಾಗಿ ಚಿತ್ರಿಸಿದ್ದಾನೆ ! ಸಿದ್ಧಲಿಂಗಾರ್ಯ ಕವಿ, ೩ನೆಯ ಆಶ್ವಾಸದ ೧೦ ಸಂಧಿಗಳಲ್ಲಿ ಮಳೆಯರಾಜನ ವಿವಾಹ, ಸ್ತ್ರೀವರ್ಣನೆ, ವಿವಾಹ ಸಂದರ್ಭದ ವಿನೋದಾವಳಿಗಳು, ಶೋಭನಕಾರ್ಯಕ್ರಮಗಳು, ಸಂಭ್ರಮಗಳು, ಮಳೆಯರಾಜನು ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದ ಪರಿಯನ್ನು ವಿವರಿಸಿ, ಆ ತರುವಾಯ ಇಷ್ಟಲಿಂಗ ಪೂಜೆಮಾಡುತ್ತಲೇ ಶಿವಸನ್ನಿಧಿ ತಲುಪಿದುದನ್ನು ವರ್ಣಿಸಿದ್ದಾನೆ. ಹರಿಹರನಲ್ಲಿ ಮನೆಗೆ ಬಂದ ಅತಿಥಿಗಳನ್ನು ಸಂಮುದದಿಂದ ಆಹ್ವಾನಿಸುವಂತೆ ಹರನು ಮಲಯರಾಜನನ್ನು ಬರಮಾಡಿಕೊಳ್ಳುವ ಪರಿ ಅದ್ಭುತ ! ಉದಾಹರಣೆಗೆ-

**"ಎನ್ನ ಭಕ್ತಿನಿಧಿಯೆ ಮಲಯರಾಜ ಬಾರ ಬಾರೆನುತ್ತೆ**
**ತನ್ನೆ ಕೈಯೊಳೆತ್ತಿ ತೆಗೆವುತಪ್ಪಿ ಸಭೆಗೆ ರಂಜಿಸುತ್ತೆ"**

ಸಿದ್ಧಲಿಂಗಾರ್ಯ ಕೈಲಾಸವನ್ನು, ಅಲ್ಲಿದ್ದ ಭೈರವರನ್ನು, ನೋಟಕ್ಕೆ ಪಿರಿದು ಎನ್ನುವಂತಹ ಚಿತ್ರಗಳನ್ನು, ಶಿವನ ಆಸ್ಥಾನವಿರುವ ಬಗೆಯನ್ನು ವಿವರಿಸಿ, ಅನಂತರ ಮಳೆಯರಾಜನು ಶಿವನ ಸಾಮಿಪ್ಯಕ್ಕೆ ಬಂದುದನ್ನು ತಿಳಿಸುತ್ತಾನೆ. ನವಲಕ್ಷಮಲಯದೇಶವನ್ನು ಕೈಲಾಸದ ನಂದಿಬಾಗಿಲಿನಲ್ಲಿಟ್ಟ ಸಂಗತಿ ಇರ್ವರೂ ಕವಿಗಳಲ್ಲಿ ಬಂದಿದೆ.

ಸಿದ್ಧಲಿಂಗಾರ್ಯ ಕವಿ ಹರಿಹರನ 'ಮಲಯರಾಜ ದೇವರರಗಳೆ'ಯಿಂದ ಅನಾಮತ್ತಾಗಿ, ಹಿಡಿಹಿಡಿಯಾಗಿ ಪದಗಳನ್ನು ತನ್ನ ಕೃತಿಗೆ ಇಳಿಸಿಕೊಂಡುಬಿಟ್ಟಿದ್ದಾನೆ, "ಗುಜ್ಜು", "ಕಳಹಂಸನಂತೆ", "ಮಾಗಾಯ್ಗಳ್", "ಸುಖಕ್ಕೆ ಸವಿಯಂ ಸಲೆ ಕೊಟ್ಟು", "ಕಾಮಧೇನುವಿನ ಕಱು", "ಸಿಂಗದೊಳದುಳಿ ಶರಭನಂ ಕೆಣಕುವಂದದೆ", "ಕೆಳದಿಯರ್ ಕೈಮುಗಿದು", "ಚಿಪ್ಪುಗಳಿಂದೆಸೆವ ಮುತ್ತಿನಂತೆ", "ರಂಗಿಟ್ಟ ಮಣಿಯಂತೆ", "ಮುಡಿಯ ಗುಡಿಗಳನೆತ್ತಿ", "ಅಗ್ಗಿಯೊಳ್ ಬಿದ್ದ ಮಲ್ಲಿಗೆಯ ಬಿಜ಼ ಮುಗುಳ್ಗಳಂತೆ", "ಕಾಳ್ಗಿಚ್ಚಿನಿಂದಮರೆರ್ಬೆಂದು ನೆಜ಼ೊಂದ ಹಂಸ ಮಿಥುನಗಳಂತೆ" ಎಂಬ ಇತ್ಯಾದಿ ಪದಪುಂಜಗಳನ್ನು ಹರಿಹರನಿಂದ ಯಥಾವತ್ತಾಗಿ ಸಿದ್ಧಲಿಂಗಾರ್ಯ ತಂದಿರುವುದನ್ನು ಗಮನಿಸಿದರೆ, ಇದಕ್ಕಿಂತ ಉಚಿತವಾಗಿ, ಮನಮುಟ್ಟುವಂತೆ ಬರೆಯಲು ತನಗೆ ಸಾಧ್ಯವಿಲ್ಲ ಎಂದು ಅವನಿಗೆ ಅನ್ನಿಸಿದ್ದಿರಬೇಕು.

ಇಷ್ಟಾದರೂ 'ಮಳೆಯರಾಜಚಾರಿತ್ರ'ದಲ್ಲಿ ಅನುಕರಣೆಯ ಜೊತೆಗೆ ಅನುಸಂಧಾನವು ನಡೆದಿದೆ. ಕವಿ ಪುರಾಣ ಪುಣ್ಯ ಕಥೆಗಳನ್ನು ಈ ಕಾವ್ಯದಲ್ಲಿ ಇಡಿಕಿರಿಸಿರುವುದನ್ನು ನೋಡಿದರೆ, ಕವಿಯು ಹರಿಹರನನ್ನು ಮಾತ್ರವೇ ತನ್ನ ಕೃತಿಗೆಂದು ಆಶ್ರಯಿಸದೇ ಅನ್ಯಕೃತಿಗಳನೀಕ್ಷಿಸಿದಂತೆ, ಅನ್ಯಕೃತಿಗಳಿಂದ ಪ್ರಭಾವಿತನಾದಂತೆ ತೋರುತ್ತದೆ.

ಹರಿಹರ ವಿರೂಪಾಕ್ಷನ ಸುಪುತ್ರನಾದರೆ, ಸಿದ್ಧಲಿಂಗಾರ್ಯ ಭೋಗಲಿಂಗನ ವತ್ಸ. ಈರ್ವರು ಕವಿಗಳು ಮಲಯರಾಜನ ಕಥೆಯನ್ನು ರಸಪೂರ್ಣವಾಗಿ ಉಣಬಡಿಸುವಲ್ಲಿ ಗೆದ್ದಿದ್ದಾರೆಂಬುದಲ್ಲಿ ಅನುಮಾನವಿಲ್ಲ.

**ಕವಿಯ ಬಹುಜ್ಞತೆ**

ಸೆಜ್ಜೆಯ ಸಿದ್ಧಲಿಂಗಾರ್ಯನಿಗೆ ನೀತಿಶಾಸ್ತ್ರ, ರಾಜನೀತಿ, ಸ್ಮರತಂತ್ರ, ಅಶ್ವಶಾಸ್ತ್ರ ಇವೇ ಮೊದಲಾದ ಶಾಸ್ತ್ರಗಳ ಬಗ್ಗೆ ಅರಿವಿತ್ತು. 'ಮಳೆಯರಾಜಚಾರಿತ್ರ'ದ ಮೊದಲನೆಯ ಆಶ್ವಾಸದ ೧೩ನೆಯ ಸಂಧಿಯಲ್ಲಿ ತಮ್ಮ ಪುಣ್ಯಕಾರ್ಯಗಳಿಂದ, ಶುಧ್ಧಾಂಗ ನಡೆನುಡಿಗಳಿಂದ ಶಿವಸಾನ್ನಿಧ್ಯವನ್ನು ಪಡೆದಿರುವ ಕಥೆಗಳನ್ನು ನಿರೂಪಿಸಿರುವ ವೈಖರಿಯಿಂದಲೂ ಹಾಗೂ ಅದೇ ಆಶ್ವಾಸದ ೧೪ನೆಯ ಸಂಧಿಯಲ್ಲಿ ಸುಳ್ಳು, ಅನ್ಯಾಯ, ಪರಸ್ತ್ರೀಗಮನ, ಜೂಜು, ತಂದೆ-ತಾಯಿ ಗುರುಹಿರಿಯರ ಆಜ್ಞೆಯ ಉಲ್ಲಂಘನೆ ಮುಂತಾದ ದುರ್ನಡತೆಗಳು ಆತ್ಮವನ್ನು ಬಾಧಿಸುವ ಪರಿಯನ್ನು ಹೇಳುತ್ತಲೇ 'ವಿಸ್ತಾರವಾದ ಬಾಳ್ವೆ'ಯ ಮಹತ್ವವನ್ನು ನವಿರಾಗಿ ಸೂಕ್ಷ್ಮವಾಗಿ ಅಭಿವ್ಯಕ್ತಿಸಿರುವುದರಿಂದಲೂ ಕವಿಗೆ ನೀತಿಶಾಸ್ತ್ರದ ಜ್ಞಾನವಿತ್ತೆಂಬುದು ವೇದ್ಯವಾಗುತ್ತದೆ. ದ್ವಿತೀಯಾಶ್ವಾಸದ ೨ನೆಯ ಸಂಧಿಯಲ್ಲಿ ಸಕಲವಿದ್ಯಾಪಾರಂಗತನಾದ ಮಳೆಯರಾಜನಿಗೆ ಯುವರಾಜಪಟ್ಟವನ್ನು ಕಟ್ಟುವ ಸಂದರ್ಭ ವರ್ಣಿತವಾಗಿದೆ. ಈ ಸಂದರ್ಭದಲ್ಲಿ ರಾಜಗುರುಗಳಾದ ಶಿವವಿತ್ತಮಿನಿಗಳು ಮಳೆಯರಾಜನಿಗೆ ಹಿತೋಪದೇಶ ಮಾಡುತ್ತಾರೆ. ಈ ಭಾಗದಲ್ಲಿ ದೊರೆಯು ಸಪ್ತವ್ಯಸನಗಳು, ಅಷ್ಟಮದಗಳಿಂದ ವಿಮುಕ್ತನಾಗಿ, ಪ್ರಜಾಪಾಲನೆ, ಸತ್ಯ ಶಾಂತಿ ಸೈರಣೆ, ಸುಜನ ಪೋಷಣೆ, ಬಂಧು-ಬಾಧವರ ಹಿತಚಿಂತನೆ, ಸಪ್ತಾಂಗಗಳೊಡನೆ ಮಾಡಬೇಕಾದ ಸಾಧನೆ, ಸದಾ ಸತ್ಯ-ವಿವೇಕಗಳ ಅವಗಾಹನೆ ಮುಂತಾದ ಸಾಮರ್ಥ್ಯಗಳನ್ನು ಹೊಂದಿ ಯಶಸ್ವಿಯಾಗುವ ಬಗೆ ವ್ಯಕ್ತವಾಗಿದೆ. ಈ ಅಂಶಗಳು ಕವಿಯ ರಾಜನೈತಿಕ ಸೂಕ್ಷ್ಮತೆಗಳ ಪರಿಜ್ಞಾನವನ್ನು ಪ್ರಸ್ಫುರಿಸುತ್ತವೆ. ಮೊದಲನೆಯ ಆಶ್ವಾಸದ ೪ನೆಯ ಸಂಧಿಯಲ್ಲಿ ಮಹಾರಾಜ ದೇವರಾಜನು ತನ್ನ ಸಂಗಡಿಗರೊಡನೆ ಸೂಳೆಗೇರಿಯಲ್ಲಿ ಸಂಚರಿಸುವ ಸಂದರ್ಭದಲ್ಲಿ ವೇಶ್ಯೆಯರ, ವಿಟರ, ಚೇಷ್ಟೆಗಳನ್ನು, ಬೇಟದ ಪರಿಯನ್ನು ಕವಿ ರಸಿಕ ಮನೋಧರ್ಮದಿಂದ ವರ್ಣಿಸಿರುವ ರೀತಿಯಲ್ಲಿಯೂ ೩ನೆಯ ಆಶ್ವಾಸದ ೭ನೆಯ ಸಂಧಿಯಲ್ಲಿ ಮಳೆಯರಾಜ-ಮಾಂಗಲ್ಯವತಿಯರ ಮಿಲನಮಹೋತ್ಸವಗಳ ಶೃಂಗಾರ ಚಿತ್ರಣಗಳಲ್ಲಿಯೂ ಕವಿಯು ಸ್ಮರವಿದ್ಯೆ ಬಲ್ಲವನೆಂಬುದು ತಿಳಿಯುತ್ತದೆ. ದ್ವಿತೀಯಾಶ್ವಾಸದ ೨ನೆಯ ಸಂಧಿಯಲ್ಲಿ ಮಳೆಯರಾಜನು ಅಸ್ತ್ರ-ಶಸ್ತ್ರವಿದ್ಯೆಗಳಲ್ಲಿ ಬಲ್ಲಿದನಾಗುತ್ತಿದ್ದ ವಿವರ ಕವಿಯು ಸಹ ಕುದುರೆಸವಾರಿ, ಯುದ್ಧಕಲೆ ಮೊದಲಾದುವುಗಳ ಜ್ಞಾನ ಪಡೆದಿದ್ದೆಂಬುದನ್ನು ಸುಸ್ಪಷ್ಟಗೊಳಿಸುತ್ತದೆ. ೩ನೆಯ ಆಶ್ವಾಸದ ೮ನೆಯ ಸಂಧಿಯ ಕೆಲವು ಪದ್ಯಗಳು ಕವಿಯ ಸಂಗೀತಜ್ಞಾನವನ್ನು ನಿಚ್ಚಳಗೊಳಿಸುತ್ತದೆ. ಸ್ವರೋತ್ಪತ್ತಿ, ತಾಳ, ಲಯ ಗತಿಗಳು, ವಾದ್ಯ-ಮೇಳಗಳು, ಗಾಯಕರ ವಿವರಗಳು ಸಹೃದಯರನ್ನು ಮೋಹಗೊಳಿಸುತ್ತವೆ. ಉದಾಹರಣೆಗೆ

> **"ಮತ್ತಮಾ ಸಪ್ತಸ್ವರಂಗಳಿಮದಾದ ಇ**
> **ಪ್ಪತ್ತೆರಡು ಶ್ರುತಿಗಳಾಶ್ರುತಿಗೆ ಗಮಕಂಗಳಿ**

**ಪ್ಪತ್ತೆರಡುಮದಱಿಂದ ಜನಿಸಿದಾನೂರರೈವತ್ತು ವಿಲಸದ್ರಾಗದ**
**ಮೊತ್ತದೊಳ್ ರೂಢಿ ಪೂರುಷ ರಾಗಮೆಂಟು ಮಿ**
**ಪ್ಪತ್ತುನಾಲ್ವೆಗ್ರಾಗಮಾಸ್ವರದ ದೂಷಣಂ**
**ಬೆತ್ತೈದನೊತ್ತರಿಸಿ ಪಾಡುವ ಸುಗಾಯಕರ ಮೊತ್ತಮಲ್ಲೆಸೆದಿರ್ದುದು [೩-೮-೧೫]**

ಈ ಎಲ್ಲ ಅಂಶಗಳನ್ನು ಅವಲೋಕಿಸಿದರೆ ಸಿದ್ಧಲಿಂಗಾರ್ಯ ಕವಿಯು ನಡುಗನ್ನಡ ಕವಿಗಳಲ್ಲಿ ಓರ್ವ ಬಹುಶ್ರುತನೆನ್ನುವುದರಲ್ಲಿ ಸಂಶಯವಿಲ್ಲ.

**"ಮಳೆಯರಾಜಚಾರಿತ್ರೆ"ದಲ್ಲಿನ ವರ್ಣನಾಪ್ರಪಂಚ**

ನಮ್ಮ ಪ್ರಾಚೀನ ಕವಿಗಳು ಯಾವುದಾದರೊಂದು ಕೃತಿ ಮಹಾಕಾವ್ಯದ ನೆಲೆಯಲ್ಲಿ ನಿಲ್ಲಬೇಕಾದರೆ ಅದರಲ್ಲಿ 'ಅಷ್ಟಾದಶ ವರ್ಣನೆಗಳು' ಎಂದು ಕರೆಯಲ್ಪಡುವ ೧೮ ಬಗೆಯ ಸಾಂಪ್ರದಾಯಿಕ ವರ್ಣನೆಗಳಿರಬೇಕೆಂದು ಒಪ್ಪಿನಡೆಯುತ್ತಿದ್ದರು. ಸಮುದ್ರ, ನಗರ ಪರ್ವತ, ಋತುಗಳು, ಚಂದ್ರೋದಯ, ಸೂರ್ಯೋದಯ, ಉದ್ಯಾನವನ, ಜಲಕ್ರೀಡೆ, ಮಧುಪಾನ, ರತಿಕ್ರೀಡೆ, ವಿಪ್ರಲಂಭಶೃಂಗಾರ, ವಿವಾಹ, ಕುಮಾರೋದಯ, ಮಂತ್ರಾಲೋಚನೆ, ದೌತ್ಯ, ಪ್ರಯಾಣ, ಯುದ್ಧ, ನಾಯಕಾಭ್ಯುದಯ ಎಂಬಿವೇ ಆ ಹದಿನೆಂಟು ವರ್ಣನೆಗಳು. ಸಿದ್ಧಲಿಂಗಾರ್ಯನಾದರೊ ಆ ಪರಂಪರೆಗೆ ನಿಷ್ಠನಾಗಿ ಆ ಎಲ್ಲ ವರ್ಣನೆಗಳನ್ನು ತನ್ನ 'ಮಳೆಯರಾಜಚಾರಿತ್ರ್ಯ'ದಲ್ಲಿ ತದಾತ್ಮ್ಯನಾಗಿ ತನ್ಮಯನಾಗಿ ಅಭಿವ್ಯಂಜಿಸಿದ್ದಾನೆ.

ಮೊದಲನೆಯ ಆಶ್ವಾಸದ ೨ನೆಯ ಸಂಧಿಯು ಸಮುದ್ರವರ್ಣನೆಯೊಂದಿಗೆ ಪ್ರಾರಂಭವಾಗುತ್ತದೆ. ಸಮುದ್ರವು ಶಿವಾನ್ವಿತವಂತೆ, ಕಿನ್ನರೇಶ್ವರನಂತೆ ಕಂಗೊಳಿಸುವ ಪರಿಯ ವರ್ಣನೆಯನ್ನು ನೋಡಿ:

**"ಸುರಧರಾಧರಮೆನೆ ಶಿವಾನ್ವಿತಂ ಕಿನ್ನರೇ**
**ಶ್ವರನಂತೆ ಪದ್ಮ ಕಚ್ಛಪ ಶಂಖ ನಿಲೋನ್ಮ**
**ಕರ ಮಹಾ ಪದ್ಮಾಂಕಿತಂ ವರ ಮುಕುಂದ ಬಂಧುರಮಾಗಿ ಕುಂದದುದಱಿಂ**
**ತರುಣಿಯರ ಬೆರಳಂತೆ ಯೂರ್ಮಿಕೋದ್ಭಾಸಿತಂ**
**ಪಿರಿಯರಂತುರೆ ಮೇಱೆ ಮರಿಯಾದೆ ತಪ್ಪದಾ**
**ನರಪವಾಹಿನಿಯಂತೆ ವಾರಿವಾರಣದಿಂದೆ ಶರಧಿ ಕಂಗೊಳಿರ್ಪುದು [೧-೨-೩]**

ಕರ್ನಿಕಾಕಾರದಂತೆ ಶೋಭಿಸುವ ಮೇರುಪರ್ವತವನ್ನು ಕವಿ ಚಿತ್ರಿಸಿರುವ ಬಗೆ ಸುಲಭಗ್ರಾಹ್ಯವಾಗಿದೆ.

**"ಚಾರು ಲೋಕಾಲೋಕ ಗಿರಿಯ ತೀರಂ ಸ್ವಾದು**
**ವಾರಿಧಿಯ ಸರಸಿ ಕಮಠಂ ಕಂದ ವಹಿಪತಿಯೆ**
**ರಾರಾಜಿಸುವ ನಾಳಮೆಸೆವ ಸಪ್ತದ್ವೀಪ ಮೇರು ಚಿರಪತ್ರಂಗಳು**
**ಭೂರಿ ಕಾಂಡಾಷ್ಟದಳ ಸಾರಪದ ಮಧ್ಯದೊಳ್**
**ಸೇರಿರ್ಪ ಗಂಧರ್ವರೇ ತುಂಬಿಗಳ್ ಮೋಕ್ಷ**
**ನಾರಂದರಾ ಶಂಭು ಹಂಸಯುತ ಕರ್ನಿಕಾಕಾರಮೆನೆ ಮೇರುವೆಸೆಗುಂ [೧-೨-೫]**

ಈ ಮೇರುಪರ್ವತದ ದಕ್ಷಿಣಭಾಗದಲ್ಲಿ ಭರತದೇಶದ ೫೬ ದೇಶಗಳಲ್ಲಿ "ತಾರೆಗಳಲ್ಲಿ ಚಂದ್ರ, ಕಡಲುಗಳಲ್ಲಿ ಕ್ಷೀರಸಾಗರ, ಆನೆಗಳು ಐರಾವತ, ಪಶುಗಳಲ್ಲಿ ಕಾಮಧೇನು, ಮಣಿಗಳಲ್ಲಿ ಚಿಂತಾಮಣಿಯು ಶ್ರೇಷ್ಠವಾಗಿರುವಂತೆ ಮಳೆಯದೇಶವು ಶೋಭಿಸುತ್ತಿದ್ದುದನ್ನು ಕವಿ ಎಷ್ಟು ವರ್ಣಿಸಿದರೂ ತಣಿಯದು. ನದಿ ತೊರೆಗಳು, ಹೊಲಗದ್ದೆತೋಟಗಳು, ಉಪವನಗಳು, ಖಗಮೃಗಗಳು, ಸುಮರಾಜಿಗಳು, ಸರೋವರಗಳು, ಅರವಟಿಗೆಗಳು, ಸುಜನರು, ರಸಿಕರು ಹೀಗೆ ಸಕಲ ಸಂಪದಗಳಿಂದ ಮಳೆಯದೇಶ ಕಂಗೊಳಿಸುತ್ತಿದ್ದುದನ್ನು ಕವಿ ಸೊಗಸಾಗಿ ಚಿತ್ರಿಸಿದ್ದಾನೆ.

ಮಲಯವತಿಯೆಂಬ ನಗರವನ್ನು ವರ್ಣಿಸುವಾಗ ಕವಿಯ ಲೆಕ್ಕಣಿಕೆ ಸುಲಲಿತವಾಗಿ ಹರಿದಿದೆ. ಪ್ರಥಮಾಶ್ವಾಸದ ೩ನೆಯ ಸಂಧಿಯನ್ನೇ ಕವಿ ಮಲಯವತಿ ಪುರವರ್ಣನೆಗೆ ಮೀಸಲಿರಿಸಿದ್ದಾನೆ. 'ಶಿವಗಣಕ್ಕೆ ಉಣಬಡಿಸುವ ಗಿರಿಜೆಯ ಕೈಯ ಬಟ್ಟಲಿನಂತಿರುವ' ಮಲಯವತಿ ಪಟ್ಟಣವನ್ನು ಕವಿ ವರ್ಣಿಸಿರುವ ರೀತಿ ನೋಡಿ:

"ಪಿಂತೆ ಪುರಿಗಳನೆಸಂಗುವೆಡೆಯೊಳಜನೀ ನಗರ
ಮೆಂತು ರಸೆಯೊಳ್ ನಿಲ್ವುದಿಲ್ಲವೆನುತುಂ ಮನೋ
ಭ್ರಾಂತಿನಿಂ ಬಳಸಿ ಬಿಡಿಸುತ್ತುಮಿರ್ದನಿತಱಿಳೊಳಗಿಂತಲ್ಲವೆಂದಱಿವುತೆ
ಮುಂತೆ ತದ್ದೇಶ ಸಹಮೀಶಲೋಕಂ ಸಾರ್ವು
ದಂ ತಿಳಿದು ಬಾಗಿಲೊಳಗುಳುಹಿದುದರಿಂ ಗಣದ
ಪಂತಿಗುಣಬಡಿಸುವಗಜೆಯ ಕೈಯ್ಯ ಕೈವಟ್ಟಲಂತಿಪ್ಪುಗಳಿಂದದೆ"

ಈ ಕಾವ್ಯಚಿತ್ರದ ಸೊಬಗಿನಂತೆಯೇ ಇದೆ ಮತ್ತೊಂದು ಕಾವ್ಯಚಿತ್ರ. ಮಲಯವತಿ ಪಟ್ಟಣದ ದ್ವಾರಬಂಧವೊಂದನ್ನು ವರ್ಣಿಸುವಲ್ಲಿ ಕವಿಯ ಕಾವ್ಯಪ್ರತಿಭೆ ಅನ್ಯಾದೃಶವೆನಿಸಿದೆ:

"ದಾರುವಂದದ ಮೊಳೆಗಳೇ ಪಲ್ಲು, ಕಾಯ್ದಿರ್ಪ
ವೀರರ್ಪಿಡಿದ ಸಬಳವೇ ಮೀಸೆ, ಕದಗಳೇ
ತೋರ ತುಟಿಗಳ್, ಭಿತ್ತಿ ಚಿತ್ರವರ್ಣವೆಯೊಡಲ್ ಭೇರಿಸ್ವನಂ ಗರ್ಜನೆ
ಮಾರ ಕಾಲಾದಿ ಹರಿಣಂಗಳ್ಗೆ ನೋಡಲಾ
ಕ್ರೂರ ಹುಲಿಮೊಗವಾಗಿ ತೋಜೆ ಚರ್ಮಾಂಬರನ
ಕಾರುಣ್ಯಂ ಪಡೆದವರ್ಗೆ ಸಿಂಗರಮಾಗಿ ದಾರಿಗೊಟ್ಟೊಪ್ಪುತಿಹುದು"

ಎಂತಹ ಅದ್ಭುತ ಕಾವ್ಯಚಿತ್ರ ! ಪಟ್ಟಣದ ಪ್ರತಿಯೊಂದು ಸೌಂದರ್ಯವನ್ನು, ಶಶಿಬೀದಿ ರವಿಬೀದಿಗಳು, ಅಂಗಡಿ ಮುಂಗಟ್ಟುಗಳು, ಹೂವಾಡಗಿತ್ತಿಯರನ್ನು ಸೂರ್ಯೋದಯ-ಚಂದ್ರೋದಯಗಳನ್ನು ಸೊಗಸಾದ ಕಾವ್ಯಚಿತ್ರಗಳಲ್ಲಿ ಕವಿ ಸೆರೆಹಿಡಿದು ಓದುಗ ಮನಗಳ ಹಸಿವನ್ನು ಇಂಗಿಸಿದ್ದಾನೆ. ಬೀದಿಗಳನ್ನು ಕವಿ ವರ್ಣಿಸುವ ಪರಿಯನ್ನು ಲಕ್ಷಿಸಿದರೆ ವಿಜಯನಗರ ಸಾಮ್ರಾಜ್ಯದ ವೈಭವದ ಕಾಲವನ್ನು ಕವಿ ನೋಡಿದ್ದಿರಬಹುದು ಎನಿಸುತ್ತದೆ.

ಪುರವರ್ಣನೆಗೆ ಒಂದು ಸಂಧಿಯನ್ನು ಮೀಸಲಾಗಿಟ್ಟ ಕವಿ ಸೂಳೆಗೇರಿಯ ವರ್ಣನೆಗೂ ಪ್ರಥಮಾಶ್ವಾಸದ ೪ನೆಯ ಸಂಧಿಯನ್ನು ಮುಡಿಪಾಗಿಟ್ಟಿದ್ದಾನೆ. ವೇಶ್ಯಾವಾಟದ ಬೀದಿಯು "ಸ್ಮರನೋದುಗಲಿವ ಮನೆ, ಪುಷ್ಪಧನ್ವನ ಗರುಡಿ, ಸರಸಿಜಾಸ್ತ್ರನ ಶಸ್ತ್ರಶಾಲೆ, ದರ್ಪಕನ ಕರಿ ತುರಗದೇಜೂದೆಡೆ, ರತಿಪನೋಲಗಶಾಲೆ" ಎಂದು ಮುಂತಾಗಿ ಕವಿ ರೂಪಕಗಳ ಮೂಲಕ ವರ್ಣಿಸಿದ್ದಾನೆ. ಬಿಡುಜವ್ವನದ ತರುಣಿಯರ ಸೌಂದರ್ಯ, ಪ್ರೌಢಜಾರೆಯರ ಲಕ್ಷಣಗಳನ್ನು, ಪರಕೀಯೆ, ಭೇದಕಲಿತಾಂಗನೆ, ವಿಪ್ರಲಂಭಾಭಿಸಾರಿಕೆ, ನವಸ್ವಾಧೀನಪತಿಕೆ, ಗತಭರ್ತಾರಿಕೆ, ಕಲಹಾಂತರಿತೆ, ಸಮುತ್ಕೆ ಪ್ರಕಟ ವಾಸಕ ಸಜ್ಜಿಕೆ, ಅಭಿಸಂಧಿಕೆಯೆಂಬ ೮ ವಿಧದ ಕಾಮಿನಿಯರನ್ನು ಅವರ ಕೌಟಿಲ್ಯಭಾವಗಳನ್ನು, ಜಾರಜಾರೆಯರ ಚೇಷ್ಟೆಗಳನ್ನು ಕವಿ ವರ್ಣಿಸಿರುವ ಪರಿ ನೋಡಿದರೆ, ಅವನ ರಸಿಕ ಜೀವನ ದೃಷ್ಟಿ ಗೋಚರವಾಗುತ್ತದೆ. ಓರ್ವ ವೇಶ್ಯೆಯನ್ನು ಕವಿ ವರ್ಣಿಸಿರುವ ಪರಿ ಹೀಗಿದೆ:

"ಧರಿಸಿರ್ಪ ಕೆಂಗಂಧವುಡಿಮಟ್ಟಿದಂಡೆದ
ಳ್ವೆರಡು ರಾಸಿಯೆ ಮೊಲೆಗಳೂರುಗಳ್ ಕಂಭಂಗ
ಳುರುನಿತಂಬಂಗಳೇ ಸಂಗಡಂಗಳ್ ಜಂಘೆ ಕರಮೆಸೆವ ಕೊಣತಂಗಳು
ಕರಮೂಲವೇ ಬಾಲ ಸಂಗಂಡಂಗಳ್ ಪುರ್ಬು
ತಿರಿತಿರಿಗಿ ತೆಗವ ರೋಣಂ ಕಂಗಳೇ ಬಾಕಿ,
ನರನಖಂ ಸುರಗಿಯಾಗಲ್ಕೋರ್ವ ಸತಿ ಮದನ ಖುರಳಿಯೆನೆ ಕಣ್ಗೆಸೆದಳು" [೧-೨-೧೨]

ಕನ್ನೆಯರ ನಡುವೆ ಮುದಿಸೂಳೆಯರ ಪಾಡನ್ನು, ಮಗಳೊಡನೆ ವೇಶ್ಯಾ ವೃತ್ತಿಯಲ್ಲಿ ತೊಡಗಿದ್ದ ತಾಯಿಯನ್ನು ವಿರಹದಿಂದ ಬಸವಳಿದ ತರಳೆಯರನ್ನು ಕವಿ ಕಾವ್ಯಚಿತ್ರಗಳಲ್ಲಿ ಚಿತ್ರಿಸಿದ್ದಾನೆ. ವಿಟರ ಬಗೆಗಳನ್ನು, ರಾಜವಿಟರ ವಿಲಾಸವನ್ನು ಕವಿ ಅನಾವರಣಗೊಳಿಸಿದ್ದಾನೆ.

ರಾಜರಿಗೆ ಬೇಟೆಯು ಕೂಡ ರಂಜನೆ; ಸಾಹಸ. ಹಾಗಾಗಿ ಕವಿ ಬೇಟೆಯ ವರ್ಣನೆಗೂ ಕಾವ್ಯದಲ್ಲಿ ಅವಕಾಶಕಲ್ಪಿಸಿಕೊಂಡಿದ್ದಾನೆ. ಪ್ರಥಮಾಶ್ವಾಸದ ೬ ಮತ್ತು ೭ ನೆಯ ಸಂಧಿಯಲ್ಲಿ ಬೇಡರ ಬೇಟೆಯ ಜೊತೆಗೆ ಆತ

ದರೋಡೆಕೋರನೂ ಆಗಿದ್ದುದು, ಈತ ತನ್ನ ಸತಿ ಮತ್ತು ಅಳಿಯನೊಂದಿಗೆ ಹೋಗುತ್ತಿದ್ದ ಬೇಟೆಯ ಪ್ರಸಂಗ – ವಿವರಗಳು ಸಂವೇದನಾ ಸ್ವರೂಪ ಪಡೆದಿದೆ. ತಡಿಕೆಬಲೆ, ತಡೆವಬಲೆ, ಸಿಡಿಬಲೆ, ಬಲ್ಲೆಗಳು, ಬಿಲ್ಲುಬಾಣ ಮೊದಲಾದ ಮೃಗಯಾ ಸಾಧನಗಳು, ಮುರಿಗೆ, ದಡಿ ಇತ್ಯಾದಿ ಬೇಡನ ಆಭರಣಗಳು ಬೇಡನ–ಬೇಟೆಯ ಭೌತಿಕ ಚಿತ್ರವನ್ನು ನಮ್ಮ ಮನದಲ್ಲಿ ಬಿಡಿಸುತ್ತವೆ. ಪೆರ್ಮಿಗಗಳನ್ನು ಕೊಲ್ಲುತ್ತಿದ್ದ ಪೆರ್ಬೇಟೆ ಹರಿಣಾದಿ ನಾನಾ ಕಿಱುಮಿಗಂಗಳನ್ನು ಕೊಲ್ಲುತ್ತಿದ್ದ ಕಿರುಬೇಟೆಗಳನ್ನು ಕವಿ ವಿವರಿಸಿದ್ದಾನೆ. ಬೇಟೆಯ ಒಂದು ಚಿತ್ರಣವಿದು:

**ಇಱಿದೆಚ್ಚು ಕೆಡಪುವಾ ಖಾತಿಗಂ ಭೀತಿಗಂ**
**ಮಱಿದಾಣಮಾಗಿರ್ಪ ಗಿರಿಗಳೊಳ್ ದರಿಗಳೊಳ್**
**ಮಱಿಗಳಂ ಮಡಗಿದವು ಗೂಡಲ್ಲಿ ಕೋಡಲ್ಲಿ ಕಿಱುವಕ್ಕಿ ಮಿಗದ ಹಿಂಡು**
**ಱಿಯದೆ ಬಲೆಗೆ ಸಿಕ್ಕದೇಣನಂ ಕೋಣನಂ**
**ನೆಱಿಕಪ್ಪಿನೊಳ ಕೆಡೆದ ಕರಿಗಳಂ ಕಿರಿಗಳಂ**
**ತಱುಬಿ ಸಿಲ್ಕದವನ ತುರಂಗಮಂ ಸಿಂಗಮಾ ತಱಿಬಿಟ್ಟು ಕೊಲ್ಲುತಿಹರು** [೧–೭–೩೪]

ಯುದ್ಧವರ್ಣನೆಗೂ ಈ ಕಾವ್ಯದಲ್ಲಿ ೮ ಸಂಧಿಗಳೇ ಮೀಸಲಾಗಿದೆ. ದ್ವಿತೀಯಾಶ್ವಾಸದ ಮೂರನೆಯ ಸಂಧಿಯಲ್ಲಿ ಪ್ರಾರಂಭವಾಗುವ ಮಳೆಯರಾಜನ ಚೈತ್ರಯಾತ್ರೆಯಲ್ಲಿ ಷಟ್‌ದ್ವೀಪದರಸುಗಳೊಡನೆ, ದಾನವರೊಡನೆ ಮಳೆಯರಾಜ ಹೋರಾಡುವಲ್ಲಿ ಬಂದಿರುವ ಯುದ್ಧವರ್ಣನೆಗಳು ಕಾವ್ಯಾಭ್ಯಾಸಿಗಳಿಗೆ ಆಸಕ್ತಿದಾಯಕವಾಗಿವೆ. ಸೈನ್ಯಗಳ ಸಂಘಟನೆ, ಯುದ್ಧೋಪಕರಣಗಳು, ಚಿತ್ರವಿಚಿತ್ರವೆನಿಸುವ ರಕ್ಕಸ ರಾಜ್ಯಗಳನ್ನು ಧೂಳಿಪಟ ಮಾಡಿದ ಬಗೆ, ಶಸ್ತ್ರಾಸ್ತ್ರಗಳ ಭೀಷಣತೆಗಳು ಅತಿಶಯವಾಗಿ ಹೊರಹೊಮ್ಮಿವೆ. "ತಿವಿದು ತಿವಿದು ಕೆಡಪುತಿರೆ", "ಖಣಿಖಟಲ್ ನೆಕಿಪಿಕಿಲ್ ತಕಿಪಿಕಿನೆ ಹೆಚ್ಚಿ ಬಲ್ಗಾಳೆಗ", "ಹಣಾಹಣಿ", "ನಡುನಡುವೆ ಬಿಡಬಿಡದೆ ಸುಡುಸುಡುತೆ ಪೊಡೆಪೊಡೆದು" ಮೊದಲಾದ ಮಾತುಗಳು ಯುದ್ಧದ ಭೀಕರತೆಯನ್ನು ವ್ಯಕ್ತಪಡಿಸುತ್ತವೆ. ಬಂಕು, ಬಲ್ಲೆಹ, ಬಾಣ, ಕಠಾರಿ, ಕಬ್ಬುನದಕೋಲ್, ಶೂಲ ಕಕ್ಕಡ, ಚಿಕ್ಕಠಾರಿ, ಸೆಣೆಗತ್ತಿ, ಕಡಿಂಗತ್ತಿಯುಬ್ಬಣ, ಕರಾಚೂರಿ, ಪರಶು, ಚಕ್ರ, ಹಲದಸಿ, ಪೇರೆದಿರ್ಗತ್ತಿ ಮೊದಲಾದ ಯುದ್ಧಸಾಧನಗಳ ಪಟ್ಟಿ ಸಾಮಾಜಿಕ ಇತಿಹಾಸಕಾರನಿಗೆ ಅಂದಿನ ಯುದ್ಧ ಸಾಮಗ್ರಿಗಳ ಪರಿಚಯ ಮಾಡಿಕೊಡುತ್ತದೆ.

ಸಮಾಜಘಾತುಕರಿಗೆ, ಕೆಡುಕರಿಗೆ ಎಂಥ ರೌರವ ನರಕ ಕಾದಿರುತ್ತದೆ ಎಂಬುದನ್ನು ಹೇಳುವಾಗ ಕವಿ ನರಕವರ್ಣನೆಯನ್ನು ಮಾಡಿದ್ದಾನೆ. ನರಕ, ಮಹಾನರಕ, ರಾಜನರಕ, ರಾಜರಾಜೇಶ ನರಕ ಎಂಬಿವು ನಾಲ್ಕು ಪ್ರಧಾನ ನರಕಗಳು. ಇವು ಒಂದೊಂದರಲ್ಲಿ ೮ ವಿಧವ ನರಕಗಳಿವೆ. ರೌರವ, ಕುಂಭೀಪಾಕ, ಸೂಚೀಮುಖ, ಸಮಸಮೋಷ್ಣ ಮೊದಲಾದ ೩೨ ನರಕಗಳನ್ನು, ಆ ನರಕಗಳಲ್ಲಿ ಆತ್ಮಗಳ ಬಳಲಿಕೆಯನ್ನು ವರ್ಣಿಸಿದ್ದಾನೆ. ನರಕಗಳಲ್ಲಿ ಕೊಡುವ ಶಿಕ್ಷೆಗೆ ಒಂದು ಉದಾಹರಣೆ:

**ಕೆಡಹಿ ಕಾಯ್ದಿಹ ಸುತ್ತಿಗೆಗಳಿಂದೆ ತಟ್ಟುತ್ತೆ**
**ಕಡು ಪಾಪವಹ ಭೋಗಸುಖದಿಂದಮಿಂತಿಹಿರಿ**
**ಕಡೆಯಲಿಂತಪ್ಪುದೆಂದಱಿಯರಿನ್ನುಣಿರೆಂದು ಘುಡಂಘುಡಿಸಿ ಪಲ್ಮೊರೆವಿಕೆ**
**ಕಡಿಕಡಿದು ಕೈಕಾಲ್ಗಳಂ ಬಿಸುಟು ತಲೆಯನೊಡೆ**
**ಬಡಿದು ಮಿದುಳಂ ಚೆಲ್ಲಿ ಖಂಡಮಂ ಖಂಡಿಸು**
**ತ್ತಡಗನುಗಿವುತ್ತೆ ಕಣ್ಬಲ್ಗಳಂ ಕೀಳುತ್ತುಮೊಡಲನಗ್ನಿಯೊಳಿಡುವರು.** [೧–೧೪–೧೪]

ಈ ವರ್ಣನೆಗಳು ಸಾಮಾಜಿಕನೋರ್ವ ಸದ್ದಾರಿಯಲ್ಲಿ ನಡೆಯಲು ಬೇಕಾದ ಪ್ರೇರಣೆಯನ್ನು ಪರೋಕ್ಷವಾಗಿ ನೀಡಲೆಂದು ಬಂದಿವೆಯಷ್ಟೆ.

ಯುದ್ಧ, ನರಕ, ಬೇಟೆಯಾಡುವಲ್ಲಿನ ಹಿಂಸಾಭಾವಗಳನ್ನು ವ್ಯಂಜಿಸಿರುವ ಕವಿ ಸೌಮ್ಯಭಾವಗಳನ್ನು ವರ್ಣಿಸುವಲ್ಲಿ ಹಿಂದೆ ಸರಿದಿಲ್ಲ. ಬೇಸಿಗೆಕಾಲವನ್ನು ಎಷ್ಟು ಅದ್ಭುತವಾಗಿ ಕಾವ್ಯಚಿತ್ರದಲ್ಲಿ ವರ್ಣಿಸಿದ್ದಾನೆಂದರೆ, "ಬೇಸಿಗೆಯೆಂಬ ವನಿತೆಯು ನೆಲ ಎಂಬ ಬಾಣಲೆಯನ್ನು ಪಾತಾಳವೆಂಬ ಒಲೆಯ ಮೇಲೆ ಇಟ್ಟು ಅವುಗಳನ್ನು ಸಮಿತ್ತುಗಳನ್ನಾಗಿ ಒಲೆಗೆ ತುರುಕಿ, ಸೂರ್ಯನ ಉರಿಯನ್ನು ಬೆಂಕಿಯಾಗಿಸಿ ಚರಾಚರವೆಂಬ ನೆಲ್ಲನ್ನು ಹುರಿಯುತ್ತಿರಲು ಅವು ಚಿಟಪಟನೆ ಸಿಡಿಯುತ್ತಿರುವಂತೆ

ಬಿಸಿಲ ಬೇಗೆ ಬಾಧಿಸುತ್ತಿತ್ತು, ಹಾಗೆ ಸಿಡಿದ ಅರಳುಗಳು ಹಾಗೇ ಆಕಾಶ ಸೇರಿ ತಾರೆಗಳಾಗಿ ರಾತ್ರಿಯಲ್ಲಿ ಕಂಗೊಳಿಸುತ್ತಿದ್ದವು". ಅಬ್ಬಾ ! ಎಂತಹ ರಮ್ಯಕಾವ್ಯ ಚಿತ್ರ! ಬೇಸಿಗೆಯನ್ನು ಹೀಗೆ ಬಣ್ಣಿಸಿರುವಾಗ ಇನ್ನು ಮಳೆಗರೆದುದನ್ನು ಕವಿ ವರ್ಣಿಸಿರುವ ಪರಿ ನೋಡಿ; "ಕಾರ್ಗಾಲದ ಲಲನೆ ತಾನು ಜಗದಂಬೆಯೆಂಬುದನ್ನು ನಿರೂಪಿಸಲು ಚರಾಚರಗಳೆಂಬ ಶಿಶುಗಳಿಗೆ ತನ್ನ ಮೊಲೆಹಾಲನ್ನು ಕೊಡುವಂತೆ ಮಳೆ ಸುರಿಯಿತು". ಬೇಸಿಗೆ, ಮಳೆಗಳ ಕಥೆ ಇಂತಾದರೆ ನವಿರುಭಾವಗಳ ತವರ್ಮನೆಯೆನಿಸಿದ ಚಳಿಯನ್ನು ಕವಿ ರಮ್ಯವಾಗಿ ಕಾವ್ಯಚಿತ್ರದಲ್ಲಿ ಸೆರೆಹಿಡಿದಿದ್ದಾನೆ. "ನಡಗುವ ಚಳಿಯನ್ನು ತಾಳಲಾರದೆ ಪತಿಗಳು ತಮ್ಮ ಮಡದಿಯರ ಬಲ್ಮೊಲೆಗಳೆಂಬ ನೆಲದಾಳಿಗಳ[ಸಸ್ಯ]ಗಳ ನಡುವೆಯಿಂದ ಹೊರಬರದಂತೆ" ಚಳಿ ಕೊರೆಯುತ್ತಿತ್ತಂತೆ. ಇಲ್ಲೆಲ್ಲ ಅವನ ಕಲ್ಪನೆಯ ಔನ್ನತ್ಯವನ್ನು ಸವಿಯಬಹುದು.

"ತಾವರೆಗಳು ಸೊಂಪಾಗಿ, ಕೋಗಿಲೆಯ ದನಿ ಸುಣ್ಪಾಗಿ, ಸೋಗೆಗಳು ನಚ್ಚಣಿಸುವಂತೆ" ಬಂದ ವಸಂತನು ಬನಕುವರಿಯನ್ನು ವರಿಸಲು ಮುಂದಾಗಿ ಎಲ್ಲೆಡೆ ರಂಜನೆಯನ್ನುಂಟುಮಾಡಿದ ವರ್ಣನೆಗಳಾಗಲೀ, ಪ್ರಕೃತಿ ವರ್ಣನೆಯನ್ನಾಗಲೀ ಗ್ರಹಿಸಿದರೆ ಕವಿಯ ಭಾವಾಭಿಜ್ಞತೆ, ಸೌಂದರ್ಯ ಪ್ರಜ್ಞೆಯ ಬಗ್ಗೆ ಅಭಿಮಾನ ಮೂಡುತ್ತದೆ. ಮಲ್ಲಿಗೆ, ಜಾಜಿ, ಸಂಪಿಗೆ ಮೊದಲಾದ ಹೂಗಳ ವರ್ಣನೆಯನ್ನು ಅವಕಾಶ ಸಿಕ್ಕಾಗಲೆಲ್ಲ ಔಚಿತ್ಯಮೀರದಂತೆ ತಂದಿದ್ದಾನೆ.

**ಕವಿಯ ಅಲಂಕಾರಪ್ರಿಯತೆ**

ಈ ಕಾವ್ಯಕ್ಕೆ ಶೋಭಾಯಮಾನವಾಗುವಂತೆ ಅಲಂಕಾರಗಳನ್ನು ಬಳಸಿ ಕಾವ್ಯದ ಅಲಂಕಾರವನ್ನು ಕವಿ ಇಮ್ಮಡಿಗೊಳಿಸಿದ್ದಾನೆ. ಅರ್ಥಪೂರ್ಣವಾದ ಉಪಮಾಲಂಕಾರಗಳಿಗೆ ಉದಾಹರಣೆಯೆಂದರೆ; "ಪರಮ ಪದ್ಮಾಲಂಕೃತಂ ಮಹಾನಿಧಿಯಂತೆ, ಹರಿಯವೊಲಮೃತಾಕರಂ ನಿತ್ಯನಂತೆ ಹಿಮಕರನಂತೆ ಗೋರಾಜಿತಂ ಶಕ್ರನಂತೆ ಸಂಕರನಂತೆ ಹಂಸಶೋಭೊ"ಯಾಗಿ ಸರೋವರವಿದ್ದುದನ್ನು ಕವಿ ಉಪಮೆಯಲ್ಲಿ ಅಡಕಗೊಳಿಸಿದ್ದಾನೆ. "ಅಸಿನಡು", "ಲತಾಕೋಮಲ", "ಶಶಿವದನ", 'ಸಾಮ್ಯಾಂಗಿ' ಮೊದಲಾದವು ಮನಸೂರೆಗೊಳ್ಳುತ್ತವೆ. ಉತ್ಪ್ರೇಕ್ಷಾಲಂಕಾಲರಕ್ಕೆ "ದೆಸೆಯಾನೆಗಳ ಸುಂಡಿಲಿಂದೊಗೆದ ಸೀಕರವೊ", "ಮಸುಗುತಿಹ ತೋಜಿ಼ಯ ಬಾಂದೋಜಿ಼ಯ ತುಂತುರ್ವನಿಗಳೆಸಕವೊ" ಎಂಬಂತೆ ಮಂಜಿನಾಕಾರವಿದ್ದುದನು ಕವಿ ಸಾರ್ಥಕವಾಗಿ ಬಳಸಿದ್ದಾನೆ. ಯಮಕಾಲಂಕಾರಕ್ಕೆ ಒಂದು ಅದ್ಭುತವಾದ ಉದಾಹರಣೆ:

**"ಎಡೆಗೆಡೆಗೆ ಪರಿಪರಿವ ಪನ್ನೀರ ಕಾಲಗಳಂ**
**ತಡೆಗೆಡೆಯೊಳಡರಿಚಿದ ಪೊಡವಿದಳೆಗಡಣಂಗ**
**ಳೆಡೆಗೆಡೆಗೆ ರಚಿಸಿದ ಲತಾಮಂಟಪಂ ನೋಡಲೆಡೆಗೆಡೆಗೆ ಪೂಜಪ್ಪರಂ**
**ಎಡೆಗೆಡೆಗೆ ಸಸಿಗಲ್ಲ ಜಗಲಿ ತಳಿರುಯ್ಯಲೆಗ**
**ಳೆಡೆಗೆಡೆಗೆ ಸುಮಹರ್ಮ್ಯ ಶಯ್ಯಾಗೃಹಗಳೆ**
**ಲ್ಲೆಡೆಗೆಡೆಗೆ ತದ್ವನಂದೀವಿ ರಾಜಿಸಿದುದಾಮೃಡನ ವರಸುತನ ಕಣ್ಗೆ"**



ಇನ್ನುಳಿದಂತೆ ಶ್ಲೇಷಾಲಂಕಾರದ ಮೇಲೂ ಕವಿಗೆ ಮೋಹ. ಉದಾ;-

**"ತನುಕಾಂತಿ ನಾಸಿಕಂ ಕನಕಮಂ ಕನಕಮಂ**
**ತನಿಮೊಗಂದುಟಿ ಚಂದ್ರ ಚಂದ್ರ ಬಿಂಬಮಂ ಬಿಂಬಮಂ . . ."**

ಒಟ್ಟಿನಲ್ಲಿ ತನ್ನ ವರ್ಣನಾಪ್ರಧಾನ ಕಾವ್ಯದ ಸಿದ್ಧಿಗೆ ಕವಿ ಅಲಂಕಾರಗಳನ್ನು ಚೆನ್ನಾಗಿಯೇ ದುಡಿಸಿಕೊಂಡಿದ್ದಾನೆ.

ಸಿದ್ಧಲಿಂಗಾರ್ಯನಿಗೆ ಅನುಪ್ರಾಸದ ಮೇಲೆ ಆಸಕ್ತಿ ಹೆಚ್ಚು.

**"ಘಟ್ಟದೊಳ್ ಬೆಟ್ಟದೊಳ್ ನಿಟ್ಟುಮೂಡಿಟ್ಟೆಡೆಯೊ**
**ಳೊಟ್ಟಲಂ ತೊಟ್ಟಿರ್ದ ಬಟ್ಟೆಗಲ್ವಟ್ಟೆಗಳ . . . "**

ಅತ್ಯಂತ ಸರಾಗವಾಗಿ ತನ್ನ ಭಾವಾಭಿವ್ಯಕ್ತಿಯನ್ನು ಹೊಮ್ಮಿಸಲು ಕಾವ್ಯದ ತುಂಬೆಲ್ಲ ಅನುಪ್ರಾಸಕ್ಕೆ ಕವಿ ಮೊರೆಹೋಗಿದ್ದಾನೆ. ಆದರೆ ಅವು ಅನುಚಿತವಾಗಿ ಬಂದಿಲ್ಲ.

**ಕಾವ್ಯದಭಾಷೆ-ಶೈಲಿ**

ಸಿದ್ಧಲಿಂಗಾರ್ಯನ ಕಾವ್ಯಶೈಲಿಯಲ್ಲಿ ಆಡುನುಡಿಗಳು ಯಥೇಚ್ಛವಾಗಿ ಹಾಸುಹೊಕ್ಕಾಗಿವೆ. ಉದಾಹರಣೆಗೆ; ಕೆಲವು ಆಡುನುಡಿಯ ವರಸೆಗಳನ್ನು ನೋಡಬಹುದು. "ಮರುಳೆ ಗರ್ವವೇ", "ಸಣ್ಣಮಾತೇಕೆ", ನಿನಗೆತ್ತ ಧುರವೆತ್ತ", "ಛೀ ಶ್ವಾನ ಹೋಗು", "ಅತಿಭಂಗವಟ್ಟಿಂತು ಪದರಿನುಡಿವರೆ". ಹಾಗೆಯೇ "ಕೀರು", "ಮಡುಗು(ಇಡು), "ಕಾಸು"(ಕಾಯಿಸು), "ಗೆಣಸು", "ಮುಸುಡಿ" ಮೊದಲಾದ ದೇಸಿಪ್ರಯೋಗಗಳು ಕಾವ್ಯದಲ್ಲಿ ಇಡಿಕಿರಿದಿವೆ. "ಢಳಢಳಿಸು", "ಜಲಜಲನೆ" ಬೆವರುಣ್ಮೆ", "ಛಿಟಛಿಟನೆ ಕಾಯ್ದು", "ಪಟಪಟನೆ ಸೀಳಿ"ಯಂತಹ ಅನುಕರಣಾವ್ಯಯಗಳು, "ದಿನದಿನಕೆ", ಬಿಡಬಿಡದೆ" ಇತ್ಯಾದಿ ದ್ವಿರುಕ್ತಿಗಳು, "ಬತ್ತೀಸಾಯುಧ", "ಛಪ್ಪನ್ನೈವತ್ತಾರು", "ಚೌಲಕ್ಷ" ಮೊದಲಾದ ಅನ್ಯದೇಶ್ಯಪದಗಳು ಸನ್ನಿವೇಶಕ್ಕನು ಗುಣವಾಗಿ, ಅರ್ಥಕ್ಕೆ ಬಾಧೆಯಾಗದಂತೆ ಪ್ರಯೋಗಗೊಂಡಿದೆ. ಸಂದರ್ಭದ ಭೀಕರತೆಯನ್ನು ಕವಿ ಪದಗಳಲ್ಲಿ ತಂದುತೋರುತ್ತಾನೆ ಎಂಬುದಕ್ಕೆ "ಪೇರಡವಿ", "ಹೆಗ್ಗಾಳಿ" ಮುಂತಾದ ಶಬ್ದಗಳು ಸಾಕ್ಷಿಯಾಗಿವೆ. ಕೆಲವೊಮ್ಮೆಯಂತು ಕವಿಯು ಭಾವಾವೇಶಕ್ಕೆ ಒಳಗಾಗಿ "ಅಮಮ", "ಅರರೆ" ಎಂದು ಉದ್ಗರಿಸಿದಾನೆ. 'ತುಹಿನ', "ತೋಶ", "ಪೊಸ" ಈ ಪದಗಳ ಮೇಲೆ ಕವಿಗೆ ಎಲ್ಲಿಲ್ಲದ ಮೋಹ, ಆದ್ದರಿಂದ ಕಾವ್ಯದ ತುಂಬ ಈ ಪದಗಳ ಪ್ರಯೋಗ ಹೆಚ್ಚಾಗಿವೆ.

ರಸದ ವಿಚಾರಕ್ಕೆ ಬರುವುದಾದರೆ, ಸಿದ್ಧಲಿಂಗಾರ್ಯ ನವರಸಗಳನ್ನು ಔಚಿತ್ಯಪೂರ್ಣವಾಗಿ ಕಾವ್ಯದಲ್ಲಿ ತಂದಿರುವನಾದರೂ ಭಕ್ತಿ, ವೀರ, ಶೃಂಗಾರಗಳೇ ಹೆಚ್ಚು ಪ್ರತಿಪಾದನೆಯಾಗಿವೆ. ಸರಳ ಮತ್ತು ಆಕರ್ಷಕ ಪದವಿನ್ಯಾಸವಿದ್ದು, ಅವು ಸುಲಭಗ್ರಾಹ್ಯವೂ ಆಗಿರುವುದರಿಂದ ಸಿದ್ಧಲಿಂಗಾರ್ಯನ 'ಮಳೆಯರಾಜಚಾರಿತ್ರ'ದಲ್ಲಿ ಮಾಧುರ್ಯ ಮತ್ತು ಪ್ರಸಾದ ಗುಣಗಳನ್ನೊಳಗೊಂಡ ಸುಕುಮಾರಮಾರ್ಗ ಪ್ರತಿಬಿಂಬಿತವಾಗಿದೆ.

ಸಿದ್ಧಲಿಂಗಾರ್ಯನ ಕಾವ್ಯರಚನೆಯ ಕಾಲದಲ್ಲಿಯೇ ನಿರ್ಮಾಣವಾದ ಇತರ ಕಾವ್ಯಗಳಲ್ಲಿ ಬಹುಪಾಲು ಕೃತಿಗಳು ವಾರ್ಧಕಷಟ್ಪದಿಯಲ್ಲಿದೆ. ಕವಿ ತನ್ನ ಕಾವ್ಯಗತಿಗೆ ವಾರ್ಧಕಷಟ್ಪದಿಯ ಲಯವು ಸೂಕ್ತವೆಂದು ಭಾವಿಸಿದುದರಿಂದ ಈ ಛಂದೋಬಂಧವನ್ನು ಆರಿಸಿಕೊಂಡಿದ್ದಾನೆ. ಕಾವ್ಯಲಯಕ್ಕೆ ಈ ಛಂದೋಲಯವು ಸುಮಸಮವಾಗಿ ನಡೆನುಡಿ ಹಾಸಿದೆ. ಆಎ ಅಲ್ಲಲ್ಲಿ ಛಂದೋಭಂಗವಾಗಿಲ್ಲದೆ ಇಲ್ಲ. ಉದಾ:

"ರಿಕ್ಷಕೀ ಶಕ್ಷಪಾಲಿರುಕ್ಷೇಶಲಕ್ಷಿತ ಜ" [೧-೧೦-೧]

ಇಲ್ಲಿ ವಾರ್ಧಕ ಷಟ್ಪದಿಯ ನಿಯಮದಂತೆ, ೫ ಮಾತ್ರೆಯ ೪ ಗಣಗಳು ಬಂದು, ಒಟ್ಟು ೨೦ ಮಾತ್ರೆಗಳು ಪ್ರತೀತವಾಗಬೇಕು. ಆದರೆ ಇಲ್ಲಿ ಒಂದು ಮಾತ್ರೆ ಹೆಚ್ಚಿದ್ದು ಕೊನೆಯ ಗಣದಲ್ಲಿ ಛಂದೋದೋಷವಿದೆ. ಕೆಲವೆಡೆಗಳಲ್ಲಿ ಛಂದೋಭಂಗವಾಗದಂತೆ, ಶಿಥಿಲದ್ವಿತ್ವವನ್ನು ತಂದು ಕವಿ ಎಚ್ಚರವಹಿಸಿದ್ದಾನೆ.

ಕವಿ ವರ್ಣಗಳನ್ನು ಬಳಸುವಲ್ಲಿಯೂ ಜಾಣ್ಮೆ ಮೆರೆದಿದ್ದಾನೆ. ಯುದ್ಧ, ಬೇಟೆ, ದಾನವರ ಅಟ್ಟಹಾಸದಂತಹ ಸನ್ನಿವೇಶಗಳನ್ನು ಚಿತ್ರಿಸುವಾಗ ಟ, ಡ-ಮೂರ್ಧನ್ಯಾಕ್ಷರಗಳನ್ನೇ ಅನುಪ್ರಾಸದಲ್ಲಿ ತಂದು ಸಂದರ್ಭದ ತೀವ್ರತೆಯನ್ನು ಪರಿಣಾಮಕಾರಿಯಾಗಿಸಿದ್ದಾನೆ. ಶೃಂಗಾರ, ಅದ್ಭುತ, ಶಾಂತ, ಕರುಣ, ರಸಪೂರಿತ ಸನ್ನಿವೇಶಗಳನ್ನು ನಿರ್ಮಿಸುವಲ್ಲಿ ಅ, ಟಿ, ತ, ಚ, ರ, ಪ ಮೊದಲಾದ ಅಕ್ಷರಗಳನ್ನು ಅನುಪ್ರಾಸದಲ್ಲಿ ತಂದು ರಮಣೀಯ ಅನುಭವವಾಗುವಂತೆ ಮಾಡಿದ್ದಾನೆ. ಸಮಾಸನಿಬಿಡತೆಯು ಈ ಕಾವ್ಯದಲ್ಲಿ ಲಕ್ಷ್ಯಾರ್ಹ ಅಂಶ.

**ಕಾವ್ಯದಲ್ಲಿನ ಸಾಮಾಜಿಕತೆ**

ಸುಂದರಾಂಗನನ್ನು ಕಾಡಿನ ಬೇಡ ಹೆಣ್ಣುಗಳು ಮುಟ್ಟಿದಾಗ, ಆತ ತಾನು ಮೈಲಿಗೆಯಾದನೆಂದು ನೊಂದುಕೊಳ್ಳುವುದು, ಮಳೆಯರಾಜ-ಮಲಯವತಿಯರ ವಿವಾಹ ಸಂದರ್ಭದಲ್ಲಿ ನಡೆಯುವ ಎಣ್ಣೆಸ್ನಾನ, ಸಾಂಸ್ಕೃತಿಕ ಕಾರ್ಯಕ್ರಮಗಳು, ವಿವಿಧ ವಿನೋದಾವಳಿಗಳು, ಮದುಮಕ್ಕಳ ಓಕುಳಿಯಾಟ, ವಿವಾಹನಂತರ ಕಿರಿಗಂಚಿ-ಮರಿಗಂಚಿ ಮೊದಲಾದ ವಿಧಿಗಳು, ಬಳುವಳಿಗಳನ್ನು ಕೊಡುವ ಬಗೆ, ದೃಷ್ಟಿಯಾಗಿರಬಹುದೆಂದು ಮಳೆಯರಾಜನಿಗೆ "ಹರಿನೀಲ ಕಟೆಯರ್ಕಳಿಂದ" ನಿವಾಳಿಸುವುದು, ಇವೇ

ಮೊದಲಾದ ಪದ್ಧತಿಗಳು, ಜನರ ಶ್ರದ್ಧೆ-ವಿಶ್ವಾಸಗಳು, ಸಂಪ್ರದಾಯಗಳು ಆಗಿನ ಕಾಲದ ಸಮಾಜವನ್ನು ಅರಿಯುವಲ್ಲಿ ಸಾಮಾಜಿಕ ಇತಿಹಾಸಕಾರರಿಗೆ ಉಪಯುಕ್ತವಾಗಿವೆ. ಈಗಾಗಲೇ ಹೇಳಿರುವ ವೇಶ್ಯಾವಾಟಿಕೆಯ ವರ್ಣನೆ, ಬೇಟೆಯ ವರ್ಣನೆ, ಸೈನ್ಯ ವಿವರಗಳು ಕವಿಯ ಸಾಮಾಜಿಕ ಪ್ರಜ್ಞೆಗೆ ಹಿಡಿದ ಕನ್ನಡಿಯಾಗಿವೆ.

**ಕವಿಯ ಧಾರ್ಮಿಕಪ್ರಜ್ಞೆ**

ಮೊದಲನೆಯ ಆಶ್ವಾಸದ ೧೦, ೧೧, ೧೨ ನೆಯ ಸಂಧಿಗಳಲ್ಲಿ ಹಾಗೂ ತೃತೀಯಾಶ್ವಾಸದ ಕೊನೆಯೆರಡು ಸಂಧಿಗಳಲ್ಲಿ ಕ್ರಮವಾಗಿ ವಿಭೂತಿ, ರುದ್ರಾಕ್ಷಿ, ಪಂಚಾಕ್ಷರೀ ಮಂತ್ರದ ಮಹಿಮೆಗಳನ್ನು, ಕೈಲಾಸದ ವರ್ಣನೆಯನ್ನು ತಂದಿದ್ದಾನೆ. ಈ ವಿವರಣೆಗಳ ಸಂದರ್ಭದಲ್ಲಿ ಕವಿಯ ಧಾರ್ಮಿಕ ಪ್ರಜ್ಞೆ ಹಿನ್ನೆಲೆಯಾಗಿದೆ. ಜೊತೆಗೆ "ಶೂನ್ಯ ಪರವಸ್ತು", "ನಾದಬಿಂದು ಕಳೆ", "ಲಿಂಗಾನುಭಾವಿ", "ಷಟ್‌ಸ್ಥಲದೊಳತಿ ಭಕ್ತಿ", "ಪರಲಿಂಗ" ಮೊದಲಾದ ವಚನಪರಿಭಾಷೆಗಳು ಪ್ರಯೋಗಗೊಂಡಿವೆ. ಶಿವನು ಪ್ರತ್ಯಕ್ಷವಾದ ಸನ್ನಿವೇಶದಲ್ಲಿ ಕವಿ ಬಳಸಿರುವ ಪದ್ಯ ಅಕ್ಕನ ವಚನವೊಂದನ್ನು ನೆನಪಿಗೆ ತರುತ್ತದೆ.

**"ಸುಲಿಪಲ್ಗಳಿಂದೆ ಕೆಂಜಡೆಗಳಿಂದೆಸೆವ ವ**
**ಲ್ಕಲ ವಸನದಿಂದೆ ಭಸ್ಮೋದ್ವರ್ತ ತನುವಿನಂ**
**ಗುಲಿಯ ಜಪಮಾಲೆಯಿಂದಾಯಾಯ ತಾಣದೊಳ್ ನೆಲೆಗೊಂಡ ರುದ್ರಾಕ್ಷಿಯಂ [೩-೧-೧೪]**

**ಒಟ್ಟು ನೋಟ**

"ಹರಿಹರನು ಮೂರು ಸ್ಥಳಗಳಲ್ಲಿ ಸಾಧಿಸಿದುದರ ಅಲ್ಪಾಂಶವನ್ನು ಸೆಜ್ಜೆಯ ಸಿದ್ಧಲಿಂಗ ೩ ಆಶ್ವಾಸಗಳಲ್ಲಿ ಸಾಧಿಸದೆ ಹೋಗುತ್ತಾನೆ ಇವನಲ್ಲಿ ವಿದ್ವತ್ತಿಗೆ ಕೊರತೆಯಿಲ್ಲ, ಭಾಷಾಪ್ರಭುತ್ವಕ್ಕೂ ಕೊರತೆಯಿಲ್ಲ, ಶಾಸ್ತ್ರಜ್ಞಾನವೂ ಸಾಕಷ್ಟಿದೆ. ಆದರೂ ವರ್ಣನೆಗಳಿಗೆ ಮಾರುಹೋಗಿ, ವಿಷಯಾಂತರ ಮಾಡಿ, ಅಪ್ರಮುಖ ವಿಷಯಗಳಿಗೆ ಪ್ರಾಮುಖ್ಯವನ್ನೂ ಪ್ರಮುಖ ವಿಷಯಗಳಿಗೆ ಅಪ್ರಾಮುಖ್ಯತೆಯನ್ನು ಇತ್ತು ಕಾವ್ಯದ ಪರಿಣಾಮ ರಮಣೀಯತೆಯನ್ನು ಹಾಳು ಮಾಡಿರುವುದು ವಿಷಾದನೀಯವಾದುದು". ಎಂದು ಡಾ. ಸಿದ್ಧಯ್ಯ ಪುರಾಣಿಕರು ಕಾವ್ಯದ ಮುನ್ನುಡಿಯಲ್ಲಿ ಹೇಳಿರುವ ಮಾತನ್ನು ಒಪ್ಪಲಾಗದು. ಏಕೆಂದರೆ, ಅಷ್ಟಾದಶ ವರ್ಣನೆಗಳಾಗಲೀ ಅನುಷಂಗಿಕವಾಗಿ ಬರುವ ಇತರೆ ವಿಷಯಗಳಾಗಲೀ, ಪಾತ್ರಗಳ ಬಾಹುಳ್ಯಗಳಾಗಲೀ, ಅವುಗಳ ಸುತ್ತ ನಡೆಯುವ ಘಟನೆಗಳಾಗಲೀ ಇವೆಲ್ಲವು ಕವಿಯ ಮೂಲ ಉದ್ದೇಶ ಸಾಧನೆಗೆ ಆತ ಕಲ್ಪಿಸಿ, ಹೆಣೆದುಕೊಂಡಿರುವ ವಿಧಾನಗಳಾಗಿದ್ದು 'ಕಾವ್ಯದಶಿಲ್ಪ'ಕ್ಕೆ ಅನುಗುಣವಾಗಿಯೇ ಇವೆ. ಎಲ್ಲಕ್ಕಿಂತ ಮಿಗಿಲಾಗಿ ಓರ್ವ ಸಾಂಸ್ಕೃತಿಕ ಅಧ್ಯಯನಕಾರನಿಗೆ ಇವು ಅಮೂಲ್ಯ ಸಾಮಗ್ರಿಗಳಾಗಿವೆ.

ಸುಂದರ ಕಾವ್ಯ ಚಿತ್ರಗಳು, ಗುರು, ಮೇರು, ತಪೋರೀತಿ, ಕುಮಾರೋದಯ ಮೊದಲಾದ ಕಾವ್ಯ ಪ್ರತಿಮೆಗಳು, ಅನುಪ್ರಾಸ, ಯಮಕಗಳು, ಉಪಮೆ, ರೂಪಕ, ಉತ್ಪ್ರೇಕ್ಷೆ, ಶ್ಲೇಷಾಲಂಕಾರಗಳು ಕಾವ್ಯದ ತುಂಬೆಲ್ಲ ಹರಡಿದ್ದರೂ, ಕಾವ್ಯಬಂಧಕ್ಕೆ ಚ್ಯುತಿಯೊದಗಿಲ್ಲ. ಒಟ್ಟಿನಲ್ಲಿ ಈ ರಮ್ಯಕಾವ್ಯವು ಹರಿಹರನ 'ಮಲಯರಾಜ ದೇವರ ರಗಳೆ'ಯ ಪ್ರಭಾವಳಿಯ ಮೆರುಗಿನಲ್ಲಿದ್ದರೂ, ತನಗಿಂತ ಪೂರ್ವದ ಕವಿಗಳ, ವಚನಕಾರರ ಪ್ರಭಾವದ ಹಿಡಿತಕ್ಕೆ ಒಳಗಾಗಿದ್ದರೂ ತನ್ನದೇ ಆದ ಸ್ವೋಪಜ್ಞತೆಯಲ್ಲಿ ಓದುಗ ಮನಕ್ಕೆ ರಮಣೀಯ ಅನುಭೂತಿಯನ್ನೊದಗಿಸುತ್ತದೆ.

'ಮಳೆಯರಾಜಚಾರಿತ್ರ'ದ ಮೊದಲ ಆಶ್ವಾಸದ ಮೊದಲ ಸಂಧಿಯಲ್ಲಿ ಕವಿಯು ತನಗೆ 'ರಸಿಕರಾಜೇಂದ್ರ' ಎಂಬ ಬಿರುದಿದ್ದುದನ್ನು ಹೇಳಿದ್ದಾನೆ. ಬಹುಶಃ ಸೆಜ್ಜೆಯ ಸಿದ್ಧಲಿಂಗಾರ್ಯ 'ಮಳೆಯರಾಜ ಚಾರಿತ್ರ'ವನ್ನು ಮಾತ್ರವಲ್ಲದೆ ಬೇರೆ ಕೃತಿಯನ್ನೋ ಅಥವಾ ಕೃತಿಗಳನ್ನೋ ಬರೆದಿರಬೇಕು. ಅನುಪಲಬ್ಧವಾದ ಆ ಕೃತಿಗಳಲ್ಲಿ 'ಮಳೆಯರಾಜಚಾರಿತ್ರ'ದಲ್ಲಿ ಬರುವಂತಹ ಶೃಂಗಾರ ಮಯವಾದ ವರ್ಣನೆಗಳು, ಚಿತ್ರಣಗಳು ಉಕ್ತವಾಗಿದ್ದು, ಕವಿಗೆ 'ರಸಿಕರಾಜೇಂದ್ರ' ಎಂಬ ಬಿರುದು ಸಾರ್ಥಕವಾಗಿ ಸಲ್ಲಲು ಕಾರಣವಾಗಿದ್ದಿರಬಹುದು. ಇವನ ಇನ್ನೊಂದು ಬಿರುದಾದ 'ಸಕ್ಕದ ಕನ್ನಡದ ಕವಿತೆಯ ಚದುರ' ಎಂಬುದನ್ನು ಸೂಕ್ಷ್ಮವಾಗಿ ಗಮನಿಸಿದರೆ, ಕನ್ನಡದಲ್ಲಿ 'ಮಳೆಯರಾಜಚಾರಿತ್ರ'ವನ್ನು ಬರೆದಂತೆ ಸಂಸ್ಕೃತದಲ್ಲಿಯೂ ಕವಿ ಕೃತಿರಚನೆ

ಮಾಡಿದ್ದಿರಬಹುದು. ಒಟ್ಟಿನಲ್ಲಿ ಕವಿಯ ಈ ಎರಡು ಬಿರುದುಗಳು ಆತ 'ಮಳೆಯರಾಜಚಾರಿತ್ರ'ದ ಜೊತೆಗೆ ಇನ್ನೊಂದು ಕೃತಿಯನ್ನು ರಚಿಸಿದ್ದಿರಬಹುದಾದ ಸಾಧ್ಯತೆಯನ್ನು ಸೂಚ್ಯವಾಗಿ ತಿಳಿಸುತ್ತವೆ.

**ಆಧಾರಗ್ರಂಥಗಳು**


೧ ಸೆಜ್ಜೆಯ ಸಿದ್ಧಲಿಂಗ ಕವಿಯ 'ಮಳೆಯರಾಜಚಾರಿತ್ರ' ಸಂಪಾದಕರು; ಡಾ. ಸಿದ್ಧಯ್ಯಪುರಾಣಿಕರು, ಶ್ರೀಗಿರಿ ಪ್ರಕಾಶನ, ಬೆಂಗಳೂರು-೧೯೮೯.

೨ ಹರಿಹರನ ರಗಳೆಗಳು : ಸಂಪಾದಕರು- ಎಂ. ಎಂ. ಕಲಬುರ್ಗಿ, ಪ್ರಸಾರಾಂಗ, ಕನ್ನಡ ವಿ. ವಿ. ಹಂಪಿ ೧೯೯೯;



* ಈ ಸಂಪ್ರಬಂಧ ರಚನೆಗೆ ಸ್ಫೂರ್ತಿ ನೀಡಿದ ನನ್ನ ಆತ್ಮೀಯ ಗುರುಗಳಾದ ಡಾ. ಪಿ. ವಿ. ಕೃಷ್ಣಮೂರ್ತಿಯವರಿಗೂ ಸಲಹೆಗಳನ್ನು ನೀಡಿದ ಶ್ರೀ ಸುಂಕಂ ಗೋವರ್ಧನ್ ರವರಿಗೂ ಕೃತಜ್ಞತೆಗಳು.


*****

# ಕೆಳದಿ ಆಸ್ಥಾನದಿಂದ ಬೆಳಕು ಕಂಡ ಅಪ್ರಕಟಿತ ಸುಭಾಷಿತ ಸುರದ್ರುಮ ಕೃತಿ

*** ಕೆಳದಿ ಗುಂಡಾಜೋಯಿಸ್; ಡಾ. ಕೆಳದಿ ವೆಂಕಟೇಶ್‌ಜೋಯಿಸ್**

ಭಾರತದಲ್ಲಿಯೇ ಅಪೂರ್ವವಾದ ಕೆಳದಿ ಅರಸರ ಆಸ್ಥಾನವು ವಿಶ್ವವಿದ್ಯಾನಿಲಯದೋಪಾದಿಯಲ್ಲಿ ಸಾಹಿತ್ಯ ಕೃತಿಗಳನ್ನು ಬೆಳಕಿಗೆ ತಂದಿರುವುದನ್ನು ಸಮಕಾಲೀನ ವಿದೇಶೀ ಪ್ರವಾಸಿಗಳಾದ ಪೀಟರ್ ಮಂಡಿ, ಜಾನ್ ಫ್ರಾಯರ್ ಮುಂತಾದವರು ಶ್ಲಾಘಿಸಿ ಉಲ್ಲೇಖಿಸಿದ್ದಾರೆ. ಈ ಅರಸರು ಸ್ವತಃ ವಿದ್ಯಾಂಸರಾಗಿದ್ದುದಲ್ಲದೆ, ಭಾರತಾದ್ಯಂತ ವಿದ್ವಾಂಸರು ಕೆಳದಿ ರಾಜಧಾನಿ ಇಕ್ಕೇರಿ ಅರಮನೆಯಲ್ಲಿ ಉನ್ನತ ಕೃತಿಗಳನ್ನು ರಚಿಸಿ ಖ್ಯಾತನಾಮರಾಗಿದ್ದಾರೆ. ಹಿರಿಯ ವೆಂಕಟಪ್ಪನಾಯಕನ ಕಾಲದ ಗೀತಗೌರೀವರ, ಬಸವಪ್ಪನಾಯಕನ ಶಿವತತ್ವರತ್ನಾಕರ, ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯ ಮುಂತಾದ ಕೃತಿಗಳು ಮೇರು ಕೃತಿಗಳಾಗಿದ್ದು ದೇಶ ವಿದೇಶಗಳಲ್ಲಿ ಖ್ಯಾತಿಗಳಿಸಿವೆ. ಈ ಆಸ್ಥಾನದಿಂದ ಬೆಳಕು ಕಂಡ ಹಸ್ತಪ್ರತಿಗಳು ಮದರಾಸು (ಚೆನ್ನೈ), ಪೂನಾ, ಕಲ್ಕತ್ತಾ, ಜೋಧ್‌ಪುರ, ಅಲಹಾಬಾದ್, ಲಂಡನ್, ಇಟಲಿ ದೇಶಗಳಲ್ಲಿರುವ ಪ್ರಾಚ್ಯವಸ್ತು ಸಂಶೋಧನಾ ಕೇಂದ್ರಗಳಲ್ಲಿ ಗೋಚರಿಸಿವೆ. ಅಲಹಾಬಾದ್ ವಿಶ್ವವಿದ್ಯಾಲಯದ ಉಪಕುಲಪತಿ ಡಾ. ತ್ರಿಪಾಠಿರವರು ಕೆಳದಿ ತಿರುಮಲಭಟ್ಟನ 'ಗೀತಗೌರೀವರ' ಹಸ್ತಪ್ರತಿಯನ್ನು ಸಂಶೋಧಿಸಿ, ಸಂಪಾದಿಸಿ, ಮಾನವ ಸಂಪನ್ಮೂಲ ಸಚಿವಾಲಯದಿಂದ ಪ್ರಕಟಿಸಿದ್ದಾರೆ. 'ಶಿವತತ್ವ ರತ್ನಾಕರ' ಕೃತಿಯ ಇಂಗ್ಲೀಷ್ ಅವತರಣಿಕೆಯನ್ನು ಸರಕಾರದ ಆರ್ಥಿಕ ಸಹಾಯದಿಂದ ಕೆಳದಿ ಸಂಶೋಧನಾ ಕೇಂದ್ರ ಪ್ರಕಟಿಸಿದೆ. ಈ ನಿಟ್ಟಿನಲ್ಲಿ ಕೆಳದಿ ಬಸವರಾಜ ಕೃತಿ 'ಸುಭಾಷಿತ ಸುರದ್ರುಮ' (ಅಪ್ರಕಟಿತ)ದ ಹಸ್ತಪ್ರತಿಯೊಂದು ಬೊಂಬಾಯಿ (ಮುಂಬಯಿ) ವಿಶ್ವವಿದ್ಯಾಲಯದಲ್ಲಿರುವುದನ್ನು ಡಾ. ಈ.ಡಿ. ಕುಲಕರ್ಣಿರವರು ಪರಿಚಯಿಸಿದ್ದು, ಹಸ್ತಪ್ರತಿಯ ವಿವರಗಳನ್ನು ಮುಂದಿನ ಸಂಶೋಧನೆ ಹಾಗೂ ಪ್ರಕಟಣೆಗಾಗಿ ನಿರೂಪಿಸಲಾಗಿದೆ.

**ಹಸ್ತಪ್ರತಿ ವಿವರ**

ಕೆಳದಿ ಬಸವರಾಜಕೃತ ಸುಭಾಷಿತ ಸುರದ್ರುಮ ಹಸ್ತಪ್ರತಿ ಮಹಾರಾಷ್ಟ್ರ ಸರಕಾರದಲ್ಲಿ ಪೂನಾದಲ್ಲಿರುವ ಭಾಂಡಾರ್‌ಕರ್ ಪುರಾತತ್ವ ಸಂಶೋಧನಾ ಕೇಂದ್ರದಲ್ಲಿ ಸಂರಕ್ಷಿಸಲ್ಪಟ್ಟಿದ್ದು ಈ ಕೆಳಕಂಡಂತಿದೆ.

| | | |
|---|---|---|
| ಪತ್ರಗಳು | – | ೨೯೩ |
| ಸಾಲುಗಳು | – | ೧೩ ರಿಂದ ೧೫ |
| ಅಕ್ಷರಗಳು | – | ೪೦ ರಿಂದ ೪೩ |

ನಾಲ್ಕು ಸ್ಕಂಧಗಳಲ್ಲಿ ಈ ಕೆಳಕಂಡಂತೆ ಪತ್ರಗಳಿವೆ.

| | | |
|---|---|---|
| ಸ್ಕಂಧ ೧ | – | ೧ ರಿಂದ ೮೪ ಪತ್ರಗಳು |
| ಸ್ಕಂಧ ೨ | – | ೧ ರಿಂದ ೧೮೩ ಪತ್ರಗಳು |
| ಸ್ಕಂಧ ೩ | – | ಕಾಣಸಿಗುವುದಿಲ್ಲ |
| ಸ್ಕಂಧ ೪ | – | ೨ ರಿಂದ ೨೬ ಪತ್ರಗಳು |

ಬುಲೆಟಿನ್ ಡೆಕ್ಕನ್ ಕಾಲೇಜ್ ರೀಸರ್ಚ್ ಇನ್ಸ್ಟಿಟ್ಯೂಟ್. XI - 25

* ಪೋಸ್ಟ್ ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ–೫೭೭೪೦೧.

**ಹಸ್ತಪ್ರತಿಯ ಆದಿಭಾಗ**

ಶ್ರೀಗುರು ನೌಮಿ ಅಥ ದಕ್ಷಿಣಾಮೂರ್ತಿರೂಪಗುರುಣಾತಿಃ ॥
ಶ್ರೀಕಂಠದ್ರುಹಿನೋಪಮನ್ಯುತಪನಸ್ಕಂದೇಂದ್ರನಂದ್ಯಾದಯಃ ।
ಪ್ರಾಚೀನ ಗುರವೋಪಿ ಯಸ್ಯ ಕರುಣಾಲೇಸದ್ ಗತಾ ಗೌರವಂ ॥
ತಂ ಸರ್ವಾದಿಗುರುಂ ಮನೋಜ್ಞಾವಪುಷಂ ಮಂದಸ್ಮಿತಾಲಂಕೃತಮ್ ।
ಚಿನ್ಮುದ್ರಾಕೃತಮುದ್ರಪಾಣಿನಲಿನಂ ಚಿತ್ತೆ ಶಿವಂ ಕೂರ್ಮಹೇ ॥೧॥

ನಂದ್ಯಾವರ್ತಸಮುಜ್ವಲಂ ನವಜಪಾರಕ್ತಾಂಗಸಕ್ತಾ ಶ್ರಿತಮ್
ಚಿನ್ಮುದ್ರಾವರಪುಸ್ತಕಾಭಯಧರಂ ಶುಕ್ಲಾಂಬರಾಢ್ಯಂ ಶಿವಮ್ ॥
ಮುಕ್ತಾಸ್ರಕ್ಸರಿಮಂಡಿತಂ ತ್ರಿಣಯನಮ್ ಶುಭ್ರಾರವಿಂದಸ್ಥಿತಮ್
ಶಾಂತಂ ಸರ್ವಸುಖಾವಹಂ ಪ್ರತಿದಿನಂ ಶ್ರಿಮದ್ಗುರುಂ ಭಾವಯೆ ॥೨॥

ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಮ್
ದ್ವಂದ್ವಾತೀತಂ ಗಗನಸದೃಶಂ ತತ್ವಮಸ್ಯಾದಿಲಕ್ಷ್ಯಮ್ ॥
ಏಕಂ ನಿತ್ಯಂ ವಿಮಲಂ ಅಚಲಂ ಸರ್ವದಿಶಾಕ್ಷಿಭೂತಮ್
ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ ॥೩॥

ಗುರವೇ ಸರ್ವಲೋಕಾನಾಂ ಭಿಷಜೆ ಭವರೋಗಿಣಾಂ
ನಿಧಯೇ ಸರ್ವವಿದ್ಯಾನಾಂ ದಕ್ಷಿಣಾಮೂರ್ತಯೇ ನಮಃ ॥೪॥

**ಮೊದಲನೇ ಸ್ಕಂಧದ ಅಂತ್ಯಭಾಗ ಪತ್ರ ಸಂಖ್ಯೆ ೮೪**

ಇತಿ ಶ್ರಿನ್ನಿಹಿಷೀ(ಸೀ)ಮಾ ಮಹಿಮೋದ್ದಾಮ ಕಾವ್ಯದ್ವಿಷದ
ದ್ವಯಪದ್ವಯದ್ವಯಾತಿಮಸಂತತನಿರಂತರಾಯ ..........
ಶ್ರೀಮದ್‌ರಾಜಾಧಿರಾಜ ವಿಶುದ್ಧಾದ್ವೈದಿಕಾದ್ವೈತಸಿದ್ಧಾಂತ
ಪ್ರತಿಷ್ಠಾಪನಾಚಾರ್ಯ ಯಡವಮುರಾರಿ ಕೋಟೆಕೋಲಾಹಲ್ಯೆ
ಕಾಂಗಿ ವೀರದೊನೇಜ ದೊಖಂಡೇರಾಯ ಪಶ್ಚಿಮ ಸಮುದ್ರಾ
ಧೀಶ್ವರ ಶ್ರೀಮತ್ ಕೆಳದಿ ಬಸವಕ್ಷಿತೀಂದ್ರ
ಸಂಗೃಹೀತೆ ಸುಭಾಷಿತ ಸುರದ್ರುಮೆ ಗ್ರಂಥಾರಂಭೋ
ಚಿತನತ್ಯಶ್ರೀಃ ಪ್ರಶಂಸಾನಿಂದಾತ್ಮಕಃ ಪ್ರಥಮ
ಸ್ಕಂಧಃ

**ಮುಂದಿನ ಸ್ಕಂಧದ ಆರಂಭ (ಆದಿ) ಪತ್ರ ೧**

ಶ್ರೀ ಸರಸ್ವತ್ಯೆನಮಃ ॥ ಶ್ರೀ ಗುರುಭ್ಯೋನಮಃ ॥
(ಸ್ವಯನ್) ನೀತಿಕಳಾಕಲಾಪಜಲಧಿಪ್ರೊನ್ಮತಮಂತಾಯಿತ
ಪ್ರಜ್ಞಾಪ್ರಾಪ್ತಲಸತ್ಸುಭಾಷಿತಸುಧಾಸ್ವಾದುಪ್ರಹೃಷ್ಟಾಂತರ ॥
ನತ್ಯಾದಿ ಪ್ರತಿಪಾದಕಾನಿ ಭವತಾ ಪ್ರೋಕ್ತಾನಿ ಪದ್ಯಾನಿ ಅಹಂ
ಸ್ಕಂಧೇ ಪ್ರಾಥಮಿಕೆ ನಿಶಮ್ಯ ನಿತರಾಂ ತುಷ್ಟೋಭವಂ ಶ್ರೀಗುರೋ ॥೧॥
ಏಕತ್ವಾನ್ಯೋಕ್ತಿರೂಪಾ ಸ್ಫುಟಿತರಂ ಅಪರಾ ಸ್ವೋಕ್ತಿರೂಪೆತಿ ನೀತಿರ್
ದ್ವೇಧಾ ಚಿತ್ರಾಣಿ ಕಾವ್ಯೇಷ್ವಥ ಕುಶಾಲಧಿಯಾ ವೇದಾನೀಯಾನಿಸರ್ವಮ್ ॥
ಕೌಮಾರಾಭ್ಯಾಸಯೋಗ್ಯಂ ತದಿದಂ ಇಹ ಪುನರ್ವಣ್ಯತೆ ಚದ್ವಿತೀಯೆ

ಸ್ಕಂಧೆ ಸಮ್ಯನ್ಮಯೇತಿ ಪ್ರಕತಿತಮ್ ಅಭವತ್ತನ್ ಮಮಾಖ್ಯಾಹಿಹಾರ್ದಾತ್ ॥೨॥
ಸ್ಕಂಧೇ ದ್ವತೀಯ ಇಹ ಸಮ್ಯಗ್ ಯದೀರಯಾಮಿ
ಸ್ವಾನ್ಯಾಪದೇಶಮುಖತೊ ದ್ವಿವಿಧಾತ್ಮಕಾನಿ ॥
ಪದ್ಯಾನಿ ಅಥೋಕೃತಿಷು ಚಿತ್ರಭರಾಣಿ ಚೈತತ್
ಪುತ್ರತ್ವಂ ಆಕಲಯ ಸಂಪ್ರತಿ ಸಾವಧಾನಃ ॥೩॥

೧೮೩ ನೇ ಪತ್ರದ ಅಂತ್ಯ

ಶ್ರೀ ಸುಭಾಷಿತ ಸುರದ್ರುಮೆ ದ್ವತೀಯ ಸ್ಕಂಧಃ ಸಮಾಪ್ತಃ ॥೨॥
ಶ್ರೀ ಪರಬ್ರಹ್ಮಾರ್ಪಣಮಸ್ತು ॥

**ಉಪಸಂಹಾರ**

ಭಾರತದ ಚರಿತ್ರೆಯಲ್ಲಿ ಉನ್ನತ ಪರಂಪರೆಗಳಿಂದ ಕೂಡಿದ ಕೆಳದಿ ಆಸ್ಥಾನದಲ್ಲಿ ರಾಜಪೀಳಿಗೆಯ ಬಸವಪ್ಪನಾಯಕನು ಸ್ವತಃ ವಿದ್ವಾಂಸನಾಗಿದ್ದು ರಚಿಸಿದ ಸುಭಾಷಿತ ಸುರದ್ರುಮ ಕೃತಿಯು ಸುಭಾಷಿತಗಳೆಂಬ ಕಲ್ಪವೃಕ್ಷ, ದೇವತರು, ಸುರತರು, ಮಂದಾರ, ಪಾರಿಜಾತ–ಸಂತಾನ ವಿಶಿಷ್ಟಾರ್ಥಗಳನ್ನು ಗರ್ಭೀಕರಿಸಿಕೊಂಡಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಕವಿಯು ಗ್ರಂಥ ರಚನೆಯ ಉದ್ದೇಶವನ್ನು

**ವಚೋವಿಲಾಸಿನಂ ದ್ವಿಧಾಯದಿಹ ಲಕ್ಷ್ಯಾಲಕ್ಷ್ಯಾತ್ಮಕಂ**
**ತಯೋಃ ಪ್ರಥಮಮಿರಿತಂ ಸ್ವಶಿವತತ್ವರತ್ನಾಕರೇ ।**
**ಪರವಿಶದಯೇ ಸುಧೀವನಮಿತೋ ವಿನೋದೇಚ್ಛಯಾ**
**ಸುಭಾಷಿತ ಸುರದ್ರುಮಂ ವಿರಚಯೆಚ್ಚುಣುತ್ವಂ ಸುತ ॥**

ಸಕಲ ಶಾಸ್ತ್ರಗಳನ್ನು ಶಿವತತ್ವರತ್ನಾಕರದಲ್ಲಿ ತಿಳಿಸಿದಂತೆ, ಸುಭಾಷಿತ ಸುರದ್ರುಮ ಗ್ರಂಥವನ್ನು ವಿದ್ವಾಂಸರ ಕೋರಿಕೆಯಂತೆ ಅವರ ಸಂತೋಷಕ್ಕಾಗಿ ವಿರಚಿಸಿರುವೆನು ಎಂದಿದಾನೆ. ಇದು ಸುಭಾಷಿತಕೋಶದಂತೆ ಸರಿಸುಮಾರಾಗಿ ೭೭೦೦ ಶ್ಲೋಕಗಳಿಂದ ಕೂಡಿದ ಮಹತ್ಕೃತಿಯಾಗಿದ್ದು ಇನ್ನೂ ಹಸ್ತಪ್ರತಿ ರೂಪದಲ್ಲಿಯೇ ಇದೆ. ಶೃಂಗೇರಿ, ಮೈಸೂರು ಮತ್ತು ಪೂನ ಪ್ರಾಚ್ಯಕೋಶಾಗಾರದಲ್ಲಿವೆ. ಪೂನಾದಲ್ಲಿರುವ ಹಸ್ತಪ್ರತಿಗಳಲ್ಲಿ ಡಾ. ಇ.ಡಿ. ಕುಲಕರ್ಣಿರವರೇ ಪ್ರಸ್ತಾಪಿಸಿದಂತೆ ಪಿ.ಕೆ. ಘೋಡೆ ರವರ ಭಾರತೀಯ ವಿದ್ಯಾ ಸಂ ೩ ಭಾಗ ೧ ಪು. ೪೦–೪೬ ಹಾಗೂ ಯು.ಎಸ್.ಎ. ನಲ್ಲಿರುವ ಪೋಲ್‌ಮ್ಯಾನ್ ಕ್ಯಾಟಲಾಗ್‌ನ ಹಸ್ತಪ್ರತಿಗಳು ಕೃತಿಯ ಮಹತ್ವವನ್ನು ನಿರ್ದೇಶಿಸಿವೆ. ಅರಸನನ್ನು "ಕವೀಂದ್ರ ಪರಮಾನಂದ ಕೆಳದಿ ಬಸವಭೂಪಾಲ"ನೆಂಬುದಾಗಿ ಘೋಡೆರವರು ಕರೆದಿದ್ದಾರೆ, ಪೂನಾ ಹಸ್ತಪ್ರತಿ ಸುಭಾಷಿತ ಸುರದ್ರುಮದಲ್ಲಿ ೩ನೇ ಸ್ಕಂಧ ಕಂಡುಬಂದಿಲ್ಲ. ಈಚೆಗೆ ನನ್ನ ಸರ್ವೇಕ್ಷಣೆಯಲ್ಲಿ ಇದು ಲಭಿಸಿದ್ದು ಪರಿಶೋಧಿಸಲಿದ್ದೇನೆ. ಅಪೂರ್ವವಾದ ಈ ಬೃಹತ್ ಕೃತಿಯನ್ನು ಮುಂದಿನ ಪೀಳಿಗೆಗೆ ಉಳಿಸಲು ಕೆಳದಿ ಹಸ್ತಪ್ರತಿ ಸಂಪನ್ಮೂಲ ಕೇಂದ್ರವು ಸಂಶೋಧನೆ–ಸಂಪಾದನೆ–ಪ್ರಕಟಣೆ ಕೈಗೊಳ್ಳಲು ಈಗಲಾದರೂ ಅಗತ್ಯ ಕ್ರಮದ ಮೂಲಕ ಯೋಜನೆಯನ್ನು ಸರಕಾರಕ್ಕೆ ಸಲ್ಲಿಸುವುದು ಸೂಕ್ತವಾಗಿದೆ.

*****

# ಶಾಸನ – ಇತಿಹಾಸ



ಸಕಲ ವ್ಯಾಕರಣಾರ್ಥಶಾಸ್ತ್ರಚಯದೊಳ್ ಕಾವ್ಯಂಗಳೊಳ್ ಸಂದ ನಾ
ಟಕದೊಳ್ ವರ್ಣ ಕವಿತ್ವದೊಳ್ ನೆಗಟ್ದ ವೇದಾಂತಂಗಳೊಳ್ ಪಾರಾಮಾ
ರ್ಥಿಕದೊಳ್ ಲೌಕಿಕದೊಳ್ ಸಮಸ್ತ ಕಳೆಯೊಳ್ ವಾಗೀಶನಿಂದಂ ಯಶೋ
ಧಿಕರಾದರ್ ಪೊಗಟ್ವಲ್ಲಿಗಾರಳವೊ ಪೇಳ್ ಸಾಸಿರ್ವರ ಖ್ಯಾತಿಯಂ ॥

# ಕರ್ನಾಟಕ ಇತಿಹಾಸ ಇತ್ತೀಚಿನ ಶೋಧಗಳು

* ಡಾ॥ ದೇವರಕೊಂಡಾರೆಡ್ಡಿ

ಭಾರತದಲ್ಲಿ ಇತಿಹಾಸವನ್ನು ಹಿಂದಿನಿಂದಲೂ ರಚಿಸಿದ್ದರೂ ಅದರಲ್ಲಿ ಐತಿಹಾಸಿಕ ಅಂಶಗಳಿಗಿಂತ ಹೆಚ್ಚಾಗಿ ಪೌರಾಣಿಕ ಅಂಶಗಳಿಗೇ ಹೆಚ್ಚು ಒತ್ತನ್ನು ನೀಡಲಾಗುತ್ತಿತ್ತು. ಇದಕ್ಕೆ ಅಪವಾದವೆಂಬಂತೆ ಇರುವುದು ಕಲ್ಹಣನ 'ರಾಜತರಂಗಿಣಿ' ಎಂಬ ಐತಿಹಾಸಿಕ ಕಾವ್ಯ. ಇದು ೧೨ನೆಯ ಶತಮಾನದಲ್ಲಿ ರಚನೆಯಾಗಿರುತ್ತದೆ. ಸುಮಾರು ಇದೇ ಕಾಲದಲ್ಲಿ ಕಲ್ಯಾಣದ ರಾಜ ತ್ರಿಭುವನ ಮಲ್ಲ ವಿಕ್ರಮಾದಿತ್ಯನನ್ನು ಕುರಿತಂತೆ 'ವಿಕ್ರಮಾಂಕದೇವ ಚರಿತ' ಎಂಬ ಕೃತಿಯ ರಚನೆಯಾಯಿತು. ಆರನೆಯ ವಿಕ್ರಮಾದಿತ್ಯನ ಮಗ ಸರ್ವಜ್ಞ ಚಕ್ರವರ್ತಿ ಭೂಲೋಕಮಲ್ಲನೂ ತನ್ನ ತಂದೆಯನ್ನು ಕುರಿತಂತೆ ಪುರಾಣಲೇಪಿತ 'ವಿಕ್ರಮಾಂಕಾಭ್ಯುದಯ' ಎಂಬ ಕೃತಿಯನ್ನು ರಚಿಸಿದ. ಈ ಕೃತಿಗಳಲ್ಲದೆ ಕರ್ನಾಟಕದಲ್ಲಿ ಕಾವ್ಯ ಅಥವಾ ಅಲಂಕಾರಿಕರು ತಾವು ರಚಿಸಿದ ಗ್ರಂಥಗಳ ಆರಂಭ ಮತ್ತು ಅಂತ್ಯದಲ್ಲಿ ಅನೇಕ ಐತಿಹಾಸಿಕ ವಿಷಯಗಳನ್ನು ಉಲ್ಲೇಖಿಸುವ ಬರೆವಣಿಗೆಯ ದಾಖಲೆಗಳು ರಚಿತವಾಗಿವೆ. ನೇಮಿಚಂದ್ರಾಚಾರ್ಯರು ಗೊಮ್ಮಟಸಾರ ಎಂಬ ವ್ಯಾಖ್ಯಾನ ಕೃತಿಯನ್ನು ರಚಿಸಿ ತನ್ನ ಸಮಕಾಲೀನ ಗಂಗರ ಬಗ್ಗೆ ವಿವರಗಳನ್ನು ನೀಡಿದ್ದಾರೆ. ರನ್ನ ಕವಿಯ ಅಜಿತನಾಥ ಪುರಾಣ ತಿಲಕಂ, ಕೃತಿಯ ಆರಂಭದಲ್ಲಿ ಅತ್ತಿಮಬ್ಬೆ ಬಗ್ಗೆ ವಿಶೇಷವಾಗಿ ಹೇಳುತ್ತದೆ. ವಿಜಯನಗರ ಕಾಲದಲ್ಲಿ ಮತ್ತು ನಂತರದಲ್ಲಿ ಇತಿಹಾಸವನ್ನೇ ಹೇಳುವ ಕೃಷ್ಣದೇವರಾಯನ ದಿನಚರಿ, ರಾಮರಾಯನ ಬಖೈರು, ಕೆಳದಿ ನೃಪವಿಜಯ, ನಲ್ಲಪ್ಪ ಬರೆದ ಹೈದರನಾಮೆ, ಮುಂತಾದವು ಇತಿಹಾಸದ ವಿಷಯವನ್ನು ಹೆಚ್ಚಿಗೆ ಒಳಗೊಂಡ ಕೃತಿಗಳಾಗಿವೆ. ಇವೆಲ್ಲಾ ಆಸ್ಥಾನ ಕವಿಗಳ ರಚನೆಗಳಾದ್ದರಿಂದ ಒಂದು ಮುಖವನ್ನು ಹೇಳುವ ಇತಿಹಾಸ ಕಾವ್ಯಗಳಾಗಿವೆ. ಇವುಗಳಲ್ಲಿ ಅನೇಕ ಕೃತಿಗಳ ಮೇಲೆ ಪರ್ಷಿಯಾದ ಇತಿಹಾಸಕಾರರು ರಚಿಸಿರುವ 'ನಾಮಾ'ಗಳು ಪ್ರಭಾವ ಬೀರಿವೆ. ಇಲ್ಲಿಯು ಕೆಲವು ತೊಡಕುಗಳು ಎದುರಾಗುತ್ತವೆ. ಪರ್ಷಿಯಾದ ಇತಿಹಾಸಕಾರರು ತಾವು ನೆಲೆಸಿದ್ದ, ಆಸ್ಥಾನದ ರಾಜರ ದಿಗ್ವಿಜಯ ಹಾಗೂ ಪ್ರತಾಪಗಳನ್ನು ರಮ್ಯವಾಗಿ ವರ್ಣಿಸಿರುತ್ತಾರೆ. ಇವು ಕೆಲವೊಮ್ಮೆ ಅತಿರೇಕಕ್ಕೂ ಹೋಗುವುದುಂಟು, ಇಂತಹ ಕೃತಿಗಳ ಆಧಾರದಿಂದ ಇತಿಹಾಸ ರಚಿಸುವುದು ಇತಿಹಾಸಕಾರನಿಗೆ ಸವಾಲೇಸರಿ.

ಟೀಪೂ ಸುಲ್ತಾನನ ಪತನದ ನಂತರ ಬ್ರಿಟಿಷರು ಅವನ ಅಧೀನದಲ್ಲಿದ್ದ ಪ್ರದೇಶದ ಆರ್ಥಿಕ ಪರಿಸ್ಥಿತಿ ಹಾಗೂ ವೃತ್ತಿಗಳ ಬಗ್ಗೆ ತಿಳಿದುಕೊಳ್ಳಲು ಪ್ರಾನ್ಸಿಸ್ ಬುಖಾನನ್ ಎಂಬುವವನನ್ನು ನೇಮಿಸಿದರು. ಇದೇ ಅವಧಿಯಲ್ಲಿ ಈ ಪ್ರದೇಶದ ಪೈಮಾಸಿ(ಸರ್ವೆ) ಕಾರ್ಯನಡೆಸಲು ಕರ್ನಲ್ ಕೊಲಿನ್ ಮೆಕಂಜಿ ಎಂಬುವವನನ್ನು ನೇಮಿಸಿದರು. ಒಬ್ಬ ಸಾಮಾಜಿಕ ಜೀವನ ಹಾಗೂ ಆರ್ಥಿಕ ಜೀವನದ ಬಗ್ಗೆ ಮಾಹಿತಿ ಸಂಗ್ರಹಿಸಿದರೆ, ಮತ್ತೊಬ್ಬ ತನ್ನ ಕೆಲಸದ ಜೊತೆಗೆ ಅಲ್ಲಿ ಸ್ಥಳೀಯವಾಗಿ ದೊರೆಯುವ ಐತಿಹಾಸಿಕ ಮಾಹಿತಿ, ಶಾಸನಗಳು ಮುಂತಾದವುಗಳನ್ನು ಸಂಗ್ರಹಿಸಿದ. ಮೆಕಂಜಿ ದಕ್ಷಿಣ ಭಾರತದಲ್ಲಿ ಸುಮಾರು ೭೦೦೦ ರಷ್ಟು ಶಾಸನಪಾಠಗಳನ್ನು ಸಂಗ್ರಹಿಸಿದ್ದ; ಅನೇಕ ಕೈಫಿಯತ್ತುಗಳನ್ನು ಸಂಗ್ರಹಿಸಿದ್ದ; ಓದಲು ಸಾಧ್ಯವಾಗದ ಶಾಸನಗಳಲ್ಲು ಕಣ್‌ಕಾಪಿ ಮಾಡಿಕೊಂಡಿದ್ದಾನೆ. ಹೀಗೆ ವಿಪುಲವಾದ ಐತಿಹಾಸಿಕ ಸಾಮಗ್ರಿಯನ್ನು ಕಲೆಹಾಕಿದ. ಇವನಿಗೆ ಸಹಾಯಕರಾಗಿದ್ದ ಕಾವಲಿ ಬೋರಯ್ಯ, ಮಲೆಯೂರಿನ ದೇವಚಂದ್ರ ಮೊದಲಾದವರು ಇವನ ಸಂಗ್ರಹದಿಂದ ಉತ್ಸುಕರಾಗಿ ಇತಿಹಾಸ ಲೇಖನಗಳ ರಚನೆಗೆ ತೊಡಗುತ್ತಾರೆ. ದೇವಚಂದ್ರನು 'ರಾಜಾವಳೀ ಕಥೆ' ಎಂಬ ಕೃತಿಯನ್ನು ರಚಿಸಿದ, ಇದಲ್ಲದೆ ಮುಂದೆ ಮೈಸೂರು ಸಂಸ್ಥಾನದ ಇತಿಹಾಸವನ್ನು ಅನೇಕರು ರಚಿಸಿದ್ದಾರೆ. ಹೀಗೆ ಇತಿಹಾಸವನ್ನು ರಚಿಸುವಾಗ ಗದ್ಯ ಮತ್ತು ಈ ಎಲ್ಲಾ ಆಧಾರಗಳನ್ನು ಬಳಸಿಕೊಂಡು ಇತಿಹಾಸ ಲೇಖಕರು ಇತಿಹಾಸವನ್ನು ರಚಿಸಿರುತ್ತಾರೆ. ಹೀಗೆ ರಚಿಸುವಾಗ ಕೆಲವು ಇತಿಹಾಸಕಾರರು ಮೂಲ ಇತಿಹಾಸದ ಆಕರಗಳ ಅನುವಾದವನ್ನು ಬಳಸಿ ಇತಿಹಾಸ ರಚನೆ ಮಾಡಿರುತ್ತಾರೆ.

---

ನಂ. ೩೫/೧, ೨೦ 'ಎ' ಮುಖ್ಯರಸ್ತೆ, ವೆಂಕಟೇಶ್ವರ ಲೇಔಟ್, ಬಿ.ಟಿ.ಎಂ.೧ನೆ ಹಂತ, ಬೆಂಗಳೂರು-೫೬೦೦೬೮

ಇತ್ತೀಚಿನವರೆಗೆ ನಡೆಸಿರುವ ಹೆಚ್ಚಿನ ಶೋಧನೆಗಳಿಂದ ಹೊಸ ಶಾಸನಗಳು, ಕಾಗದ ಪತ್ರ, ಕೈಫಿಯತ್ತುಗಳು, ಸನ್ನದುಗಳು ದೊರೆತಿದ್ದು, ಇತಿಹಾಸದ ಪುನರಾಚನೆಯಲ್ಲಿ ಮಹತ್ವದ ಪಾತ್ರವನ್ನು ಇವು ವಹಿಸಿದೆ. ಜೊತೆಗೆ ಅನೇಕ ಕುತೂಹಲಕಾರಿಯಾದ ವಿವರಗಳು ಹೊರಬರುತ್ತಿವೆ.

ಮೌರ್ಯರ ರಾಜ ಅಶೋಕ ಚಕ್ರವರ್ತಿಯ ಆಳ್ವಿಕೆಗೆ ಕರ್ನಾಟಕದ ಬಹುಭಾಗ ಸೇರಿತ್ತು. ೧೯೧೫ ರವರೆಗೆ ದೊರೆತಿದ್ದ, ಈ ಅರಸನ ಎಲ್ಲಾ ಶಾಸನಗಳು ಇವನನ್ನು ದೇವಾನಂ ಪಿಯ ಪಿಯದಸಿ (ದೇವಾನಂ ಪ್ರಿಯ ಪ್ರಿಯದರ್ಶಿ) ಎಂದೇ ಕರೆದಿದ್ದು. ೧೯೧೫ ರಲ್ಲಿ ಪತ್ತೆಯಾದ ಮಸ್ಕಿ ಶಾಸನದ ಮೂಲಕ ಇವನೇ ಅಶೋಕನೂ ಹೌದು ಎಂಬ ತೀರ್ಮಾನಕ್ಕೆ ವಿದ್ವಾಂಸರು ಬಂದರು. ಮುಂದೆ ಇವನ ಹೆಸರುಳ್ಳ ಶಾಸನ ಮಧ್ಯಪ್ರದೇಶದ ಗುಜರ್ರಾ ಎಂಬಲ್ಲಿಯೂ ದೊರೆತಿದ್ದು, ಈ ಹೇಳಿಕೆಯನ್ನು ಗಟ್ಟಿಗೊಳಿಸಿತು. ಇತ್ತೀಚೆಗೆ, ಅಂದರೆ ೧೯೭೦ ರ ದಶಕದಿಂದೀಚೆಗೆ, ಕರ್ನಾಟಕದ ಸಿರಗುಪ್ಪ ತಾಲೂಕಿನ ಉಡೆಗೊಳ ಮತ್ತು ನಿಟ್ಟೂರು ಗ್ರಾಮಗಳಲ್ಲಿ ದೊರೆತ ಶಾಸನಗಳಲ್ಲೂ ಅಶೋಕನ ಹೆಸರೇ ಪ್ರಧಾನವಾಗಿ ಉಲ್ಲೇಖವಾಗಿದೆ. ಅಶೋಕನ ಶಾಸನಗಳ ಹುಟ್ಟು ಬಂಡೆಗಳ ಮೇಲೆ ಬರೆದಿದ್ದರೆ ಸನ್ನತಿಯ ಶಾಸನವನ್ನು ಚಪ್ಪಡಿಯ ಎರಡೂ ಕಡೆಗಳಲ್ಲಿ ಬರೆಯಲಾಗಿದೆ. ಈ ಶಾಸನವನ್ನು ಸನ್ನತಿಯಲ್ಲಿ ದೇವಿಮಂದಿರದ ದೇವಿಪೀಠಕ್ಕೆ ಬಳಸಿಕೊಳ್ಳುವಾಗ ಅಲ್ಲಲ್ಲಿ ಅದನ್ನು ಕೆತ್ತಲಾಗಿದೆ. ಆದರೂ ಶಾಸನ ಪಾಠ ಅಲ್ಲಲ್ಲಿ ಉಳಿದು ಬಂದಿದೆ. ಇದುವರೆವಿಗೆ ಅಶೋಕನ ಲಘು ಶಿಲಾಶಾಸನಗಳು ಮಾತ್ರ ಕರ್ನಾಟಕದಲ್ಲಿ ದೊರೆತಿದ್ದವು. ಈ ಶಾಸನ ದೊರೆತ ಮೇಲೆ ಅಶೋಕನ ಶಿಲಾಶಾಸನ ಮಾಲಿಕೆಯ ಶಾಸನದ ಮಾಲಿಕೆಯಲ್ಲಿ ಇದು ಸೇರ್ಪಡೆಗೊಂಡಿತು.

ಚಕ್ರವರ್ತಿ ಅಶೋಕನ ಬಗ್ಗೆ ಇಷ್ಟೇ ದೊರೆತಿದ್ದರೆ, ಅಂತಹ ಹೆಚ್ಚುಗಾರಿಕೆಯೇನೂ ಇರುತ್ತಿರಲಿಲ್ಲ. ಸನ್ನತಿಯಲ್ಲಿ ಉತ್ಖನನ ಮಾಡುವಾಗ ದೊರೆತಿರುವ ಶಿಲ್ಪವೊಂದು ಅಶೋಕನಿಗೂ ಈ ಪ್ರದೇಶಕ್ಕೂ ಇದ್ದ ಗಾಢ ಸಂಬಂಧದ ಮೇಲೆ ಬೆಳಕು ಚೆಲ್ಲುತ್ತದೆ. ಇಡೀ ಭರತಖಂಡದಲ್ಲಿ ಅಶೋಕನ ಶಿಲ್ಪ ದೊರೆತಿಲ್ಲ. ಆದರೆ ಸನ್ನತಿಯಲ್ಲಿ ಅವನ ಹೆಸರನ್ನು ಸೂಚಿಸುವ ಶಿಲ್ಪ ದೊರೆತಿದ್ದು ಅದರಲ್ಲಿ 'ರಾಜಾ ಅಸೋಕ, ಅಸೋಕೋ ರಾಜ' ಎಂಬ ಒಕ್ಕಣೆಯಿದೆ. ಇದು ಅಶೋಕನು ಚಕ್ರವರ್ತಿಯಾಗುವ ಮೊದಲು ಈ ಪ್ರದೇಶದಲ್ಲಿದ್ದಿರಬಹುದೆಂದು ಊಹಿಸಲು ದಾರಿಮಾಡಿ ಕೊಟ್ಟಿದೆ. ಇವು ಮೌರ್ಯ ಇತಿಹಾಸಕ್ಕೆ ಕರ್ನಾಟಕ ನೀಡಿದ ಮಹತ್ವದ ಶೋಧನೆಗಳೆಂದರೆ ತಪ್ಪಾಗಲಾರದು.

ಇದಲ್ಲದೆ. ಕರ್ನಾಟಕದಲ್ಲಿ ಅಶೋಕನ ಶಾಸನಗಳು ದೊರೆತಿರುವ ಭೌಗೋಳಿಕ ಪ್ರದೇಶಗಳನ್ನು ಗಮನಿಸಿದಲ್ಲಿ, ಅವು ಸನ್ನತಿಯಿಂದ ಆರಂಭವಾಗಿ ಮಸ್ಕಿ–ಉಡೆಗೊಳ–ನಿಟ್ಟೂರು–ಬ್ರಹ್ಮಗಿರಿ ಕಡೆಗೆ ಒಂದು ಶಾಖೆ ಬಂದರೆ, ಇನ್ನೊಂದು ಶಾಖೆ ಸನ್ನತಿ–ಮಸ್ಕಿ–ಕೊಪ್ಪಳದ ಕಡೆಗೆ ಹೊರಟಿರುವುದು ತಿಳಿಯುತ್ತದೆ. ಬ್ರಹ್ಮಗಿರಿ ಕಡೆಗೆ ಬಂದ ಬೌದ್ಧ ಧರ್ಮದ ಮುಂದುವರಿದ ಶಾಖೆಯೇ ರಾಜಘಟ್ಟದಲ್ಲಿ ಮುಂದುವರಿದಿರಬೇಕು. ಹೀಗಾಗಿ ರಾಜಘಟ್ಟದ ಉತ್ಖನನದಲ್ಲಿ ದೊರೆತಿರುವ ಬೌದ್ಧಾವಶೇಷಗಳಿಗೂ ೭ನೆಯ ಶತಮಾನದಲ್ಲಿ ಕರ್ನಾಟಕದಲ್ಲಿದ್ದಿರಬಹುದಾದ ಬೌದ್ಧಧರ್ಮಕ್ಕೂ ಇದ್ದಿರಬಹುದಾದ ಸಂಬಂಧಗಳನ್ನು ಹುಡುಕಬೇಕಾಗಿದೆ. ಸನ್ನತಿ ಉತ್ಖನವು ಶಾತವಾಹನ ಅರಸರ ಮೇಲೆಯೂ ಹೊಸ ಬೆಳಕನ್ನು ಚೆಲ್ಲುತ್ತಿದ್ದು. ಶಾತವಾಹನರ ಪ್ರಮುಖ ನೆಲೆಯಾಗಿ ಈ ಪ್ರದೇಶವಿತ್ತೆಂಬ ಅಂಶ ವಿದಿತವಾಗುತ್ತದೆ. ಇದರೊಂದಿಗೆ ಕ್ರಿ.ಶ. ಎರಡನೆಯ ಶತಮಾನದ ಸಂಸ್ಕೃತ ಶಾಸನವೊಂದು ಇಲ್ಲಿ ದೊರೆತಿದ್ದು. ವೈದಿಕ ಸಂಸ್ಕೃತಿಯ ಪ್ರವೇಶ ಈ ವೇಳೆಗೆ ಈ ಪ್ರದೇಶದ ಮೇಲೆ ಆಗಲು ಪ್ರಾರಂಭವಾಗಿತ್ತೆಂಬ ಅಂಶ ತಿಳಿಯುತ್ತದೆ.

ಕದಂಬರ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಅನೇಕ ತಾಮ್ರ ಶಾಸನಗಳು ಇತ್ತೀಚೆಗೆ ದೊರೆತಿವೆ. ಕಾಕುಸ್ಥವರ್ಮನ ನಂತರ ಕದಂಬ ಅರಸರ ಮಧ್ಯೆ ಜಗಳಗಳು ನಡೆದಿರುವ ಸಾಧ್ಯತೆಗಳಿವೆ. ಹೀಗಾಗಿ ಇವರ ವಂಶಾವಳಿಯನ್ನು ಪುನಾರಚಿಸುವ ಅಗತ್ಯ ಈಗ ಕಾಣಿಸಿದೆ. ಕರ್ನಾಟಕದ ಬೇರೆ ಬೇರೆ ಕಡೆ ದೊರೆತಿರುವ ಶಾಸನಗಳಿಂದ ಪುಳಿಂದವರ್ಮ, ಪ್ರಿಯವ್ರತವರ್ಮ ಮೊದಲಾದ ಹೆಸರುಗಳು ಶಾಸನಗಳಲ್ಲಿ ಉಲ್ಲೇಖಗೊಂಡಿದ್ದು. ಈ ವಂಶಾವಳಿಯನ್ನು ಪುನಃ ತಿದ್ದಬೇಕಾದ ಅವಶ್ಯಕತೆ ಕಂಡು ಬಂದಿದೆ.

ನರ್ಮದೆಯ ದಕ್ಷಿಣದಲ್ಲಿ ಆಳ್ವಿಕೆ ನಡೆಸಿದ ವಾಕಾಟಕರ ಆಳ್ವಿಕೆಗೆ ಕರ್ನಾಟಕ ಒಳಪಟ್ಟಿತ್ತೆ ಇಲ್ಲವೆ ಎಂಬ ಜಿಜ್ಞಾಸೆಯಿತ್ತು. ಇತ್ತೀಚೆಗೆ ಬೀದರ್‌ನಲ್ಲಿ ದೊರೆತ ವಾಕಾಟಕರ ಶಾಸನವು, ವಾಕಾಟಕರ ರಾಜ್ಯ ಬೀದರ್ ಜಿಲ್ಲೆಯನ್ನು ಒಳಗೊಂಡಿತ್ತೆಂಬ ಅಂಶವನ್ನು ತಿಳಿಸುತ್ತದೆ. ವಾಕಾಟಕ ಅರಸ ದೇವಸೇನನನ್ನು ಈ ಶಾಸನವು ಹೆಸರಿಸುತ್ತದೆ.

ಕೊಪ್ಪಳದಲ್ಲಿ ಇತ್ತೀಚೆಗೆ ಅಂದರೆ ೮೦ರ ದಶಕದಲ್ಲಿ ಅನೇಕ ಶಾಸನಗಳು ದೊರೆತಿವೆ. ಇವೆಲ್ಲಾ ನಿಸಿಧಿ ಶಾಸನಗಳಾಗಿವೆ. ಬರೀ ನಿಸಿಧಿ ಶಾಸನಗಳಾಗಿದ್ದರೆ ಉಪೇಕ್ಷಿಸಬಹುದಿತ್ತು. ಈ ಶಾಸನಗಳು ಗಂಗ ಮತ್ತು ರಾಷ್ಟ್ರಕೂಟ ವಂಶದ ಬಹಳಷ್ಟು ರಾಣಿಯರು, ಇತರ ದಾರ್ಶನಿಕರು, ನಿಸಿಧಿಯಿಂದ ದೇಹತ್ಯಾಗ ಮಾಡಿದ ವಿಷಯವನ್ನು ತಿಳಿಸುತ್ತವೆ. ಈ ನಿಸಿಧಿ ಶಾಸನಗಳಿಂದ ಗಂಗರ ಅಂತ್ಯ ಕಾಲದ ವಂಶಾವಳಿಯನ್ನು ತಿದ್ದುಪಡಿ ಮಾಡಬಹುದಾಗಿದೆ. ಗಂಗರ ಇಮ್ಮಡಿ ಬೂತುಗನಿಗೆ ಮರುಳ, ಕುಂದಣಸಾನಿ ಮತ್ತು ಇಮ್ಮಡಿ ಮಾರಸಿಂಹರು ಮಕ್ಕಳೆಂದು ಗುರುತಿಸಲಾಗಿತ್ತು. ಆದರೆ ಈ ಕೊಪ್ಪಳದ ಶಾಸನಗಳಿಂದ ಈ ಬೂತುಗನಿಗೆ ಒಂಬತ್ತು ಜನ ಮಕ್ಕಳೆಂದು ತಿಳಿದು ಬಂದಿದೆ. ಅವರು ೧. ಮರುಳದೇವ (ಅರು ಮೊಳಿದೇವ) ೨. ಕುಂದಣಸಾಮಿ ೩. ಬಿಜ್ಜಬ್ಬರಸಿ ೪. ಜೆಜ್ಜಬ್ಬರಸಿ ೫. ಇಮ್ಮಡಿಮಾರಸಿಂಹ ೬. ಚನ್ದಿಬ್ಬರಸಿ ೭. ನಾಲ್ಕನೆಯ ರಾಚಮಲ್ಲ ೮. ನೀತಿಮಾರ್ಗ ಗೋವಿಂದ ೯. ವಾಸವ(ಬಾಸ)

ವಾಸವನಿಗೆ ಗೋಯಿಂದರ, ರಂಬಲದೇವಿ, ನೀತಿಮಾರ್ಗ ಎಂಬ ಮಕ್ಕಳಿದ್ದಂತೆಯೂ ಕೊನೆಯ ನೀತಿಮಾರ್ಗನಿಗೆ ಚಟ್ಟಲದೇವಿ, ಕಂಬಲದೇವಿ, ರಾಜವಿದ್ಯಾಧರ ಎಂಬ ಮಕ್ಕಳಿದ್ದಂತೆ ತಿಳಿಯುತ್ತದೆ. ಈ ವಂಶಾವಳೀ ವಿವರಗಳನ್ನು ಹುಂಚದ ಶಾಸನವು ಸ್ಥಿರೀಕರಿಸುತ್ತದೆ. ಯಶಸ್ತಿಲಕ ಚಂಪೂ ಎಂಬ ಪ್ರಸಿದ್ಧ ಜೈನ ಕಾವ್ಯವನ್ನು ಬರೆದ, ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಕಾಲದಲ್ಲಿದ್ದ ಸೋಮದೇವ ಸೂರಿಯು ಇದೇ ಕೊಪ್ಪಳದಲ್ಲಿ ವ್ರತದಿಂದ ಸತ್ತಂತೆ ತಿಳಿಯುತ್ತದೆ., ಹೀಗೆ ರಾಜ್ಯ ಕಳೆದುಕೊಂಡ ಗಂಗ–ರಾಷ್ಟ್ರಕೂಟ ರಾಣಿಯರು ಹಾಗೂ ರಾಜಕುಮಾರಿಯರು ಪಟ್ಟ ದಾರುಣ ಮಾನಸಿಕ ಯಾತನೆಯನ್ನು ಈ ಶಾಸನಗಳ ಮೂಲಕ ಊಹಿಸಬಹುದಾಗಿದೆ.

ಗಂಗ ಬೂತುಗನಿಗೆ ಸಂಬಂಧಿಸಿದ ಇನ್ನೊಂದು ಶಾಸನವು ಇತ್ತೀಚೆಗೆ ಕೊಪ್ಪಳ ಜಿಲ್ಲೆಯ ಇಟಗಿಯಲ್ಲಿ ದೊರೆತಿದ್ದು, ಹೊಸ ವಿಷಯವೊಂದನ್ನು ಹೊರಚೆಲ್ಲುತ್ತಿದೆ. ಅದೆಂದರೆ ಮದ್ದೂರು ತಾಲೂಕಿನ ಆತಕೂರು ಶಾಸನದ ಪ್ರಕಾರ ಗಂಗ ಬೂತುಗನಿಗೆ ತಕ್ಕೋಲಂ ಯುದ್ಧವಾದ ಮೇಲೆ ಅಂದರೆ ಕ್ರಿ.ಶ. ೯೪೮ರಲ್ಲಿ, ಬೆಳ್ವೊಲ–೩೦೦, ಹುಲಿಗೆರೆ ೩೦೦, ಕಿಸುಕಾಡು ೭೦ ಮೊದಲಾದ ಪ್ರದೇಶಗಳನ್ನು ಯುದ್ಧದಲ್ಲಿ ಗೆದ್ದ ಕಾರಣಕ್ಕೆ ನೀಡಿದಂತೆ ತಿಳಿಸುತ್ತದೆ. ಆದರೆ ಇಟಗಿಯ ಶಾಸನದ ಪ್ರಕಾರ ಈ ಬಳುವಳಿಯನ್ನು ರಾಷ್ಟ್ರಕೂಟ ಮುಮ್ಮಡಿ ಕೃಷ್ಣನು ತನ್ನ ತಂಗಿ ರೇವಕ ಇಮ್ಮಡಿಯನ್ನು ಬೂತುಗನಿಗೆ ನೀಡಿ ವಿವಾಹ ಮಾಡಿದ ಕಾರಣಕ್ಕೆ ಕೊಟ್ಟಂತೆ ತಿಳಿಸುತ್ತದೆ. ಕ್ರಿ.ಶ. ೯೩೯ಕ್ಕೆ ಗಂಗರಸರು ಉತ್ತರ ಕರ್ನಾಟಕದ ಭಾಗಗಳನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದಂತೆ ತಿಳಿಯುತ್ತದೆ.

ಕರ್ನಾಟಕ ಸಾಂಸ್ಕೃತಿಕ ಇತಿಹಾಸ ಬಲ್ಲವರಿಗೆಲ್ಲಾ ಕುಮಾರ ರಾಮನ ಬಗ್ಗೆ ತಿಳಿದೇ ಇದೆ. ಇವನಿಗೆ ಪರನಾರೀ ಸೋದರ ಎಂಬ ಬಿರುದು ಇತ್ತು. ಆದರೆ ಅವನ ಪರಧರ್ಮ ದ್ವೇಷದ ಬಗ್ಗೆ ನಮಗೆ ತಿಳಿದಿರಲಿಲ್ಲ. ಕೈಫಿಯತ್ತು ಒಂದರಲ್ಲಿ ಕುಮಾರ ರಾಮನು ಕಮ್ಮಟ ದುರ್ಗವನ್ನು ರಾಜಧಾನಿಯಾಗಿ ಮಾಡಿಕೊಳ್ಳಬೇಕೆಂದು ಬಯಸಿ ಕಮ್ಮಟದುರ್ಗಕ್ಕೆ ಬರುತ್ತಾನೆ. ಆಗಲೇ ಅಲ್ಲಿ ಜೈನರ ವಸತಿಯಿರುತ್ತದೆ. ಜೈನರು ಅಭ್ಯಾಗತರಾಗಿ ಬಂದ ಕುಮಾರರಾಮ ಮತ್ತು ಅವನ ಪರಿವಾರಕ್ಕೆ ಊಟೋಪಚಾರಗಳನ್ನು ಮಾಡಿಸುತ್ತಾರೆ. ಅವರೆಲ್ಲಾ ಹೋದ ಮೇಲೆ ಅವರು ಊಟ ಮಾಡಿದ ಸ್ಥಳವನ್ನು ಶುದ್ಧಿಮಾಡಿದರು. ಈ ವಿಷಯ ಗೊತ್ತಾದ ಕೂಡಲೇ ಕುಮಾರ ರಾಮನಿಗೆ ಜೈನರ ಮೇಲೆ ಸಿಟ್ಟು ಬರುತ್ತದೆ. ಮಾರನೆಯ ದಿನ ಬಸದಿಯ ಮುಂದೆ ಕುರಿ–ಕೋಣಗಳ ಬಲಿ ನೀಡಿ ತಮ್ಮ ಸಿಟ್ಟನ್ನು ಕಡಿಮೆ ಮಾಡಿಕೊಳ್ಳತ್ತಾನೆ. ಈ ಘಟನೆಗೆ ಪೂರಕವೆಂಬಂತೆ ಯಲ್ಬುರ್ಗದ ಶಾಸನವೊಂದು ಹೊಸಮಾಹಿತಿ ನೀಡುತ್ತದೆ. ಶಾಸನವು ಮುಮ್ಮಡಿಸಿಂಘನ ಬಾಧೆಯಿಂದ ಯರಂಬರಿಗೆಯಲ್ಲಿ ಜೈನಧರ್ಮ ಕೆಟ್ಟಿತ್ತೆಂಬ ಸಂಗತಿ ತಿಳಿಸುತ್ತದೆ. ಹೀಗಾಗಿ ಕುಮ್ಮಟದ ಅರಸರು ಜೈನಧರ್ಮದ ವಿರೋಧಿಗಳಾಗಿದ್ದರು ಎಂಬುದನ್ನೂ ತಿಳಿಸುತ್ತದೆ.

ಶಿವಾಜಿ ಹಂಪೆಗೆ ಬಂದು ಹಂಪೆಯ ಪಾಳು ಗುಡಿಗಳನ್ನು ಕಟ್ಟಡಗಳನ್ನು ನೋಡಿ ಮರುಗಿದನೆಂದು ಕೆಲವು ದಾಖಲೆಗಳು ತಿಳಿಸುತ್ತವೆ. ಇದಕ್ಕೆ ಆಧಾರವಾಗಿ ಆನೆಗೊಂದಿಯಲ್ಲಿ ಅರಸರ ಬಳಿಯಿದ್ದ ಬೆಳ್ಳಿ ತಗಡಿನ ಶಾಸನವೊಂದು ಶಿವಾಜಿಯು ಹಂಪೆಗೆ ಬಂದಿದ್ದ ಸಂಗತಿಯನ್ನು ತಿಳಿಸುವುದರ ಜೊತೆಗೆ ಆನೆಗೊಂದಿಯ ಅಂದಿನ ರಾಣಿಯು ವಿಜಯನಗರದ ವಂಶದವರಾದ ತಮಗೆ ಜೀವನಾರ್ಥವಾಗಿ ಸ್ವಲ್ಪ ರಾಜ್ಯ ಕೊಡುವಂತೆ ವಿನಂತಿಸಿದಾಗ ಅವರಿಗೆ ಒಂಬತ್ತು ಸಮ್ಮತುಗಳನ್ನು ನೀಡಿದ್ದನ್ನು ಉಲ್ಲೇಖಿಸುತ್ತದೆ. ಇದು ಶಿವಾಜಿ ಹಂಪೆಗೆ ಬಂದಿದ್ದನ್ನು ಸ್ಥಿರೀಕರಿಸುತ್ತದೆ ಹಾಗೂ ಈ ಪ್ರದೇಶ ಕೆಲವು ಕಾಲ ಅವನ ಅಧೀನದಲ್ಲಿದ್ದಿದ್ದನ್ನು ತಿಳಿಸುತ್ತದೆ.

ಇತ್ತೀಚೆಗೆ ಕೊಪ್ಪಳ ತಾಲೂಕಿನ ಕಾತರಕಿ–ಗುಡ್ಡಾನೂರಿನಲ್ಲಿ ದೊರೆತಿರುವ ಶಾಸನವು ಅತ್ತಿಮಬ್ಬೆಯ ಸಾಂಸಾರಿಕ ಜೀವನದ ಬಗ್ಗೆ ಕೆಲವು ಸಂಗತಿಗಳನ್ನು ಹೊರಗೆಡಹುತ್ತದೆ. ಇದಕ್ಕೆ ಮೊದಲು ದೊರೆತಿದ್ದ ಶಾಸನ ಹಾಗೂ ಕಾವ್ಯಗಳು ಅತ್ತಿಮಬ್ಬೆಯ ವೈಧವ್ಯ ಮತ್ತು ನಂತರದ ಆತ್ಮ ಸಮರ್ಪಣ ಭಾವವನ್ನು ತಿಳಿಸಿದರೆ, ಗುಡ್ಡಾನೂರು ಶಾಸನವು ಆಕೆಯ ಜೀವನದ ತಿರುವಿನ ಕಾಲಕ್ಕೆ ಸಂಬಂಧಿಸಿದುದಾಗಿದೆ. ತನ್ನ ಗಂಡ ನಾಗದೇವ ಸತ್ತಾಗ ಅತ್ತಿಮಬ್ಬೆ ಗುಡ್ಡಾನೂರಿನಲ್ಲಿ ನಾಗೇಶ್ವರದೇವಾಲಯವನ್ನು ಕಟ್ಟಿಸಿದಳಂತೆ, ಇದನ್ನು ಆತನ ಪರೋಕ್ಷ ವಿನಯಾರ್ಥವಾಗಿ ನಿರ್ಮಿಸಿದಳಂತೆ. ಆಗ ತನ್ನ ಮಗ ಪಡೆವಳ ತೈಲನೂ ಜೊತೆಯಲ್ಲಿದ್ದ. ಇವೆಲ್ಲಕ್ಕಿಂತ ಮುಖ್ಯವಾಗಿ ಈಕೆ ತನ್ನನ್ನು ಬ್ರಹ್ಮಕ್ಷತ್ರಿಯ ವಂಶದವಳೆಂದು ಹೇಳಿಕೊಂಡಿರುವುದು. ಇದೇ ಕಾರಣಕ್ಕೆ ಈಕೆ ಲಕ್ಕುಂಡಿಯಲ್ಲಿ ಕಟ್ಟಿಸಿದ ಬಸದಿಗೆ ಬ್ರಹ್ಮ ಜಿನಾ ದೇವಾಲಯವೆಂದು ಕರದದ್ದು.; ಬೇರೆಯಾವಕಾರಣಕ್ಕೂ ಅಲ್ಲ. ಜೈನಶ್ರಾವಕಿಯಾಗಿ ಜೈನಧರ್ಮಕ್ಕೆ ತನ್ನನ್ನು ಸಮರ್ಪಿಸಿಕೊಂಡಿದ್ದರೂ ಅತ್ತಿಮಬ್ಬೆಗೆ ತನ್ನ ಪೂರ್ವಕುಲದ ಬಗೆಗಿನ ಹೆಮ್ಮೆ ಕಡಿಮೆಯಾಗಿರಲಿಲ್ಲ. ಇನ್ನೊಂದು ಮುಖ್ಯ ವಿಷಯವೆಂದರೆ ಶಾಸನದಲ್ಲಿ ಈಕೆಯ ಹೆಸರನ್ನು ಸ್ಪಷ್ಟವಾಗಿ ಅತ್ತಯಬ್ಬೆ ಎಂದೇ ಕರೆಯಲಾಗಿದೆ. ಹೀಗಾಗಿ ವೈದಿಕನಾಗಿದ್ದ, ನಾಗದೇವ ಹಾಗೂ ಜೈನಳಾಗಿದ್ದ ಅತ್ತಯಬ್ಬೆ ಇವರಿಬ್ಬರ ಜೀವನ ಸಾಮರಸ್ಯದಲ್ಲಿ ಧರ್ಮ ಅಡ್ಡಿ ಬರಲೇಇಲ್ಲ.

ಇದೇ ಕೊಪ್ಪಳ ಜಿಲ್ಲೆಯ ಕವಲೂರು ಶಾಸನವೊಂದರಲ್ಲಿ ಶಾಂತಿಕಬ್ಬೆಯೆಂಬುವವಳ ಉಲ್ಲೇಖ ಬರುತ್ತದೆ. ಈ ಶಾಂತಿಕಬ್ಬೆ ಮತ್ತು ಈಕೆಯ ಪತಿ ಬ್ರಾಹ್ಮಣ ದಂಡಾಧಿಕಾರಿಯಾಗಿದ್ದು, ಕಾತಿ ಯುದ್ಧ ರಂಗದಲ್ಲಿ ಮಡಿದಾಗ ಶಾಂತಿಕಬ್ಬೆ ಏಕಾಂಗಿಯಾಗುತ್ತಾಳೆ. ಈಕೆ ಧೃತಿಗೆಡದೆ ತನ್ನ ಗಳಿಕೆಯ ಸಂಪತ್ತನ್ನು ದೇವಾಲಯ ರಚನೆಯಂತಹ ಕಾರ್ಯಕ್ಕೆ ಸದ್ವಿನಿಯೋಗಿಸಿದಂತೆ ಶಾಸನ ತಿಳಿಸುತ್ತದೆ.

ನೊಳಂಬರ ಶಾಸನಗಳಲ್ಲಿ ಕರವಿಡಿ ೩೦ ಎಂಬ ನಾಡಿನ ಉಲ್ಲೇಖ ಬರುತ್ತದೆ. ಈ ಪ್ರದೇಶವಾಜಿಯನ್ನು ಗುರುತಿಸುವುದು ಕಷ್ಟವಾಗಿತ್ತು. ಇತ್ತೀಚಿನ ದೊರೆತ ಕೆಲವು ಶಾಸನಗಳ ಉಲ್ಲೇಖದಿಂದ ಇದನ್ನು ಇಂದಿನ ಹುನಗುಂದ ತಾಲೂಕಿನ ಕರಡಿ ಗ್ರಾಮವೆಂದು ಗುರುತಿಸಲಾಗಿದೆ.

ವಲಸೆಯೆಂಬುದು ಮನುಷ್ಯ ತನ್ನ ಅನುಕೂಲಕ್ಕೆ ಅರಸಿಕೊಂಡು ಹೋಗುವ ಕ್ರಿಯೆ. ಇಂತಹ ವಲಸೆ ಅಕ್ಕ ಪಕ್ಕದ ರಾಜ್ಯಗಳಲ್ಲಾದಾಗ ವಿಶೇಷವೇನಿಲ್ಲ. ಆದರೆ ಬಹುದೂರದ ಪ್ರದೇಶಗಳಿಗೆ ವಲಸೆಗಳಾದಾಗ ಅಂತಹವು ಉಲ್ಲೇಖನೀಯವಾಗುತ್ತದೆ. ಕಾಶ್ಮೀರದಿಂದ ಕರ್ನಾಟಕಕ್ಕೆ ಅನೇಕ ಬ್ರಾಹ್ಮಣ ಕುಟುಂಬಗಳು ವಲಸೆ ಬಂದಿರುವುದನ್ನು ಇತ್ತೀಚಿನ ಅಧ್ಯಯನಗಳು ಎತ್ತಿತೋರಿಸಿವೆ. ಹಾಗೆ ವಲಸೆ ಬಂದವರು ತಾವು ನೆಲೆಸಿ ಸ್ಥಳವನ್ನು ತಮ್ಮ ಪೂರ್ವಿಕರ ದೇಶ ಕಾಶ್ಮೀರವೆಂಬಂತೆ ಭಾವಿಸಿರುವುದನ್ನು ಗಮನಿಸಬಹುದು. ಕಾಶ್ಮೀರಭೂಮಿ, ಕಾಶ್ಮೀರ ಮುಖಂಡನ ಎಂಬ ಶಾಸನೋಕ್ತ ಶಬ್ದಗಳು ಬಳಕೆಯಲ್ಲಿವೆ, ಕೆಲವು ಶಾಸನಗಳಲ್ಲಿ ಕಾಶ್ಮೀರದ ಯಾವ ಭಾಗದಿಂದ ವಲಸೆ ಬಂದಿದ್ದರೆಂಬ ಕುತೂಹಲಕಾರಿ ವಿಷಯ ತಿಳಿಯುತ್ತವೆ. ಹೀಗೆ ವಲಸೆ ಬಂದ ಅನೇಕರು ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡು ಇಲ್ಲಿನ ರಾಜ್ಯಾಡಳಿತದಲ್ಲಿ ಸೇವೆ ಸಲ್ಲಿಸಿದ್ದಾರೆ. ಪಶ್ಚಿಮ. ಬಂಗಾಳ ಹಾಗೂ ದಕ್ಷಿಣ ಕೋಸಲದಿಂದಲೂ ಬ್ರಾಹ್ಮಣೇತರರು ವಲಸೆ ಬಂದ ವಿವರಗಳು ಶಾಸನಗಳಲ್ಲಿ ದೊರೆಯುತ್ತವೆ. ಬಂಗಾಳ ದೇಶದ ತಡಾ ಗ್ರಾಮದಿಂದ ಕ್ರಿ.ಶ. ೯೬೮ರಲ್ಲಿ ಗದಾಧರನೆಂಬುವವನು ಬಂದು ಕುಡುತಿನಿಯಲ್ಲಿ ನೆಲೆನಿಂತು ಕಾರ್ತಿಕೇಯ ತಪೋವನದ ಅಧಿಕಾರಿಯಾಗಿದ್ದ ವಿಷಯ ತಿಳಿಯುತ್ತದೆ.

ಸಂಡೂರು ಹಾಗೂ ಬಳ್ಳಾರಿ ಪ್ರದೇಶದ ಶಾಸನಗಳು ಹಾಗೂ ಕಟ್ಟಡ ರಚನೆಗಳು ಈ ಬಗ್ಗೆ ಕುತೂಹಲದ ಬೆಳಕನ್ನು ಚೆಲ್ಲುತ್ತದೆ. ಅನೇಕ ಕನ್ನಡಸಂಧಿವಿಗ್ರಹಿಗಳು ಇಂತಹ ವಲಸಿಗರೇ ಆಗಿದ್ದಾರೆ. ಹೀಗೆ ವಲಸೆ ಬಂದವರು ತಮ್ಮ ಜೊತೆಯಲ್ಲಿ ತಮ್ಮ ಭಾಷೆ ಮತ್ತು ಲಿಪಿಯನ್ನು ತಂದಿದ್ದಾರೆ. ಬಾದಾಮಿಯ ಅನೇಕ ಶಿಲ್ಪಗಳ ಹೆಸರು ನಾಗರಿಲಿಪಿಯಲ್ಲಿವೆ. ಇದಲ್ಲದೆ ಅವರ ಕಾಲದ ರಚನೆಗಳ ಮಧ್ಯೆ ದೊರೆತಿರುವ ಅನೇಕ ಶಾಸನಗಳು ಸಂಸ್ಕೃತ ಮತ್ತು ನಾಗರಲಿಪಿಯಲ್ಲಿ ರಚನೆಯಾಗಿವೆ. ಉತ್ತರ ಭಾರತದಲ್ಲಿ ಬಳಕೆಯಲ್ಲಿದ್ದ ಶಂಖಲಿಪಿ ಶಾಸನಗಳು ಕರ್ನಾಟಕದಲ್ಲೂ ಕಂಡು ಬಂದಿರುವುದು. ಇಂತಹ ವಲಸಿಗರಿಂದ.

ಇನ್ನೊಂದು ಪ್ರಮುಖ ಉಲ್ಲೇಖ ಸಕಲೇಶಮಾದರಸನದು. ಇವನು ಹುಟ್ಟಿಬೆಳೆದ ಗ್ರಾಮವನ್ನು ಇತ್ತೀಚಿನ ಶಾಸನ ಶೋಧದಿಂದ ನಿಷ್ಕರ್ಶಿಸಬಹುದಾಗಿದೆ. ಇವನು ಈಗಿನ ರಾಯಚೂರು ಬಳಿಯ ಐಜದವನು. ಇವನಿಗೆ ಒಬ್ಬ ಮಗಳಿದ್ದು, ಆಕೆಯ ಹೆಸರು ಬೆಸವಲದೇವಿ ಎಂದು ಉಲ್ಲೇಖವಿದೆ. ಇವರು ಈಗಿನ ಮಾನ್ವಿ ತಾಲೂಕಿನ ಮಲ್ಲಟದಲ್ಲಿ ಮಾದೇಶ್ವರ ದೇವಾಲಯವನ್ನು ಕಟ್ಟಿಸಿ ಅದಕ್ಕೆ ದಾನ ನೀಡಿದ್ದಾರೆ. ಈ ಶಾಸನದ ಕಾಲ ಕ್ರಿ.ಶ. ೧೧೯೬.

ಕದಂಬರು ತಮ್ಮ ರಾಜ್ಯವು ಬನವಾಸಿಯಿಂದ ತಪ್ಪಿದ ಮೇಲೆ ಬೇರೆ ಬೇರೆ ಶಾಖೆಗಳನ್ನು ಹೊಂದಿ ೧೨-೧೩ನೆಯ ಶತಮಾನದವರೆಗೆ ಬೇರೆ ಬೇರೆ ಕಡೆಗಳಲ್ಲಿ ಆಳುತ್ತಾರೆ. ಬನವಾಸಿ, ಚಂದಾಪುರ, ಗೋವ, ಹಲಸಿ, ಕರಡಕಲ್, ಬಯಲ್ನಾಡು, ಬೇಲೂರು, ಹಾನಗಲ್ ಮುಂತಾದ ಕಡೆಗಳಲ್ಲಿ ಶಾಖೆಗಳಾಗಿ ರಾಜ್ಯಭಾರ ಮಾಡಿರುತ್ತಾರೆ. ಆದರೆ ಇತ್ತೀಚಿನ ಶಾಸನಗಳಿಂದ ಇವರು ಬಳ್ಳಾರಿ ಜಿಲ್ಲೆಯ ಕೊಟ್ಟೂರಿನಲ್ಲಿಯೂ ಒಂದು ಶಾಖೆಯನ್ನು ಹೊಂದಿದ್ದ ಸಂಗತಿ ತಿಳಿಯುತ್ತದೆ.

ಹೀಗೆ ಇತ್ತೀಚಿನ ಶಾಸನ, ಸಾಹಿತ್ಯದ ಅಧ್ಯಯನಗಳ ಶೋಧವು ಕರ್ನಾಟಕ ಇತಿಹಾಸಕ್ಕೆ ಹೊಸಬೆಳಕು ಚೆಲ್ಲಿರುವುದು ತಿಳಿಯುತ್ತದೆ.

****

# ಕನ್ನಡ ಲಿಪಿ ವಿಕಾಸ

* ಡಾ॥ ನಾ. ಗೀತಾಚಾರ್ಯ

**ಸಿಂಧೂಲಿಪಿ** : ಕನ್ನಡ ಭಾಷೆಗೆ ಕನಿಷ್ಠ ಐದು ಸಾವಿರ ವರ್ಷಗಳ ಇತಿಹಾಸವಿದೆ. ಭಾರತೀಯ ಭಾಷೆಗಳಲ್ಲಿ ಅತ್ಯಂತ ಪ್ರಾಚೀನ ಭಾಷಾ ವಂಶಗಳೆಂದರೆ ಆರ್ಯ ಮತ್ತು ದ್ರಾವಿಡಗಳು. ದ್ರಾವಿಡ ಭಾಷಾ ವಂಶದಲ್ಲೂ ಕನ್ನಡವೇ ಅತ್ಯಂತ ಪ್ರಾಚೀನ ಭಾಷೆಯೆನಿಸಿದೆ. ಐದು ಸಾವಿರ ವರ್ಷಗಳಿಗಿಂತಲೂ ಪ್ರಾಚೀನವೆನಿಸಿರುವ ರಾಮಾಯಣ, ಮಹಾಭಾರತಗಳಲ್ಲೇ ಕನ್ನಡ–ಕನ್ನಡಿಗ–ಕರ್ನಾಟಕದ ಉಲ್ಲೇಖಗಳು ದೊರಕುತ್ತವೆ. ಭಾರತದ ಅತ್ಯಂತ ಪ್ರಾಚೀನ ನಾಗರೀಕತೆಯಾದ ಸಿಂಧೂ ಕಣಿವೆಯ ನಾಗರೀಕತೆಯನ್ನು ರೂಪಿಸಿದವರು ದ್ರಾವಿಡರೆಂದೂ ಈ ದ್ರಾವಿಡರೇ ಭಾರತದ ಮೂಲ ನಿವಾಸಿಗಳೆಂದೂ ಆರ್ಯನ್ನರು ಪಶ್ಚಿಮದಿಂದ ವಲಸೆ ಬಂದವರೆಂದೂ ಅಭಿಪ್ರಾಯವಿದೆ. ಸಿಂಧೂ ಕಣಿವೆಯ ಹರಪ್ಪ–ಮೊಹೆಂಜೋದಾರೋ ಪಟ್ಟಣ ದ್ರಾವಿಡ ಸಂಸ್ಕೃತಿಯನ್ನೂ, ಲೋಥಲ್ ಪಟ್ಟಣ ಆರ್ಯ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆಂದು ವಿದ್ವಾಂಸರ ಮತ. ಈ ಸ್ಥಳಗಳಲ್ಲಿ ದೊರಕುವ ಮುದ್ರೆಗಳು ಧ್ವನಿಸಂಕೇತಗಳನ್ನು ಹೊಂದಿದ್ದ ಲಿಪಿ ಎಂದು ಗುರುತಿಸಿದ್ದಾರೆ. ಆದರೆ ಇವು ಯಾವ ಭಾಷೆಯ ಲಿಪಿ ಎಂದು ಈವರೆಗೂ ಕಂಡುಹಿಡಿಯಲಾಗಲಿಲ್ಲ. ಕೆಲವರು ಸಂಸ್ಕೃತ ಎಂದೂ ಇನ್ನೂ ಕೆಲವರು ಕನ್ನಡ ಮತ್ತು ತಮಿಳುಗಳ ಮೂಲ ಭಾಷೆಯಾದ ದ್ರಾವಿಡವೆಂದೂ ಹೇಳುತ್ತಾರೆ. ಆದರೆ ಯಾವುದೂ ಖಚಿತವಾಗಿಲ್ಲ. ಸಂಶೋಧನೆಗಳು ನಡೆಯುತ್ತಲೇ ಇವೆ. ಇದೇ ವೇಳೆ ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಕಂಡುಬಂದಿರುವ ಈಜಿಪ್ಟ್, ಗ್ರೀಕ್, ಸುಮೇರಿಯನ್, ಟೈಟನ್, ಚೈನೀಸ್ ಮುಂತಾದ ಪ್ರಾಚೀನ ಸಂಸ್ಕೃತಿಗಳ ಲಿಪಿಗಳಿಗೂ ಈ ಸಿಂಧೂ ಕಣಿವೆಯ ಲಿಪಿ ಹೋಲಿಕೆಯಾಗುತ್ತಿಲ್ಲ.

ಈ ಲಿಪಿ ಸಂಕೇತಗಳೇ ಭಾರತದ ಅತ್ಯಂತ ಪ್ರಾಚೀನ ಲಿಪಿಯ ದಾಖಲೆಯಾಗಿದೆ. ಭಾಷಾ ವಿಜ್ಞಾನಿಗಳ ಪ್ರಕಾರ ಇದು ಚಿತ್ರಲಿಪಿಯಾಗಿರುವಂತಿದೆ. ಚಿತ್ರಲಿಪಿಯು ಯಾವುದೇ ಭಾಷೆಯ ಪ್ರಾಚೀನ ಲಿಪಿ ಸ್ವರೂಪವಾಗಿರುತ್ತದೆ. ಮುಂದೆ ಈ ಚಿತ್ರಲಿಪಿಯೇ ಸುಧಾರಿಸಲ್ಪಟ್ಟು ಭಾವಲಿಪಿಯಾಗಿ ನಂತರ ಧ್ವನಿಲಿಪಿಯಾಗಿ ಬೆಳೆಯುತ್ತದೆ. ಸಿಂಧೂಲಿಪಿ ಈ ಪರಿವರ್ತನೆಯನ್ನು ಪಡೆದಿರುವುದರ ಬಗ್ಗೆ ದಾಖಲೆ ಇಲ್ಲ. ಆದರೂ ಪರಿವರ್ತನೆಯಾಗಿರುವ ಸಾಧ್ಯತೆಯಿದೆ. ನಮಗೆ ಸಿಗುವ ಪ್ರಾಚೀನ ಲಿಪಿ ದಾಖಲೆಯೆಂದರೆ ಸದ್ಯಕ್ಕೆ ಅಶೋಕನ ಕಾಲದ ಬ್ರಾಹ್ಮೀ ಲಿಪಿಯೇ. ಇದರ ಕಾಲ ಕ್ರಿ.ಪೂ. ೪–೩ನೇ ಶತಮಾನ. ಈ ಲಿಪಿಯಿಂದಲೇ ಭಾರತೀಯ ಭಾಷೆಯ ಎಲ್ಲಾ ಲಿಪಿಗಳೂ ರೂಪಾಂತರಗೊಂಡಿವೆ. ಅಷ್ಟೇ ಅಲ್ಲದೆ ವಿದೇಶೀ ಭಾಷೆಗಳಾದ ನೇಪಾಳಿ, ಸಿಂಹಳಿ, ಬಾಂಗ್ಲಾ, ಟಿಬೇಟ್, ಥೈಲ್ಯಾಂಡ್, ಕಾಂಬೋಡಿಯಾ, ಇಂಡೋನೇಷಿಯಾ ಮುಂತಾದ ಭಾಷೆಗಳೂ ಈ ಬ್ರಾಹ್ಮಿಯಿಂದಲೇ ಲಿಪಿಯನ್ನು ರೂಢಿಸಿಕೊಂಡಿವೆ.

**ಹಿಂದೂಸಂಸ್ಕೃತಿ** : ಅಶೋಕ ತನ್ನ ಧರ್ಮಶಾಸನಗಳನ್ನು ಭಾರತದಾದ್ಯಂತ ಹಾಕಿಸಲು ಬ್ರಾಹ್ಮೀ ಲಿಪಿಯನ್ನು ಬಳಸಿದ್ದಾನೆ. ಆ ವೇಳೆಗಾಗಲೇ ಸಂಸ್ಕೃತ ಮತ್ತು ದ್ರಾವಿಡ ಸಂಸ್ಕೃತಿಗಳು ಸ್ಪಷ್ಟವಾಗಿ ಬೇರೆಯಾಗಿ ನಂತರ ಪರಸ್ಪರ ಬೆರೆತು ಸಮಾವೇಶಗೊಂಡು ಸಮ್ಮಿಶ್ರ ಸಂಸ್ಕೃತಿಯ ಸಮಾಜವಾಗಿ ರೂಪಗೊಂಡಿತ್ತು. 'ಹಿಂದೂ ಸಂಸ್ಕೃತಿ' ಎಂದರೆ ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳ ಮಿಶ್ರ ಸಂಸ್ಕೃತಿಯೇ ಆಗಿದೆ. ವೇದ, ಉಪನಿಷತ್ತು, ರಾಮಾಯಣ, ಭಾಗವತ, ಭಾರತ ಗ್ರಂಥಗಳೆಲ್ಲ ಆ ವೇಳೆಗಾಗಲೇ ಈ ಹಿಂದೂ ಸಂಸ್ಕೃತಿಯನ್ನು ರೂಪಿಸಿದ್ದ ಪ್ರಮುಖ ಭಾರತೀಯ ಗ್ರಂಥಗಳಾಗಿದ್ದವು. ಈ ಗ್ರಂಥಗಳನ್ನು ಇತಿಹಾಸ ಮತ್ತು ಜನಾಂಗೀಯ ದೃಷ್ಟಿಯಿಂದ ಸೂಕ್ಷ್ಮವಾಗಿ ಅವಲೋಕನ ಮಾಡಿದರೆ ಈ ಎರಡೂ ಜನಾಂಗಗಳೂ ಒಂದಾಗಿ ಬೆರೆತ ಚಿತ್ರ ಗೋಚರವಾಗುತ್ತದೆ. ವೇದ–ಉಪನಿಷತ್ತುಗಳಲ್ಲಿ ಕೇವಲ ಇಂದ್ರ, ಅಗ್ನಿ, ವರುಣ, ವಾಯು ಮುಂತಾದ ದೇವತೆಗಳನ್ನು ಪ್ರಕೃತಿ ರೂಪದಲ್ಲಿ ಆರಾಧಿಸುತ್ತಿದ್ದುದನ್ನೂ ಯಜ್ಞ–ಯಾಗಾದಿಗಳ ರೂಪದ ಆರಾಧನೆಯನ್ನೂ ಕಾಣುತ್ತೇವೆ. ಇದು ಸಂಪೂರ್ಣವಾಗಿ ಆರ್ಯ ಸಂಸ್ಕೃತಿ. ಹಾಗೆಯೇ ಭಾಗವತದಲ್ಲಿ ವಿಷ್ಣು ಮತ್ತು ಶಿವ ಪೂಜೆಯ ಪ್ರಾಧಾನ್ಯತೆಯನ್ನು

---

* ಕನ್ನಡ ಪ್ರಾಧ್ಯಾಪಕರು, ನಂ. ೨೩/೨, ೫ನೇ ಕ್ರಾಸು, ಕೆಂಪೇಗೌಡ ನಗರ, ಬೆಂಗಳೂರು –೫೬೦೦೧೯. ಮೊ.: ೯೪೪೮೬೭೧೦೪೯

ನೋಡುತ್ತೇವೆ. ಭಾಗವತದಲ್ಲಿಯೇ ಇಂದಿನ ಪೂಜೆಯ ಸ್ವರೂಪದ ಸಂಸ್ಕೃತಿ ಕಂಡುಬರುವುದು. ಇದು ಸಂಪೂರ್ಣವಾಗಿ ದ್ರಾವಿಡ ಸಂಸ್ಕೃತಿ. ಕೃಷ್ಣನ ಗೋವರ್ಧನಗಿರಿಧಾರಣದ ಕಥೆ ದೇವತೆಗಳ ಪ್ರಾಬಲ್ಯವನ್ನು ತಗ್ಗಿಸಿ ಮಾನವರ ಸಾಮರ್ಥ್ಯವನ್ನು ಎತ್ತರಿಸುವ ಸಂಗತಿಯೇ ಆಗಿದೆ. 'ಪೂಜೆ' ಎಂಬ ಪದವೇ ದ್ರಾವಿಡ ಪದವಾಗಿದೆ. ಶಿವ, ವಿಷ್ಣು ಮತ್ತು ಆತನ ಅವತಾರಗಳ ಬಣ್ಣವು ಜನಾಂಗೀಯ ಸೂಚಕವೇ ಆಗಿದೆ. ಪೂ+ಚೆಯ್ ಎಂಬ ಎರಡು ದ್ರಾವಿಡ ಪದಗಳು ಸೇರಿ 'ಪೂಜೆ' ಆಗಿದೆ ಎಂದು ವಿದ್ವಾಂಸರ ಅಭಿಪ್ರಾಯ. ಹೂವನ್ನು ದೇವರಿಗೆ ಅರ್ಪಿಸುವುದೇ ಪೂಜೆಯ ಪ್ರಧಾನ ಕ್ರಿಯೆಯಾಗಿದೆ. ಹೀಗಾಗಿ ಪೂಜೆಯು ದ್ರಾವಿಡ ಸಂಸ್ಕೃತಿಯಾಗಿದ್ದು ಯಜ್ಞ-ಯಾಗಾದಿಗಳು ಆರ್ಯ ಸಂಸ್ಕೃತಿಯದ್ದಾಗಿವೆ. ಈ ಭಾಗವತದ ಕಾಲದಲ್ಲಿಯೇ ಶಿವಪುರಾಣ, ವಿಷ್ಣುಪುರಾಣಗಳು ಕಾಣಿಸಿಕೊಂಡು ತ್ರಿಮೂರ್ತಿಗಳ ಪ್ರಾಬಲ್ಯ ಬಂದಿದೆ. ವಿಷ್ಣು ಸ್ಥಿತಿಕರ್ತನಾದ್ದರಿಂದಲೇ ಅವತಾರಗಳಲ್ಲೂ ಕಾಣಿಸಿಕೊಂಡು ಕಾಲ ಕಾಲಕ್ಕೆ ಸಮಾಜದಲ್ಲಿ ಸಂಕಷ್ಟಗಳನ್ನು ದೂರಮಾಡಿ ದುಷ್ಟ ಶಿಕ್ಷಣ ಶಿಷ್ಟ ರಕ್ಷಣ ಕಾರ್ಯವನ್ನು ಮಾಡುತ್ತಾ ಬಂದಿದ್ದಾನೆ.

ಈ ಅವಧಿಯಲ್ಲೇ ರಾಮಾಯಣ ಕಾಣಿಸಿಕೊಂಡಿದ್ದು, ಇದರಲ್ಲಿ ರಾಮನನ್ನು ಆರ್ಯ ಸಂಸ್ಕೃತಿಯ ಪ್ರತೀಕವಾಗಿಯೂ ವಾಲಿ ಸುಗ್ರೀವರ ಬಳಗವನ್ನು ದ್ರಾವಿಡ ಸಂಸ್ಕೃತಿಯ ಪ್ರತೀಕವಾಗಿಯೂ ಗುರುತಿಸುವ ಪ್ರಯತ್ನಗಳು ನಡೆದಿವೆ. ಆದರೆ ಈ ವೇಳೆಗಾಗಲೇ ಎರಡೂ ಸಂಸ್ಕೃತಿಗಳು ಸಮ್ಮಿಶ್ರಗೊಂಡ ಹಿಂದೂ ಸಂಸ್ಕೃತಿ ರೂಪಗೊಂಡಿದ್ದರಿಂದ ಇದನ್ನು ಹೀಗೆ ಆರ್ಯ-ದ್ರಾವಿಡದಲ್ಲಿ ನೋಡಲಾಗದು. ಬದಲಿಗೆ ನಾಗರೀಕ ಮತ್ತು ಬುಡಕಟ್ಟು ಜನಾಂಗಗಳೆಂದೇ ಗುರುತಿಸಬೇಕಾಗುತ್ತದೆ. ನಂತರದ ಮಹಾಭಾರತದ ಕಾಲದಲ್ಲಿ ವರ್ಣಸಂಕರ ಸರ್ವೇಸಾಮಾನ್ಯವಾಗಿರುವುದನ್ನು ಗಮನಿಸಿದರೆ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯ ಮನವರಿಕೆಯಾಗುತ್ತದೆ. ಅಶೋಕನ ಬ್ರಾಹ್ಮಿಯ ಕಾಲಕ್ಕೆ ಈ ಎಲ್ಲ ಬೆಳವಣಿಗೆಗಳೂ ಆಗಿ ಹೋಗಿವೆ. ಮಹಾಭಾರತದ ನಂತರದ ರಾಜಮನೆತನದ ಆಳ್ವಿಕೆಯಲ್ಲಿ ಭಾರತ ಗುರುತಿಸಿಕೊಂಡಿವೆ. ಈ ಪ್ರಾಚೀನ ಕಾವ್ಯಗಳಿಂದ ಹೀಗೆ ಜನಾಂಗೀಯ ದೃಷ್ಟಿಯಿಂದ ಅಧ್ಯಯನ ಮಾಡಬಹುದಾಗಿದೆ. ಆದರೆ ಇದಕ್ಕೆ ಯಾವುದೇ ರೀತಿಯ ಐತಿಹಾಸಿಕ ದಾಖಲೆಗಳು ಇಲ್ಲ. ಪ್ರಾಯಶಃ ಹರಪ್ಪ ಸಂಸ್ಕೃತಿಯ ನಂತರದ ಬೆಳವಣಿಗೆ ಇದಾಗಿರಬಹುದು. ಹರಪ್ಪ ಕಾಲದ ಲಿಪಿಯ ಯಾವ ದಾಖಲೆಯೂ ಇತಿಹಾಸಕಾರರಿಗೆ ಮುಂದಿನ ದಿನಗಳಲ್ಲಿ ಲಭ್ಯವಾಗದಿರುವುದರಿಂದ ಇದು ಅಂಧಯುಗವಾಗಿದೆ. ಆದರೆ ಮೌಖಿಕವ್ವಾಗಿ ಈ ಕಾವ್ಯಗಳು ಸ್ವಲ್ಪವೂ ಲೋಪವಾಗದಂತೆ ಉಳಿದು ಬಂದಿರುವುದರಿಂದ ಕಾವ್ಯಗಳ ಹಿನ್ನಲೆಯಲ್ಲಿಯೇ ಆಧುನಿಕ ಚಿಂತನೆಯ ಅಧ್ಯಯನಗಳು ನಡೆಯಬೇಕಾಗಿವೆ.

ಅಶೋಕನ ಬ್ರಾಹ್ಮೀ ಲಿಪಿಯ ವೇಳೆಗೆ ಆಗಿಹೋಗಿರುವ ಈ ಭವ್ಯ ಇತಿಹಾಸವೆಲ್ಲ ಗ್ರಂಥಗಳಲ್ಲಾದರೂ ಲಭ್ಯವಾಗಿರುವುದು ಭಾರತೀಯರ ಪುಣ್ಯ. ಅದರಲ್ಲೂ ಮೌಖಿಕ ಪರಂಪರೆಯಲ್ಲಿ ಬಂದಿರುವುದು ವಿಶೇಷ. ಈ ಗ್ರಂಥಗಳು ಕೇವಲ ಆಶು ಕವಿತೆಗಳಾಗಿ ಬಾಯಿಂದ ಬಾಯಿಗೆ ಹರಿದು ಬಂದಿಲ್ಲ. ಬದಲಿಗೆ ಮೊದಲು ಬರವಣಿಗೆಯಲ್ಲಿದ್ದು ನಂತರ ಶಿಕ್ಷಣದ ಕ್ರಮವಾಗಿ ಮೌಖಿಕವಾಗಿ ಬಂದಿವೆ. ಈ ಬರವಣಿಗೆ ಪ್ರಾಯಶಃ ಅಶೋಕನ ಬ್ರಾಹ್ಮಿಗಿಂತಲೂ ಮೊದಲಿನ ಭಾರತೀಯ ಲಿಪಿಯೊಂದರಲ್ಲಿ ಆಗಿರಲೇಬೇಕು. ಅದು ಸಿಂಧೂ ಲಿಪಿಯೋ ಅಥವಾ ಇನ್ನೊಂದೋ ತಿಳಿಯದು. ಆದ್ದರಿಂದಲೇ ಈ ಕಾಲ ಅಂಧಕಾಲವಾಗಿದೆ.

**ಪ್ರಾಚೀನ 'ಕಲಿ' ಕ್ಯಾಲೆಂಡರ್** : ಆದರೆ ಪ್ರಪಂಚದಲ್ಲಿ ಯಾವ ಸಮಾಜಕ್ಕೂ ಇಲ್ಲದ ದೀರ್ಘ ಕಾಲದ ಪ್ರಾಚೀನ ಕ್ಯಾಲೆಂಡರ್ ಭಾರತಕ್ಕಿದೆ. ಅದೇ 'ಕಲಿ' ಕ್ಯಾಲೆಂಡರ್. ಇದರ ಇಂದಿನ ಎಣಿಕೆ ೫೧೧೦. ಅಂದರೆ ಇಷ್ಟು ವರ್ಷಗಳ ಹಿಂದಿನಿಂದಲೂ ಇದು ಕ್ರಮಬದ್ಧವಾದ ಎಣಿಕೆಯಲ್ಲಿದೆ. ಇಂದಿನ ಕ್ರಿ.ಶ. ಬರುವುದಕ್ಕೆ ೩೧೦೨ ವರ್ಷಕ್ಕೆ ಮುಂಚೆಯೇ ಭಾರತದಲ್ಲಿ ಈ ಎಣಿಕೆ ಅಸ್ತಿತ್ವದಲ್ಲಿದೆ. ಆದರೂ ಇತಿಹಾಸಜ್ಞರು ಇದನ್ನು ಒಪ್ಪದಿರುವುದು ಭಾರತೀಯ ಇತಿಹಾಸದ ಹಿನ್ನಡೆಯೇ ಆಗಿದೆ. ಅಶೋಕನು ಬ್ರಾಹ್ಮಿ ಲಿಪಿಯಲ್ಲಿ ಶಾಸನಗಳನ್ನು ಹಾಕಿಸುವ ವೇಳೆಗೆ ಸಂಸ್ಕೃತ ಭಾಷೆ ತನ್ನ ಮೂಲರೂಪವನ್ನು ಕಳೆದುಕೊಂಡು ಅನೇಕ ಪ್ರಾದೇಶಿಕ ಭಾಷೆಗಳಾಗಿ ಬಳಕೆಯಲ್ಲಿತ್ತು. ಮುಖ್ಯವಾಗಿ ಪಾಳೀ ಮತ್ತು ಪ್ರಾಕೃತಗಳೆರಡೂ ಸಂಸ್ಕೃತದ ಪ್ರಾದೇಶಿಕ ಭಾಷೆಗಳಾಗಿದ್ದವು. ಬೌದ್ಧ ಮತ್ತು ಜೈನ ಧರ್ಮಗಳು ಹಿಂದೂ ಧರ್ಮದಿಂದ ಹೊರಬಂದು ಹೊಸ ಸಮಾಜವಾಗಿ ರೂಪಗೊಳ್ಳಲು ಜನರನ್ನು ತನ್ನತ್ತ ಸೆಳೆಯಲು ಈ ಪ್ರಾದೇಶಿಕ ಭಾಷೆಗಳನ್ನೇ ಬಳಸಿಕೊಂಡಿದ್ದವು. ಅಶೋಕನೂ ಅದನ್ನು

ಮುಂದುವರೆಸಿ ಜನರಿಗೆ ಅರ್ಥವಾಗುವಂತಹ ಈ ಪ್ರಾದೇಶಿಕ ಭಾಷೆಗಳಲ್ಲಿ ಶಾಸನಗಳನ್ನು ಹಾಕಿಸಿದ್ದನು. ಎಲ್ಲ ಶಾಸನಗಳ ಲಿಪಿ ಬ್ರಾಹ್ಮಿಯೇ ಆದರೂ ಪ್ರಾದೇಶಿಕವಾಗಿ ಭಾಷೆಯಲ್ಲಿ ಭಿನ್ನತೆಯಿದೆ. ಕರ್ನಾಟಕದಲ್ಲಿ ದೊರಕುವ ಅಶೋಕನ ಶಾಸನಗಳ ಭಾಷೆ ಪ್ರಾಕೃತವಾಗಿದ್ದರೂ ಕನ್ನಡ ಪದಗಳೂ ಕಂಡುಬಂದಿವೆ.

ಪ್ರಾಚೀನ ಕನ್ನಡ ಸಮಾಜ : ಕನ್ನಡ ನಾಡಿನಲ್ಲಿ ಅಶೋಕನ ಶಾಸನಗಳು ದೊರೆಯುವ ವೇಳೆಗೆ ಕನ್ನಡ ನಾಡೂ ತನ್ನದೇ ಆದ ಕನ್ನಡ ಭಾಷೆಯನ್ನು ಪ್ರತಿನಿಧಿಸುವ ಪ್ರತ್ಯೇಕ ಸಮಾಜವಾಗಿತ್ತು. ಮೂಲ ದ್ರಾವಿಡದಿಂದ ಕವಲೊಡೆದ "ದಕ್ಷಿಣ ದ್ರಾವಿಡ" ಎಂಬ ಕನ್ನಡ-ತಮಿಳು ಭಾಷೆ ಒಂದೇ ಆಗಿದ್ದ ಏಕೀಕೃತ ದ್ರಾವಿಡ ಸಮಾಜದಿಂದಲೂ ಬೇರೆಯಾಗಿ ಕನ್ನಡ ಸಮಾಜವಾಗಿ ಅಸ್ತಿತ್ವದಲ್ಲಿತ್ತು. ಕಾವೇರಿ ತೀರದಲ್ಲಿ ನೆಲೆಸಿದ ಈ ದಕ್ಷಿಣ ದ್ರಾವಿಡದ ಗುಂಪು ಕ್ರಿ.ಪೂ. ೫ನೇ ಶತಮಾನದವರೆಗೆ ಒಂದೇ ಸಮಾಜವಾಗಿತ್ತೆಂದೂ ಸಂಪರ್ಕದ ಕೊರತೆ, ಪ್ರಾದೇಶಿಕ ವೈಶಿಷ್ಟ್ಯತೆ, ಭೌಗೋಳಿಕ ವಾತಾವರಣ ಮುಂತಾದ ಕಾರಣಗಳಿಂದ ಜೀವನಶೈಲಿ ಬೇರೆ ಬೇರೆಯಾಗಿ ಭಾಷೆಯೂ ವ್ಯತ್ಯಾಸವನ್ನು ಪಡೆದು ಕಾವೇರಿಯ ಉಗಮಸ್ಥಾನದ ಎತ್ತರವಾದ ನಾಡಿನವರನ್ನು ಕರುನಾಡಿಗರು ಎಂದೂ ತಗ್ಗಿನ ಪ್ರದೇಶದ ಪೂರ್ವದ ನಾಡಿನವರನ್ನು ತಮಿಳಿಗರೆಂದೂ ಇತಿಹಾಸ ಗುರುತಿಸಿದೆ. ಈ ಎರಡೂ ಜನಾಂಗಗಳಿಗೂ ಕ್ರಿಪೂ. ೧ನೇ ಶತಮಾನದವರೆಗೂ ಇದ್ದ ಭಾಷೆ ಪರಸ್ಪರ ಗ್ರಹಿಕೆಯಾಗುತ್ತಿತ್ತೆಂದು ಅದನ್ನು 'ಕಂದಮಿಳು' ಎಂದು ಕರೆಯಬಹುದೆಂದು ವಿದ್ವಾಂಸರು ಊಹಿಸಿದ್ದಾರೆ. ಈ ಕಾಲದಲ್ಲೇ ಕಾಣಿಸಿಕೊಂಡ ಅಶೋಕನ ಶಾಸನಗಳ ಬ್ರಾಹ್ಮೀ ಲಿಪಿಯಿಂದ ಪ್ರಭಾವಿತಗೊಂಡು ಕರುನಾಡಿಗರು ತಮ್ಮ ಆಳ್ವಿಕೆಯ ಪ್ರದೇಶದಲ್ಲಿ ತಮ್ಮದೇ ಆದ ಲಿಪಿಯನ್ನು ರೂಢಿಸಿಕೊಂಡಿದ್ದಾರೆ. ಈ ಲಿಪಿ ಸ್ಪಷ್ಟವಾದ ರೂಪ ಮತ್ತು ಧ್ವನಿಯನ್ನು ಪಡೆದು ಕಾಲ ಕಾಲಕ್ಕೆ ಬೆಳೆದು ಬಂದಿದೆ. ಇಂತಹ ವ್ಯವಸ್ಥಿತ ಸ್ವತಂತ್ರ ಲಿಪಿಯಾಗಿಯೇ ಕನ್ನಡದ ಪ್ರಥಮ ದಾಖಲೆಯಾಗಿ ದೊರಕಿರುವ ಕ್ರಿ.ಶ. ೪೫೦ರ ಹಲ್ಮಿಡಿ ಶಾಸನದ ಲಿಪಿ ಕಂಡುಬಂದಿರುವುದು. ತಮಿಳರು ಈ ಕಾಲದಲ್ಲಿ ಬ್ರಾಹ್ಮಿಯನ್ನೇ ಮುಂದುವರಿಸಿ ಕನ್ನಡದ ಲಿಪಿಯ ಪ್ರಭಾವದಿಂದ ಕ್ರಿ.ಶ. ೫-೬ನೇ ಶತಮಾನದಲ್ಲಿ ಲಿಪಿಯನ್ನು ರೂಢಿಸಿಕೊಂಡಿದ್ದಾರೆಂದು ಭಾಷಾ ವಿಜ್ಞಾನಿಗಳ ಮತ.

ಭಾರತೀಯ ಲಿಪಿಗಳು : ಈ ಬ್ರಾಹ್ಮಿಯಿಂದ ಮೊ[illegible] ಕವಲೊಡೆದ ಭಾರತೀಯ ಲಿಪಿಗಳೆಂದರೆ 'ನಾಗರಿ' ಮತ್ತು ಕನ್ನಡಗಳೆರಡೆ. ನಂತರ ತಮಿಳು. ಅನಂತರ ಸುಮಾರು ೧೧-೧೨ನೇ ಶತಮಾನಗಳ ನಂತರ ಉತ್ತರ ಭಾರತದ ಭಾಷೆಗಳು ಸಂಸ್ಕೃತದ ಲಿಪಿಯಾಗಿದ್ದ 'ನಾಗರಿ'ಯಿಂದ ತಮ್ಮ ತಮ್ಮ ಭಾಷೆಗಳಿಗೆ ಲಿಪಿಗಳನ್ನು ರೂಢಿಸಿಕೊಂಡಿವೆ. ಹದಿನೈದನೇ ಶತಮಾನದಲ್ಲಿ ಕನ್ನಡ ಲಿಪಿಯಿಂದ ತೆಲುಗು ಲಿಪಿ ಹಾಗೂ ತಮಿಳು ಲಿಪಿಯಿಂದ ಮಲೆಯಾಳಂ ಲಿಪಿ ರೂಪುಗೊಂಡಿವೆ. ಕರ್ನಾಟಕದಲ್ಲಿರುವ ತುಳು ಮತ್ತು ಕೊಡವ ಭಾಷೆಗಳು ಕನ್ನಡ ತಮಿಳುಗಳು ಬೇರೆಯಾಗುವ ಕಾಲದಲ್ಲೇ ಕನ್ನಡದಿಂದ ಬೇರೆಯಾದ ಸ್ವತಂತ್ರ ದ್ರಾವಿಡ ಭಾಷೆಗಳಾದರೂ ಕನ್ನಡ ಲಿಪಿಯನ್ನೇ ಬಳಸಿಕೊಂಡಿವೆ. ಕನ್ನಡ ಸಮಾಜ ಭಾರತೀಯ ಹಿಂದೂ ಸಂಸ್ಕೃತಿಯ ಭಾಗವಾಗಿ ಬೆಳೆದಿರುವುದರಿಂದ ಲಿಪಿಯನ್ನು ರೂಢಿಸಿಕೊಳ್ಳುವ ಕಾಲಕ್ಕೆ ಸಂಸ್ಕೃತ ಭಾಷೆಯನ್ನು ಸಂಪೂರ್ಣವಾಗಿ ಅವಲಂಭಿಸಿತ್ತು. ರಾಮಾಯಣ, ಮಹಾಭಾರತಗಳ ಸಂಸ್ಕೃತಿಯ ಭಾಗವಾಗಿತ್ತು. ಹೀಗಾಗಿ ಸಂಸ್ಕೃತದಲ್ಲಿ ಬಳಕೆಯಲ್ಲಿದ್ದ ಎಲ್ಲ ಧ್ವನಿಗಳಿಗೂ ಕನ್ನಡ ಲಿಪಿಯನ್ನು ರೂಢಿಸಿಕೊಂಡಿವೆ. ಹಲ್ಮಿಡಿ ಶಾಸನದಲ್ಲಿಯೇ ಅದಕ್ಕೆ ಪುರಾವೆ ದೊರಕುತ್ತದೆ. ಸಂಸ್ಕೃತದಲ್ಲಿ ಎಷ್ಟು ಧ್ವನಿಗಳಿವೆಯೋ ಅಷ್ಟೇ ಧ್ವನಿಗಳು ಕನ್ನಡದಲ್ಲೂ ಇವೆ ಎಂಬಷ್ಟು ಹೋಲಿಕೆ ಕನ್ನಡ ಲಿಪಿಯಲ್ಲಿದೆ. ಸಂಸ್ಕೃತದ ಈ ಪ್ರಭಾವದಿಂದ ಕನ್ನಡವೂ ಸಂಸ್ಕೃತಜನ್ಯ ಎಂಬ ಸಾಮಾನ್ಯ ಅಭಿಪ್ರಾಯ ಕನ್ನಡಿಗರಲ್ಲಿ ಮೂಡಿದೆ. ಆದರೆ ಕನ್ನಡ ಭಾಷೆ ಸಂಸ್ಕೃತಕ್ಕಿಂತ ಭಿನ್ನವಾದ ದ್ರಾವಿಡ ಭಾಷೆಯ ಮೂಲವಾಗಿದೆ.

**ಕನ್ನಡ ಲಿಪಿಯ ಕಾಲ ಕಾಲದ ಬೆಳವಣಿಗೆ**

ಇಂದಿನ ಕನ್ನಡ ಲಿಪಿಗೆ ಸರಿಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವಿದೆ. ಇಂದು ನಾವು ಬರೆಯುತ್ತಿರುವ ಲಿಪಿಗಳು ಸುಮಾರು ಎರಡು ಸಾವಿರ ವರ್ಷಗಳ ಹಿಂದಿನಿಂದಲೂ ಹೀಗೇ ಇರಲಿಲ್ಲ. ಕಾಲದಿಂದ ಕಾಲಕ್ಕೆ ಲಿಪಿಗಳು ವ್ಯತ್ಯಾಸವಾಗುತ್ತಾ ಬಂದವು. ಇಂದಿನ 'ಕ' ಅಶೋಕನ ಕಾಲದಲ್ಲಿ '+' ರೂಪದಲ್ಲಿತ್ತೆಂದರೆ ಆಶ್ಚರ್ಯವಾಗುತ್ತದೆ. ಆದರೂ

ಅದು ವಸ್ತುಸ್ಥಿತಿ. ಪ್ರತಿಯೊಂದು ಅಕ್ಷರಗಳೂ ಹೀಗೆ ವಿಚಿತ್ರವಾದ ರೂಪಗಳಿಂದ ಇಂದಿನ ಸುಂದರ ಲಿಪಿಸ್ವರೂಪವನ್ನು ಪಡೆದಿವೆ. ಲಿಪಿಗಳು ಏಕೆ ಬದಲಾಗುತ್ತವೆ ಎಂಬುದಕ್ಕೆ ಸ್ಪಷ್ಟವಾದ ಕಾರಣಗಳಿಲ್ಲದಿದ್ದರೂ ಸಾಮಾನ್ಯವಾಗಿ ಕೈಬರಹದ ವ್ಯತ್ಯಾಸ ಮುಖ್ಯವಾಗಿದೆ. ಕೆಲವೊಮ್ಮೆ ರಾಜರುಗಳೂ ತಮ್ಮ ರಾಜನೀತಿಯ ಭಾಗವಾಗಿ ಲಿಪಿಗಳನ್ನೂ ಬದಲಾಯಿಸಿದ್ದಾರೆಂಬ ವಾದವಿದೆ. ಶಿಲ್ಪ, ಸಾಹಿತ್ಯ, ಕಾನೂನು, ಆಡಳಿತನೀತಿ ಇತ್ಯಾದಿಗಳಂತೆ ಲಿಪಿಯೂ ಒಬ್ಬೊಬ್ಬ ರಾಜರ ಕಾಲದಲ್ಲಿಯೂ ಪ್ರತ್ಯೇಕವಾಗಿ ಕಂಡುಬಂದಿರುವುದೇ ಈ ವಾದಕ್ಕೆ ಕಾರಣವಾಗಿದೆ. ಸಾಮಾನ್ಯವಾಗಿ ರಾಜರುಗಳು ಆಯಾ ಕಾಲದ ಜನರ ಬಳಕೆಯಲ್ಲಿದ್ದ ಲಿಪಿ ಮತ್ತು ಭಾಷೆಯನ್ನು ಬಳಸುತ್ತಾರಾದ್ದರಿಂದ ಲಿಪಿಯ ವ್ಯತ್ಯಾಸ ಆಯಾ ಕಾಲದ ಕೈಬರಹದ ವ್ಯತ್ಯಾಸವೇ ಆಗಿರುತ್ತದೆ.

ಕರ್ನಾಟಕವನ್ನು ಆಳಿದ ಎಲ್ಲ ಕನ್ನಡ ದೊರೆಗಳ ಕಾಲದಲ್ಲೂ ಕನ್ನಡಲಿಪಿ ಬೇರೆ ಬೇರೆಯಾಗಿಯೇ ಕಂಡುಬಂದಿದೆ. ಬ್ರಾಹ್ಮಿಯಿಂದ ಮೊದಲು ಕನ್ನಡ ಲಿಪಿಯನ್ನು ರೂಪಿಸಿಕೊಂಡವರು ಕದಂಬರು. ನಂತರ ಈ ಲಿಪಿಯನ್ನು ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದರಸರು, ಮೈಸೂರೊಡೆಯರು ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡು ಬಳಸುತ್ತಾ ಬಂದರು. ಇಂದಿನ ಲಿಪಿ ಮುದ್ರಣ ಕಾಲದಲ್ಲಿದ್ದ ಒಡೆಯರ ಲಿಪಿಯನ್ನೇ ಪರಿಷ್ಕರಿಸಿ ರೂಪಿಸಿದ್ದಾಗಿದೆ. ಈ ಬೆಳವಣಿಗೆಯ ಚಿತ್ರವನ್ನು ಹೀಗೆ ಗುರುತಿಸಬಹುದು :

**೧. ಬ್ರಾಹ್ಮೀ ಲಿಪಿ :** ಕ್ರಿಪೂ. ೩ನೇ ಶತಮಾನದ ಮೌರ್ಯರ ದೊರೆ ಅಶೋಕನ ಕಾಲದ ಬ್ರಾಹ್ಮೀ ಲಿಪಿಯೇ ಕನ್ನಡ ಲಿಪಿಗೆ ಮೂಲವಾಗಿದೆ. ಅಶೋಕನ ನಂತರ ಕರ್ನಾಟಕ ಪ್ರದೇಶವನ್ನಾಳಿದ ರಾಜಮನೆತನ ಶಾತವಾಹನರು. ಕ್ರಿ.ಶ. ೧ನೇ ಶತಮಾನದಿಂದ ನಾಲ್ಕನೇ ಶತಮಾನದವರೆಗೆ ಆಳಿದ ಶಾತವಾಹನರ ಪ್ರಮುಖ ದೊರೆ ಗೌತಮೀಪುತ್ರ ಶಾತಕರ್ಣಿ. ಇವನನ್ನು 'ಹಾಲ', 'ಶಾಲವಾಹನ' ಎಂದೂ ಕರೆಯಲಾಗಿದೆ. ಈ ರಾಜ ಕನ್ನಡಿಗನೆಂದು ಇತಿಹಾಸ ಗುರುತಿಸಿದ್ದಾರೆ. ಇವನು ಬರೆದಿರುವ 'ಗಾಥಾ ಸಪ್ತಶತಿ' ಎಂಬ ಸಂಸ್ಕೃತ ಗ್ರಂಥದಲ್ಲಿ ಅನೇಕ ಕನ್ನಡ ಪದಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಆ ಕಾಲದ ಆಸ್ಥಾನ ಭಾಷೆ ಸಂಸ್ಕೃತ, ಆಡಳಿತ ಭಾಷೆ ಪ್ರಾಕೃತ ಮತ್ತು ವ್ಯವಹಾರದ ಭಾಷೆ ಕನ್ನಡವಾಗಿತ್ತು. ಇವನ ಕಾಲದ ಶಾಸನಗಳ ಲಿಪಿ ಬ್ರಾಹ್ಮೀ, ಭಾಷೆ ಪ್ರಾಕೃತವಾಗಿದೆ. ಕ್ರಿ.ಶ. ೭೮ರಲ್ಲಿ ಆಡಳಿತಕ್ಕೆ ಬಂದ ಇವನ ಹೆಸರಲ್ಲೇ ಎಣಿಕೆಗೆ ಬಂದ 'ಶಾಲಿವಾಹನ ಶಕ' ಭಾರತೀಯ ಸಮಾಜದಲ್ಲಿ ಇಂದಿಗೂ ಬಳಕೆಯಲ್ಲಿದೆ.

ಅಶೋಕನ ಮತ್ತು ಶಾತವಾಹನರ ಕಾಲದ ಬ್ರಾಹ್ಮೀ ಲಿಪಿಯ ಶಾಸನಗಳು ಕರ್ನಾಟಕದಲ್ಲಿ ಸಾಕಷ್ಟು ದೊರಕಿವೆ. ಈ ಲಿಪಿಯು ಉತ್ತರ ಭಾರತದ ಬ್ರಾಹ್ಮಿಗಿಂತ ಸ್ವಲ್ಪ ಭಿನ್ನವಾಗಿ ಕಂಡುಬಂದಿದೆ. ಆದ್ದರಿಂದಲೇ ದಕ್ಷಿಣದ ಬ್ರಾಹ್ಮಿಯನ್ನು 'ದಕ್ಷಿಣಾತ್ಯ ಬ್ರಾಹ್ಮಿ' ಎಂದು ವಿದ್ವಾಂಸರು ಕರೆದಿದ್ದಾರೆ. ಉತ್ತರಕ್ಕೂ ದಕ್ಷಿಣಕ್ಕೂ ಲಿಪಿಯಲ್ಲಿ ವ್ಯತ್ಯಾಸವಾಗುವುದಕ್ಕೆ ಕಾರಣ ಬರವಣಿಗೆಯ ಮಾಧ್ಯಮವಾಗಿದೆ. ದಕ್ಷಿಣದಲ್ಲಿ ತಾಳೆಯ ಗರಿಗಳಲ್ಲಿ ಕಂಟ(ಕಬ್ಬಿಣದ ಕಡ್ಡಿ)ದಿಂದ ಕೊರೆಯುತ್ತಿದ್ದುದರಿಂದಲೂ ಉತ್ತರದಲ್ಲಿ ಬೂರ್ಜಪತ್ರ (ಬೂರುಗದ ಮರದ ತೊಗಟೆಯಿಂದ ತೆಗೆದ ಹಾಳೆ)ದಲ್ಲಿ ಮಸೀಕಡ್ಡಿಯಿಂದ ಬರೆಯುತ್ತಿದ್ದುದರಿಂದಲೂ ಈ ವ್ಯತ್ಯಾಸ ಕಂಡುಬಂದಿದೆಯೆಂದು ವಿದ್ವಾಂಸರು ಊಹಿಸಿದ್ದಾರೆ. ಬ್ರಾಹ್ಮಿ ಲಿಪಿಯು ಸಂಸ್ಕೃತ ಧ್ವನಿಗಳಿಗೆ ಅನುಗುಣವಾಗಿವೆ.

**೨. ಕದಂಬರ ಕಾಲದ ಕನ್ನಡ ಲಿಪಿ :** ಕನ್ನಡನಾಡನ್ನು ಕನ್ನಡ ಭಾಷೆಯ ಮೂಲಕವೇ ಆಳಿದ ಮೊದಲ ಕನ್ನಡ ರಾಜವಂಶ ಕದಂಬ. ಶಾಲಿವಾಹನರ ಅವನತಿಯ ನಂತರ ಆಕ್ರಮಣಶೀಲರಾಗಿದ್ದ ಪಲ್ಲವರನ್ನು ಮೆಟ್ಟಿ ಸ್ವತಂತ್ರ ಕನ್ನಡ ಸಾಮ್ರಾಜ್ಯವನ್ನು ಸ್ಥಾಪಿಸಿದ ಕೀರ್ತಿ ಕದಂಬ ಮಯೂರವರ್ಮನದಾಗಿದೆ. ಇಲ್ಲಿಂದ ಮುಂದಕ್ಕೆ ವಿಜಯನಗರದ ಸಾಮ್ರಾಜ್ಯದವರೆಗೆ ಕರ್ನಾಟಕವನ್ನು ಕಟ್ಟಿ ಬೆಳೆಸಿದ ಕನ್ನಡ ರಾಜರುಗಳ ಇತಿಹಾಸವೇ ಇದೆ. ನೆರೆಯ ರಾಜ್ಯಗಳನ್ನೂ ತಮ್ಮ ಆಳ್ವಿಕೆಗೆ ಸೇರಿಕೊಂಡಿದ್ದ ದಕ್ಷಿಣ ಭಾರತದ ಪ್ರಮುಖ ರಾಜಮನೆತನಗಳು ಕನ್ನಡ ರಾಜಮನೆತನಗಳೇ ಆಗಿವೆ. ಕೆಲವೊಮ್ಮೆ ಇಡೀ ಭಾರತದಾದ್ಯಂತ ತಮ್ಮ ಆಡಳಿತವನ್ನು ವಿಸ್ತರಿಸಿರುವುದೂ ಉಂಟು. ಇಂತಹ ವಿಶಾಲ ಸಾಮ್ರಾಜ್ಯಕ್ಕೆ ಬುನಾದಿ ಹಾಕಿದ ಕೀರ್ತಿ ಕದಂಬರಿಗೆ ಸಲ್ಲುತ್ತದೆ.

ಕದಂಬರೇ ಕನ್ನಡದ್ದೇ ಆದ ಸ್ವತಂತ್ರ ಲಿಪಿಯನ್ನು ರೂಪಿಸಿದ ಮೊದಲಿಗರು. ಇವರ ಕಾಲದ ಶಾತವಾಹನರ ಬ್ರಾಹ್ಮೀ ಲಿಪಿಯಿಂದ ಕನ್ನಡ ಲಿಪಿಯನ್ನು ಇವರು ಕಂಡುಕೊಂಡರು. ಇವರು ಪ್ರಾಕೃತ ಮತ್ತು ಸಂಸ್ಕೃತ ಭಾಷೆಯ ಶಾಸನಗಳಿಗೆ ಬ್ರಾಹ್ಮಿಯನ್ನು, ಕನ್ನಡ ಶಾಸನಗಳಿಗೆ ಕನ್ನಡ ಲಿಪಿಯನ್ನು ಬಳಸಿದ್ದಾರೆ. ಲಂಬರೇಖೆಗಳ ರೂಪದಲ್ಲಿದ್ದ ಬ್ರಾಹ್ಮಿಲಿಪಿಯನ್ನು ಬಾಗಿಸುವ ಮೂಲಕ ಕನ್ನಡ ಲಿಪಿಯನ್ನು ಪ್ರತ್ಯೇಕವಾಗಿ ಇವರು ರೂಢಿಗೆ ತಂದಿದ್ದಾರೆ. ಇದು ಕನ್ನಡ ಲಿಪಿ ದುಂಡಾಗಲು ಮೂಲ ಕಾರಣವಾಯಿತು. ಈ ಕದಂಬರು ಬಳಸಿರುವ ಬ್ರಾಹ್ಮಿ ಲಿಪಿಯೂ ಹೆಚ್ಚು ಕಡಿಮೆ ಕನ್ನಡ ಲಿಪಿಯಂತೆಯೇ ಗೋಚರವಾಗಿದ್ದು ಇದನ್ನು 'ಕನ್ನಡ ಬ್ರಾಹ್ಮಿ' ಎಂದು ಕರೆಯಬಹುದಾಗಿದೆ. ಈ ಕನ್ನಡ ಬ್ರಾಹ್ಮಿಯಿಂದ ಕನ್ನಡಲಿಪಿ ಕವಲೊಡೆದಿದೆ ಎಂದು ಹೇಳಬಹುದಾಗಿದೆ.

**ಪ್ರಥಮ ದಾಖಲೆ – ಹಲ್ಮಿಡಿ ಶಾಸನ** : ಕನ್ನಡ ಲಿಪಿಯ ಮತ್ತು ಕನ್ನಡ ಭಾಷೆಯ ಮೊದಲ ದಾಖಲೆ ಹಲ್ಮಿಡಿ ಶಾಸನವಾಗಿದೆ. ಇದರಲ್ಲಿ ಬಹುಮಟ್ಟಿಗೆ ಕನ್ನಡದ ಎಲ್ಲಾ ಅಕ್ಷರಗಳು ಕಂಡುಬಂದಿವೆ. ಕನ್ನಡ ದ್ರಾವಿಡ ಭಾಷಾವಂಶದಿಂದ ಬಂದಿರುವುದರಿಂದ ದ್ರಾವಿಡ ಭಾಷೆಗಳಲ್ಲಿಲ್ಲದ ಮಹಾಪ್ರಾಣಾಕ್ಷರಗಳು (ಖ, ಫ, ಥ ಇತ್ಯಾದಿ) ಸಂಧಿ ಸ್ವರಗಳು (ಐ, ಔ) ವಿಸರ್ಗ ಮತ್ತು ಅನುಸ್ವಾರ (ಃ, ಂ) ಹಾಗೂ ಶ, ಷ, ಹಗಳು ಕನ್ನಡ ಭಾಷೆಯ ಧ್ವನಿಗಳಲ್ಲ. ಆದರೆ ಕನ್ನಡ ಸಮಾಜ ಸಮ್ಮಿಶ್ರ ಹಿಂದೂ ಸಂಸ್ಕೃತಿಯ ಸಮಾಜವಾಗಿ ಬೆಳೆದಿರುವುದರಿಂದ ಈ ಸಂಸ್ಕೃತಿಯ ಭಾಷೆ ಸಂಸ್ಕೃತವಾಗಿದ್ದುದರಿಂದ ಸಂಸ್ಕೃತದ ಈ ಎಲ್ಲಾ ವರ್ಣಗಳನ್ನೂ ಕನ್ನಡ ಲಿಪಿಯಲ್ಲಿ ಗುರುತಿಸಿಕೊಂಡಿದೆ. ಆಸ್ಥಾನ ಭಾಷೆ ಸಂಸ್ಕೃತವೇ ಆಗಿದ್ದರೂ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ರೂಢಿಸಿದ ಕೀರ್ತಿ ಕದಂಬರದ್ದಾಗಿದೆ. ಆದ್ದರಿಂದಲೇ ಹಲ್ಮಿಡಿ ಶಾಸನದಲ್ಲಿ ಸಂಸ್ಕೃತದ ಪ್ರಭಾವ ಕಂಡುಬಂದಿದೆ. ಸ್ಥಳ, ವ್ಯಕ್ತಿ ನಾಮಗಳು ಮತ್ತು ಪ್ರತ್ಯಯಗಳನ್ನು ಬಿಟ್ಟರೆ ಉಳಿದಂತೆ ಸಂಸ್ಕೃತ ಪದಗಳೇ ಅಧಿಕವಾಗಿವೆ. ಸಂಸ್ಕೃತದ ಏ ಮತ್ತು ಓ ಸ್ವರಗಳಿಗೂ ಕನ್ನಡದ ಎ ಮತ್ತು ಒ ಸ್ವರಗಳಿಗೂ ಒಂದೇ ಲಿಪಿಯಿರುವುದು ಗಮನಾರ್ಹ. ಈ ಕದಂಬರ ಲಿಪಿಯೇ ಮುಂದಿನ ರಾಜರುಗಳ ಕಾಲದಲ್ಲಿ ಅಲ್ಪಸ್ವಲ್ಪ ಬದಲಾವಣೆಯಾಗಿ ಕನ್ನಡ ಲಿಪಿಯಾಗಿ ಬೆಳೆದುಬಂದಿದೆ.

**೩. ಗಂಗರ ಕಾಲದ ಲಿಪಿ** : ಕ್ರಿ.ಶ. ೪ನೇ ಶತಮಾನದಿಂದ ೧೦ನೇ ಶತಮಾನದವರೆಗೆ ಕರ್ನಾಟಕದ ದಕ್ಷಿಣ ಭಾಗದಲ್ಲಿ ಆಳ್ವಿಕೆಯಲ್ಲಿದ್ದ ಗಂಗರ ಕಾಲದಲ್ಲೂ ಕನ್ನಡ ಲಿಪಿ ಸ್ಪಷ್ಟವಾಗಿ ಬೆಳವಣಿಗೆ ಪಡೆದಿದೆ. ಆದರೆ ಇವರ ಆಳ್ವಿಕೆಯ ಅವಧಿ ದೀರ್ಘಕಾಲವಾದ್ದರಿಂದ ಹಲವು ರೂಪಗಳು ಕಂಡುಬರುವುದರಿಂದ ಗಂಗರ ಕಾಲದ ನಿರ್ದಿಷ್ಟ ಸ್ವರೂಪ ಯಾವುದೆಂಬುದು ಗೊತ್ತಾಗುವುದಿಲ್ಲವೆಂದು ವಿದ್ವಾಂಸರು ಗೊಂದಲದಲ್ಲಿದ್ದಾರೆ. ಕನ್ನಡ ಲಿಪಿಯ ತಲಕಟ್ಟಿನಲ್ಲಿ ಕಾಲದಿಂದ ಕಾಲಕ್ಕೆ ಮುಖ್ಯ ಬದಲಾವಣೆ ಕಂಡುಬಂದಿದೆ. ಅಶೋಕನ ಬ್ರಾಹ್ಮಿಯಲ್ಲಿ ತಲೆಕಟ್ಟೇ ಇರಲಿಲ್ಲ. ಶಾತವಾಹನರ ಬ್ರಾಹ್ಮಿಯಲ್ಲಿ ತ್ರಿಕೋನಾಕಾರದಲ್ಲಿ ತಲೆಕಟ್ಟು ಕಂಡುಬಂದಿದ್ದರೆ ಕದಂಬರ ಬ್ರಾಹ್ಮಿಯಲ್ಲಿ ಚೌಕಾಕಾರವಾಗಿದೆ. ಈ ಸ್ವರೂಪ ಕದಂಬರ ಕನ್ನಡಲಿಪಿಯಲ್ಲಿಯೂ ಕಾಣಿಸಿಕೊಂಡಿದ್ದರೂ ಗಂಗರ ಲಿಪಿಯಲ್ಲಿ ಸಣ್ಣ ಗೀಟಾಗಿ ಮಾತ್ರ ಉಳಿದುಕೊಂಡಿದೆ. ಕದಂಬರ ಹಲ್ಮಿಡಿ ಮೊದಲಾದ ಕನ್ನಡ ಶಾಸನಗಳಲ್ಲೇ ಸಣ್ಣಗೀಟು ರೂಪದ ತಲೆಕಟ್ಟು ಕಾಣಿಸಿಕೊಂಡಿದ್ದುದನ್ನು ಗಂಗರು ಮುಂದುವರೆಸಿದ್ದಾರೆ.

**೪. ಬಾದಾಮಿ ಚಾಲುಕ್ಯರ ಕಾಲದ ಲಿಪಿ** : ಉತ್ತರ ಕರ್ನಾಟಕದಲ್ಲಿ ಪ್ರಬಲ ರಾಜಮನೆತನವಾಗಿ ಬೆಳೆದ ಬಾದಾಮಿ ಚಾಲುಕ್ಯರು ಕ್ರಿ.ಶ. ೮ ರಿಂದ ೧೦ನೇ ಶತಮಾನದವರೆಗೂ ರಾಜ್ಯಭಾರ ಮಾಡಿದ್ದಾರೆ. ಇವರ ಕಾಲದಲ್ಲಿ ಕದಂಬರ ಲಿಪಿಗಳಿಂದ ವಿಕಾಸ ಹೊಂದಿದ ಕನ್ನಡ ಲಿಪಿ ಬಳಕೆಯಲ್ಲಿದೆ. ಕದಂಬರ ಕಾಲದಲ್ಲಿ ಬ್ರಾಹ್ಮೀ ಲಿಪಿಯಲ್ಲಿ ಇದ್ದ ಚೌಕಾಕಾರದ ತಲೆಕಟ್ಟು ಬಾದಾಮಿ ಚಾಲುಕ್ಯರ ಕಾಲದಲ್ಲಿ ಸಣ್ಣಗೀಟಾಗಿ ಪರಿವರ್ತನೆಯಾಗಿದೆ. ಇ, ಎ, ಒ ಸ್ವರಗಳು ಖಚಿತತೆಯನ್ನು ಪಡೆದಿದ್ದರೂ ಈ ಸ್ವರ ಸುರುಳಿಯಾಕಾರದ ವೃತ್ತವಾಗಿದೆ.

**೫. ರಾಷ್ಟ್ರಕೂಟರ ಕಾಲದ ಲಿಪಿ** : ಕ್ರಿ.ಶ. ೭ನೇ ಶತಮಾನದಿಂದ ೧೦ನೇ ಶತಮಾನದವರೆಗೆ ಆಳಿದ ರಾಷ್ಟ್ರಕೂಟರು ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಇವರ ಸಾಮ್ರಾಜ್ಯದ ಪ್ರದೇಶದಲ್ಲೆಲ್ಲಾ ಕನ್ನಡ ಶಾಸನಗಳೇ ರಾರಾಜಿಸಿವೆ. ಈ ಕಾಲದ ಮಹಾರಾಷ್ಟ್ರದ ಶಾಸನಗಳೆಂದರೆ ಕನ್ನಡ ಶಾಸನಗಳೇ ಆಗಿವೆ. ಇವರು ಕನ್ನಡ ಲಿಪಿಯಲ್ಲಿ ದುಂಡನೆಯ ಸ್ವರೂಪವನ್ನು ಸ್ಪಷ್ಟವಾಗಿ ರೂಪಿಸಿದ್ದಾರೆ. ತಲೆಕಟ್ಟು ಇನ್ನೂ ಸ್ವಲ್ಪ ದೊಡ್ಡ ಗೀಟಾಗಿ ಸ್ಪಷ್ಟವಾಗಿದೆ. ಅಕ್ಷರಗಳೆಲ್ಲ ದುಂಡಾಕಾರದತ್ತ ತಿರುಗಿವೆ.

**೬. ಕಲ್ಯಾಣಿ ಚಾಲುಕ್ಯರ ಕಾಲದ ಲಿಪಿ** : ಕಲ್ಯಾಣಿ ಚಾಲುಕ್ಯರು ಕ್ರಿ.ಶ. ೧೦-೧೧ನೇ ಶತಮಾನದಲ್ಲಿ ಆಳಿದ ಅರಸರು. ಇವರು ಮೊದಲ ಬಾರಿಗೆ ಶಾಸನಗಳಿಗೆ ಮೃದುವಾದ ಬಳಪದ ಕಲ್ಲನ್ನು ಬಳಸಿದ್ದಾರೆ. ಈ ಕಾರಣದಿಂದಲೇ ಕನ್ನಡ ಲಿಪಿ ಇನ್ನಷ್ಟು ದುಂಡನೆಯ ಸ್ವರೂಪವನ್ನು ಪಡೆದು ಸುಂದರವಾಗಿ ಇದೆ. ತಲೆಕಟ್ಟೂ ಕೂಡ ಅರ್ಧಚಂದ್ರಾಕಾರದ ರೂಪವನ್ನು ಪಡೆದಿವೆ. ಬಹಳಷ್ಟು ಲಿಪಿಗಳು ಇಂದಿನ ಅಕ್ಷರದ ಸ್ವರೂಪದಲ್ಲೇ ಇವೆ.

**೭. ಹೊಯ್ಸಳರ ಕಾಲದ ಲಿಪಿ** : ಕ್ರಿ.ಶ. ೧೧ನೇ ಶತಮಾನದಿಂದ ೧೪ನೇ ಶತಮಾನದವರೆಗೆ ಕರ್ನಾಟಕ ರಮಾರಮಣರಾಗಿ ಆಳಿದ ಹೊಯ್ಸಳರ ಕಾಲದಲ್ಲಿ ಇನ್ನಷ್ಟು ಸೌಂದರ್ಯವತ್ತ ಕನ್ನಡಲಿಪಿ ಹೊರಳಿತು. ಇವರೂ ಬಳಪದ ಕಲ್ಲಿನಲ್ಲೇ ಶಾಸನ ಮತ್ತು ಶಿಲ್ಪಗಳನ್ನು ರಚಿಸಿರುವುದರಿಂದ ಸೌಂದರ್ಯವತ್ತ ವಿಶೇಷ ಗಮನ ಹರಿಸಿದ್ದಾರೆ. ಹಳೇಬೀಡು, ಬೇಲೂರು ಶಿಲ್ಪ ವೈಭವ ಜಗದ್ವಿಖ್ಯಾತವಾಗಿವೆ. ಕನ್ನಡ ಲಿಪಿಯಲ್ಲಿಯೂ ಈ ಸೌಂದರ್ಯ ಎದ್ದು ಕಾಣುತ್ತದೆ. ಸುಂದರವಾದ ಅಕ್ಷರಗಳಾಗಿ ಮುತ್ತನ್ನು ಪೋಣಿಸಿದಂತೆ ಕಂಡುಬಂದಿದೆ. ಸರಿಸುಮಾರು ಇಂದಿನ ಲಿಪಿಯಂತೆಯೇ ಹೊಯ್ಸಳರ ಕಾಲದ ಲಿಪಿಯನ್ನು ಓದಬಹುದಾಗಿದೆ. ಮಹಾಪ್ರಾಣಾಕ್ಷರಗಳಿಗೆ ಕೆಳಗಡೆ ಗೀಟು ಕೊಡುವ ಪದ್ಧತಿಯನ್ನು ಇವರು ಆರಂಭಿಸಿದ್ದಾರೆ.

**೮. ವಿಜಯನಗರ ಕಾಲದ ಲಿಪಿ** : ಕ್ರಿ.ಶ. ೧೪ನೇ ಶತಮಾನದಿಂದ ೧೬ನೇ ಶತಮಾನದವರೆಗೂ ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಆಳಿದ ವಿಜಯನಗರ ಅರಸರು ಕನ್ನಡ ಲಿಪಿಯಲ್ಲಿಯೇ ತಮ್ಮ ಶಾಸನಗಳನ್ನು ಬರೆಸಿದ್ದಾರೆ. ಇವರು ಶಾಸನಗಳಿಗೆ ಕಠಿಣ ಶಿಲೆಯನ್ನು ಬಳಸಿರುವುದರಿಂದ ಲಿಪಿಯಲ್ಲಿ ವಕ್ರತೆ ಮೂಡಿದೆ. ಸೌಂದರ್ಯ ಕಂಡುಬಂದಿಲ್ಲ. ಗೀಚಿದಂತೆ ಅಕ್ಷರಗಳನ್ನು ಕೆತ್ತಲಾಗಿದೆ. ದುಂಡು ಸ್ವರೂಪ ಅಷ್ಟಾಗಿ ಕಾಣದಿದ್ದರೂ ಅಕ್ಷರಗಳ ರೂಪ ಖಚಿತವಾಗಿದೆ. ಈ ಕಾಲದ ಲಿಪಿಯೇ ತೆಲುಗು ಭಾಷೆಗೆ ಲಿಪಿಯಾಗಿ ರೂಢಿಗೆ ಬಂದಿದೆ. ಕನ್ನಡ ಲಿಪಿ ಮುಂದೆಯೂ ವ್ಯತ್ಯಾಸವನ್ನು ಪಡೆದು ಇಂದಿನ ರೂಪಕ್ಕೆ ಬದಲಾಗಿದೆ.

**೯. ಒಡೆಯರ ಕಾಲದ ಲಿಪಿ** : ವಿಜಯನಗರದ ಪತನಾನಂತರ ಮೈಸೂರು ಒಡೆಯರು ದಕ್ಷಿಣ ಕರ್ನಾಟಕವನ್ನು ಆಳಿದ ಪಮುಖ ರಾಜರು. ಕ್ರಿ.ಶ. ೧೭-೧೮ನೇ ಶತಮಾನದಲ್ಲಿ ಇವರು ಹಾಕಿಸಿದ ಶಾಸನಗಳು ಕಂಡುಬರುತ್ತವೆ. ಈ ಶಾಸನ ಲಿಪಿ ವಿಜಯನಗರ ಲಿಪಿಯ ಮುಂದುವರಿದ ರೂಪವಾಗಿದೆ. ಹೊಯ್ಸಳರ ಕಾಲದ ಸೌಂದರ್ಯದಷ್ಟಿಲ್ಲದಿದ್ದರೂ ಸ್ವಲ್ಪಮಟ್ಟಿಗೆ ಸುಂದರವಾದ ಕನ್ನಡ ಬರವಣಿಗೆ ಇಲ್ಲಿದೆ. ಮತ್ತೆ ದುಂಡನೆಯ ಸ್ವರೂಪವನ್ನು ಪಡೆದು ಕನ್ನಡ ಲಿಪಿಯು ತನ್ನ ಮೂಲರೂಪವನ್ನು ಉಳಿಸಿಕೊಂಡಿದೆ. ಈ ಕಾಲದಿಂದ ಕಂಡುಬಂದಿರುವ ಯಥೇಚ್ಚವಾದ ಹಸ್ತಪ್ರತಿಗಳಲ್ಲೂ ಈ ಸ್ವರೂಪದ ಲಿಪಿ ಇದೆ. ಕಾಗದ ಮತ್ತು ಓಲೆಗರಿ ಎರಡರಲ್ಲೂ ಲಿಪಿ ದುಂಡನೆಯ ಸ್ವರೂಪವನ್ನು ಪಡೆದಿರುವುದು ಗಮನಾರ್ಹವಾಗಿದೆ. ತಲೆಕಟ್ಟು ಮತ್ತು ಅಕ್ಷರ ಸ್ವರೂಪಗಳು ಸ್ಪಷ್ಟತೆಯನ್ನು ಪಡೆದಿವೆ. ಯಾರಾದರೂ ಓದಬಹುದಾದಷ್ಟು ಸರಳತೆ ಕನ್ನಡ ಲಿಪಿಯಲ್ಲಿ ಈ ಕಾಲದಲ್ಲಿ ಕಂಡುಬಂದಿದೆ.

**೧೦. ಇಂದಿನ ಕನ್ನಡ ಲಿಪಿ** : ೧೯ನೇ ಶತಮಾನದಲ್ಲಾದ ನವೋದಯ ಮತ್ತು ಸಮಾಜದ ಹೊಸ ಆವಿಷ್ಕಾರಗಳ ಕಾರಣದಿಂದ ಮುದ್ರಣ ಕಲೆ ಕಾಣಿಸಿಕೊಂಡಿತು. ಈ ಮುದ್ರಣಕ್ಕೂ ಒಡೆಯರ ಕಾಲದ ಲಿಪಿಯನ್ನೇ ಅಳವಡಿಸಿಕೊಳ್ಳಲಾಯಿತು. ಹಸ್ತಪ್ರತಿ ಲಿಪಿಗಿಂತ ಮುದ್ರಣಲಿಪಿ ಹೆಚ್ಚು ಪ್ರಚಾರವನ್ನು ಪಡೆಯಿತು. ಆಡಳಿತ ಭಾಷೆ, ಗ್ರಂಥಗಳ ಮುದ್ರಣ ಭಾಷೆಗಳಿಗೆಲ್ಲಾ ಈ ಮುದ್ರಿತ ಲಿಪಿಗಳೇ ಮೂಲವಾದವು. ಇದರಿಂದ ಲಿಪಿಯು ಮುದ್ರಣ ತಂತ್ರಜ್ಞಾನಕ್ಕೆ ಒಳಪಟ್ಟು ಏಕರೂಪತೆಯನ್ನು ಪಡೆಯಿತು. ಎಲ್ಲೇ ಮುದ್ರಣವಾದರೂ ಯಾವ ಕಾಲದಲ್ಲೇ ಮುದ್ರಣವಾದರೂ ಯಾವುದೇ ತಂತ್ರಜ್ಞಾನಕ್ಕೂ ಲಿಪಿಯನ್ನು ಅಳವಡಿಸಿದರೂ ಈ ತಾಂತ್ರಿಕ ಲಿಪಿಗಳೇ ಬಳಕೆಯಾಗುತ್ತಿರುವುದರಿಂದ ಕೈಬರಹದ ವ್ಯತ್ಯಾಸದ ಲಿಪಿ ಹಿಂದೆ ಸರಿಯಿತು. ಕೈಬರಹದ ವ್ಯತ್ಯಾಸ ವ್ಯಕ್ತಿ ವೈಶಿಷ್ಟ್ಯವೆನಿಸಿತು. ಕನ್ನಡ ಲಿಪಿ ಎಂದರೆ ಮುದ್ರಣ ಲಿಪಿ ಎಂದೇ ರೂಢಿಯಾಯಿತು. ಹೀಗೆ ಮೈಸೂರು ಒಡೆಯರ ಕಾಲದ ಕನ್ನಡ ಲಿಪಿ ಮುದ್ರಣ ತಂತ್ರಜ್ಞಾನಕ್ಕೆ ಒಳಗಾಗುವ ಮೂಲಕ ಸ್ಥಿರವಾದ ಕನ್ನಡ ಲಿಪಿಯಾಗಿ ಪರಿವರ್ತನೆಯಾಯಿತು. ಇದು ಇನ್ನು ಮುಂದೆ ಎಂದಿಗೂ ಬದಲಾವಣೆಯಾಗುವುದಿಲ್ಲ. ಯಾವುದೇ ರೀತಿಯ ತಂತ್ರಜ್ಞಾನದಲ್ಲೂ ವ್ಯತ್ಯಾಸವಾಗುವುದಿಲ್ಲ. ಎಲ್ಲ ಭಾಷೆಗಳ ಲಿಪಿಗಳಂತೆ ಕನ್ನಡ ಲಿಪಿಯೂ ಶಾಶ್ವತ ರೂಪವನ್ನು ಈ ಕಾಲದಲ್ಲಿ ಪಡೆಯುವಂತಾಯಿತು.

ಹೀಗೆ ಕನ್ನಡ ಲಿಪಿಯ ವಿಕಾಸದ ಹಾದಿಯಲ್ಲಿ ಎರಡುಸಾವಿರ ವರ್ಷಗಳೇ ಕಳೆದಿವೆ. ವರ್ಷ ವರ್ಷಕ್ಕೂ ವ್ಯತ್ಯಾಸವಾಗುತ್ತಿದ್ದರೂ ಮುಖ್ಯವಾಗಿ ರಾಜರುಗಳ ಕಾಲದ ಶಾಸನಗಳ ಅವಧಿಯ ವ್ಯತ್ಯಾಸವನ್ನು ಗಮನದಲ್ಲಿಟ್ಟುಕೊಂಡು ಕಾಲದಿಂದ ಕಾಲಕ್ಕೆ ಕನ್ನಡ ಲಿಪಿಯ ವಿಕಾಸವನ್ನು ಇತಿಹಾಸಕಾರರು ಗುರುತಿಸಿದ್ದಾರೆ. ಈ ಕೆಳಗಿನ ಕೆಲವು ಪಟ್ಟಿಕೆಗಳಿಂದ ಮತ್ತು ಶಾಸನಗಳಿಂದ ಬೇರೆ ಬೇರೆ ಕಾಲದಲ್ಲಿ ಕನ್ನಡ ಲಿಪಿ ಹೇಗೆ ಬೇರೆ ಬೇರೆಯಾಗಿತ್ತು ಮತ್ತು ಅದರಿಂದಲೇ ಬೆಳೆಯಿತು ಎಂಬುದು ವೇದ್ಯವಾಗುತ್ತದೆ ಮತ್ತು ಈ ರೂಪಾಂತರವೇ ಒಂದು ಚೋದ್ಯವೆನಿಸಿದೆ. ಕನ್ನಡ ಶಾಸ್ತ್ರೀಯ ಭಾಷೆಯ ಲಿಪಿಯೂ ಶಾಸ್ತ್ರೀಯವಾಗಿಯೇ ಬೆಳೆದುಬಂದಿರುವುದನ್ನು ಕಾಣಬಹುದಾಗಿದೆ.

**ಕನ್ನಡ ಅಂಕಿಗಳು** : ಕನ್ನಡ ಅಂಕಿಗಳಿಗೂ ಇದೇರೀತಿಯ ಇತಿಹಾಸವಿದೆ. ಯಾವ ಭಾಷೆಯಲ್ಲಿ ತನ್ನದೇ ಆದ ಅಂಕಿಗಳ ಲಿಪಿಗಳಿರುತ್ತದೋ ಆ ಭಾಷೆ ಮುಂದುವರಿದ ಭಾಷೆಯಾಗಿರುತ್ತದೆ. ಬ್ರಾಹ್ಮೀ ಲಿಪಿಯಲ್ಲಿಯೇ ಪ್ರತ್ಯೇಕ ಅಂಕಿ ಲಿಪಿಗಳೂ ಇದ್ದವು. ಅದನ್ನೇ ಕನ್ನಡ ಲಿಪಿಯಲ್ಲಿಯೂ ರೂಢಿಸಿಕೊಂಡು ಕದಂಬರ ಕಾಲದಿಂದಲೂ ಕನ್ನಡ ಭಾಷೆ ಕನ್ನಡದ್ದೇ ಆದ ಅಂಕಿ ಲಿಪಿಯನ್ನೂ ಬಳಸಿಕೊಂಡು ಬಂದಿದೆ. ಇಂದಿನ ಒಂದರಿಂದ ಒಂಭತ್ತರವರೆಗಿನ ಎಲ್ಲ ಅಂಕಿಗಳಿಗೂ ಕನ್ನಡದ್ದೇ ಆದ ಪ್ರತ್ಯೇಕ ಲಿಪಿಗಳಿವೆ. ಈ ಅಂಕಲಿಪಿಗಳು ಆಯಾ ರಾಜರ ಕಾಲದಲ್ಲಿ ಬದಲಾವಣೆಯಾಗುತ್ತಾ ಬಂದಿರುವುದನ್ನು ಇದರೊಂದಿಗಿನ ಪಟ್ಟಿಕೆಯಲ್ಲಿ ನೋಡಬಹುದು.

ಜೈನ ಪುರಾಣದಲ್ಲಿ ಒಂದು ಕಥೆಯಿದೆ. ಭಾಷೆಯನ್ನು ಬ್ರಹ್ಮ ತನ್ನ ಇಬ್ಬರು ಹೆಣ್ಣು ಮಕ್ಕಳಿಗೆ ಬೋಧಿಸಿದನಂತೆ. ಒಬ್ಬಳಿಗೆ ಬ್ರಾಹ್ಮಿ ಲಿಪಿಯ ಭಾಷೆಯನ್ನು ಇನ್ನೊಬ್ಬಳಿಗೆ ಅಂಕ ಲಿಪಿಯನ್ನು ಹೇಳಿಕೊಟ್ಟನೆಂದೂ ಈ ಲಿಪಿಗಳು ಕನ್ನಡ ಲಿಪಿಗಳೆಂದೂ ಅದು ಹೇಳುತ್ತದೆ. ಕ್ರಿ.ಶ. ಸುಮಾರು ೧೭ನೇ ಶತಮಾನದ್ದೆಂದು ಹೇಳುವ 'ಸಿರಿಭೂವಲಯ' ಎಂಬ ಗ್ರಂಥ ಕನ್ನಡ ಲಿಪಿಯ ಅಂಕಿಗಳಲ್ಲಿರುವ ವಿಶೇಷ ಗ್ರಂಥ. ಈ ಗ್ರಂಥದಲ್ಲಿ ಅಕ್ಷರಗಳೇ ಇಲ್ಲ. ಎಲ್ಲವನ್ನೂ ಅಂಕಿಗಳಲ್ಲೇ ಹೇಳಲಾಗಿದೆ. ಇಂತಹ ಅಂಕ ಲಿಪಿಯಲ್ಲೇ ಬರೆದಿರುವ ಇನ್ನೊಂದು ಗ್ರಂಥ ಪ್ರಪಂಚದ ಯಾವ ಭಾಷೆಯಲ್ಲೂ ಇಲ್ಲ. ಇದೊಂದೇ ಇದರ ಗಿನ್ನಿಸ್ ದಾಖಲೆಗೆ ಅರ್ಹತೆಯಾಗಿದೆ. ಆದರೆ ಇದಕ್ಕೂ ಮಿಗಿಲಾದ ಅನೇಕ ಪವಾಡ ಸದೃಶ ರಚನೆಗಳು ಇದರಲ್ಲಿವೆ. ಈ ಅಂಕಗಳನ್ನು ಅಕ್ಷರಗಳಿಗೆ ಪರಿವರ್ತಿಸಬೇಕು. ಹಾಗೆ ಪರಿವರ್ತಿಸಿದ ಅಕ್ಷರ ಚೌಕಗಳನ್ನು ಕವಿ ಹೇಳಿರುವ ಬಂಧಗಳಲ್ಲಿ ಜೋಡಿಸಿಕೊಂಡು ಓದಬೇಕು. ಆಗಷ್ಟೇ ಗ್ರಂಥ ಏನು ಎಂದು ಗೊತ್ತಾಗುತ್ತದೆ. ಹೀಗೆ ಓದಿದರೆ ಅನೇಕ ವಿಷಯಗಳು ಮತ್ತು ಭಾಷೆಗಳು ವ್ಯಕ್ತವಾಗುತ್ತವೆಂದು ಈ ಗ್ರಂಥದ ಕರ್ತೃ ಬೆಂಗಳೂರಿನ ನಂದೀಬೆಟ್ಟದ ಸಮೀಪದ ಕುಮುದೇಂದು ಮುನಿ ಹೇಳುತ್ತಾರೆ. ಆದರೆ ಈವರೆಗೆ ಈ ಗ್ರಂಥವನ್ನು ಪೂರ್ಣವಾಗಿ ಬಿಡಿಸಿ ಓದಿದವರಿಲ್ಲ. ಇಂಥಹ ಸವಾಲನ್ನು ಜಗತ್ತಿನ ಜ್ಞಾನಪ್ರಪಂಚಕ್ಕೆ ಕನ್ನಡ ಲಿಪಿ ಒಡ್ಡಿ ನಿಂತಿದೆ.

*****

# ಬಾದಾಮಿ ಚಾಲುಕ್ಯರ ಲಿಪಿ

* ಜಿ.ಕೆ. ದೇವರಾಜಸ್ವಾಮಿ

ಬಾದಾಮಿ ಚಾಲುಕ್ಯರು ಬನವಾಸಿಯ ಕದಂಬರನ್ನು ಸೋಲಿಸಿ, ಕ್ರಿ.ಶ.ಸು.೫೪೦ರಲ್ಲಿ ರಾಜ್ಯಭಾರ ಪ್ರಾರಂಭಿಸಿದರು. ಕರ್ನಾಟಕ, ಆಂಧ್ರ ಹಾಗೂ ಇತರೆ ಭಾಗಗಳನ್ನು ಪಲ್ಲವರಿಂದ ತಪ್ಪಿಸಿ, ಮೊದಲ ಬಾರಿಗೆ ರಾಜ್ಯವನ್ನು ವಿಸ್ತರಿಸಿ ಏಕ ಚಕ್ರಾಧಿಪತ್ಯದ ಆಡಳಿತಕ್ಕೆ ಒಳಪಡಿಸಿದರು. ದಕ್ಷಿಣದ ಕಾವೇರಿಯಿಂದ ಉತ್ತರದ ನರ್ಮದಾನದಿವರೆಗೆ ವಿಶಾಲ ಸಾಮ್ರಾಜ್ಯವನ್ನು ವಿಸ್ತರಿಸಿ, ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಇದರಿಂದಾಗಿ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಪ್ರಮುಖ ಸ್ಥಾನ ಹೊಂದಿದ್ದಾರೆ.

'ಕರ್ನಾಟಕ'ರೆಂದೇ ಸಮಕಾಲೀನ ಇತರ ರಾಜರಿಂದ ಕರೆಸಿಕೊಳ್ಳುತ್ತಿದ್ದರಲ್ಲದೆ, ಇವರ ಸೈನ್ಯವನ್ನು 'ಕರ್ನಾಟಕ ಬಲ' ಎಂದೂ ಕರೆಯುತ್ತಿದ್ದರು. ಹಾಗೆಯೇ ಬೇರೆ ಬೇರೆ ದೇಶಗಳೊಂದಿಗೆ ವ್ಯಾಪಾರ ಹಾಗೂ ಸಾಂಸ್ಕೃತಿಕ ಸಂಬಂಧವನ್ನು ಹೊಂದಿದ್ದರೆಂಬುದನ್ನು ಇತಿಹಾಸ ದಾಖಲಿಸಿದೆ. ಕ್ರಿ.ಶ.೫೪೩ರ ಒಂದನೇ ಪುಲಿಕೇಶಿಯ ಬಂಡೆಕಲ್ಲು ಶಾಸನವು 'ಅಶ್ವಮೇಧಾದಿ ಯಜ್ಞ' ಮಾಡಿರುವ ಬಗ್ಗೆ, ಬಾದಾಮಿಯಲ್ಲಿ ಕೋಟೆಯನ್ನು ನಿರ್ಮಿಸಿರುವುದನ್ನು ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ **'ಶಕ'** ವರ್ಷದ ಉಲ್ಲೇಖವು ಮೊಟ್ಟ ಮೊದಲಿಗೆ ದೊರೆಯುವುದರಿಂದ ಭಾರತದ ಇತಿಹಾಸದಲ್ಲಿ ಮಹತ್ವ ಪಡೆದಿದೆ.[೧]

ಭಾರತದ ದಕ್ಷಿಣಾತ್ಯ ದೇವಾಲಯ ವಾಸ್ತುಶೈಲಿಗೆ ಬುನಾದಿ ಹಾಕಿದವರು ಬಾದಾಮಿ ಚಾಲುಕ್ಯರು. ವಾಸ್ತು ಪ್ರಯೋಗಗಳೊಂದಿಗೆ ಮಹತ್ತರವಾದ ಕೊಡುಗೆಯನ್ನು ನೀಡಿರುವುದು ತಿಳಿದ ವಿಷಯವಾಗಿದೆ. ಈಗಲೂ ಮುಖ್ಯವಾಗಿ ಬಾದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟ, ಕರ್ನೂಲ್, ಗುಂಟೂರ್, ನೆಲ್ಲೂರ್ ಮುಂತಾದ ಕಡೆಗಳಲ್ಲಿ ಕಾಣಬಹುದಾಗಿದೆ.

ಬಾದಾಮಿ ಚಾಲುಕ್ಯರ ಒಂದನೇ ಪುಲಿಕೇಶಿಯಿಂದ ಆರಂಭವಾದ ಆಡಳಿತ ಚುಕ್ಕಾಣಿಯು ಇಮ್ಮಡಿ ಕೀರ್ತಿವರ್ಮನವರೆಗೂ ಸುಮಾರು ಇನ್ನೂರು ವರ್ಷಕ್ಕೂ ಹೆಚ್ಚು ಕಾಲದವರೆಗೆ ಪರಮಾಧಿಕಾರದಿಂದ 'ಕನ್ನಡ ರಾಜ'ರಾಗಿ ಮೆರೆದು, ನಾಡಿಗೆ ವಿಶೇಷ ಕೊಡುಗೆ ನೀಡಿದ್ದಾರೆ. ಇವರು ಕನ್ನಡ ನಾಡಿನವರೆಂಬುದೇ ಹಲವು ವಿದ್ವಾಂಸರ ಅಭಿಪ್ರಾಯ. ಬಾದಾಮಿ ಚಾಲುಕ್ಯರ ಶಾಸನಗಳಲ್ಲಿ ಎಲ್ಲಿಯೂ ಇವರು ಬೇರೆ ಕಡೆಯಿಂದ ಬಂದ ಬಗ್ಗೆ ಉಲ್ಲೇಖವಿಲ್ಲ. ಈ ಬಗ್ಗೆ ವಿದ್ವಾಂಸರ ಅಭಿಪ್ರಾಯವೆಂದರೆ, "....ಎಂಟನೇ ಶತಮಾನದವರೆಗಿನ ಇವರ ಲಿಪಿಗಳಲ್ಲಿ ಎಲ್ಲಿಯೂ ಈ ಸಂಗತಿ ಉಕ್ತವಾಗಿಲ್ಲ. ಹನ್ನೊಂದನೇ ಶತಮಾನದ ಕಲ್ಯಾಣಿ ಚಾಲುಕ್ಯರ ಲಿಪಿಗಳಲ್ಲಿ ಮಾತ್ರ, ಚಾಲುಕ್ಯರು ಮೊದಲು ಅಯೋಧ್ಯೆಯಲ್ಲಿ ರಾಜ್ಯಭಾರ ಮಾಡುತ್ತಿದ್ದರೆಂದೂ, ಅಲ್ಲಿ ಐವತ್ತೊಂಬತ್ತು ರಾಜರಾಳಿದ ತರುವಾಯದಲ್ಲಿ ದಕ್ಷಿಣಾ ಪಥಕ್ಕೆ ಬಂದು ಹದಿನಾರು ಮಂದಿ ರಾಜರು ಆಳಿದರೆಂದೂ.... ಇದಲ್ಲದೆ ಈ ಐತಿಹ್ಯಗಳು ಇವರ ರಾಜ್ಯವಳಿದು ಮೂರು ಶತಮಾನಗಳವರೆಗೂ ಎಲ್ಲಿಯೂ ಕಾಣಬರುವುದಿಲ್ಲವಾದ್ದರಿಂದ ಇವುಗಳಲ್ಲಿ ತಥ್ಯಾಂಶ ಎಷ್ಟಿದೆಯೆಂಬುದನ್ನು ನಿರ್ಧಾರ ಮಾಡಲು ಶಕ್ಯವಿಲ್ಲ."[೨] ಬಾದಾಮಿ ಚಾಲುಕ್ಯರು ಕನ್ನಡ ನಾಡಿನ ಕಲೆ, ಸಂಸ್ಕೃತಿಗೆ ಮಹತ್ವ ನೀಡಿದಂತೆಯೇ, ಕನ್ನಡ ಭಾಷೆಗೆ ಪ್ರಾಮುಖ್ಯತೆ ನೀಡಿರುವುದೂ ಶ್ಲಾಘನೀಯ. ಹಾಗೆಯೇ ಕನ್ನಡ ಲಿಪಿ ಸ್ವರೂಪಕ್ಕೆ ಖಚಿತತೆ ನೀಡಿರುವುದು ಮಹತ್ವವಾದ ಕೊಡುಗೆಯಾಗಿದೆ.

ಬಾದಾಮಿ ಚಾಲುಕ್ಯರ ಶಾಸನಗಳಲ್ಲಿ ಸಂಸ್ಕೃತ ಮತ್ತು ಕನ್ನಡ ಭಾಷೆಯನ್ನು ಬಳಸಿದ್ದಲ್ಲದೆ, ಕನ್ನಡ ಭಾಷೆಗೆ ವಿಶೇಷ ಮಾನ್ಯತೆ ನೀಡಲಾಗಿದೆ. ತಾಮ್ರಶಾಸನಗಳಲ್ಲಿ 'ನಾಗರಿ ಲಿಪಿ' ಬಳಸಿದ್ದರೂ, ಸಂಸ್ಕೃತ ಮತ್ತು ಕನ್ನಡ ಭಾಷೆಗೆ ಅನುಕೂಲವಾಗುವಂತಹ 'ಕನ್ನಡ ಲಿಪಿ' ಸ್ವರೂಪವನ್ನು ಕಂಡುಕೊಂಡಿದ್ದಾರೆ. ಈ ಲಿಪಿ ಸ್ವರೂಪವು ಸ್ಥಳೀಯವಾಗಿ ಮುಖ್ಯ ಬದಲಾವಣೆ ಮಾಡಿಕೊಂಡಿರುವುದು ಮಹತ್ವವಾಗಿದೆ.

* 'ತ್ರಯೀ', ನಂ.೫೬, ಮೈಸೂರ್ ಲ್ಯಾಂಪ್ಸ್ ಲೇಔಟ್, ಚನ್ನನಾಯಕನಪಾಳ್ಯ, ೨ನೇ ಹಂತ, ನಾಗಸಂದ್ರ ಅಂಚೆ, ಬೆಂಗಳೂರು–೫೬೦೦೭೩.
ಮೊಬೈಲ್ : ೯೪೮೦೪೧೦೫೦೭

ಅಶೋಕ, ಶಾತವಾಹನ ಹಾಗೂ ಕದಂಬರ ಕಾಲದ ಲಿಪಿಗಳು ಮೇಲಿನಿಂದ ಕೆಳಮುಖ ಬೆಳವಣಿಗೆ ಕಂಡುಬರುತ್ತವೆ. ಒಟ್ಟು ಊರ್ಧ್ವಮುಖ ಆಯುತಾಕಾರದಲ್ಲಿರುವುದನ್ನು ಕಾಣುತ್ತೇವೆ. ಕದಂಬರ ಕಾಲದ ಪೇಟಿಕಾ ಶಿರಸ್ಸು, ಶಾತವಾಹನರ ತ್ರಿಕೋನಾಕಾರದ ತಲೆಕಟ್ಟು ಹೊಂದಿದ್ದರೂ ಪ್ರಮುಖವಾಗಿ ರಾಜವಂಶ ಶಾಸನಗಳಲ್ಲಿ ಕಾಣಬಹುದು. ಇದು ಕೆಲವೆಡೆ ಅವರ ಶಾಸನಗಳಲ್ಲಿಯೇ ಕಂಡುಬರುವುದಿಲ್ಲ. ಈ ಲಿಪಿಗಳು ಉತ್ತರದಿಂದ ಇಲ್ಲಿಗೆ ಬಂದಿವೆ ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಕದಂಬರ ಕಾಲದ ಲಿಪಿ ಸ್ವರೂಪವು ಉತ್ತರದ 'ಕಳಚೂರಿ ಛೇದಿವಂಶ', 'ವಾಕಾಟಕರು', 'ಗುಪ್ತ' ಇತ್ಯಾದಿ ರಾಜವಂಶಗಳಲ್ಲಿ ಮತ್ತು ದಕ್ಷಿಣದಲ್ಲಿ ಬನವಾಸಿ ಕದಂಬ, ಪಲ್ಲವ ವಂಶಗಳ ಶಾಸನಗಳಲ್ಲಿ ಬಳಕೆಯಾಗಿರುವುದು ಕಾಣುತ್ತೇವೆ. ಈ ಲಿಪಿ ಸ್ವರೂಪವು ಈ ರಾಜವಂಶಗಳಲ್ಲಿ ಹಾಗೂ ಬಾದಾಮಿ ಚಾಲುಕ್ಯರ ಕಾಲದಲ್ಲಿಯೂ ಮುಂದುವರೆದಿರುವುದು ಶಾಸನ ಲಿಪಿಗಳಲ್ಲಿ ಕಾಣಬಹುದು. ಆದರೆ ಬಾದಾಮಿ ಚಾಲುಕ್ಯರು ಅದೇ ಲಿಪಿಯ ಸ್ವರೂಪವನ್ನು ಬದಲಾವಣೆ ಮಾಡಿಕೊಂಡು, ಕನ್ನಡ ಭಾಷಾ ಶಾಸನ ಬರೆಯುವಲ್ಲಿ ಹೊಸ ಪ್ರಯೋಗ ಮಾಡಿದ್ದಾರೆ. ಅದಲ್ಲದೆ ಕನ್ನಡ ಲಿಪಿ ಸ್ವರೂಪವನ್ನು ಮೊದಲು ರೂಪಿಸಿದವರು ಇವರೇ ಎನ್ನಬಹುದು. ಬಾದಾಮಿ ಚಾಲುಕ್ಯರ ಕಾಲದಲ್ಲಿ ಆದ ಲಿಪಿ ಸ್ವರೂಪ ಬದಲಾವಣೆಯು ಸುತ್ತಮುತ್ತಲಿನ ರಾಜವಂಶಗಳಲ್ಲಿ ಗಮನಿಸಲು ಸಾಧ್ಯವಿಲ್ಲ. ಉದಾಹರಣೆಗೆ ಈ ಕಾಲಘಟ್ಟದಲ್ಲಿ ಪಲ್ಲವ ಶಾಸನಗಳಲ್ಲಿ ಕದಂಬ ಲಿಪಿ/ಶಾತವಾಹನ ಲಿಪಿ ಸ್ವರೂಪವನ್ನು ಸಮಕಾಲೀನ ಶಾಸನಗಳಲ್ಲಿ ಬಳಸುತ್ತಿದ್ದದ್ದು ಕಂಡುಬರುತ್ತದೆ. ಆದರೆ ಬಾದಾಮಿ ಚಾಲುಕ್ಯರು ಲಿಪಿ ಸ್ವರೂಪವನ್ನು ಬದಲಾಯಿಸಿಕೊಂಡಿದ್ದಾರೆ.

ಕದಂಬರ ಕಾಲದಲ್ಲಿನ ಪೇಟಿಕಾ ಶಿರಸ್ಸು ರಾಜವಂಶೇತರರಲ್ಲಿ ಕಾಣುವುದು ಕಷ್ಟಸಾಧ್ಯ. ಆಕಾಲಕ್ಕಾಗಲೇ ಇದ್ದ ಅತಿ ಚಿಕ್ಕ ಗೆರೆಯಾಕಾರದ ತಲೆಕಟ್ಟು ಕಂಡುಬರುತ್ತದೆ (ಉದಾ: ಸಮಕಾಲೀನ ಗಂಗರ ಶಾಸನ, ಹಲ್ಮಿಡಿ ಶಾಸನ). ಬಾದಾಮಿ ಚಾಲುಕ್ಯರ ಶಿಲಾ ಹಾಗೂ ತಾಮ್ರ ಶಾಸನಗಳಲ್ಲಿ ಲಿಪಿಯು ಹೊಸ ಹುಟ್ಟು, ರೂಪಗಳನ್ನು ಪಡೆದುಕೊಂಡಿವೆ. ಇದಕ್ಕೆ ಕಾರಣಗಳು;

**೧. ಹೊಸ ಅನ್ವೇಷಣೆ :**

* ರಾಜ್ಯ ವಿಸ್ತಾರದಿಂದ ಸಾಂಸ್ಕೃತಿಕವಾಗಿ ವಿನಿಮಯದಿಂದಾಗಿ ಹೊಸತನ,
* ಗುಹಾಂತರ ದೇವಾಲಯದಿಂದ ಹಿಡಿದು ನಾನಾ ಶೈಲಿಯ ದೇವಾಲಯದ ಹೊಸ ವಾಸ್ತುವಿನ್ಯಾಸ ಪ್ರಯೋಗ.
* ಮೊದಲನೆಯದಾಗಿ ಶಾಸನಗಳಲ್ಲಿ ಶಕವರ್ಷ ಬಳಕೆ.
* ತಜ್ಞ ಲಿಪಿಕಾರರಿಂದ ಲಿಪಿ ವಿನ್ಯಾಸದಲ್ಲಿ ಹೊಸ ಪ್ರಯೋಗ

**೨. ಕನ್ನಡ ಭಾಷಾ ಬಳಕೆ :**

* ಸಂಸ್ಕೃತ ಭಾಷೆಯಿಂದ ಸಾಕಷ್ಟು ಹೊರಬಂದು, ಶಾಸನಗಳಲ್ಲಿ ಕನ್ನಡ ಭಾಷಾ ಪ್ರಯೋಗ.

  ಉದಾ: ಮಂಗಲೀಶನ ಶಾಸನ, ಕಪ್ಪೆ ಅರಭಟ್ಟನ ಶಾಸನ ಬಾದಾಮಿ ಬಂಡೆಗಲ್ಲಿನ ಶಾಸನಗಳು[೨]

**೩. ತಜ್ಞ ಲಿಪಿಕಾರರು :**

* ಲಿಪಿಯ ಕೆತ್ತನೆಯ ಸ್ವರೂಪದಲ್ಲಿ ಪ್ರಯೋಗಶೀಲತೆ
* ಲಿಪಿಯನ್ನು ಅಲಂಕಾರಿಕವಾಗಿ ಕೆತ್ತುವುದು. ಉದಾ: 'ಅ'ಕಾರ, 'ಶ್ರೀ'ಕಾರಗಳ ಬರವಣಿಗೆಯ ಸೌಂದರ್ಯ

**೪. ಸಾಂಸ್ಕೃತಿಕ ಮಹತ್ವ :**

* ಸಾಂಸ್ಕೃತಿಕವಾಗಿ ಇತರ ರಾಜರೊಂದಿಗಿನ ಸಂಬಂಧ
* ಹೊರ ಆಗ್ನೇಯ, ಮುಂತಾದ ದೇಶಗಳೊಂದಿಗಿನ ಸಂಬಂಧ

## ಬಾದಾಮಿ ಚಾಲುಕ್ಯರ ಲಿಪಿ ವರ್ಣಮಾಲೆ

ಅ ಆ ಇ ಈ ಉ ಋ ಏ ಓ ಅಂ ಅಃ

ಕ ಖ ಗ ಘ ಙ

ಚ ಛ ಜ ಝ ಞ

ಟ ಠ ಡ ಢ ಣ

ತ ಥ ದ ಧ ನ

ಪ ಫ ಬ ಭ ಮ

ಯ ರ ಲ ವ ಶ ಷ ಸ ಹ ಳ ಱ ೞ

ಬಾದಾಮಿ ಚಾಲುಕ್ಯರು ಕದಂಬರ ಲಿಪಿಯನ್ನೇ ಹಲವಾರು ಬದಲಾವಣೆಯೊಂದಿಗೆ ರೂಪಿಸಿಕೊಂಡಿರುವುದನ್ನು ಕಾಣುತ್ತೇವೆ. ಆದರೆ ತೀರಾ ಮೊದಲ ಶಾಸನದಲ್ಲಿ ಕದಂಬರಂತೆ ಪೇಟಿಕಾ ಶಿರಸ್ಸು ಇಲ್ಲದಿದ್ದರೂ, ಲಿಪಿ ಸ್ವರೂಪ ಕದಂಬ ಲಿಪಿಯಂತೆ ಕಂಡುಬರುತ್ತದೆ. ಉದಾಹರಣೆಗೆ ಬಾದಾಮಿ ಚಾಲುಕ್ಯ ಮೊದಲನೇ ಪುಲಿಕೇಶಿ ಶಾಸನವನ್ನು ಸಮಕಾಲೀನ ಕದಂಬ ಕೃಷ್ಣವರ್ಮನ ಶಾಸನದೊಂದಿಗೆ ಲಿಪಿ ದೃಷ್ಟಿಯಿಂದ ಹೋಲಿಸಬಹುದು. ಪೇಟಿಕಾ ಶಿರಸ್ಸು ಹೊರತು ಪಡಿಸಿ, ಲಿಪಿ ಸಾಕಷ್ಟು ಹೋಲಿಕೆ ಇದೆ. "ಇವರ ಮೊದಲ ಶಾಸನ ಬಾದಾಮಿಯಲ್ಲಿ ದೊರೆತಿರುವ ಚಲ್ಕ್ಯವಲ್ಲಭೇಶ್ವರನದಾಗಿದೆ. ಇತ್ತೀಚೆಗೆ ಇದರ ಮೂಲ ಶಾಸನ ಪ್ರತಿಯನ್ನು ಡಾ॥ಕೆ.ವಿ. ರಮೇಶ ಅವರು ಗುರುತಿಸಿದ್ದು ಪಲ್ಲವರು ವಾತಾಪಿಯ ಮೇಲೆ ಮಾಡಿದ ಧಾಳಿಯಲ್ಲಿ ಶಾಸನದ ಬಹುಭಾಗವನ್ನು ನಾಶಮಾಡಿ ಆ ಜಾಗದಲ್ಲಿ ಪಲ್ಲವ ನರಸಿಂಹವರ್ಮನು ತನ್ನ ಶಾಸನವನ್ನು ಬರೆಸಿರುವುದನ್ನು ಗುರುತಿಸಿದ್ದಾರೆ. ಪಲ್ಲವ ನರಸಿಂಹವರ್ಮನ ಶಾಸನದ ಬಳಿ ಇರುವ ಶಾಸನದ ಅಕ್ಷರಗಳ ಮೇಲೆ

ಕದಂಬರ ಶಾಸನ ಲಿಪಿಗಳ ಛಾಯೆ ಕಂಡು ಬರುತ್ತದೆ. ಅಕ್ಷರಗಳ ತಲೆಗಳ ಮೇಲೆ ಪೆಟ್ಟಿಗೆಯಂತ ತಲೆಕಟ್ಟುಗಳು ಕಾಣಬರುತ್ತವೆ." ಬಾದಾಮಿ ಚಾಲುಕ್ಯರ ಮುಂದಿನ ಶಾಸನಗಳಲ್ಲಿ ಈ ಸಾಮ್ಯತೆ ಕಂಡುಬರುವುದಿಲ್ಲ.

**ಒಂದನೇ ಪುಲಿಕೇಶಿ ಶಾಸನ. ಬಾದಾಮಿ. ಕ್ರಿಶ. ೫೪೩**

ಆನಂತರದ ಶಾಸನವೆಂದರೆ ಗೊಡಚಿ ತಾಮ್ರಶಾಸನ. ಇದರಲ್ಲಿ ಲಿಪಿ ಸ್ವರೂಪವು ಸಾಕಷ್ಟು ಬದಲಾವಣೆಯನ್ನು ಪಡೆಯುತ್ತದೆ. ಅಕ್ಷರಗಳ ಉದ್ದ ಕಡಿಮೆಯಾಗಿ ಸ್ವಲ್ಪ ಅಗಲವನ್ನು ಹೊಂದಿರುವುದಲ್ಲದೆ, ಎಲ್ಲಾ ಅಕ್ಷರಗಳು ಸಮಾನಕ್ಕೆ ಬಳದಿರುವುದು. ಹಾಗೆಯೇ ಗುಂಡನೆಯ ರೂಪ ಪ್ರವೃತ್ತಿಯನ್ನು ಹುಂದುತ್ತಿರುವುದು ಕಾಣುತ್ತೇವೆ.



**ಗೊಡಚಿ ತಾಮ್ರ ಶಾಸನ**

ಕ್ರಿ.ಶ. ೫೭೮ರ ಬಾದಾಮಿಯ ಮೂರನೆಯ ವೈಷ್ಣವ ಗುಹೆಯಲ್ಲಿನ ಮಂಗಲೀಶನ ಶಾಸನ. ಈ ಶಾಸನದ ಲಿಪಿಗಳಲ್ಲಿ ಉದ್ದವಾದ ಅಕ್ಷರಗಳು ಸಾಲಿಗೆ ಹೊಂದಿಕೊಳ್ಳುತ್ತಿವೆ.(ಉದಾ: ಅ, ಕ, ರ) ತಲೆಕಟ್ಟುಗಳು ಗೆರೆಯ ರೂಪಕ್ಕೆ ಬಂದು ಸ್ಪಷ್ಟಗೋಚರಿಸುತ್ತಿವೆ. ಹಿಂದಿನ ಲಿಪಿ ಸ್ವರೂಪಕ್ಕಿಂತ ಲಿಪಿ ದುಂಡಾಗಿವೆ. ಲಿಪಿಕಾರ ಸರಳರೇಖಾತ್ಮಕ ಗೆರೆ ಉಳಿಸಿಕೊಂಡು, ಆಳವಾಗಿ ಕೊರೆದು, ತಲೆಕಟ್ಟುಗಳನ್ನು ಬಹಳ ಸೌಂದರ್ಯವನ್ನಾಗಿ ಮಾಡಿದ್ದಾನೆ. ಇದು ತ್ರಿಕೋನಾಕೃತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಕನ್ನಡ ಶಾಸನದ ಪ್ರಾಚೀನತೆಯಲ್ಲಿ ಈ ಶಾಸನವು ಮೊದಲನೆಯದೆಂಬ ಬಗ್ಗೆ ವಾದವಿವಾದಗಳಾಗಿವೆ. ಈ ಲಿಪಿ ಸ್ವರೂಪ ಬಾದಾಮಿ ಚಾಲುಕ್ಯರ ಲಿಪಿ ವಿಕಾಸದಲ್ಲಿ ಮುಖ್ಯವಾದುದಾಗಿದೆ. ಈ ಶಾಸನದಲ್ಲಿ ಕನ್ನಡ ಭಾಷೆಯ 'ಕಲ್ಮನೆ' ಮುಂತಾದ ಪದಗಳು ಮುಖ್ಯವಾಗುತ್ತವೆ.

ಮಂಗಲೀಶನ ಗುಹಾಶಾಸನ. ಬಾದಾಮಿ. ಕ್ರಿ.ಶ. ೫೭೮

ಶಾಸನಗಳ ಲಿಪಿ ಸ್ವರೂಪ ಬದಲಾವಣೆಯನ್ನು ಶಿಲಾಶಾಸನ ಮತ್ತು ತಾಮ್ರಶಾಸನಗಳಲ್ಲಿ ಬೇರೆ ಬೇರೆಯಾಗಿಯೇ ಗಮನಿಸಬೇಕಾಗಿದೆ. ಅದರೊಂದಿಗೆ ಪ್ರಾದೇಶಿಕ ವೈವಿಧ್ಯತೆಯನ್ನೂ ಸೂಕ್ಷ್ಮವಾಗಿ ಪರಿಶೀಲಿಸಬೇಕಾಗುತ್ತದೆ. ಹಾಗೂ ಲಿಪಿಕಾರರಿಂದಲೂ ಲಿಪಿ ರೂಪಾಂತರಗೊಳ್ಳುತ್ತದೆ. ಇದನ್ನು ಪ್ರತಿ ಕಾಲಘಟ್ಟದಲ್ಲಿಯೂ ಗಮನಿಸಬೇಕಾಗಿದೆ. ಬಾದಾಮಿ ಚಾಲುಕ್ಯರ ಇನ್ನೂರಕ್ಕೂ ಹೆಚ್ಚಿನ ವರ್ಷದ ಆಡಳಿತಾವಧಿಯಲ್ಲಿ ಲಿಪಿ ಸ್ವರೂಪವೂ ಸಾಕಷ್ಟು ಬದಲಾವಣೆ ಹೊಂದಿದೆ. ಇದನ್ನು ಪ್ರಮುಖವಾಗಿ ಗಮನಿಸಿದಲ್ಲಿ.

೧. ತಲೆಕಟ್ಟಿನಲ್ಲಿ ಪೇಟಿಕಾ ಶಿರಸ್ಸು ಬಿಟ್ಟು, ಸಣ್ಣಗೆರೆಯಾಕಾರದ ತಲೆಕಟ್ಟಿನ ಬಳಕೆ

೨. ಲಿಪಿಯನ್ನು ಗುಂಡಾಗಿ ಬರೆಯುವ ಹಾಗೂ ಅಲಂಕಾರವಾಗಿ ಬರೆಯುವ ಪ್ರಯತ್ನ

೩. ಕದಂಬ ಲಿಪಿಯಲ್ಲಿನ ಚೌಕಾಕಾರದ ಏಕತಾನತೆಯಿಂದ (ಉದಾ: ತಾಳಗುಂದ ಸ್ತಂಭ ಶಾಸನ) ಸ್ವತಂತ್ರವೂ, ಗುಂಡಾಗಿರುವ ಸ್ವರೂಪ, ಗಾತ್ರದಲ್ಲಿ ಹೊಂದಾಣಿಕೆ ಗೊಳಿಸಿ ಸಾಲಿನಲ್ಲಿ ಜೋಡಿಸುವ ಪ್ರಯತ್ನ (ಉದಾ: ಮಂಗಲೀಶ, ಕಪ್ಪೆ ಅರಭಟ್ಟನ ಶಾಸನ ಮುಂತಾದವು, 'ಶ್ರೀ'ಕಾರವನ್ನು ವಿಶೇಷವಾಗಿ ಬರೆಯುವ ಪ್ರಯತ್ನ)

೪. ಲಿಪಿಯಲ್ಲಿ ಕೆಳಮುಖವಾಗಿ ಬೆಳೆದ ಗೆರೆಗಳು ಎಡಕ್ಕೆ ಮೇಲ್ಭಾಗದಲ್ಲಿ ಮುಂದುವರಿದು ಅಗಲ ಸ್ವರೂಪ ಪಡೆದಿದೆ. (ಉದಾ: ಅ, ಕ, ರ, ತ ಇತ್ಯಾದಿ)

೫. ಅಕ್ಷರದ ಉದ್ದ ಕಡಿಮೆಯಾಗುತ್ತಾ ಅಗಲವು ಹೆಚ್ಚುತ್ತಿದೆ. ಇದು ಲಿಪಿ ದುಂಡಾಗುವ ಪ್ರವೃತ್ತಿಗೆ ಕಾರಣ (ಉದಾ: ಪ, ದ, ಫ, ಜ, ಥ ಮುಂತಾದವು)

೬. ಹೋಲಿಕೆಯಲ್ಲಿರುವ ಲಿಪಿಗಳನ್ನು ಸ್ವಲ್ಪ ಬದಲಾವಣೆ ಮಾಡುವ ಮೂಲಕ ಮತ್ತೊಂದು ಲಿಪಿಯನ್ನು ಸೃಷ್ಟಿಸಿಕೊಂಡಿರುವುದು ಕಂಡುಬರುತ್ತದೆ. (ಉದಾ: ಅ–ಆ, ಖ–ಗ, ಚ–ವ, ಡ–ಢ, ಪ–ಫ, ಈ–ರ, ಡ–ಳ)

* ಕಾಗುಣಿತವನ್ನು ಗಮನಿಸಿದಾಗ 'ಆ' ಕಾರದ ದೀರ್ಘವು ಲಿಪಿ ತಲೆಕಟ್ಟಿನಿಂದ ಸ್ವಲ್ಪ ಮುಂದೆ ಬೆಳೆದು ಕೆಳಮುಖವಾಗಿ ಬೆಳೆದಿದೆ. (ಉದಾ : [illegible])

* ಲಿಪಿಗೆ ಸೇರಿದಂತೆ ತಲೆಕಟ್ಟಿನ ಮೇಲೆ 'ಇ' ಕಾರದ ಸ್ವರವನ್ನು ಪೂರ್ಣವೃತ್ತದಿಂದಲೂ 'ಈ' ಕಾರ ಸ್ವರವನ್ನು ಈಗಿನ 'ಲಿ' ರೂಪದಲ್ಲಿ ತಲೆಕಟ್ಟಿಗೆ ಹೊಂದಿಸಿ ಬರೆಯಲಾಗಿದೆ. ಈಗಲೂ ಹ್ರಸ್ವ(ಇ) ಪೂರ್ಣವೃತ್ತದಿಂದಲೂ (ಉದಾ: ವಿ, ಕಿ, ನಿ) ಹಾಗೂ ದೀರ್ಘಸ್ವರ(ಈ)ವನ್ನು ಬರೆಯುವಾಗ ಹೊರಭಾಗದಲ್ಲಿ ಪಕ್ಕಕ್ಕೆ ಬರೆಯುತ್ತೇವೆ. (ಉದಾ: ವೀ, ದೀ, ನೀ....)

* 'ಉ' ಕಾರ ಕೆಲವು ಅಕ್ಷರಗಳ ಬಲ ಭಾಗದಲ್ಲಿ ಅಕ್ಷರಕ್ಕೆ ಹೊಂದಿಕೊಂಡಂತೆ ಒಂದು ಬಾಗಿದ ಗೆರೆ ಮೂಲಕ ಸೂಚಿಸಿದೆ. ( [illegible] ) ಹಾಗೆಯೇ ದುಂಡಾದ ಅಕ್ಷರಗಳಿಗೆ ಕೆಳಗಿನಿಂದ ಕೊಂಬು ಕೊಡುವುದರ ಮೂಲಕ ಸೂಚಿಸಿದೆ. (ಉದಾ: [illegible])

* 'ಊ' ಕಾರದಲ್ಲಿ ಹಿಂದೆ ತಿಳಿಸಿದಂತೆ ಮೊದಲ ಕೊಂಬಿನ ಪಕ್ಕದಲ್ಲಿ ಇನ್ನೊಂದು ಕೊಂಬು ನೀಡುವ ಮೂಲಕ ಬರೆಯಲಾಗಿದೆ. ಹಾಗೂ ದುಂಡಾಗಿರುವ ಅಕ್ಷರದಲ್ಲಿ ಕೊಂಬಿನ ತುದಿಯನ್ನು ಎಡ/ಬಲ ಭಾಗಕ್ಕೆ ಬಾಗಿಸುವ ಮೂಲಕ ಬರೆಯಲಾಗಿದೆ. (ಉದಾ: [illegible])

* 'ಏ' ಕಾರ ದೀರ್ಘವು ಎಡಕ್ಕೆ ಮುಂದುವರೆದು ಕೆಳಕ್ಕೆ ಬಾಗಿದೆ. (ಉದಾ: [illegible] )

* 'ಓ' ಕಾರವನ್ನು ಲಿಪಿ ತಲೆಕಟ್ಟಿನ ಎರಡೂ ಬದಿಯಲ್ಲಿ ಮುಂದುವರಿಸಿ ಬಾಗಿಸಲಾಗುತ್ತದೆ. (ಉದಾ: [illegible] )

* 'ಔ' ಕಾರವನ್ನು 'ಓ' ಕಾರದಂತೆಯೇ ಬರೆದು, ಲಿಪಿ ಬಲಭಾಗದ ಗೆರೆ ಸ್ವಲ್ಪ ಮೇಲೆ ಹೋಗಿ, ಕೆಳ ಬಾಗುತ್ತದೆ. (ಉದಾ: [illegible] )

* ಅನುಸ್ವಾರ(ಂ)ವನ್ನು ಅಕ್ಷರದ ಬಲ ಮೇಲ್ಭಾಗದಲ್ಲಿ ಬಂದು ಚುಕ್ಕೆ ಮೂಲಕ ಗುರುತಿಸಿದೆ. ವಿಸರ್ಗ(ಃ)ವನ್ನು ಅಕ್ಷರದ ಬಲಭಾಗದಲ್ಲಿ ಎರಡು ಚಿಕ್ಕ ಚುಕ್ಕೆಗಳನ್ನು ಮೇಲೆ ಕೆಳಗೆ ಇಡಲಾಗಿದೆ. ಈ ಲಿಪಿ ವಿನ್ಯಾಸದಲ್ಲಿಯೇ ಈಗಿನ ವಿಸರ್ಗ ಚಿಹ್ನೆ ಬಳಕೆಯಲ್ಲಿವೆ.

* 'ಟ' ಮತ್ತು 'ಜ' ಬಳಕೆಯು ಮುಂದುವರಿದು ಈ ಕಾಲದಲ್ಲಿ ನಿರ್ದಿಷ್ಟ ಆಕಾರವನ್ನು ಪಡೆದಿದೆ.

* ಒತ್ತಕ್ಷರಗಳನ್ನು ಬರೆಯುವ ಸಂದರ್ಭದಲ್ಲಿ ಒತ್ತಕ್ಷರಗಳು ಮೂಲ ಅಕ್ಷರಕ್ಕೆ ಹೊಂದಿಕೊಂಡಂತೆ ಅಕ್ಷರದ ಕೆಳಭಾಗದಲ್ಲಿ ಸ್ವಲ್ಪ ಚಿಕ್ಕದಾಗಿ ಬರೆಯಲಾಗಿದೆ.

ಬಾದಾಮಿ ಚಾಲುಕ್ಯರ ಲಿಪಿಯಲ್ಲಿ ರೂಪಗೊಂಡ ಲಿಪಿ ಸ್ವರೂಪವು ಈಗಿನ ಕನ್ನಡ ಲಿಪಿಯ ಮೂಲವಾಗಿದೆ. ಆನಂತರದ ರಾಜವಂಶಗಳಲ್ಲಿ ಈ ಮೂಲ ಸ್ವರೂಪ ಹಲವಾರು ಬದಲಾವಣೆ ಪಡೆದು, ಇಂದಿನ ಕನ್ನಡ ಲಿಪಿ ರೂಪಗೊಂಡಿದೆ ಎಂಬುದರಲ್ಲಿ ಸಂಶಯವಿಲ್ಲ.

ಈ ಕಾಲಘಟ್ಟದ ವರ್ಣಮಾಲೆಯಲ್ಲಿ ಓ, ಕ, ಗ, ಠ, ತ, ಥ, ದ, ನ, ಮ, ಸ ಇವುಗಳು ಇಂದಿನ ಲಿಪಿಗೆ ಸಮೀಪವಾಗಿವೆ ಹಾಗೂ 'ಟ' ಮತ್ತು 'ಜ' ಸ್ಥಿರ ರೂಪಹೊಂದಿರುವುದನ್ನು ಕಾಣಬಹುದು.

ಬಹುತೇಕ ಶಾಸನಗಳಲ್ಲಿ ಬರಹ/ಕೆತ್ತನೆಯು ತಜ್ಞ ಲಿಪಿಕಾರರಿಂದಲೇ ಆಗಿರುವುದು ಕಂಡುಬರುತ್ತದೆ. ಹಾಗೆ ಹಲವಾರು ಲಿಪಿಕಾರರು ತಮ್ಮ ಹೆಸರನ್ನು ಕೆತ್ತಿರುವುದು ಕಂಡುಬಂದಿದೆ.[5] (ಉದಾ: ಶ್ರೀಸತ್ಯಾಶ್ರಯನ್, ಶ್ರೀಕೋಳಿಮಞ್ಚ ಅಕ್ಷರ ಮೇರು)



ಬಾದಾಮಿ ಕಪ್ಪೆ ಅರಭಟ್ಟನ ಶಾಸನ. ಕ್ರಿ.ಶ. ಸು.೭೦೦



ಪಟ್ಟದ ಕಲ್ಲು ಶಾಸನ

**ಬಾದಾಮಿ ಚಾಲುಕ್ಯರ ಲಿಪಿ ಪ್ರವಾಸ**

ಬಾದಾಮಿ ಚಾಲುಕ್ಯರು ಹಲವಾರು ದೇಶಗಳೊಡನೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು. ಮುಖ್ಯವಾಗಿ ಆಗ್ನೇಯ ಏಷ್ಯಾದೇಶಗಳೊಡನೆ ವ್ಯಾಪಾರ ಹಾಗೂ ಸಾಂಸ್ಕೃತಿಕ ಸಂಬಂಧವನ್ನು ಹೊಂದಿದ್ದರು. ಈ ಸಂಬಂಧದಿಂದ ಕಲೆ, ಸಾಹಿತ್ಯ ಮುಂತಾದ ಸಾಂಸ್ಕೃತಿಕ ವಿನಿಮಯ ಬೆಳೆಯಲು ಸಹಾಯವಾಯಿತು. ಈ ಹಿನ್ನೆಲೆಯಲ್ಲಿ ಲಿಪಿಯೂ ಕೂಡ ಇಲ್ಲಿಂದ ಆಗ್ನೇಯ ಏಷ್ಯಾದೇಶಗಳ ಕಡೆಗೆ ಪಸರಿಸಿದೆ. ಇದಕ್ಕೆ ವ್ಯಾಪಾರವೇ ಮುಖ್ಯಕಾರಣವಾಗಿದೆ ಎಂಬುದನ್ನು ಸಂಶೋಧಕರು ಗುರುತಿಸಿದ್ದಾರೆ.

"ಆಗ್ನೇಯ ಏಷ್ಯಾದ ಅತ್ಯಂತ ಪ್ರಾಚೀನ ಶಾಸನ ಲಿಪಿಗಳನ್ನು ಅದೇ ಕಾಲದಲ್ಲಿ ಭಾರತದ ಬೇರೆ ಬೇರೆ ಭಾಗಗಳಲ್ಲಿ ಪ್ರಚಲಿತವಾಗಿದ್ದ ಲಿಪಿಗಳೊಂದಿಗೆ ಹೋಲಿಸಿದಲ್ಲಿ ಇವು ಯಾವುದಕ್ಕೆ ಸಮೀಪವಾಗಿವೆ ಎಂಬ ಅಂಶದಿಂದ ಆ ಲಿಪಿಯನ್ನು ವಿದೇಶದಲ್ಲಿ ಬಳಕೆಗೆ ತಂದ ಜನ ಭಾರತದ ಯಾವ ಪ್ರಾಂತ್ಯದಿಂದ ತೆರಳಿರಬೇಕು ಎಂಬುದನ್ನು ನಿಷ್ಕರ್ಷಿಸಬಹುದು. ಸುಮಾರು ೧೯೦೪ನೆಯ ಇಸವಿಯಷ್ಟು ಮುಂಚೆಯೇ ಡಾ.ಕೆರ್ನ್‌ರವರು ಮಲಯ ದೇಶದ 'ಚೆರುಕ್–ತುಕನ್' ಶಾಸನ ವಿಮರ್ಶೆ ಮಾಡುತ್ತಾ, ಆ ಶಾಸನದ ಲಿಪಿಯೂ ಚಂಪಾ(ವಿಯಟ್ನಾಮ್) ದೇಶದ 'ಭವವರ್ಮ'ನ ಶಾಸನಗಳ ಲಿಪಿಯೂ ಮತ್ತು ಕರ್ನಾಟಕದ ಪಟ್ಟದಕಲ್ಲಿನ ಶಾಸನಗಳ ಲಿಪಿಯೂ ಒಂದೇ ಮಾದರಿಯವೆಂದು, ಈ ನಾಡುಗಳ ಪ್ರಾಚೀನ ಲಿಪಿಗಳ ಸಾಮ್ಯತೆಯನ್ನು ಗಮನಿಸಿದ್ದರು."[೬]

ಕೆಲವು ವಿದ್ವಾಂಸರು ಆಗ್ನೇಯ ಏಷ್ಯಾಲಿಪಿಗಳ ಬಗ್ಗೆ ಅತ್ಯಂತ ಪ್ರಾಚೀನ ಶಾಸನಗಳ ಲಿಪಿಗಳು ಪಲ್ಲವ ಲಿಪಿಗಳನ್ನು ಹೋಲುತ್ತವೆಯೆಂದೂ, ಮತ್ತೆ ಕೆಲವರು ಇದೇ ಲಿಪಿಗಳು ಉತ್ತರ ಭಾರತದ ಲಿಪಿಗೆ ಸಮಾನವಾಗಿವೆ ಎಂದು ವಿರುದ್ಧ ಅಭಿಪ್ರಾಯಪಟ್ಟಿದ್ದಾರೆ.

"ಇತ್ತೀಚಿನ ಇಂತಹ ಒಂದು ಪ್ರಯತ್ನವನ್ನು ಮಾಡಿರುವ ಭಾರತದ ಪ್ರಖ್ಯಾತ ಶಾಸನ ತಜ್ಞರಾದ ಡಾ. ಡಿ.ಸಿ.ಸರ್ಕಾರ್‌ರವರು ಈ ಲಿಪಿ ಶಾಸನಗಳ ಸ್ವರೂಪ ಮೊದಲಾದ ಆಂತರಿಕ ಆಧಾರಗಳಿಂದ, ಆಗ್ನೇಯ ಏಷ್ಯಾದ

ಸಾಂಸ್ಕೃತಿಕ ವಿಕಾಸದಲ್ಲಿ, ಅದರಲ್ಲೂ ಬರವಣಿಗೆಯ ಕಲೆಯನ್ನು ವಿಸ್ತರಿಸುವುದರಲ್ಲಿ ದಕ್ಷಿಣ ಭಾರತದ ಪಶ್ಚಿಮ ಭಾಗವು ಬಹಳ ಮುಖ್ಯಪಾತ್ರವಹಿಸಿದೆ ಎಂದು ತೋರಿಸಿಕೊಟ್ಟಿದ್ದಾರೆ. ಈ ದಕ್ಷಿಣ ಭಾರತದ ಪಶ್ಚಿಮ ಭಾಗ ಎಂಬುದು ಮುಖ್ಯವಾಗಿ ಕದಂಬ ಹಾಗೂ ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟ ಪ್ರದೇಶ. ಅದರಲ್ಲಿಯೂ ಕರ್ನಾಟಕ ಎಂಬುದನ್ನು ಅವರ ಇನ್ನೊಂದು ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ.”[೨] ಡಾ. ಎಸ್.ನಾಗರಾಜ್‌ರವರು ತಮ್ಮ ಲೇಖನ ಕರ್ನಾಟಕ ಮತ್ತು ಆಗ್ನೇಯ ಏಷ್ಯಾದ ಪ್ರಾಚೀನ ಲಿಪಿಗಳು ಎಂಬಲ್ಲಿ ಬಾದಾಮಿ ಚಾಲುಕ್ಯ ಮತ್ತು ಆ ದೇಶಗಳ ಲಿಪಿ ಹೋಲಿಕೆಯನ್ನು ಲಿಪಿಗಳ ಪಟ್ಟಿಕೆ ಮೂಲಕ ವಿವರಿಸಿರುವುದನ್ನು ಕಾಣಬಹುದು. ಹೀಗೆ ಬಾದಾಮಿ ಚಾಲುಕ್ಯರ ವ್ಯಾಪಾರ ಸಂಬಂಧದಿಂದ ಲಿಪಿಯೂ ಬೇರೆ ದೇಶಗಳಲ್ಲಿ ಹಾಸುಹೊಕ್ಕಾಗಿದೆ. ಅದಲ್ಲದೆ ಚಾಲುಕ್ಯರ ಶಾಸನಗಳಲ್ಲಿನ 'ಶಕವರ್ಷ' ಉಲ್ಲೇಖವೂ ಕೂಡ ಆನಂತರ ಕಾಲದಲ್ಲಿ ಆ ದೇಶದಲ್ಲಿಯೂ ಬಳಕೆಯಾಗಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ.

**ಗಂಗರ ಲಿಪಿ**

**ಗಂಗರ ಲಿಪಿ ವರ್ಣಮಾಲೆ**

ಗಂಗರು ಕ್ರಿ.ಶ.೩೫೦ರಿಂದ ಸುಮಾರು ೬೫೦ ವರ್ಷಗಳ ಕಾಲ ಒಂದು ಪ್ರಬಲ ಸ್ವತಂತ್ರ ಹಾಗೂ ಸ್ಥಿರರಾಜ್ಯ ರೂಪಿಸಿದಂತಹ ಮಾಂಡಳೀಕರು. ಮೊದಲು ಕೋಲಾರವನ್ನು ರಾಜಧಾನಿಯನ್ನಾಗಿ ಹೊಂದಿದ್ದರು. ನಂತರದಲ್ಲಿ ತಲಕಾಡಿಗೆ ಬದಲಾಯಿಸಿಕೊಂಡು 'ತಲಕಾಡಿನ ಗಂಗರ'ರೆಂದೇ ಪ್ರಸಿದ್ಧರಾಗಿದ್ದಾರೆ. ರಾಜಕೀಯ ಬದಲಾವಣೆಯಿಂದ 'ಮಂಕುಂದ' ಮತ್ತು 'ಮಣ್ಣೆ'ಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು.

ಗಂಗರ ಮೊದಲ ಕಾಲಾವಧಿಯಲ್ಲಿ ತಾಮ್ರಪಟಗಳೇ ಮುಖ್ಯವಾಗಿ ಅವರ ಇತಿಹಾಸವನ್ನು ಕಟ್ಟಿಕೊಡುತ್ತವೆ. ಸಂಸ್ಕೃತ ಭೂಯಿಷ್ಟವಾದ ತಾಮ್ರಪಟಗಳಲ್ಲಿ ಆಯಾಕಾಲದ ರಾಜವಂಶಗಳಲ್ಲಿ ಬಳಸಲಾಗುತ್ತಿದ್ದ ಲಿಪಿಗಳನ್ನೇ ಸ್ವಲ್ಪ ಬದಲಾವಣೆಯೊಂದಿಗೆ ಬಳಸಿರುವುದು ಕಂಡುಬರುತ್ತದೆ. ಇದರಲ್ಲಿ ಪ್ರಾದೇಶಿಕ ವೈವಿಧ್ಯತೆಯನ್ನು ಕಾಣಬಹುದು.

ಶಿಲಾಶಾಸನಗಳು ಕ್ರಿ.ಶ.೬ನೇ ಶತಕದ ನಂತರ ಕಾಣಸಿಗುತ್ತದೆ. ತುಮಕೂರು ಜಿಲ್ಲೆಯ ಜಲಗಾರ ದಿಬ್ಬ ಹಾಗೂ ಶ್ರೀನಿವಾಸಪುರ ತಾಲ್ಲೂಕಿನ ಕಲ್ಲೂರು ಶಾಸನಗಳು ಮೊದಲ ಹಂತದಲ್ಲಿ ಕಾಣಸಿಗುತ್ತವೆ. ಆನಂತರ ಶ್ರೀಪುರುಷನ ಕಾಲದಿಂದ

ಹೆಚ್ಚಿನ ಶಿಲಾಶಾಸನಗಳು ಕಾಣಿಸಿಕೊಳ್ಳುತ್ತವೆ. ಇವರು ಶಾಸನಗಳಲ್ಲಿ ಸಂಸ್ಕೃತ, ಕನ್ನಡ, ತಮಿಳು ಭಾಷೆ ಬಳಸಿದಂತೆಯೇ ನಾಗರಿ, ಕನ್ನಡ ಹಾಗೂ ತಮಿಳು ಲಿಪಿಯನ್ನೂ ಬಳಸಿದ್ದಾರೆ.

ಈ ಹಿಂದೆ ತಿಳಿಸಿದಂತೆ ಮೊದಲ ಘಟ್ಟದಲ್ಲಿನ ತಾಮ್ರ ಶಾಸನಗಳಲ್ಲಿ ಲಿಪಿಯು ಕದಂಬ ಮತ್ತು ಪಲ್ಲವ ಲಿಪಿ ಸ್ವರೂಪದ ಲಕ್ಷಣ ಹೊಂದಿದ್ದಾಗಿದೆ. ಆದರೂ ಚೌಕಾಕಾರದ ತಲೆಕಟ್ಟುಗಳು ಕಂಡುಬರುವುದಿಲ್ಲ. ಸಣ್ಣ ಚುಕ್ಕೆಯಾಕಾರವಿದ್ದು, ತಲೆಕಟ್ಟು ಎನ್ನುವಂತಿದೆ. ಮೊದಲನೆಯಾದಾಗಿ ಬೆಂಡಿಗಾನಹಳ್ಳಿ ವಿಜಯ ಕೃಷ್ಣವರ್ಮನ ಶಾಸನ ಗಮನಿಸಬಹುದು. ಕದಂಬರ ಲಿಪಿಯುನ್ನು ಸ್ವಲ್ಪ ಬದಲಾಯಿಸಿಕೊಂಡಂತೆ ಕಾಣಬರುತ್ತದೆ. ಇದು ಕ್ರಿ.ಶ. ಸು.೭೭೦ ಅಂದರೆ ಶ್ರೀಪುರುಷನ ಕಾಲದವರೆಗೆ ಸ್ವಲ್ಪ ಭಿನ್ನವಾಗಿ ಮಾತ್ರ ಈ ಸ್ವರೂಪ ಕಾಣಿಸುತ್ತದೆ. ಶ್ರೀಪುರುಷನ ಅಂತ್ಯ ಕಾಲಕ್ಕೆ ಲಿಪಿಯಲ್ಲಿ ಹಲವಾರು ಬದಲಾವಣೆಯಾಗಿದೆ. ವಿಷಯ ವಿಸ್ತಾರದಿಂದ ಅಕ್ಷರಗಳು ಚಿಕ್ಕದಾಗುತ್ತಾ, ಗುಂಡಾಗುತ್ತಾ, ಸಾಲಿಗೆ ಸಾಮಾನಾಂತರವಾಗುವುದನ್ನು ಗಮನಿಸಬಹುದು. ಸಮಕಾಲೀನ ಲಿಪಿಯನ್ನು ಅಲ್ಪ-ಸ್ವಲ್ಪ ಮಾರ್ಪಾಟುಗಳೊಂದಿಗೆ ಬಳಸಿರುವುದೇ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಗಂಗರದ್ದೇ ಆದ ಸ್ವತಂತ್ರ ಲಿಪಿ ಸ್ವರೂಪ ಗುರುತಿಸುವುದು ಕಷ್ಟಸಾಧ್ಯ. ಆದರೂ ಇವರ ಶಾಸನಗಳಲ್ಲಿನ ಲಿಪಿ ಸ್ವರೂಪದ ಅಧ್ಯಯನವಾಗಬೇಕಾದ ಅವಶ್ಯಕತೆ ಇದೆ.





ಬಾದಾಮಿ ಚಾಲುಕ್ಯರು ಕನ್ನಡ ನಾಡಿನ ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ಮುಂತಾದವುಗಳಿಗೆ ವಿಶೇಷ ಕೊಡುಗೆ ನೀಡಿರುವುದನ್ನು ಇತಿಹಾಸಕಾರರು ದಾಖಲಿಸಿದ್ದಾರೆ. ಹಾಗೆಯೇ ಕನ್ನಡ ಭಾಷೆ ಮತ್ತು ಲಿಪಿ ಬಳಕೆಯಲ್ಲಿಯೂ ವಿಶೇಷ ಕೊಡುಗೆ ನೀಡಿರುವುದು ಮೆಚ್ಚಲೇಬೇಕಾಗಿದೆ. ನಾಡಿನ ಸಂಸ್ಕೃತಿಯನ್ನು ಹೊರದೇಶಗಳಲ್ಲಿಯೂ ಹರಡುವಂತೆ ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಪ್ರಸ್ತುತ ಬಾದಾಮಿ ಚಾಲುಕ್ಯರ ಶಾಸನಗಳಲ್ಲಿನ ಭಾಷೆ, ಗಮನಿಸಿದಾಗ ಕನ್ನಡ ಭಾಷಾ ಬಳಕೆ ಎದ್ದು ಕಾಣುತ್ತದೆ. ಕನ್ನಡ ಮೊಟ್ಟ ಮೊದಲ ತ್ರಿಪದಿ ಕಪ್ಪೆ ಅರಭಟ್ಟನ ಶಾಸನದಲ್ಲಿ ಕಾಣಿಸಿರುವುದು ಗಮನಾರ್ಹ

ಅಂಶ. ಬಾದಾಮಿ ಚಾಲುಕ್ಯರ ಹಿಂದಿನ ರಾಜವಂಶಗಳಲ್ಲಿ ಉತ್ತರದ ಲಿಪಿಗಳನ್ನು ಬಳಸಿರುವುದು ಕಂಡಿದೆ. ಆದರೆ ಬಾದಾಮಿ ಚಾಲುಕ್ಯರ ಕಾಲದಲ್ಲಿ ಹಿಂದಿನ ಲಿಪಿಯನ್ನು ಬಳಸಿಕೊಂಡು, ರಾಜಾಶ್ರಯದಿಂದ ನುರಿತ ಲಿಪಿಕಾರರು ಲಿಪಿಗೆ ಹೊಸರೂಪವನ್ನು ಕೊಟ್ಟದ್ದಾರೆ. ಎನ್ನುವುದರಲ್ಲಿ ಸಂಶಯವೇ ಇಲ್ಲ. ತಮ್ಮ ಆಡಳಿತಕ್ಕೆ, ಕನ್ನಡ ಭಾಷೆಗೆ ತಕ್ಕಂತಹ 'ಕನ್ನಡ ಲಿಪಿ'ಯನ್ನು ರೂಪಿಸಿದವರಲ್ಲಿ ಇವರು ಮೊದಲಿಗರು. ಹೀಗೆ ಬಾದಾಮಿ ಚಾಲುಕ್ಯರು ಕನ್ನಡ ನಾಡಿನ ದೇವಾಲಯದ ವಾಸ್ತುಶೈಲಿಗೆ, ಭಾಷೆಗೆ ಮತ್ತು ಕನ್ನಡ ಲಿಪಿ ಸ್ವರೂಪಕ್ಕೆ ಹೊಸತನವನ್ನು ತಂದವರಲ್ಲಿ ಮೊದಲಿಗರಾಗುತ್ತಾರೆ.

**ಆಕರ ಗ್ರಂಥಗಳು**


೧. ಕನ್ನಡ ಲಿಪಿ ವಿಕಾಸ: ಡಾ. ಎಂ.ಜಿ.ಮಂಜುನಾಥ್, ಜಿ.ಕೆ.ದೇವರಾಜಸ್ವಾಮಿ. ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲ ಮೂಲ ಮಹಾಸಂಸ್ಥಾನ, ಮಂತ್ರಾಲಯ. ೨೦೦೪.

೨. ಲಿಪಿಯ ಹುಟ್ಟು ಬೆಳವಣಿಗೆ: ಡಾ. ದೇವರಕೊಂಡಾರೆಡ್ಡಿ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು. ೨೦೦೨.

೩. ಬಾದಾಮಿ ಸಾಂಸ್ಕೃತಿಕ ಅಧ್ಯಯನ: ಡಾ. ಶಿಲಾಕಾಂತ ಪತ್ತಾರ್, ಪ್ರಸಾರಾಂಗ ಕ.ವಿ.ವಿ. ಹಂಪಿ. ೨೦೦೦.

೪. ಕರ್ನಾಟಕದ ಅರಸು ಮನೆತನಗಳು: ನೆಲಮಂಗಲ ಲಕ್ಷ್ಮೀನಾರಾಯಣರಾಯರು ಮತ್ತು ವಿದ್ಯಾರತ್ನ ಶ್ರೀ ರಾ.ಸ್ವಾಪಂಚಮುಖಿ. ಕರ್ನಾಟಕ ಇತಿಹಾಸ ಸಂಶೋಧನ ಮಂಡಲ. ಧಾರವಾಡ. ೨೦೦೮.

೫. ಪ್ರಬುದ್ಧ ಕರ್ನಾಟಕ: ಸಂಪುಟ ೫೧, ಸಂಚಿಕೆ ೩, ಮೈ.ವಿ.ವಿ. ಮೈಸೂರು. ೧೯೬೯.


*****

# ೧೩. ಬೆಳಗಾವಿ ಜಿಲ್ಲೆಯ ಅಪ್ರಕಟಿತ ಜೈನಶಾಸನಗಳು

* ಶ್ರೀಮತಿ ಹನುಮಾಕ್ಷಿ ಗೋಗಿ

ಕರ್ನಾಟಕ ರಾಜ್ಯದ ವಾಯುವ್ಯ ಭಾಗದಲ್ಲಿರುವ ಬೆಳಗಾವಿ ಜಿಲ್ಲೆ ಮತ್ತು ಮಹಾರಾಷ್ಟ್ರದ ಗಡಿಪ್ರದೇಶದ ಹಳ್ಳಿಗಳಲ್ಲಿ ಹಲವಾರು ಕನ್ನಡ ಶಾಸನಗಳು ದೊರೆಯುತ್ತಲಿವೆ. ಜೈನಧರ್ಮಕ್ಕೆ ಸೇರಿದ ಶಾಸನಗಳ ಸಂಖ್ಯೆ ಇದರಲ್ಲಿ ಅಧಿಕವಾಗಿದ್ದು, ಬಹುಪಾಲು ಶಾಸನಗಳು ಉದಾರವಾದಿ ಪಂಥವಾದ ಯಾಪನೀಯ ಸಂಘಕ್ಕೆ ಸೇರಿವೆ. ಇತ್ತೀಚಿನ ವರ್ಷಗಳ ಕ್ಷೇತ್ರಕಾರ್ಯದಲ್ಲಿ ನನಗೆ ದೊರೆತ ಮತ್ತು ಡಾ. ಬಿ.ಆರ್. ಹಂದೂರ ಅವರು ಕಳಿಸಿದ ಪಡಿಯಚ್ಚುಗಳ ಆಧಾರದಿಂದ ಹತ್ತು ಶಾಸನಗಳ ಪಠ್ಯವನ್ನು ನೀಡುವುದು ಈ ಸಂಪ್ರಬಂಧದ ಆಶಯವಾಗಿದೆ.

ಇಲ್ಲಿರುವ ಎಂಟು ಶಾಸನಗಳು ತೀರ್ಥಂಕರ ವಿಗ್ರಹಗಳ ಪಾದಪೀಠಗಳಲ್ಲಿರುವುದು ಗಮನಿಸಬೇಕಾದ ಸಂಗತಿ. ಒಂದು ಶಾಸನವನ್ನು ಮಾತ್ರ ಬಹುಶಃ ಶಿಲಾಫಲಕದ ಮೇಲೆ ಕೆತ್ತಿದ್ದು, ಯಾವುದೋ ಕಾಲದಲ್ಲಿ ಅದನ್ನು ಒಡೆದು ತ್ರಿಶೂಲವಾಗಿ ಮಾರ್ಪಡಿಸಿರುವುದರಿಂದ ಶಾಸನದ ಕೆಲವು ಭಾಗ ಮಾತ್ರ ಓದಲು ಸಾಧ್ಯವಾಗುತ್ತದೆ. ಇನ್ನೊಂದು ಶಾಸನ ತುಂಡಾಗಿದೆ.

### ೧. ತಿಗಡೊಳ್ಳಿ ಶಾಸನ

ಬೈಲಹೊಂಗಲ ತಾಲೂಕಿನ ವೀರರಾಣಿ ಚೆನ್ನಮ್ಮನ ಹೆಸರು ಹೊತ್ತಿರುವ ಕಿತ್ತೂರಿನಿಂದ ಸುಮಾರು ೭ ಕಿ.ಮೀ. ಅಂತರದಲ್ಲಿ ತಿಗಡೊಳ್ಳಿಯಲ್ಲಿರುವ ಬಸದಿಯ ಶಾಂತಿನಾಥ ತೀರ್ಥಂಕರರ ಮೂರ್ತಿಯ ಪಾದ ಪೀಠದಲ್ಲಿ ಈ ಶಾಸವಿದೆ. ಲಿಪಿಸಾಮ್ಯದಿಂದ ಶಾಸನದ ಕಾಲವನ್ನು ಸುಮಾರು ೧೧ನೆಯ ಶತಮಾನವೆಂದು ಗುರುತಿಸಬಹುದು.

ಶಾಸನದ ಗಣ, ಗಚ್ಛಗಳ ಉಲ್ಲೇಖವಿರದೆ, ನೇರವಾಗಿ ಗಾವರಿಯ ಚಂದಿಸೆಟ್ಟಿ ಎನ್ನುವಾತ ಶಾಂತಿನಾಥ ದೇವರ ವಿಗ್ರಹವನ್ನು ಮಾಡಿಸಿದನೆಂದು ತಿಳಿಸುತ್ತದೆ. ಇಲ್ಲಿ ಗಾವರಿ ಎನ್ನುವುದು ಊರಿನ ಸ್ಥಳವಾಚಿ ಅಥವಾ ವರ್ತಕ ಪ್ರಕಾರದ ಗವರೆ ಆಗಿರಬಹುದು. ಚಂದಿಸೆಟ್ಟಿ ಮತ್ತು ಶಾಂತಿನಾಥದೇವ ಎನ್ನುವ ದೇವವಾಚಿ ಶಬ್ದಗಳು ಮಾತ್ರ ಉಲ್ಲೇಖಗೊಂಡಿವೆ, ವಿವರಗಳಿಲ್ಲ.

೧ **ಶ್ರೀಮತು ಗುಣಸಂಪನ್ನನಪ್ಪ ಗಾವರಿ–**
೨ **ಯ ಚಂದಿಸೆಟ(ಟ್ಟಿ) ಮಾಡಿಸಿದ**
೩ **ಸಾ(ಶಾ)ಂತಿನ(ನಾ)ಥದೇವರ ಪ್ರತುಮೆ @ @**

### ೨. ಅಸುಂಡಿ ಶಾಸನ

ಸೌದತ್ತಿ ತಾಲೂಕಿನಲ್ಲಿಯ ಅಸುಂಡಿ ಗ್ರಾಮದಲ್ಲಿ ಬನಶಂಕರಿಯ ದೇವಾಲಯವಿದ್ದು, ಅದರ ಪಕ್ಕದಲ್ಲಿ ಈ ಶಾಸನದ ತುಂಡು ಬಿದ್ದಿದೆ. ಶಾಸನದ ಮೇಲ್ಭಾಗ ಒಡೆದು ಹೋಗಿರುವುದರಿಂದ, ಪ್ರಾರಂಭದ ಜಿನಸ್ತುತಿ, ಮೈಳಾ ಪಾನ್ವಯದ ವರ್ಣನೆ, ಬಿರುದಾವಳಿಗಳೊಂದಿಗೆ ಉಲ್ಲೇಖಿತನಾದ ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ದೇವ, ಇನ್ನೊರ್ವರು ಮಹಾಜನರ ವರ್ಣನೆಗಳನ್ನು ಅಲ್ಲಲ್ಲಿ ಕಾಣಬಹುದು. ವಿವರಗಳು ಲಭ್ಯವಿಲ್ಲ. ಆದರೆ ಅರಸನ ಉಲ್ಲೇಕ ಇರುವುದರಿಂದ ಆತನ ಕಾಲ ಕ್ರಿಶ. ೧೦೭೬ ರಿಂದ ೧೧೨೫ ಆಗಿರುವುದರಿಂದ ಈ ಅವಧಿಯ ಶಾಸನವೆಂದು ಗುರುತಿಸಬಹುದು.

೧ **ಚ್ಚನಂ ಜೀಯಾ ತ್ರೋಲೋಕ್ಯನಾಥಸ್ಯ ಶಾಸನಂ ಜಿನಶಾಸನಂ [॥]**
೨ **ರಳಜಿವಂ ಭಾವಿಸೆ ಮೈಲಾಪಾನ್ವಯಮೇವಣ್ಣೆಪುರಣ್ನ**

* ಭೂ ಅಭಿವೃದ್ಧಿ ಅಧಿಕಾರಿಗಳು, ಕಾಡಾ, ಮಲಪ್ರಭಾ ಮತ್ತು ಘಟಪ್ರಭಾ ಯೋಜನೆಗಳು, ಬೆಳಗಾವಿ.

೩ ಶ್ರೀ ಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜ ಪರಮೇಶ್ವರಂ ಪರಮ
೪ ತ್ರಭುವನಮಲ್ಲದೇವ ವಿಜಯರಾಜ್ಯಮುತ್ತರೋತ್ತರಾಭಿ-
೫ ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾ-
೬ ತ್ರಿಭುವನಮಲ್ಲದೇವರ ನತ್ಯಭೂಮಿದಾನದ ಸರ್ವ್ವನಮಸ್ಯದ
೭ ಗಳ ॥ ಶ್ರೀಮತ್ರೃಭುವನಮಲ್ಲನ ನಾಮಾಳಂಕೃತಿ ನಮಸ್ಯದೆಸೆವ ಪ-
೮ ಕೀರ್ತಿಸುತಿರ್ಕ್ಕುಂ ॥ ವೃ ॥ ನಾಮಾಳಂಕೃತಿವೊತ್ತರೀ ಭುವನದೊಳ್
೯ ಪ್ರಕರಣ ಷಟ್ತರ್ಕ್ಕದೊಳ್ । ರುಗ್ಯಜುಸ್ಸಾಮಥರ್ವ್ವಣ
೧೦ . . . ಯ ಪ್ರಭುಗಳೀ ನೂರ್ವ್ವರಿಂದಗ್ಗಳಂ ॥ ಪರಹಿತ[೧]

### ೩. ನಾಗನೂರಿನ ಶಾಸನ

ಬೈಲಹೊಂಗಲ ತಾಲೂಕಿನ ನಾಗನೂರಿನ ಉತ್ತರ ಬದಿಯ ಬಯಲಿನಲ್ಲಿ ತ್ರುಟಿತವಾಗಿರುವ ಚೌವ್ವೀಸ ತೀರ್ಥಂಕರ ಮೂರ್ತಿಯ ಪಾದಪೀಠದ ಪೂರ್ವಾರ್ಧದಲ್ಲಿ ಈ ಶಾಸನವಿದೆ. ಪೀಠವು ಕೂಡ ತುಂಡಾಗಿರುವುದರಿಂದ ಶಾಸನದ ಪಠ್ಯವೂ ಅಪೂರ್ಣವಾಗಿ ದೊರೆಯುತ್ತದೆ. ತುಂಬ ಸಣ್ಣ ಅಕ್ಷರಗಳಲ್ಲಿ ಶಾಸನವನ್ನು ಬರೆದ ಕನ್ನಡ ಲಿಪಿಯಲ್ಲಿರುವ ಸಂಸ್ಕೃತ ಭಾಷೆಯ ಶಾಸನವಿದಾಗಿದೆ. ಲಿಪಿ ಸ್ವರೂಪದಿಂದ ಸುಮಾರು ೧೨ ಅಥವಾ ೧೩ನೆಯ ಶತಮಾನದ ಅಕ್ಷರಗಳೆಂದು ಗುರುತಿಸಬಹುದಾಗಿದೆ. ಎಡಬದಿಯಲ್ಲಿ 'ಹ್ರೀ ಲಕ್ಷ್ಮೀ' ಎಂಬ ಮಂಡಲ ಸಹಿತ ಮಂತ್ರವನ್ನು ಬಿಡಿಸಿದೆ. ಶಾಸನದ ೫ನೆಯ ಸಾಲಿನಲ್ಲಿ 'ಶ್ರೀ ಕಂಹ್ನರಸ್ಯ ಪ್ರಿಯೋ ಮಂತ್ರಿಯಸ್ತಿ ಪುನಾತಿರಾಜ' ಎಂದಿದ್ದು, ಈ ಬಾಗದಲ್ಲಿ ಯಾದವ ಕನ್ನರನ ಶಾಸನಗಳು ಬಹಳಷ್ಟು ಊರುಗಳಲ್ಲಿ (ಮುನವಳ್ಳಿ, ಬೆಂಡಿಗೇರಿ, ಚಿಕ್ಕ ಬಾಗೇವಾಡಿ, ಬೆಳಗಾವಿ) ದೊರೆತಿರುವುದರಿಂದ, ಈ ಶಾಸನವೂ ಅವನ ಇನ್ನೊಂದು ದಾಖಲೆಯೆಂದು ಗಮನಿಸಬಹುದು. ಶಾಸನದಲ್ಲಿ ಮಿತಿಯನ್ನು ಹೇಳದಿದ್ದರೂ ಮನ್ನರನ ಆಳ್ವಕೆ ಕ್ರಿ.ಶ. ೧೨೪೭ ರಿಂದ ೧೨೬೧ ರವರೆಗೆ ಎಂದು ವಿದ್ವಾಂಸರು ಈಗಾಗಲೇ ಗುರುತಿಸಿರುವುದರಿಂದ ಇದೇ ಅವಧಿಯಲ್ಲಿ ರಚನೆಗೊಂಡಿದೆಂದು ಊಹಿಸಬಹುದು. ಶಾಸನ ಬಹಳಷ್ಟು ತ್ರುಟಿತಗೊಂಡಿರುವುದರಿಂದ ಶ್ರೇಷ್ಠವಾದ ಮೂಲ ಸಂಘ, ಕಾಣೂರ ಗಣಕ್ಕೆ ಸೇರಿದ ಆಚಾರ್ಯನೊಬ್ಬನ ಉಲ್ಲೇಖವಿದೆಯೆಂದು, ಕಾರಣ ಯಾಪನೀಯ ಸಂಘಕ್ಕೆ ಸೇರಿದುದೆಂದು ಹೇಳಬಹುದು. ಯಾವ ತೀರ್ಥಂಕರನ ಮೂರ್ತಿಯಿದು ಎನ್ನುವುದೂ ಸ್ಪಷ್ಟವಾಗುವುದಿಲ್ಲ.

೧ ಸ್ವಸ್ತಿ ಶ್ರೀ ವರ ಮೂಲಸಂಘ ವಿಳಸತ್ಕಾಣೂರ್ಗ್ಗಣ ಶ್ರೀಮತ್ . . . . . . . .
೨ ನಚಂದ್ರಮಾ ಭುಜಬಳೀ ರಾಜ್ಯ ಪ್ರತಿಷ್ಠಾ ಕಾರಯಿ . . . . . . . . . .
೩ ರಾಜಯತೇ ವಿಜಯೇ ಭೂಮಂಡಳಿಕೋ . . ತಸ್ಯ ಶ್ರೀ ಕನ[ಕಪ್ರಭ*] . . .
೪ ಭವತಿ ಪುತ್ರೋ ಜೈತ್ರ ಶ್ರುತೋ ಭೂಪ ಶ್ರೀ ಭುಜದಂಡ ಖಂತಿ . . . . .
೫ ಶ್ರೀ ಕಂಹ್ನರಸ್ಯ ಪ್ರಿಯೋ ಮಂತ್ರಿಯಸ್ತಿ ಪುನಾತಿರಾಜ . . . . . . . .
೬ ತಂ । ಭೂತೋ ಭುವಿ ತತ್ರೀ ಸರ್ವ್ವ ರಕ್ಷಾಮಂ ಗುಣವತಿ . . . . . . .
೭ ಮ್ನಿ ಪ್ರತಿಷ್ಠಾ ಕೃತಾ ಯಸ್ಯಾಣೆ ಕನಕೇಂದ್ರಾನಾ ವಿಜಯತೇ . . . . . . .
೮ ನಾಥೋ ಜಿನಃ ॥

### ೪. ಮುರಕಿಬಾವಿ ಶಾಸನ

ಬೈಲಹೊಂಗಲ ತಾಲೂಕಿನ ನಾಗನೂರಿನ ಪೂರ್ವಕ್ಕೆ ಸುಮಾರು ೫ ಕಿ.ಮೀ. ದೂರದಲ್ಲಿರುವ ಮುರಕಿಭಾವಿಯೆಂಬ ಊರಿನ ಮಧ್ಯಭಾಗದಲ್ಲಿ ಉತ್ತರಾಭಿಮುಖವಾದ ಪ್ರಾಚೀನ ಹಾಳುಬಸದಿಯೊಂದಿದ್ದು, ಅದರಲ್ಲಿ ತೀರ್ಥಂಕರನ ಮೂರ್ತಿಯೊಂದು ಬಿದ್ದಿದೆ. ಅದರ ಪಾದಪೀಠದಲ್ಲಿ ಪ್ರಸ್ತುತ ಶಾಸನವನ್ನು ಕೆತ್ತಲಾಗಿದೆ. ೪ ಸಾಲುಗಳುಳ್ಳ ಈ ಶಾಸನದ ಬಹುಭಾಗ ಸವೆದು ಹೋಗಿರುವುದರಿಂದ, ಪ್ರಾರಂಭದಲ್ಲಿರುವ ಮೂಲಸಂಘದ ಬಲಾತ್ಕಾರ ಗಣ ಹಾಗೂ ಕೊನೆಯಲ್ಲಿರುವ ಮಲ್ಲಿನಾಥಸ್ವಾಮಿಗಳ ಪ್ರತಿಮೆಯ ಉಲ್ಲೇಖದ ಭಾಗಗಳನ್ನು ಮಾತ್ರ ಸ್ಪಷ್ಟವಾಗಿ ಓದಹಬುದಾಗಿದೆ. ಕಾರಣ ದಿಗಂಬರ ಸಂಪ್ರದಾಯಕ್ಕೆ ಸೇರಿದ ಶಾಸನವೆಂದು ಗುರುತಿಸಬಹುದು. ಲಿಪಿಸಾಮ್ಯದಿಂದ ಸುಮಾರು ೧೧ನೆಯ ಶತಮಾನದ ಅಕ್ಷರಗಳೆಂದು

ಹೇಳಬಹುದು.

೧ ಸ್ವಸ್ತಿ ಶ್ರೀ ಮೂಲಸಂಘ ಬಲಾತ್ಕಾರ[ಗಣ] . . . . ದ
೨ . . . ಜಿನಸಮಯ ವಾರ್ಧಿವರ್ದ್ಧನ ಸುಧಾಕರರುಂ
೩ . . . . . . . ನ . . . . ಳಾ . . . . ಪ್ಪ
೪ . . . . . . . ರ್ಮ್ಮ . . . ಂಘ . . . ಸೋ . .
೫ . . . . . . . . . . . . . . . . . . . ಶ್ರಮಲ್ಲಿ–
೬ [ನಾ*]ಥಸ್ವಾಮಿಗಳ ಪ್ರತಿಮೆ

**೫ ಅಮ್ಮಣಗಿ ಶಾಸನ**

ಹುಕ್ಕೇರಿ ತಾಲೂಕಿನ ಅಮ್ಮಣಗಿರಿಯ ಬಸದಿಯಲ್ಲಿರುವ ಚೌವ್ವೀಸ ತೀರ್ಥಂಕರ ವಿಗ್ರಹದ ಪಾದಪೀಠದ ಮೇಲೆ ಈ ಶಾಸನವಿದ್ದು, ಎಣ್ಣೆಜಿಡ್ಡು ಹಾಗೂ ಪೇಂಟ್ ಅಕ್ಷರಗಳಲ್ಲಿ ಸೇರಿ ಪಡಿಯಚ್ಚು ಸರಿಯಾಗಿ ಬರದಿದ್ದರೂ, ಲಿಪಿಸಾದೃಶ್ಯದಿಂದ ೧೧–೧೨ನೆಯ ಶತಮಾನದ ಅಕ್ಷರಗಳೆಂದು ಗುರುತಿಸಬಹುದು.

ಯಾಪನೀಯರ ಮೂಲಸಂಘಕ್ಕೆ ಸೇರಿದ ಸೂರಸ್ತ ಗಣದ ಶ್ರೀ ನಂದಿಭಟ್ಟಾರಕದೇವರ ಶಿಷ್ಯ ಅಮ್ಮಣಿಗೆ ಊರಿನ ಧನಶ್ರೀ ಎನ್ನುವಾತ ವಿಗ್ರಹ ಮಾಡಿಸಿದುದನ್ನು ಬಹುಶಃ ತಿಳಿಸುತ್ತದೆ.

೧ ಶ್ರೀ ಮೂಲಸಂಗ(ಘ)ದ ಸೂರಸ್ತ ಗಣದ ಶ್ರೀ ನಂದಿಭಟ್ಟರಕದೇವರ
೨ ಶಿಶ ಅಮಣಗೆಯೂರ ಧನಶ್ರೀ ತವ ಮಂಗಳ ಮಹ ಶ್ರೀ ಶ್ರೀ

**೬ ಎಲಿಮುನವಳ್ಳಿ ಶಾಸನ**

ಈ ಶಾಸನವೂ ಹುಕ್ಕೇರಿ ತಾಲೂಕಿನ ಎಲಿಮುನವಳ್ಳಿಯ ಬಸದಿಯಲ್ಲಿರುವ ನೇಮಿನಾಥ ತೀರ್ಥಂಕರ ಪಾದಪೀಠದ ಮೇಲಿದ್ದು, ಅಕ್ಷರಗಳು ಅಸ್ಪಷ್ಟವಾಗಿವೆ. ಕೊನೆಯ ಸಾಲಿನ ಪೂರ್ವಾರ್ಧದ ಅಕ್ಷರಗಳು ಓದಲು ಅಸಾಧ್ಯವಾಗಿವೆ. ಲಿಪಿಸ್ವರೂಪದಿಂದ ಸುಮಾರು ೧೩ನೆಯ ಶತಮಾನದ ಅಕ್ಷರಗಳೆಂದು ಗುರುತಿಸಬಹುದು.

ಶ್ರೀ ಮೂಲಸಂಘದ ದೇಸಿಯಗಣ ಪೊಸ್ತಕ ಗಚ್ಛ ಹಂನಸೋಗೆ ಬಳಿಯ ಹೆಸರುಗಳಿವೆ. ವಿವರಗಳು ತಿಳಿಯುವುದಿಲ್ಲ.

೧ ಶ್ರೀ ಮೂಲಸಂಘ ನಿರ್ಮ್ಮಳರಾಮಂ ದೇಸಿಯ ಗಣ ಸುಪೊಸ್ತಕ ಗಚ್ಛೋ.
೨ ದ್ಧಾ ಮತಂ ಕೊಂಡಕುಂದೆ ಪ್ರಿಯಾನ್ವವೆ ಹಂನಸೋಗೆ ನದ
೩ ಂ . . ನಸಂ ॥ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

**೭. ಬೆನಿವಾಡ ಶಾಸನ**

ಹುಕ್ಕೇರಿ ತಾಲೂಕಿನ ಬೆನಿವಾಡದ ಈ ಶಾಸನವು ಬಸದಿಯ ತೀರ್ಥಂಕರ ಪಾದಪೀಠದಲ್ಲಿ ದೊರೆತಿದೆ. ಶಾಸನದ ಬಹುಭಾಗಗಳು ತ್ರುಟಿತಗೊಂಡಿರುವುದರಿಂದ ವಿವರಗಳು ಲಭ್ಯವಿಲ್ಲ. ಅಕ್ಷರಗಳು ಸುಮಾರು ೧೨ನೆಯ ಶತಮಾನದ್ದಾಗಿದೆ.

ಮೈಳಾಪಾನ್ವಯ, ಕಾರೆಯಗಣ, ಶ್ರೀಧರ ತ್ರೈವಿದ್ಯದೇವರು, ಎಂಟುಹಿಟ್ಟುಗಳ ಉಲ್ಲೇಖವಿದ್ದು, ಶಿಲಾ ಬಸದಿಯ ಜೀರ್ಣೋದ್ಧಾರ ಹಾಗೂ ರಿಷಿಯರ ಆಹಾರದಾನಕ್ಕಾಗಿ ಸರ್ವಬಾಧಾ ಪರಿಹಾರವಾಗಿ ೨೦ ಕಮ್ಮ ಭೂದತ್ತಿಯನ್ನು ಬಿಟ್ಟ ಉಲ್ಲೇಖ ಇಲ್ಲಿದೆ. ಯಾಪನೀಯ ಸಂಘಕ್ಕೆ ಸೇರಿದ ಅನ್ವಯ, ಗಣಗಳು ಮತ್ತು ಶಿಲಾಬಸದಿ ಎಂಬ ಉಲ್ಲೇಖಗಳು ಗಮನ ಸೆಳೆಯುತ್ತವೆ. ಆ ಕಾಲದಲ್ಲಿ ಬಸದಿಗಳು ಕೇವಲ ಶಿಲೆಯಿಂದ ಕಟ್ಟಿದವುಗಳು ಇರದೆ ಬೇರೆ ವಸ್ತುಗಳಿಂದಲೂ ಕಟ್ಟುತ್ತಿದ್ದರೆಂಬ ಸೂಚನೆಯನ್ನು ಇದು ನೀಡುತ್ತದೆ.

೧ . . . . . . . . . . . . . .
೨ ರಾಜ್ಯಂಗೆಯ್ಯೆ . . . ಲು ಸಾಮನ್ತ ನಾರಾಯಣ . . .

೩ ಡಿಸಿದ . . ಮೈಳಾಪಾನ್ವಯ ಕಾರೆಯಗಣದ . . . . . .
೪ ಶ್ರೀಧರ ತ್ರೈವಿ[ದ್ಯ*]ದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕವಾಗಿ
೫ ಯ ರೂಪಗು . ಸರಗಾ . . ಬರಿ ಎಂಟುಹಿಟ್ಟು ಸಾ . . .
೬ ಸೆವ ಸಿ(ಶಿ)ಲಾಬಸದಿಯ ಜೀರ್ಣ್ನೋದ್ಧಾರಕ್ಕಂ ರಿಶಿಯರಾ–
೭ [ಹಾರ*]ಕ್ಕಂ ಸರ್ಬ್ಬಬಾಧ ಪರಿಹಾರವಾಗಿ । ಬಿಟ್ಟ ಭೂಮಿ ಕಮ್ಮ ೨೦
೮ . . ಮು ಧರ್ಮ್ಮದ ಸಹಿತ ಸತರದಿಂ ಪ್ರತಿಪಾಳಿಸುವರು ॥ @

೮. ಕಣಗಲಾ ಶಾಸನ

ಹುಕ್ಕೇರಿ ತಾಲೂಕಿನ ಕಣಗಲಾ ಬಸದಿಯಲ್ಲಿನ ೩" ಎತ್ತರ ೧೦" ಅಗಲದ ಭಗ್ನಮೂರ್ತಿಯ ಪಾದ ಪೀಠಪಿದಾಗಿದೆ. ಲಿಪಿಸಾದೃಶ್ಯದಿಂದ ಸುಮಾರು ೧೧ನೆಯ ಶತಮಾನದ ಅಕ್ಷರಗಳೆಂದು ಗುರುತಿಸಬಹುದಾಗಿದೆ. ಬಹುಶಃ ಅಕ್ಷರಗಳು ಸವೆದು ಪಡಿಯಚ್ಚು ಸರಿಯಾಗಿ ಮೂಡಿರದೇ ಇರುವುದರಿಂದ ಪಠ್ಯ ಅಪೂರ್ಣಗೊಂಡಿದೆ.

ಮೂಲಸಂಘ ಹಂನಸೋಗೆ ಬಳಿಗೆ ಸೇರಿದ ಬಸದಿಯೊಂದನ್ನು ಕಣಸೆಟ್ಟಿಯ ಮಗ ಮಲ್ಲಿಸೆಟ್ಟ ಜೀರ್ಣೋದ್ಧಾರ ಮಾಡಿಸಿದುದನ್ನು ತಿಳಿಸುತ್ತದೆ.

೧ ಸಂಘ ಜಸ ದೇಶನಾತಿಸನೊನು . . ರಾಡೆಗೆಯ
೨ . . ರ ಹಂನಸೋಗೆ ಬಳಿ । ಪ್ರಸಿಧೋ ಭವಾಕಾರಿ . .
೩ ನಂದನ ಸಂವತ್ಸರದ ಕಾರ್ತ್ತಿಕ ಸುಥ(ದ್ಧ) ಪಾಡ್ಯ ಆದಿ–
೪ ವಾರೇ ಲಖ್ಮಶ್ರೀ ಹವಸದ ಸಪ್ತವಾರೇ ಶ್ರೀವೋಜಗರಿಗೆ ಕಾಣಸೆ–
೫ ಟ್ಟಿಯ ಮಗ ಮಲ್ಲಿಸೆಟ್ಟಿಯರು ಜೀರ್ಣ್ನೋರ್ಧಾರ . . . .
೬ ರು ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

೯. ಕಸಮಳಗಿ ಶಾಸನ

ಖಾನಾಪುರ ತಾಲೂಕಿನ ಕಸಮಳಗಿಯಲ್ಲಿ ಇತ್ತೀಚೆಗೆ ಪ್ರಾಥಮಿಕ ಶಾಲೆಯ ಶೌಚಾಲಯ ಕಟ್ಟಿಸಲು ಪಾಯ ತೆಗೆಯುವಾಗ ಪಾರ್ಶ್ವನಾಥ ತೀರ್ಥಂಕರನ ಸುಂದರವಾದ ಹಸಿರು ಮಿಶ್ರಿತ ಕರಿಕಲ್ಲಿನ ಮೂರ್ತಿಯೊಂದು ದೊರೆತಿದ್ದು ಪಾದಪೀಠದ ಮೇಲೆ ಶಾಸನವಿರುವ ಕುರಿತು ಫೋಟೋ ಸಹಿತ ವರದಿಯೊಂದು ಪತ್ರಿಕೆಗಳಲ್ಲಿ ಪ್ರಕಟವಾಯಿತು. ವರದಿ ನೀಡಿದ ಡಾ. ಬಾಹುಬಲಿ ಹಂದೂರ ಅವರಿಂದ ಪಡಿಯಚ್ಚು ತರಿಸಿಕೊಂಡು, ಪರಿಷ್ಕೃತ ಪಾಠವನ್ನು ಇಲ್ಲಿ ನೀಡುತ್ತದ್ದೇನೆ.

೧ @ ಶ್ರೀ ಮೂಲಸಂಘ ಬಳಗಾಜಿಗಣದ ಕೆಶರ್ಮ್ಮ–
೨ ಣಗೆಯ ಬಸದಿಯ ತ್ರಿಭುವನಚಂದ್ರ ಭ–
೩ ಟ್ಟಾರಕದೇವರ ಗುಡ(ಡ್ಡ)ಂ ಕೈಹಮಸೆಟ್ಟಿ ಮಾಡಿಸಿದ ಪ್ರ–
೪ ತುಮೆ । @

ಜೈನಧರ್ಮದ ಇತಿಹಾಸದಲ್ಲಿ ಪ್ರಖ್ಯಾತವಾದ ಯಾಪನೀಯ ಸಂಘದಲ್ಲಿ ಮೂಲಸಂಘ ಪ್ರಮುಖ ಸ್ಥಾನವನ್ನು ಪಡೆದಿದೆ. ಈ ಸಂಘದಲ್ಲಿರುವುದು ಬಳಗಾಜಿ ಗಣ. ಕನ್ನಡ ಸಾಹಿತ್ಯದ ರತ್ನತ್ರಯರಲ್ಲೊಬ್ಬನಾದ ಕವಿ ರನ್ನ ಬಳಗಾಜ ಕುಲಕ್ಕೆ(ಗಣ) ಸೇರಿದವನಾಗಿದ್ದನೆಂಬುದು ಸರ್ವವಿದಿತ. ಈ ಬಳಗಾಜಿ ಗಣಕ್ಕೆ ಸೇರಿದ ಬಸದಿಗಳಲ್ಲೊಂದು ಕೆಶರ್ಮಣಗೆಯ ಬಸದಿ. ಈ ಬಸದಿಯಲ್ಲಿ ಸ್ಥಾನಾಚಾರ್ಯನಾಗಿದ್ದ ಜೈನಯತಿ ತ್ರಿಭುವನಚಂದ್ರ ಭಟ್ಟಾರಕದೇವರು. ಅವರ ಶಿಷ್ಯನಾದ ಕೈಹಮಸೆಟ್ಟಿ ಎನ್ನುವವನು ಮಾಡಿಸಿದ್ದು ಈ ಪ್ರತಿಮೆ ಎಂಬ ಅರ್ಥವನ್ನು ಈ ಶಾಸನದ ಬರಹವು ನೀಡುತ್ತದೆ.

ಶಾಸನದಲ್ಲಿ ಬಸದಿಯಿಂದ ಊರಿನ ಹೆಸರು ಕೆಶರ್ಮಣಗೆ. ಈ ಮೂಲಹೆಸರು ರೂಪಾಂತರಗೊಳ್ಳುತ್ತ ಹೋಗಿ, ಕೆಶರ್ಮ್ಮಣಗೆ > ಕೆಸರ್ಮ್ಮಣಗೆ > ಕೆಸರ್ಮಣಗೆ > ಕೆಸರ್ಮಳಗೆ > ಕೆಸಮಳಗೆ > ಕಸಮಳಗೆ > ಕಸಮಳಗಿ ಎಂದು ಈಗಿನ

ಹೆಸರನ್ನು ಪಡೆಯುವುದರಿಂದ, ಶಾಸನಸ್ಥ ಕೆಶರ್ಮ್ಮಣಗೆ ಎಂದರೆ ಈಗ ಶಾಸನಸಹಿತ ವಿಗ್ರಹ ದೊರೆತಿರುವ ಊರು ಕಸಮಳಗಿಯೇ ಆಗುತ್ತದೆ. ಇದರ ವ್ಯುತ್ಪತ್ತಿಯನ್ನು ಕೆಶರ್ಮಣನ + ಕೆಯ್ ಎಂದು ಬಿಡಿಸಿ, ಪೂರ್ವಪದ ವ್ಯಕ್ತಿವಾಚಿಯಾಗಿದ್ದು, ಉತ್ತರಪದ ಸ್ಥಳವಾಚಿಯಾಗಿದೆಯೆಂದು ಹೇಳಬೇಕಾಗುತ್ತದೆ. ಈಗಾಗಲೇ 'ನೆಲೆ' ಎನ್ನುವ ಅರ್ಥದ ಕೆಯ್ > ಗೆಯ್ > ಗಿ ಆಗಿ ಪರಿವರ್ತನೆ ಹೊಂದುತ್ತದೆಂದು ಸ್ಥಳನಾಮ ವಿಜ್ಞಾನಿಗಳು ಉದಾಹರಣೆ ಸಹಿತ ವಿವರಿಸಿರುತ್ತಾರೆ. ಕಾರಣ ಕೆಶರ್ಮಣ ಎನ್ನುವ ಹೆಸರಿನ ವ್ಯಕ್ತಿ ವಾಸಿಸಿದ ನೆಲೆ ಈ ಊರು ಎನ್ನುವ ಅರ್ಥದಲ್ಲಿ 'ಕೆಶರ್ಮಣಗೆ' ಊರ ಹೆಸರು ಬಂದಿದೆ. ಅದೇ ರೀತಿ ಇಲ್ಲಿ ಪ್ರತಿಮೆ ಮಾಡಿಸಿದ ವ್ಯಕ್ತಿಯ ಹೆಸರು ಡಾ. ಆರ್.ಎಂ. ಷಡಕ್ಷರಯ್ಯನವರು ಓದಿದಂತೆ 'ಹಮಿಸೆಟ್ಟಿ' ಎಂದಿರದೆ 'ಕೈಹಮಸೆಟ್ಟಿ' ಎಂದಿರು ವುದನ್ನು ಗಮನಿಸಬೇಕು. ಇಲ್ಲಿ ಹಳಗನ್ನಡ ಕಾವ್ಯದ 'ಕೈಪೆ ಸೋರೆ ಕುಡಿಯೇಂ ಮಿಡಿಯೇಂ ?' ಎಂಬ ವಾಕ್ಯ ತಟ್ಟನೆ ನೆನಪಾಗುತ್ತದೆ. ಇದನ್ನು ಕೈಪೆ+ಅಮ್ಮ+ಸೆಟ್ಟಿ > ಕೈಪಮ್ಮಸೆಟ್ಟಿ > ಕೈಪಮಸೆಟ್ಟಿ > ಕೈಹಮಸೆಟ್ಟಿ ಎಂದು ರೂಪಾಂತರಗೊಂಡಿದ್ದು ಇಲ್ಲಿ ಕೈಪೆ ಎಂದರೆ ಕಹಿ ಎನ್ನುವ ಅರ್ಥವಿದೆ ಎನ್ನುವುದನ್ನು ಗಮನಿಸಬೇಕು.

ಈ ಮೇಲ್ಕಾಣಿಸಿದ ವಿವರಗಳಿಂದ ಕೆಳಗಿನ ಅಂಶಗಳು ಗಮನಕ್ಕೆ ಬರುತ್ತದೆ.

೧ ಕಸಮಳಗಿ ಪ್ರಾಚೀನ ಕ್ಷೇತ್ರವಾಗಿದ್ದು, ೧೧ನೆಯ ಶತಮಾನದ ಕಾಲಕ್ಕೆ ಜೈನ ಬಸದಿಯೊಂದನ್ನು ಹೊಂದಿತ್ತು.

೨ ಕಸಮಳಗಿ ಗ್ರಾಮದ ಹೆಸರಿನ ಪ್ರಾಚೀನ ರೂಪವು 'ಕಡಶರ್ಮ್ಮಗೆ'

೩ ಮೂಲಸಂಘ, ಬಳಗಾರ ಗಂಗಳ ಉಲ್ಲೇಖವನ್ನು ಶಾಸನವು ಒಳಗೊಂಡಿದೆ.

೪ ಕಸಮಳಗಿಯ ಪರಿಸರದಲ್ಲಿ ಪಾರ್ಶ್ವನಾಥಸ್ವಾಮಿಯ ವಿಗ್ರಹವನ್ನು ಪ್ರತಿಷ್ಠಾಪಿಸಿ ಪೂಜಿಸಲಾಗುತ್ತಿತ್ತು.

೫ 'ಕೈಹಮಸೆಟ್ಟಿ' ಎನ್ನುವ ಅಪರೂಪದ ವ್ಯಕ್ತಿನಾಮವು ಇಲ್ಲಿದೆ.

ಒಟ್ಟಿನಲ್ಲಿ ಜೈನ ಧರ್ಮ, ಜೈನ ಗುರು ಪರಂಪರೆ, ಜೈನ ಪ್ರತಿಮಾ ಶಾಸ್ತ್ರ, ವ್ಯಕ್ತಿನಾಮ, ಸ್ಥಳನಾಮಗಳ ಅಧ್ಯಯನ ಮಾಡುವವರಿಗೆ ಮೂಲ ಆಕರಗಳನ್ನು ಈ ಶಾಸನ ಸಹಿತ ವಿಗ್ರಹವು ಒದಗಿಸುತ್ತದೆ.

**೧೦. ಬೆಳವಡಿಯ ಶಾಸನ**

ಬೈಲಹೊಂಗಲ ತಾಲೂಕಿನ ಬೆಳವಡಿಯು ಶಿವಾಜಿಯೊಂದಿಗೆ ಹೋರಾಡಿದ ಮಲ್ಲಮ್ಮನಿಂದಾಗಿ ಇಂದು ಇತಿಹಾಸ ಪ್ರಸಿದ್ಧ ಊರು. ಅಲ್ಲಿರುವ ವೀರಭದ್ರ ದೇವಸ್ಥಾನದ ಆವರಣದ ಹಿಂಭಾಗದಲ್ಲಿ ತ್ರಿಶೂಲವನ್ನು ಕೆತ್ತಿರುವ ಕಲ್ಲು ಇದೆ. ಇದರ ಮೇಲೆಯೇ ಪ್ರಸ್ತುತ ಶಾಸನವಿದೆ. ಬಹುಶಃ ಶಾಸನ ಫಲಕವಾಗಿದ್ದ ಕಲ್ಲನ್ನು ತ್ರಿಶೂಲ ಕೆತ್ತಲು ಬಳಸಿಕೊಂಡಿರುವುದರಿಂದ ಪಠ್ಯದ ಬಹುಭಾಗ ನಷ್ಟಗೊಂಡಿದೆ. ಮೂಲತಃ ಜೈನ ಬಸದಿಯಾಗಿದ್ದುದನ್ನು ನಂತರದ ಕಾಲದಲ್ಲಿ ವೀರಭದ್ರ ದೇವಾಲಯವಾಗಿ ಮಾರ್ಪಡಿಸಿದ ಕುರುಹುಗಳು ಈಗಲೂ ಕಾಣಿಸುತ್ತವೆ.

ಶಾಸನದ ಮೇಲ್ಭಾಗ ಒಡೆದು ಹೋಗಿರುವುದರಿಂದ ಶಾಸನ ನಿರ್ಮಾಣ ಕಾಲದ ಚಕ್ರವರ್ತಿಯು ಹೆಸರಿರುವ ಭಾಗ ದೊರೆಯದೇ ಇದ್ದರೂ, ಶಾಸನದಲ್ಲಿ ಬರುವ ತಿಥಿ "ಸಕವರ್ಷ ೯೪೮ನೆಯ ಪ್ರಭವ ಸಂವತ್ಸರಂ ಪ್ರವರ್ತ್ತಿಸೆ ತದ್ವರ್ಷಾಭ್ಯಂತರದ ಪೌಷ ಮಂಚಮಿ ಆದಿತ್ಯವಾರಂ ದಕ್ಷಿಣಾಯಣ ಸಂಕ್ರಾಂತಿ"ಯು ಕ್ರಿ.ಶ. ೧೦೨೬ರ ಡಿಸೆಂಬರಕ್ಕೆ ಸಮಾನವಾಗಿದೆ. ಆದರೆ ಇದು ಉತ್ತರಾಯಣ ಎಂದಿರಬೇಕಿತ್ತು. ಇದು ಕಲ್ಯಾಣ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಜಯಸಿಂಹನ ಕಾಲವಾಗಿದೆ.

ರಟ್ಟವಂಶದ ಕನ್ನಕೈರ ಮತ್ತು ಆತನ ಮಗಳು ಬಾಗಿಯಬ್ಬೆಯರ ಹೆಸರು ಶಾಸನದಲ್ಲಿದ್ದು, ಈತ ಸವದತ್ತಿ ರಟ್ಟರ ದೊರೆ ಮೊದಲನೆಯ ಕನ್ನಕೈರ ಎಂದು ಸ್ಪಷ್ಟವಾಗುತ್ತದೆ ಮತ್ತು ಈತನ ಶಾಸನಗಳು ಸಿಕ್ಕಿಲ್ಲವೆಂದು ಜೆ.ಎಫ್. ಫ್ಲೀಟರು (Dynasties of canarese ditricts) ಹೇಳಿದ ಮಾತು ಸರಿದುಹೋಗುತ್ತದೆ.

ಪ್ರಾರಂಭದ ಎರಡು ಪದ್ಯಗಳಲ್ಲಿ ಪೆರ್ಗಡೆ ನೊಳಂಬನೆಂಬ ವ್ಯಕ್ತಿಯನ್ನು ವರ್ಣಿಸುತ್ತಿದ್ದು, ನಂತರ ಕನ್ನಕೈರನ ಮಗಳು ಬಾಗಿಯಬ್ಬೆ ದಾನ ನೀಡಿದ ಉಲ್ಲೇಖವಿರುವುದರಿಂದ ಇವರಿಬ್ಬರು ಪತಿ-ಪತ್ನಿಯರಾಗಿರ ಬೇಕೆಂಬ ಸಂಭಾವ್ಯ ಊಹೆಯನ್ನು ಮಾಡಬಹುದೇ ವಿನಃ ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಇದಲ್ಲದೆ ಪಂಚಮಹಾಶಬ್ದ, ಭುಜಂಗಧ್ವಜ ವಿರಾಜಿತ ಬಿರುದುಗಳುಳ್ಳ ಮಹಾಸಾಮಂತನೊಬ್ಬ ಜನನನಿಯ ಪರೋಕ್ಷ ನಿಮಿತ್ತವಾಗಿ ನೀಡಿದ ದಾನವೊಂದರ ಪ್ರಸ್ತಾಪವಿದ್ದು, ವಿವರಗಳಿಲ್ಲ. ಬಹುಶಃ ಆತನ ಹೆಸರು 'ಗಂಡಮರಸ' ಇರಬಹುದು. ಏಕೆಂದರೆ ಮುಂದಿನ ಭಾಗದಲ್ಲಿ ಪೊಲೆಗ ಭೂಪಾಳ, ಪಗಡಮದೇವ. ಕುಮಾರ ಬಮ್ಮರಸ ರೊಂದಿಗೆ '. . ಣ್ಡಮರಸ'ನೂ ಇದ್ದಾನೆ. ಬೆಳುವಡಿಯ ಮೂವದಿಂಬರು ಗಾವುಂಡುಗಳೂ ಸಹಸ್ರಕೂಟ ಜಿನಾಲಯಕ್ಕೆ ದಾನ ನೀಡುವುದರಲ್ಲಿ ಹಿಂದೆ ಬೀಳುವುದಿಲ್ಲ.

ಶಾಸನದಲ್ಲಿ 'ಕೈರವ ಬಸದಿ' ಎಂಬ ಹೆಸರಿದೆ. ಬಹುಶಃ ಅರಸು ಕನ್ನಕೈರನೇ ಇದನ್ನು ಕಟ್ಟಿಸಿದ್ದರಿಂದ ಈ ಹೆಸರು ಬಂದಂತೆ ತೋರುತ್ತದೆ. ಇದಲ್ಲದೆ 'ಮಂಡಳಿಕರ ಬಸದಿ', 'ಸಹಸ್ರಕೂಟ ಚೈತ್ಯ'ಗಳನ್ನೂ ಶಾಸನವು ಹೆಸರಿಸಿದೆ. ಬೆಳವಡಿಯ ಕ್ರಿ.ಶ. ೧೧೭೫ರ ಇನ್ನೊಂದು ಶಾಸನದಲ್ಲೂ(ಡಾ. ಆರ್.ಎನ್. ಗುರವ ಕರ್ನಾಟಕ ಭಾರತಿ ೧೧-೪) ಸಹಸ್ರಕೂಟ ಜಿನಾಲಯದ ಹೆಸರು ಬಂದಿರುವುದರಿಂದ ಕನ್ನಕೈರ ಕಟ್ಟಿಸಿದ ಬಸದಿಯು ಸಹಸ್ರಕೂಟ ಮಾದರಿಯದೆಂದು ಅರ್ಥೈಸಬಹುದು. ಈ ಬಸದಿಯು "ಅತ್ಯಾಶ್ಚರ್ಯ ಸೌಂದರ್ಯ ಲಕ್ಷ್ಮಿಯಂ ತಾಳ್ದಿರ್ದ್ದ ಸಹಸ್ರಕೂಟ ಜಿನಾಲಯ"ವೆಂದು ಶಾಸನ ವರ್ಣಿಸುವುದರಿಂದ ಅದೊಂದು ಅಪ್ರತಿಮ ಸುಂದರವಾದ ವಾಸ್ತುಶಿಲ್ಪವಾಗಿತ್ತೆಂದು ಕಲ್ಪಿಸಿಕೊಳ್ಳಬಹುದು.

ಶಾಸನದಲ್ಲಿ ಕಾರೆಯಗಣದ ಗುಣಕೀರ್ತಿ ಭಟ್ಟಾರಕ ಮತ್ತು ಚಂದ್ರಕೀರ್ತಿದೇವರು ದಾನ ಸ್ವೀಕಾರ ಮಾಡಿದವರೆಂದು ಉಲ್ಲೇಖಿತಗೊಂಡಿದ್ದಾರೆ. ಈ ಕಾರೆಯಗಣ ಪ್ರಗತಿಗಾಮಿಯಾದ ಯಾಪನೀಯ ಸಂಘದ ಮೈಳಾಪಾನ್ವಯಕ್ಕೆ ಸೇರಿದ ಗಣವಾಗಿತ್ತೆಂದು ಹಲವಾರು ಶಾಸನಗಳ ಆಧಾರದಿಂದ ತಿಳಿಯಬಹುದಾಗಿದೆ. ಹೀಗಾಗಿ ಡಾ. ಹಂಪನಾ ಅವರು ತಿಳಿಸುವಂತೆ ಕಾರೆಯಗಣವು ಚಂದ್ರಕವಾಟಾನ್ವಯಕ್ಕೆ ಸೇರಿತ್ತು ಎಂಬ ಮಾತು ಬಿದ್ದುಹೋಗುತ್ತದೆ.

ಹೀಗೆ ಪ್ರಸ್ತುತ ಶ್ಶಾಸನವು ಸವದತ್ತಿಯ ರಟ್ಟ ಅರಸರು, ಮೊದಲನೆಯ ಕನ್ನಕೈರ, ಆತನ ಮಗಳು ಬಾಗಿಯಬ್ಬೆ, ಬಹುಶಃ ಅಳಿಯನಾಗಿರಬಹುದಾದ ಪೆರ್ಗಡೆ ನೊಳಂಬ, ಪೊಲೆಗೆ ಭೂಪಾಳ, ಪಗಡಮದೇವ, ಗಂಡಮರಸರೆಂಬ ಅಧಿಕಾರಿಗಳು, ಬೆಳವಡಿಯಲ್ಲಿ ಇದ್ದ ಕೈರವ ಬಸದಿ, ಮಂಡಳಿಕರ ಬಸದಿ, ಸಹಸ್ರಕೂಟ ಚೈತ್ಯಾಲಯ, ಯಾಪನೀಯ ಸಂಘಕ್ಕೆ ಸೇರಿದ್ದ ಕಾರೆಯಗಣ, ಆ ಗಣದಲ್ಲಿದ್ದ ಆಚಾರ್ಯರಾದ ಗುಣಕೀರ್ತಿ ಭಟ್ಟಾರಕ, ಚಂದ್ರಕೀರ್ತಿದೇವರು - ಈ ಎಲ್ಲ ಅಂಶಗಳ ಪ್ರಸ್ತಾಪದಿಂದಾಗಿ ಜೈನಧರ್ಮದ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆಯುತ್ತದೆ. ಶಾಸನದ ಪೂರ್ಣ ಪಾಠವಿಂತಿದೆ.

**೧ ಆತನ . . ವಸತ್ವ ಸಮೇತ ಸೌಜನ್ಯ ಕುಮುದಚಂದ್ರಂ ಶೌರ್ಯೋಪೇತಂ ಜಿನಪದಕಮಳ ವಿನೀತಂ**
**ಪೆರ್ಗ್ಗಡೆ ನೊಳಂಬನೀ ವಸ(ಸು)ಮತಿಯೊಳ್ ॥**
**೨ ವಿನಯನಿಧಿ ಸತ್ಯನಿಧಿ ಸಜ್ಜನನಿಧಿ ಶಿಷ್ಟನಿಧಿ ಕೀರ್ತ್ತಿನಿಧಿ ಗುಣನಿಧಿ ಮಾನ್ಯನನಿಧಿಯೆಂದಬ್ಧಿ ವೃತಾವನ**
**ಪತಿಹಿತನಂ ನೊಳಂಬನಂ ಬಣ್ಣಿಸುಗುಂ ॥**
**೩ @ ಸಕವರ್ಷ ೯೪೮ನೆಯ ಪ್ರಭವ ಸಂವತ್ಸರಂ ಪ್ರವರ್ತ್ತಿಸೆ ತದ್ವರ್ಷಾಭ್ಯಂತರದ ಪೌಷ್ಯ ಪಂಚಮಿ**
**ಆದಿತ್ಯವಾರಂ ದಕ್ಷಿಣಾಯಣ ಸಂಕ್ರಾನ್ತಿಯಂದು**
**೪ ಸ್ವಸ್ತ್ಯರ್ಹನ್ಮುಖಕಮಳ ವಿನಿರ್ಗ್ಗತ ಸಕಳಶಾಸ್ತ್ರ ಪಾರಾವಾರಗ ಪರಮ ತಪಶ್ಚರಣ ನರತರಪ್ಪ ಶ್ರೀಮತ್ಕಾ**
**ರೆಯಗಣದಗುಣಕೀರ್ತ್ತಿ**
**೫ ಭಟ್ಟಾರಕದೇವರ ಪಾದಪ್ರಕ್ಷಾಳನಂ ಮಾಡಿ ಸ್ವಸ್ತಿ ಭಗವದರ್ಹತ್ಪರಮೇಶ್ವರ ಸ್ನಪನ ಬಂಧುರ ಗಣಧರ**
**ಪವಿತ್ರೀಕೃತೋತ್ತಮಾಂಗೆಯಾಹಾರಾ-**
**೬ ಭಯಭೈಷಜ್ಯಶಾಸ್ತ್ರದಾನಸಮೇತೆಯರುಂ ಗೋತ್ರಪವಿತ್ರೆಯರುಂ ಸವ . . . . . . . . . . . . ರಟ್ಟ ವಂಶೋದ್ಭವ**
**ಕನ್ನಕೈರ ಮಹೀಪಾ-**
**೭ ಳ ತನುಜೆಯರಪ್ಪ ಬಾಗಿಯಬ್ಬೆ . . . ನ್ನಿಜ . . . . . . . . ಪೂರ್ವ್ವೋತ್ತರ ದಿಶಾಭಾಗ ದೋಳ್ಪ ಸುಂಡಿಯ**
**೮ ಬಟ್ಟೆಯಿಂ ಬಡಗಣ ತಮ್ಮ ಸೀವಟದ ಪೊಲದೊಳ್ಪಿರಿಯ [ಕೋಲ] . . . . ರಕರು ಪಡುವಲ್ಪಳ್ಳ**

ತೆಂಕಲ್ಬಟ್ಟೆಮೂಡಲ್ವೊಲದ ಸನ್ದು
೯ ಬಡಗಲು ಪರಮ . ರಿಂ ಪಡುವಲು ಸುತ್ತಿ ಪರಿದ . . . . ಸಹಸ್ರಕೂಟೆ ಚೈತ್ಯಾಲಯದ ಪುರದ ಸೀಮೆ ಕೈರವ
೧೦ ಬಸದಿಯ ಕಟ್ಟ[ನ ಮೊದ]ಲಾಗಿ ದಾನಶಾಲೆ . . . . . ಯ ಬಸದಿಯ . . . ಸೈಪು ಮೇರೆ ಪಡುವಲಾ ಕಟ್ಟ[ನ]
೧೧ ಬಡಗ ಮುಖ . . . . . . ವಣ ದೇಹಾರದ ಕಟ್ಟನ . . . . . . [ಬ]ಟ್ಟೆಯಿಂ ಕಳೆದು . . . ಚುಳುಕಿಯ ಗೋಪವನೆಗೆ
೧೨ ಬಂದ ಮೇರೆಯಾಗೆ . . . . . . ಯಾಗೆ ಮೂಡಲ . . . . . ಇದಂ ಪ್ರವರ್ದ್ಧ . . . . ಜ ಜನನಿಯ ಪರೋಕ್ಷ–
೧೩ ದೊಳು ಪರಿವಾರಕ್ಕಂ . . . . . ಣಮಣಿ ಪ್ರ . . . ಶ್ರೀಮತ್ಕಾರೆ . . . . . . . ರುಂ ತದಾತ್ಮಜಂ ಸಮಧಿಗ–
೧೪ ತ ಪಂಚಮಹಾಶಬ್ದ . . . . ಧೂಕಾನ್ತ . . . . ರಂ ಕಕ್ಕರಿಯ . . . . . . ನ್ನ ಭುಜಂಗಧ್ವಜ ವಿರಾಜಿತಂ
೧೫ ಸುಜನಜನಪೂ . . . . . . ದ . ನೆ . . . . [ರಾ]ಜ್ಯಸಮುದ್ಧರ . . . . . . ಣ ನಿಸ್ತರಣಂ ವಿದಗ್ಧ ವಿ–
೧೬ ದ್ಯಾ ಪರಿಜನ ಮ . . . . . ನಸಿಂಗ . . . . . ರ ಶ್ರೀಮನ್ಮಹಾ ಸಾಮ–
೧೭ ನ್ತಂ ಗಂಡಮರ . . . . . ಯಂ ಪೆರ್ಗ್ಗಡೆ . . . . . . . . . . ಲಾಗಿ ಸಮಸ್ತ ಪರಿಗ್ರ–
೧೮ ಹದ ಮೂವಡಿ . . . . . . . . . . ನಾಮಾದಿ . . . . ದದಕ್ಕಜುವಣಂ
೧೯ ಲೊಕ್ಕಿ ಮೂಜು ಗದ್ಯಾ . . . . . . . . . ಳ ಕೇಸರಿ ತೈಲಂಗವುದಾತ್ತ . . . .
೨೦ ಕೀರ್ತ್ತಿಯುತೆ ಶೌಚಾಚಾರ . . . . . . . . . . . ಮದಿದಂ ಪೊಲೆಗ ಭೂಪಾಳಂ ಕು–
೨೧ ಳೋದ್ದೀಪಕಂ ॥ ಆ ಪೊಲೆಗ ನೃಪತಿಗಂ ಸ್ಮರ . . . . . ಡಂಗೆಡಗೀ ಪಗಡಮದೇವಂ ॥ ತೊಡಬ್ಬಿ
೨೨ ರ ಗಂಡಂ ಗಂಡಮಂ ಮಂಡಳಿಕರಂ ಲತಾಂಗಿ . . . . ಗಣ್ಡಮರಸನುಂ ಕುಮಾರ ಬಮ್ಮ–
೨೩ ರಸ ಸಹಿತಂ ಸಹಸ್ರಕೂಟ ಚೈತ್ಯಾಲಯ . . . . . . . ಡುವಣ ತಮ್ಮ ಸೀವಟದೊಳಗೆ
೨೪ ಡಣ ಪಳ್ಳದೊತ್ತು ಮೊದಲಾಗಿ ಬಡಗಮುಖವಾಗಿ ಬನ್ದು . . . . ವಲು ಬಸದಿಯ ಮೇರೆ ತೆಂಕಲು ಬಸದಿಯ ತೋಂಟ–
೨೫ ದನಾಸಲಿಂ ಮೂಡಮುಖವಾಗಿ ಬಂಗ ಫಳ್ಳದೊತ್ತಿನ ಗುಡ್ಡೆ ಸೀಮೆಯಾದೊಮ್ಮತ್ತರ್ಕ್ಕೆಯ್ಯಂ ತಮ್ಮ ಗುರುಗಳು ಶ್ರೀ ಚಂದ್ರಕೀರ್ತ್ತಿದೇವರ ಕಾಲಂ ಕರ್ಚ್ಚಿ ಧಾ–
೨೬ ರಾಪೂರ್ವ್ವಕಮಾಗಿ ಬಿಟ್ಟರೀ ಮರ್ಯ್ಯಾದೆಯಂ ಪ್ರತಿಪಾಳಿಸಿದವರ್ಗ್ಗೆ ಬಾಣರಾಸಿ ಕುರುಕ್ಷೇತ್ರಪ್ರಯಾ ಗೆಯೊಳ್ಸಹಸ್ರಂ ಮೊದಲಾದನನ್ತ ದಾನಮಂ ಮಾಡಿ
೨೭ . . ಲಮಕ್ಕುವಿದನಳಿದವಗಾ ತೀರ್ತ್ಥಂಗಳಲು . . . ಸ್ತ್ರೀ ಬಾಳಕರನಳಿದೇಳನೆಯ ನರಕಮಕ್ಕುಂ ॥ ಸರನಧಿ ಪರಿವೃತ ಸಕಳೋರ್ವ್ವರೆಯಂ . .
೨೮ . . . ರ್ಕ್ಕರುಳ್ಳಿನ ನಿಲ್ಕೆ ನಿರನ್ತರ . ದ . ಗಂ ಭೂಪನವರ ಜೈನಗೃಹಂ ಸಹಸ್ರಕೂಟಂ ಮುದದಿಂ ॥ ಸ್ವದತ್ತಂ ಪರದತ್ತಂ ವಾಯೋ ಹರೇತಿ ವಸುದ್ಧರಾಂ ಷಷ್ಠಿರ್ವ್ವರ್ಷ
೨೯ ಸಹಸ್ರಾಣೆ ವಿಷ್ಟಾಯಾಂ ಜಾಯತೇ ಕೃಮಿಃ ॥ @ ಸ್ವಸ್ತಿ ಶ್ರೀಮತು ಬೆಳುವಡಿಯ ಮೂವದಿಂಬರ್ಗ್ಗಾ ವುಂಡುಗಳು ಸಹಶ್ರಕೂಟದೊ .
೩೦ . . . . . ರಪ್ಪ ವಿ . . ಕೆಯ ಸೀಮೆ ಮೂಡಲು ಪಳ್ಳ ತೆಂಕಲು ನಾಗುಳವಾಡ . . . . ಡುವಲು ದೇ . .
೩೧ . . . . . . . . . . ಮಂಡಳಿಕರ ಬಸದಿಗೆ ತನ್ನ ಹೊಲದೊಳಗೆ ಬಿಟ್ಟ ಮತ್ತರೊ[ಂದು ॥*]

## ೧೧ ಬೆಳಗಾವಿ ನಗರದ ಶಾಸನಗಳು

ಬೆಳಗಾವಿ ನಗರದ ಕಿಲ್ಲೆಯಲ್ಲಿರುವ ಕಮಲ ಬಸದಿಯ ವಾಸ್ತುಶಿಲ್ಪದ ದೃಷ್ಟಿಯಿಂದ ಖ್ಯಾತಿಯನ್ನು ಹೊಂದಿರುವಂಥದು. ಜೈನಧರ್ಮ ಇಂದಿಗೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವ ಜಿಲ್ಲೆಯಿದು. ಅಂತೆಯೇ ಹಳೆಯ ಬೆಳಗಾವಿಯಲ್ಲಿ ಹಲವಾರು ಬಸದಿಗಳಿವೆ. ಇಂದಿಗೂ ಪೂಜೆಗೊಳ್ಳುತ್ತಿರುವ ತೀರ್ಥಂಕರ ಮೂರ್ತಿ ಗಳಿದ್ದು, ಅವುಗಳ ಪಾದಪೀಠಗಳಲ್ಲಿಯೂ ಶಾಸನಗಳಿದ್ದು, ಪಠ್ಯವನ್ನು ಇಲ್ಲಿ ಪ್ರಕಟಿಸಲಾಗಿದೆ.

೧ ಕೋರೆ ಗಲ್ಲಿಯ ಜೈನಮಂದಿರದ ಪಾರ್ಶ್ವನಾಥವಿಗ್ರಹದ ಪಾದಪೀಠದಲ್ಲಿಯ ಶಾಸನ.

೧೬" ಅಗಲ ೪೫" ಎತ್ತರದ ಪಾರ್ಶ್ವನಾಥ ತೀರ್ಥಂಕರ ವಿಗ್ರಹವಿದಾಗಿದ್ದು, ಎರಡು ಕಂಬಗಳ ಮಧ್ಯೆ ಖಡ್ಗಾಸನ ಭಂಗಿಯಲ್ಲಿದೆ. ತಲೆಯ ಮೇಲೆ ಏಳು ಹೆಡೆಯ ಸರ್ಪವಿದೆ. ಮೇಲೆ ಮಕ್ಕೊಡೆಯಿದ್ದು, ಹಿಂದೆ ಮಕರ ತೋರಣವಿದೆ. ಗುಂಗುರು ಕೂದಲು, ಸೊಂಟಭಾಗದಲ್ಲಿ ತ್ರಿವಳಿಗಳಿರುವ ಅತ್ಯಂತ ಸುಂದರ ವಿಗ್ರಹವಿದು. ಮಕರಗಳ ಮೇಲೆ ಎರಡೂ ಕಡೆ ಪಿಂಛಗಳಿವೆ. ಕೆಳಗೆ ಪಾದದ ಎಡಬಲಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿಣಿಯರಿದ್ದಾರೆ. ಧರಣೇಂದ್ರ ಯಕ್ಷ ಬಲಕೈಯಲ್ಲಿ ಅಂಕುಶ, ಪದ್ಮಗಳನ್ನು, ಎಡಕೈಯಲ್ಲಿ ಪಾಶ, ಮಾದುಫಲಗಳನ್ನು ಹಿಡಿದಿದ್ದು, ಪದ್ಮಾವತಿ ಯಕ್ಷಿಯು ಇದಕ್ಕೆ ವಿರುದ್ಧವಾಗಿ ಬಲ ಕೈಯಲ್ಲಿ ಪಾಶ, ಮಾದುಫಲ ಗಳನ್ನು ಎಡಕೈಯಲ್ಲಿ ಅಂಕುಶ, ಪದ್ಮಗಳನ್ನು ಹಿಡಿದಿದ್ದಾಳೆ. ಪಾದಪೀಠದಲ್ಲಿ ನಾಲ್ಕು ಸಾಲಿನ ಶಾಸನವಿತ್ತೆಂದು ಬಸದಿಯ ಉಪಾಧ್ಯಾಯರು ತಿಳಿಸುತ್ತಿದ್ದರೂ ಸದ್ಯ ಒಂದೂವರೆ ಸಾಲುಗಳು ಮಾತ್ರ ಕಾಣಿಸುತ್ತಿದ್ದು ಉಳಿದ ಭಾಗ ಈಗ ಕಟ್ಟೆಯಲ್ಲಿ ಹುದುಗಿದೆ. ಸುಮಾರು ೧೨ನೆಯ ಶತಮಾನದ ಅಕ್ಷರಗಳಲ್ಲಿ ಮೂಲ ಸಂಘ ಬಳತ್ಕಾರ ಗಣದ ಸಕಳ ವಿದ್ಯಾ ಚಕ್ರವರ್ತಿಯಾದ ಶ್ರೀ ಶೃತಕೀರ್ತಿ ಸಿದ್ಧಂತದೇವರ ಶಿಷ್ಯನೊಬ್ಬ ಮೂರ್ತಿಯನ್ನು ಮಾಡಿಸಿಕೊಟ್ಟನೆಂದು ತಿಳಿಸುವಂತಿದೆ.

೧ ಶ್ರೀ ಮೂಲಸಂಘದ ಬಳತ್ಕಾರ ಗಣದ ಸಕಳ ವಿದ್ಯಾ ಚಕ್ರವ-
೨ ರ್ತ್ತಿ ಶ್ರೀ ಶೃತಕೀರ್ತಿಸಿದ್ಧಾಂತದೇವರ ಗುಡಂ(ಡ್ಡಂ) . . . . . . .

೩ ಕೋರೆ ಗಲ್ಲಿಯ ಜೈನಮಂದಿರದ ಚಂದ್ರಪ್ರಭಸ್ವಾಮಿಯ ವಿಗ್ರಹದ ಪಾದಪೀಠದಲ್ಲಿಯ ಶಾಸನ

೩೪" ಅಗಲ ೪೫" ಎತ್ತರದ ಸುಖಾಸನ ಭಂಗಿಯ ಮೂರ್ತಿಯಿದು ಗುಂಗುರುಗೂದಲಿನ ಸುಂದರ ಮೂರ್ತಿಯ ಕೆಳಗೆ ಚಂದ್ರನ ಲಾಂಛನವಿದೆ. ಅದರ ಕೆಳಗೆ ೧೮ನೆಯ ಶತಮಾನದ ಅಕ್ಷರಗಳಲ್ಲಿ ಶಾಸನವನ್ನು ಕೆತ್ತಲಾಗಿದ್ದು, ಒಡೆದಿದೆ. ಕೇವಲ ಅರ್ಧ ಸಾಲು ಮಾತ್ರ ಕಾಣಿಸುತ್ತದೆ.

೧ . . . ಂದ್ರಕೀರ್ತಿಸ್ವಾಮಿ ಶಕೆ ೧೭೮೦ ಭಾದ್ರಪದ . . . .

೨ ಕೋರೆ ಗಲ್ಲಿಯ ಜೈನಮಂದಿರದ ವಿಗ್ರಹದ ಪಾದಪೀಠದಲ್ಲಿಯ ಶಾಸನ

ಪಲ್ಯಂಕಾಸನದ ಪಾರ್ಶ್ವನಾಥ ತೀರ್ಥಂಕರ ವಿಗ್ರಹವಿದು. ಮೇಲೆ ಮುಕ್ಕೊಡೆಯಿದ್ದು, ಅದರ ಕೆಳಗೆ ೭ ಹೆಡೆಯ ಸರ್ಪವಿದೆ. ಇಬ್ಬರು ಚಾಮರಧಾರಿಗಳು ಎಡಬಲಗಳಲ್ಲಿದ್ದಾರೆ. ಆಚಾರ್ಯ ಪಾಯಸಾಗರರ ಶಿಷ್ಯನಾದ ವೀರಪ್ಪ ಶಿಲ್ಪಿಯು ಈ ಮೂರ್ತಿಯನ್ನು ಕೆತ್ತಿದ್ದಾನೆ ಎಂದು ೧೮ನೆಯ ಶತಮಾನದ ಅಕ್ಷರಗಳಲ್ಲಿ ಸೂಚಿಸುತ್ತಿದೆ.

೧ ಆಚಾರ್ಯ್ಯ
೨ ಪಾಯಸಾಗರ
೩ ಶಿಷ(ಷ್ಯ) ವೀರಪ್ಪ ಶಿಲಾ-
೪ ಚಾರ್ಯ್ಯಕೃತ ಮೂರ್ತಿ

೪ ಕಿಲ್ಲೆಯಲ್ಲಿರುವ 'ಖೋತವಿಲ್ಲಾ'ದ ಗೇಟಿನಲ್ಲಿ ಕೂಡಿಸಿದ ಶಾಸನ

೩೦" ಎತ್ತರ ೧೨" ಅಗಲ ಗಾತ್ರದ ಕರಿಕಲ್ಲಿನಲ್ಲಿ ಮುಕ್ಕೊಡೆ ಸಹಿತ ಸುಖಾಸೀನ ಭಂಗಿಯ ತೀಥಂಕರ ವಿಗ್ರಹವಿದು. ಮೇಲೆ ಚಂದ್ರ-ಸೂರ್ಯರಿದ್ದು, ಕೆಳಗೆ ಖಡ್ಗ, ತೀರ್ಥಂಕರ, ಆಕಳು-ಕರುಗಳಿವೆ. ಸುಮಾರು ೧೪ನೆಯ ಶತಮಾನದ ಅಕ್ಷರಗಳಿವೆ. ಈ ವಿಗ್ರಹವು ವರ್ಧಮಾನಸ್ವಾಮಿಯದೆಂದು ತಿಳಿಸುತ್ತದೆ.

೧ ಶ್ರೀಮನ ವರ್ದ್ಧ-
೨ ಮಾನಸ್ವಾಮಿ-
೩ ಯರ್ [||*]

## ೧೨ ಸವದತ್ತಿಯ ಶಾಸನ

ಬೆಳಗಾವಿ ಜಿಲ್ಲೆಯಲ್ಲಿಯ ಪೂರ್ವಭಾಗದಲ್ಲಿರುವ ಒಂದು ತಾಲೂಕು ಸವದತ್ತಿ. ಸುಗಂಧವರ್ತಿ ಎಂದು ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಈ ಊರನ್ನು ಸವಣರ ದತ್ತಿ ಎಂದು ಡಾ. ಹಂಪನಾ ಅವರು ಕರೆದಿದ್ದಾರೆ. ಸವದತ್ತಿಯ ಮಹಾಮಂಡಲೇಶ್ವರರಾದ ರಟ್ಟರು ಮತ್ತು ಅವರ ಪಟ್ಟಜಿನಾಲಯವಾಗಿದ್ದ ಪಾರ್ಶ್ವನಾಥ–ಪದ್ಮಾವತಿ ಯರ ಬಸದಿಯಾಗಿದ್ದ ಇಂದಿನ ಯಲ್ಲಮ್ಮದೇವಿ ಗುಡಿಯಿಂದಾಗಿ ಹಾಗೂ ಯಾಪನೀಯ ಜೈನರ ಮೈಳಾಪಾನ್ವಯ ತೀರ್ಥದಿಂದಾಗಿ ತುಂಬ ಖ್ಯಾತಿಯನ್ನು ಹೊಂದಿರುವ ಸ್ಥಳ. ಇಲ್ಲಿಯ ಪಟ್ಟದಕಲ್ಲು ಓಣಿಯಲ್ಲಿಯ ರಸ್ತೆಬದಿಯಲ್ಲಿ ದೊಡ್ಡ ಬಂಡೆಯೊಂದು ಬಿದ್ದಿದ್ದು, ಅದರಲ್ಲಿ ದೊಡ್ಡ ಅಕ್ಷರಗಳ ಒಂದು ಸಾಲಿನ ಶಾಸನವಿದೆ.

೧ ಯಾಪನೀಯ ಸಂಘಂ [ಕಾಣೂ*]ರ್ಗ್ಗಣ

## ೧೩. ಯಡ್ರಾವಿಯ ಶಾಸನ

ಬೆಳಗಾವಿಯ ಜಿಲ್ಲೆಯ ಸವದತ್ತಿ ತಾಲೂಕಿನಲ್ಲಿ ತಾಲೂಕು ಕೇಂದ್ರಸ್ಥಾನದಿಂದ ಕೇವಲ ಮೂರು ಕಿ.ಮೀ. ದೂರದಲ್ಲಿರುವ ಚಿಕ್ಕ ಗ್ರಾಮ ಯಡ್ರಾವಿ. ಇದು ಹಿಂದೊಂದು ಕಾಲದಲ್ಲಿ ಸುಸಂಸ್ಕೃತವಾದ ಇತಿಹಾಸ ಸಮೃದ್ಧವಾದ ಕ್ಷೇತ್ರವಾಗಿತ್ತು. ಬ್ರಹ್ಮೇಶ್ವರ, ಮಲ್ಲಿಕಾರ್ಜುನ ದೇವಾಲಯಗಳು ಇಲ್ಲಿದ್ದವು. ಧರ್ಮಿಷ್ಠರಾದ ಹನ್ನಿರ್ವರು ಬದುಕಿ ಬಾಳಿ, ಎಳರಾವೆಯ (ಇಂದಿನ ಯಡ್ರಾಮಿ) ಬ್ರಹ್ಮೇಶ್ವರದೇವರಿಗೆ, ಸುಗಂಧವರ್ತಿಯ ಮಲ್ಲಿಕಾರ್ಜುನ ದೇವರಿಗೆ, ಊರ ಬಾವಿಗೆ ಬಿಟ್ಟ ದಾನಗಳನ್ನು ಇಲ್ಲಿಯ ಶಾಸನಗಳು ತಿಳಿಸುತ್ತವೆ. ಇವೆಲ್ಲವೂ ಆ ಕಾಲದ ಜನರಿಗೆ ಸಮಾಜದ ಬಗ್ಗೆ ಇದ್ದ ಕಳಕಳಿ ಹಾಗೂ ಅವರು ಗೈದ ಸಮಜಸೇವೆಗಳ ಸಾಕ್ಷಿಯಾಗಿವೆ.

### ಬ್ರಹ್ಮದೇವರ ಕಟ್ಟೆಯಲ್ಲಿ ಸೇರಿಸಿದ ತ್ರುಟಿತ ಶಾಸನ.

ತ್ರಿಕೋನಾಕೃತಿಯಲ್ಲಿ ಉಳಿದಿರುವ ಕರಿಕಲ್ಲಿನಲ್ಲಿ ಕೆತ್ತಿದ ಶಾಸನದ ಭಾಗವಿದಾಗಿದೆ. ಶಾಸನದ ಪಡಿಯಚ್ಚು ತೆಗೆಯಲು ಬಾರದ, ಕುಳಿತು ಓದಲೂ ಬಾರದ ರೀತಿಯಲ್ಲಿ ಕಟ್ಟೆಯೊಳಗೆ ಶಾಸನವನ್ನು ಸೇರಿಸಿ ಕಟ್ಟಿದ್ದಾರೆ. ಶಾಸನದ ನಾಲ್ಕೂ ಮುಖಗಳು ಒಡೆದು ಹೋಗಿವೆ. ಮಹಾಸಾಮಂತಾಧಿಪತಿ, ಪನ್ನಿರ್ವರು ಗಾವುಂಡರು, ೬೦೦ ಕೆಯಿ ಭೂದಾನ ೯೦೧ನೆಯ ಪ್ರಮಾಧಿ ಸಂವತ್ಸರ, ಜೈನಾಚಾರ್ಯ ಕನಕಪ್ರಭ, ಎಳರಾಮೆಯ ಉಲ್ಲೇಖಗಳು ದೊರೆಯುತ್ತಿದ್ದು, ಯಾವುದೋ ತೀರ್ಥಂಕರರಿಗೆ ನೀಡಿದ ಭೂದಾನದ ಉಲ್ಲೇಖವಿದೆಂದು ಹೇಳಬಹುದಾಗಿದೆ. ಶಾಸನದಲ್ಲಿ ಬರುವ ಮಿತಿಯ ಉಲ್ಲೇಖವು ಅಪೂರ್ಣವಾಗಿದ್ದರೂ ಕ್ರಿ.ಶ. ೯೭೯ ಎಂದು ಹೇಳಬಹುದು.

೧ . . . . ಶಮ . . . . . . . . . . . . .
೨ . . . . ಸುರಿಸ್ತ . . . . . . . . . . . .
೩ . . . . ಳ್ವಲ . . . . . . . . . . . . .
೪ . . . . ನ ಧರ್ಮ್ಮ . . . . . ರ . . . .
೫ . . . . ನತ್ರೈ . . . . . . . . . . . . .
೬ . . . . ಶಬ್ದ ಮಹಾಸಾಮನ್ತಾಧಿಪತಿ . . .
೭ . . . . ೯೦೧ನೆಯ ಪ್ರಮಾಧಿ ಸಂವತ್ಸರದ . . ಬಹುಳ ೧ . .
೮ . . . . ಸಂಕ್ರಾನ್ತಿ ಪರ್ವ್ವ ನಿಮಿತ್ತಂ ದಮಾಸ್ಯೈ . . . . . .
೯ . . . . ವೆಯಲು ದೇಃಆರಮಂ ಮಾಡಿ . . . . . . . . .
೧೦ . . . . ಲು ಬಿಟ್ಟ ಕೆಯ ೬೦೦ ಮತ್ತಂ ಪನ್ನಿರ್ಬ್ಬರ . . .
೧೧ . . . . ಡಿ ಕಲ್ಲೊಳೆ ಕ . ದ ಕಲವಿತಶಣ . . . . . . .
೧೨ . . . . ಲನಧಿಗಗಾದಂ ಮಿಕ್ಕ ಬೋಳ . . ಮಪ್ಪಡೆ . . ಕೊತ್ತಂ . . ರ ಸ್ಥಾನಾ
೧೩ . . . . ಟ್ಟಿ ಪನ್ನಿರ್ವ್ವರಂ ಜಡರೆನೆ ನೋಡಿ . ಹಪ್ಪಕ್ಕಹಿತಂ ವ . . . . ಎಳ–

೧೪ ರಾಮೆಯ ಪನ್ನಿರ್ವ್ವರ್ಗ್ಗಾವುಣ್ಬು ಗಳೆಯೊಳ್ ವಿದಿಜೆ . . . . . .
೧೫ . . . . ತೆಯು ಚಲದ ವಿಕ್ರಮಮಪ್ಪಯ್ದಸದುದಜೆಂದ ॥
೧೬ . . . . ಮಾದೆಳೆರಾಮೆಯ ಪನ್ನಿರ್ವ್ವರ್ಗ್ಗಾವುಣ್ಬುಗಳ್ಮಿಟ್ಟಲ್ಲಿಯವದ್ದಾಚಾರ್ಯ್ಯರಂ ॥ ಸುತ . .
೧೭ . . . . ವಾರೆ ಕೊಣ್ಡಣದಾಗ . . . . . . . . . . . . . . . . . ಕೊಣ್ಡ ದಸಯಮ . .
೧೮ . . . . ಸ . ತಿ ಕಲದೊಳ್ ಸನದ . . . . . . . . . . . . ಕಳಾವಿದಲಯ್ಯಮಂ ಸ್ವಾಂಗೀಕೃ
೧೯ . . . . ದಿದಂ ಗತ ಕೋಪಂ ಕನಕಪ್ರಭಂ ಮತಿನುತನುದಾರ[2]

### ೧೪ ಹೂಲಿಯ ಶಾಸನಗಳು

ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗಳ ದೃಷ್ಟಿಯಿಂದ ಅತ್ಯಂತ ಮಹತ್ವದ ಕ್ಷೇತ್ರ ಹೂಲಿ. ವಾಸ್ತುಶಿಲ್ಪದ ಉತ್ತಮ ಮಾದರಿಗಳೆನಿಸುವ ಅಂಧಾಸುರ, ಭೀಮೇಶ್ವರ, ತಾರಕಾಸುರ, ಅಗಸ್ತ್ಯ, ಸಿದ್ಧೇಶ್ವರ, ವೀರಭದ್ರ, ಪಂಚವಣ್ಣಿಗೆ ಮಠ, ಪಂಚಲಿಂಗೇಶ್ವರ ದೇವಸ್ಥಾನವೆಂದು ಕರೆಸಿಕೊಳ್ಳುವ ಬಸದಿಗಳೆಲ್ಲವೂ ಆಕರ್ಷಕವಾಗಿವೆ. ಈ ಊರಿನಲ್ಲಿ ದೊರೆತ ೩೦ ಶಾಸನಗಳು ಈಗಾಗಲೇ ಪ್ರಕಟಗೊಂಡಿದ್ದು, ಇತ್ತೀಚೆಗೆ ದೊರೆತ ಜೈನ ಶಾಸನಗಳ ಪಠ್ಯಗಳು ಇಲ್ಲಿವೆ.

### ೧ ಬೀಡಿ ಕರೆಮ್ಮನಗಿಡಿಯ ತೀರ್ಥಂಕರ ಪಾದಪೀಠದಲ್ಲಿರುವ ಶಾಸನ

ಬಹುಶಃ ಶ್ರೀ ಯಾಪನೀಯ ಸಂಘದ ಕಾಣೂರ್ಗ್ಗಣದ ಭಾನುಕೀರ್ತ್ತಿ ಸಿದ್ಧಾನ್ತದೇವರು ಈ ತೀರ್ಥಂಕರ ವಿಗ್ರಹವನ್ನು ಮಾಡಿಸಿಕೊಟ್ಟರೆಂದು ಒಂದು ಸಾಲಿನ ಪ್ರಸ್ತುತ ಶಾಸನವು ತಿಳಿಸುವಂತಿದೆ. ಲಿಪಿಸ್ವರೂಪದಿಂದ ೧೨ನೆಯ ಶತಮಾನದ ಅಕ್ಷರಗಳೆಂದು ಹೇಳಬಹುದಾಗಿದೆ.

೧ ಶ್ರೀ ಯಾಪನೀಯ ಸಂಘದ ಕಾಣೂರ್ಗ್ಗಣದ ಭಾನುಕೀರ್ತ್ತಿ ಸಿದ್ಧಾನ್ತದೇವರು

### ೨ ಪಂಚಲಿಂಗೇಶ್ವರ ದೇಗುಲದ ಉಗ್ರಾಣದಲ್ಲಿಯ ತೀರ್ಥಂಕರ ಪೀಠದಲ್ಲಿಯ ಶಾಸನ

ತೀರ್ಥಂಕರ ಮೂರ್ತಿಯು ಚಂದ್ರನಾಥಸ್ವಾಮಿಯದೆಂದು ಸು. ೧೨ನೆಯ ಶತಮಾನದ ಅಕ್ಷರಗಳಲ್ಲಿ ಸೂಚಿಸುತ್ತದೆ.

೧ . . . . . . . . . . . . . . . . . . . .
೨ . . . . ಚಂದ್ರನಾಥ ಸ್ವಾಮಿ . . . . . .

ಹೀಗೆ ಬೆಳಗಾವ ಜಿಲ್ಲೆಯ ಪ್ರಾಚೀನ ಕಾಲದಿಂದಲೂ ಜೈನಧರ್ಮದ ಆಡುಂಬೊಲವಾಗಿದ್ದು, ಇಂದಿಗೂ ಜೈನ ಧರ್ಮೀಯರು ಅತ್ಯಂತ ಸಾಂದ್ರತೆಯಲ್ಲಿ ನೆಲೆಸಿರುವ ಕರ್ನಾಟಕದ ಜಿಲ್ಲೆಯಾಗಿದೆ. ಇದರಿಂದಾಗಿ ಜೈನಧರ್ಮ, ಜೈನ ತೀರ್ಥಕ್ಷೇತ್ರಗಳು, ಜೈನಬಸದಿಗಳು, ಜೈನವಾಸ್ತುಶಿಲ್ಪ, ಜೈನ ಮೂರ್ತಿಶಿಲ್ಪಗಳು ಕೆಲವೆಡೆ ಉತ್ತಮ ಸ್ಥಿತಿಯಲ್ಲಿ, ಕೆಲವೆಡೆ ತ್ರುಟಿತಸ್ಥಿತಿಯಲ್ಲಿ ಈಗಲೂ ದೊರೆಯುತ್ತವೆ. ಆ ಕಾರಣದಿಂದಾಗಿ ಈ ಭಾಗದಲ್ಲಿ ವ್ಯವಸ್ಥಿತವಾಗಿ ಇತಿಹಾಸ ಮತ್ತು ಶಾಸನಗಳ ಪರಿವೀಕ್ಷಣೆ ನಡೆದರೆ ಇನ್ನೂ ಅನೇಕ ಶಾಸನಗಳು ದೊರೆಯುವ ಸಾಧ್ಯತೆಯಿದೆ. ತನ್ಮೂಲಕ ಈ ನಾಡಿನ ಸಮೃದ್ಧ ಇತಿಹಾಸವನ್ನು ಪುನಃ ರಚಿಸಬಹುದಾಗಿದೆ.

### ಅಡಿಟಿಪ್ಪಣಿಗಳು

೧ ಶಾಸನ ಇಲ್ಲಿಗೆ ಒಡೆದಿದೆ.
೨ ಮುಂದಿನ ಶಾಸನದ ಭಾಗ ಒಡೆದು ಕಳೆದಿದೆ.

****

# ಗಂಗ-ಕದಂಬ ಸಂಬಂಧಗಳು ಒಂದು ವಿಶ್ಲೇಷಣೆ

* ಡಾ. ಪಿ. ಎನ್. ನರಸಿಂಹಮೂರ್ತಿ.

ಕ್ರಿ.ಶ. ನಾಲ್ಕನೆಯ ಶತಮಾನ ಕರ್ನಾಟಕ ಇತಿಹಾಸದಲ್ಲಿ ಒಂದು ಮಹತ್ವದ ಕಾಲ. ವಿಶಾಲವಾದ ಕರ್ನಾಟಕ ಎರಡು ಪ್ರಮುಖ ರಾಜ ಮನೆತನಗಳ ಉದಯವನ್ನು ಆಗ ಕಂಡಿತು. ಇವು ಕನ್ನಡದ ರಾಜಮನೆತನಗಳು. ಒಂದು ವಂಶದ ಪ್ರಾದುರ್ಭಾವ ದಕ್ಷಿಣ ಭಾಗದಲ್ಲಾದರೆ ಇನ್ನೊಂದರದು ಉತ್ತರ ಮತ್ತು ಪಶ್ಚಿಮ ಕರ್ನಾಟಕ ಭಾಗದಲ್ಲಾಯಿತು. ಇವು ಕ್ರಮವಾಗಿ ತಳವನಪುರ (ತಲಕಾಡು) ಮತ್ತು ವೈಜಯಂತಿ (ಬನವಾಸಿ)ಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಗಂಗ ಮತ್ತು ಕದಂಬ ವಂಶಗಳು. ಇತಿಹಾಸಕಾರರು ಇವರನ್ನು ತಲಕಾಡಿನ ಗಂಗರು ಮತ್ತು ಬನವಾಸಿಯ ಕದಂಬರು ಎಂದೇ ಗುರುತಿಸಿದ್ದಾರೆ.

ಪಿ. ಬಿ. ದೇಸಾಯಿಯವರ ಪ್ರಕಾರ ಈ ಎರಡೂ ರಾಜ ಮನೆತನಗಳು ಸರಿ ಸುಮಾರು ಕ್ರಿ.ಶ. ೩೨೫ರ ವೇಳೆಗೆ ಹುಟ್ಟಿಕೊಂಡವು[೧] ಆದರೆ ಗಂಗರ ಯುಗ ಪ್ರಾರಂಭಕ್ಕೆ ಸಂಬಂಧಿಸಿದಂತೆ ದೇಸಾಯಿಯವರ ಅಭಿಪ್ರಾಯವನ್ನು ಷೇಕ್ ಆಲಿಯವರು ಒಪ್ಪುವುದಿಲ್ಲ. ಬಹುಜನ ವಿದ್ವಾಂಸರ ಅಭಿಮತದಂತೆ ಇದನ್ನು ಕ್ರಿ.ಶ. ೩೫೦ ಎಂದೇ ಒಪ್ಪಿಕೊಳ್ಳಬೇಕೆಂದು ಸೂಚಿಸಿದ್ದಾರೆ.[೨] ಮುಂದುವರೆದು ಹೇಳುತ್ತಾರೆ – (ಗಂಗ ವಂಶ ಸ್ಥಾಪಕರಲ್ಲೊಬ್ಬನಾದ) ಒಂದನೆಯ ಮಾಧವನು ರಾಜಕೀಯ ಅಂಕದಲ್ಲಿ ಕಾಣಿಸಿಕೊಳ್ಳುವ ವೇಳೆಗಾಗಲೇ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಕದಂಬರು, ಬಾಣರು ಮತ್ತು ಪಲ್ಲವರು ತಮ್ಮ ರಾಜಕೀಯ ವ್ಯಾಪ್ತಿ ಮತ್ತು ಶಕ್ತಿಗಳನ್ನು ಭದ್ರಪಡಿಸಿಕೊಂಡಿದ್ದರು.[೩] ಈ ಹೇಳಿಕೆಯನ್ನು ಆಧರಿಸಿ ನೋಡಿದರೆ ತಲಕಾಡಿನ ಗಂಗರಿಗಿಂತ ಮೊದಲು ಉದಯಿಸಿದವರು ಬನವಾಸಿಯ ಕದಂಬರು. ಆದರೆ ಈ ಬಗ್ಗೆ ಬಹಳಷ್ಟು ವಾದ ವಿವಾದಗಳಿವೆ.[೪] ಒಂದನೆಯ ಮಾಧವ ಕೊಂಕಣವನ್ನೂ ಗೆದ್ದುಕೊಂಡ ಎಂದು ಷೇಕ್ ಆಲಿ ಅವರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದಕ್ಕೆ ಆಧಾರವನ್ನೇನೂ ಕೊಟ್ಟಿಲ್ಲ. ಕೊಂಕಣದ ಮೇಲೆ ಮಾಧವನು ಮಾಡಿದ ಎರಡು ದಂಡ ಯಾತ್ರೆಗಳೂ ಫಲಪ್ರದವಾದವು ಎಂಬ ಲೂಯಿರೈಸ್ ಅವರ ವಾದವನ್ನು ಇವರು ಸಂಪೂರ್ಣವಾಗಿ ಒಪ್ಪಿದ್ದಾರೆ.[೫] ಪಶ್ಚಿಮ ತೀರ ಪ್ರದೇಶದಲ್ಲಿ ಇದಕ್ಕೆ ಆಧಾರವಾಗಿ ಗಂಗರ ಶಾಸನಗಳಿವೆ ಎಂದಿದ್ದಾರೆ. ಅದರೆ ಅವು ಎಲ್ಲಿವೆ ಮತ್ತು ಅವುಗಳ ಕಾಲ ಇತ್ಯಾದಿ ವಿಷಯಗಳನ್ನು ಅವರು ತಿಳಿಸಿಲ್ಲ.[೬] ಕೊಂಕಣ ಮತ್ತು ಪಶ್ಚಿಮ ತೀರ ಪ್ರದೇಶಗಳಲ್ಲಿ ಗಂಗರ ಶಾಸನವು ಇದುವರೆವಿಗೆ ದೊರೆತಿಲ್ಲ. ಪ್ರಾಯಶಃ ಗಂಗ ಒಂದನೆಯ ಮಾಧವನ ಕೊಂಕಣ ದಂಡಯಾತ್ರೆ ಕೇವಲ ಕದಂಬೋತ್ತರ ಕಾಲದ ಕಥೆಯಾಗಿರಬೇಕು.

ಚಾಲುಕ್ಯ ಒಂದನೆಯ ಪುಲಕೇಶಿಯಿಂದ ಪೂರ್ಣ ಸೋಲು ಅನುಭವಿಸಿ ರಾಜಕೀಯವಾಗಿ ಹಿಂದೆ ಸರಿಯುವವರೆಗೆ (ಕ್ರಿ.ಶ. ೫೪೦) ಮಯೂರವರ್ಮನಿಂದ ಪ್ರಾರಂಭಗೊಂಡ ಕದಂಬ ವಂಶ ತನ್ನ ರಾಜ್ಯದ ಎಲ್ಲೆಯನ್ನು ವಿಸ್ತರಿಸಿಕೊಳ್ಳುತ್ತಾ ಹೋಗಿದ್ದನ್ನು ಕಾಣುತ್ತೇವೆ; ಭೂಮಿಯನ್ನು ಕಳೆದುಕೊಂಡಿದ್ದನ್ನಲ್ಲ. ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಗಂಗರ ಶಾಸನ ದೊರೆತಿವೆಯಾದರೂ ಅವು ಸುಮಾರು ಏಳನೆಯ ಶತಮಾನದ ನಂತರದವು. ಅಂದಮೇಲೆ ಕ್ರಿ.ಶ. ೩೫೦ ರಿಂದ ೩೭೦ ರವರೆಗೆ ಆಳಿದ ಗಂಗ ಕೊಂಗುಣಿವರ್ಮ-ಒಂದನೆಯ ಮಾಧವನು ಕೊಂಕಣದ ದಿಗ್ವಿಜಯದಲ್ಲಿ ಜಯಶಾಲಿಯಾದ ಎಂಬ ರೈಸ್ ಮತ್ತು ಷೇಕ್ ಆಲಿ ಅವರುಗಳ ವಾದಕ್ಕೆ ಆಧಾರಗಳು ಇನ್ನೂ ದೊರೆಯಬೇಕಾಗಿವೆ.

ಗಂಗರ ೫ನೆಯ ರಾಜ ತಡಗಲ ಮಾಧವ (ಮುಮ್ಮಡಿ ಮಾಧವ)ನು ಕದಂಬರ ೫ನೆಯ ರಾಜ ಕಾಕುಸ್ಥವರ್ಮನ ಮಗಳನ್ನು ಮದುವೆಯಾದ[೭]. ಈ ರಾಜ ದಂಪತಿಗಳಿಗೆ ಜನಿಸಿದ ಮಗ ಪ್ರಸಿದ್ಧ ರಾಜ ಅವನೀತಗಂಗ. ಇಲ್ಲಿ ನಮಗೆ ಬಹಳ ಪ್ರಸ್ತುತವಾಗಿರುವುದು ಕದಂಬ-ಗಂಗ ಸಂಬಂಧ ಇದ್ದು ಯಾವಾಗ ಬೆಸೆಯಿತು ಮತ್ತು ಪರಸ್ಪರರಿಗೆ ಆಗ ಇದ್ದ ರಾಜಕೀಯ ಉದ್ದೇಶವೇನು ಎಂಬ ಪ್ರಶ್ನೆಗಳು. ಇವುಗಳಿಗೆ ಸಮಾಧಾನಕರ ಉತ್ತರ ದೊರೆಯಬೇಕಾಗಿದೆ.

---

* # ೨೦೩೧, ಗುರುಕೃಪ, ೧೦ ನೆಯ ಅಡ್ಡರಸ್ತೆ, ಕಲ್ಲಹಳ್ಳಿ, ವಿ.ವಿ.ನಗರ, ಮಂಡ್ಯ-೫೭೧೪೦೧

ಕರ್ನಾಟಕದಲ್ಲಿ ಕದಂಬ ಮತ್ತು ಗಂಗ ರಾಜ್ಯಗಳ ಉದಯ ಪಲ್ಲವರಿಗೆ ಹಿತವಾದುದಾಗಿರಲಿಲ್ಲ. ಅದರಲ್ಲಿಯೂ ಕದಂಬರಂತೂ ಪಲ್ಲವರನ್ನು ಸೋಲಿಸಿಯೇ ತಮ್ಮ ರಾಜ್ಯವನ್ನು ಕಟ್ಟಿಕೊಂಡದ್ದು. ಕಾಕುಸ್ಥವರ್ಮನ ತಾಳಗುಂದ ಶಾಸನ[೭] ಈ ಬಗ್ಗೆ ಸ್ಪಷ್ಟ ಮಾಹಿತಿಯನ್ನು ಕೊಡುತ್ತದೆ. ಅಂದಿನಿಂದ ಕದಂಬರು ಪ್ರಬಲರಾಗಿ ಬೆಳೆದಿದ್ದರು; ಪಲ್ಲವರ ಪುರೋಗಾಮಿನೀತಿಗೆ ಅಡ್ಡಿಯಾದರು. ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳ ಬೇಕಾದ ಅನಿವಾರ್ಯತೆ ಪಲ್ಲವರದಾಯಿತು. ಹಾಗಾಗಿ ತಮ್ಮ ಮತ್ತು ಕದಂಬರ ನಡುವೆ ರಕ್ಷಣಾ ಗೋಡೆಗಾಗಿ ಪಲ್ಲವರು ಗಂಗರ ಸ್ನೇಹ ಬೆಳೆಸಿದರು.[೮] ಪಲ್ಲವ ಸಿಂಹವರ್ಮ ಗಂಗಹರಿವರ್ಮನ ಪಟ್ಟಾಭಿಷೇಕ ಮಹೋತ್ಸವದಲ್ಲಿ ಸ್ವತಃ ಹಾಜರಿದ್ದು ಆಕಾರ್ಯ ನೆರವೇರಿಸಿದ. ಗಂಗ ಹರಿವರ್ಮನು ಗಂಗ ರಾಜರಲ್ಲಿ ಮೂರನೆಯವನು. ಕ್ರಿ.ಶ. ೩೯೦ ರಿಂದ ೪೧೦ರವರೆಗೆ ರಾಜ್ಯವಾಳಿದ[೧೦]. ಈತ ಯಾವ ರೀತಿಯಲ್ಲಿ ಕದಂಬರೊಂದಿಗೆ ಸಂಬಂಧ ಹೊಂದಿದ್ದ ಎಂಬುದು ತಿಳಿಯುವುದಿಲ್ಲ. ಪಲ್ಲವರೊಂದಿಗೆ ಸ್ನೇಹದಿಂದಿದ್ದ ಈತ ಕದಂಬರೊಂದಿಗೆ ಸ್ನೇಹ ಬಾಂಧವ್ಯ ಹೊಂದಿದ್ದುದು ಅನುಮಾನಾಸ್ಪದ. ಈತನ ಮಗ ವಿಷ್ಣುಗೋಪನ ಕಾಲದಲ್ಲಿ ಗಂಗ-ಕದಂಬ ಸ್ನೇಹಕ್ಕೆ ಹೊಸ ಆಯಾಮ ದೊರೆತಂತೆ ಕಾಣುತ್ತದೆ. ಇದು ಗಂಗ-ಕದಂಬ ವೈವಾಹಿಕ ಸಂಬಂಧಕ್ಕೂ ನಾಂದಿಯಾಯಿತು.

ಹಲ್ಮಿಡಿ ಶಾಸನದ[೧೧] ಪ್ರಕಾರ ಕದಂಬ ಕಾಕಸ್ಥವರ್ಮನು ಯುದ್ಧದಲ್ಲಿ ಪಲ್ಲವರನ್ನು ಸೋಲಿಸಿದ. ಇದು ಕದಂಬರ ರಾಜಕೀಯ ಶಕ್ತಿ ಪತಾಕೆಯನ್ನು ಹಾರಿಸಿತು. ಪ್ರಾಯಶಃ ಈ ಸಂದರ್ಭದಲ್ಲಿ ಗಂಗ-ಕದಂಬ ಸಂಬಂಧ ಕುದುರಿತು. ಆದರೆ ಇದು ಯುದ್ಧಕ್ಕೆ ಮೊದಲಾಯಿತೋ ಅಥವಾ ಆನಂತರವೋ ಗೊತ್ತಾಗುವುದಿಲ್ಲ.

ಕಾಕುಸ್ಥವರ್ಮನ ಹಲ್ಮಿಡಿ ಶಾಸನದ ಕಾಲ ಬಾ. ರಾ. ಗೋಪಾಲ್ ಅವರ ಪ್ರಕಾರ ಹೇಳುವುದಾದರೆ – ಸುಮಾರು ಕ್ರಿ.ಶ. ೪೨೦ ರಿಂದ ೪೨೫ರ ಅವಧಿಯೊಳಗೆ ಸೇರುವಂತಹುದು[೧೨]. ಈ ಯುದ್ಧದಲ್ಲಿ ಪಲ್ಲವರ ಮೇಲೆ ತಾನು [ಕಾಕುಸ್ಥವರ್ಮನು] ಪಡೆದ ವಿಜಯವು ರಾಜಕೀಯವಾಗಿ ಗಂಗರನ್ನು ಕದಂಬರ ಕಡೆ ತಿರುಗುವಂತೆ ಮಾಡಿತು. ರಾಜಕೀಯ ಮುತ್ಸದ್ದಿಯಾಗಿದ್ದ ಕಾಕುಸ್ಥವರ್ಮ ತನ್ನ ಮಗಳನ್ನೇ ಗಂಗ ಮೂರನೆಯ ಮಾಧವನಿಗೆ ಮದುವೆ ಮಾಡಿಕೊಟ್ಟು ಎರಡೂ ವಂಶಗಳೊಡನೆ ಸಂಬಂಧ ಕಲ್ಪಿಸಿದ.

ಆದರೆ ಷೇಕ್ ಆಲಿಯವರ ಅಭಿಪ್ರಾಯವನ್ನು ಗಮನಿಸಿದರೆ ಈ ಸಂಬಂಧ ಇನ್ನೂ ಮೊದಲೇ ಆಗಿರುವಂತೆ ಕಾಣುತ್ತದೆ.[೧೩] ಕದಂಬರ ಮಾಧವನು [ಮೂರನೆಯ ಮಾಧವ] ಅತ್ಯಂತ ಶಾಂತಿ ಪ್ರಿಯ ರಾಜನಾಗಿದ್ದು ದಕ್ಷಿಣದಲ್ಲಿ ಪಲ್ಲವರ ನೀತಿ ಆಕ್ರಮಣಕಾರಿಯಾದಾಗ, ಗಂಗರಾಜ್ಯದ ಅಸ್ತಿತ್ವದ ರಕ್ಷಣೆಗಾಗಿ ಸ್ನೇಹ ಹಸ್ತ ತೋರಿದ. ಇದರಿಂದಾಗಿ ಗಂಗ ವಿಷ್ಣುಗೋಪನು ಕದಂಬ ಕಾಕುಸ್ಥವರ್ಮನ ಮಗಳೊಂದಿಗೆ ತನ್ನ ಮಗನ ವಿವಾಹ ನೆರವೇರಿಸಿದ.[೧೪] ಈ ವಿವಾಹ ಕ್ರಿ.ಶ. ೪೨೦-೪೨೫ರ ನಡುವೆ ನಡೆದಿರಬೇಕು. ಈ ಹೊಸ ಬೆಳವಣಿಗೆಯಿಂದ ಕ್ಷುದ್ರರಾದ ಪಲ್ಲವರು ಗಂಗ ಮತ್ತು ಕದಂಬ ರಾಜ್ಯಗಳ ಮೇಲೆ ದಂಡೆತ್ತಿ ಬಂದರು. ಪ್ರಾಯಶಃ ಗಂಗರ ಹಿತ ರಕ್ಷಣೆಯ ಸಲುವಾಗಿ ಕದಂಬರು ಪಲ್ಲವರೊಡನೆ ಕಾದಾಡಿ, ಅವರನ್ನು ಸೋಲಿಸಿದರು. ಹಲ್ಮಿಡಿಶಾಸನ ಈ ಗೆಲುವಿನ ವಿಚಾರವನ್ನು ತಿಳಿಸುತ್ತದೆ.[೧೫] ಇದಾದ ಸ್ವಲ್ಪ ಕಾಲಕ್ಕೆ ಗಂಗ ವಿಷ್ಣಗೋಪ ಕಾಲವಾದ. ನಂತರ ಆತನ ಮಗ ತಡಂಗಲ ಮಾಧವ ಪಟ್ಟಕ್ಕೆ ಬಂದ. ಷೇಕ್ ಆಲಿ ಅವರ ಪ್ರಕಾರ ಮುಮ್ಮಡಿ ಮಾಧವ ಅಧಿಕಾರಕ್ಕೆ ಬಂದುದು ಕ್ರಿ.ಶ. ೪೩೦ರಲ್ಲಿ.[೧೬] ಆದರೆ ಪಿ. ಬಿ. ದೇಸಾಯಿ ಅವರ ಪ್ರಕಾರ ಕ್ರಿ.ಶ. ೪೪೦ರಲ್ಲಿ.[೧೭] ಇವರುಗಳ ಪ್ರಕಾರ ಈತನ ಆಳ್ವಿಕೆ ಕಾಲದಲ್ಲಿ ವ್ಯತ್ಯಾಸ ಕಾಣುತ್ತೇವೆ. ಷೇಕ್ ಆಲಿ ಅವರ ಪ್ರಕಾರ ಈತ ಕ್ರಿ.ಶ. ೪೩೦ ರಿಂದ ೪೬೬ರವರೆಗೆ ಆಳಿದ. ದೇಸಾಯಿಯವರ ಪ್ರಕಾರ ಇದು ಕ್ರಿ.ಶ. ೪೪೦ ರಿಂದ ೪೬೯. ತಡಂಗಲ ಮಾಧವನ ಕಾಲದ ಬಗ್ಗೆ ಇದ್ದ ಹಲವುವಾದ ವಿವಾದಗಳನ್ನು ಬಹಳ ಸೂಕ್ಷ್ಮವಾಗಿ ಪರಿಶೀಲಿಸಿ, ಹೆಬ್ಬಾಟ ತಾಮ್ರಪಟಗಳ ಕಾಲವನ್ನು[೧೮] ಶ್ರೀಕಂಠಶಾಸ್ತ್ರಿಗಳು ನಿರ್ಧರಿಸಿದ್ದಾರೆ.[೧೯] ಪ್ರಾಯಶಃ ಗಂಗ ಇತಿಹಾಸದ ಪ್ರಾರಂಭಿಕ ಅರಸರಲ್ಲಿ ಈತನೇ ಬಹಳ ದೀರ್ಘಕಾಲ ಆಳಿದಂತೆ ಕಾಣುತ್ತದೆ. ಕ್ರಿ.ಶ. ೪೬೬ ಕ್ಕೆ ಅವನೀತ ಗಂಗ ಅಧಿಕಾರಕ್ಕೆ ಬಂದನೆಂಬುದು ಹೆಬ್ಬಾಟ ಮತ್ತು ಮಡಿಕೇರಿ ತಾಮ್ರ ಪಟಗಳಿಂದ[೨೦] ನಿರ್ಧರಿತವಾಗಿರುವ ಕಾರಣ ತಡಂಗಲ ಮಾಧವನ ಆಳ್ವಿಕೆ ಕ್ರಿ.ಶ. ೪೬೯ ರವರೆಗೆ ಮುಂದುವರೆದಿತ್ತು ಎಂಬ ದೇಸಾಯಿಯವರ ಅಭಿಪ್ರಾಯಕ್ಕೆ ಆಧಾರಗಳ ಕೊರತೆ ಇದೆ. ಸದ್ಯಕ್ಕೆ ಷೇಕ್ ಆಲಿ ಅವರು ತಡಂಗಲ ಮಾಧವನಿಗೆ ಕೊಟ್ಟಿರುವ ಕಾಲಮಾನ ಸರಿ ಎಂದು ಕಾಣುತ್ತದೆ. ಆದರೆ ಕದಂಬ ಕಾಕುಸ್ಥವರ್ಮ ಮತ್ತು ಅವನ ಮಗ ಕೃಷ್ಣವರ್ಮರ ಆಳ್ವಿಕೆ ಕಾಲದ ಬಗ್ಗೆ ಇವರ ಅಭಿಪ್ರಾಯ ತಪ್ಪಾಗಿದೆ.[೨೧]

ಗಂಗ–ಕದಂಬ ಸಂಬಂಧವು ಈ ರೀತಿ ಮಧುರವಾಗಿ ಪ್ರಾರಂಭವಾದರೂ ಮುಂದೆ ಸ್ವಲ್ಪ ಹಳಸಿದಂತಾಗುತ್ತದೆ.[೨೨] ಕದಂಬ ಮೃಗೇಶವರ್ಮನ ಕಾಲದಲ್ಲಿ ಗಂಗವಾಡಿಯ ಕೆಲವು ಭಾಗಗಳು ಕದಂಬರ ವಶವಾಗಿದ್ದವು.[೨೩] ಇದಕ್ಕೆ ಸೂಕ್ತ ಪುರಾವೆಯಿದೆ. ಕದಂಬ ಮೃಗೇಶವರ್ಮನ ಹಿಟ್ನೆ ಹೆಬ್ಬಾಗಿಲು ತಾಮ್ರಶಾಸನ[೨೪] ಶಾಂತಿವರ್ಮನ ಮಗನಾದ ಮೃಗೇಶವರ್ಮನು ಕ್ರಿ.ಶ. ೪೫೫ಕ್ಕೆ ಪಟ್ಟಕ್ಕೆ ಬಂದು ೪೮೦ ರವರೆಗೆ ಆಳಿದ ಎಂದು ಬಾ. ರಾ. ಗೋಪಾಲ್ ಅಭಿಪ್ರಾಯ ಪಟ್ಟಿದ್ದಾರೆ.[೨೫] ಷೇಕ್ ಆಲಿ ಅವರು ಕಾಕುಸ್ಥವರ್ಮ ಮತ್ತು ಅವನ ಮಗ ಒಂದನೆಯ ಕೃಷ್ಣವರ್ಮರುಗಳಿಗೆ ಕೊಟ್ಟಿರುವ ಆಳ್ವಿಕೆ ಕಾಲ ಕ್ರಮವಾಗಿ ಕ್ರಿ.ಶ. ೪೩೦–೪೫೦ ಮತ್ತು ಕ್ರಿ ೪೭೫–೪೮೦. ಇಲ್ಲಿ ತಂದೆಯ ನಂತರ ಮಗ ಅಧಿಕಾರಕ್ಕೆ ಬರಲು ೨೫ ವರ್ಷಗಳಷ್ಟು ತಡ ಆಗಿದೆ. ಇದು ಏಕೆ ಮತ್ತು ಹೇಗೆ ಎಂಬುದರ ಬಗ್ಗೆ ವಿವರಣೆ ಇಲ್ಲ.[೨೬] ಈ ಆಧಾರವನ್ನು ಗಂಗರ ಆಳ್ವಿಕೆಯ ಕಾಲವೂ ನಿರ್ಧರಿಸಬಹುದು ಎಂದು ಅವರು ಹೇಳಿದ್ದಾರೆ. ಕದಂಬರ ಕಾಲಾನುಕ್ರಮಣಿಕೆಯಲ್ಲೇ ತೊಡಕಿನ ನಡೆ ಇರುವಾಗ ಗಂಗರ ಕಾಲಾನುಕ್ರಮಣಿಕೆ ಸರಿಯಾಗಲು ಹೇಗೆತಾನೆ ಸಾಧ್ಯ? ಆದರೆ ವಿಷ್ಣುಗೋಪ ಮತ್ತು ತಡಂಗಲ ಮಾಧವರ ಕಾಲವನ್ನು ಇವರು ಸರಿಯಾಗೇ ಗುರುತಿಸಿದ್ದಾರೆ.[೨೭] ಕದಂಬ ಕೃಷ್ಣವರ್ಮನ ತಂಗಿಯನ್ನು ಮದುವೆಯಾಗಿದ್ದ ತಡಂಗಲ ಮಾಧವ ಕ್ರಿ.ಶ. ೪೩೦ ರಿಂದ ೪೬೬ ರವರೆಗೆ ಆಳಿದ ಎಂದೂ ನಿರ್ಧರಿಸಿದ್ದಾರೆ. ಅಂದ ಮೇಲೆ ಕದಂಬ ಕೃಷ್ಣವರ್ಮ ಇವನ ಸಮಕಾಲೀನನೇ ಆಗಬೇಕಲ್ಲವೆ ? ಈ ನಿಟ್ಟಿನಲ್ಲಿ ಗೋಪಾಲ್ ಅವರು ಕೃಷ್ಣವರ್ಮನಿಗೆ ನಿರ್ಧರಿಸಿರುವ ೪೩೦–೪೬೦ ಕಾಲಮಾನ ಸರಿಯಾಗಿದೆ.[೨೮]

ಕದಂಬರು ಗಂಗರಾಜ್ಯದ ಭೂ ಭಾಗಗಳನ್ನು ವಶಮಾಡಿ ಕೊಂಡ ವಿಚಾರ ಮೃಗೇಶವರ್ಮನ ಶಾಸನಗಳಿಂದ ಬಲು ಸೂಚ್ಯವಾಗಿ ತಿಳಿಯುತ್ತದೆ. ಈತನ ೮ನೆಯ ಆಳ್ವಿಕೆ ವರ್ಷದಲ್ಲಿ ಹೊರಡಿಸಲಾದ ಹಲಸಿ ತಾಮ್ರ ಪಟಗಳಲ್ಲಿ ಈತ 'ಪಲ್ಲವರಿಗೆ ಪ್ರಳಯ ಕಾರಿಯಾಗಿ, ಗಂಗರ ಮೂಲೋತ್ಪಾಟಕನಾದ' ಎಂದಿದೆ.[೨೯]

> **"ಸ್ವಯಂ ಭಯ ದರಿದ್ರಾಪಿ ಶತ್ರುಭ್ಯೋದಾದ್ಮಹಾಭಯಂ ।**
>
> **ತುಂಗ ಗಂಗ ಕುಲೋತ್ಸಾದಿ ಪಲ್ಲವ ಪ್ರಳಯಾ ನಲಃ"[೩೦] ॥**

ಅಂದರೆ ' ಸ್ವಯಂ ಭಯಕ್ಕೆ ದರಿದ್ರನಾದರೂ (ಬಡವನಾದರೂ) ತನ್ನ ಶತ್ರುಗಳಿಗೆ ಮಹಾ ಭಯವನ್ನೇ ಕೊಟ್ಟ, ತುಂಗ (ಹಿರಿದಾದ) ಗಂಗ ವಂಶವನ್ನೇ ಬೇರು ಸಹಿತ ಅಲ್ಲಾಡಿಸಿದರೆ (ಮೂಲೋತ್ಪಾಟನೆ ಮಾಡಿದರೆ) ಪಲ್ಲವರಿಗೆ ಪ್ರಳಯಾಗ್ನಿಯಾದ' ಮೃಗೇಶವರ್ಮನ ಆಳ್ವಿಕೆ ಕಾಲ ಕ್ರಿ.ಶ. ೪೫೫–೪೮೦[೩೧] ಈ ಆಧಾರದಲ್ಲಿ ಹೇಳುವುದಾದರೆ ಈತನ ಹಲಸಿ ತಾಮ್ರಶಾಸನ ಕ್ರಿ.ಶ. ೪೬೩– ೬೪ಕ್ಕೆ ಸೇರುತ್ತದೆ.[೩೨]

ಮೃಗೇಶವರ್ಮನ ಪ್ರಾಯಶಃ ೭ನೆಯ ಆಳ್ವಿಕೆ ವರ್ಷಕ್ಕೆ ಸೇರುವ ಬನವಾಸಿ ಸ್ತಂಭ ಶಾಸನ[೩೩] ರಾಜನ ಬಹುಬಲ ಪರಾಕ್ರಮವನ್ನು ಸ್ಪಷ್ಟವಾಗಿ ಚಿತ್ರಿಸಿದೆ. ಶಾಸನದಲ್ಲಿ ಶಾಂತಿವರ್ಮನನ್ನು 'ರಣ ಭೀಮ' ಎಂದು ಹೆಸರಿಸಿದೆ. ಇದು ಮೃಗೇಶವರ್ಮನ ಬಗ್ಗೆ ಕೊಡುವ ಚಿತ್ರಣ ಇಂತಿದೆ.

> **"ನ್ನರೇನ್ದ್ರಃ ಮೃಗೇಷ ಕ್ಕರ್ಮಾರಿ ಮೃಗೇಷು ನಿತ್ಯಂ ॥**
> **ಕಾಂಚೇಶ್ವರಾಜ್ಞಾ ಜಯಸಾಧನಾಂ ಯೋ ಗಂಗಂ ಬಲಂ ತುಂಗಂ**
> **ಮದಾವಲೇಪಮ್ । ಅನೇಕ ಹಸ್ತ್ಯಶ್ವ ಪದಾತಿ[ಯೋ]ಥಂ**
> **ಕಸ್ತ್ರಾಗ್ನಿ . . . . . . . . . . . . . . . . . . . . .**
> **ಆ ಜನ್ಮ ತಸ್ಸಂಚಿತ ದುಂ [ಹ್ವ ಲಬ್ಧಾ]ಂ ಜಯಶ್ರೀಯಂ**
> **ಪಲ್ಲವ ಪಾರ್ಥಿವಸ್ಯಜಹಾರ ರಾಮಸ್ಯಯ ಶೈ(ಥೈ) ವ ರಾಮಃ"[೩೪] ॥**

ರಾಮನು (ಪರಶುರಾಮನು)ಹುಟ್ಟಿನಿಂದಲೇ ದುಃಖ ಅನುಭವಿಸುವಂತೆ ಮಾಡಿದ ರಾಮನಂತೆ ಗಂಗರಾಜನ ಸೈನ್ಯದ ರೋಷಾವಿಷ್ಟ ದುರಹಂಕಾರವನ್ನು ಇಳಿಸಿ, ಆನೆ, ಕುದುರೆ, ಪದಾತಿ ದಳದೊಂದಿಗೆ ಶಸ್ತ್ರಾಗ್ನಿಸಹಿತ ಬಂದ ಕಾಂಚಿ ರಾಜನ ಜಯಶ್ರೀಯನ್ನು ಸಾಯಿಸಿ ಪಲ್ಲವರಾಜ ದುಃಖ ಅನುಭವಿಸುವಂತೆ ಮಾಡಿದ ಮೃಗೇಶವರ್ಮ. ಬನವಾಸಿಯ ಈ ಶಾಸನದ ಕಾಲ ಪ್ರಾಯಶಃ ಕ್ರಿ.ಶ. ೪೬೨–೪೬೩.

ಇದೇ ಶಾಸನದ ಕಾಲಕ್ಕೆ ಸೇರಿದ ಇನ್ನೊಂದು ಶಾಸನವೆಂದರೆ ಮೈಸೂರು ಜಿಲ್ಲೆ ಪಿರಿಯಾಪಟ್ಟಣ ತಾಲ್ಲೂಕು 'ಹಿಟ್ನೆ ಹೆಬ್ಬಾಗಿಲು ತಾಮ್ರಶಾಸನ[೩೫] ಇದು ಮೃಗೇಶವರ್ಮನ "ಸ್ವಭುಜ ಬಲ ಪರಾಕ್ರಮ"ವನ್ನು ಸಾಕಾರಗೊಳಿಸಿದೆ. ಇಲ್ಲಿಯವರೆಗೆ ಮೃಗೇಶವರ್ಮನು ಗಂಗ ಮತ್ತು ಪಲ್ಲವರ ಮೇಲೆ ಯುದ್ಧ ಮಾಡಿ ವಿಜಯ ಸಾಧಿಸಿದ ಎಂಬ ವಿಷಯವನ್ನು ಬೇರೆ ಬೇರೆ ಶಾಸನಗಳಿಂದ ತಿಳಿದಿರುವೆವು. ಆದರೆ ಈಗ ಆ ಮಾತುಗಳೆಲ್ಲವು ಯಥಾರ್ಥವಾದುವು ಎಂಬುದು ಈ ಶಾಸನದಿಂದ ತಿಳಿಯುತ್ತದೆ.

ಮೃಗೇಶವರ್ಮನ ಆಳ್ವಿಕೆಯ ೪ನೆಯ ವರ್ಷದಲ್ಲಿ ಹೊರಡಿಸಿದ ದೇವಗಿರಿ ತಾಮ್ರಶಾಸನದಲ್ಲಿ[೩೬] "ಮಹತಿ ಸಮರ ಸಂಕಟ ಸ್ವಭುಜ ಬಲ ಪರಾಕ್ರಮಾ ವಾಪ್ತ" [ಶಾಸನಪಾಠ-ಸಾಲು ೧೨] ಎಂದಿದೆ. ಈತನ ಹೊಸನಗರದ ತಾಮ್ರಶಾಸನದಲ್ಲಿ[೩೭] ಅನ್ಯೈಕ ಸ್ವಭುಜಬಲ ಪರಕ್ರಮಾವಾಪ್ತ [ಶಾಸನಪಾಠ-ಸಾಲು ೫-೬] ಎಂದಿದೆ. ಇಲ್ಲಿ ಇನ್ನೂ ಸ್ವಲ್ಪ ಮುಂದೆ ಹೋಗಿ "ಅನೇಕ ಸಮರ ವಿಜಯೀ" ಎಂದಿದೆ. ಈ ಎಲ್ಲ ಶಾಸನಗಳ ಹೇಳಿಕೆಗಳ ಆಧಾರದಲ್ಲಿ ಹಿಟ್ನೆ ಹೆಬ್ಬಾಗಿಲು ತಾಮ್ರ ಶಾಸನದ ಅವಲೋಕನ ಮಾಡುವುದು ಉಚಿತ.

ಇದು ನಾಲ್ಕು ತಾಮ್ರ ಪಟಗಳನ್ನು ಹೊಂದಿರುವ ಶಾಸನ. ಶಾಸನದ ಹಲಗೆಗಳನ್ನು ಬಂಧಿಸಿರುವ ಬಳೆ ಸಿಂಹ ಮುದ್ರೆಯನ್ನು ಹೊಂದಿದೆ. ಮೊದಲ ಮತ್ತು ಕೊನೆಯ ಹಲಗೆಗಳ ಒಳಭಾಗದಲ್ಲಿ ಮಾತ್ರ ಕ್ರಮವಾಗಿ ೪ ಮತ್ತು ೫ ಸಾಲುಗಳ ಬರಹ ಹೊಂದಿದೆ. ಉಳಿದ ೨ ಮತ್ತು ೩ನೆಯ ಹಲಗೆಗಳು ಎರಡೂ ಬದಿಯಲ್ಲಿ ಬರಹ ಹೊಂದಿವೆ. ಒಟ್ಟು ೨೫ ಸಾಲುಗಳ ಬರಹ ಇಲ್ಲಿದೆ.

ಕದಂಬ ರಾಜ ಶ್ರೀ ವಿಜಯ ಶಿವ ಮೃಗೇಶವರ್ಮನ ಆಳ್ವಿಕೆಯ ಏಳನೆಯ ವರ್ಷದ ಮಾರ್ಗ್ಗಶಿರ ಮಾಸ ಶುಕ್ಲ ಪಕ್ಷ ದಶಮಿಯಂದು ಔಪಗಹನಿ ಗೋತ್ರ ಮತ್ತು ಅಥರ್ವಣ ಸೂತ್ರದ ಪಿಂಗಲ ಸ್ವಾಮಿಯ ಮಗ ಸರ್ವ್ವಸ್ವಾಮಿಗೆ ಕಿಱುನೀರಿಲ್ಲಿ ಗ್ರಾಮವನ್ನು ದಾನಮಾಡಿದ ಎಂದು ಶಾಸನ ತಿಳಿಸುತ್ತದೆ.[೩೮] ಈ ಶಾಸನವನ್ನು ಬರೆದಾತ ಕಿರ್ತಿವರ. ಹೊಸನಗರ ತಾಮ್ರಶಾಸನವನ್ನು ಬರೆದಾತನೂ ಈತನೇ.[೩೯] ಮೃಗೇಶವರ್ಮನ ಆಳ್ವಿಕೆಯ ಏಳನೆಯ ವರ್ಷ ಪ್ರಾಯಶಃ ಕಿ.ಶ. ೪೬೨-೬೩ ಆಗುತ್ತದೆ.

"ದಾನಕೊಟ್ಟ ಕಿಱುನೀರಿಲ್ಲಿ ಗ್ರಾಮವನ್ನು ಗುರುತಿಸಲು ಸಾಧ್ಯವಾಗಿಲ್ಲ. ಆದರೆ ಈಗ ಶಾಸನ ದೊರೆತಿರುವ ಗ್ರಾಮವು ಕದಂಬ ರಾಜ್ಯದಿಂದ ಬಹುದೂರದಲ್ಲಿರುವುದರಿಂದ ಮೂಲತಃ ತುಂಗ ಭದ್ರಾ ಪ್ರದೇಶದ ಸುತ್ತಮುತ್ತಲಿನ ಯಾವುದೋ ಸ್ಥಳದಿಂದ ಈ ತಾಮ್ರಶಾಸನವು ಇಲ್ಲಿಗೆ ಬಂದಿರುವ ಸಾಧ್ಯತೆ ಇದೆ" ಎಂದು ಪರಿಷ್ಕೃತ ಸಂಪುಟದಲ್ಲಿ ಬಾರಾ ಗೋಪಾಲ್ ತಮ್ಮ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ.[೪೦] ಅವರು ಮುಂದುವರೆದು "ಮೃಗೇಶವರ್ಮನು ಗಂಗ ಹಾಗೂ ಪಲ್ಲವರೊಂದಿಗೆ ಯುದ್ಧಗಳಲ್ಲಿ ನಿರತನಾಗಿದ್ದನೆಂಬುದು ನಮಗೆ ತಿಳಿದಿದೆ. ಗಂಗ ರಾಜ್ಯದಲ್ಲಿ ಮುನ್ನಡೆಯುತ್ತಿದ್ದಾಗ ಈ ದಾನವನ್ನು ನೀಡಿರಬಹುದೆಂದು ಊಹಿಸಬಹುದು. ಹಾಗಿದ್ದಲ್ಲಿ ತನ್ನ ಆಳ್ವಿಕೆಯ ಏಳನೆಯ ವರ್ಷಕ್ಕೆ ಮುನ್ನವೇ ಆತ ಗಂಗರೊಂದಿಗೆ ಯುದ್ಧ ಮಾಡಿರಬಹುದು" ಎಂಬ ತಮ್ಮ ಅನುಮಾನ ವ್ಯಕ್ತ ಪಡಿಸುತ್ತಾರೆ.[೪೧] ಆದರೆ ಇದನ್ನು ಸಮರ್ಥಿಸಲು ಆಧಾರವಿಲ್ಲದೇ ಇದು ಕೇವಲ ಊಹೆ ಎಂದು ತಾವೇ ಕಡೆಗಣಿಸಿದ್ದಾರೆ. "ಅಲ್ಲದೆ ಕದಂಬ ರಾಜಧಾನಿ ವಿಜಯ ವೈಜಯಂತಿ ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಿಂದಲೇ ಅರಸನು ದಾನಮಾಡಿರುವನೆಂದು ಹೇಳಿರುವುದನ್ನು ಗಮನಿಸಬಹುದು" ಎಂದು ಆ ಬಗ್ಗೆ ನಮ್ಮ ಗಮನ ಸೆಳೆದಿದ್ದಾರೆ.[೪೨]

ಒಟ್ಟಿನಲ್ಲಿ ಹೇಳುವುದಾದರೆ ಹಿಟ್ನೆಹೆಬ್ಬಾಗಿಲು ಶಾಸನ ಕಾಲಕ್ಕೇ ಗಂಗನಾಡಿನ ಹಲವು ಭಾಗಗಳು ಕದಂಬರ ವಶವಾಗಿದ್ದುವು. ದಾನಕೊಟ್ಟ ಗ್ರಾಮ ಕಿಱುನೀರಿಲ್ಲಿ (ಇಂದಿನ ಕಿರುನಲ್ಲಿ) ಇರುವುದು ಇಲ್ಲೇ. 'ತುಂಗಭದ್ರಾದ ಯಾವುದೋ ಸ್ಥಳದಿಂದ ಈ ಶಾಸನ ಇಲ್ಲಿಗೆ ಬಂದಿರಬಹುದು' ಎಂದು ಹೇಳುವಾಗ ಗ್ರಾಮ ಕಿಱುನೀರಿಲ್ಲಿ ಎಲ್ಲಿ ಇರಬಹುದು ಎಂಬ ಊಹೆಯನ್ನಾದರೂ ಮಾಡಿದ್ದರೆ ಒಳ್ಳೆಯದಿತ್ತು. ಗಂಗ ತಡಂಗಲ ಮಾಧವನ ಕಾಲಕ್ಕೆ ಗಂಗವಾಡಿಯ ಹಲವು ಭಾಗಗಳು ಕದಂಬ ಮೃಗೇಶವರ್ಮನ ವಶವಾಗಿತ್ತು ಎಂಬ ಷೇಕ್ ಆಲಿ ಅವರ ಅಭಿಪ್ರಾಯ ಇಲ್ಲಿ ಹೆಚ್ಚು ಪ್ರಸ್ತುತವಾಗಿ ಕಂಡು ಬರುತ್ತದೆ.[೪೩] ಅಂದ ಮೇಲೆ ಈ ಶಾಸನದ ಬಗ್ಗೆ ಗೋಪಾಲ್ ಅವರು ವ್ಯಕ್ತಪಡಿಸಿರುವ ಅಭಿಪ್ರಾಯ ಸಾಧುವಲ್ಲ.

ಪ್ರಾಯಶಃ ಕಾಕುಸ್ಥವರ್ಮನ ಮರಣಾನಂತರ ಅವನ ಮಕ್ಕಳಾದ ಶಾಂತಿವರ್ಮ ಮತ್ತು ಒಂದನೆಯ ಕೃಷ್ಣವರ್ಮರುಗಳ ನಡುವೆ ಅಧಿಕಾರಕ್ಕಾಗಿ ಜಗಳ ಪ್ರಾರಂಭವಾಯಿತು. ಕೃಷ್ಣವರ್ಮ ಸೋಲಿಸಲ್ಪಟ್ಟರೂ ಜೀವದಾನ ಪಡೆದ. ಇದರಿಂದ ಕದಂಬ ರಾಜ್ಯ ವಿಭಜನೆಯಾಯಿತು. ಕದಂಬ ತ್ರಿಪರ್ವತ ಶಾಖೆ ಹುಟ್ಟಿಕೊಂಡಿತು.[೪೪] ಗಂಗ ತಡಂಗಲ ಮಾಧವ ಕದಂಬ ಕೃಷ್ಣವರ್ಮನ ಪಕ್ಷವಹಿಸಿದ. ಇದಕ್ಕೆ ಅವನಿಗಿದ್ದ ಮುಖ್ಯಕಾರಣ ಆತ ಕೃಷ್ಣವರ್ಮನ ಸೋದರಿಯನ್ನು ಮದುವೆಯಾಗಿದ್ದ. ಕದಂಬ ಕೃಷ್ಣವರ್ಮ ಕ್ರಿ.ಶ. ೪೩೦ ರಿಂದ ೪೬೦ ರವರೆಗೆ ತನ್ನ ಭಾಗದ ಕದಂಬ ರಾಜ್ಯವನ್ನಾಳಿದರೆ ಈತನ ಭಾವ ಗಂಗ ತಡಂಗಲ ಮಾಧವನು ಕ್ರಿ.ಶ. ೪೩೦ ರಿಂದ ೪೬೬ ವರೆಗೆ ಗಂಗ ರಾಜ್ಯವನ್ನಾಳಿದ.[೪೫] ಕದಂಬ ವಂಶದೊಳಗಿನ ಈ ಕಾದಾಟದ ಸಂದರ್ಭದಲ್ಲಿ ಪ್ರಾಯಶಃ ಶಾಂತಿವರ್ಮ, ಗಂಗ ರಾಜ್ಯದ ಮೇಲೆ ಯುದ್ಧ ಮಾಡಿ ಅದರ ಕೆಲಭಾಗಗಳನ್ನು ವಶಪಡಿಸಿಕೊಂಡಿರಬೇಕು. ಬನವಾಸಿ ಸ್ತಂಭ ಶಾಸನವು ಶಾಂತಿವರ್ಮನನ್ನು "ರಣಭೀಮ" ಎಂದು ಹೆಸರಿಸಿದೆ.[೪೬]

ಮೃಗೇಶವರ್ಮ ಗಂಗ ಮತ್ತು ಪಲ್ಲವರನ್ನು ಸೋಲಿಸಿದ ಮಾಹಿತಿ ಇದೆ. ಈ ಮಾಹಿತಿಯನ್ನು ನೀಡುವ ಈತನ ಇತರ ಶಾಸನಗಳೆಂದರೆ-ದೇವಗಿರಿಯ ತಾಮ್ರಶಾಸನಗಳು, ಹೊಸನಗರ, ಹಿಟ್ನೆ ಹೆಬ್ಬಾಗಿಲು ಮತ್ತು ಹಲಸಿ ತಾಮ್ರಶಾಸನಗಳು.[೪೭]

ಗಂಗ ತಡಂಗಲ ಮಾಧವನು ಪಲ್ಲವ ಸ್ಕಂದವರ್ಮನಿಂದ ಪಟ್ಟಾಭಿಷಿಕ್ತನಾದ ಇದರಿಂದಾಗಿ ಈತ ಪಲ್ಲವರ ನಿಕಟವರ್ತಿಯಾದ. ಇದು ಕದಂಬರನ್ನು ಸಹಜವಾಗಿಯೇ ಕೆರಳಿಸಿದೆ. ಇದರಿಂದ ಗಂಗ ಮತ್ತು ಪಲ್ಲವರೊಂದಿಗೆ ಯುದ್ಧಗಳು ಅನಿವಾರ್ಯವಾಗಿದೆ. ಪ್ರಾಯಶಃ ತನ್ನ ತಂದೆಯ ಕಾಲದಲ್ಲೆ ಮೃಗೇಶವರ್ಮ ಈ ಯುದ್ಧಗಳಲ್ಲಿ ಭಾಗಿಯಾಗಿ ಜಯಶಾಲಿಯಾದ. ಈತ ತಾನು ಪಟ್ಟಾಭಿಷಿಕ್ತನಾಗುವ ವೇಳೆಗೇ ಈ ಸಾಧನೆ ಮಾಡಿದ್ದಷ್ಟೇ ಅಲ್ಲದೆ, ಅದರ ಫಲವಾಗಿ ಗಂಗವಾಡಿಯ ಹಲವು ಭಾಗಗಳನ್ನು ತನ್ನ ವಶ ಮಾಡಿಕೊಂಡಿದ್ದ. ಅಲ್ಲಿ ತನ್ನ ದಾನಕಾರ್ಯಗಳನ್ನೂ ನೆರವೇರಿಸಿದ್ದ. ಈತನ ಹಿಟ್ನೆ ಹೆಬ್ಬಾಗಿಲು ತಾಮ್ರಶಾಸನ ಇದನ್ನೇ ಹೇಳುವುದು. ಪ್ರಾಯಶಃ ಮೈಸೂರು ಜಿಲ್ಲೆಯ ಮಲೆನಾಡ ಭಾಗ (ಪಶ್ಚಿಮ ಭಾಗ) ವೆಲ್ಲಾ ಕದಂಬರ ವಶವಾಗಿತ್ತು.

ಮೃಗೇಶವರ್ಮನ ಆಳ್ವಿಕೆಯ ಮಧ್ಯಭಾಗಕ್ಕೆ ಗಂಗ ತಡಂಗಲ ಮಾಧವ ನಿಧನನಾದ. ಆನಂತರ ಈತನ ಮಗ ಗಂಗ ಅವನೀತ ಪಟ್ಟಕ್ಕೆ ಬಂದ (ಕ್ರಿ.ಶ. ೪೬೬) ಈತ ಕದಂಬ ರಾಜಕುಮಾರಿ (ಒಂದನೆಯ ಕೃಷ್ಣವರ್ಮನ ಸೋದರಿ)ಯ ಮಗ. ಮಡಕೇರಿ ತಾಮ್ರಶಾಸನ ಇದನ್ನು ಪುಷ್ಠೀಕರಿಸಿದೆ.[೪೮]

ಅವನೀತ ತಾಯಿಯ ತೊಡೆಯ ಮೇಲಿದ್ದಾಗಲೇ ಪಟ್ಟಾಭಿಷಿಕ್ತನಾದ ಎಂಬ ಐತಿಹ್ಯ ಇದೆ.[೪೯] ಈತ ಹುಟ್ಟಬೇಕಾದರೆ ತನ್ನ ತಂದೆಯನ್ನು ಕಳೆದುಕೊಂಡಿದ್ದ ಎಂಬ ವಿಚಾರವೂ ಇದೆ. ಆದರೆ ಇದನ್ನು ಷೇಕ್ ಆಲಿ ಅವರು ಅನುಮೋದಿಸಿಲ್ಲ.

ಅವನೀತನ ಕಾಲದಲ್ಲಿ ಗಂಗ-ಕದಂಬ ಸಂಬಂಧ ಹೇಗಿತ್ತು ಎನ್ನುವುದು ತಿಳಿಯುವುದಿಲ್ಲ. ಯುದ್ಧಗಳಾದುದರ ಬಗ್ಗೆ ಮಾಹಿತಿ ಇಲ್ಲ. ಪ್ರಾಯಶಃ ಈತ ಕದಂಬ ಮೃಗೇಶವರ್ಮನು ಬದುಕಿದ್ದಷ್ಟು ಕಾಲ ಕದಂಬ ವಶನಾಗಿದ್ದ ತನ್ನ ರಾಜ್ಯದ ಭಾಗಗಳನ್ನು ಪುನಃ ವಶಮಾಡಿಕೊಳ್ಳಲು ಪ್ರಯತ್ನಿಸಲಿಲ್ಲ. ಆನಂತರ ಎರಡೂ ವಂಶಗಳೊಂದಿಗೆ ನಡೆದಿರಬಹುದಾದ ಯುದ್ಧಗಳ ವಿಷಯ ಪ್ರಸ್ತಾಪವಾಗಿಲ್ಲ.

ಕೊನೆಯದಾಗಿ ಕದಂಬ ರವಿವರ್ಮನ ಒಂದು ಶಾಸನವನ್ನು ಇಲ್ಲಿ ಅವಲೋಕಿಸುವುದು ಸೂಕ್ತ. ಇದು ದೊರೆತಿರುವುದು ಕೇರಳದ ನೀಲಂಬೂರಿನಲ್ಲಿ[೫೦]. ಇದು ರವಿವರ್ಮನ ೫ನೆಯ ಆಳ್ವಿಕೆ ವರ್ಷಕ್ಕೆ ಸೇರಿದ್ದು. ಗೋಪಾಲ್ ಅವರ ಪ್ರಕಾರ ರವಿವರ್ಮನ ಆಳ್ವಿಕೆ ಕಾಲ ಕ್ರಿ.ಶ. ೪೮೫-೫೧೯.[೫೧] ಈ ಆಧಾರದಲ್ಲಿ ಶಾಸನ ಕ್ರಿ.ಶ. ೪೯೦-೯೧ ಕ್ಕೆ ಸೇರುತ್ತದೆ. ಇದೊಂದು ದಾನ ಶಾಸನ. ಇದರಲ್ಲಿ ರಾಜನು ಅಶ್ವಮೇಧಯಾಗ ಮಾಡಿ ಅವಭೃತ ಸ್ನಾನ ಮಾಡಿದವ ("ಅಶ್ವಮೇಧಾವಭೃಥಸ್ನಾನ ಪವಿತ್ರಿಕೃತಾನಘಾನಾಂ") ಎಂದಿದೆ.[೫೨] ರಾಜ ವಿಜಯ ವೈಜಯಂತಿ (ಬನವಾಸಿ)ಯಲ್ಲಿದ್ದಾಗ ಕಾಶ್ಯಪಗೋತ್ರದ ಗೋವಿಂದ ಸ್ವಾಮಿಗೆ ಮೊಗಲೂರು ವಿಷಯದೊಳಗಿದ್ದ ಮುಟ್ಟಿಗೆ ಮತ್ತು ಮಟಿಕಾವು ಎಂಬ ಎರಡು ಪಳ್ಳಿ(ಸ್ಥಳ)ಗಳನ್ನು ದಾನಮಾಡಿದ. ಈ ತಾಮ್ರಶಾಸನವನ್ನು ಮೊದಲಬಾರಿಗೆ ಪ್ರಕಟಿಸಿರುವ ಟಿ. ಎ. ಗೋಪಿನಾಥ ರಾವ್ ಮತ್ತು ಜಿ. ವೆಂಕೋಬರಾವ್

ಅವರುಗಳು ಮೊಗಲೂರು ವಿಷಯವನ್ನು ಇಂದಿನ ತಲಕಾಡಿನ ಬಳಿ ಇರುವ ಮೂಗೂರುಅಥವಾ ಮುಳ್ಳೂರು ಎಂದು ಗುರುತಿಸಿದ್ದಾರೆ. ಟಿ. ನರಸೀಪುರ-ಮೈಸೂರು-ನಂಜನಗೂಡುಗಳಿಗೆ ಸಮೀಪ ಇರುವ ಸ್ಥಳ ಮೂಗೂರು. ಇದು ತಲಕಾಡಿಗೆ ಸ್ವಲ್ಪ ದೂರದಲ್ಲಿದೆ. ಕೇರಳದ ನೀಲಂಬೂರು ಬಳಿಯ ಚಾಲಿಯಾರ್ ನದಿ ದಂಡೆಯ ಮೇಲೆ ದೊರೆತ ಒಂದು ತಾಮ್ರಶಾಸನ ತಿರುಮಕೂಡಲು ನರಸೀಪುರದ ಸಮೀಪ ಇದ್ದ ಮೂಗೂರು ವಿಷಯದ ಎರಡು ಪಳ್ಳಿಗಳನ್ನು ಬನವಾಸಿಯಲ್ಲಿದ್ದ ರಾಜ ರವಿವರ್ಮನು ಗೋವಿಂದಸ್ವಾಮಿ ಎಂಬ ಬ್ರಾಹ್ಮಣನಿಗೆ ದಾನ ಮಾಡಿದ ವಿಷಯ ತಿಳಿಸುವುದು ಬಹಳ ಮುಖ್ಯವಾದುದು. ಇದು ಕದಂಬ ಮೃಗೇಶವರ್ಮನ ಹಿಟ್ನೆ ಹೆಬ್ಬಾಗಿಲು ಶಾಸನದಷ್ಟೇ ಪ್ರಮುಖವಾದುದು.

ಮೃಗೇಶವರ್ಮ ಹಿಟ್ನೆ ಹೆಬ್ಬಾಗಿಲು ಬಳಿಯ ಕಿಱುನೀರಿಲ್ಲಿ ಗ್ರಾಮವನ್ನು ಔಪಗಹನಿ ಗೋತ್ರದ ಪೀಗಲಸ್ವಾಮಿಯ ಮಗ ಸರ್ವ್ವಸ್ವಾಮಿಗೆ ದಾನಮಾಡಿದ. ರಾಜಧಾನಿ ತಲಕಾಡಿನಿಂದ ಈ ಸ್ಥಳ ಬಹಳ ದೂರದಲ್ಲಿದೆ. ಆದರೆ ತಲಕಾಡಿಗೆ ಸಮೀಪವೇ ಇದ್ದ (ಮುಗೂರು) ಮೊಗಲೂರು ವಿಷಯದ ಎರಡು ಪಳ್ಳಿಗಳನ್ನು (ಹಳ್ಳಿಗಳನ್ನು) ಕಾಶ್ಯಪ ಗೋತ್ರದ ಗೋವಿಂದಸ್ವಾಮಿಗೆ ರವಿವರ್ಮ ದಾನಮಾಡಿದ. ಎರಡೂ ಸಂದರ್ಭಗಳಲ್ಲಿ ರಾಜರು ಇದ್ದುದು ಬನವಾಸಿಯಲ್ಲಿ. ದಾನಕೊಟ್ಟ ಸ್ಥಳಗಳಿದ್ದುದು ಗಂಗವಾಡಿಯಲ್ಲಿ. ರವಿವರ್ಮನೂ ಗಂಗವಾಡಿಯಲ್ಲಿದ್ದ ಎರಡು ಪಳ್ಳಿ(ಹಳ್ಳಿ)ಗಳನ್ನು ದಾನ ಮಾಡಿರಬೇಕಾದರೆ ಈ ಭಾಗ ಕದಂಬರ ವಶದಲ್ಲೇ ಇತ್ತು. ಅಂದರೆ ಮೃಗೇಶವರ್ಮನ ಸಾಧನೆಗಳನ್ನು ರವಿವರ್ಮ ಮುಂದುವರೆಸಿದ್ದ. ರವಿವರ್ಮನು ಗಂಗ, ಪಲ್ಲವ, ಪುನ್ನಾಟ, ಕೊಂಗಾಳ್ವ, ಪಾಂಡ್ಯ ಇತ್ಯಾದಿ ರಾಜರುಗಳೊಡನೆ ಮಾಡಿದ ಯುದ್ಧಗಳು ಮತ್ತು ಪಡೆದ ವಿಜಯದ ಬಗ್ಗೆ ಈತನ ಹಲಸಿ ತಾಮ್ರಶಾಸನ[೫೩] ಮತ್ತು ಗುಡ್ನಾಪುರ ಸ್ತಂಭ ಶಾಸನ ವಿವರಣೆ ನೀಡುತ್ತವೆ. ತನ್ನ ತಂದೆ ಮೃಗೇಶವರ್ಮನ ಸಾಧನೆಯನ್ನೇ ರವಿವರ್ಮನೂ ಮುಂದುವರೆಸಿದ್ದುದು ಇದರಿಂದ ವ್ಯಕ್ತವಾಗುತ್ತದೆ.

ಪ್ರಾಯಶಃ ಗಂಗ ರಾಜ್ಯದ ಪಶ್ಚಿಮ ಭಾಗದಲ್ಲಿ ಕದಂಬ ಶಕ್ತಿ ಅವ್ಯಾಹತವಾಗಿತ್ತು. ಕದಂಬ ರವಿವರ್ಮ ಈ ಶಕ್ತಿಯನ್ನು ತನ್ನ ಕೊನೆಗಾಲದವರೆಗೆ (ಕ್ರಿ.ಶ. ೫೧೯-೨೦) ಕಾಪಾಡಿಕೊಂಡಿದ್ದ. ಚಾಲುಕ್ಯ ಒಂದನೆಯ ಪುಲಕೇಶಿಯಿಂದ ಕದಂಬ ಶಕ್ತಿ ಕೊನೆಗೊಂಡಿತು. ಇದರಿಂದ ಮೂಲ ಕದಂಬ ವಂಶದ ಪರ್ಯ್ಯವಸಾನವಾಯಿತು. ಆದರೆ ಗಂಗ ವಂಶ ಮುಂದುವರೆದಿತ್ತು. ಆಗ ಅದು ತನ್ನದೇ ಏಳು ಬೀಳುಗಳನ್ನು ರಾಜಕೀಯದಲ್ಲಿ ಕಂಡಿತು.[೫೪]

ಪ್ರಸಕ್ತ ಅಧ್ಯಯನದಲ್ಲಿ ವಿಶೇಷವಾಗಿ ಹಿಟ್ನೆ ಹೆಬ್ಬಾಗಿಲು ಮತ್ತು ನೀಲಂಬೂರು ತಾಮ್ರಶಾಸನಗಳನ್ನು ಪರಾಮರ್ಷಿಸಿರುವುದರಿಂದ ಅವುಗಳ ಪಾಠಗಳನ್ನು ಕೆಳಗೆ ಕೊಡಲಾಗಿದೆ.

**ಕದಂಬ ವಿಜಯ ಶಿವಮೃಗೇಶವರ್ಮನ ಹಿಟ್ನೆಹೆಬ್ಬಾಗಿಲು ತಾಮ್ರಶಾಸನ**

ಶಾಸನ ಪಾಠ

[ಆಧಾರ - ಎ.ಕೆ. ಸಂ. ೪; ಪಿ.ಪ. ೪೯; ಪುಟ ೫೩೩-೩೪]

**ಒಂದನೆಯ ಹಲಗೆ-ಹಿಂಭಾಗ**

೧. ಸಿದ್ಧಮ್[೫೫] ॥ ಜಯತಿ ಸುರಾಸುರ ಮಕುಟಪ್ರಣಹಿತಮಣಿ ಕಿರಣ ಖಚಿ[ತ ಚರಣ ಯುಗಃ]
೨. ದಣ್ಡ ಕಮಣ್ಡಲು ಹಸ್ತ ಬ್ಜಿದ್ಮಪ್ರವರಾಸನೇ ಬ್ರಹ್ಮಾ ॥ ಸ್ವಸ್ತಿ ವಿಜಯ ವೈಜ
೩. ಯನ್ತ್ಯಾಮ್ ಸ್ವಾಮಿ ಮಹಾಸೇನ ಮಾತೃಗಣಾನುದ್ಧ್ಯಾತಾಭಿಷಿಕ್ತಸ್ಯ ಮಾನವ್ಯ
೪. ಸಗೋತ್ರಸ್ಯ ಹಾರಿತೀ ಪುತ್ರಸ್ಯ ಪ್ರತಿಕೃತ ಸ್ವಾದ್ಧ್ಯಾಯ ಚರ್ಚ್ಚಾಪಾರಸ್ಯ

**ಎರಡನೆಯ ಹಲಗೆಯ-ಮುಂಭಾಗ**

೫. ಕದಮ್ಬಾನಾಮ್ ಧರ್ಮ ಮಹಾರಾಜಸ್ಯ ಶ್ರೀವಿಜಯ ಶಿವ ಮೃಗೇಶವರ್ಮಣ
೬. ಸಂವತ್ಸರೇ ಸಪ್ತಮೀ ಮಾರ್ಗ್ಗಶಿರ ಮಾಸಶುಕ್ಲ ಪಕ್ಷ ದಶಮ್ಯಾ ಮನಯಾನು
೭. ಪೂರ್ವ್ವ್ಯಾ ಅನೇಕಜನ್ಮಾನ್ತರೋಪಾರ್ಜಿತ ವಿಪುಲ ವಿಶಿಷ್ಟ ಪುಣ್ಯ ಸ್ಕನ್ಧ[ಃ]
೮. ಮಹತಿ ಸಮರ ಸಂಕಟೇ ಸ್ವಭುಜಬಲ ಪರಾಕ್ರಮಾ ವಾಪ್ತ ವಿಶಾಲ

ಎರಡನೆಯ ಹಲಗೆಯ–ಹಿಂಭಾಗ

೯. ವಿಭವೈಶ್ವರ್ಯ್ಯಃ ಸಮ್ಯಕ್ಪ್ರಜಾ ಪಾಲನದಕ್ಷಃ ಸರ್ವ್ವಜೀವಬನ್ಧುಃ

೧೦. ದೇವಗುರು ಪ್ರಾಜ್ಞಜನಾ ಭ್ಯರ್ಚ್ಚನ ಪರಃ ದ್ವಿಜವರೇಭ್ಯೋಜಪ್ರ

೧೧. ಮನೇಕ ಗೋಸಹಸ್ರ ನವಕ್ಷೇತ್ರ ಹಲಷಣ್ಣಿವರ್ತನೀ ಗ್ರಾಮ ಹಿರಣ್ಯಾನ್ನಾದಿ

೧೨. ನೈಕ ವಿಧ ಪ್ರಧಾನ ನಿತ್ಯಃ ಯುಧಿಷ್ಠಿರ ಇವ ಧರ್ಮ್ಮಜ್ಞಃ ಪ್ರತರ್ದ್ದನ ಇವ

ಮೂರನೆಯ ಹಲಗೆಯ–ಮುಂಭಾಗ

೧೩. ಸತ್ಯವಾದಿ ವಿಷ್ಣುರಿವ ಬ್ರಹ್ಮಣ್ಯಃ ಶ್ರೀವಿಜಯ ಶಿವ ಮೃಗೇಶವರ್ಮ್ಮ ಧರ್ಮ್ಮ

೧೪. ಮಹಾರಾಜಃ ಬ್ರಾಹ್ಮಣಾಯ ಅಥರ್ವ್ವಣಿಕಾಯ ಔದಗಹನಿ ಸಗೋ

೧೫. ತ್ರಾಯ ವೇದ ವೇದಾಙ್ಗವಿದೇ ಪಿಙ್ಗಲಸ್ವಾಮಿ ಪುತ್ರಾಯ ಸರ್ವ್ವಸಾಮಿನೇ

೧೬. ಕಿಱುನೀರಿಲ್ಲಿ ಗಾಮಮ್ ಸಪಾನೀಯ ಪಾತಂ ಸದಾಕ್ಷಿಣಮ್ ಬ್ರಹ್ಮದೇಯ

ಮೂರನೆಯ ಹಲಗೆಯ–ಹಿಂಭಾಗ

೧೭. ಸಮಯೇನ ಅಭಟಪ್ರವೇಶಮನ್ತ[ಷ್ಕರ] ವಿಷ್ಟಿಕನ್ಪುಹೃತ

೧೮. ಪಙ್ಕ್ತೋತ್ಕೋಟಮ್ ದತ್ತವಾನ್ ಯೋಸ್ಯಾಭಿರಕ್ಷಿತ ಸತತ್ಪುಣ್ಯ ಫಲಭಾ

೧೯. ಗ್ಭವತಿ ॥ ಅಪಿಚಾತ್ರ ಭೀಷ್ಮಗೀತ ಶ್ಲೋಕಃ ॥ ಪೂರ್ವ್ವದತ್ತಾನ್ದ್ವಿಜಾತಿಭ್ಯೋ

೨೦. ಯತ್ನಾದ್ರ(ಕ್ಷ) ಯುಧಿಷ್ಠಿರ ಮಹೀಮ್ಮಹೀ ಮತಾಂಶ್ರೇಷ್ಠ ದಾನಾಚ್ಛ್ರೇಯೋನು ಪಾಲನಮ್॥

ನಾಲ್ಕನೆಯ ಹಲಗೆಯ–ಮುಂಭಾಗ

೨೧. ಇದಞ್ಚ ರಾಮಗೀತ ಶ್ಲೋಕಃ ॥ ಯಾನೀಹ ದಾನಾನಿ ಪುರಾನರೇನ್ದ್ರೈರ್ದ್ದ(ತ್ತಾ)ನಿ ಧರ್ಮ್ಮಾರ್ಥ[ಯ]ಶ

೨೨. ಸ್ಕರಣಿ ಧರ್ಮ್ಮಾನುರೋಧಾನ್ನೃಪಗೌರವಾಚ್ಚ ಮಹಾಪ್ಯನು ಜ್ಞಾತ ಫಲಾನಿ ತಾನಿ ಇದಞ್ಚ

೨೩. ಯೋಸ್ಯಾಪಹರ್ತ್ತಾ ಸಪಞ್ಚ ಮಹಾಪಾತಕ ಸಂಯುಕ್ತೋ ಭವತ್ಯುಕ್ತಞ್ಚ ಬಹುಭಿರ್ವ್ವಸುಧಾ

೨೪. ಭುಕ್ತಾ ರಾಜಭಿಸ್ಸಗರಾದಿಭಿಃ ಯಸ್ಯಯಸ್ಯ ಯದಾ ಭೂಮಿಸ್ತಸ್ಯ ತಸ್ಯ ಫಲ ಮಿತಿ ॥ (ಕೀರ್ತ್ತಿ)ವ (ರೇ)

೨೫. ಖಿ ಲಿಖಿತಾ ಪಟ್ಟಿಕಾ ॥

## ಕದಂಬ ರವಿವರ್ಮನ ನೀಲಂಬೂರು ತಾಮ್ರಶಾಸನ[೫೬]

### ಶಾಸನ ಪಾಠ

[ಆಧಾರ: ಬಾರಾ ಗೋಪಾಲ್; Corpus of Kadamba Inscriptions, No. 17, Pp. 60-62]

ಒಂದನೆಯ ಹಲಗೆಯ–ಹಿಂಭಾಗ

೧. ಸ್ವ (ಸ್ತಿ ಶ್ರೀ ವಿಜಯವೈಜಯನ್ಯಾಮ್ ಸ್ವಾಮಿ ಮಹಾಸೇ)ನ ಮಾತೃಗಣಾನುಧ್ಯಾ(ತಾ)

೨. ಭಿಷಿ(ಕ್ತಾ) ನಾ ಮ್ಮಾನವ್ಯಸಗೋತ್ರಾಣಾಮ್ ಹಾರಿತಿ ಪುತ್ರಾಣಾಮ್ ಪ್ರತಿಕೃತ ಸ್ವಾ

೩. ಧ್ಯಾಯ ಚರ್ಚಾ ಪಾರಾಣಾಮಶ್ವಮೇಧಾವಭೃತ ಸ್ನಾನ ಪವಿತ್ರಕೃತಾ

೪. (ನ)ಘಾನಾಮಾಶ್ರಿತ ಜನಾಮ್ಬಾನಾಮ್ ಕದಮ್ಬಾನಾಮ್ ಶ್ರೀರವಿವರ್ಮ್ಮ ಧರ್ಮ್ಮ ಮಹಾ

ಎರಡನೆಯ ಹಲಗೆ–ಮುಂಭಾಗ

೫. (ರಾ)ಜಃ ಆತ್ಮನಃ ಪ್ರವರ್ದ್ಧಮಾನ ವಿಜಯಸಂವತ್ಸರೆ ಪಞ್ಚಮೇ

೬. ಕಾರ್ತ್ತಿಕ ಪರ್ಣ್ಣ ಮಾಸ್ಯಾಮ್ ಮೊಗಲೂರ್ಪ್ಪಿಷಯೇ ಕಿಱುಪಾದಾಣಿ ನಾಮ

೭. ಧೇಯ ಗ್ರಾಮದ್ಯ ಪೂರ್ವ್ವದಿಗ್ವಿಭಾಗೇ ಮುಟ್ಟಿಗಿ ನಾಮಧೇಯ ಪ

೮. (ಲ್ಲಿ)ಮ್ ಮ ಟ್ಕಾವು ಸಹಿತಾಮ್ ಕಾಶ್ಯಪ ಸಗೋತ್ರಾಯ ಯಜರ್ವ್ವೇದ(ಪಾ)

**ಎರಡನೆಯ ಹಲಗೆಯ–ಹಿಂಭಾಗ**

೯. (ರಗಾ)ಯ ಗೋವಿಂದ ಸ್ವಾಮಿನೇ ಸ್ವಪುಣ್ಯೌಭಿವೃದ್ಧ್ಯೇ ಸಹಿ(ರಣ್ಯಮ್)
೧೦. (ನ) ಪಾನೀಯ ಪಾತಮ್ ಸರ್ವ್ವ ಪರಿಹೃತ ಪರಿಹಾರಮ್ ಸಮ್ಪ್ರ(ದತ್ತ)
೧೧. (ವಾ)ನ್ ತಥವಧಾಯ್ರ್ಯಾಯಃ ಕದಮ್ಬ ಕುಲಾಭ್ಯನ್ತರ ಗತೋ ನ್ಯೋ ವಾ (ರಾಗ)
೧೨. (ದ್ವೇಷ)ಲೋಭಾದಿಭಿರಭಿ ಭೂ ತೋ ಹರೇ (ತಸ)ಪನ್ಚ ಮಹಾಪಾತಕ

**ಮೂರನೆಯ ಹಲಗೆಯ–ಮುಂಭಾಗ**

೧೩. (ಸಮ್)ಯು(ಕ್ತೋ) ಭವತಿಯೋಭಿರಕ್ಷೇತಸ ತತ್ಪುಣ್ಯ ಫಲಭಾಗ್ಭ(ವಃ)
೧೪. ಉಕ್ತಞ್ಚ ಬುಹುಭಿರ್ವ್ವಸುಧಾ ಬುಕ್ತಾ ರಾಜಭಿಸ್ಸಗರಾದಿಭಿಃ
೧೫. (ಯ)ಸ್ಯ ಯಸ್ಯ ಯದಾ ಭೂಮಿಃ ತಸ್ಯ ತಸ್ಯ ತದಾ ಫಲಮಿತಿ
೧೬. (ಸ್ವ)ಸ್ತ್ಯಸ್ತುನೋ ಬ್ರಾಹ್ಮಣೇಭ್ಯಃ ಪ್ರಜಾ(ಭ್ಯೋ ಮಂಗಲಮ್) [॥"]

**ಅಡಿಟಿಪ್ಪಣಿಗಳು**

೧ P.B. Desai, A History of Karnataka p. 65-66
೨ B. Sheik Ali, History of the Western Gangas (1976)Pp. 31-32
೩ I bid. p. 40
೪ I bid. Pp. 18-39
೫ I bid. Pp. 40-41
೬ I bid. p. 41
೭ B. R. Gopal : Corpus of Kadamba Inscriptions (1985) Introdn. p. XXXXIII
೮ Ep. corn. vol. VII (Rice) SK. No. 176 : Kadamba Corpus, No. 4
೯ Kadamba Corpus. No. 5
೧೦ I bid. Pp. 44-45
೧೧ Kadamba Corpus. No. 5
೧೨ P. N. Narasimha Murthy; ' Jainaism on the Kanara Coast'. [1983. Thesis, Type script] Pp. 66-77
೧೩ Sheik Ali, Supra. p. 54
೧೪ I bid.
೧೫ M.A.R. 1936. P. 73. Fi; Kadamba Corpus. No. 5
೧೬ Sheik Ali, Supra. p. 52
೧೭ P.B. Desai, A History of Karnataka [II. edn. 1981]p. 82
೧೮ Sheik Ali, Supra. p. 27-29
೧೯ I bid. p. 52
೨೦ Q.J.M.S. vol. 38. Pp. 73-76. EC vol. I Marcara No. 1
೨೧ Sheik Ali, Supra. p. 33
೨೨ B. R. Gopal : Kadambas Corpus Pp. XXXX V III - L
೨೩ Sheik Ali, Supra. p. 54
೨೪ Ep. carn vol IV. Rice Hs. 18. Rwised. Pp. 49.
೨೫ Kadamba Corpus p. XXX - Indtrodn.
೨೬ Sheik Ali, Supra. p. 33
೨೭ I bid. p. 52
೨೮ Kadamba Corpus p. XXX - Indtrodn.
೨೯ Kadamba Corpus Indtrodn. p. L. and No. 13. Also Ep. Ind. vil.VI Fleet
೩೦ Halasi copper plates of Mrigesavrma. Text. lines 7-8
೩೧ Kadamba Corpus p. XXX - Indtrodn.

೩೨ I bid. Pp. 49-50
೩೩ I bid. Pp. 53-55, No. 14
೩೪ I bid. Text lines, 3-4
೩೫ Ep. carn vol IV.(Rev), Pp.No. 49
೩೬ Kadamba Corpus No. 9
೩೭ I bid. No. 10
೩೮ Text lines, 6-7 and 13-16
೩೯ Kadamba Corpus No. 10
೪೦ Ep. carn vol IV.(1975) Indtrodn Pp. LXV-LXVII
೪೧ I bid.
೪೨ I bid. p. LXVII, LXX and CVII
೪೩ Sheik Ali, Supra. p. 55
೪೪ I bid. Introdn. Pp. XXXXVIII-IX, LXI-LXII
೪೫ ಈ ಆಳ್ವಿಕೆ ಕಾಲಗಳು ಕ್ರಮವಾಗಿ ಬಾರಾ ಗೋಪಾಲ್ ಮತ್ತು ಷೇಕ್ ಆಲಿ ಅವರು ನಿರ್ಧರಿಸಿರುವ ಆಧಾರದಲ್ಲಿದೆ.
೪೬ Studies in Indian History and Culture - P.B. Desai, Felicitation volume. Also Kadamba Corpus, No. 14
೪೭ Kadamba Corpus, Nos. 8,9,10,11 and 13
೪೮ Ep. carn vol . I, Coorg. No. 1
೪೯ Sheik Ali, Supra. p. 55; N.L. Rao and R.S. Panchamukhi- Karnataka Arasu Manetanagalu-p. 133
೫೦ Ep. Ind. vol . III-Nilambur Cp of Kadamba RaviVarma-by T.A. Gopinatha Rao and G. Venkoba Rao, Also Kadamba Corpus. No. 17.
೫೧ Kadamba Corpus, Introdn. p. XXX
೫೨ I bid. No. 17, Text lines, 3-4
೫೩ Fleek JBBRAS vol IX, I.A. vol. VI; Also Kadamba corpus, No. 22; Eds. K.V. Ramesh etc. Pp. 61-72; Also. Kadamba corpus, No. 23
೫೪ ಶಾಸನ ಪಾಠ ಪುಟ; ೧೬,೧೭+೧೮; ಪ್ರಸಕ್ತ ಅಧ್ಯಯನದಲ್ಲಿ ವಿಶೇಷವಾಗಿ ಹಿಟ್ನೆ ಹೆಬ್ಬಾಗಿಲು ಮತ್ತು ನೀಲಂಬೂರು ತಾಮ್ರಶಾಸನಗಳನ್ನು ಪರಾಮರ್ಷಿಸಿರುವುದರಿಂದ ಅವುಗಳ ಪಾಠಗಳನ್ನು ಕೆಳಗೆ ಕೊಡಲಾ....
೫೫ ಈ ಶಬ್ದ ೧ ನೆಯ ಮತ್ತು ೨ನೆಯ ಸಾಲುಗಳ ಮಧ್ಯವರ್ತಿಯಾಗಿ ಪ್ರಾರಂಭದಲ್ಲಿ ಪಕ್ಕದಲ್ಲಿದೆ.
೫೬ ಈ ಶಾಸನವನ್ನು ಮೊದಲು ಶೋಧಿಸಿ ಪ್ರಕಟಿಸಿದವರು ಶ್ರೀಯುತರಾದ ಟಿ.ಎ. ಗೋಪಿನಾಥರಾವ್ ಮತ್ತು ಜಿ. ವೆಂಕೋಬರಾವ್–ಸ್ಥಳ EP.Ind. vol. VIII

****

# ಕೊಡಗಿನಲ್ಲಿ ಕನ್ನಡ ಶಾಸನಗಳ ಭಾಷೆ; ಸಾಹಿತ್ಯ-ಸಾಂಸ್ಕೃತಿಕ ಪರಂಪರೆ

* ಡಾ. ಎಂ.ಜಿ. ನಾಗರಾಜ್

**ಪರಿಸರ ಚರಿತ್ರೆ:**

ಕೊಡಗಿನ ನೆಲೆ ಭೌಗೋಳಿಕವಾಗಿ ಪ್ರಾಗಿತಿಹಾಸ ಹಾಗೂ ಇತಿಹಾಸದ ಸಂಯುಕ್ತ ಶೋಭೆಯನ್ನು ಹೊಂದಿದೆ. ಶಿಲಾಯುಗಗಳನ್ನು ದಾಟಿ ಬಂದಿರುವ ಕಾವೇರಿಯ ಅಸ್ತಿತ್ವ ಇಲ್ಲಿ ಕಾಣಬರುತ್ತದೆ. ಹಿಮಾಲಯ ಹುಟ್ಟುವ ಮುನ್ನ, ಅಲ್ಲಿ ಗಂಗೆ ಉದಿಸುವ ಮುನ್ನ 'ತಲಕಾವೇರಿ' ಇಲ್ಲಿ ಚಿಮ್ಮಿದ್ದಳು. ತುಂಬು ಅರಣ್ಯಗಳ, ಗಿರಿಗಳ ಶ್ರೇಣಿ ಅವಳನ್ನು ಸುತ್ತುವರಿದಿದ್ದುವು. ಆಫ್ರಿಕಾ ಮತ್ತು ಭಾರತದ ನಡುವೆ ಅದರ ಪಶ್ಚಿಮ ಭಾಗದಿಂದ ಭೂ ಸಂಪರ್ಕವಿತ್ತು. ಕಾವೇರಿಗೆ ಪಶ್ಚಿಮದ ಕವಲು, ಪೂರ್ವದ ಕವಲು ೧೦ ಲಕ್ಷವರ್ಷಗಳ ಹಿಂದೆ ಇದ್ದುವು. ಕಾವೇರಿಯ ಪೂರ್ವದ ಕವಲು ಪೂಂಪುಹಾರ್ ಎಂಬಲ್ಲಿ ಬಂಗಾಳಕೊಲ್ಲಿಯನ್ನು ಸೇರುತ್ತಿತ್ತು. ಇನ್ನೊಂದು ಕವಲು ಪಶ್ಚಿಮಕ್ಕೆ ಹರಿಯುತ್ತಿತ್ತು. ಅದು ಆಫ್ರಿಕ ಮತ್ತು ಭಾರತದ ನಡುವಣ ಭೂ ಸಂಪರ್ಕದ ಮೂಲಕ ಮಡಗಾಸ್ಕರ್ ವರೆಗೆ ಸಾಗುತ್ತಿತ್ತು. ಈ ದೀರ್ಘ ಹರಿವಿನ ಕಾರಣ ಆಫ್ರಿಕದ ಬಳಿ ಬಂದು ಸೇರುತ್ತಿದ್ದ ಜಾಗಕ್ಕೆ 'ಮಹಾಜುಂಗಾ' ಎಂಬ ಹೆಸರು ಇತ್ತಂತೆ. ಇಂಡೋ-ಮಡಗಾಸ್ಕರ್ ಭೂಖಂಡದ ಸಂಪರ್ಕ ಮುಳುಗಿದಾಗ, ಹಿಮಾಲಯ ಅರಬ್ಬಿಸಮುದ್ರ ಉದಿಸಿದುವು.[೧]

ಅರಬ್ಬಿ ಸಮುದ್ರದ ತಳದಲ್ಲಿ; ಕೊಚ್ಚಿಯಿಂದ ನೈಋತ್ಯ ದಿಕ್ಕಿನಲ್ಲಿ ಸುಮಾರು ೫೦೦ ಕಿ.ಮೀ. ದೂರದಲ್ಲಿನ ಸಮುದ್ರ ಗರ್ಭದಲ್ಲಿ ೨೪೬೪ ಮೀಟರ್ ಎತ್ತರದ 'ಸಾಗರ ಕನ್ಯಾ ಸಮುದ್ರ ಪರ್ವತ'ವಿರುವುದನ್ನು, ಸಾಗರಗರ್ಭ ಶಾಸ್ತ್ರಜ್ಞರು ಪತ್ತೆ ಮಾಡಿದ್ದಾರೆ.[೨] ಈ ಹಿನ್ನೆಲೆಗಳನ್ನು ಗಮನಿಸಿದರೆ ಉಭಯ ಪ್ರದೇಶಗಳ ಸಂಪರ್ಕಗಳಿಂದಾಗಿ, ಕೊಡಗಿನಲ್ಲಿ ನದಿ ಸಂಸ್ಕೃತಿ, ವೃಕ್ಷಸಂಸ್ಕೃತಿ, ವನವಾಸಿ ಸಂಸ್ಕೃತಿ, ವಿಕಸಿತ ವರ್ತಮಾನದೊಡನೆಯೂ ಸಂವಾದಿಸಿವೆ. ಪ್ರಾಗಿತಿಹಾಸ, ಇತಿಹಾಸ, ಸಾಹಿತ್ಯ, ಭಾಷೆ, ಆರಾಧನೆ, ಜನಜೀವನ ಇತ್ಯಾದಿಗಳಲ್ಲಿ ವೈವಿಧ್ಯಮಯ ವಿಕಸನವೂ ಕಾಣಬರುತ್ತದೆ.

ಇನ್ನು ಆಫ್ರಿಕನ್ ಹಾಗೂ ದ್ರಾವಿಡ ಭಾಷಾ ಶಬ್ದಗಳಲ್ಲಿ ಎಷ್ಟೋ ಕಡೆ ಸಾಮ್ಯವಿದೆ. ರಿಮೂರಿಯನ್ ಸಂಸ್ಕೃತಿಯ ಪಳಿಯುಳಿಕೆಗಳಾಗಿ ಉಳಿದಿರುವ ಕೇರಳದ ಚೋಳನಾಯಿಗ, ಬಿಹಾರದ ಮುಂಡಾ ಆದಿವಾಸಿಗಳು, ದಕ್ಷಿಣ ಕನ್ನಡದ ಕೊರಗರು ಇವರುಗಳ ಆಚಾರಗಳು ದ್ರಾವಿಡ ಸಂಸ್ಕೃತಿಯ ಉಚ್ಚ ತುದಿ ಎನ್ನುವಂಥ ಸಂಕೇತಗಳಾಗಿವೆ. ಇವೆಲ್ಲ ಭಾರತ, ಆಫ್ರಿಕಾ, ಆಸ್ಟ್ರೇಲಿಯಾ ಒಂದೇ ಭೂಖಂಡಗಳಾಗಿದ್ದವು ಎಂಬುದನ್ನು ಪುಷ್ಟೀಕರಿಸುತ್ತವೆ, ಎಂದು ಭಾಷಾ ವಿಜ್ಞಾನಿಗಳ ಪ್ರತಿಪಾದನೆ ಇದೆ.[೩] ಈ ಸಂದರ್ಭದಲ್ಲಿ ಬುಡಕಟ್ಟುಗಳ ವಲಸೆಗಳೂ ನೇರ್ಪುಗೊಂಡಿದ್ದುವೆನ್ನಬೇಕು. ಪಶ್ಚಿಮ ಘಟ್ಟಗಳ ಏರು ಹೆಚ್ಚಿದಾಗ, ಕಾವೇರಿಯ ಪಶ್ಚಿಮದ ಒಂದು ಕವಲು ಒದಪೊಳೆಯಲ್ಲಿ Rivercaptire ರೀತಿ ಐಕ್ಯವಾಯಿತು. ಪೂರ್ವದ ಕವಲು ಹಾಗೆಯೇ ಉಳಿದು ಇಂದಿಗೂ ಹರಿಯುತ್ತಿದೆ. ನವಶಿಲಾಯುಗದ ಸಂಸ್ಕೃತಿ ಈ ಪ್ರದೇಶಗಳಲ್ಲಿ ಹರಡಿತ್ತು ಎಂಬ ಅಭಿಪ್ರಾಯವೂ ಇದೆ.

**ಭಾಷಿಕ-ಚಾರಿತ್ರಿಕ ನೆಲೆಗಳು:**

ಕ್ರಿಪೂ. ೨೫೦೦ ರ ನವಶಿಲಾಯುಗದ ಕಾಲದಲ್ಲಿ ಕರ್ನಾಟಕದಲ್ಲಿ ಆಡುತ್ತಿದ್ದ ಭಾಷೆ ಪೂರ್ವ ದ್ರಾವಿಡ ಭಾಷೆ ಆಗಿತ್ತು. ಅದರ ಆರಂಭದ ನೆಲೆ ಕರ್ನಾಟಕವೆ ಆಗಿತ್ತು. ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ದೇಜಗೌ ಅವರು ಮೆಡಿಟರೇನಿಯನ್ ದೇಶದ ಜನಗಳಲ್ಲಿಯ ಭಾಷೆ ಮೂಲ ದ್ರಾವಿಡ ಆಗಿತ್ತು. ಅದಾಗಿ ಇಲ್ಲಿಯ ದ್ರಾವಿಡರು ಪ್ರಾಗೈತಿಹಾಸಿಕ ಕಾಲದಲ್ಲಿ ಅಲ್ಲಿಗೆ ವಲಸೆ ಹೋಗಿರಬಾರದೇಕೆ? ಎಂದು ಹೇಳುತ್ತಾರೆ. ಈ ಮೂಲ ದ್ರಾವಿಡ ಭಾಷೆಯಿಂದ ಕವಲು ಒಡೆದು ಅನೇಕ ಕಾಲದವರೆಗೆ

* ೨೨೧, ೬೮ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು – ೫೬೦೦೧೦.

ತಮಿಳು, ಕನ್ನಡಗಳು ಒಂದಾಗಿದ್ದು ಮತ್ತೆ ಬೇರೆ ಆದುವು.[೪] ಮೂಲ ದ್ರಾವಿಡ ಭಾಷೆಯಿಂದ ಮೂಲ ದಕ್ಷಿಣ ದ್ರಾವಿಡ ಭಾಷೆ ಹುಟ್ಟಿತು. ಈ ಮೂಲ ದಕ್ಷಿಣ ದ್ರಾವಿಡ ಭಾಷೆಯಿಂದ ಮೂಲ ತಮಿಳು, ಮೂಲ ಕನ್ನಡ, ತುಳುವರ್ಗ, ತೆಲುಗು ವರ್ಗಗಳು ಭಾಷಾಪರಿವಾರವಾಗಿ ಹುಟ್ಟಿದವು. ಅದರ ಪೈಕಿ ಕನ್ನಡ ವರ್ಗದಲ್ಲಿ ಕನ್ನಡ, ಬಡಗ ಹಾಗೂ ಕೊಡಗು ಭಾಷೆಗಳು ಹುಟ್ಟಿದವು.[೫] ಕೊಡವ ಭಾಷೆಯಲ್ಲಿ ಶೇಕಡ ನಲವತ್ತು ಭಾಗ ಕನ್ನಡ ಶಬ್ದಗಳು ಇಂದೂ ಪ್ರಚಲಿತವಾಗಿರುವ ಬಗ್ಗೆ ಐ.ಮಾ. ಮುತ್ತಣ್ಣನವರ ಕೊಡವ–ಕನ್ನಡ ನಿಘಂಟು ತಿಳಿಸುತ್ತದೆ.[೬] ಇನ್ನು ಪೂರ್ವ, ದ್ರಾವಿಡ ಭಾಷೆ ಕರ್ಣಾಟಕದಲ್ಲಿತ್ತು ಎಂದಿರುವಲ್ಲಿ, ಅದು ಕರ್ಣಾಟಕದ ಕೊಡಗಿನಲ್ಲಿಯೂ ಬಳಕೆಗಿದ್ದಿರಬೇಕು. ನಂತರ ಭಾಷಾವರ್ಗಗಳು ಉದಿಸಿರುವ ಬಗ್ಗೆ ಈಗಾಗಲೇ ಹೇಳಲಾಗಿದೆ. ಈ ದೃಷ್ಟಿಯಿಂದ ಕೊಡಗಿನಲ್ಲಿಯ ಕನ್ನಡ ಭಾಷಾಪರಿವಾರದ ಅಸ್ತಿತ್ವದ ಹಳಮೆಯನ್ನು ಪ್ರಾಕ್ಚಾರಿತ್ರಿಕ, ಚಾರಿತ್ರಿಕ, ಸಾಹಿತ್ಯಕ, ಸಾಂಸ್ಕೃತಿಕ ದಾಖಲೆಗಳ ಮೂಲಕ ವಿಕಸನಗೊಂಡ ಪರಿಯನ್ನು ಗಮನಿಸಬೇಕಾಗುತ್ತದೆ.

ಕ್ರಿ.ಪೂ. ೧೦೨೫ರ ವೇಳೆಗೆ ಕುಂಭಸಂಭವ ಅಗಸ್ತ್ಯನು ವೇಲಿದರ ೧೮ ಕುಟುಂಬಗಳನ್ನು ಹಾಗೂ ಕುರುಬರ ಪೂರ್ವಜರೆನ್ನಳಾದ ಅದುವಲರ್ ಬುಡಕಟ್ಟಿನವರನ್ನು ದಕ್ಷಿಣ ಭಾರತದ ಪಶ್ಚಿಮ ಘಟ್ಟಗಳ ಕಡೆಗೆ ಕರೆದುಕೊಂಡು ಕೇರಳದವರೆಗೆ ಬಂದನೆಂದು ಕೇರಳದ ಗ್ರಂಥಗಳು ತಿಳಿಸುತ್ತವೆ. ಹಾಗೆ ಬಂದು ಕಾಡನ್ನು ಕಡಿಸಿ ರಾಜ್ಯ ಕಟ್ಟಿ ಅವರನ್ನೆಲ್ಲಾ ನೆಲೆಗೊಳಿಸಿದ ಎಂದೂ ತಿಳಿಸುತ್ತವೆ.[೭] ಹಾಗೆ ನೆಲೆ ನಿಂತವರು ಇಲ್ಲಿನ ಮೂಲ ನಿವಾಸಿಗಳಾಗಿ ತಮ್ಮ ಪರಿವಾರದ ಭಾಷೆಯನ್ನು ಇಲ್ಲಿ ಮೊದಲಿದ್ದವರೊಡನೆ ಸೇರಿಸಿ ಭಾಷೆಯ ಬೆಳವಣಿಗೆಯಲ್ಲಿ ಪಾಲುಗೊಂಡಿರಬೇಕು. ಅದಾಗಿ ಮೂಲ ಕನ್ನಡದಿಂದ ಬಂದ ಕೊಡವ ಭಾಷೆಯಲ್ಲಿ ಕನ್ನಡದ ಶಬ್ದಗಳು ಮುಖ್ಯವಾಗಿದ್ದು ನಂತರ ಮಲೆಯಾಳ, ತಮಿಳು, ತುಳು, ತೆಲುಗು, ಸಂಸ್ಕೃತ, ಹಿಂದಿ ಭಾಷಾ ಶಬ್ದಗಳು ಅಡಕವಾಗಿ ಬಳಕೆಗೊಂಡಿರುವುದು ಕಾಣುತ್ತದೆ.

ಕ್ರಿ.ಪೂ. ೫–೬ ನೇ ಶತಮಾನದ ಹೊತ್ತಿಗೆ ಆರ್ಯರು ಕರ್ನಾಟಕಕ್ಕೆ ಬಂದು ಕನ್ನಡಿಗರೊಡನೆ ಬಾಳ್ವೆ ನಡೆಸುತ್ತಿದ್ದ ಬಗ್ಗೆ ಬೌದ್ಧಾಯನ ಧರ್ಮಸೂತ್ರದಿಂದ ತಿಳಿಯುತ್ತದೆ.[೮] ಅಗಸ್ತ್ಯನ ಕತೆಯು ಇದಕ್ಕೆ ಪೂರಕವಾಗಿರುವಂತಿದೆ.

ವೇಲಿದರ ಕುಟುಂಬಗಳು ಅಗಸ್ತ್ಯ ಕಟ್ಟಿದ ರಾಜ್ಯದಲ್ಲಿದ್ದಿರಬೇಕು. ಅವರುಗಳು ಜನಾಂಗೀಯ ಸಾಂಸ್ಕೃತಿಕ ಪದತಿ, ಆಚರಣೆಗಳನ್ನು ಅರಿತು ತಿಳುವಳಿಕೆ ನೀಡುವ ಗ್ರಾಮಪುರೋಹಿತ ವರ್ಗದವರಾಗಿಟ್ಟಬೇಕೆಂದು ತೋರುತ್ತದೆ. ಕೊಡಗಿನಲ್ಲಿ ವಿಶೇಷವಾಗಿ ಮದುವೆಯ ಮಾತು ಕತೆಗಳಲ್ಲಿ ಗ್ರಾಮ ಪುರೋಹಿತರಂತೆ ನೆರವಾಗುವ ವ್ಯವಹರಿಸುವ 'ಹೆಣ್ಣರುವ' ಹೆಣ್ಣಿನ ಕಡೆ ಇರುತ್ತಾರೆ; ಗಂಡಿನ ಕಡೆ 'ಗಂಡಿನ ಅದುವ'ರು ಇರುತ್ತಾರೆ. ಬಹುಶಃ 'ಅರುವಲರ್' ಬುಡಕಟ್ಟು ಮೂಲಕ ಜನಾಂಗೀಯ ಶಬ್ದದಿಂದ 'ಅರುವ' ಶಬ್ದ ಮೂಡಿ ಬಂದಿದ್ದರೆ. ಭಾಷಾಕೋಶಕ್ಕೆ ಅದೊಂದು ಸೇರ್ಪಡೆ ಎನಿಸುತ್ತದೆ.

ಸಂಗಂ ಸಾಹಿತ್ಯದಲ್ಲಿ (ಕ್ರಿ.ಪೂ. ೩ ರಿಂದ ಕ್ರಿ.ಶ. ೩ನೇ ಶತಮಾನ) ಕುಡನಾಡಾಧಿಪತಿಯನ್ನು 'ಎರುಮೈ ಊರನ್' ಎಂದು ಕರೆಯಲಾಗಿದೆ; 'ಕೊಂಗಣಂ, ತುಳುವಂ, ಕುಡುಗಂ' ಎಂದು 'ತೊಲ್‌ಕಾಪ್ಪಿಯಂ' ತಮಿಳು ವ್ಯಾಕರಣ ವೃತ್ತಿಯಲ್ಲಿದೆ.[೯] 'ಕುಡ' ಎಂದರೆ ಪಶ್ಚಿಮ; ಅಂತಾಗಿ ಕೊಡಗು ಪಶ್ಚಿಮ ಘಟ್ಟಗಳ ಒಳಗಿರುವ ನಾಡು (ಒಳನಾಡು) ಆಗಿದೆ. 'ಎರುಮೈನಾಡು' (ತಮಿಳು)ವಿನ ಕನ್ನಡ ರೂಪ ಎರುಮಿನಾಡು; ಇಂದಿನ ಕೊಡಗು, ದಕ್ಷಿಣ ಕನ್ನಡ, ಮೈಸೂರು ಹಾಗೂ ಉತ್ತರ ಕೇರಳದ ಸ್ವಲ್ಪ ಭಾಗವನ್ನು ಅದು ಒಳಗೊಂಡಿತ್ತು. ಈ ಎರುಮೈನಾಡಿನ ಮೂಲ ಜನಾಂಗವು ತಮಿಳೇತರ ಜನಾಂಗವಾಗಿ ಗೌಡಕನ್ನಡ, ಜೇನುಕನ್ನಡ ಎಂಬ ಪ್ರಾದೇಶಿಕ ಪ್ರಭೇದಗಳನ್ನು ಸೃಷ್ಟಿಸಿತು; ಪುನ್ನಾಟರಂತೆ ಅಂದು ಕೊಂಗ ಪ್ರದೇಶವನ್ನು ಆಳುತ್ತಿದ್ದ ಕೊಂಗಾಳ್ವ ಮನೆತನವೋ (ಮೊದಲಿಗೆ ಒಜೆಯೂರು ಪುರವರಾಧೀಶ್ವರರಾಗಿದ್ದವರು) ಪ್ರಾಚೀನವಾದುದು; ಅವರು ಮಧ್ಯಕಾಲೀನ ಕೊಂಗಾಳ್ವರ ಪೂರ್ವಜರೆನ್ನಬಹುದು.[೧೦] ಗುಡ್ನಾಪುರದ (ಉತ್ತರ ಕನ್ನಡ) ಕ್ರಿ.ಶ. ಸುಮಾರು ೫ನೆಯ ಶತಮಾನದ ಕದಂಬರ ರವಿವರ್ಮನ ಶಾಸನದಲ್ಲಿ 'ಗಜ್ಗ ಪುನ್ನಾಟ ಕೊಜ್ಗಾಳ ಪಾಣ್ಡ್ಯಾಲುಪಾದಯಃ' ಎಂದಿದೆ. ಕ್ರಿ.ಶ. ಸು. ೭೭ ರ ಪಾಂಡ್ಯರಾಜ ಶೆಡ್ಡೇಯನ ಪರಾಂತಕನ ವೇಳ್ವಕುಡಿ ಶಾಸನದಲ್ಲಿ 'ಮಧುರ್ ಕರುನಾಡಗನ್ . . . ವೇಟ್ ಕೊಂಗರ್' ಎಂದಿದೆ; ಕೊಡಗಿನ ಮಾಲಂಬಿಯಲ್ಲಿ ಕ್ರಿ.ಶ. ೧೦೦೪ರ ಸುಮಾರಿನಲ್ಲಿ 'ಕ್ಷತ್ರಿಯ ಶಿಖಾಮಣಿ ಕೊಂಗಾಳ್ವರ ಮನಿಜ'ನಿಗೆ ಪೂರ್ವಜರಾದ ಮೊದಲ ಕೊಂಗಾಳ್ವರು, ತಮಿಳು ಭಾಗವನ್ನೂ ಆಳಿದವರೆನ್ನಬೇಕು. ಒಜೆಯೂರನ್ನುಸಂಗಂ ಚೋಳರು

ಆಕ್ರಮಿಸಿದರು. ಅಂದರೆ ಕ್ರಿ.ಶ. ಸು. ೩ನೆಯ ಶತಮಾನದ ಹೊತ್ತಿಗೆ ಕೊಡಗಿಗೆ ವಲಸೆ ಬಂದರೆನ್ನಬೇಕು. ಮುಂದೆ ಕದಂಬ ರವಿವರ್ಮನು ಗಂಗ, ಪುನ್ನಾಟ ಕೊಂಗಾಳ್ವರನ್ನು ಪಾಂಡ್ಯರನ್ನು ಜಯಿಸಿ, ತಹಬಂದಿಗೆ ತಂದ ಬಗ್ಗೆ ೫ನೇ ಶತಮಾನದ ಗುಡ್ನಾಪುರದ ಶಾಸನದಲ್ಲಿ ಸೂಚಿತವಾಗಿರುವುದನ್ನು ಈಗಾಗಲೇ ಹೇಳಲಾಗಿದೆ.

ಶಂಗಂ ಕಾಲದ ರಾಜಮನೆತನಗಳಲ್ಲಿ ಮಲವರ್, ಎರುಮೈಯೂರವರ್ ಕೊಂಗರ್ ಕುಡುನಾರವರ್ ಕೊಂಕಾಣರ್ ಇದ್ದರು. ಅಂತಾಗಿ ಕನ್ನಡ, ಕೊಂಕಣ ಕೊಡವ, ತುಳು ಜನಾಂಗಗಳು ಕರ್ಣಾಟಕ, ಕೇರಳ, ತಮಿಳುನಾಡುಗಳನ್ನು ಸಂಪರ್ಕಗೊಳಿಸಿದ್ದವು. ತಮಿಳಿನ 'ಪುಱನಾನೂರು' ಕವಿತಾ ಸಂಗ್ರಹವು, ಪಾಂಡ್ಯರಾಜ ನೆಡುಂಚಳಿಯನ್ ಎದುರು ನಡೆದ ಯುದ್ಧದಲ್ಲಿ ಶಂಗಂ ಕಾಲದ ಚೇರ, ಚೋಳ, ಅರಸರು ಮತ್ತು ಮಹಾಪರಾಕ್ರಮಿ ಐವರು ಪೆರುವೇಳಿರ್ ಇದ್ದರೆಂದಿದೆ. ಈ ಐವರು 'ಪೆರುವೇಳಿರ್'ಗಳಲ್ಲಿ ಒಬ್ಬರಾದ 'ಎರುಮೈ' ಊರವರು ಮೈಸೂರು ಪ್ರದೇಶದವರಾಗಿದ್ದರು. 'ಸತಿಯಪುತ'(!)ರೆಂದು ಹೆಸರಾದವರು ಶಂಗಂ ಕಾಲದ ಪ್ರಧಾನ 'ವೇಳಿರ್'ಗಳಲ್ಲಿ ಒಬ್ಬರಾಗಿದ್ದರು. ಎನ್ನಲಾಗಿದೆ. ಸತಿಯಪುತ ಪ್ರದೇಶವು ಮೈಸೂರು ಮಲಬಾರು, ಕೊಡಗಿನ ಗಡಿ ಪ್ರದೇಶದಲ್ಲಿ ಹಾಯುವ ನಡುವಣ ಪ್ರದೇಶವೆಂದು ವಿ.ಎ. ಸ್ಮಿತ್ ಗುರುತಿಸುತ್ತಾರೆ. ಹೀಗಾಗಿ ತಮಿಳುನಾಡು ಗಡಿ ಜಿಲ್ಲೆ ಧರ್ಮಪುರಿಯಿಂದ ಅರಬ್ಬಿಸಮುದ್ರದವರೆಗೆ ಸಾಗಿರುವ ಚಾಮರಾಜನಗರ, ಮೈಸೂರು, (ಕೊಡಗು) ಮಡಿಕೇರಿ, ಕೇರಳ, ದಕ್ಷಿಣ ಕನ್ನಡ ಪ್ರದೇಶಗಳು ಬಹುಭಾಷಾ ಜನಾಂಗಗಳ ವಾಸಸ್ಥಾನಗಳಾಗಿದ್ದವು.

ಈ ಜನಾಂಗಗಳ ನಾಯಕನ ಪೈಕಿ 'ಎರುಮೈ'ಯರೂ ಪ್ರಸಿದ್ಧ ವೇಳಿರ್‌ಗಳಾಗಿದ್ದರು. ಕವಿ ಮಾಮೂಲಣಾರ್ ಕುಡುನಾಡ ಎರುಮೈಗಳೆಂದೂ ಹೇಳಿದ್ದಾನೆ. ಅಂತಾಗಿ ಎರುಮೈನಾಯಕರು ಮಹಿಷ ಮಂಡಲದ ಒಡೆಯರಲ್ಲದೆ, ಕೊಡಗಿನ ಒಡೆಯರೂ ಆಗಿದ್ದರೆನ್ನಬೇಕು. ಕ್ರಿ.ಶ. ೫ನೇ ಶತಮಾನದ ಪೂರ್ವಕ್ಕೆ ಮೈಸೂರು ಪ್ರದೇಶವನ್ನು ಆಳಿದ ಆದಿ ಕನ್ನಡಿಗರಿವರು ಎನ್ನುವುದುಂಟು. 'ಎರುಮೈ' ಪದವು ಸಂಸ್ಕೃತಾನುಕರಣವಾಗಿ 'ಮಹಿಷ–ವಿಷಯ' ಎಂಬ ಶಬ್ದರೂಪದಲ್ಲಿ ಗಂಗರ ಶಾಸನಗಳಲ್ಲಿಯೂ ಪ್ರಸಾರಗೊಂಡಿತೆನ್ನಲಾಗಿದೆ. ಈ ನಿಟ್ಟಿನಲ್ಲಿ ಗಂಗರ ಪೈಕಿಯ 'ಎಱೆಯಪ್ಪ', 'ಎಱೆಯಂಗ' ಎಂಬ ಹೆಸರುಗಳ ಮೂಲಕ್ಕೆ 'ಎರುಮೈ' ನಾಯಕರು ಶಬ್ದಾಂತರ್ಗತವಾಗಿ ಕಾರಣರಾದರೆ? ಆ ಉಭಯ ಹೆಸರುಗಳಲ್ಲಿ 'ಎರುಮೈ' ಜನಾಂಗೀಯ ಪೂರ್ವನಾಮ ಸಂಸ್ಕಾರವಿದೆಯೆ? ಎಂಬ ಅನುಮಾನವೂ ಕಾಡುತ್ತದೆ.

ಶಿಲಪ್ಪದಿಕಾರಂ ನಲ್ಲಿ 'ಕೊಡಗು ಕೊಂಗರ್' ಎಂದಿರುವ ಕಾರಣ ಕೊಂಗರ್ ಕೊಡಗಿನವರು – ಕೊಂಗು ಮತ್ತು ಕೊಡಗು ಪದಗಳ ಮೂಲ ಒಂದೇ ಎಂಬುದು ಕಿಟ್ಟೆಲ್ ವಾದ. ಈ ಕೊಂಗರ್ ಒಂದು ಕಾಲಕ್ಕೆ ಚೋಳ ರಾಜಧಾನಿ ಒರೆಯೂರು–ಕಡೂರಿನ ಅಧಿಪತಿಗಳಾಗಿದ್ದವರು. ಕ್ರಿ.ಶ. ಸು. ೩ನೆಯ ಶತಮಾನದಲ್ಲಿ ಚೋಳರು ಈ ರಾಜಧಾನಿಯನ್ನು ಆಕ್ರಮಿಸಿದರು. ಆಗ ಈ ಕೊಂಗರ್ ಕೊಡಗಿನತ್ತ ಬಂದುದರ ಕುರಿತು, ಈ ಮುನ್ನವೆ ಸೂಚಿಸಲಾಗಿದೆ.

ಕೊಂಗರು ಜೇನುಸಾಕಿ ಬದುಕು ಸಾಗಿಸುತ್ತಿದ್ದ ಗುಡ್ಡಗಾಡಿನ ಜನಾಂಗ. ಈ ಕೊಂಗರು ಕೊಡಗು–ಕೊಂಕಣಿಗರಾಗಿದ್ದರು. ಪಶುಪಾಲನೆ, ಕುರಿಸಾಕಣೆ ಇವರ ಪ್ರಧಾನ ಕಸುಬಾಗಿತ್ತು. ಈ ಜೀವನಕ್ರಮದ ಸಂದರ್ಭಗಳನ್ನು ಹೋಲುವ ಕನ್ನಡನಾಡಿನ ಆರಂಭನಾಯಕ ಮನೆತನ ಪಶ್ಚಿಮ ಗಂಗರದು (ಗಂಗಡಿಕಾರ). ಕ್ರಿ.ಶ. ೪ನೇ ಶತಮಾನದಲ್ಲಿ ಕೋಳಾಲವನ್ನು ರಾಜಧಾನಿ ಮಾಡಿಕೊಳ್ಳುವ ಮುನ್ನ 'ಕೊಂಗರ್' ಎಂದು ತಮಿಳರಿಗೆ ಪರಿಚಯವಾಗಿದ್ದಿರಬಹುದು. ಗಂಗರಾಜ್ಯದ ಮೂಲ ಪುರುಷರು 'ಕೊಂಗುಣಿವರ್ಮ' ಎಂದು ಕರೆದುಕೊಂಡದ್ದು ಗಮನಾರ್ಹ, ಎಂದೇ ಶೆಟ್ಟರ್ ಅವರ ಅಭಿಪ್ರಾಯವಾಗಿದೆ. ಅಂದರೆ ಪಶುಪಾಲನಾ ಕಸುಬಿನಿಂದ ಕ್ಷಾತ್ರತ್ವಕ್ಕೆ ಒಲಿದಿದ್ದರಿಂದ 'ವರ್ಮ'ರಾದರು ಎಂಬ ಧ್ವನಿ ಈ ಮಾತಿನಲ್ಲಿ ಇಣುಕುತ್ತದೆ ದಿಟ. ಆದರೆ ತಮಿಳುನಾಡಿನಿಂದ ಕೊಡಗಿನತ್ತ ಬಂದಿದ್ದ ಈ ಕೊಂಗರ್ ಅವರನ್ನು ಸೋಲಿಸಿ, ತಮ್ಮ ಸಾಮಂತರನ್ನಾಗಿ ಮಾಡಿಕೊಂಡ ಸಂದರ್ಭವೂ ಇತ್ತೆಂದರೆ ಗಂಗರಿಗೆ ಆ ಕಾರಣ 'ಕೊಂಗಣಿವರ್ಮ' ಎಂಬ ಶಬ್ದವೂ ಆರೋಪವಾಗಿರಬಹುದು ಎಂಬುದನ್ನೂ ಪರಿಶೀಲಿಸಬೇಕು. ಇರಲಿ.

ಶಂಗಂ ಕಾಲದ ರಾಜಮನೆತನಗಳಲ್ಲಿ 'ವೇಳಿರ್' ಎಂಬ ಅರಸುನಾಯಕರು ತಮಿಳಗಂ ಉತ್ತರಗಡಿಯಲ್ಲಿದ್ದರು. ಶಂಗಂ ಕಾಲದ ಕೊನೆಯ ಘಟ್ಟದಲ್ಲಿ ದಕ್ಷಿಣ ಕರ್ನಾಟಕದ ನಾಯಕನಾಗಿ 'ನನ್ನಣ್' ಎಂಬುವನು ಹೊರಹೊಮ್ಮಿದ.

ಇವನು ಕೊಡಗು–ಕೊಂಕಣದ ಒಡೆತನ ಸಾಧಿಸಿ ಚೇರ, ಚೋಳ, ಪಾಂಡ್ಯರ ವಿರುದ್ಧ ಹೋರಾಡಿದ. ಈ ಸಂದರ್ಭದಲ್ಲಿ ಅಸಂತೃಪ್ತ ತಮಿಳಗಂ ವೇಳಿರ್‌ಗಳಲ್ಲಿ ಕೆಲವರನ್ನು ತನ್ನ ಕಡೆ ಸೆಳೆದುಕೊಂಡು ಎಲ್ಲರಿಗೂ ಮುಂದಾಳುವಾದ, ಎಂಬ ಅಭಿಪ್ರಾಯವೂ ಇದೆ.[೧೧] 'ನಣ್ಣಣ್'ನನ್ನು ನೆನೆದಿರುವ ಕವಿ ಪಾಲೈಪಾಡಿಯ ಪೆರುಕುಡುಂಗೋ, ತನ್ನ ನಟ್ರಿಣೈ ೩೯೧ನೇ ಕವಿತೆಯಲ್ಲಿ 'ನಣ್ಣಣ್ ವೇಳಿರನ್ ಕೊಂಕಾಣ', ಎಂದಿದ್ದಾನೆ.[೧೨] ಇದರಿಂದ ನಣ್ಣಣ್ ವೇಳಿದ ಪಂಗಡಕ್ಕೆ ಸೇರಿದವ, ಕೊಂಕಣದವರೆಗೆ ಆಳಿದಾತ ಎಂಬ ಅರ್ಥ ಒದಗುತ್ತದೆ. ನಣ್ಣಣ್‌ಗೆ ಮಾವಿನ ಮರ (ಆವುವೃಕ್ಷ) ವಂಶವೃಕ್ಷವಾಗಿತ್ತು; ಟೋಟಮಿಸ್ಟಿಕ್ ವೃಕ್ಷವೆನಿಸಿತ್ತು. ಇದಲ್ಲದೆ, ನಣ್ಣಣ್>ನಣ್ಣನ್>ನನ್ನನ್>ನನ್ನ>ನನ್ನಯ ಎಂಬುದು ರೂಪಾಂತರದ ಜನರೂಢಿ ಎಂದರೆ, ನಣ್ಣಣ್ ಶಿವಪರಂಪರೆಯವನು ಎಂಬುದಕ್ಕೆ ತಾರ್ಕಣೆಯಾಗಬಹುದೆನಿಸುತ್ತದೆ. ಕಾರಣ, ಕ್ರಿ.ಶ. ೯೪೩ ರ ಹೇಮಾವತಿ ಶಾಸನದಲ್ಲಿ 'ನನ್ನೇಶ್ವರ' ದೇವರ ಉಲ್ಲೇಖವಿದೆ.[೧೩] ನಂಜನಗೂಡು ತಾ. ನಗರ್ಲೆ (ನಗರಲ) ಗ್ರಾಮದಲ್ಲಿರುವ ಶಾಸನೋಕ್ತ ಗಂಗರ ಕಾಲದ ನನ್ನೇಶ್ವರ ದೇಗುಲವು ಶಿವಾಲಯವಾಗಿದೆ; ಮೈಸೂರು ತಾ. ಹಿನಕಲ್ ಗ್ರಾಮದಲ್ಲಿಯ ನನ್ನೇಶ್ವರ ದೇಗುಲವು ಗಂಗರ ಕಾಲದ ಶಿವಾಲಯವಾಗಿದೆ. ಶಿವಕಂಚಿಯ ಶಿವಾಲಯವು 'ಏಕಾಮ್ರನಾಥೇಶ್ವರ' ಲಿಂಗದ ದೇಗುಲವಾಗಿ ಮಾವಿನ ಗಿಡವನ್ನು ಹೊಂದಿದೆ. ಆ ವೃಕ್ಷಕ್ಕೆ ನಿತ್ಯಪೂಜೆಯೂ ಇದೆ. ಈಗಾಗಲೇ ಹೇಳಿದಂತೆ ಅಗಸ್ತ್ಯ, ಕೇರಳ, ಪಶ್ಚಿಮ ಘಟ್ಟಗಳತ್ತ ೧೮ ವೇಲಿಗರ ಕುಟುಂಬಗಳನ್ನು ಕರೆತಂದು ರಾಜ್ಯ ಕಟ್ಟಿಕೊಟ್ಟ ವಿಷಯವಿದೆ. ಅವನ ಅನುಯಾಯಿಗಳು ವೇಲೀದರು (>ವೇಳಿದರು>ವೇಳಿದರು) ಎಂದರೆ, ಅಗಸ್ತ್ಯನ ಶೈವಧರ್ಮವನ್ನು ಅನುಸರಿಸಿದವರು ಎಂದಾಗುತ್ತದೆ. ಈ ಹಿನ್ನೆಲೆಗಳಿಂದ 'ನಣ್ಣಣ್' ಶಿವಧರ್ಮಾನುಸಾರಿ ಎಂಬ ಸೂಚನೆ ಒದಗುತ್ತದೆ. ಕೊಡಗಿನ ಶಿವ ಪರಂಪರೆಯ ದೃಷ್ಟಿಯಿಂದ ಇದು ಗಮನಾರ್ಹ ವಿಷಯವಾಗುತ್ತದೆ. ಧರ್ಮ–ಸಾಂಸ್ಕೃತಿಕ ಸಂಶೋಧನೆಗೆ ಅನುಕೂಲಿಸುತ್ತದೆ.

ರಾಜಕೀಯ ದೃಷ್ಟಿಯಿಂದ ಹೇಳಿದರೆ ಬಹುಶಃ ಮೊದಲು ಕೊಡಗನ್ನು ಆಳಿದವರು ಬುಡಕಟ್ಟಿನ ವೇಳಿದ ನಾಯಕರು ಎನ್ನಬೇಕು. ಕ್ರಿಪೂ. ೧ರಿಂದ ಕ್ರಿಶ. ೩ನೇ ಶತಮಾನದ ಮಧ್ಯ ಒಂದು ಕಾಲದಲ್ಲಿ ನಿರ್ದಿಷ್ಟವಾಗಿ ಆಳಿದವನೆಂದರೆ ನಣ್ಣಣ್>ನನ್ನನ್ ಎನ್ನಬಹುದು. ಅಂದರೆ ಅಗಸ್ತ್ಯನೊಡನೆ ಬಂದವರಲ್ಲಿಯ ವೇಳಿದರ ಪೈಕಿ ಸುಮಾರು ಒಂದು ಸಾವಿರ ವರ್ಷದ ನಂತರ ನಮಗೆ ಕೊಡಗನಾಳಿದ ಮೊದಲ ನಾಯಕನ ಹೆಸರು ಲಭ್ಯವಾಗುತ್ತದೆ.

'ನಣ್ಣಣ್ ವೇಳಿದ' ಹಾಗೂ ಕ್ರಿ.ಶ. ೯ನೇ ಶತಮಾನದ ಗಂಗ ರಾಚಮಲ್ಲನ ಕಾಲದ ಕೋತೂರು ಶಾಸನದಲ್ಲಿ ಬರುವ 'ಜಡಲ ಎಱೆಯಂಗ ಗಾವುಣ್ಡ' ಎಂಬ ಹೆಸರುಗಳನ್ನೂ ಗಮನಿಸಿದರೆ ಕೊಡಗಿನಲ್ಲಿಯ 'ಮನೆಪೆದ' (ಮನೆತನದ ಹೆಸರು)ಗಳ ಪದ್ಧತಿಗೆ ಅವು ಪೂರ್ವ ಆಕರಗಳಂತೆ ತೋರುತ್ತದೆ. ಆಗ ಕೊಡಗಿನ 'ಮನೆಪೆದ'ಗಳ ಇತಿಹಾಸ ಕ್ರಿಸ್ತಶಕದ ಆರಂಭಕ್ಕೆ ಸರಿಯುವಂತೆ ತೋರುತ್ತದೆ. ಇಂಥ ಉಪಾಧಿಗಳು ಮೊದಲಿಗೆ ಜನಾಂಗೀಯ ಮನೆಪೆದ (ಅಥವಾ ಜನಾಂಗಪೆದ!)ಗಳಂತೆ ರೂಪುಗೊಂಡು, ನಂತರ 'ಕುಟುಂಬ ಮನೆಪೆದ'ಗಳು ರೂಢಿಗೆ ಬಂದಂತೆ ಕಾಣುತ್ತದೆ, ಭಾಷಾಕೋಶಕ್ಕೆ 'ಮನೆಪೆದ' ಎಂಬ ಶಬ್ದ ಸೇರ್ಪಡೆಯಾಗಲು ಹೀಗೆ ಆಳ್ವಿಕೆ ಹಾಗೂ ಶಾಸನ ಪರಂಪರೆ ನೆರವಾಗಿರುವುದು ಕಾಣಬರುತ್ತದೆ.

ಅಶೋಕನ ಕ್ರಿಪೂ ೨೫೮ರ ಗಿರ್‌ನಾರ್‌ನ ೨ನೆಯ ಬಂಡೆಗಲ್ ಶಾಸನದಲ್ಲಿ "ಕೇರಳಪುತ, ಸತಿಯಪುತ' ಶಬ್ದಗಳಿದ್ದು ಪ್ರಾದೇಶಿಕ ನೆಲೆಗಳ ಸೂಚನೆಯನ್ನು ನೀಡುವಂತಿವೆ. ಕೇರಳದಲ್ಲಿ ಪದ್ಮನಾಭಪುರದ ಬಳಿಯ ಮನಲಿಕ್ಕರ ಮಠದಲ್ಲಿ ವಜ್ರಯಾನದ ಮೂಲ ಗ್ರಂಥಗಳಲ್ಲಿ ಒಂದಾದ ಮಂಜುಶ್ರೀ ಬೋಧಿಸತ್ವನ ಪೂಜಾವಿವರಗಳಿರುವ 'ಮಂಜುಶ್ರೀ ಮೂಲ ಕಲ್ಪ'ದ ಹಸ್ತಪ್ರತಿ ದೊರೆತಿದೆ.[೧೪] ಅಲ್ಲಿನ ಬೌದ್ಧ ಪೂಜಾಸ್ಥಳಗಳಿಗೆ 'ಪಳ್ಳ' ಕಲಿಕಾ ಕೇಂದ್ರಗಳಿಗೆ 'ಎಜತು ಪಳ್ಳ' ಎಂಬ ಹೆಸರಿತ್ತು. ಕೇರಳದ ಗಡಿಗೆ ತೀರ ಸನಿಹವಾದ ಕೊಡಗಿನ ಗ್ರಾಮ 'ಮಂಚಳ್ಳಿ' ಇದೆ. ಅಲ್ಲಿ ಬೌದ್ಧ ಪಂಥದ ಮಾಯಾಜಾಲಕ್ರಮ ಅವಲೋಕಿತೇಶ್ವರ ಬೋಧಿಸತ್ವನದೆನ್ನಬಹುದಾದ ಶಿಲ್ಪ ಕಾಣಬರುತ್ತದೆ, ಹಾಗೂ ಬೌದ್ಧ ಮಚಲಿಂದ ನಾಗಶಿಲ್ಪ (ನಾಗಹೆಡೆ ಆವೃತ ದ್ವಯಪಾಶಿಲ್ಪ)ವೂ ಕಾಣಬರುತ್ತದೆ. ಕೊಡಗಿನಲ್ಲಿ ಇಂದು ಜಮ್ಮ ಮಾಪಿಳ್ಳೆಗಳ(ಮತಾಂತರಗೊಂಡವರು) ಮಸೀದಿಗೂ 'ಪಳ್ಳಿ' ಎನ್ನುತ್ತಿದ್ದರು. ದಲಿತ ಕೆಂಬಟ್ಟೆಗಳಲ್ಲಿ ಉತ್ತರ ಕೊಡವ ಬೇತು ಗ್ರಾಮದ ದೇವನೆಲೆಗೂ 'ಪಳ್ಳಿ' ಎಂಬ ಹೆಸರಿರುವುದು ಗಮನಾರ್ಹ. ಇದರ ಜೊತೆಗೆ ಈ ದಕ್ಷಿಣ ಕೊಡಗಿನ ಇದೇ ಭಾಗದ ಇನ್ನೊಂದು ಗ್ರಾಮದ ಸ್ಥಳನಾಮ 'ತೆರಾಲು' ಎಂದಿದೆ. ಇದು ಬೌದ್ಧರ 'ಥೇರ್' ಎಂಬ ಶಬ್ದ ಹೆಸರಿನನ್ವಯವಾಗಿ ಅಪಭ್ರಂಶವೆಂಬಂತೆ ಕಾಣುತ್ತದೆ.

ತೆರಾಲು < ತೇರಾಲು<ಥೇರಾಲು<ಥೇರಾಳು= ಥೇರ ಹಾಳು – ಎಂದು ರೂಪಿಸಿದರೆ ಒಂದು ಕಾಲದ ಬೌದ್ಧ ನೆಲೆಯಾಗಿದ್ದಿರಬಹುದಾಗಿದ್ದ ಈ ಗ್ರಾಮ ಹಾಳು ಬಿದ್ದು 'ಥೇರಹಾಳು' ಎಂದು ಕರೆಸಿಕೊಂಡು ಜನಪದರ ಬಾಯಲ್ಲಿ 'ತೆರಾಲು' ಎಂದು ಬಳಕೆಗೊಂಡು ಇಂದಿಗೂ ಅಭಿವೃದ್ಧಿಕಾಣದ ಗ್ರಾಮವಾಗಿದೆ. ಈ ಹಿನ್ನೆಲೆಗಳಲ್ಲಿ 'ಮಂಚಳ್ಳಿ'ಯ ಮೊದಲನೆಯ ಹೆಸರು ಬಹುಶಃ ಬೌದ್ಧ ದೇವತೆ 'ಮಂಜುಶ್ರೀ'ಯ ಸ್ಮರಣ ಸಂಕೇತವಾಗಿ 'ಮಂಜುವಳ್ಳಿ'> 'ಮಂಜಳ್ಳಿ' ಎಂದಿದ್ದು, ನಂತರ 'ಮಂಚಳ್ಳಿ' ಎಂದು ರೂಪಾಂತರಗೊಂಡಿರುವಂತಿದೆ. ವಜ್ರಯಾನದ ಪ್ರಭಾವದಿಂದ 'ಮಂಜುಗುಳ', ಮಂಜಲ್ತೊಣ' ಎಂಬ ಗ್ರಾಮಗಳ ಹೆಸರುಗಳಿರುವಂತೆ, 'ಮಂಚಳ್ಳಿ' ನಾಮನಿಷ್ಪತ್ತಿಯನ್ನು ಮೇಲಿನಂತೆ ಸೂಚಿಸಬಹುದು. ಇದಲ್ಲದೆ ಪಾಕೃತ ಶಾಸನ ಶಬ್ದ 'ಪೆನುಮನ' ದಿಂದ 'ಪೆರ್ಮಾಡಿ' ಶಬ್ದ ಸಿದ್ದಿಸುತ್ತದೆ. ಎಂದು ತಾಳ್ತಜೆ ಅವರ ವಾದವಿದೆ. ಇದನ್ನು ಗಮನಿಸಿದರೆ ದಕ್ಷಿಣ ಕೊಡಗಿನ ೯ನೇ ಶತಮಾನದ ಕೋತೂರು ಶಾಸನದಲ್ಲಿ ಬರುವ 'ಪೆರ್ಮಾಡಿ ವಟ್ಟಂ' (ಪೆರ್ಮಡಿ ಪಟ್ಟ) ಶಬ್ದ ಬೌದ್ಧ ಮೂಲದ್ದಿರುವಂತೆ ತೋರುತ್ತದೆ. ಆದ್ದರಿಂದ ಮಂಚಳ್ಳಿ-ತೆರಾಲು ಪ್ರದೇಶವು, ಬೌದ್ಧ ವಾಸ್ತವ್ಯ ಮೂಲವನ್ನು ಹೆಚ್ಚು ಪೋಷಿಸುವಂತೆ ತೋರುತ್ತದೆ. ಅಲ್ಲದೆ ಮೇಲ್ಸೂಚಿತ ಶಿಲ್ಪಗಳು ಹಾಗೂ ಸ್ಥಳನಾಮಗಳು, ಅಶೋಕನ ಕಾಲದಲ್ಲಿ ಇಲ್ಲಿಗೂ ಬೌದ್ಧ ಭಿಕ್ಷುಗಳು ಪ್ರಚಾರ ಕಾರ್ಯಕ್ಕೆ ಬಂದಿದ್ದುದರ ಸೂಚನಾ ಸಾಕ್ಷಿಗಳಾಗಿ ಕಾಣುತ್ತವೆ.

ಪಾಲಿ, ಪ್ರಾಕೃತ ಶಬ್ದಗಳಾದ 'ಥೇರ–ತೇರ' ಎಂಬ ಶಬ್ದಗಳಿಗೆ ಕನ್ನಡ–ಕನ್ನಡ ನಿಘಂಟು, ಜೈನಮುನಿ, ಬೌದ್ಧಸಾಧು ಎಂದು ಅರ್ಥ ನೀಡಿದೆ. ಅಂದರೆ 'ಥೇರ' ಶಬ್ದವು ಜೈನ ಮತ್ತು ಬೌದ್ಧ ಧರ್ಮದಲ್ಲಿ ಮುನಿ–ಯತಿ ವರ್ಗಕ್ಕೆ ಅನ್ವಯವಾಗುವ ಶಬ್ದವಾಗಿದೆ. ತೆರಾಲು ಗ್ರಾಮದಲ್ಲಿ 'ಕರ್ಣದೇವತೆ' ಎಂಬ ಕಮಲದ ಮೊಗ್ಗು ಹಿಡಿದಿರುವ ಸ್ಥಾನಕ ಸ್ತ್ರೀ ದೇವತೆಯು ಆರಾಧನೆಗೊಳ್ಳುತ್ತಿದೆ. 'ಬೊಮ್ಮಂಜಿ' ಎಂಬ ಹೊಳೆ ದೇಗುಲದ ನೆರೆಗೆ ಹರಿಯುತ್ತದೆ. 'ಕರ್ಣ<ಕರಣ' ಎಂಬುದು 'ಜೈನ' ಧರ್ಮದಲ್ಲಿ ಯೋಗಕ್ಕೆ ಪರಿಭಾಷೆಯಾಗಿ ಬರುತ್ತದೆ. (ಕರಣ ಗ್ರಂಥ, ಕರಣಯೋಗ ಇತ್ಯಾದಿ). 'ಬೊಮ್ಮಂಜಿ' ಶಬ್ದವು ಬ್ರಹ್ಮದೇವರ ಸಂಬಂಧಿಯಾದುದು ಎನ್ನಬೇಕು. ಅಂದರೆ ಜೈನ ಪರಂಪರೆಗೆ ಅದು ಸಮೀಪವಾದ ಶಬ್ದವಾಗಿ ಕಾಣುತ್ತದೆ. ಹೀಗಾಗಿ ಥೇರಹಾಳು>ತೆರಾಲು ಗ್ರಾಮವು ಪಾಳುಬಿದ್ದು ಹಾಳಾದ ಬೌದ್ಧ ಸೂಚಿತ ಅವಶೇಷಗಳು ಹಾಗೂ ದೇವತೆಯ ಸೆಸರನ್ನು ಗಮನಿಸಿದರೆ, ಮೊದಲಿಗೆ 'ತೆರಾಲು' ಕೂಡ ಬೌದ್ಧ ನೆಲೆಯಾಗಿದ್ದು. ನಂತರ ಜೈನ ಪ್ರಭಾವಕ್ಕೆ ಈಡಾದಂತೆ ತೋರುತ್ತದೆ. ಇಂದು ಮೇಲ್ಸೂಚಿತ ಗ್ರಾಮದ ದೇವತೆಗಳು ಹಿಂದೂ ದೈವೀಕರಣಗೊಂಡು ಪೂಜೆಗೊಳ್ಳುತ್ತಿವೆ. ಗ್ರಾಮನಾಮಗಳು, ಹರಿವ ಹೊಳೆ ಹೆಸರು ಇವೆಲ್ಲ ಬೌದ್ಧ–ಜೈನ ಮೂಲವನ್ನು ಜಾನಪದ ರೂಪಗಳಲ್ಲಿ ನಿತ್ಯ ಸ್ಮರಣೆಗೊಳ್ಳುತ್ತವೆ.

**ಶಾಸನಾಕರಗಳು:**

ಶಾಸನಗಳ ದೃಷ್ಟಿಯಿಂದ ಹೇಳುವಲ್ಲಿ,[೧೫] ಮಡಿಕೇರಿಯ ೧ನೇ ಶಾಸನ ಕ್ರಿ.ಶ. ೯ನೇ ಶತಮಾನದಲ್ಲಿ ಬರೆದ, ಕ್ರಿ.ಶ. ೪೬೬ರ ಗಂಗರ ಶಾಸನದ ಮೂಲ ಪ್ರತಿಯ ನಕಲಾಗಿದೆ. ಕೃತಕ ಶಾಸನವೆಂದು ಹೇಳಲಾಗಿದೆ. ಆದರೆ ಬಹುತೇಕ ೩೯ ಸಾಲುಗಳ ಸಂಸ್ಕೃತ ಭಾಷಾ ಶಾಸನವಾಗಿದ್ದರೂ, ಹದಿನೇಳು ಸಾಲುಗಳಲ್ಲಿ ಕೆಲವಾರು ಕನ್ನಡ ಶಬ್ದಗಳೂ ಇದ್ದು, ಕನ್ನಡ ಗದ್ಯದ ಗಂಭೀರಲಯವನ್ನು ಈ ಸಾಲುಗಳು ತೋರಿವೆ. ಊರುಗಳ ಹೆಸರು ಕನ್ನಡದಲ್ಲಿವೆ. ಈನಾಲಯಕ್ಕೆ, ಟಡನಾಡು ಸಪ್ತರಿ ಮಧ್ಯೆ, ಮುಳ್ತಗಿ (ಮೊಳತೆ!), ಕೊಟ್ಟಗರ, ಬಡಣಗುಪ್ಪೆ, ಪನ್ನಿಕ್ಕರ್ಣ್ಣದಗಂ, ಗಂಜೆನಾಡ ನಿರ್ಗ್ಗುನ್ದ, ದೇಸಸಾಕ್ಷಿ, ತಗಡೂರ ಕುಬಿಗೋವರು, ಗಣೆಗನೂರ ತಗಟರು, ಬೆಳ್ಳುರರು, ಪೆರ್ಗ್ಗಿವಿಯರುಂ ಇತ್ಯಾದಿ ಕನ್ನಡ ಶಬ್ದಗಳಿವೆ. ಈ ತಾಮ್ರಶಾಸನವು ಪಾವೇರಿ ಅರಸ ಸಿರಿಬಾಯಿ ದೊಡ್ಡಪ್ಪನ ಸೈನಿಕರು (೧೭ನೇ ಶತಮಾನ) ಮಡಿಕೇರಿ ಖಜಾನೆಗೆ ತಂದುಕೊಟ್ಟುದೆನ್ನುವುದಿದೆ. ಒಂದು ಕಾಲಕ್ಕೆ 'ಕುಡುಗುನಾಡ ಕೊಡಗೂರ್ವಿಷಯೆ' ಎಂದು ಶಾಸನೋಕ್ತವಾಗಿ ೭–೮ನೇ ಶತಮಾನದಲ್ಲಿ ಕರೆಯಲಾಗುತ್ತಿತ್ತು– ಕೊಡಗು ಪ್ರದೇಶವು ಅಲ್ಲಿಯವರೆಗೆ ಇತ್ತು, ಎಂಬ ಸೂಚನೆಯೂ ಇಲ್ಲಿ ಕಾಣುತ್ತದೆ. ಶಾಸನದಲ್ಲಿ ಬರುವ ಗಣಿಗನೂರು, ನೀರ್ಗುಂದ, ಮೊಳತೆ ಇತ್ಯಾದಿ ಗ್ರಾಮನಾಮಗಳು ಇಂದಿಗೂ ಕೊಡಗಿನಲ್ಲಿವೆ. ಅಲ್ಲದೆ ದಕ್ಷಿಣ ತೀರ ಕರ್ನಾಟಕದ ಕನ್ನಡ, ಕೊಡಗಿನಲ್ಲಿ ೫ನೇ ಶತಮಾನಕ್ಕೆ ಮುಂಚೆಯೇ ಚಾಲ್ತಿಗಿತ್ತೆನ್ನಬೇಕಾಗುತ್ತದೆ. ಇದಕ್ಕೆ ಪೋಷಕವಾಗಿ ಕದಂಬರ ಶ್ರೀ ವಿಷ್ಣುವರ್ಮ (ಎಡಕಲ್ಲುಗುಡ್ಡ) ನಂತರ ಕದಂಬ ರವಿವರ್ಮನ ಆಳ್ವಿಕೆಗೆ ಕೊಡಗು ಸೇರಿದ್ದು(ಗದ್ದಿದ್ದು)ದು ಶಾಸನೋಕ್ತ ಸೂಚನೆಯಲ್ಲಿದೆ; ಇಲ್ಲಿನ ಕನ್ನಡ ಭಾಷಿಕ ವಾತಾವರಣ ಅವರ ಕಾಲಕ್ಕೆ ಇತ್ತು ಎಂಬುದಾಗುತ್ತದೆ.

ಪ್ರಕಟಿತ ಶಿಲಾ ಶಾಸನಗಳ ಪೈಕಿ ಕ್ರಿ.ಶ. ೮೮೮ರ ಬಳಿಯೂರು ಶಾಸನವೆ ಕೊಡಗಿನ ಮೊದಲ ಕನ್ನಡ ಶಾಸನ ಎಂದು ಭಾವಿಸಲಾಗಿತ್ತು. ಆದರೆ ಕ್ರಿ.ಶ. ೭೨೫-೭೮೮ರ ಶ್ರೀಪುರುಷನ ಮುನ್ನಿನ ಶಾಸನವಾಗಿ ಮಡಿಕೇರಿಯ ಬಳಿಯ ಹೈಸೂಡ್ಲೂರಿನಲ್ಲಿ ದೊರೆತ ಭಗ್ನವಾದ ತುಂಡು ಶಾಸನವು ಇಂದಿಗೆ ಕೊಡಗಿನ ಮೊದಲ ಕನ್ನಡ ಶಿಲಾಶಾಸನವೆನಿಸಿದೆ.[೬] ಆ ಶಾಸನದಲ್ಲಿ 'ಪುದುರ್ಕ್ಕೇರಿ' (ಇಂದಿನ ಮಡಿಕೇರಿ),'ಧರ್ಮ್ಮ', 'ಅಟಿತ್ತಡೆ', ಎಂಬ ಶಬ್ದಗಳಿದ್ದು ಕೂಡಿಸುವ ಕೇರಿ ಎಂಬ ಅರ್ಥದ 'ಸ್ಥಳನಾಮ', ಜಿನಾಲಯಕ್ಕೆ ಕೊಟ್ಟ ದಾನವನ್ನು ಕೆಡಿಸಿದರೆ, ಪಾಪ ಎಂಬ ಶಾಪಾಶಯದ ಅರ್ಥ ಸೂಚಿಸುವ ಶಬ್ದಗಳಾಗಿವೆ. ಇದಕ್ಕೆ ಪೋಷಕವಾದ ಸಾಕ್ಷಿ ಎಂದರೆ ರಕ್ಕಸ ಗಂಗನ ಕ್ರಿ.ಶ. ೯೭೮ರ ಪೆಗೂರು ಶಾಸನದಲ್ಲಿ (ಮಡಿಕೇರಿಗೆ ಹಾದಿ ಸನಿಹದ ಗ್ರಾಮದ ಶಾಸನ), 'ಶ್ರೀಪುರುಷ ಮಹಾರಾಜರ ದತ್ತಿಯ ನಾವೊನೊರ್ಬನಟಿದೊಂ' ಎಂದಿರುವುದಾಗಿದೆ. ಪೆಗ್ಗೂರು ಬಸದಿಗೆ ರಕ್ಕಸಗಂಗ ದಾನ ಕೊಟ್ಟಿರುವ ವಿಷಯವಾಗಿ ಶಾಸನವಿದೆ. ಹೈಸೊಡ್ಲೂರಿನ ಬಳಿ ಪುದುಕ್ಕೇರಿ 'ಹೊಸ ರಾಜಧಾನಿ' ಎಂಬ ಮಾತು ಇರುವಲ್ಲಿ ಅಲ್ಲಿದ್ದ ಬಸದಿಗೆ ಶ್ರೀಪುರುಷ ನೀಡಿದ ದಾನವನ್ನು ರಕ್ಷಿಸಬೇಕೆಂಬ ಸೂಚನೆಯಾಗುತ್ತದೆ. ಶಾಸನದ ಭಾಷೆ ಪೂರ್ವದ ಹಳಗನ್ನಡದ್ದಾಗಿ ಭಗ್ನ ಸಾಲುಗಳ ನಡುವೆಯು ಗಂಭೀರ ಶಬ್ದಗಳು ಕಾಣುತ್ತದೆ. ಗಂಗರ ಕಾಲದ ಲಿಪಿಯನ್ನು ಅದರ ಮೇಲೆ ಬಹಳ ಸುಂದರವಾಗಿ ಕೆತ್ತಲಾಗಿದೆ.

ಕ್ರಿ. ಶ. ೮೮೮ರ ಬಳಿಯೂರು ಶಾಸನವು, ಗಂಗರ ಸತ್ಯವಾಕ್ಯ ರಾಚಮಲ್ಲನ ಕಾಲಕ್ಕೆ ಸೇರಿದುದು, ಇದು ಪೆಣ್ಣಿಗಡಜ್ಜದ ಜಿನಾಲಯಕ್ಕೆ ೮೦೦ ಭತ್ತದ ದಾನ, ಗ್ರಾಮದಾನದ ಕುರಿತು ಹೇಳುತ್ತದೆ. ಪೆಣ್ಣಿಗಡಜ್ಜ ಶಬ್ದ, ಪೆಣ್ಣೆ> ಪಣ್ಣಿ> ಪಣ್ಯ> ಪನ್ಯ ಎಂಬ ರೂಪಾಂತರದಲ್ಲಿ ರಾಜನ ಖಾಸಗಿ ಫಲವತ್ತಿನ ಭೂಮಿ ಎಂಬ ಅರ್ಥವಿದೆ. ಅದು ಜನ ಬಳಕೆಯ ಪಾರಿಭಾಷಿಕ ಅರ್ಥವನ್ನು ಹೊಂದಿ ಇಂದಿಗೂ ಚಾಲ್ತಿಯಲ್ಲಿದೆ. ಅಲ್ಲದೆ ಅದಕ್ಕೆ 'ಬನ'ದ ಭೂಮಿ ಎಂದೂ ಅರ್ಥೈಸಿರುವುದುಂಟು. ಕಾರಣ ಗಡಜ್ಜ > ಕಡಂಗ ಎಂದರೆ ಗುಡ್ಡೋಣಿ (ಏರಿ ಮತ್ತು ಓಣಿಗಳ ಜೋಡಿನೆಲೆ) ಎಂಬ ಅರ್ಥವಿದ್ದು ಕೊಡಗಿನ ಸಾಂಸ್ಕೃತಿಕ ಹಾಗೂ ರಾಜಕೀಯ ಸಂದರ್ಭಗಳಿಗೆ ಅನ್ವಯವಾಗಿದೆ; ಸಾಮಾಜಿಕವಾಗಿ ಇಂದೂ ಚಾಲ್ತಿಗಿದೆ. ಪುನ್ಯ ಭೂಮಿಗಳು ವಿಶಾಲವಾದ ಫಲವತ್ತಾದ ಭೂಮಿಗಳಾಗಿದ್ದುವು. ಈ ಭೂಮಿಗಳು ಬನದಿಂದ (ಕಾಡಿನ ಮರಗಳಿಂದ ಆವೃತವಾದ) ಆವೃತವಾಗಿ, ಬೇರ್ಪಡಿಸುವ ಗಡಿಗಳಾಗಿ ಕಡಂಗಗಳಿರುತ್ತಿದ್ದುವು. ನಾಡಿಗಲಗೆ. ಕೊಡಗಿನ ಮನೆಗಡಿಗಳನ್ನು ಪೊಟ್ಟಕಡೆಂಗ ಎಂಬ ಶಬ್ದದಿಂದ ಗುರುತಿಸಲಾಗುತ್ತಿತ್ತು. ಅಂತಾಗಿ, ಪಾರಿಭಾಷಿಕ ಅರ್ಥಗಳನ್ನು ಒಳಗೊಂಡು, 'ಪೆಣ್ಣಿ, ಕಡಂಗ ಶಬ್ದಗಳು ಕೊಡಗಿನ ಭಾಷಾಕೋಶಕ್ಕೆ ಸೇರಿಬಿಟ್ಟಿವೆ; ಐತಿಹಾಸಿಕ ದೃಢೀಕರಣವನ್ನು ಪಡೆದಿದೆ. ಅಲ್ಲದೆ ಈ ಶಾಸನವನ್ನು ಆ ಕಾಲದ ನಿತ್ಯ ಬಳಕೆಯ ಕನ್ನಡ ಭಾಷಾ ಶಬ್ದಗಳು, ಸಜಾತೀಯ ದ್ವಿತ್ವ ಶಬ್ದಗಳು ಶಕಟರೇಫ ಹಾಗೂ ರಳ್ ರೂಪಗಳು, ವರ್ಗೀಯ ವ್ಯಂಜನ ಅನುನಾಸಿಕಗಳ ಬಳಕೆಯೂ ಕಾಣಬರುತ್ತದೆ. ಈ ಶಾಸನದಲ್ಲಿ ಶಾಪಾಶಯದಲ್ಲಿ ಬರುವ 'ಪಾತನಕ್ಕುಂ' ಶಬ್ದದ ಅಂತ್ಯಭಾಗ, 'ಅಕ್ಕುಂ' ಇಂದು 'ಅಕ್ಕುವ' ಎಂದು ಕೊಡವ ಭಾಷೆಯಲ್ಲಿ ಬಳಕೆಯಲ್ಲಿರುವುದು; ಹಾಗೂ ಪೂರ್ವ ಹಳಗನ್ನಡದ ಒಂದು ಶಬ್ದರೂಪ (ಮಂಗಲೀಸನ ಶಾಸನದ ಪುಟು 'ಅಕ್ಕುಮ್' ಗಮನಿಸಿ) ಕೊಡಗಿನಲ್ಲಿ ಜೀವಂತವಿರುವುದು ಗಮನಾರ್ಹ. ಶಾಸನದ ಇನ್ನೊಂದು ಶಬ್ದ 'ನೂರು ಭತ್ತಮುಂ', ಇಂದಿಗೂ ಬಳಕೆಗಿರುವ 'ನೂರುಭಟ್ಟಿಭತ್ತ' ಎಂಬ ಪರಿಮಾಣವಾಚಕ (ಸುಮಾರು ಮೂರುವರೆ ಎಕರೆ) ಗ್ರಾಮೀಣ ಶೈಲಿಯ ಶಬ್ದದ ಪೂರ್ವರೂಪವಾಗಿದೆ. ಇದೇ ಸಮಯದ ಕೋತೂರು ಶಾಸನದ 'ಪೆರ್ಮಡಿವಟ್ಟಂಗಟ್ಟೆ' ಶಬ್ದವನ್ನು ಗಮನಿಸಿ; ಬೆಂಗಳೂರು ತಾ. ಬೇಗೂರಿನ (ಕ್ರಿ.ಶ. ೮೯೦)ರ ಎಚೆಯಪ್ಪನ ಶಾಸನದ 'ನಾಗತ್ತರ ವಟ್ಟಂಗಟ್ಟೆ' ಶಬ್ದವೂ ಸಮಾಂತರ ಸಹಯೋಗಿಯಾಗಿ ಕಾಣುತ್ತದೆ. ಅಂದರೆ ಕರ್ನಾಟಕದ ಇತರ ಭಾಗಗಳಲ್ಲಿನ ಕನ್ನಡ ಭಾಷಾಶೈಲಿಯ ಅನೇಕ ಅಂಶಗಳು ೯ನೇ ಶತಮಾನದಲ್ಲಿ ಕೊಡಗಿನಲ್ಲಿಯೂ ಕಾಣಬರುತ್ತಿದ್ದುವು, ಕನ್ನಡ ಭಾಷೆಯ ಗತ್ತನ್ನು ತೋರುತ್ತಿದ್ದವು ಎಂದಾಗುತ್ತದೆ. 'ಪೆಣ್ಣೈ' ಹಾಗೂ ಕಿಡಜ್ಜು ಎಂಬ ಶಬ್ದಗಳದ್ದು ದ್ರಾವಿಡ ಪರಿವಾರ ಭಾಷಾ ಸಂಬಂಧಗಳನ್ನು ತೋರುತ್ತವೆ. ಕೇರಳಕ್ಕೆ ಕೊಡಗಿನ ಈ ಶಾಸನೋಕ್ತ ಪ್ರದೇಶಗಳು ಸಮೀಪವೇ ಆಗಿದ್ದವು; ಹಾಗೂ ಕುಲಗಾಣ ಶಾಸನದ (೮ನೇ ಶತಮಾನ)ರೀತ್ಯಾ 'ಕೊಡಗೂರ್ವಿಷಯಕ್ಕೆ' ಕೇರಳವೂ ಸೇರಿತ್ತು ಎಂಬುದು ಈ ನಿಟ್ಟಿನಲ್ಲಿ ಗಮನಾರ್ಹ.

ಕೊಡಗಿನ ಶಾಸನಗಳಲ್ಲಿ ಗಂಗರ ಆಸ್ಥಾನ ಕವಿ ಸೋಮವಾರಪೇಟೆ ತಾಲೂಕು ತಾಮುಳ್ಳೂರಿನವ ಎನ್ನಲಾದ ಕ್ರಿ.ಶ. ಸು. ೯೦೦ರ ಒಂದನೆಯ ಗುಣವರ್ಮನ ಹೆಸರು ಕಾಣಬಹುದು. ಆದರೆ ಕ್ನನಡ ಭಾಷೆ ಮತ್ತು ಸಾಹಿತ್ಯದ ದೃಷ್ಟಿಯಿಂದ

ಅವನು ಗಮನಾರ್ಹನಾಗುತ್ತಾನೆ. ಅವನು ಕ್ರಿ.ಶ. ೮೮೬–೯೧೩ರ ಗಂಗರಸ ಎಱೆಯಪ್ಪನ ಆಶ್ರಿತ ಕವಿ ಎನ್ನಲಾಗಿದೆ. ಅವನು ಮಹೇಂದ್ರಾಂತಕ, ರಾಮದ, ಗಂಗರರ್ಜುನ ಎಂದೆಲ್ಲ ತನ್ನ ದೊರೆಯನ್ನು ಕುರಿತು ಶೂದ್ರಕ ಕಾವ್ಯದಲ್ಲಿ ವರ್ಣಿಸಿದ್ದಾನೆ; ಜೊತೆಗೆ ಅದರಲ್ಲಿಯ ನದಿ, ಕಾಡು, ಹಂದಿ, ಬೇಟೆ ಹಾಗೂ ನಿಸರ್ಗಸೌಂದರ್ಯ ಕುರಿತ ವರ್ಣನೆಗಳು ಕೊಡಗಿನ ಪರಿಸರವನ್ನೂ ಸೂಚಿಸುವಂತಿವೆ. 'ತುಱುಗಿರವಿಂದೆ ಪೋಲ್ತುದು ಮಹಾನದಿ', 'ಗಿರಿಯಿದು ಗಿರಿಯಲ್ತು ಕರಿಯಿದಲ್ತು ಕರೀಂದ್ರಂ' 'ಮಿಱುಗುವ ದಾಡೆಯಿಂದಣೆದು. . . ' ಮಲೆಯುತ್ತೊಲೆಯುತ್ತೆ . .. . ಪಱೆದ ಗಜೇಂದ್ರನಂತೆ ಬರುತಿರ್ದುದು, ಭೀಕರನೊಂದು ಸೂಕರಂ' ಇತ್ಯಾದಿ ಸಾಲುಗಳು[೧೭] ಇದಕ್ಕೆ ಪೋಷಣೆ ನೀಡುವಂತಿವೆ. ಗುಣವರ್ಮನು ಲಕ್ಷಣ ಗ್ರಂಥಕಾರನಾಗಿದ್ದ ಬಗ್ಗೆ ನಯಸೇನ, ರುದ್ರಭಟ್ಟರ ಹೊಗಳಿಕೆಯಿಂದ ತಿಳಿಯುತ್ತದೆ. ಬಹುಶಃ ಇದು ಕೊಡಗಿನ ಮುಂದಿನ ಶಾಸ್ತ್ರ ಗ್ರಂಥಕಾರರಿಗೆ ಪ್ರೇರಣೆ ನೀಡಿರಬಹುದು.

ಕ್ರಿ.ಶ. ೯೧೧ರ ಸೋಮವಾರಪೇಟೆ ತಾಲೂಕು ಗುಡಗೂರಿನ ಹೊಸ ಶಾಸನದಲ್ಲಿ ಗಂಗರ ಎಱೆಯಪ್ಪನ ಆಳ್ವಿಕೆಯ ಸೂಚನೆ ಇದೆ.[೧೮] ಅಂತಾಗಿ ಗುಣವರ್ಮನ ಕೊಡಗಿನ ಮುಳ್ಳೂರಿನ ವಾಸ್ತವ್ಯವನ್ನು ಪರಿಭಾವಿಸಬಹುದೆನಿಸುತ್ತದೆ. ಈ ಶಾಸನದಲ್ಲಿ ಬರುವ 'ಯಳಘಳೆಯ ಶಕ್ರಮನ್ ಪೋಗೆ . . . . ವಾವೋ ನಳಿಹಿಪ್ಪ . . . . ದೇವಿರಿಯ ಕಲ್ಯ ನಿಲಿಸಿದರ್' ಎಂಬ ಸಾಲುಗಳಲ್ಲಿ ಕೊಡಗಿನ ಗ್ರಾಮೀಣ ಕನ್ನಡ ಶೈಲಿ ಕಾಣಬರುತ್ತದೆ; ಕೊಡಗಿನ ಒಂದು ಸಾಂಸ್ಕೃತಿಕ ಆಚರಣೆಯಾದ 'ಮೇಲೇರಿಕೊಂಡ'(ರಾಶಿಕೊಂಡ)ದ ಶಿಲ್ಪ ಈ ಶಾಸನದಲ್ಲಿ ಎದ್ದು ಕಾಣುತ್ತದೆ. ಇಲ್ಲಿನ ಜನಪದ ಜಾಯಮಾನದ ಸುಮಾರು ಸಾವಿರ ವರ್ಷದ ಇತಿಹಾಸವನ್ನೂ ಅದು ಕೂಡಿಸಿಕೊಡುತ್ತದೆ. ಕೊಡಗಿನಲ್ಲಿ ಕೈಮಡ (ಹಿರಿಯರ ಸ್ಮಾರಕ ಕಟ್ಟಡ)ದ ವಾರ್ಷಿಕಾಚರಣೆಗಳಲ್ಲಿ ಇಂದಿಗೂ 'ಮೇಲೇರಿಕೊಂಡ'(ಮಡಿಕೇರಿ ಕನ್ನಡ ಬಾಣೆ)ದ ಆಚರಣೆ ತೆರೆಕಟ್ಟುವವರು ಅದರ ಮೇಲೆ ಬಿದ್ದು ಏಳುವುದರ ಮೂಲಕ ಸಾಂಕೇತಿಕವಾಗಿ ನಡೆಯುತ್ತದೆ. ಬೆಂಕಿಯ (ಪಂಜು ಕೋಲುಗಳ) ಮೇಲೆ ಹಾರುವ ಇನ್ನೊಂದು ಬಗೆಯಾದ ದಲಿತಕೆಂಬಟ್ಟೆಗಳಲ್ಲಿರುವ 'ತೂಡುವಮ್ಮೆ' ಹಬ್ಬದಾಚರಣೆಗೆ ಈ ಪೂರ್ವ ಪ್ರೇರಣೆಗಳು ಕಾರಣವಾಗಿರುವಂತಿದೆ. ಇನ್ನು ಕೊಡಗಿನ ಪೆಗ್ಗೂರಿನ ಕ್ರಿ.ಶ. ೯೭೮ರ ಶಾಸನದ ರೀತ್ಯಾ ರಕ್ಕಸ ಗಂಗ (ನಾಲ್ವಡಿ ರಾಚಮಲ್ಲ) ಅಲ್ಲಿ ಆಳುತ್ತಿದ್ದ. ನಾಗವರ್ಮನ ಛಂದೋಂಬುಧಿಯ ಮಂಗಳ ಶ್ಲೋಕದಲ್ಲಿ ; 'ಅರಸಂ ರಕ್ಕಸಗಂಗಂ . . . . . ಮಾಂಡಳಕರ ಮಂತ್ರಿ ಸಂಧಿವಿಗ್ರಹಿ . . . . ನಾಕಿಗನಂ". ಎಂದಿದೆ. 'ನಾಕಿ' ಎಂಬ ಬಿರುದು ರಕ್ಕಸಗಂಗನ ಆಶ್ರಿತ ಕವಿ ಯೋಧ ನಾಗವರ್ಮನಿಗೆ ಇತ್ತು; ಹೀಗಾಗಿ ಕನ್ನಡ ವಿಶಿಷ್ಟ ಛಂದಶ್ಶಾಸ್ತ್ರ ಕೃತಿ 'ಛಂದೋಂಬುಧಿ'ಯ ಕರ್ತೃ ಈ ನಾಗವರ್ಮ[೧೯] ಕೊಡಗಿನಲ್ಲಿದ್ದ; ಬಹುಶಃ ತನ್ನ ಈ ಕೃತಿಯನ್ನೂ ಅಲ್ಲಿಯೇ ರಚಿಸಿದ ಎನ್ನುವುದೂ ಇದೆ. ಇದಕ್ಕೆ ಪೋಷಕವಾಗಿ ಪೆಗ್ಗೂರಿಗೆ ತೀರ ಸನಿಹದ ಊರು (ಉಪರಾಜಧಾನಿ!) ಪಾಲ್ವರೆ–ಪಾಲುಪುರದ ಸೋಮೇಶ್ವರ ದೇವರ ಪಾಳುದೇಗುಲದ ಶ್ರೀಗೋಲದ(ಗರ್ಭಗೃಹ) ಹೊರಭಿತ್ತಿಯಲ್ಲಿ, 'ಏಳೆ' ಛಂದಸ್ಸನ್ನು ಹೋಲುವ ಪಡುಂಬರ ಜೋಗಿ ಸಿಲಾ ಗೋಲಾ . . . । ನಮಃ । ಎಂಬ ಶಾಸನೋಕ್ತ ಮೂರು ಸಾಲುಗಳ ಪದ್ಯವಿದೆ.[೨೦] ಇದು ೧೭ನೇ ಶತಮಾನದಲ್ಲಿ ಕೆತ್ತಲಾಗಿದ್ದು. ಇದಲ್ಲದೆ ಛಂದೋಂಬುಧಿಯ 'ಓ' ಓಲೆಪ್ರತಿ ಮಾದಾಪುರ ಮಠದಲ್ಲಿ, 'ಂ' ಓಲೆಪ್ರತಿ ಮಡಿಕೇರಿಯಲ್ಲಿ ಲಭ್ಯವಾಗಿದೆ. ಈ ಅಂಶಗಳಿಂದ ಕೊಡಗಿನ ಶಾಸನ ಕವಿಗಳು, ಹಸ್ತಪ್ರತಿಕಾರರು ನಾಗವರ್ಮ ವಿರಚಿತ 'ಛಂದೋಂಬುಧಿ'ಯ ಪ್ರಭಾವಕ್ಕೆ ಒಳಗಾಗಿ, ಅದನ್ನು ಅನುಸರಿಸುತ್ತಿದ್ದರು ಮತ್ತು ಅದನ್ನು ಓಲೆಪ್ರತಿ ಮಾಡಿ ಕೊಡಗಿನಲ್ಲಿ ಪ್ರಚುರ ಪಡಿಸಿದ್ದರು ಎಂದಾಗುತ್ತದೆ; ಅಂತಾಗಿ ಕನ್ನಡ ಭಾಷೆಯ ಶಾಸ್ತ್ರ ಕೃತಿಗೆ ಕೊಡಗಿನಲ್ಲಿ ದೊರೆತಿದ್ದ ಕವಿಪ್ರಿಯತೆ, ಜನಪ್ರಿಯತೆಯ ಲಕ್ಷಣವಾಗಿ ಕಾಣುತ್ತದೆ. ಅದಾಗಿ ಕರ್ನಾಟಕಕ್ಕೆ ಕೊಡಗಿನ ಕಾಣಿಕೆಯಾಗಿ ಕನ್ನಡ ಛಂದೋಂಬುಧಿಯನ್ನು ನೀಡಿದಂತಿದೆ ನಾಗವರ್ಮ. 'ತೆಂಕನಾಡಾತ' (ತೆಂಕನಾಡಿನವ) ಒಂದನೇ ನಾಗವರ್ಮ, 'ತೆಂಕನಾಡು' ಉಲುಗುಲ, ಗಣಗೂರು, ಗೋಣಿಮರೂರು, ಮಾದಾಪುರ ಶಾಸನಗಳಲ್ಲೂ ಉಕ್ತವಾಗಿದ್ದು ಕೊಡಗಿನ ದಕ್ಷಿಣ ಭಾಗದ ಪೆಗ್ಗೂರು, ಪಾಲುಪುರ ಪ್ರದೇಶವನ್ನು ಗಮನದಲ್ಲಿಸಿಕೊಂಡರೆ ಮೇಲಿನ ಅಂಶಗಳಿಗೆ ಇಂಬು ದೊರೆತಂತಾಗುತ್ತದೆ.

ಮುಳ್ಳೂರಿನವ ಎನ್ನಲಾದ ಜಿನಯತೀಂದ್ರ ಗುಣಸೇನ ಪಣ್ಡಿತನ ಹೆಸರು ಕ್ರಿ.ಶ. ೧೦೫೯ ರಿಂದ ಕೊಡಗಿನ ಒಟ್ಟು? ಶಾಸನಗಳಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೦೬೪ರ ಮುಳ್ಳೂರು ಶಾಸನದಲ್ಲಿ ಈತನನ್ನು 'ಪರಮಾರ್ಹನ್ತ್ಯಾದಿ ರತ್ನತ್ರಯ ಸಕಳ ಮಹಾಶಬ್ದ ಶಾಸ್ತ್ರಾಗಮಾದಿ ಸ್ಥಿರಷಟ್ತರ್ಕ ಪ್ರವೀಣರ್' ಎಂದು ಹೊಗಳಿದೆ. ಇವನು ವೇದಾಂತ, ಮೀಮಾಂಸೆ, ವೈಶೇಷಿಕ,

ಭಾಟ್ಟ, ಪ್ರಾಭಾಕರ ಇತ್ಯಾದಿ ಆರು ಶಾಸ್ತ್ರಗಳಲ್ಲಿ ಪಂಡಿತನಾಗಿದ್ದ ಎಂದಿದೆ. ಈತನಿಗೆ ಸಂಬಂಧಿಸಿದ ಕನ್ನಡ ಶಾಸನಗಳೆಲ್ಲ ಸಂಸ್ಕೃತ ಭೂಯಿಷ್ಠವಾಗಿವೆ. ಕೆಲವೇ ಕನ್ನಡ ಶಬ್ದಗಳನ್ನು ಹೊಂದಿವೆ. ಶ್ರವಣಬೆಳಗೊಳದ ಕ್ರಿಶ. ೧೧೨೯ರ ಚಿಕ್ಕಬೆಟ್ಟದ ಪಾರ್ಶ್ವನಾಥ ಬಸದಿಯೊಳಗಣ ಕಂಬದ ಶಾಸನವು[೨೧] 'ಶ್ರೀ ಮುಳ್ಳೂರ ವಿಡೂರ ಸಾರ ವಸುಧಾರತ್ನಂ ಸ ನಾಥೋ . . . . ಆರಾಧ್ಯೋ ಗುಣಸೇನ ಪಣ್ಡಿತಪತಿಸ್ಯ . . ಗಳಿತಗ್ಲಾನಿಂ ಗತಿಂ ಲಂಭಿತಾಃ । – ಎಂದಿದೆ. ಈ ಶಾಸನವು ಈ ಪೂರ್ವದಲ್ಲಿದ್ದ ಜೈನಮುನಿಗಳ ಹೆಸರುಗಳ ಪಟ್ಟಿಯನ್ನು ನೀಡಿ ಅವರ ಗುಣಗಳನ್ನು ವರ್ಣಿಸಿದೆ. ಈ ಪಟ್ಟಿಯಲ್ಲಿ ಗುಣಸೇನ ಪಣ್ಡಿತನ ಗುರು ಪುಷ್ಪಸೇನ ಹಾಗೂ ಮುಳ್ಳೂರಿನ ಈ ಗುಣಸೇನ ಪಣ್ಡಿತನ ಹೆಸರನ್ನೂ ಹೇಳಿದೆ. ಕೊಡಗಿನ ಮುಳ್ಳೂರಿಗೆ ಪಾರ್ಶ್ವನಾಥ ಬಸದಿ ಬಳಿಯ ಕ್ರಿಶ. ೧೦೬೪ರ ಶಾಸನದಲ್ಲಿ[೨೨] ಗುಣಸೇನ ಪಂಡಿತನಿಗೆ ನಿಸದಿಗಲ್ಲು ಹಾಕಿಸಿದ ಬಗ್ಗೆ ಹೇಳಿದೆ (ಶ್ರೀಮದ್ಗುಣ ಸೇನ ಪಣ್ಡಿತ ದೇವರ್ಮ್ಮೋಕ್ಷ ಲಕ್ಷ್ಮೀನಿವಾಸಕ್ಕಂ ನನ್ದರ್') ಮತ್ತು ಶಾಂತೀಶ್ವರ ಬಸದಿಯ ಮುಂದಿನ ಪಾದೆ ಶಾಸನದಲ್ಲಿ[೨೩] ಪುಷ್ಪಸೇನ ಮುನಿಯ ಶಿಷ್ಯನೆಂದು ಹೇಳಿದೆ. ಪಾರ್ಶ್ವನಾಥ ಬಸದಿ ಶಾಸನದಲ್ಲಿ ಪರಮಾರ್ಹನ್ತ್ಯಾದಿ ರತ್ನತ್ರಯ ಸಕಳ ಮಹಾಶಬ್ದ ಶಾಸ್ತ್ರಾಗಮಾದಿ ಸ್ಥಿರ ಷಟ್ತರ್ಕ್ಕ ಪ್ರವೀಣರ್' ಎಂದೆಲ್ಲ ವರ್ಣಿಸಲಾಗಿದೆ. ಈ ಹಿನ್ನೆಲೆಯಲ್ಲಿ ಶ್ರವಣಬೆಳಗೊಳದ 'ಮುಳ್ಳೂರು' ವಸುಧಾರತ್ನ ಗುಣಸೇನ ಪಣ್ಡಿತ' ಎನ್ನುವುದು ಕೊಡಗಿನ ಮುಳ್ಳೂರಿನ ಜೈನ ಯತೀಂದ್ರ ಗುಣಸೇನ ಪಣ್ಡಿತನಿಗೆ ಅನ್ವಯವಾದ ಸಂಗತಿ ಎಂದು (ಇದ್ದ ಅನುಮಾನಗಳನ್ನು ತರಿದು) ನಿಖರವಾಗಿ ತಿಳಿಯುತ್ತದೆ. ಜೈನ ಪರಂಪರೆಯ ದೃಷ್ಟಿಯಿಂದ, ಇವನಿಗೆ ಕನ್ನಡದಲ್ಲಿ ಸಹಜವಾದ ಪಾಂಡಿತ್ಯವಿತ್ತು. ಎಂದು ಸೂಚನೆಗೊಳ್ಳುತ್ತದೆ. ಪಂಡಿತರ ಕನ್ನಡ ಭಾಷೆಯೂ ಕೊಡಗಿನಲ್ಲಿ ಚಾಲ್ತಿಯಲ್ಲಿತ್ತು ಎಂದಾಗುತ್ತದೆ. ಕೊಂಗಾಳ್ವ ಅರಸ, ಅರಸಿಯರು, ನಂಬಿಸಂಘ ದ್ರವಿಡಗಣ(?) ಅರುಂಗಳಾಮ್ನಾಯದ ಈ ಪಣ್ಡಿತನನ್ನು ಅತ್ಯಂತ ರಾಜಗೌರವದಿಂದ ಕಂಡು ಬಸದಿಗಳನ್ನು ಕಟ್ಟಿಸಿಕೊಟ್ಟದ್ದು ಮುಳ್ಳೂರಿನ ಆರು ಶಾಸನಗಳಿಂದ (ಕೊಡಗು, ೬೮, ೬೯, ೭೧, ೭೨, ೭೮, ೭೯)ವಿದಿತವಾಗುತ್ತದೆ. ಈ ಶಾಸನಗಳಲ್ಲಿ 'ಗುಡ್ಡಿ ಮಾಡಿಸಿದ ಬಸದಿ', ಪಂಡಿತದೇವರ್ಗ್ಗೆ ಧಾರಾಪೂರ್ವ್ವಕಂ ಕೊಟ್ಟರ್', 'ರುಗ್ಮಿಣಿ ಮಹಾದೇವಿಯರ ಪ್ರತಿಷ್ಠೆ', 'ಮಾಡಿಸಿದ ಬಸದಿಗೆ ಕೊಟ್ಟ ಹಾರುವನಹಳ್ಳಿ– ಖಣ್ಡುಗಂ ೧೦ ಹುಣಿಸೆದಾಱು ಖಣ್ಡುಗಂ ೧೦, ನಿಡುತದ ಗೋಡಲು ಖಣ್ಡುಗಂ ಧಾರಾಪೂರ್ವ್ವಕಂ ಕೊಟ್ಟರ್', 'ಬೂಚಿದೇವರು ಮುಡುಪಿ', 'ನಾಗವಾವಿ ನಕರದ ಧರ್ಮ್ಮಂ' ಇತ್ಯಾದಿ ಪದ ಸಮುಚ್ಚಯಗಳು ಇಲ್ಲಿಯ ಕನ್ನಡದ ದೇಸೀತನ, ಗತ್ತು, ಪಾರಿಭಾಷಿಕತೆಯ ಸೊಗಡು ಸಹಿತವಾಗಿ ಮನಸೆಳೆಯುತ್ತವೆ.

ಕ್ರಿಶ. ೯೪೪ರ ಶಾಸನದ ಬೂಚಗ, ಬಾವಣಯ್ಯ, ೧೮ನೇ ಶತಮಾನದ ಮಾಚಗಾವುಣ್ಡ, ಮರಿಯೋಜ, ಕ್ರಿಶ. ೧೩೫೯ರ ತ್ರಿನಮೇರ ದೇವಣ್ಣ, ಗವುಡ ಬೋವ, ೧೧ನೆಯ ಶತಮಾನದ ಗಣಗೂರಿನ 'ಲಲ್ಲುಗ', ಹಾರೋಹಳ್ಳಿಯ 'ತಯಲಯ್ಯ ಜೂಟು', ಚಟ್ಟಯ್ಯ, ೧೩ನೇ ಶತಮಾನದ ಗೋಣಿ ಮುರೂರಿನವ ಗೋಪಾಲದೇವನ ದಂಡಿನ ಕಾಣಿಕೆ ಇತ್ಯಾದಿ ವ್ಯಕ್ತಿನಾಮಗಳಲ್ಲಿ ಗ್ರಾಮೀಣ ಕನ್ನಡತನ ಎದ್ದು ಕಾಣುತ್ತದೆ. ಕೊಡಗಿನ ಸಾಂಸ್ಕೃತಿಕ ನೆಲೆಗಳ ಅರಿವಿಗೂ ಅನುವು ಮಾಡಿಕೊಡುತ್ತದೆ. ಕೊಡಗಿನ ಮನೆ ಪೆದಗಳ(ಮನೆತನದ ಹೆಸರು)ದೃಷಿಯಿಂದ ತ್ರಿನಮೇರ್ ಎಂಬ ಮನೆಪೆದ ೧೪ನೇ ಶತಮಾನದ್ದು ಎಂಬ ಇತಿಹಾಸ ಗೋಚರವಾಗುತ್ತದೆ. ಗೋಪಾಲದೇವ ಚಂಗಾಳ್ವರ ಪೈಕಿಯ ನಾಯಕನಾಗಿ ಹೊಂದಿದ್ದ ದಂಡಿಗೆ ರಕ್ಷಣೆಯ ಕಾಣಿಕೆ ನೀಡುವ ಪದ್ಧತಿಯ ಸೂಚನೆ ಕಾಣುತ್ತದೆ. ಕೊಡಗಿನ ಆಳದ ಕೆಸರು ಗದ್ದೆಗಳಲ್ಲಿ 'ತೆಯ' (ಮಟ್ಟಿನ) ಹೊಡೆಯುವುದು ಕೃಷಿಕಾರ್ಯದ ಒಂದು ಮಜಲು. ಸಾಮಾನ್ಯವಾಗಿ ಪರಂಪರೆಯಿಂದ ದಲಿತಕೆಂಬಟ್ಟಿಗಳು ಕೊಡಗಿನಲ್ಲಿ ಹೆಚ್ಚಾಗಿ ಕೃಷಿಕಾರ್ಯದಲ್ಲಿ ಸೇವೆ ಮಾಡುವವರಾಗಿರುತ್ತಾರೆ. ತೆಯಲಯ್ಯ ಜೂಟು– ತೆಯ ಹೊಡೆಯುವ ದಲಿತ ಜನಾಂಗದ ನಾಯಕ 'ಜೂಟು' ಎಂಬ ಹೆಸರಿನವನಾಗಿರುವಂತಿದೆ. ಕೆಂಬಟ್ಟಿಗಳಲ್ಲಿ ಇಂಥ ಮಾದರಿ ಹೆಸರುಗಳು ಇಂದೂ ಇವೆ. ಪಾರಿಭಾಷಿಕ ಅರ್ಥವುಳ್ಳ ಕಾಯಕದ ಶಬ್ದವನ್ನು ಹೆಸರಿನ ಅಂಗವಾಗಿ ಹೊಂದಿ ಗುರುತಿಸಲು ಸಹಾಯಕವಾಗಿದೆ. ದಲಿತ ಕೆಂಬಟ್ಟಿಗಳಲ್ಲಿ 'ಚಟ್ಟಕೊಟ್ಟಡ' ಎಂಬ ಮನೆಪೆದವಿದೆ. 'ಶಾನುಬೋವ' ಎಂಬಂತೆ 'ಗೌಡಬೋವ' ಎಂಬ ಶಬ್ದವೂ ಬಹುಶಃ ಪಟೇಲಿಕೆಯನ್ನು ಸೂಚಿಸುವ ಶಬ್ದದಂತಿದೆ. 'ಚಟ್ಟಯ್ಯ' ಎಂಬ ಹೆಸರಿನ ಮೂಲ ಅದಕ್ಕಿರುವಂತಿದೆ.

ಕ್ರಿಶ. ೧೦೦೧ರ ಮಡಿಕೇರಿ ಶಾಸನವು[೨೪] 'ಗಣಗೂರ ಬಿಹಗಾಮುಣ್ಡನ ಮಗ ಹಜ್ಜಮಸೆಟ್ಟಿ . . ನಾಡಕೂಡಲೂರುಮಂ ಭುಜಬಲದಿನ್ದ ಪಡೆದು ಮೊದಲಾವೇದಿಯಂ ಮಿನ್ದು ರಾಮೇಶ್ವರ ಮರ್ಚಿ . . .' ಎಂದಿದೆ. ಇಲ್ಲಿ ಹಳಗನ್ನಡದ ದಟ್ಟತೆ ಹಾಗೂ

ಶಕ್ತಿಯುತ ಪದಪುಂಜಗಳ ಶೈಲಿ ಎದ್ದು ಕಾಣುತ್ತದೆ; ವೀರಾವರಣದ ಜೊತೆಗೆ ಪೌರಾಣಿಕ ಪಾವಿತ್ರ್ಯದ ಸಾಂಸ್ಕೃತಿಕ ಆಚರಣೆಯನ್ನೂ ತಿಳಿಸುತ್ತದೆ. ಸಂಸ್ಕೃತ ಪುರಾಣದ ಕಾವೇರಿಗೆ ಕನ್ನಡದ ದೀಕ್ಷೆ ಕೊಟ್ಟು ಮೊಟ್ಟ ಮೊದಲಿಗೆ ಮೊದಲ್ಕಾವೇರಿ = ಮೊದಲ್ ಕಾವೇರಿ (ತಲಕಾವೇರಿ) ಎಂಬ ಹೆಸರನ್ನು ಒತ್ತಿ ಹೇಳಿದಂತಿದೆ.

ಕ್ರಿ.ಶ. ೧೦೦೪ರ ವನಸೋಗೆ ಯುದ್ಧದಲ್ಲಿ ಚೋಳರು, ಗಂಗರನ್ನು ಸೋಲಿಸಿದರು. ಕೊಡಗಿನ ಕೊಂಗಾಳ್ವರು ಚೋಳರ ಪರವಾಗಿ ನಿಂತರು. ಗಂಗರ ಪರವಾಗಿದ್ದ ಕೊಡಗಿನ ಚಂಗಾಳ್ವರು ಸೋತರು. ಹೀಗಾಗಿ ಕೊಂಗಾಳ್ವರ ಮನಿಜನಿಗೆ ಮಾಲಪ್ಪಿ(ಮಾಲಂಬಿ)ಯಲ್ಲಿ ಶಾಸನೋಕ್ತವಾಗಿ 'ಕ್ಷತ್ರಿಯ ಶಿಖಾಮಣಿ ಕೊಂಗಾಳ್ವ' ಎಂದು ಪಟ್ಟವಾಯಿತು. ಚಂಗಾಳ್ವರು ಚೋಳರ ಮಾಂಡಲಿಕರಾದರು. ಈ ಕಾರಣ ಆ ಕಾಲದ ಶಾಸನಗಳಲ್ಲಿ[೨೫] (ಮಾಲಂಬಿ, ಮೋರಿಕಲ್ಲು) 'ಪಞ್ಚವನ್ ಮಾರಾಯ' ಕಣ್ಣವಂಗಲ, ಆದಿತ್ಯ ಗಾಮುಣ್ಡ, ಕಟನಿ 'ಆಯಿಮಣ್ಡಿಗ', ಟನೆಜೆಲುಗಟನಿ' ಇತ್ಯಾದಿ ತಮಿಳು ಪ್ರಭಾವಿತ ಶಬ್ದಗಳೂ ಕಾಣಬರುತ್ತವೆ. ಉತ್ತರ ಕೊಡಗಿಗೆ ಬಹುತೇಕ ಸೀಮಿತಗೊಂಡಿದ್ದ ಕೊಂಗಾಳ್ವರ ಆಡಳಿತ ಭಾಗದ ದೊಡ್ಡ ಕಣಗಾಲ, ಮುಳ್ಳೂರು, ನಂದಿಗುಂದ ಶಾಸನಗಳಲ್ಲಿ[೨೬], ಸ್ವಸ್ತಿವಾಚನದ ಆರಂಭಕಾಲ ಹಾಗೂ ಅಂತ್ಯದ ಫಲಶ್ರುತಿ ಸಾಲುಗಳನ್ನು ಬಿಟ್ಟರೆ, ಉಳಿದ ಭಾಗದಲ್ಲಿ ಕನ್ನಡ ಭಾಷೆಯ ಶಬ್ದಗಳು ವಿಪುಲವಾಗಿ ಮೊತ್ತಗೊಂಡಿವೆ. ಸರಳವಾಗಿವೆ. ಅಂದಿನ ಇಲ್ಲಿಯ ಕನ್ನಡವು, ನಡುಗನ್ನಡಕ್ಕೆ ಸರಳ ಹಾದಿ ಮಾಡಿಕೊಟ್ಟಂತೆ ತೋರುತ್ತದೆ. ಚೌಡ್ಲುವಿನ ಕ್ರಿ.ಶ. ೧೦೪೬ರ ಹಾಗೂ ಕುಸಬೂರಿನ ಕ್ರಿ.ಶ. ೧೧೪೭ರ ಹೊಸ ಶಾಸನಗಳ ಭಾಷೆಯು ಇದಕ್ಕೆ ಪೋಷಣೆ ನೀಡುವಂತಿವೆ. ಕನ್ನಡ ಭಾಷೆಯ ಗತ್ತನ್ನೂ ತೋರುವಂತಿವೆ.

ಹಾನುಗಲ್ಲು ಕದಂಬ ಶಾಖೆಯಾದ ಕೊಡಗಿನ ಕದಂಬರ ದುದ್ದರಸನ ಕ್ರಿ.ಶ. ೧೧೯೫ರ ಯಡೂರು ಶಾಸನದಲ್ಲಿ[೨೭] ಹಳಗನ್ನಡದ ಶಕ್ತಿಯುತ ವೀರಶೈಲಿ ಹೆಪ್ಪುಗಟ್ಟಿರುವ ಸಾಲುಗಳಿವೆ. ಕೆಲಮಟ್ಟಿಗೆ ಸಂಸ್ಕೃತದ ಅಪಭ್ರಂಶದ ಶಬ್ದಗಳೂ ನುಸುಳಿವೆ. 'ಚಂಕೊಣ್ಡು ಕೋಟೆಗಳಂ', ವೈರಿಗಜಕೇಸರಿ, ಬಲಿಯರಭೀಮ, ಪರಮಣ್ಡಳ ಸೂಱೆಕಾರಂ, 'ರಿಪುಹ್ರಿದೆಯ ಕರ್ಕಸಂ', ಅಯ್ವತ್ತು ತೆಳಕರುಂ, ಎಕ್ಕಟಿಗರುಂ ನಾಲುವತ್ತಯ್ದು ಕುಳಪುಟ್ಟಿಗೆಗಾಯದಾಳುಮನೇಕ ಪ್ರಜೆ', 'ತಳವಗ್ಗಫಮುಂ', 'ತೋಜೆಗಳ್ದೆಯಲ್ಲಿ ಯಮನೆತ್ತಸಿ; ಸಂಹಥನಾಡು, ಇತ್ಯಾದಿ ಶಬ್ದಗಳು, ಗದ್ಯದ ಗಂಭೀರವಲಯ, ಭಾಷೆಯ ಕನ್ನಡ ಸೊಗಡು, ಹಾಗೂ ಗತ್ತು, ದೇಸೀ ಆವರಣವನ್ನು ಕಟ್ಟಿಕೊಟ್ಟಿವೆ. ವೀರಾವತಾರಕ್ಕೂ ಇಂಬುಕೊಟ್ಟಿದೆ. ಇಂಥ ಶೌರ್ಯವಂತ ದುದ್ದರಸನ ಗುರುಭಕ್ತಿ, ದೇವಭಕ್ತಿಯ ವಿನಮ್ರತೆಯು 'ಅಯ್ಯನಂಕಕಾರ ಶಿವಪಾದ ಸೇಖರಂ' ಎಂಬ ಪದಗಳಲ್ಲಿ ಬಿಂಬಿತವಾಗಿದೆ. ಆ ಕಾಲದ ಉತ್ತರ ಕೊಡಗಿನ ಜನರ ಬದುಕಿನ ಚಿತ್ರಣವನ್ನು ಈ ಶಾಸನ ನೀಡುತ್ತದೆ. 'ಅಯ್ಯನಂಕಕಾರ' ಶಬ್ದದಲ್ಲಿ, 'ಅಂಕಕಾರ'ವು ಯೋಧತನದ ಸಮೀಪವರ್ತಿ ಶಬ್ದವಾಗಿರಬಹುದು. ಆದರೆ 'ಅಯ್ಯ' ಎಂದರೆ ಗುರು ಎಂಬ ಅರ್ಥ ಧ್ವನಿಸುವಲ್ಲಿ, ಗುರುವಿನ ವೀರಸೇವಕ – ಭಕ್ತ ಎಂಬ ಅರ್ಥವನ್ನು ಹೆಕ್ಕಬೇಕಾಗುತ್ತದೆ. ಇದಕ್ಕೆ ಪೋಷಕವಾಗಿ ಯಡೂರಿನ ಕಣ್ಣಳತೆಗೆ ಕಾಣುವಂತಹ ಅಬ್ಬಿಮಠದ ನೆಲೆಯೂ ಇದ್ದು, ಚಂಗಾಳ್ವರ ಕಾಲದಲ್ಲಿಯೂ ಶಾಸನೋಕ್ತವಾಗಿ ಮಠದ ಆಸ್ತಿಯಾದುದು ತಿಳಿಯುತ್ತದೆ.

ಇದೇ ಯಡೂರು ಶಾಸನ ಕಾಲದ ಸುಮಾರಿನ (ಕ್ರಿ.ಶ. ೧೧೯೦–೯೫) ದೊಡ್ಡಮಳತೆಯ ಹೊನ್ನಮ್ಮ ಕೆರೆ ಬಳಿ ದೊರೆತ ಅಪೂರ್ಣ ಹೊಸ ಶಾಸನದಲ್ಲಿ[೨೮] ದುದ್ದನಾಯಕ ಎಂಬ ವೀರನಿಗೆ ಗೋವರಸ ಕಲ್ಲನಿರಿಸಿದ ಸಂಗತಿ ಇದೆ. ಆ ಸಂದರ್ಭ ಬರುವ 'ಪೆದ್ದೇವರ' ಬಿವೋಗಿಹ ಎಂಬ ಶಬ್ದ ಗಮನ ಸೆಳೆಯುತ್ತದೆ. ಪೆದ್ದೇವರು > ಹೆದ್ದೇವರು ಅರ್ಥಾತ್ ಹುತ್ತದ ದೇವರು ಕೊಡಗಿನಲ್ಲಿ ದೇವರಕಾಡಿಗೆ ಮೀಸಲಾದದೇವರು. 'ಬೀವು'(ಬೀರ್ವು) ಶಬ್ದಕ್ಕೆ ನಿಘಂಟುವಿನಲ್ಲಿ ಕಟ್ಟುಕಟ್ಟಳೆ, ಪರ್ವ ಮಾಡುವಲ್ಲಿ ಉಪವಾಸ ಆಚರಣೆ ಎಂಬ ಅರ್ಥದಲ್ಲಿ ಪ್ರಯೋಗವಿದೆ. ಇಂಥ ಶುದ್ಧಕಟ್ಟಳೆ ಹೆದ್ದೇವರ ಪೂಜೆಯಲ್ಲಿ ಸಾಮಾನ್ಯ. ಅಂದರೆ ಪರ(ಪರ್ವ) ಮಾಡುವ ಹೆದ್ದೇವರ ಕಾಡಿನಲ್ಲಿ ಬಹುಶಃ ದೇವಾಚಾರಗಳ ನಿರ್ವಹಣೆಕಾರ ಅರ್ಥಾತ್ 'ವಡೇಕಾರ', ಕಾಳಗದಲ್ಲಿ ಮಡಿದ. ಅದೇ ಕಾರಣ ಪರೋಕ್ಷವಿನಯದಲ್ಲಿ ವೀರವನವನ್ನಾಗಿಸಿ ಗೋವರನ ವೀರಗಲ್ಲು ಹಾಕಿಸಿದನೆನ್ನಬೇಕು. ಅಂತಾಗಿ ಈ ಹೊಸ ಶಾಸನದ ಎರಡು ಕನ್ನಡ ಶಬ್ದಗಳು ಹಳಗನ್ನಡದ ಸೊಗಡನ್ನು ಉಳಿಸಿಕೊಂಡು ಕೊಡಗಿನ ಸಾಂಸ್ಕೃತಿಕ ರೂಢಿಯನ್ನು ದಟ್ಟವಾಗಿ ಪರಿಚಯಿಸಲು ಅನುಕೂಲಿಸಿವೆ.

೧೧ನೆಯ ಶತಮಾನದಲ್ಲಿ ಕೊಡಗಿನ ಭಾಗವಾಗಿದ್ದ ಮಂಜರಾಬಾದ್ (ಸಕಲೇಶಪುರ) ಪ್ರದೇಶದ ಹಾನಗಲ್ ಕದಂಬ ವಂಶಿಕ 'ದಯಾಸಿಂಹ' (ಕ್ರಿ.ಶ. ೧೧೯೩, ಮಂಜರಾಬಾದ್ ಶಾಸನೋಕ್ತ) ಕದಂಬಕುಲ ಸೂರ್ಯನೆನಿಸಿದ್ದ. ಇವನು ಕೊಡಗಿನ ಏಳು ಸಾವಿರ ಸೀಮೆಯವನಾಗಿದ್ದ. (ಸೋಮವಾರಪೇಟೆ, ಶನಿವಾರ ಸಂತೆ ಪ್ರದೇಶ) ಇವನ ಹೆಸರು ಕವಿಚರಿತೆಯಲ್ಲಿಲ್ಲ. ಆದರೆ ಸ್ಥಳೀಯ ಸಾಹಿತ್ಯ ಚರಿತ್ರೆಯಲ್ಲಿ ಇವನು ಕವಿ, ಕಾವ್ಯ, ವಿಮರ್ಶಕ, ವೈಯಾಕರಣಿ, ಚಿತ್ರಗಾರ, ಸಂಗೀತಜ್ಞ ಆಗಿದ್ದನೆಂದಿದೆ.[೯] ಇವನು ತರ್ಕ ಹಾಗೂ ೬೪ ವಿದ್ಯೆಗಳ ಪೈಕಿ ಅನೇಕ ವಿದ್ಯೆಗಳಲ್ಲಿ ಪರಿಣತ ಎಂದು ಮೇಲ್ಸೂಚಿತ ಶಾಸನದಲ್ಲಿದೆ. ಅದಾಗಿ ಇವನು ಕನ್ನಡ ಭಾಷಿಕ ಕೃತಿಕಾರನೂ ಆಗಿದ್ದಿರಬೇಕು. ಕ್ರಿ.ಶ. ೧೧೯೫ರ ಹಳೇ ಬೇಲೂರು ಶಾಸನದಲ್ಲಿ[೧೦] 'ಭಾರತಕಥೆಗಿಂತ ಮಿಗಿಲು ದಯಾಸಿಂಹ ನೃಪಾಳ ಚರಿತ್ರೆ' ಎಂದಿದೆ. 'ದೈಆಸಿಂಹನೃಪಾಳ ಚರಿತ್ರೆ'ಯು ಬಹುಶಃ ಅವನಿಂದ ರಚಿತವಾದುದೋ ಅಥವಾ ಅವನ ಕುರಿತ ಸಾಹಿತ್ಯ ಕೃತಿಯೋ ಆಗಿರುವಂತಿದೆ.

ಕ್ರಿ.ಶ. ೧೧೨೦ರ ಮೌಕ್ತಿಕ ಕವಿಯೂ ಏಳು ಸಾವಿರ ಸೀಮೆಯವನು. ವೀರಕೊಂಗಾಳ್ವನ ಆಶ್ರಿತ ಕವಿಯಾಗಿದ್ದ ಇವನು ೯ ವೃತ್ತಗಳುಳ್ಳ 'ಚಂದ್ರನಾಥಾಷ್ಟಕ' ಎಂಬ ಕನ್ನಡ ಕಾವ್ಯವನ್ನು ಬರೆದಿದ್ದಾನೆ. ಅದರ ಪದ್ಯವೊಂದರ ಸಾಲು 'ಕುಮತೋಗ್ರಗ್ರೀಷ್ಮ ತಪ್ತಂಗಿದಿ ಹಿಮಕರ ಬಿಂಬಂ ವರಸ್ತೋತ್ರಪವಿತ್ರ . . ನಿನ್ನಾ ಕೃಯಿದಮೃತ ಬೀಜಾಕ್ಷರಂ ಚಂದ್ರನಾಥಾ' ಎಂದಿದೆ;[೧೧] ಅಂದಿನ ಕೊಡಗಿನ ಕನ್ನಡ ಕವಿಗಳ ಕನ್ನಡ ಶಬ್ದ ಪ್ರಯೋಗಗಳ ಗತ್ತು, ಗದ್ಯಲಯ ಗಾಂಭೀರ್ಯ ಕುರಿತಾದ ಸಾಕ್ಷ್ಯವಿದೆನ್ನುವಂತಿದೆ.

ಕೊಡಗಿನಲ್ಲಿ ಹೊಯ್ಸಳರ ಕಾಲದ ನಾಲ್ಕು ಶಾಸನಗಳು ಮಾತ್ರಲಭ್ಯವಿದ್ದು, 'ಗಂಡ', 'ಮಲ್ಲ' ಇತ್ಯಾದಿ ಕೆಲವು ಗಂಡು ಶಬ್ದಗಳು ಕಾಣಬಂದಿವೆ. ಕಳೆದ ವರ್ಷ ಮಾದ್ರ ಗ್ರಾಮದಲ್ಲಿ ಕ್ರಿ.ಶ. ೧೧೨೮, ಕ್ರಿ.ಶ. ೧೧೩೩ ಮತ್ತು ಕ್ರಿ.ಶ. ೧೧೭೯ರ ಮೂರು ಹೊಸ ಶಾಸನಗಳು ನನಗೆ ಲಭ್ಯವಾದುವು. ಅವು ಇಮ್ಮಡಿ ಬಲ್ಲಾಳ ಮತ್ತು ಮೂರನೆ ನರಸಿಂಹನ ಕಾಲದ ವೀರಗಲ್ಲ ಶಾಸನಗಳು.[೨] ಈ ಶಾಸನಗಳಲ್ಲಿ ಬರುವ 'ಕೋಟೆ ಏದಿ ಬಂದು ಘಡ ಬೆಂಕಿಪಹದಟಿ' ಹಟುಟಿಯಲಿ ಕಾದು ಸಗ್ಗಮೇರಿದ', ಬಸಿತನಕಿಳೆಳ್ಳ ಹರವೀರ ಚೂರದಯ್ಯ ಗನಪುರಿ ರಾಜ್ಯ 'ಭಗವಿತ್ಯಾ ಮದ್ರೆ' 'ಪರಬುಧ ಪವಾಡ ಕಾಳಗದೊಳು', 'ಬಿಂಮಕ್ಷಯ ರಾಜ್ಯ', 'ಯರಗಟಿ' 'ಗಜವವಾರಂಚಿರಾಮ' ಇತ್ಯಾದಿ ಶಬ್ದಗಳು ಇದ್ದು, ಹೆಸರಿನಲ್ಲಿ ಕ್ರಿಯೆಯಲ್ಲಿ ಕನ್ನಡ ಭಾಷೆಯ ಗಂಡುಶೈಲಿಯನ್ನು, ತೋರುವಂತಿವೆ. ಜಾನಪದ ಸಂಕೇತಗಳನ್ನೂ ತೋರುತ್ತವೆ. ಸಾಂಸ್ಕೃತಿಕ ಆಚರಣೆಯನ್ನು ಸೂಚಿಸುತ್ತವೆ; ಕುಸಬೂರು ಗದ್ದೆ ಏರಿ ಬಳಿಯ ಹೊಸ ಶಾಸನದಲ್ಲಿ[೧೩] 'ರಳೆ ಕೋಲಾಹಲ', 'ಕಟಿನಿಯ ಬೂರ', 'ರಣಾವಗ್ಗೇಳ', 'ಯರೆಫಯ' ಇತ್ಯಾದಿ ಶಬ್ದಗಳು ಸಾಹಿತ್ಯಕ ಸ್ಪರ್ಶದೊಡನೆ ಕನ್ನಡದ ಸೊಬಗನ್ನು ತೋರುವಂತಿವೆ. ಸ್ಥಳನಾಮದ ವೈವಿಧ್ಯವನ್ನು ಸೂಚಿಸುವಂತಿವೆ. ಪ್ರಸಾದ ಸಂವಹನವನ್ನು ಸೂಚಿಸುವಂತಿವೆ.

೧೩-೧೪ನೆಯ ಶತಮಾನದಲ್ಲಿ ಹಳಗನ್ನಡವು ನಡುಗನ್ನಡಕ್ಕೆ ತಿರುಗಿ ಲಲಿತ ಶೈಲಿಯೊಡನೆ ದೇಸಿಯ ಸೊಬಗು, ಸಂಯುಕ್ತ ವ್ಯಂಜನಗಳ ವಿರಳತೆ, ವ್ಯಂಜನಾಂತಗಳು ಸ್ವರಾಂತಗಳಾಗುವಿಕೆ, ತಪ್ಪು ಪ್ರಯೋಗಗಳಿಗೆ ಕಚ್ಚು ಹಾಕಿದ ಸಂಗತಿಗಳು ಕಾಣಬರುತ್ತದೆ. ಕೊಡಗಿನ ಕನ್ನಡ ಶಾಸನಗಳು ಹಾಗೂ ಸಾಹಿತ್ಯ ಕೃತಿಗಳು ಇದರಿಂದ ಹೊರತಾಗಿಲ್ಲ.

೧೩ನೆಯ ಶತಮಾನದ ಹೆರೂರು ಶಾಸನದ 'ಆಲಪಯಿದಂ ಚಂಗಾಳುವ ಅಲಂಕರಿಸಿದ ಮುನಿವರಾದಿತ್ಯಂ . . ' ನಂತಹ ಸಾಲುಗಳಲ್ಲಿ ಒಂದು ರೀತಿ ಲಯವಂತಿಕೆಯ ಶಬ್ದಪುಂಜಗಳು ಕಾಣುತ್ತವೆ; ಉಲುಗುಲಿ ಶಾಸನದ 'ಚವುಟ ವಿಭಾಡ, ಛಲದಂಕರಾಮ . . ಮರೆವಕ್ಕಸ ಕಾವಂ . . ಯಳ್ತಫಳೆಯ ತುರು ಇಡಿಸಿದಲ್ಲಿ' ಎಂಬ ಸಾಲುಗಳಲ್ಲಿ ಕನ್ನಡ ಭಾಷಿಕ ವೀರಗುಣಿತ ಕಾಣುತ್ತದೆ. ಇದಲ್ಲದೆ ಕೊಡಗಿನ ಸಾಂಸ್ಕೃತಿಕ ಜೀವನದ ಕನ್ನಡ ಶಬ್ದಗಳಾಗಿ ದೇವಿಕೆರೆ ಕೆಳಗೆ ಗದೆ, ಮಾವಿನ ಮಕ್ಕಿ, ವಚವರ, ಗೌಡಬೋವ, ತ್ರಿನಮೇರ (ಮನೆಪೆದ-ಮನೆತನದ ಹೆಸರು), ಇತ್ಯಾದಿ ಪದ-ಪದಸಮುಚ್ಚಯಗಳು ಕಾಣಬರುತ್ತವೆ. ಚೌಡ್ಲು ಹಾಗೂ ಗಣಗೂರು ಶಾಸನಗಳು ಹೆಣ್ಣು ಮಕ್ಕಳಿಗೆ ಆಸ್ತಿಯ ಹಕ್ಕಿನ ಬಗ್ಗೆ ನಿಸ್ಸಂದಿಗ್ಧ ಕನ್ನಡ ಶಬ್ದಗಳಲ್ಲಿ ತಿಳಿಸುತ್ತವೆ.

ಕ್ರಿ.ಶ. ೧೩೭೧ರ ಪಾಲೂರು- ಭಾಗಮಂಡಲ ಶಾಸನಗಳು ಸಂಸ್ಕೃತ, ತಮಿಳು, ಮಲೆಯಾಳ, ವಟ್ಟೆಳುತ್ತುವಿನ ಸಂಯುಕ್ತ ಲಿಪಿ ಭಾಷಾ ಶಾಸನವಾಗಿದ್ದರೂ 'ನೋಡು', 'ಪೂವಿಸ್ಥಾನ', 'ಮ(ಮು)ಯ್ಯಾಳು' ಎಂಬ ಕನ್ನಡ ಶಬ್ದಗಳನ್ನು

ಹೊಂದಿವೆ. 'ಅಯಾರಿ', 'ಎಳುತ್ತು' ಎಂಬ ಕೊಡುವ ಭಾಷಾ ಶಬ್ದಗಳನ್ನು ಹೊಂದಿವೆ. ೧೪ನೇ ಶತಮಾನಕ್ಕೆ ಸೇರುವ ಭಾಗಮಂಡಲದ ಈ ಶಾಸನದಲ್ಲಿ 'ಕಳಂಜು' (ಚಿನ್ನದ ಹಣ) ಎಂಬ ಹಣ ಸೂಚಕ ಶಬ್ದವೂ ಇದೆ. ೧೯೬೮ರ ಮುಳ್ಳೂರು ಶಾಸನದ ಬೊಪ್ಪೆಗೌಡಿಯ ಮಗ ಮಲ್ಲಯ್ಯನಿಗೆ ವೀರ ಕಾಳಗದಲ್ಲಿ ಮಡಿದಾಗ ಲಿಪಿವಾಹಿತ ವೀರನಿಗೆ ಹಾಕುವಂತೆ 'ವೀರಸೇಸಿ' ಹಾಕಿದ್ದು ವಿಶೇಷ ಸಾಂಸ್ಕೃತಿಕ ಆಚರಣೆ.

ಕ್ರಿ.ಶ. ಸು. ೧೪೬೪ರ ಅಬ್ಬಿಮಠದ ಮಲ್ಲಿಕಾರ್ಜುನ ಗುಡಿಯ ಹೊಸ ಶಾಸನವು[೩೪] ಸಿದ್ಧಾದಾಯ, **ಪೊಂಮ್ಮುಕ ಸಾಗುವಂತಾಗಿ**, ಜಯದಿ ಕರದವನಜಸಿಯ, ಶ್ರೀದಯಭುಜಪಾದ ದೇವರಿಗೆ ಕೊಟ್ಟ ಗ್ರಾಮದ ನಾಟ್, ಆರೊಬರಳಪಿದರೆ ಮೃತಂಗಿ ಸಾಗು, ಇತ್ಯಾದಿ ಶಬ್ದ ಪುಂಜಗಳ ಮೂಲಕ ಇಡೀ ಶಾಸನದ ಶರೀರವನ್ನು ಕನ್ನಡದ ವಾತಾವರಣ ಆವರಿಸಿದೆ; ಕನ್ನಡ ಪಾರಿಭಾಷಿಕ ಶಬ್ದದ ಮೂಲಕ ಸಾಂಸ್ಕೃತಿಕ ಆಚರಣೆಯನ್ನೂ ದಾಖಲಿಸಿದೆ.

ಕ್ರಿ.ಶ. ೧೫೪೪ರ ಅಂಜನಗಿರಿ ಶಾಸನದಲ್ಲಿ 'ಸಮಸ್ತ ಹಲರು ಕಂನ್ನಡಿಗ ಹಲರು' ಎಂದು ಕನ್ನಡ ಭಾಷಿಕ ಕೊಡಗಿನ ವರ್ತಕರನ್ನೂ (ವಲಸೆಯವರು!) ಸೂಚಿಸುವಂತಿದೆ. ಆದರೆ ಆ ಮುನ್ನವೆ ಬಹುಪ್ರಾಚೀನದಲ್ಲಿಯೆ ಕೊಡಗಿನ ಕನ್ನಡ ಭಾಷಿಕರ ಅಸ್ತಿತ್ವವನ್ನು ಕ್ರಿಸ್ತಶಕದ ಆರಂಭದಲ್ಲಿಯೇ ಬೇರೆಡೆಯ ಹಾಗು ಎಡಕಲ್ಲುಗುಡ್ಡದ ಶಾಸನಗಳು ಸೂಚಿಸುತ್ತವೆ. ಕನ್ನಡ ಶಾಸನಗಳನ್ನು ಬರೆದ ಸದೋಜ ಟೂವಯ್ಯ(ಪೂವಯ್ಯ!), ಬೊಮ್ಮದೇವ, ಚನ್ದ ನನ್ದಿಮಯ್ಯ ಜಿನಯ್ಯ ಗಂಗೋಜ, ಸೇಬೋವ ಸಾತಯ್ಯ, ಬೂಚಣ, ಹೆಗ್ಗಡೆ ನಾಕಣ, ಪಕಣ್ಣಲ (ಭಾಗಮಂಡಲ) ಅಯಾರಿ, ಅರ್ಜುನ ಬೊಮರಸೈಯ, ಶಂಭಯ್ಯ ಮುಂತಾದವರಲ್ಲಿ ಕನ್ನಡಿಗರ ಹೆಸರೇ ಹೆಚ್ಚಾಗಿರುವುದು ಸಹಜ; ಆದರೂ ಕೇರಳದ ಮತ್ತು ಕೊಡವ ಕವಿಗಳೂ ಕನ್ನಡ ಶಾಸನ ಬರೆದ ಬಗ್ಗೆ ಒಂದೆರಡು ಹೆಸರುಗಳು (ಬೂವಯ್ಯ-ಪೂವಯ್ಯ!) ಇರುವಂತಿದೆ. ಕೊಡಗಿನ ಪ್ರಕಟಿತ ೧೯೯ ಶಾಸನಗಳು ಹಾಗೂ ಅಪ್ರಕಟಿತ (ಹೊಸ) ಸುಮಾರು ೧೫ ಶಾಸನಗಳಿಗೂ ಮೀರಿಸುವ ಶಾಸನ ಸಂಖ್ಯೆಯಲ್ಲಿ ಮೂರನ್ನೂ ಬಿಟ್ಟರೆ ಎಲ್ಲವು ಕನ್ನಡದಲ್ಲಿದ್ದು ಕರ್ಣಾಟಕದ ನೆಲವಾಗಿ ಕೊಡಗು ಶೋಭಿಸಿದೆ. ಆಡಳಿತ ಭಾಷೆಯಾಗಿ ಕನಿಷ್ಠ ಕನ್ನಡ ಸುಮಾರು ೧೬೦೦ ವರ್ಷಗಳಿಂದ ಈ ಪ್ರದೇಶದಲ್ಲಿದೆ ಎಂಬುದಕ್ಕೆ ಈ ಶಾಸನಗಳೇ ಸಾಕ್ಷಿ ಆಗಿವೆ.

ನಡುಗನ್ನಡ ಸಾಹಿತ್ಯದ ದೃಷ್ಟಿಯಿಂದ ೧೬ನೆಯ ಶತಮಾನದ ಚಂಗಾಳ್ವರ ನಂಜುಂಡರಾಜನ ಮಂತ್ರಿ ದೇವಪ್ಪ ಕವಿ ತನ್ನ ರಾಮವಿಜಯ ಕಾವ್ಯದಲ್ಲಿ ಕಾವೇರಿಯನ್ನು 'ಬಳಸಿ ಪಡಿವ ಪನ್ನೀರ ಕಾಲುವೆ ಬಲ್ಗೆರೆ' ಎಂದು ಸುಲಲಿತ ಕನ್ನಡದಲ್ಲಿ ವರ್ಣಿಸಿದ್ದಾನೆ. ಹೀಗೆಯೇ ಆ ಸಚಿವ ವಂಶದ ಮೂರನೆಯ ಮಂಗರಸ ಕವಿ ಶ್ರೀಪಾಲ ಚರಿತ್ರೆಯಲ್ಲಿ ಕೊಡಗಿನ ಬಲ್ನಾಡುಗಳನ್ನು ವರ್ಣಿಸಿರುವುದು. ಕನ್ನಡದಲ್ಲಿ ಮೂಡಿರುವ ಮನೋಹರ ಪ್ರಕೃತಿ ವರ್ಣನೆ ಆಗಿದೆ. ನಂಜುಂಡ ಕವಿ ತನ್ನ ರಾಮನಾಥ ಚರಿತೆಯಲ್ಲಿ ಕೊಡಗಿನ ಭಟರ ಶೌರ್ಯವನ್ನು 'ಕೊಡಗು ಮಲೆಯಾಳ ತಿಗುಳ ದೇಶಂಗಳ ಕೂರಾಳುಗಳು . . ' ಎಂದು ವರ್ಣಿಸಿದ್ದಾನೆ. ಈ ವರ್ಣನೆಯಿಂದ ಆ ಕಾಲದ ಕೊಡಗು 'ರೆಜಿಮೆಂಟ'ನ ಖ್ಯಾತಿ ತಿಳಿಯುವಂತಿದೆ. ಕ್ರಿ.ಶ. ೧೫೯೮ರ ಮಂಗರಾಜನ ನಿಘಂಟುವಿನಲ್ಲಿ ಶಶಿಪುರಾಧಿಪತಿ (=ಪಾಲುಪುರಾಧಿಪತಿ) ಸೋಮೇಶ್ವರನಿಗೆ ಅನ್ವಯಿಸಿ ಹೇಳಿದೆ. ಅಂತಾಗಿ ಅವನು ಹಲವು ಕಾಲ ಪಾಲ್ಪರೆಯಲ್ಲಿದ್ದು ಕನ್ನಡ ನಿಘಂಟು [illegible]ನೆಯಲ್ಲಿ ತೊಡಗಿದ್ದಿರಬೇಕು. ಅಂತಾಗಿ ಅವನ ನಿಘಂಟಿನ ಜಾತಿವರ್ಗದ ಪದ್ಯ ೪ರಲ್ಲಿ ' . . ಜಾತಿಗಳು ಮ್ಲೇಚ್ಛರೆನೆ ಕೊಡವ ಕೊಡಗರು ಮೃಗಲುಬ್ಧಕಂ ವ್ಯಾಧನಕ್ಕುಂ' ಎಂದಿದೆ. ಆ ಕಾಲದ ಕನ್ನಡದ ಗ್ರಾಂಥಿಕ ಶೈಲಿಯನ್ನು ಸೂಚಿಸಿದೆ. ಜೊತೆಗೆ ಅದರಲ್ಲಿ ಅರಾಬಿಕ್ ಮತ್ತು ಪರ್ಷಿಯನ್ ಶಬ್ದಗಳಾದ ಕಿಲ್ಲೆ, ಕಂದುಕ, ಪವುಜು, ಬಂದೂಕು, ಸಿಪಾಯಿ, ತೋಪು ಇತ್ಯಾದಿಗಳು ಕನ್ನಡದ ದೈನಂದಿನ ಬಳಕೆಯಲ್ಲಿ ಮಿಳಿತವಾಗಿಬಿಟ್ಟಿದೆ. ಈ ಪದ್ಯದಲ್ಲಿ 'ಮ್ಲೇಚ್ಛ' ಶಬ್ದದ ಅರ್ಥವನ್ನು ಬೇರೆಡೆಯಿಂದ ಬಂದ 'ಪರನಾಡಿನವ' ಎಂದೆಲ್ಲ ಹೇಳುವುದುಂಟು; ವಿದೇಶೀಯ ಎಂದೂ ಹೇಳುವುದುಂಟು.

ಹಾವೇರಿ ಅರಸರು (೧೬-೧೯ನೇ ಶತಮಾನ) ಮತ್ತು ಬೇಲೂರು ನಾಯಕರ ಇಲ್ಲಿಯ ಅಚ್ಚುಕಟ್ಟಿನ, ಶಿಸ್ತುಬದ್ಧ ಕನ್ನಡ ಶಾಸನಗಳಲ್ಲಿ ಕನ್ನಡ ಶಬ್ದಗಳು (೧೮ನೇ ಶತಮಾನದ ಮೂದರವಳ್ಳಿ ಸಂಸ್ಕೃತ ಭಾಷಾ ಶಾಸನ ಹೊರತು ಪಡಿಸಿ) ತುಂಬಿ ಬಂದಿವೆ. ಗ್ರಾಮೀಣ ಆಡುನುಡಿಯ ಶೈಲಿಯ ಶಬ್ದಗಳೂ ಕಂಡು ಬರುತ್ತವೆ. ಕೊಡವ ಭಾಷೆಯ ಬಳಕೆಯ ಕೆಲವು

ಪದಗಳು ತಕ್ಕಮಿಕಸ್ತರು, ಪ್ರಬಾಳೆ, ವತ್ತಕ(ವತ್ತಾಕ)ಹಾಗೂ ಮಣವಟ್ಟಿ, ಮನೆಯಪಂಡ, ಕೊಡಂದೇರ ಇತ್ಯಾದಿ 'ಮನೆಪೆದ'ಗಳೂ ಕನ್ನಡ ಶಾಸನಗಳಲ್ಲಿ ಕಂಡುಬರುವುದು ಜನಜೀವನದ ಸಾಂಸ್ಕೃತಿಕ ಪ್ರಭಾವವೇ ಆಗಿದೆ. ಹೀಗೆಯೇ ಆಡಳಿತ ಭಾಷೆಯಾಗಿದ್ದ ಕನ್ನಡದಲ್ಲಿ 'ಕೊಡವರ್ಯೆತರು' ಆಡು ಮಾತಿನ ಶೈಲಿಯು(ಕ್ರಿ.ಶ. ೧೮೪೦-೪೧)ರ ಇರ್ಪುವಿನ ಶಾಸನದ '. . ಕಿಗ್ಗಟ್ಟು ಹತ್ತು ನಾಡು ರೈಹಿತರು ತಂಮ ಭಕ್ತಿಯಿಂದ ದೇವಸ್ಥಾನವನ್ನು ಜೋರ್ಣೋದ್ಧಾರ ಮಾಡಿಸಿಯಿದ್ದಾರೆ' ಎಂಬ ಸಾಲುಗಳಲ್ಲಿ ಕಾಣಬರುತ್ತದೆ. ೧೮೦೮ರಲ್ಲಿ ಲಿಪಿಕಾರ ಶಂಭೈಯ್ಯನಿಂದ ಬರೆಸಿದ ಹಾವೇರಿ ಅರಸರ 'ರಾಜೇಂದ್ರನಾಮೆ'ಯ ಕನ್ನಡ ಭಾಷೆಯು ಸುಲಭ ಶೈಲಿಯದು ಸರಿ; ಆದರೆ ರಾಜಮನೆತನದವರ ಭಾಷೆಯ ಸಂಸ್ಕಾರಗಳನ್ನು ಹೊಂದಿದೆ. ಪರ್ಷಿಯನ್ ಹಾಗೂ ಆಂಗ್ಲಭಾಷಾ ಶಬ್ದಗಳು ಸಾಕಷ್ಟು ಸೇರಿಕೊಂಡಿವೆ. ಆಡಳಿತ ಭಾಷೆ ಕನ್ನಡವಾಗಿದ್ದು, ಆ ಭಾಷೆಯ ದೀರ್ಘ ವಾಕ್ಯಗಳನ್ನು ಹೇರಳವಾಗಿ ತುಂಬಿಕೊಂಡಿದ್ದರೂ ಓದುಗರ ಆಸಕ್ತಿಯನ್ನೂ ಅಂದಿನ ಭಾಷಾರೂಢಿಯ ಚಿತ್ರಣವಾಗಿಸಿ ನೀಡಿದೆ. ಕಾಡಿನ ಹಾಗೂ ಬೇಟೆಗಾರಿಕೆಯ ಸೂಕ್ಷ್ಮ ವರ್ಣನೆಗಳು ಗ್ರಾಮೀಣ ಸೊಗಡಿನ ಕನ್ನಡದ ಭಾವಪೂರ್ಣ ಮಾತುಗಳಿಂದ ಓದುಗರ ಮನಸ್ಸನ್ನು ಧಾರಾಳವಾಗಿ ಆಕರ್ಷಿಸುತ್ತದೆ; ಆರ್ದ್ರಗೊಳಿಸುತ್ತದೆ. ಮೊಗ್ಲಿಂಗನೂ 'it retains its chnarese cnaracter thoroughly' ಎಂದಿದ್ದಾನೆ. ಹಾವೇರಿ ಅರಸರ ಕಾಲದ ಶಿಸ್ತು ಹುಕುಂ ನಾಮೆಗಳು, ಕನ್ನಡ ಪಾರಿಭಾಷಿಕ ಶಬ್ದಗಳೊಡನೆ ಕೂಡಿ, ಒಂದು ಸಾಂಸ್ಕೃತಿಕ ಸಂಚಯವೆನಿಸಿವೆ. ವೈಜ್ಞಾನಿಕ-ಶಾಸ್ತ್ರೀಯ ತಳಹದಿಯ ದಾಖಲೆಗಳಾಗಿ, ಆಡಳಿತ ಸಾಹಿತ್ಯದ ಸ್ವರೂಪವನ್ನು ತೋರಿವೆ. ಈ ಅರಸರ ಕಾಲದ ನಿರೂಪಗಳು ಕನ್ನಡ-ಸಂಸ್ಕೃತ ಮಿಶ್ರಶೈಲಿಯವಾಗಿ ಗತ್ತಿನ ಭಾಷೆಯಾಗಿ ಕಾಣುತ್ತವೆ. ಇವರ ಕಾಲದ ಕೆಲವು ಶಾಸನಗಳಲ್ಲಿ, ಆನೆ ಬೇಟೆಯ ಸಂದರ್ಭದಲ್ಲಿ, ಪ್ರಕೃತಿಯ ವರ್ಣನೆಯನ್ನು, ಸಾಹಿತ್ಯ ಗುಣದಿಂದ ಮೈದುಂಬಿಸಿದ ಗದ್ಯಶೈಲಿಯಲ್ಲಿ ಮಾಡಲಾಗಿದೆ. ಉದಾಹರಣೆಯಾಗಿ 'ವಿಪಿನಗಳಲ್ಲಿ ಅದ್ರಿ ಸಮಾನ್ವಿತವಾದ ಕರಿಸಮೋಹವು ದಿನಕರನಂನೆ ಮೇಘಜಾಲ ಮುತ್ತುವ ತೆರದಂತೆ ಭೋರ್ಗುಡಿಸುತಾಗಮಿಸಲಾಗಿ' ಎನ್ನುವ ವಾಕ್ಯವನ್ನು ಗಮನಿಸಬಹುದು. ಇದರಲ್ಲಿ ಜನಪದ ಸಾಹಿತ್ಯ ಪ್ರಕಾರದಲ್ಲಿ ಕನ್ನಡ-ಕೊಡವ ಭಾಷಿಕ ಪ್ರಭಾವವು ಕಾಣಬರುತ್ತದೆ. ಹುತ್ತರಿ ಹಾಡು, ದೇಶಕಟ್ಟ್ ಪಾಟ್, ಮನೆ ಮನೆಯಲ್ಲಿ ಹಾಡುವ ಕೊಡವ ಭಾಷಾ ಗೀತೆಗಳಲ್ಲಿ, ಗೌಡಜನಾಂಗದ ಹರಿಸೇನ ಹಾಡಿನಲ್ಲಿ, ಕನ್ನಡದ ಪ್ರಭಾವವಿದೆ. ಸುಗ್ಗಿ ಕಟ್ಟೆ ಹಬ್ಬದ ಹೊನ್ನಾರು ಹಾಡು, ಜನಪದ ಸೊಗಡಿನಿಂದ ತುಂಬಿ ತುಳುಕುತ್ತ. ಕೊಡವ ಭಾಷಿಕ ಗಾದೆಗಳು (ಅರಮನೆಕತ್ತಿಕ್ ದಂಟ್ ಟಿ ಬಾಯಿ) ಸುಲಭವಾಗಿ ಅರ್ಥವಾಗುವ ಕಾರಣವೆಂದರೆ ಅವುಗಳ ಮೇಲೆ ಆಗಿರುವ ಕನ್ನಡ ಭಾಷಿಕ ಪ್ರಭಾವ ಆಧುನಿಕ ಬರೆಹಗಾರರ ಕನ್ನಡ ಭಾಷೆ, ವರ್ತಮಾನದ ಜಾಯಮಾನಕ್ಕೆ ಅನುಗುಣವಾಗಿ, ಸಾಮಾಜಿಕ ಸ್ಥಿತ್ಯಂತರ ಸಂದರ್ಭಗಳಿಗನುಗುಣವಾಗಿ ತನ್ನ ನಡಿಗೆಯನ್ನು ಹೊಂದಿಸಿಕೊಂಡಿದೆ. ಕನ್ನಡತನ ಉಳಿಸಿಕೊಳ್ಳುವುದು ಅದನ್ನು ಬಳಸುತ್ತಿರುವವರ ಹೊಣೆಯಾಗಿದೆ.

ಚೋಳರ ಕಾಲದಲ್ಲಿ, ಸಾಮಂತರ ಮೂಲಕ ತಮಿಳುನಾಡಿನ ಪ್ರಭಾವ ಇಲ್ಲಿನ ಸಾಂಸ್ಕೃತಿಕ ಜೀವನದ ಮೇಲೆ ಆಯಿತು. ಆದರೆ ಗಂಗರ ಕಾಲದ ಕನ್ನಡ ಸಂಸ್ಕೃತಿಯನ್ನು, ಕದಂಬ ಪರಂಪರೆಯನ್ನೂ ಅನುಲಕ್ಷಿಸಿ ಇಲ್ಲಿಯ ಜನತೆ ಉಳಿಸಿಕೊಂಡೇ ಇದ್ದರು. ಹಾನುಗಲ್ಲು ಕದಂಬರು ಮತ್ತು ಹೊಯ್ಸಳರ ಕಾಲದಲ್ಲಿ ಅದು ಮುಂದುವರಿಯಿತು. ಚಂಗಾಳ್ವರೂ ಅದನ್ನು ಪೋಷಿಸಿದರು. ವಿಜಯನಗರದರಸರು ಅದಕ್ಕೆ ಮತ್ತಷ್ಟು ಶಕ್ತಿ ತುಂಬಿದರು. ಹಾವೇರಿ ಅರಸರ ಕಾಲದಲ್ಲಿ ಕನ್ನಡ ಭಾಷಿಕ ಆಯಾಮ ವಿಸ್ತಾರವಾಯಿತು. ಆಂಗ್ಲರ ಕಾಲದಲ್ಲಿ ಕನ್ನಡಕ್ಕೆ ಇಂಗ್ಲೀಷ್ ಪದಗಳ ಸೇರ್ಪಡೆ ಹೆಚ್ಚಾಯಿತು. ಅದೇನೇ ಇರಲಿ ಕೊಡಗಿನಲ್ಲಿ, ಹೊಯ್ಸಳರ ಕಾಲದಲ್ಲಿ, 'ಎಲ್ಲಾ ನಾಡ ಕೊಡಗರು' ಪಾಲ್ಪರೆ ಯುದ್ಧದ ಸಂದರ್ಭದಲ್ಲಿ, ಒಂದು ಸಮೂಹವಾಗಿ ಹೋರಾಡಿದ್ದು ನೋಡಿದರೆ, ಸಮರಸ ಜೀವನದ ಬದುಕು, ಭಾಷೆ, ಸಂಸ್ಕೃತಿ ಇತ್ತು ಹಾಗೂ ಸಂಘರ್ಷವೂ ಇತ್ತು ಎನ್ನಬೇಕು. ಒಟ್ಟಾರೆ ಇಲ್ಲಿ ಭಾಷೆ, ಬದುಕು, ಕರ್ಣಾಟಕದ ಸಾಂಸ್ಕೃತಿಕ ಜೀವನದೊಂದಿಗೆ ಅಂತರ್ಗತವಾಗಿದ್ದಿತು. ಮತ್ತು ಅದರೊಡನೆ ಬೆಸುಗೆಯೊಡನೆ ಬೆಳೆದುಕೊಂಡು ಬಂದಿತು. ತನ್ನ ವೈಶಿಷ್ಟ್ಯಗಳನ್ನು ಉಳಿಸಿಕೊಂಡು, ಕರ್ನಾಟಕ ಸಂಸ್ಕೃತಿಯ ಬೇರನ್ನು ಬೆಳೆಸುತ್ತ ಸಮ್ಮಿಲನಗೊಂಡಿತು. ಇದು ಕೊಡಗು, ಕರ್ನಾಟಕಕ್ಕೆ ನೀಡಿದ ಸಾಂಸ್ಕೃತಿಕ ಬಾಗಿನ; ಕರ್ನಾಟಕ ಕೊಡಗಿಗೆ ನೀಡಿದ ಸಾಂಸ್ಕೃತಿಕ ಬಾವಣಿಕೆ.

ಈ ಲೇಖನದ ಮುಖ್ಯ ಉದ್ದೇಶ ಕೊಡಗಿನ ಶಾಸನಗಳನ್ನು ಅನುಲಕ್ಷಿಸಿ ವಿವೇಚಿಸುವುದಾಗಿದೆ.

## ಅಡಿಟಿಪ್ಪಣಿಗಳು

೧ (೧) S.N. Chakravarthy., 1950, Hand book to the Indian pre-historic antiquitics, prince of Wales Museum of Western India, p. 15

(೨) ಬಿ.ಪಿ. ರಾಧಾಕೃಷ್ಣ., 'ಕಾವೇರಿ ಎರಡು ನದಿಯೆ?' ೨೩.೪.೧೯೯೨, ೧.೬.೧೯೯೨ ಮತ್ತು ೨೩.೭.೯೨ ರಂದು ಬೆಂಗಳೂರಿನ ಇನ್ಸ್‌ಟಿಟ್ಯೂಟ್ ಆಫ್ ವರ್ಲ್ಡ್‌ಕಲ್ಚರ್ ಸಂಸ್ಥೆಯನ್ನು ಮಾಡಿದ ಉಪನ್ಯಾಸದ ವಿಷಯ, ಕನ್ನಡಪ್ರಭ, ಬೆಂಗಳೂರು.

೨ 'ಅರಬ್ಬಿ ಸಮುದ್ರದಲ್ಲೊಂದು ಪರ್ವತ' ಕನ್ನಡಪ್ರಭ, ಜನವರಿ ೧೯೯೪.

೩ 'ದ್ರಾವಿಡ ಭಾಷೆಗೆ ವಿಶ್ವವ್ಯಾಪಿ ಸಂಬಂಧ' – ಭಾಷಾತಜ್ಞ, ಡಾ. ವಿಲಿಯಂ ಮಾಡ್ತಾ, ಅವರ ಪ್ರತಿಪಾದನೆ. ನೋಡಿ ಕನ್ನಡಪ್ರಭ. ೧೦.೧.೧೯೯೯

೪ ಕೆ. ಕುಶಾಲಪ್ಪಗೌಡ., 'ಕನ್ನಡ ಭಾಷೆಯ ಬೆಳವಣಿಗೆ-ವಿವಿಧ ರೂಪಗಳಲ್ಲಿ' ವಜ್ರದೀಪ್ತಿ, ೧೯೯೦, ಮೈಸೂರು, ಪು. ೪೨೦.

೫ ಹಂಪ. ನಾಗರಾಜಯ್ಯ., ೧೯೯೧, ದ್ರಾವಿಡ ಭಾಷಾ ವಿಜ್ಞಾನ, ಬೆಂಗಳೂರು, ಪು. ೧೧

೬ ಐ.ಮಾ. ಮುತ್ತಣ್ಣ., ೧೯೭೯, ಕೊಡವ-ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು ೩೩.

೭ K. Mammen., 1942, Kerala cuture, Trivendrum Pp. 80-81

೮ ಸಿ. ವೀರಣ್ಣ., ೧೯೮೬, ಕನ್ನಡ ಸಾಹಿತ್ಯ-ಚಾರಿತ್ರಿಕ ಬೆಳವಣಿಗೆ-೧, ಬೆಂಗಳೂರು, ಪು ೧೭

೯ ಷ. ಶೆಟ್ಟರ್., ೨೦೦೮ (೨ನೇ ಮುದ್ರಣ), ಶಂಗಂ ತಮಿಳಗಂ ಮತ್ತು ಕನ್ನಡ ನಾಡು-ನುಡಿ, ಬೆಂಗಳೂರು, ಪು. ೧೧೯ ಮತ್ತು ಪು ೬

೧೦ ಅದೇ, ಪು. ೧೨೦, ೧೨೨

೧೧ ಅದೇ ಪು. ೧೭೨

೧೨ ಅದೇ ಪು. ೨೧೪

೧೩ ಆಂಧ್ರ ಪ್ರದೇಶದ ಕನ್ನಡ ಶಾಸನಗಳು ಭಾಗ ೧; (ಸಂ) ಡಾ. ಕೆ. ಆರ್. ಗಣೇಶ್, ಡಾ. ಆರ್. ಶೇಷಶಾಸ್ತ್ರಿ, ಹಂಪಿ ಕನ್ನಡ ವಿಶ್ವವಿದ್ಯಾಲಯ. ಹೇಮಾವತಿ ೯೮.

೧೪ ಎಸ್. ಕೆ. ರಾಮಚಂದ್ರರಾವ್, 'ತಿಬೆಟ್ಟಿನ ತಾಂತ್ರಿಕ ಸಂಪ್ರದಾಯ', ಶ್ರೀಕಂಠತೀರ್ಥ (ಸಂ) ಎಂ. ಚಿದಾನಂದ ಮೂರ್ತಿ ಮತ್ತು ಇತರರು, ಬೆಂಗಳೂರು, ೧೯೭೬, ಪು. ೮೦೫

೧೫ ಎ. ಕ. ಸಂಪುಟ ೧ (ಹೊಸತು); ೧೯೭೨, ಕೊಡಗು ಜಿಲ್ಲೆ, ಮೈಸೂರು ವಿಶ್ವವಿದ್ಯಾಲಯ-ಇದರಲ್ಲಿ ಬರುವ ಕೊಡಗಿನ ಶಾಸನಗಳು ಹಾಗೂ ನಾನು ಕಂಡುಹಿಡಿದ(ಲೇಖಕ)ಅಪ್ರಕಟಿತ ಶಾಸನಗಳನ್ನು ಗಮನಿಸಲಾಗಿದೆ.

೧೬ ಎಂ. ಜಿ. ನಾಗರಾಜ್, 'ಬೆಂಗಳೂರು ಮತ್ತು ಕೊಡಗು ಜಿಲ್ಲೆಗಳ ಕೆಲವು ಅಪ್ರಕಟಿತ ಶಾಸನಗಳು'; ಇತಿಹಾಸ ದರ್ಶನ , ಕರ್ನಾಟಕ ಇತಿಹಾಸ ಅಕಾಡೆಮಿ, ಸಂ. ೧೪/೧೯೯೯, ಪು. ೩೮

೧೭ ಆರ್. ನರಸಿಂಹಾಚಾರ್ಯ ವಿರಚಿತ ಕರ್ಣಾಟಕ ಕವಿಚರಿತೆ. ಪ್ರಥಮ ಸಂಪುಟ, ೨೦೦೫, ಕ.ಸಾ.ಪರಿಷತ್ತು, ಪು.೨೮,೨೯

೧೮ ಎಂ. ಜಿ. ನಾಗರಾಜ್., 'ಕೊಡಗಿನ ಕೊತೆಗಲ್ಲುಗಳು', ಹರತಿಸಿರಿ (೧೯೮೭), (ಸಂ) ಪ್ರೊ॥ ಲಕ್ಷ್ಮಣ್ ತೆಲಗಾವಿ, ಹರ್ತಿಕೋಟೆ, ಪು. ೭೩೨

೧೯ ಕರ್ನಾಟಕ ಕವಿ ಚರಿತೆ., ಅದೇ ಪು. ೫೮-೫೯

೨೦ ಎ. ಕ. ಸಂ. ೧ (ಹೊಸತು)., ೧೯೭೨, ಕೊಡಗು ಜಿಲ್ಲೆ ಸಂಖ್ಯೆ ೧೦೨ (೧೭ನೆಯ ಶತಮಾನ) ಮತ್ತು ಅಡಿಟಿಪ್ಪಣಿ ೧,ಪು.೬೪, ಎಚ್. ಎಸ್. ರಾಮಸ್ವಾಮಯ್ಯಂಗಾರ್ ಸಂಪಾದಿತ 'ಛಂದೊಂಬುಧಿ' ಪುಟ ೬೭(೨ನೆಯ ಮುದ್ರಣ)

೨೧ ಎ. ಕ. ಸಂ. ೨(ಹೊಸತು)., ೧೯೭೩, ಶ್ರವಣಬೆಳಗೊಳ ೭೭ (ಚಿಕ್ಕಬೆಟ್ಟದ ಪಾರ್ಶ್ವನಾಥ ಬಸದಿ; ಕ್ರಿ.ಶ. ೧೧೨೯.

೨೨ ಎ. ಕ. ಸಂ. ೧ (ಹೊಸತು)., ಅದೇ ಕೊಡಗು, ೭೧ (ಮುಳ್ಳೂರು; ಕ್ರಿ.ಶ. ೧೦೬೪)

೨೩ ಅದೇ, ಕೊಡಗು ೭೯(ಮುಳ್ಳೂರು; ೧೧ನೇ ಶತಮಾನ; 'ಗುಣಸೇನ ಪಣ್ಡಿತಸ್ಯ ಗುರೋಃ ಪುಷ್ಪಸೇನ ಸಿದ್ಧಾಂತ ದೇವಸ್ಯ ಶ್ರೀಪಾದಂ')

೨೪ ಅದೇ., ಕೊಡಗು ೨(ಮಡಿಕೇರಿ)

೨೫ ಅದೇ., ಕೊಡಗು ೬೫(ಮಾಲಂಬಿ); ಕೊಡಗು ೪೭ (ಮೋರಿಕಲ್ಲು), ೧೧ನೇ ಶತಮಾನ.

೨೬ ಅದೇ., ಕೊಡಗು ೮೯(ದೊಡ್ಡಕಣಗಾಲ;ಕ್ರಿ.ಶ. ೧೦೪೪); ಕೊಡಗು ೮೭(ನಂದಿಗುಂದ; ೧೧೭೫); (ಮುಳ್ಳೂರಿನ) ೬೮-೬೯, ೭೧(೧೦೬೪ ಕ್ರಿ.ಶ.); ೭೨ (೧೦೫೯ ಕ್ರಿ.ಶ.) ೭೩(೧೧ನೇ ಶತಮಾನ) ೭೮,೮೦.

೨೭ ಅದೇ., ಕೊಡಗು ೬೨(ಯಡೂರು); ಕ್ರಿ.ಶ. ೧೧೯೫)

೨೮ ಎಂ. ಜಿ. ನಾಗರಾಜ್., 'ಕೊಡಗು-ಬೆಂಗಳೂರು-ತುಮಕೂರು ಜಿಲ್ಲೆಯ ಕೆಲವು ಅಪ್ರಕಟಿತ ಶಾಸನಗಳು', ಇತಿಹಾಸ ದರ್ಶನ, ಸಂ. ೨೦/೨೦೦೫, ಪು. ೧೧೦

೨೯ ಕೊಡಗಿನ ಬರಹಗಾರರು, (ಸಂ) ಎಸ್. ಆರ್. ನಾರಾಯಣರಾವ್, ಎನ್. ಮಾಹಾಬಲೇಶ್ವರ ಭಟ್ಟ, ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಡಿಕೇರಿ, ಪು.೨

೩೦ ಎ. ಕ. ಸಂ. ೯(ಹೊಸತು), ೧೯೯೦, ಹಾಸನ ಜಿಲ್ಲೆ, ಸಕಲೇಶಪುರ ೪೯ (ಕ್ರಿ.ಶ. ೧೧೯೫, ಹಳೇ ಬೇಲೂರು)–'ಶ್ರೀಮತ್ಕಂಬದ ವಂಶ ಶಿಖಾಮಣಿ ದಯಸಿಂಹದೇವ, . . .', 'ಕೀರ್ತ್ತಿ ಯೆನಲ್ಕೆ ಬೇಡಿ ಭಾರತ ಕಥೆ ಎಂಬುದೇಕೆ 'ದಯಸಿಂಹ ನೃಪಾಳ ಚರಿತ್ರ ಸಾಲದೇ'

೩೧ ಆರ್. ನರಸಿಂಹಾಚಾರ್ಯ ವಿರಚಿತ ಕರ್ಣಾಟಕ ಕವಿ ಚರಿತೆ., ೨೦೦೫ರ ಮುದ್ರಣ ಅದೇ, ಪು. ೧೫೭

೩೨ ಎಂ. ಜಿ. ನಾಗರಾಜ್., 'ಕೊಡಗಿನ ಕೊಂಗಾಳ್ವ ರಾಜಧಾನಿ ಮಾಲಂಬಿ ಮತ್ತು ಮಾದ್ರೆಯ ಹೊಸ ವೀರ ಶಾಸನಗಳು', ಇತಿಹಾಸ ದರ್ಶನ, ಸಂ. ೨೬/೨೦೧೧, ಪು. ೨೩೨, ೨೩೪

೩೩ ಎಂ. ಜಿ. ನಾಗರಾಜ್., 'ಕೊಡಗಿನ ಕೊಂಗಾಳ್ವ ರಾಜಧಾನಿ ಮಾಲಂಬಿ ಮತ್ತು ಮಾದ್ರೆಯ ಹೊಸ ವೀರ ಶಾಸನಗಳು', ಇತಿಹಾಸ ದರ್ಶನ, ಅದೇ, ಸಂ. ೨೦'೨೦೦೫, ಪು. ೧೧೫

೩೪ ಎಂ. ಜಿ. ನಾಗರಾಜ್., 'ಬೆಂಗಳೂರು ಮತ್ತು ಕೊಡಗು ಜಿಲ್ಲೆಗಳ ಕೆಲವು ಅಪ್ರಕಟಿತ ಶಾಸನಗಳು' ಇತಿಹಾಸ ದರ್ಶನ, ಅದೇ ಸಂ. ೧೪/ ೧೯೯೯, ಪು. ೩೯

****

# ಶಾಸನಗಳಲ್ಲಿ 'ಗಣೇಶ'

* **ಶ್ರೀ. ಶಿಕಾರಿಪುರ ಹರಿಹರೇಶ್ವರ,**

ಜೀವನದಲ್ಲಿ ತೊಂದರೆಗಳು ಎದುರಾಗುವುದು ಸಹಜ. ಪುರುಷ ಪ್ರಯತ್ನದಿಂದ ಅವುಗಳನ್ನು ನಿವಾರಿಸಿಕೊಳ್ಳಲು ಜನರು ಪ್ರಯತ್ನಪಡುವುದೂ ಸಹಜವೇ. ಕೆಲವೊಮ್ಮೆ ಅವು ಕೈಮೀರಿ ಹೋಗುವ ಸಂಭವ ಗೋಚರಿಸಿದಾಗ ಯಾವುದಾದರೂ ಅಗೋಚರಶಕ್ತಿ ಆ ಬಗೆಯ ತೊಂದರೆಗಳನ್ನು ನಿವಾರಿಸ ಬಾರದೇ ಎಂದು ಎಲ್ಲರೂ ಅಂದುಕೊಳ್ಳುವುದುಂಟು. ಸರಿದಾರಿಯಲ್ಲಿ ನಡೆಯುವಾಗ ಬರಲಿರುವ ತೊಂದರೆಗಳನ್ನ ತಾನೇ ತಾನಾಗಿ ನಿವಾರಿಸಬಲ್ಲ ಈ ದೈವಿಕ ಶಕ್ತಿಗೆ ಗಣೇಶ ಎಂದು ಹೆಸರಿಟ್ಟು, ಆರಾಧಿಸುವಾಗ ಅವನು ವಿಘ್ನಗಳ ಉಪಶಮನ ಮಾಡುವ ಪ್ರಸನ್ನಮುಖಿಯ ರೂಪವನ್ನ ತಾಳುತ್ತಾನೆ. ನಮಗೆಲ್ಲ ಪರಿಚಿತವಾಗಿರುವ ಗಣೇಶನ ಸ್ತುತಿಪದ್ಯವೆಂದರೆ ಇದು:

**ತೊಡುಗೆ ಬಿಳಿಯನು ಧರಿಸಿ ಮೆರೆವನೆ,**
**ಉಡುಪಿನಂದದಿ ಸುಂದರಾಂಗನೆ,**
**ಹಿಡಿದು ಪಾಶ ಅಂಕುಶಗಳನು ನಾಲ್ಕು ಕೈಗಳುಳ್ಳವನೆ।**
**ಒಡೆಯ ಗಣಗಳ ನಗುಮೊಗದ ಬೆನಕನೆ**
**ನಡೆವ ದಾರಿಯ ನಡುವೆ ಇರುತಿಹ**
**ಅಡೆ ತಡೆಗಳೆಲ್ಲವನು ತೊಡೆಯುತ ನೀನೇ ಕಾಪಾಡು॥**[೧]

ನಾವುಚಿಕ್ಕವರಿದ್ದಾಗ ಇನ್ನೊಂದು ಪದ್ಯವನ್ನು ಪ್ರತಿದಿನ ಹೇಳುವ ಪರಿಪಾಠವನ್ನು ನಮ್ಮ ತಂದೆತಾಯಿಗಳು ಕಲಿಸಿದ್ದರು. ಅದು:

**ಬೆನಕ, ಬೆನಕ, ಏಕದಂತ;**
**ಪಚ್ಚೆಕಲ್ಲು, ಪಾಣಿಪೀಠ,**
**ಮುತ್ತಿನುಂಡೆ ಹೊನ್ನಘಂಟೆ–**
**ಇಂತೊಪ್ಪುವ ಶ್ರೀ ಸಿದ್ಧಿವಿನಾಯಕನಿಗೆ ನಮಸ್ಕಾರಗಳು!**

ಎಲ್ಲ ಶಾಸನಗಳಲ್ಲೂ ಮೊದಲಿಗೆ ನಿರ್ವಿಘ್ನತೆಗಾಗಿ ಗಣೇಶನ ಸ್ಮರಣೆ ಬಂದೇ ಬರುತ್ತದೆಯೆಂದು ಹೇಳಲಾಗದು. ಹಾಗಿಲ್ಲದಿರುವುದೂ ಹೇರಳವಾಗಿವೆ. ವಿಘ್ನವಿನಾಶಕನ ಪ್ರಸ್ತಾಪ ಬರುವ ಮೊಟ್ಟ ಮೊದಲ ಶಾಸನವೆಂದರೆ ರಾಷ್ಟ್ರಕೂಟರ ಕಾಲದ (ಕ್ರಿ.ಶ. ೯೭೦ರ) ಶಾಸನ[೨] ಗಣೇಶನು ಸರ್ವಾರ್ಥ ಸಿದ್ಧಿದಾಯಕ ಎಂಬುದನ್ನು ಸ್ಪಷ್ಟವಾಗಿ ಅಥವಾ ಸೂಚ್ಯವಾಗಿ ಶಾಸನದ ಕವಿಗಳು ಹೇಳುತ್ತಾರೆ. ಕ್ಷೇಮಕಾರಕ[೩], ರಕ್ಷಕಾರಕ[೪], ಅಪಾಯಗಳಿಂದ ರಕ್ಷಿಸುವವ[೫], ಅಭಯಪ್ರದಾಯಕ[೬], ಸಕಲಸಂಪತ್ತುಗಳ ವಸುದಾಯಕ[೭] ಸರ್ವಮಂಗಳ ಕರ್ತೃ, ತನ್ನ ಅನುಗ್ರಹದಿಂದ ಜಗತ್ತಿಗೇ ಅಷ್ಟಸಿದ್ಧಿಗಳನ್ನ ದೊರಕಿಸಿಕೊಡುವವನು[೮], ದಯಾಳು[೯]– ಹೀಗೆ ಶಾಸನದ ಕವಿಗಳು ಗಣಪತಿಯನ್ನ ಬಗೆಬಗೆಯಲ್ಲಿ ವರ್ಣಿಸಿದ್ದಾರೆ.

ಕವಿಗಳು ಗಣೇಶನನ್ನ ವರ್ಣಿಸುವಾಗ ಸೊಂಟದ ಸುತ್ತ ಹಾವು ಸುತ್ತಿಕೊಂಡಿರುವುದನ್ನು ಹೇಳುತ್ತಾರೆ[೧೦], ಹಾವು ಅವನಿಗೆ ಒಂದು ಅಲಂಕಾರ ಸಾಧನ[೧೧] – ಹೀಗೆ ಹಾವಿಗೂ ಗಣೇಶನಿಗೂ ಸಂಬಂಧ ಕಲ್ಪಿಸಿದ್ದಾರೆ. ಒಬ್ಬ ಕವಿ, ಗಣೇಶನ ಈ ಹಾವಿನ ಆಭರಣವನ್ನು ನೆಪವಾಗಿಟ್ಟುಕೊಂಡು ಗಣೇಶನನ್ನ ದರ್ಪ–ಸರ್ಪ–ಅಪಸರ್ಪಿ ಎಂದೂ ಕರೆಯುತ್ತಾನೆ.[೧೨]

**ಶಾಸನದ ಕವಿಗಳು**

ಮಧುಸೂದನ ದೇವ, ಬಾಯಣಾಚಾರ್ಯ, ಧರಣೋಜ, ಗಂಗಾಧರಾರ್ಯ, ಈಶ್ವರಾಚಾರ್ಯ, ಶ್ರೀರಾಮ ಪುಣ್ಯವಲ್ಲಭ,

---

* ನಂ. ೪, ಮೂರನೇ ಮೈನ್, ೫ನೇ ಕ್ರಾಸ್, ಸರಸ್ವತಿಪುರಂ, ಮೈಸೂರು–೫೭೦೦೦೯. ಮೊ.: ೯೮೪೫೪೭೧೯೧೧

ನಿರವದ್ಯ ಪುಣ್ಯವಲ್ಲಭ, ಅನಿವಾರಿತ ಪುಣ್ಯವಲ್ಲಭ, ಧನಂಜಯ ಪುಣ್ಯವಲ್ಲಭ ಮುಂತಾದವರ ಹೆಸರುಗಳು ಶಾಸನಗಳಲ್ಲಿ ಕಂಡು ಬರುತ್ತವೆ. ಇವರು ತಾವೇ ರಚಿಸಿದ ಇಲ್ಲವೇ ಬಳಕೆಯಲ್ಲಿದ್ದ ಬೇರೆಯವರ ರಚನೆಗಳನ್ನು ಬೆನಕನನ್ನು ನೆನೆಯಲು ಕೆತ್ತಿದುದುಂಟು.

**ಬಾಲಗಣೇಶ**

ಹಸುಳೆಯಾಗಿದ್ದಾಗ ಗಣೇಶ ತಾಯಿಯ ಎದೆ ಹಾಲನ್ನು ಕುಡಿಯುತ್ತಿರುವ ಕಲ್ಪನೆ ಶಾಸನದ ಕವಿಗಳಲ್ಲಿ ಕಂಡು ಬಂದಿದೆ. ಒಂದು ಶಾಸನದಲ್ಲಿ ಗಣೇಶ ಇನ್ನೂ ಶಿಶು. ತಾಯಿಯ ತೊಡೆಯ ಮೇಲೆ ಮಲಗಿಕೊಂಡು ಆಟವಾಡುತ್ತಾ ಹಾಲು ಕುಡಿಯುತ್ತಿದ್ದಾನೆ. ಬಾಯಿಯ ಎರಡೂ ಮೂಲೆಗಳಿಂದ ಎರಡು ಕ್ಷೀರಧಾರೆಗಳು ಹರಿಯುತ್ತಿವೆ. ಇವು ಹರಿದು ಕೊನೆಗೆ ಸೇರಿ ಒಂದು ಕೊರಳ ಹಾರದಂತೆ ಕಂಡುಬರುತ್ತಿದೆ. ಹಾಲ ನೊರೆಯಂತೂ ಬಾಯಲ್ಲಿ ಹಲ್ಲುಗಳು ಹುಟ್ಟುತ್ತಿವೆಯೇನೋ ಎಂಬ ಭ್ರಮೆಯನ್ನು ಮೂಡಿಸುತ್ತದೆ. ಇಂಥ ಬಾಲ ಗಣೇಶ ನಮ್ಮನ್ನೆಲ್ಲ ಕಾಪಾಡಲಿ ಎನ್ನುತ್ತಾನೆ ಆ ಕವಿ.[೧೩]

ಈಗ ಗಣೇಶ ಬೆಳೆದು ಬಾಲಕನಾಗಿದ್ದಾನೆ ಆಟವಾಡುತ್ತಿದ್ದಾನೆ. ಆದರೆ ಗಣೇಶನ ಆಟ ದೈವಿಕವಾದದ್ದು; ಅದು ಲೀಲೆ. ಆದ್ದರಿಂದ ಅವನು ಯಾವದೇ ಆಟದಲ್ಲಿ ತೊಡಗಿರಲಿ ಅದಕ್ಕೆ ಒಂದು ವಿಶೇಷ ಅರ್ಥ, ತತ್ತ್ವ, ಆಧ್ಯಾತ್ಮಿಕ ಹಿನ್ನೆಲೆ ಇದ್ದೇ ಇದೆ ಎನ್ನುವುದು ಕವಿಯ ಇಂಗಿತ. ಆಟವಾಡುವ ಗಣೇಶನಿಗೆ ಏಳು ಸಮುದ್ರಗಳೂ ಪುಟ್ಟ ಪುಟ್ಟ ಸರೋವರಗಳಿದ್ದಂತೆ. ಹಾಗೆಯೇ ಆ ಸಮುದ್ರಗಳಲ್ಲಿ ಅವನು ಆಡಬಯಸುತ್ತಾನೆ. ಇಂಥ ಆಟವಾಡುವ[೧೪] ಅವನು ಯಾವ ನೀರಿನಲ್ಲಿಯೇ ಆಡಲಿ, ಅದು ಅವನಿಗೆ ಗಂಗೆಯಲ್ಲಿ ಕುಣಿದಾಡಿದಂತೆ. ಅವನು ನದಿಯಲ್ಲಿ ಮುಳುಗಿ ಏಳುತ್ತಾ ಮೀಯುವಾಗ ದೊಡ್ಡದೊಂದು ಮೋಡವೇ ಎದ್ದು ಬಿದ್ದಿತೋ ಎಂಬಂತೆ ಕವಿಗೆ ಕಾಣುತ್ತದೆ.[೧೫]

ಗಣೇಶ ಹುಡುಗನಾಗಿ ತುಂಟಾಟಗಳನ್ನ ಆಡಿರುವುದೂ ಉಂಟು. ಕೆಲವೊಮ್ಮೆ ತನ್ನ ತಂದೆಯ ಗಜಚರ್ಮಾಂಬರವನ್ನು ತಾನೇ ಧರಿಸುತ್ತಾ, ಮೇಲಿಂದ ಕೆಳಗಿನವರೆಗೆ ಆನೆಯೇ ಆಗಿಬಿಡುತ್ತಾನೆ. ತನ್ನ ತಂದೆಯಂತೆ ತಾನೂ ನಾಟ್ಯವಾಡಿ ಅದರಲ್ಲಿ ತನ್ನ ಪರಿಣತಿಯನ್ನ ತೋರುತ್ತಿದ್ದಾನೆ – ತಾನು ನಾಟ್ಯಗಣಪತಿ ಎನಿಸಿಬಿಡುತ್ತಿದ್ದಾನೆ.[೧೬]

ಎಲ್ಲ ಮಕ್ಕಳಂತೆ ಗಣೇಶನೂ ಚಂಡಿನೊಡನೆ ಆಟವಾಡುತ್ತಾನೆ. ಆದರೆ ಅವನಾಡುತ್ತಿರುವುದು ಅಂತಿಂಥ ಗುಂಡಾದ ಒಂದು ಚೆಂಡಿನೊಡನೆ ಅಲ್ಲ. ಹಲವು ಬ್ರಹ್ಮಾಂಡಗಳು ಗಣೇಶನ ಆಟದ ಚೆಂಡುಗಳು. ಇಲ್ಲಿ ನಾವಿರುವುದೊಂದೇ ಜಗತ್ತಲ್ಲ, ಇಂಥ ಹಲವಾರು ಜಗತ್ತುಗಳು ವಿಶ್ವದಲ್ಲಿ ಇವೆ ಎಂಬುದನ್ನು ಸೂಚ್ಯವಾಗಿ ಕವಿ ತಿಳಿಸುತ್ತ, ಅವೆಲ್ಲ ಅವನ ಆಟಿಕೆಗಳಾಗಿವೆ ಎನ್ನುತ್ತಾನೆ.[೧೭]

ಕೆಂಬಣ್ಣದ ಸೂರ್ಯನ ಬಿಂಬ ಬಾಲಗಣಪ ಹೇರಂಬನಿಗೆ ಬಿಂಬಾಫಲದಂತೆ (ತೊಂಡೇಹಣ್ಣಿನಂತೆ) ಕಂಡಿತಂತೆ; ಅದನ್ನು ಮುಟ್ಟಲು ಆಗತಾನೇ ಮೇಲೆದ್ದ ಕಮಲದ ನಾಳದಂತಿರುವ ತನ್ನ ಸೊಂಡಿಲನ್ನು ಚಾಚಿದನಂತೆ.[೧೮]

ಹಿಂದೊಮ್ಮೆ ಚಂದ್ರ ಅವನನ್ನು ಕಂಡು ನಕ್ಕಾಗ ಈತ ಕೋಪಗೊಂಡು ತನ್ನ ಒಂದು ದಾಡೆ ಹಲ್ಲನ್ನೇ ಮುರಿದು ಅವನತ್ತ ಎಸೆದೂ ಆಗಿತ್ತಲ್ಲ : ಆ ಕತೆಯನ್ನು ಮಧುರ ಕವಿ ನೆನೆಸಿಕೊಂಡಿರಬೇಕು, ' ಹೋಗು ಹೋಗು, ನಿನ್ನ ಮಾತೇನು', – ಎಂದು ನಕ್ಷತ್ರಗಣಗಳನ್ನ, ಬಾಲಚಂದ್ರನನ್ನ, ಏಕೆ ಆಗಸವನ್ನೇ ಅಣಗಿಸತೊಡಗಿಹನೋ ಎನ್ನುವಂತಿರುವ ದೊಡ್ಡ ಆನೆಮೊಗನು ನಿಮ್ಮನ್ನು, ಜೊತೆಗೆ ನಮ್ಮನ್ನೆಲ್ಲ, ಪ್ರೀತಿಸಿ ರಕ್ಷಿಸಲಿ– ಎನ್ನುತ್ತಾನೆ ಆ ಕವಿ.[೧೯]

ಮಕ್ಕಳು ತಂದೆಯ ತೊಡೆಯೇರಿ, ತಂದೆಯ ತಲೆಯ ಕೂದಲುಗಳನ್ನು ಎಳೆಯುತ್ತಾ ಆಟವಾಡುವುದು ಸಹಜ. ಇದನ್ನೇ ಮನಸ್ಸಿನಲ್ಲಿಟ್ಟುಕೊಂಡು ಒಬ್ಬ ಕವಿ ಹೇಳುತ್ತಾನೆ:

ಒಮ್ಮೆ ಗಣೇಶ ತನ್ನ ತಂದೆ ಶಿವನ ತೊಡೆಯನ್ನ ಮೆಲ್ಲಮೆಲ್ಲನೆ ಏರಿದ್ದನಂತೆ. ಹಾಗೆ ತಂದೆಯ ತೊಡೆಯೇರಿ ಅವನ ತಲೆಯ ಕಡೆ ಕೈಯಾಡಿಸುವಾಗ ಅಲ್ಲಿದ್ದ ತನ್ನ ದಾಡೆಹಲ್ಲಿನಂತಿದ್ದ ಚಂದ್ರನನ್ನ ಶಿಶು ಗಣೇಶ ಕಂಡನಂತೆ. "ಅಪ್ಪಾ, ನೀನೇಕೆ

ನನ್ನ ಆ ದಂತವನ್ನ ಮುಚ್ಚಿಟ್ಟುಕೊಂಡಿದ್ದಿ"- ಎಂದು ಅಪ್ಪನೊಡನೆ ಮಗ ಜಗಳವಾಡಿದನಂತೆ. ಈ ತಮಾಷೆಯನ್ನು ನೋಡುತ್ತಾ ಇದ್ದ ಅವನ ತಾಯಿಯೂ ಸಹ, "ಬಿಡಬೇಡ ಕೇಳು, ಮಗು"- ಎಂದು ಗಣೇಶನನ್ನು ಪ್ರೋತ್ಸಾಹಿಸುತ್ತಿದ್ದಳಂತೆ. ನಿಜ ಸಂಗತಿ ಗೊತ್ತಾದ ಮೇಲೆ ಎಲ್ಲರೂ ಚೆನ್ನಾಗಿ ನಕ್ಕರಂತೆ. ಈ ರೀತಿ ಅಂದು ವಾತ್ಸಲ್ಯಭೂಮಿಯನ್ನ ನಿರ್ಮಿಸಿಕೊಂಡ ಗಣೇಶ ತನ್ನ ಭಕ್ತರಿಗೆಲ್ಲ ಇಂದು ವಾತ್ಸಲ್ಯವನ್ನು ಅನುಗ್ರಹಿಸಲಿ ಎಂದು ಕವಿ ಕೇಳಿಕೊಳ್ಳುತ್ತಾನೆ.[೩೦]

**ಗಜಮುಖ ಗಣೇಶ**

ಎಲ್ಲ ತಾಯಿಯರಿಗೂ ತಮ್ಮ ತಮ್ಮ ಮಕ್ಕಳನ್ನು ಕಂಡಾಗ ಆನಂದವೇ; ಮುಖ ಅರಳುವುದು ಸಹಜವೇ. ತನ್ನ ಆನೆಮೊಗದ ಮುದ್ದು ಗಣೇಶನನ್ನು ನೋಡಿದೊಡನೆ ಅವನ ತಾಯಿ ಜಗಜ್ಜನನಿ ಪರ್ವತರಾಜಪುತ್ರಿ ಗೌರಿಯ ಮುಖಾರವಿಂದವೂ ಅರಳುತ್ತದೆ. ಭಕ್ತರು ಬೇಡಿದುದೆಲ್ಲವನ್ನೂ ಕೊಡುವ ಈ ಏಕದಂತನನ್ನು ಹಗಲಿರುಳೂ ಉಪಾಸಿಸುತ್ತೇನೆ- ಎನ್ನುತ್ತಾನೆ[೩೧] ಕವಿ.

ತನ್ನ ಕೋರೆ ಹಲ್ಲನ್ನೇ ಲೇಖಣಿಯಾಗಿ ಬಳಸಿಕೊಳ್ಳುತ್ತಾ ಮಹಾಭಾರತವನ್ನೆಲ್ಲ ಬರೆದ ಲಿಪಿಕಾರ ಗಣೇಶನ ಚಿತ್ರ ಒಬ್ಬ ಕವಿಯ ಮುಂದಿದೆ. ಆ ಗಣೇಶ ಮಹಾಭಾರತವನ್ನಷ್ಟೇ ಅಲ್ಲ ತನ್ನ ಲೇಖಣಿಯಿಂದ ಬರೆದದ್ದು. ವಿಜಯನಗರದ ರಾಜ ಇಮ್ಮಡಿ ಹರಿಹರ ಯಾವ ಯಾವ ಗ್ರಾಮಗಳನ್ನು ಯಾರು ಯಾರಿಗೆ ದಾನವಾಗಿ ಕೊಟ್ಟನೋ ಅದನ್ನೂ ಸಹ ಈ ಗಣೇಶನೇ ಬರೆದು ದಾಖಲಿಸುತ್ತಿದ್ದಾನೆ ಎಂದು ಒಬ್ಬ ಶಾಸನದ ಕವಿ ಬಣ್ಣಿಸುತ್ತಾನೆ.[೩೨]

ಈ ಗಜಮುಖನ ಸೊಂಡಿಲು ಸಾಧಾರಣದ್ದಲ್ಲ. ಅವನು ಅದನ್ನೆತ್ತಿದರೆ ಆಗಸದಲ್ಲಿ ಸೂರ್ಯನನ್ನೇ ಮುಟ್ಟಿಬಿಡುವಂಥ ಅಗಾಧವಾದ ಸೊಂಡಿಲು ಅದು. ಒಬ್ಬ ಕವಿಗೆ ಈ ಎತ್ತಿದ ಸೊಂಡಿಲು ಹೇಗೆ ಕಂಡಿತು ಎಂದರೆ, ಸೂರ್ಯನೇ ಒಂದು ಕಮಲ. ಸೊಂಡಿಲು ಆ ಕಮಲದ ನಾಳ. ಸೊಂಡಿಲ ಬುಡದ ಹಲ್ಲುಗಳೇ ಬಿಳಿಯ ಎಳೆಗಳು – ಇವಕ್ಕೆಲ್ಲ ಆಧ್ಯಾತ್ಮಿಕ ಸೂಚ್ಯಾರ್ಥಗಳನ್ನ ಕವಿ ಭಾವಿಸುವುದೂ ಉಂಟು.[೩೩]

ಗಣೇಶನನ್ನ ಕೇವಲ ಗಜಮುಖ ಎನ್ನುವುದರ ಬದಲಾಗಿ, ಅವನು ಅಡಿಯಿಂದ ಮುಡಿಯವರೆಗೂ ಒಂದು ಆನೆಯೇ ಆಗಿದ್ದಾನೆ ಎಂದು ಕೆಲವು ಕವಿಗಳು ಕಲ್ಪಿಸಿಕೊಂಡಿರುವುದೂ ಉಂಟು. ಎಷ್ಟಾದರೂ ಪುರಾಣಗಳ ಪೂರ್ವಕಥೆಯಲ್ಲೂ ಗಣೇಶನ ದೇಹ ಮೊದಲು ಒಂದು ಆನೆಯದೇ ಆಗಿತ್ತಲ್ಲವೇ? ಇರಲಿ, ಇಂಥ ಗಣೇಶನನ್ನು ಒಂದು ಆನೆಯನ್ನಾಗಿ ಕಲ್ಪಿಸಿಕೊಂಡಾಗ ಪಳಗಿಸಲು ಬಳಸುವ ಸಾಧನಗಳೆಂದರೆ ಪಾಶ, ಘಂಟೆ ಮತ್ತು ಅಂಕುಶ. ಗಣೇಶನೆಂಬ ಈ ಆನೆಯ ಕುತ್ತಿಗೆಗೆ ಕಟ್ಟಿದ ಘಂಟೆಯೆಂದರೆ ಪ್ರಣವ ಬೀಜಾಕ್ಷರ ಓಂ-ನ ಒಂದು ರೂಪ. ಅತ್ತಿತ್ತ ಹರಿದಾಡುವ ಚಿತ್ತವನ್ನ ಬಂಧಿಸಲು ಇರುವ ಉಪಕರಣವೇ ಅಂಕುಶ. ಇಂಥ ಗಣೇಶ ಮೂಲೋಕಗಳನ್ನೂ ಕಾಪಾಡಲಿ ಎನ್ನುತ್ತಾನೆ ಒಬ್ಬ ಶಾಸನ ಕವಿ.[೩೪]

ಮಂಗಳದ ಆಯತನವಾದ, ವಿಘ್ನವೆಂಬ ಕತ್ತಲನ್ನ ತೊಡೆಯುವ, ಅಗಜೆಯಾದ ಪಾರ್ವತಿಯ ಮಗನಾಗಿ ಹುಟ್ಟಿ ಆನೆಯ ಸ್ವರೂಪವನ್ನು ತಳೆದ, ಸಿಂಹಸ್ವರೂಪಿಯಾದ ವಿಷ್ಣುವಿನಿಂದಲೂ ಪೂಜೆ ಗೊಳ್ಳುತ್ತಿರುವ ಗಣೇಶನಿಗೆ ನಮಸ್ಕರಿಸುತ್ತೇನೆ ಎನ್ನುತ್ತಾನೆ ಒಬ್ಬ ಶಾಸನದ ಕವಿ. (ಇಲ್ಲಿ ಆ ಕವಿ ಗಜ-ಅಗಜ, ಹರಿ-ಸಿಂಹ ಪದಗಳ ಅರ್ಥಗಳೊಂದಿಗೆ ಆಟವಾಡಿದ್ದಾನೆ.[೩೫]

ಗಣೇಶನು ಗಜಮುಖನಾದ ದೇವತೆ ಎಂಬುದನ್ನೇ ಮುಖ್ಯ ಲಕ್ಷಣವಾಗಿಟ್ಟುಕೊಂಡು ಆನೆಗೆ ಸಂಬಂಧಿಸಿದ ಹಲವಾರು ಆಟಪಾಠ ಚಲನವಲನಗಳನ್ನು ವಿವರಿಸುವ ಶಾಸನಸ್ತುತಿಗಳು ಹೇರಳವಾಗಿವೆ. ಒಬ್ಬ ಕವಿಯ ಪ್ರಕಾರ ತನ್ನ ಸೊಂಡಿಲಿನಿಂದ ನೀರನ್ನು ಹೀರಿ ಚೆಲ್ಲುವ ಆ ಜಲಧಾರೆ ಒಂದು ಕಾಲುವೆಯಾಗಿ ಹೊಲಗದ್ದೆಗಳಿಗೆ ಹರಿದು ಯಥೇಷ್ಟ ನೀರನ್ನು ಒದಗಿಸಿತು ಎಂಬ ವರ್ಣನೆಯಿದೆ.[೩೬]

ಗಣೇಶನ ಮದಜಲವೂ ಸಹ ಕೆಲವು ಸ್ತುತಿಗಳಲ್ಲಿ ವರ್ಣಿತವಾಗಿದೆ. ಒಬ್ಬ ಕವಿಯ ಪ್ರಕಾರ ಈ ಮದಜಲದಿಂದ ಆಕರ್ಷಿತವಾಗಿ ಬಂದು ದುಂಬಿಗಳು ಗಣೇಶನ ಕತ್ತಿನ ಸುತ್ತ ಹಾರಾಡುತ್ತಿವೆ. ಹೀಗಾಗಿ ಅವನ ಕೊರಳು ತನ್ನ ತಂದೆಯ ಶಿವನ ಕಂಠದಂತೆ ಕಪ್ಪಾಗಿಬಿಟ್ಟಿದೆಯಂತೆ.[೩೭] ಈ ಮದಜಲದ ಬಿಂದುಗಳು ಗಣೇಶನ ಕಿವಿಯ ಬಳಿ ಬಿದ್ದು ಅವು

ಕರ್ಣಕುಂಡಲಗಳಂತೆ ಶೋಭಿಸುತ್ತಿವೆ; ಈ ಕರ್ಣಾ ಭರಣಗಳ ಶೋಭೆ[೨೮] ಈ ದುಂಬಿಗಳು ಝೇಂಕಾರ ಮಾಡುತ್ತಿರುವುದಂತೂ ವಿಘ್ನಗಳನ್ನು ಗೆದ್ದು ಅವುಗಳನ್ನು ಧೂಳೀಪಟ ಮಾಡಿದ ಗಣೇಶನ ವಿಜಯೋತ್ಸವದ ಸಲುವಾಗಿ ಬಾರಿಸುತ್ತಿರುವ ನಗಾರಿಗಳಂತೆ ಇವೆ ಎಂದು ಹೇಳುತ್ತ, ಇನ್ನೊಬ್ಬ ಕವಿ ಗಣೇಶನ ಜೊತೆಗೆ ಆ ದುಂಬಿಗಳಿಗೂ ಜಯಕಾರ ಮಾಡಿಬಿಡುತ್ತಾನೆ.[೨೯] ಇಷ್ಟಕ್ಕೇ ನಿಲ್ಲಲಿಲ್ಲ ಈ ದುಂಬಿಗಳ ಝೇಂಕಾರ, ಮತ್ತೊಬ್ಬ ಕವಿಗೆ ಇದು ಮೂರೂ ವೇದಗಳ ಮಧುರ ಸಸ್ವರ ಘೋಷದ ಸಂಗೀತದಂತೆ ಕೇಳಿಬರುತ್ತದೆ.[೩೦]

**ಸರ್ವೋಚ್ಚ ದೇವತೆಯಾಗಿ ಗಣಪತಿ:**

ನೀನು ಎಲ್ಲಾ ವಿಘ್ನಗಳ ವಿನಾಶಿ. ಶಂಭುವಿನ ಮಗನಾದ ನಿನಗೆ ನಾನು ನಮಸ್ಕರಿಸುವುದಿರಲಿ, ಎಲ್ಲಾ ದೇವ ದೇವತೆಗಳು ನಿನ್ನ ಕಾಲುಗಳಿಗೆ ತಲೆ ಬಾಗಿ ನಮಸ್ಕರಿಸುತ್ತಾ, ಆ ಪಾದಗಳನ್ನ ತಮ್ಮ ಕಿರೀಟಗಳಲ್ಲಿ ಇರುವ ರತ್ನಗಳಿಂದ ಶೋಭಾಯಮಾನ ಮಾಡುತ್ತಿದ್ದಾರೆ.[೩೧] ಹೀಗೆಂದು ಒಬ್ಬ ಸ್ತುತಿಸಿದರೆ, ಇವನಿಗೆ ಶ್ರೇಷ್ಠವಾದ ಕಮಲಗಳಂತೆ ಅಗಲಗಲವಾದ ಕಣ್ಣುಗಳು, ಇವನು ಮುಪ್ಪು ಸಾವುಗಳಿಂದ ದೂರವಾದವನು, ಹೊಟ್ಟೆಗೆ ಸುತ್ತಿಕೊಂಡಿದ್ದಾನಲ್ಲ ಹಾವುಗಳು, ಅವುಗಳ ಹೆಡೆಯಲ್ಲಿರುವ ರತ್ನಗಳು ಸೂರ್ಯನಂತೆ ಪ್ರಕಾಶಿಸುತ್ತಾ, ಇರುಳಿನಲ್ಲೂ ಇವನ ಪಾದಕಮಲಗಳು ಅರಳುವಂತೆ ಮಾಡುತ್ತವೆ. ಇಂತಹ ಗಣಗಳೊಡೆಯ ಅಳತೆಗೆ ಅಳವಡದವನು, ಸಾಹಸಿ, ಮೂಲೋಕದೊಡೆಯ, ನಮ್ಮ ಮನೋಕಾಮನೆಗಳನ್ನೀಯಲಿ! – ಎಂದು ಗಾಣಪತ್ಯರ ನಂಬಿಕೆಯನ್ನು ಇನ್ನೊಬ್ಬ ವ್ಯಕ್ತಪಡಿಸುತ್ತಾನೆ.[೩೨]

ವೇದಾಂತವನ್ನು ಬಲ್ಲವರು ನಿನ್ನನ್ನು ಬ್ರಹ್ಮ, ಪ್ರಧಾನ ಪುರುಷ, ವಿಶ್ವಕ್ಕೆಲ್ಲಾ ಕಾರಣಪುರುಷ, ಜಗದೊಡೆಯ ಎಂದೂ ಗೌರವಿಸುತ್ತಾರೆ. ಇಂತಹ ವಿಘ್ನವಿನಾಯಕನಿಗೆ ನನ್ನ ನಮಸ್ಕಾರ.[೩೩] ಬ್ರಹ್ಮನೇ ಮೊದಲಾದ ದೇವತೆಗಳೂ ಸಹ ಎಲ್ಲ ಕಾರ್ಯಗಳ ಮೊಟ್ಟ ಮೊದಲು ಯಾರಿಗೆ ನಮಸ್ಕರಿಸಿ ಮುಂದುವರೆದಾಗ, ತಾವು ಕೈಗೊಂಡ ಕೆಲಸಗಳನ್ನು ಚೆನ್ನಾಗಿ ಮಾಡಿ ಮುಗಿಸಲು ಅನುವಾಗುತ್ತದೆಯೋ ಅಂಥ ಗಜಮುಖನಿಗೆ ನನ್ನ ನಮನ ಎನ್ನುವುದು ಇನ್ನೊಂದು ಪರಿಚಿತ ಸ್ತುತಿ.[೩೪] ಇಲ್ಲಿ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರೂ ಗಣೇಶನ ಅಡಿಗಳಿಗೆರಗುತ್ತಾರೆ.[೩೫] ಅವನ ಪಾದಕಮಲಗಳನ್ನ ಆಶ್ರಯಿಸಿದರೆ ಸಾಕು, ಅವನ ಪಾದಧೂಳಿಯ ಸ್ಪರ್ಶ ಮಾತ್ರದಿಂದಲೇ ಅಡ್ಡಿಯ ಕಡಲುಗಳು ಒಡನೆಯೇ ಬತ್ತಿಹೋಗುತ್ತವೆ ಎನ್ನುತ್ತಾನೆ ಒಬ್ಬ ಶಾಸನದ ಕವಿ.[೩೬]

ತನ್ನನ್ನು ಪೂಜಿಸಿದ ದೇವತೆಗಳಂಥವರ ಇಷ್ಟಾರ್ಥಗಳನ್ನು ಪೂರೈಸಿದನೆಂದ ಮೇಲೆ, ನಮ್ಮ ತೊಂದರೆಗಳನ್ನು ಗಣೇಶ ನಿವಾರಿಸದಿಹನೇ?[೩೭]

ಪ್ರಾರಂಭದಲ್ಲಿ ಹೇಳಿದಂತೆ, ನಮ್ಮ ನಾಡಿನ ಎಲ್ಲಾ ಶಾಸನಗಳ ಆರಂಭ ಶ್ಲೋಕಗಳು ಗಣೇಶ ಸ್ತುತಿಯಿಂದಲೇ ಮೊದಲುಗೊಂಡಿಲ್ಲ. ಸುಮಾರು ಎಂಟನೆಯ ಶತಮಾನದಿಂದ ಹಿಡಿದು ಹತ್ತೊಂಬತ್ತನೆ ಶತಮಾನದವರೆಗೂ ಶೈವ ವೈಷ್ಣವ ಶಾಸನಗಳಲ್ಲಿ ಸ್ವಸ್ತಿ, ಸಿದ್ಧಂ, ಓಂ ನಮಃ ಆದಮೇಲೆ ಶಿವ, ವಿಷ್ಣು(ವರಾಹ) ಸ್ತೋತ್ರಗಳು ಇರುವುದನ್ನು ಕಾಣುತ್ತೇವೆ.

ಈ ದೇವತಾ ಪ್ರಾರ್ಥನಾ ಪದ್ಯಗಳನ್ನ ಶಾಸನ ಕವಿಯೇ ರಚಿಸಿರಬಹುದು ಅಥವಾ ಪ್ರಸಿದ್ಧ ಪುರಾತನ ಗ್ರಂಥಗಳಿಂದ ತೆಗೆದುಕೊಂಡಿರಬಹುದು. ಬಾಣನ 'ಹರ್ಷಚರಿತೆ'ಯ ಪ್ರಥಮ ಶ್ಲೋಕ – "ನಮಸ್ತುಂಗ ಶಿರಸ್ ಚುಂಬಿ ಚಂದ್ರ ಚಾಮರ ಚಾರವೇ...." – ಎಂಬುವ ಶಿವ ಸ್ತುತಿ ಇಲ್ಲೆಲ್ಲ ಸಾಮಾನ್ಯ.[೩೮] ಆಮೇಲೆ "ಜಯತಿ ಆವಿಷ್ಕೃತಂ ವಿಷ್ಣೋರ್..." ಎಂಬ ವಿಷ್ಣು (ವರಾಹ)ವಿನ ಅಥವಾ ತಮ್ಮ ಇಷ್ಟ ದೇವತಾ ಸ್ತುತಿ ಬರುವುದುಂಟು.[೩೯]

ಜೈನ ಮತಾವಲಂಬಿ ರಾಜರುಗಳ ಶಾಸನಗಳ ಆರಂಭ ಜಿನಸ್ತುತಿಯೊಂದಿಗೆ ಮೊದಲ್ಗೊಳ್ಳುವುದನ್ನು ಕಾಣುತ್ತೇವೆ. "ಸಂಪದ್ಯತಾಂ ಪ್ರತಿ ವಿಧಾನ ಹೇತವೇ...." ಶ್ಲೋಕ ಇರುವುದು ಸಾಮಾನ್ಯ.[೪೦]

ಉತ್ತರ ಭಾರತದ ಶಾಸನಗಳಲ್ಲಿ ಪ್ರಾರಂಭ ಬೇರೆ ರೀತಿಯಲ್ಲಿರುವುದನ್ನು ಗಮನಿಸಬಹುದು[೪೧] ವಿಜಯನಗರದ ಶಾಸನಗಳಲ್ಲಿ ಸಾಮಾನ್ಯವಾಗಿ ಗಣಪತಿಯ ಸ್ತೋತ್ರ ಮೊದಲು ಕಂಡುಬರುತ್ತದೆ. ತಲಕಾಡು ಗಂಗ ರಾಜರ ಶಾಸನಗಳ

ಆರಂಭ ರಾಜವಂಶಪರಂಪರೆಯ ವರ್ಣನೆಯನ್ನು ಒಳಗೊಂಡಿರುತ್ತದೆ. ಪಲ್ಲವ ರಾಜರ ಶಾಸನ ಪರಬ್ರಹ್ಮನ ಉಲ್ಲೇಖದೊಂದಿಗೆ ಮೊದಲುಗೊಳ್ಳುತ್ತದೆ.

ಕದಂಬರ ಶಾಸನಗಳು ತಮ್ಮ ವಂಶಾವಳಿಯನ್ನು ಮಾತೃಗಣಗಳಿಂದ ಪ್ರಾರಂಭಿಸುತ್ತಾರೆ. ಚಾಲುಕ್ಯರ ಶಾಸನಗಳೂ[೪೨] ಹಾಗೆಯೇ. ಭಗವಂತನ ಪ್ರಸಾದದಿಂದ ಈ ಭೂಮಂಡಲವನ್ನು ಆಳಲು ಅನುಗ್ರಹವಾಯಿತು ಎಂದು ಹೇಳುತ್ತವೆ. 'ಜಿತಂ ಭಗವತಾ' ಎಂಬುದು ತಲಕಾಡು ಗಂಗ[೪೩], ಕದಂಬ[೪೪], ಪಲ್ಲವ[೪೫] ಮುಂತಾದವರ ಶಾಸನಗಳಲ್ಲಿ ಕಂಡುಬರುತ್ತದೆ.

ಶಾಸನಗಳನ್ನು ರಚಿಸಿದ ಕವಿಗಳು ಕಾವ್ಯಮಯವಾಗಿ ಮಂಗಳ ಶ್ಲೋಕಗಳನ್ನು ಹೇಳುವುದು ಸಾಮಾನ್ಯ ಪದ್ಧತಿಯಾಗಿತ್ತು.[೪೬]

ಮೈಸೂರು ದೇಶದ ಚಿತ್ರದುರ್ಗದ ಹತ್ತಿರ ಇರುವ ಚಂದ್ರವಳ್ಳಿಯಲ್ಲಿ ಸಿಕ್ಕ ಕದಂಬ ಮಯೂರ ಶರ್ಮನ 'ಚಂದ್ರವಳ್ಳಿ ಶಾಸನ'ದಲ್ಲಿ ಮೊದಲಿಗೆ ಸೂರ್ಯ ಚಂದ್ರರ ಚಿಹ್ನೆ ಇದೆ.[೪೭] ಕಾಕುತ್ಸ್ಥವರ್ಮನ ತಾಳಗುಂದ ಶಿಲಾಸ್ತಂಭ ಶಾಸನ (ಕಾಲ ಕ್ರಿ.ಶ. ೫ನೆಯ ಶತಮಾನ) ಶಿವ ಸ್ತುತಿಯೊಂದಿಗೆ ಆರಂಭಗೊಳ್ಳುತ್ತದೆ.[೪೮]

ಗಂಗರಾಜ ಇಮ್ಮಡಿ ಮಾಧವನ ಪೆನುಗೊಂಡ ಶಾಸನದಲ್ಲಿ ವೈಷ್ಣವ ಮತಸೂಚಕ ಜಿತಂ ಭಗವತಾ ಒಕ್ಕಣೆ ಬರುತ್ತದೆ.[೪೯]

ಈಗ ಕನ್ನಡಕ್ಕೆ ಸಂಬಂಧಿಸಿದಂತೆ ಪ್ರಸಿದ್ಧವಾದ ಕದಂಬ ಕಾಕುತ್ಸ್ಥವರ್ಮನ ಹಲ್ಮಿಡಿ ಶಾಸನವನ್ನು ಗಮನಿಸೋಣ, ಇದು ಹಾಸನ ಜಿಲ್ಲೆಯ ಬೇಲೂರಿನ ಹತ್ತಿರ ಹಲ್ಮಿಡಿಯಲ್ಲಿ ದೊರಕಿದ್ದು, ಭಾಷೆ ಸಂಸ್ಕೃತ ಮತ್ತು ಕನ್ನಡ. ಕಾಲ ಕ್ರಿ.ಶ. ೪೫೦. ವಿಷ್ಣು ಸ್ತುತಿಯೊಂದಿಗೆ ಶಾಸನ ಪ್ರಾರಂಭವಾಗುತ್ತದೆ.[೫೦]

ಶೈವ, ವೈಷ್ಣವ ಮತ್ತು ಜೈನ ಧರ್ಮ ಸಮನ್ವಯಕ್ಕೆ ಹೆಸರಾಗಿದ್ದ ಚಾಲುಕ್ಯರ ಕಾಲಕ್ಕೆ ಈಗ ಹೋಗೋಣ. ಇಮ್ಮಡಿ ಪುಲಿಕೇಶಿಯ ಐಹೊಳೆ ಶಾಸನ ಜಿನಸ್ತುತಿ[೫೦]ಯೊಂದಿಗೆ ಪ್ರಾರಂಭಗೊಳ್ಳುತ್ತದೆ.[೫೧]

ಹೊಯ್ಸಳ ವಿಷ್ಣುವರ್ಧನನ ಬೇಲೂರು ಶಾಸನ. ಸರ್ವಧರ್ಮ ಸಮನ್ವಯತೆಗೆ ಹೆಸರಾದ ರಾಜರ ಆಳ್ವಿಕೆಯ ಕಾಲದ ಶಾಸನ ಇದು. ದೇವರು ಒಂದೇ, ನಮಗಿಷ್ಟವಾದ ಬೇರೆ ಬೇರೆ ಹೆಸರುಗಳಿಂದ ಅವನನ್ನು ನಾವು ಕರೆಯುತ್ತೇವೆ– ಎಂಬ ಉದಾತ್ತ ತತ್ತ್ವವನ್ನು ಸ್ಪಷ್ಟವಾಗಿ ನಿರೂಪಿಸುವ ಬೇಲೂರು ಶಾಸನ "ಯಂಶೈವಾಸ್ಸ ಮುಪಾಸತೇ....." ನಮಗೆಲ್ಲ ಸುಪರಿಚಿತ.[೫೨] ವಿಷ್ಣುವರ್ಧನನ ಇನ್ನೊಂದು ಶಾಸನದಲ್ಲಿ ಕೇಶವ ವಿಷ್ಣುವಿನ ಸ್ತುತಿ ಪ್ರಾರಂಭದಲ್ಲಿ ಗೋಚರಿಸುತ್ತದೆ.[೫೩]

ವಿಜಯನಗರದ ಅರಸರುಗಳಿಗೆ ತಮ್ಮ ಇಷ್ಟದೇವತೆಯ ಮೇಲೆ ಇದ್ದಷ್ಟೇ ಗೌರವ ತಮ್ಮ ಗುರುಗಳ ಮೇಲೆಯೂ ಇದ್ದಿತು. ಇದಕ್ಕೆ ಕುರುಹಾಗಿ ಗುರುಸ್ತುತಿಯೊಂದಿಗೆ ಆರಂಭಗೊಳ್ಳುವ ಅವರ ಕಾಲದ ಒಂದು ಶಾಸನ ಗಮನಾರ್ಹ.[೫೪]

ಶ್ರೀ ವೈಷ್ಣವ ಮತಪ್ರವರ್ತಕ ಆಚಾರ್ಯ ಶ್ರೀರಾಮಾನುಜರ ಪ್ರಭಾವ ಆಳುವ ಅರಸರ ಮೇಲೆ ದಟ್ಟವಾಗಿ ಹರಡಿದ ಮೇಲೆ ಅವರ ಗುರುಸ್ತುತಿಯೊಂದಿಗೆ ಪ್ರಾರಂಭಗೊಳ್ಳುವ ಶಾಸನಗಳಿವೆ. ನಿದರ್ಶನಕ್ಕೆ ಇಮ್ಮಡಿ ಬುಕ್ಕನ ಶ್ರವಣಬೆಳಗೊಳ ಶಾಸನ(ಕಾಲ ೧೩೬೮)ವನ್ನು ಗಮನಿಸಬಹುದು.[೫೫]

ಶಾಸನಗಳಷ್ಟೇ ಮಹತ್ವವುಳ್ಳ, ರಾಜಮಹಾರಾಜರುಗಳು ಚಲಾವಣೆಗೆ ಬಿಟ್ಟ ನಾಣ್ಯ ಸಂಪತ್ತಿನ ಕಡೆ ಈಗ ಕಣ್ಣು ಹಾಯಿಸೋಣ. ಶಾಸನಗಳ ಆರಂಭದಲ್ಲಿ ದೇವತಾ ಚಿಹ್ನೆಗಳನ್ನು ಕೆತ್ತಿಸಿದಂತೆ, ಪ್ರತಿಯೊಂದು ವಂಶದ ಅರಸರೂ ತಾವು ನಂಬಿದ ದೇವತೆಗಳ ಚಿತ್ರಗಳನ್ನು ತಮ್ಮ ಆಳ್ವಿಕೆಯ ನಾಣ್ಯಗಳ ಮೇಲೆ ಅಚ್ಚು ಹಾಕಿಸಿದ್ದಾರೆ. ಆದರೆ ನಾಣ್ಯಗಳ ಮೇಲೆ ಗೋಚರಿಸುವಷ್ಟು ಪ್ರಾಮುಖ್ಯತೆಯನ್ನು ಪಡೆಯಲು ವಿನಾಯಕ ಸ್ವಲ್ಪ ಕಾಲ ಕಾಯಬೇಕಾಯಿತೇನೋ. ಗಣಪತಿಯ ಚಿತ್ರ ವಿಜಯನಗರದ ಅರಸರ ಹಿಂದಿನ ಯಾವ ರಾಜರ ನಾಣ್ಯದ ಮೇಲೂ ಇದ್ದಂತಿಲ್ಲ.[೫೬]

ಹಂಪಿಯಲ್ಲಿ ದೊರಕಿರುವ ಒಂದು ಗಣೇಶ ನಾಣ್ಯದ ಬಗ್ಗೆ ಡಾ। ನರಸಿಂಹಮೂರ್ತಿಗಳು ವಿವರ ಕೊಟ್ಟಿದ್ದಾರೆ. ಇದು ಗಣೇಶ ನಮೂನೆಯ ಚಿನ್ನದ ನಾಣ್ಯ. ಇದರಲ್ಲಿನ ಗಣೇಶ ನಾಲ್ಕು ಕೈಗಳುಳ್ಳವನು. ವಿಜಯನಗರದ ಯಾವ ಅರಸರ

ಕಾಲದಲ್ಲಿ ಇದು ಚಲಾವಣೆಗೆ ಬಂದಿತು ಎಂಬುದು ಖಚಿತವಿಲ್ಲ.[೫೮] ಮುಂದೆ ಮೈಸೂರು ಒಡೆಯರ ನಾಣ್ಯಗಳಲ್ಲಿ ಗಣಪತಿ ಕಾಣಬರುತ್ತಾನೆ; ನಾಣ್ಯಗಳ ಪರಂಪರೆಯನ್ನು ಪ್ರಾರಂಭಿಸಿದ ಕಂಠೀರವ ನರಸರಾಜರ ಒಡೆಯರ ಕಾಲದಲ್ಲಿ (೧೬೪೬) ತಾಮ್ರದ ನಾಣ್ಯದ ಮೇಲೆ ಗಣಪತಿ ಚಿತ್ರವಿದೆ.[೫೯] ಮುಮ್ಮಡಿ ಕೃಷ್ಣರಾಜ ಒಡೆಯರ್ (೧೭೯೯–೧೮೬೮) ಕಾಲದ ಗಣೇಶ ನಾಣ್ಯ ವೊಂದಿದೆ.[೬೦] ಇವಲ್ಲದೆ ಗಣೇಶನ ಮುದ್ರಾಂಕಿತ ನಾಣ್ಯಗಳು ಬೇರೆ ಇದ್ದಂತಿಲ್ಲ.

ಈಗ ಶಾಸನಗಳ ಪ್ರಾರಂಭದಲ್ಲಿ ಗಣಪತಿಯ ಸ್ತುತಿ ಯಾವಾಗ ಆರಂಭಗೊಂಡಿರಬಹುದು ಎಂಬುದನ್ನು ಸ್ಥೂಲವಾಗಿ ವಿವೇಚಿಸಲು, ಒಂದು ದೇವಾಲಯದ ಸುತ್ತಮುತ್ತಣ ಎಲ್ಲಾ ಪ್ರಾತಿನಿಧಿಕ ಶಿಲಾಶಾಸನಗಳನ್ನು ಅಧ್ಯಯನ ಮಾಡೋಣ.[೬೧]

ಬಾದಾಮಿಯ ಚಾಳುಕ್ಯರಲ್ಲಿ ಪ್ರಸಿದ್ಧನಾದ ಇಮ್ಮಡಿ ಪುಲಿಕೇಶಿಯ ಮೊಮ್ಮಗ ವಿನಯಾದಿತ್ಯನ ಆಳ್ವಿಕೆ ಶಾಸನದಲ್ಲಿ ವಿಷ್ಣು ಸ್ತುತಿ ಇದೆ.[೬೨]

ಹರಿಹರದಲ್ಲಿ ದೊರಕುವ ಶಿಲಾಶಾಸನಗಳಲ್ಲಿ ಮೊಟ್ಟಮೊದಲನೆಯದು, ಕಲ್ಯಾಣದ ಚಕ್ರವರ್ತಿ ಇಮ್ಮಡಿ ಜಗದೇಕಮಲ್ಲ (ಕ್ರಿ.ಶ. ೧೧೩೯–೧೧೫೦)ನ ಕಾಲಕ್ಕೆ ಸೇರಿದ ಶಾಸನ. ಇದೂ ವರಾಹರೂಪೀ ವಿಷ್ಣುಸ್ತುತಿಯೊಂದಿಗೇ ಆರಂಭಗೊಳ್ಳುತ್ತದೆ.[೬೩]

ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲನ ಆಳ್ವಿಕೆಯಲ್ಲಿನ ಶಾಸನದಲ್ಲಿ ಯೋಗೇಶ್ವರನ ಸ್ತುತಿ ಮೊದಲಲ್ಲಿ ಬರುತ್ತದೆ, ಕೊನೆಯಲ್ಲಿ ದಾನ ಸ್ತುತಿಯು ಇದೆ ಎಂಬುದೇ ಈ ಶಾಸನದ ವಿಶೇಷ.[೬೪]

ಹರಿ ಮತ್ತು ಹರರ ಅದ್ವೈತ ಭಾವನೆಯನ್ನು ಪ್ರಕಾಶಪಡಿಸುವ ಉದ್ದೇಶವುಳ್ಳ, ಎರಡೂ ದೇವತೆಗಳನ್ನು ಒಟ್ಟಿಗೇ ಸ್ತುತಿಸುವ ಶ್ಲೋಕಗಳು ಸಕಾರಣವಾಗಿಯೇ ಈ ದೇವಾಲಯದ ಶಾಸನಗಳಲ್ಲಿ ಸಾಮಾನ್ಯ. ಅದೇ ಮೊದಲಿಗೆ ಕಂಡುಬರುವ ಸ್ತುತಿಪದ್ಯ.[೬೫]

ಶಿವ ಮತ್ತು ವಿಷ್ಣುವನ್ನು ಸ್ತುತಿಸುವುದರ ಜೊತೆಜೊತೆಗೆ ಪಾರ್ವತಿ ಮತ್ತು ಲಕ್ಷ್ಮಿಯನ್ನೂ ಧ್ಯಾನಿಸುವ ಶ್ಲೋಕಗಳು ಇಲ್ಲಿವೆ.[೬೬]

ಎಲ್ಲಾ ಶಾಸನಗಳ ಮಂಗಳಾಚರಣೆ ಪದ್ಯಗಳು ಸಂಸ್ಕೃತದಲ್ಲೇ ಇವೆ ಎಂದಲ್ಲ. ಅಪರೂಪಕ್ಕೆ ಕನ್ನಡದಲ್ಲಿ ದೇವತಾಸ್ತುತಿಯೊಂದಿಗೆ ಪ್ರಾರಂಭಗೊಳ್ಳುವ ಶಾಸನಗಳೂ ಇವೆ. ಉದಾಹರಣೆಗೆ: ಕಲ್ಕೇರಿ ಶಾಸನವನ್ನು ಗಮನಸಬಹುದು.[೬೭] ಹರಿಹರ ದೇವಾಲಯದಲ್ಲಿನ ಶಾಸನಗಳಲ್ಲಿ ಕೆಲವು ಹೀಗೆಯೇ ಕನ್ನಡ ಮಂಗಳಾಚರಣೆಯ ಪದ್ಯಗಳನ್ನು ಒಳಗೊಂಡಿವೆ.[೬೮]

ಆಳುವ ರಾಜರ ಮನೆ ದೇವತೆ ವರಾಹರೂಪೀ ವಿಷ್ಣು ಆದಾಗ ಆ ಸ್ತುತಿ ಸಾಮಾನ್ಯ. ಶಾಸನ ಕವಿಯ ಸ್ವ-ರಚಿತ ಪದ್ಯವೋ ಇಲ್ಲವೇ ಆ ಕಾಲದಲ್ಲಿ ಜನಪ್ರಿಯವಾದ ಒಂದು ಗ್ರಂಥದ ಪದ್ಯವೋ ಮೊದಲಿಗೇ ಬರುವುದು ಉಂಟು.[೬೯]

ಹರಿ–ಹರನಿಗೆ ಶಂಕರನಾರಾಯಣ ಎಂಬ ಅಭಿದಾನದಿಂದ, ಶಂಭುನಾರಾಯಣ ಎಂಬ ಹೆಸರಿನಿಂದ ಕರೆದು ಸ್ತುತಿಸಿರುವ ಶಾಸನಗಳೂ ಇವೆ.[೭೦]

ಈಗಿನ ಕಾಲದಲ್ಲಿ ಪ್ರತಿಷ್ಠಾನಗಳಲ್ಲಿ ಸೇವಾ ಕಾರ್ಯಗಳಿಗಾಗಿ ದತ್ತಿನಿಧಿಯೊಂದನ್ನು ಇಟ್ಟು, ಅದರ ಬಡ್ಡಿಯಿಂದ ಕಾರ್ಯಕ್ರಮಗಳು ನಡೆಯಲಿ–ಎಂದು ದಾನಿಯು ಅಪೇಕ್ಷೆ ಪಡುವುದು ಉಂಟಷ್ಟೆ. ಅಂತಹುದೇ ಒಂದು ಆಶಯವನ್ನ ಹರಿಹರ ದೇವಾಲಯದ ಒಂದು ಶಾಸನ ವ್ಯಕ್ತಪಡಿಸುತ್ತದೆ. ಇದು ಕಳಚೂರ್ಯರ ಸಾಮಂತ, ಬನವಾಸಿ ಹನ್ನೆರಡು ಸಾವಿರದ ಅಧಿಕಾರಿ ದುಗ್ಗರಸನು ದೇವರ ನಂದಾದೀಪದ ಸೇವೆಗೆಂದು ಕೊಟ್ಟ ಧನದ ಬಗ್ಗೆ ಶಾಸನ. ಕೊಟ್ಟದ್ದು ಕೇವಲ ಹತ್ತು ಗದ್ಯಾಣಗಳು ಮಾತ್ರ. ಇದು ಮೂಲ ಧನ. ಇದರ ಬಡ್ಡಿಯಿಂದ ದೇವರ ಕೈಂಕರ್ಯ ಶಾಶ್ವತವಾಗಿ ನಡೆಯಲೆಂಬುದು ಅವನ ಆಶಯ. ಕನ್ನಡ ಪದ್ಯದಿಂದ ಆರಂಭಗೊಳ್ಳುವ ಶಾಸನಗಳಲ್ಲಿ ಇದೂ ಒಂದು.[೭೧]

ಹೊಯ್ಸಳ ಚಕ್ರವರ್ತಿಯಾದ ಮೂರನೆಯ ನರಸಿಂಹನ ದಂಡನಾಯಕನಾದ, ಗಾಯಿಗೋವಳ, ಗಂಡಪೆಂಡಾರ ಎಂಬ ಬಿರುದುಗಳನ್ನು ಪಡೆದಿದ್ದ, ಸೋಮನಾಥನ ಶಾಸನ ಒಂದಿದೆ. ಹರಿಹರದ ಶಾಸನಗಳಲ್ಲಿ ಪ್ರಾರಂಭದ ಮಂಗಳಾಚರಣೆಯಲ್ಲಿ

ಮೊದಲಿಗೆ ಗಣಪತಿಯ ಸ್ತೋತ್ರ ಕಂಡು ಬರುವ ಅತ್ಯಂತ ಪ್ರಾಚೀನ ಶಾಸನ ಇದು.[೨]

ಗಣಪತಿಯ ಸ್ತುತಿಯನ್ನುಳ್ಳ ಇನ್ನೊಂದು ಶಾಸನ ಹರಿಹರದಲ್ಲಿದ್ದು, ಇದು ದೇವಗಿರಿಯ ಯಾದವರಿಗೆ ಸಂಬಂಧಿಸಿದ ಶಾಸನ. ದೇವಗಿರಿಯ ರಾಜ ರಾಮಚಂದ್ರನ ಕಾಲದ್ದು. ಮೊದಲ ಐದು ಪದ್ಯಗಳು ಬೇರೆ ಬೇರೆ ದೇವತಾಸ್ತುತಿಗಳು; ಆಮೇಲೆ ಬರುತ್ತದೆ ಗಣೇಶನ ಸ್ತುತಿ.[೩]

ಇತರ ದೇವತೆಗಳೊಂದಿಗೆ ಪ್ರಾಸಂಗಿಕವಾಗಿ ಗಣಪತಿಯನ್ನೂ ಸ್ತುತಿಸಿರುವ ಕೆಲವು ಶಾಸನಗಳಿವೆ. ಮನ್ಮಥ ಮತ್ತು ಗಣಪತಿಯರ ತಂದೆ ಎನ್ನುತ್ತಾ ಹರಿ-ಹರರನ್ನು ಸ್ತುತಿಸಿರುವ ಶಾಸನಗಳಿವೆ.[೪] ದಾವಣಗೆರೆಯ ಕೋಲಕುಂಟೆ ಗ್ರಾಮದ ಆಂಜನೇಯಸ್ವಾಮಿ ದೇವಾಲಯದ ಅಂಗಳದಲ್ಲಿ ನೆಟ್ಟಿರುವ ಶಾಸನ (ದಾ. ೧೩೧)ದ ಮೊದಲಲ್ಲಿ ದುಂಡಿ ಎಂಬ ಅಭಿದಾನದಿಂದ ಗಣಪತಿಯನ್ನು ಸ್ತುತಿಸಿರುವುದು ಕಂಡುಬರುತ್ತದೆ (ಕಾಶಿ ಕ್ಷೇತ್ರದಲ್ಲಿ ಇರುವ ಗಣಪತಿಗೆ ಧುಂಡಿ ಎನ್ನುತ್ತಾರೆ)[೫] ಇಲ್ಲಿಂದ ಮುಂದೆ ಶಾಸನಗಳ ಪ್ರಾರಂಭದಲ್ಲಿ 'ಶ್ರೀ ಗಣಾಧಿಪತಯೇ ನಮಃ ॥' ಎಂದು ಗಣಪತಿಯನ್ನು ಮೊಟ್ಟಮೊದಲಿಗೆ ನಮಸ್ಕರಿಸುವ ಪದ್ಧತಿ ಪ್ರಾರಂಭವಾದಂತೆ ಕಾಣುತ್ತದೆ.[೬]

ಶಾಸನಗಳು ಮತ್ತು ಶಾಸನಗಳಲ್ಲಿ ಹೇಳಿರುವ ಮಾತುಗಳು ಶಾಶ್ವತವಾಗಿ ಉಳಿಯಬೇಕು. ಅದರಲ್ಲಿ ತಿಳಿಸಿರುವ ಅಭಿಪ್ರಾಯಗಳು, ಆಜ್ಞೆಗಳು ನಿರಂತರವಾಗಿ ನಡೆದುಕೊಂಡು ಹೋಗಬೇಕು ಎಂಬುದು ಶಾಸನ ಕರ್ತೃಗಳ ಮನದಿಂಗಿತ. ತಮ್ಮ ಕಾಲದ ನಂತರ ಮುಂದೆ ಬರುವ ಎಲ್ಲ ಆಡಳಿತಗಾರರು ಶಾಸನಗಳಲ್ಲಿ ಹೇಳಿರುವಂತೆಯೇ ನಡೆದುಕೊಳ್ಳಬೇಕು ಎಂಬ ಕಳಕಳಿಯ ಪ್ರಾರ್ಥನೆ ಸಾಮಾನ್ಯವಾಗಿ ಎಲ್ಲಾ ಶಾಸನಗಳಲ್ಲೂ ಕಂಡು ಬರುತ್ತದೆ. ಈ ರೀತಿಯ ಪ್ರಾರ್ಥನೆಯನ್ನ ಶ್ರೀರಾಮಚಂದ್ರನೇ ಮಾಡುತ್ತಿದ್ದಾನೆ ಎಂಬ ಒಕ್ಕಣೆಯು ಶಾಸನಗಳ ಕೊನೆಯಲ್ಲಿ ಸಾಮಾನ್ಯವಾಗಿ ಬರುತ್ತದೆ.

**ಸಾಮಾನ್ಯೋಯಂ ಧರ್ಮಸೇತುರ್ ನೃಪಾಣಾಂ**
**ಕಾಲೇಕಾಲೇ ಪಾಲನೀಯೊ ಭವದ್ಭಿಃ**
**ಸರ್ವಾನ್ ಏತಾನ್ ಭಾವಿನಃ ಪಾರ್ಥಿವೇನ್ದ್ರಾನ್**
**ಭೂಯೋಭೂಯೋ ಯಾಚತೇ ರಾಮಚಂದ್ರಃ॥**

– ಹರಿಹರ ಶಾಸನ ೧೩(೪೪) ಕಾಲ ಕ್ರಿ.ಶ. ಸು. ೧೧೮೦

**ಅಡಿಟಿಪ್ಪಣಿಗಳು**

೧ ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ। ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ॥-ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ ೭ (ಪರಿಷ್ಕೃತ ಆವೃತ್ತಿ), ಹಾಸನ-೫೮; ಕಾಲ ಕ್ರಿ.ಶ. ೧೨೫೮; ಇಲ್ಲಿನ ವಿಷ್ಣು ಪದಕ್ಕೆ ರೂಢಿಯಲ್ಲಿರುವ ಹರಿಯೆಂಬ ಅರ್ಥದ ಹಿನ್ನೆಲೆಯಲ್ಲಿ ಇದು ಗಣೇಶನ ಸ್ತುತಿಯೇ ಅಥವಾ ವಿಷ್ಣುಪರ ಸ್ತುತಿಯೇ- ಎಂದು ಕೆಲವು ವಿದ್ವಾಂಸರು ಚರ್ಚಿಸಿರುವುದುಂಟು. (ಸಂಕೇತಾಕ್ಷರಗಳ ವಿವರಣೆ ಲೇಖನದ ಕೊನೆಯಲ್ಲಿದೆ.)

೨ ನಮಸ್ತೇ ಸೂನವೇ ಶಂಭೋಃ ಸರ್ವ-ವಿಘ್ನ-ವಿನಾಶಿನೇ। ಸರ್ವ ದೇವ ಶಿರಶ್ ಶೋಭ ರತ್ನ ಸಂಘಟ್ಟಿತ ಅಂಘ್ರಯೇ ॥ ಸೌ.ಇಂ.ಇ. ಸಂಪುಟ ೯. ಭಾಗ-೧ ಸಂಖ್ಯೆ-೭೦. ಕ್ರಿ.ಶ. ೯೭೧ (ಇಲ್ಲಿ ಮತ್ತು ಇನ್ನು ಮುಂದೆ, ಶಾಸನಗಳ ಸಂಸ್ಕೃತ ಶ್ಲೋಕಗಳನ್ನು ಈ ಲೇಖನದಲ್ಲಿ ಉಲ್ಲೇಖಿಸುವಾಗ ಸುಲಭವಾಗಿ ಅರ್ಥವಾಗಲು ಯಥೋಚಿತವಾಗಿ ನಾನು ಪದವಿಭಾಗ ಮಾಡಿದ್ದೇನೆ; ಮೂಲಶಾಸನಗಳಲ್ಲಿ ಹಾಗೆ ಪದವಿಭಾಗ ಮಾಡಿಲ್ಲ. ದಯವಿಟ್ಟು ಇದನ್ನು ಗಮನಿಸಬೇಕು)

೩ ಎ.ಇಂ. ೧೬, ಶಾಸನ ೨೫, ಕಾಲ ೧೨೫೫

೪ ಎ.ಕ. ೧೧, ದಾವಣಗೆರೆ ಶಾಸನ ೬೮, ಕಾಲ ೧೩೮೨

೫ ಲಭತೇ ಸರ್ವಕಾರ್ಯೇಷು ಪೂಜ್ಯಾಯ ಗಣನಾಯಕಃ। ವಿಘ್ನಂ ನಿಘ್ನನ್ನವಃ ಪಾಯಾದ್ ಅಪಾಯಾದ್ ಗಣನಾಯಕಃ॥-ಎ.ಇಂ. ೨೫. ಪುಟ ೩೫;೩೨ ಪುಟ ೬೬

೬ ಮೈ.ಆ.ರಿ. ೧೯೪೧, ಶಾಸನ ೪೮, ಕಾಲ ೧೩೮೭

೭ ಏಕದಂತಂ ವಿಘ್ನರಾಜಂ ಗಣಪತಿಂ ವಸುದಾಯಕಂ। ಲಂಬೋದರಂ ಮಹಾಕಾಯಂ ವಿನಾಯಕಂ ನಮೋಸ್ತುತೇ ॥ -ಎ.ಕ., ಸಂಪುಟ ೧೦ (ಪರಿಷ್ಕೃತ ಆವೃತ್ತಿ), ಅರಸೀಕೆರೆ-೩೦೧ ಕ್ರಿ.ಶ. ೧೧೯೫, ಎ.ಕ. ೫, ಅರಸೀಕೆರೆ ಶಾಸನ ೫, ಕಾಲ ೧೧೯೪.

೮ ಎ.ಕ. ೮, ಸೊರಬ ಶಾಸನ ೩೭೫, ಖಾಲ ೧೩೪೭

೯ ಎ.ಕ. ೧೧, ದಾವಣಗೆರೆ ಶಾಸನ ೬೮, ಕಾಲ ೧೩೮೨

೧೦ ಫಣಿಮಂಡನ, ಸೌ.ಇಂ.ಇ. ೯:೧, ಶಾಸನ ೧೯೭, ಕಾಲ ೧೧೧೯

೧೧ ನಾಗವಿಭೂಷಿತಾಂಗ, ಎ.ಕ. ೮, ತೀರ್ಥಹಳ್ಳಿ ಶಾಸನ ೨೦೦ ಕಾಲ ೧೪೪೫

೧೨ ಎ.ಇಂ. ೧೬, ಶಾಸನ ೨೫, ಕಾಲ ೧೨೫೫

೧೩ ಯನ್ ಮಾತೃ ಸ್ತಪಾನ ಕೇಳಿ ಸಮಯೇ ಸ್ಪಕ್ಷ ಪ್ರಾಣಾದ್ ಈಕ್ಷರತ್। ಕ್ಷೀರೋದಾರ ಝುರೀದ್ವಯಂ ವಿತನುತೇ ಯಸ್ಯ ಅಗ್ರಹಾರ-ಶ್ರಿಯಂ। ಸ್ಫಾಯತ್ ಫೇನ ತತಿ ಸ್ತನೋತಿ ಅಧರಗಾ ಯಸ್ಯ ದ್ವಿಜಾಲೀಚ್ ಛವಿಂ। ಕಲ್ಯಾಣಂ ಕಲಭಾನನಃ ಸ ಕಲಯೇಲ್ ಲೋಕತ್ರಯಸ್ಯೋಚಿತಮ್॥ -ಎ.ಕ ೧೦ (ಪರಿಷ್ಕೃತ ಆವೃತ್ತಿ), ಚನ್ನರಾಯಪಟ್ಟಣ ೧೩೧, ಕಾಲ ೧೩೭೮
ನೋಡಿ: ಮೇಲಿನ ಶ್ಲೋಕಕ್ಕೆ ಪ್ರೊ॥ ಎಚ್ ಎಂ ನಾಗರಾಜರಾಯರ ಅನುವಾದ, ತಾಯೆದೆ ಹಾಲ ಕುಡಿವಾಗ। ಕಟವಾಯಿಂದ ಬಂದಿಳಿದ। ಹಾಲಝುರಿಯಾಯ್ತೆ ತಾಯ ಕೊರಳಹಾರ?। ತುಟಿಗಂಟಿ ನಿಂತಂಥ ನೊರೆ ಸಾಲೆ ಆಯಿತೆ ದಂತ। ಒಳಿತು ಮಾಡಲಿ ಗಣಪತಿಯು ಮೂಲೋಕಕೆಲ್ಲ! – ಕನ್ನಡ ಪ್ರಭ ಆಗಸ್ಟ್ ೨೬, ೧೯೯೨;
ಇದನ್ನು ನೋಡಿ: ಪಾತು ತ್ರಿಲೋಕೀಂ ಪರಮಾರ್ಥ-ದಾಯಿ ಭವಾದ್ಮಜೋ ಬಾಲಗಣಾಧಿರಾಜಃ। ದಂತಾಂಕುರೋ ಯಸ್ಯ ಮುಖೇ ಕರೋತಿ ಗೌರೀ ಘನಸ್ತನ್ಯಜ ಫೇನ-ಶಂಕಾಮ್॥ -ಎ.ಕ. ೬, ಕೊಪ್ಪ ಶಾಸನ ೫೩, ಕಾಲ ೧೪೦೩

೧೪ ರಕ್ಷಾರ್ಥಂ ಜಗತಾಂ ಭೂತಾದ್ ದಯಾಲುರ್ ದ್ವರದಾನನಃ। ಆತಃ ಕ್ರೀಡಾಸರಾಂಸಿ ಆಸನ್ ಯಸ್ಯ ಸಪ್ತ ಮಹಾರ್ಣವಾಃ ॥ -ಎ.ಕ. ೧೧, ದಾವಣಗೆರೆ (ಹರಿಹರ) ಶಾಸನ ೬೮. (ಕಾಲ ಸು. ಕ್ರಿಶ. ೧೩೮೨?)
ದಾವಣಗೆರೆ(ಹರಿಹರ)ಯ ೬೭ನೆಯ ತಾಮ್ರಶಾಸನವೂ ಇದೇ ಮಾದರಿಯ ಶ್ಲೋಕವನ್ನೊಳಗೊಂಡಿದೆ. ಅದು ಶ್ರೀ ವಿರೂಪಾಕ್ಷನ ಅಂಕಿತದಲ್ಲಿ, ವಿಜಯನಗರದ ಆಳ್ವಿಕೆಯಲ್ಲಿನದು; ಶಕ ೧೨೭೮ ವಿಜಯ(ದುರ್ಮುಖಿ?) ಸಂವತ್ಸರ; ಕಾಲ ೧೩೫೬; ಅದರ ಪಾಠ ಹೀಗಿದೆ: ರಕ್ಷಾಯೈ ಜಗತಾಂ ಭೂಯಾದ್ ದಯಾಲುರ್ ದ್ವಿರದಾನನಃ। ಪಾಥಃ ಕ್ರೀಡಾ ಸರಾಂಸಿ ಆಸನ್ ಯಸ್ಯ ಸಪ್ತ ಮಹಾರ್ಣವಾಃ॥
ಗಣೇಶನ ಕ್ರೀಡಾ ಮನೋಭಾವದ ಮೇಲಿರುವ ದಾವಣಗೆರೆಯ ೬೮ನೇ ಶಾಸನಕ್ಕೆ ಚಿತ್ರಣ ಪೂರಕವಾಗಿದೆ: ವಿಘನೇಶೋ ವಃ ಸ ಪಾಯಾದ್ ವಿಭೃತೀಶು ಜಲಧಿನ್ ಪುಷ್ಕಾಪ್ರೇಣ ಪೀತ್ವಾ ಅಸ್ಮಿನ್ ಉದ್ಧೃತ್ಯತೋಯಂ ವಮತಿ ತದ್ ಅಖಿಲಂ ದೃಷ್ಯತೇ ದೇವೈಃ॥ ಹನುಮತ್ ಕವಿ, ಮಹಾನಾಟಕ ೧:೨.

೧೫ ದೇವಾನಾಂ ಸರಿತೋ ಜಲೈರ್ ಅವಿರಳಾಂ ಕ್ರೀಡಾಂ ಮುಹುರ್ ಭಾವಯನ್। ಸ್ಥೂಲೈರ್ ಬಿಂದುಭಿರ್ ಆಕಿರನ್ ನಿಜ ವಪುಃ ಕೃತ್ಸ್ನಾಂ ಚ ವಿಶ್ವಂಬರಾಮ್। ಕೋಕಾನಾಂ ಪ್ರೀತುಃ ಮೇಘ ಕೌತುಕ ಧಿಯಂ ಸಂಪಾದಯನ್ ಆದರಾದ್ ದಿಶ್ಯಾದ್ ವಃ ಸುಖಸಂಪದಂ ಕರಿವರಗ್ರೀವೋ ಅದ್ರಿಕನ್ಯಾಸುತಃ ॥ – ಮೈ.ಆ.ರಿ. ೧೯೩೩, ೨೩ನೇ ಶಾಸನ, ಕಾಲ: ೧೩೮೪

೧೬ ಕಲ್ಯಾಣಂ ಆಕಲಯತಾಂ ಕಲಭಾನನೋ ವಃ ಕ್ರೀಡಾಸು ಯಃ ಕರತಿಚರ್ಮ ಪಿತುಃ ಪಿದಾಯ। ಪೂರ್ಣ ದ್ವಿಪೇಂದ್ರ ನಟನೈರ್ ಅಭಯಪ್ರದಾನೋ ಮೋದಂಶಿವಸ್ಯ ವಿತಸೋ೦ಿ ಮಹಾನಟಸ್ಯ ॥ – ಮೈ.ಆ.ರಿ. ೧೯೪೧, ೪೮ನೇ ಶಾಸನ, ಕಾಲ ೧೩೮೭

೧೭ ವಿಲಸತು ವೈಭವಂ ಐಬಂ ಲೀಲಾ ಸಂಪ್ರಾಪ್ತ ಲೌಕಿಕಚ್ಛಾಯಮ್। ವಿಭೃತಿಶು ಯಸ್ಯ ಲಭಂತೇ ಕಂತುಕ ಲಕ್ಷ್ಮೀಂ ಅಜಾಂಡಶಂಡಾನಿ॥ – ಎ.ಕ. ೧೨, ಶಿಲಾಶಾಸನ ೯೫, ಕಾಲ ೧೪೦೩

೧೮ ಪರಿಮೃಶತಿ ತಪನಬಿಂಬಂ ಜಿಂಬಾಫಲಶಂಕಯಾ ಇನ ಹೇರಂಬೇ। ನವಕಮಲನಾಳಕ್ಷ್ಮೀಃ ಶುಂಡಾಕಾಂಡೋs
ಸ್ಯ ಖಂಡಯೇದ್ ವಿಘ್ನಾನ್ ॥ – ಎ.ಕ. ೯ (ಪರಿಷ್ಕೃತ), ಬೇಲೂರು ೧೭೧, ಕ್ರಿ.ಶ. ೧೩೮೨

೧೯ ಶ್ರೀಮತ್ ಸಿಂಧೂರ ಬಂಧ-ಅರುಣಜಿಂದು ನವ ಸಂಧ್ಯಾಂಬುದಂ ಪುಷ್ಕರಪ್ರೋದ್। ದಾಮಾಂಭಃ ಅಈ(ಶ್ರೀ)ಕರಂ ತಳ್ತುಡುಗಣಂ ಉರು ದಂಷ್ಟ್ರಾಂಕುರಂ ಬಾಲಚಂದ್ರಂ॥ ಪೋ ಮಾತೇನೆಂಬ ನೇರ್ಪಿಂ ನಭಮನ್ ಅನವರತಂ ಕೂರ್ತು ರಕ್ಷಿಸೆಮ್ಮಮ್॥೧॥
ತಣಿಯೆ ಸದಾಳಯಂ ಪೊರೆವ ದಾನ ಗುಣಂ ಪರಿಪೂರ್ಣಂ ಭದ್ರಲ-। ಕ್ಷಣಂ ಅಳವಟ್ಟ ಶಕ್ತಿ ಸುಮನಸ್ ಸ್ತುತಮಾದನ್ ಅವದ್ಯ ವಿದ್ವೆಸಂ॥ ದಣೀಯರಂ ಅವನೊಳ್ ನೆಗಟ್ದು ಎಮ್ಮವೊಲ್ ಎಂದು ಮುದಂ ಮಿಗಲ್ ಮಹಾ। ಗಣಪತಿ ಕೊರ್ಮೆಯಿಂ ಕುಡುಗೆ ಲಕ್ಷ್ಮಣ ಮಂತ್ರಿಗೆ ಅಭೀಷ್ಟ ಸಿದ್ಧಯಮ್॥೨॥ -ಮಧುರ ಕವಿ; ದಕ್ಷಿಣ ಇಂಡಿಯಾ ಶಾಸನಗಳು ೪, ಶಾಸನ ಸಂಖ್ಯೆ ೨೬೭, ಕಾಲ ೧೪೧೦ ಹಂಪೆಯಲ್ಲಿ ಕೃಷ್ಣಸ್ವಾಮಿ ದೇವಸ್ಥಾನದ ಬಳಿ ಇರುವ ಶಾಸನ; ಈ ಮಧುರ ಕವಿ ಲಕ್ಷ್ಮೀಧರ ಅಮಾತ್ಯನಿಗೆ ಬಹಳ ಪ್ರಿಯನಾಗಿದ್ದನು. ಆಕರ: ಕರ್ನಾಟಕ ಕವಿಚರಿತೆ, ಸಂಪುಟ ೧; ಪುಟ: ಅನುಬಂಧ ೧:೭೧.

೨೦ ರಿಂಗನ್ ಉತ್ತುಂಗ ರಂಗೇ ನಿಜ-ರದರ-ಧಿಯಾ ಶಂಕರಸ್ಯ ಉತ್ತಮಾಂಗಾದ್। ಆಕರ್ಷನ್ ಇಂದುಲೇಖಂ ಪಿತರಿ ನಿಜರದ ಸ್ತೇಯಂಆರೋಪಯಂಶ್ ಚ। ಮಾತುಃ ಪ್ರೋತ್ಸಾಹಯಂತ್ಯಾ ಸ್ಮಿತ ಶುಚಿ ವದನಂ ವೀಕ್ಷಮಾಣಃ ಸಹಾಸಮ್ ಬಾಲೋ ವಾತ್ಸಲ್ಯ ಭೂಮಿಃ ಕಲಯತು ಮುದಿತೋ ಮಂಗಳನ ಏಕದನ್ತಃ॥ -ಎ.ಕ. ೮ (ರೈಸ್ ಆವೃತ್ತಿ), ತೀರ್ಥಹಳ್ಳಿ ೨೦೬, ಕ್ರಿ ಶ. ೧೪೬೩; ಎ.ಕ. ೬ (ಪರಿಷ್ಕೃತ), ಶ್ರೀರಂಗಪಟ್ಟಣ ೨೧, ಕ್ರಿ ಶ. ೧೪೪೭; ಸೌ.ಇಂ.ಇ. ೯ ಭಾಗ ೨, ಸಂಖ್ಯೆ ೪೫೩, ಕ್ರಿ.ಶ. ೧೪೫೦.

೨೧ ಅಗಜಾನನ ಪದ್ಮಾರ್ಕಂ ಗಜಾನನಂ ಅಹರ್ನಿಶಂ। ಅನೇಕದಂತಂ ಭಕ್ತಾನಾಂ ಏಕದಂತಂ ಉಪಾಸ್ಮಹೇ॥-ಹುಣಸೂರು, ತರಿಕಲ್ಲು ಶಾಸನ, ಕಾಸೀಲಿಂಗನ ಗುಡಿಗೆ ದಕ್ಷಿಣ ಕಡೆ ನೆಟ್ಟ ಕಲ್ಲು, ಶಕೆ ೧೯೯೧, ಸೌಮ್ಯ ಕಾರ್ತೀಕ ಶುದ್ಧ ೧೨ (೨೬ ಅಕ್ಟೋಬರ್ ೧೬೬೯) ಎ.ಕ. ೪, ೩೨ (೪ ಹುಣಸೂರು ೧೩೯) ಪುಟ ೫೦೩; ಎ.ಎಲ. ೬(ಪರಿಷ್ಕೃತ) ಕೃಷ್ಣರಾಜಪೇಟೆ ಶಾಸನ, ಕಾಲ ೧೬೬೩; ಮೈ ಆ ರಿ ೧೯೪೪:೩೪, ಕಾಲ ೧೬೬೩, ಇತ್ಯಾದಿ; ಗೌರಿಯ ಮುಖಕಮಲವನ್ನರಳಿಸುವ ಇದೇ ಮಾತು ಇನ್ನೂ ಕೆಲವೆಡೆ ಬರುತ್ತದೆ. ನೋಡಿ; ಗೌರಿಮುಖ ಸರೋಜಾರ್ಕಂ ಪ್ರತ್ಯೂಹಧ್ವಂಸಿನಂ ಶಿವಂ । ಭಕ್ತಾನಾಂ ಇಷ್ಟದಂ ದೇವಂ ಕಲಯಾಮಿ ಗಣಾಧಿಪಂ ॥
– ಎ.ಕ. ೧೧ (ರೈಸ್ ಆವೃತ್ತಿ), ಹೊಳಲ್ಕೆರೆ-೯೬, ಕ್ರಿಶ. ೧೭೩೬

೨೨ ಗಜಾನನೋ ವಿಜಯತೇ ದಂತಕೋಟಿಂ ದಧತಿ ಯಃ । ಗ್ರಾಮಾನ್ ಹರಿಹರ ಪ್ರೋಕ್ತಾನ್ ಲಿಖಿತುಂ ಲೇಖನೀಂ ಇವ ॥ – ಎ.ಕ. ೫, ಬೇಲೂರು ಶಾಸನ ೧೪೮, ಕಾಲ ೧೩೮೫

೨೩ ಪಾಯಾದ್ ಗಜೇಂದ್ರವದನಃ ಸ ಇಮಾಂ ತ್ರಿಲೋಕಮ್। ಯಸ್ಯ ಉದ್ಧೃತೇನ ಗಗನೇ ಮಹತಾ ಕರೇಣ। ಮೂಲ–ಅವಲಗ್ನಾ ಸಿತ ದಂತಭಿಸ್ ಅಂಕುರೇಣ। ನಾಲಾಯಿತಂ ತಪನ್ ಅಬಿಂಬ ಸರೋರುಹಸ್ಯ ॥ – ಎ.ಕ. ೮, ತೀರ್ಥಹಳ್ಳಿ ಶಾಸನ ೨೦೦, ಕಾಲ ೧೪೪೫

೨೪ ಯಸ್ಯ ಆಲಾನಾಂ ಸತಾಂ ಚೇತಃ ಪ್ರಣವೋ ಮಣಿಘಂಟಿಕಾ ಅಂಕುಶಂ ಕೇವಲ ಭಕ್ತಸ್ ಸೋ ಅವತಾದ್ ವೋ ಮದಾವಲಃ ॥ ಮೈ.ಆ.ರಿ. ೧೯೩೩, ೨೭ನೇ ಶಾಸನ ಕಾಲ ೧೪೩೨; ಗಣೇಶ, ಘಂಟಾನಾದ ಮತ್ತು ಪ್ರಣವದ ವಿಚಾರಗಳಿರುವ ಇವನ್ನೂ ನೋಡಿ: ತೈಲಧಾರಾಂ ಇವ ಅಚ್ಛಿನ್ನಂ ದೀರ್ಘ ಘಂಟಾನಿನಾದವತ್। ಅವಾಚ್ಯಂ ಪ್ರಣವಸ್ಯಾಗ್ರಂ ಯಸ್ ತಂ ವೇದ ಸ ವೇದವಿತ್ ॥ – ಧ್ಯಾನ ಬಿಂದು ಉಪನಿಷತ್ ೧೮; ರಣತ್ ಕ್ಷುದ್ರ ಘಂಟಾ ನನಾದ ಅಭಿರಾಮಂ ॥ ಶಂಕರಾಚಾರ್ಯ, ಗಣೇಶ ಭುಜಂಗ ಪ್ರಯಾತಂ, ಶ್ಲೋಕ ೧, ನೋಡಿ ಬೃಹತ್‌ಸ್ತೋತ್ರ ರತ್ನಾಕರ, ಪುಟ ೪೮

೨೫ ಕಲ್ಯಾಣಾಯ ಅಸ್ತು ತದ್ ಧಾಮ ಪ್ರತ್ಯೂಹತಿ ತಿಮಿರಾಪಹಂ । ಯದ್ ಗಜೋऽ
ಪಿ ಅಗಜೋದ್ ಭೂತಂ ಹರಿಣಾಪಿ ಚ ಪೂಜ್ಯತೇ॥–ಎ.ಕ. ೪:೨೯೧ (ಲಿ ೧೯೭೩–೫೮); ಎ.ಕ. ೮ (ಪರಿಷ್ಕೃತ), ಹಾಸನ–೯, ಕ್ರಿ.ಶ. ೧೫೬೧; ಹರದನಹಳ್ಳಿ ಊರಿನಲ್ಲಿ ರಾಮಕೃಷ್ಣ ಜೋಯಿಸರಲ್ಲಿದ್ದ ತಾಮ್ರ ಶಾಸನ. ಶಕ ೧೬೬೬, ರಕ್ತಾಕ್ಷಿ, ವೈಶಾಖ ಪೂರ್ಣಿಮಾ ಭಾನುವಾರ ಚಂದ್ರಗ್ರಹಣ (ಏಪ್ರಿಲ್ ೧೫, ೧೭೪೪) ಈ ಶಾಸನ ಇನ್ನೊಂದು ಕಾರಣಕ್ಕೆ ಪ್ರಾಮುಖ್ಯತೆ ಪಡೆದಿದೆ. ಈ ಶಾಸನದಲ್ಲಿ ಅಂದಿನ ಮೈಸೂರು ರಾಜ್ಯವನ್ನು ಆಳಿದ ಯದುವಂಶದ ರಾಜರುಗಳ ವಂಶಾವಳಿಯನ್ನಾಗಿ ಕೊಟ್ಟಿದ್ದಾರೆ. ಉತ್ತರದಿಂದ ಬಂದು, ಮಹಿಸೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕಾವೇರಿಯ ಸುತ್ತಮುತ್ತಣ ಪ್ರದೇಶವನ್ನು ಈ ಒಡೆಯರು ಆಳಿದ ವಿಚಾರ ಇಲ್ಲಿದೆ.

೨೬ ಕ್ಷೇತ್ರಾನಾಂ ಅಭವತ್ ತುಲ್ಯಾ ಸ್ಥಿತಾ ಯದ್ ದಾನ ಸೀಕರಾಃ॥– ಎ.ಕ. ೯, ದೇವನಹಳ್ಳಿ ಶಾಸನ ೮೧, ಕಾಲ ೧೪೨೫

೨೭ ಸಮವತು ಗಜವದನೋ ವಃ ಶಶ್ವದ್ ವಿಶ್ವಪ್ರಶಸ್ತ ವಿಸ್ತಾರಃ। ಅನುಕುರುತೇ ಯಃ ಪಿತರಂ ಮದ–ಜಳಮಿಳಿತ–ಆಲಿ–ನೀಲಿತ–ಗ್ರೀವಃ॥– ಎ.ಕ. ೯; ದಾವಣಗೆರೆ (ಹರಿಹರ) ಶಾಸನ ೩೬, ಕಾಲ ಶಕ ೧೧೯೦, ವಿಭವ, ಕ್ರಿ.ಶ. ೧೨೬೮;

ನೋಡಿ: ಹ ಶಾ. ಪುಟ ೨೯; ಹೊಯಿಸಳ ಚಕ್ರವರ್ತಿ ಮೂರನೆಯ ನರಸಿಂಹನ ದಂಡನಾಯಕ ಸೋಮದಂಡನಾಥನ ಶಾಸನ ಇದು; ಕವಿ ಗಂಗಾಧರಾರ್ಯ ಇರಬಹುದೆಂಬ ಊಹೆಯಿದೆ. ಹರಿಹರದ ಈ ಶಾಸನ, ಬೇರೆಲ್ಲೂ ದೊರೆಯದ ಶ್ರೀ ವಿದ್ಯಾನಧಿಪ್ರಸನ್ನ ಸೋಮನಾಥಪುರದ ಮಹತ್ವವನ್ನೂ ದೇವಾಲಯದ ನಿರ್ಮಾಣದ ವಿವರಗಳನ್ನೂ ತಿಳಿಸುತ್ತದೆಯೆಂಬುದೇ ಈ ಶಾಸನದ ಇನ್ನೊಂದು ವಿಶೇಷ.

೨೮ ನಮಸ್ ತಸ್ಮೈ ಗಣೇಶಾಯ ನಿತ್ಯಂ ಯದ್ ಗಂಡಮಂಡಲೇ। ಭೃಂಗಮಾಲಾದ್ವಿಗುಣಿತಾ ದಾನಂಭಃ ಕರ್ಣ–ಮಂಜರೀ॥ –ಎ.ಕ.೧೧; ದಾವಣಗೆರೆ (ಹರಿಹರ) ಶಾಸನ ೩೪, ಕಾಲ (ಶಕ ೧೩೦೧ ಸಿದ್ಧಾರ್ಥಿ ಕ್ರಿ.ಶ. ೧೩೭೯; ಶಿಲಾಶಾಸನದ ಕವಿ: ಧರಣೋಜ.

೨೯ ಜಯಂತಿ ದ್ವಿಪ–ವಕ್ತ್ರಸ್ಯ ಗಂಡಮಂಡಲ–ಷಟ್ಪದಾಃ। ಪ್ರಥ್ಯೂಹ ವಿ..ಯೇನೈವ ಪ್ರಾಪ್ತಾ ವಿರುತ ಡಿಂಡಿಮಾಃ॥ – ಮೈ ಆ ರಿ. ೧೯೨೫, ನಂ ೩೪, ಕಾಲ ೧೪೦೮

೩೦ ಹೇರಂಬಾಯ ನಮಸ್ ತಸ್ಮೈ ಯದ್ ದಂಡ ಗೃಹಮೇಧಿನಾಂ। ಮಧುವ್ರತಾನಾಂ ಸಂಗೀತ– ಮೌಖರೀ ಭವತಿ ತ್ರಯೀ॥ – ಮೈ.ಆ.ರಿ. ೧೯೪೧, ನಂ. ೨೦, ಕಾಲ ೧೪೨೯

೩೧ ನಮಸ್ತೇ ಸೂನವೇ ಶಂಭೋಃ ಸರ್ವ–ವಿಘ್ನ–ವಿನಾಶಿನೇ। ಸರ್ವದೇವ ಶಿರಸ್ ಶೋಭಾ ರತ್ನ ಸಂಘಟಿತ್ ಅಂಘ್ರಯೇ॥ – ಸೌ ಇಂ ಇ ೯:೧:೭೦ ಕಾಲ ೯೭೧

೩೨ ಗಜಮುಖನ್ ಈಶಪುತ್ರನ್ ಅಮಳ–ಅಂಬುರುಹ–ಆಯತನೇತ್ರನ್ ಅಂಬಿಕಾ। ಆತ್ಮಜನ್ ಅಜರಾಮರಂ ಜಠರ ಪನ್ನಗ ಮಸ್ತಕ ರತ್ನ ಭಾನುವಿಂ। ರಜನಿಯೊಳ್ ಆದೊಡಂ ವಿಕಚ ಪಾದಪಯೋಜನ್ ಅಮೇಯ ವಿಕ್ರಮಂ। ತ್ರಿಜಗದ್ ಈಶ್ವರಂ ಕೊಡುಗೆ ನಮ್ಮ ಮನೋರಥಮಂ ಗಣಾಧಿಪಂ॥ – ಎ.ಕ. ೧೧ (ರೈಸ್ ಆವೃತ್ತಿಯಲ್ಲಿ ೨೩), ದಾವಣಗೆರೆ (ಹರಿಹರ) ೫೯, ಶಕ ೧೧೨೯ ಈಶ್ವರ ಸಂವತ್ಸರ, ಕ್ರಿ.ಶ. ೧೨೦೭. ನೋಡಿ: ಹ.ಶಾ. ಪುಟ ೩೨೭. ದೇವಾಲಯದ ಊರಿನವರೂ ಸಂಬಂಧಪಟ್ಟ ಪರಸ್ಥಳದವರೂ ಒಟ್ಟಾಗಿ ಸಭೆಸೇರಿ ಹೇಗೆ ಸಮಾಲೋಚನೆ ಮಾಡುತ್ತಿದ್ದರೆಂಬುದು ಒಂದು ವಿಶೇಷ.

೩೩ ಯಂ ಬ್ರಹ್ಮಾ ವೇದಾಂತವಿದೋ ವದಂತಿ। ಪರಮಂ ಪ್ರಧಾನಂ ಪುರುಷಂ ನಿದಾನಂ। ವಿಶ್ವೋದ್‌ಗತೇಃ ಕಾರಣಂ ಈಶ್ವರಸ್ಯ ನಮೋऽ
ಸ್ತು ತೇ ವಿಘ್ನವಿನಾಯಕಸ್ಯ॥ (ವಿಘ್ನವಿನಾಯಕಾಯ?) – ಎ.ಕ. ೮; (ರೈಸ್ ಆವೃತ್ತಿ), ಸಾಗರ ೮೮; ಕಾಲ ೧೧೯೫; ಜಗತ್ತಿಗೇ ಕಾರಣನಾದವನು ಈ ಗಣೇಶ ಎಂಬ ಮಾತು ಇನ್ನೂ ಹಲವು ಕಡೆ ಬರುತ್ತದೆ. ನೋಡಿ: ಮೈ.ಆ.ರಿ. ೧೯೪೩, ಶಾಸನ ೪೬, ಕಾಲ ೧೩೮೮. ಈ ಬಗೆಯ ಆರಾಧಕರಿಗೆ ಗಾಣಪತ್ಯರು ಎನ್ನುತ್ತಾರೆ. ೧೦ನೇ ಶತಮಾನದಲ್ಲಿ ಗಾಣಪತ್ಯರ ಪ್ರಭಾವ ಹೆಚ್ಚಾಗಿತ್ತು. ಶಾಕ್ತರು, ಸೌರರು ಮತ್ತು ಗಾಣಪತ್ಯರನ್ನ ಒಳಗೊಂಡಂತೆ ಪಂಚಾಯತನ ಪೂಜೆಯ ಕ್ರಮವನ್ನು ಬಳಕೆಗೆ ತಂದ ಕೀರ್ತಿ ಆಚಾರ್ಯ ಶಂಕರರದ್ದು.

೩೪ ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಂ ಉಪಕ್ರಮೇ। ಯಂ ನತ್ವಾ ಕೃತಕೃತ್ಯಾಸ್ಸುಸ್ ತಂ ನಮಾಮಿ ಗಜಾನನಂ ॥ – ಎ.ಕ. ೪: ೧೬೮ (೧೪ ಯಳಂದೂರು ೧೯೦) ಪುಟ ೩೭೭; ಏಪ್ರಿಲ್ ೨, ೧೫೧೯ (ಶಕ ೧೪೪೧, ಪ್ರಮಾಥಿ, ವೈಶಾಖ ಶುದ್ಧ ೩); ಆಲಕೆರೆ ಶಾಸನ; ಲಿಂಗದಗುಡಿ ಹಿತ್ತಲಲ್ಲಿ ಬಾವಿಯ ಬಳಿ ಹೂತಿರುವ ಶಾಸನ. ಹದಿನಾಡು ಹೊಯಿಸಣ ದೇಶದಲ್ಲಿ ಇತ್ತು; ಗ್ರಾಮಕ್ಕೆ 'ಕೃಷ್ಣ ಸಮುದ್ರ' ಎಂದು ಹೆಸರು ಬಂತು– ಎನ್ನುವುದು ಒಂದು ವಿಶೇಷ.

೩೫ ಬ್ರಹ್ಮಾದಯೋ ವಿಘ್ನವಿನಾಶನಸ್ಯ ಯತ್ನೇನ ಪಾದಾಂಬುಜಂ ಅರ್ಚಯಂತಿ॥ – ಎ.ಕ. ೮; ತೀರ್ಥಹಳ್ಳಿ ಶಾಸನ ೨೦೦, ಕಾಲ ೧೪೪೫; ವಿಜಯನಗರದ ರಾಜ ಇಮ್ಮಡಿ ದೇವರಾಯನ ಕಾಲದ್ದು.

೩೭ ಆಲಂಬೇ ಗಜದಾಲಂಬಂ ಲಂಬೋದರ ಪದಾಂಬುಜಂ। ಶುಷ್ಯಂತಿ ಯದ್ ರಜಃ ಸ್ಪರ್ಶಾತ್ ಸದ್ಯಃ ಪ್ರತ್ಯೂಹ-ವಾರ್ಧಯಃ॥ - ಎ.ಕ. ೮ (ರೈಸ್ ಆವೃತ್ತಿ), ತೀರ್ಥಹಳ್ಳಿ ೨೦೦, ಕ್ರಿ.ಶ. ೧೨೮೦.

೩೭ ಅಭೀಪ್ಸಿತ-ಅರ್ಥ-ಸಿದ್ಧ್ಯರ್ಥಂ ಪೂಜಿತೋ ಯಃ ಸುರೈರ್ ಅಪಿ। ಸರ್ವ ವಿಘ್ನಚ್ಛಿದೈ ತಸ್ಮೈ ಶ್ರೀ ಗಣಾಧಿಪತಯೇ ನಮಃ॥ - ಎ.ಕ. ೬ (ಪರಿಷ್ಕೃತ) ಚನ್ನರಾಯಪಟ್ಟಣ ಶಾಸನ ೧೩೨, ಕಾಲ ೧೨೬೭; ಈ ಶಾಸನದಲ್ಲಿ ಪಾಠ ಹೀಗಿದೆ: ಅಭೀಪ್ಸಿತಾರ್ಥ ವೃದ್ಧ್ಯರ್ಥಂ ಪೂಜಿತೋ ಯಃ ಸುರೈರ್ ಅಪಿ। ಸರ್ವಪಾಪಛಿದೇ ತಸ್ಮೈ ಶ್ರೀ ಗಣಾಧಿಪತಯೇ ನಮಃ ॥

೩೮ ನಮಸ್ತುಂಗ ಶಿರಶ್ಚುಂಬಿ ಚನ್ದ್ರಚಾಮರಚಾರವೇ। ತ್ರೈಲೋಕ್ಯನಗರಾರಂಭ ಮೂಲಸ್ತಮ್ಭಾಯ ಶಂಭವೇ॥ ನೋಡಿ: ಡಾ। ಎ.ವಿ. ನರಸಿಂಹಮೂರ್ತಿ, ಕರ್ನಾಟಕ ಶಾಸನ ಸಂಪತ್ತು, ಪುಟ ೨೮

೩೯ ಜಯತಿ ಆವಿಷ್ಕೃತಂ ವಿಷ್ಣೋರ್ ವರಾಹಂ ಕ್ಷೋಭಿತಾರ್ಣವಂ। ದಕ್ಷಿಣೋನ್ನತ ದಂಷ್ಟ್ರಾಗ್ರ ವಿಶ್ರಾನ್ತಭುವನಂ ವಪುಃ॥ ಹರೇರ್ ಲೀಲಾವರಾಹಸ್ಯ ದಂಷ್ಟ್ರಾದಣ್ಡಸ್ ಸ ಪಾತು ವಃ। ಹೇಮಾದ್ರಿ ಕಲಶಾಯತ್ರ ಧಾತ್ರೀಛತ್ರೇ ಶ್ರಿಯಂ ದಧೌ॥

೪೦ ಸಂಪದ್ಯತಾಂ ಪ್ರತಿ ವಿಧಾನ ಹೇತವೇ॥ ಭದ್ರಮಸ್ತುಜಿನಶಾಸವಾಯ ಅನ್ಯವಾದಿ ಮದಹಸ್ತಿ ಮಸ್ತಕ ಸ್ಫಾಟನಾಯ ಘಟನೇ ಪಟೀಯಸೇ॥ ಶ್ರೀಮತ್ಪರಮ ಗಂಭೀರಸ್ಯಾದ್ವಾದಾಮೋಘ ಲಾಂಛನಂ॥ ಜೀಯಾತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ॥

೪೧ ಉತ್ತರ ಭಾರತದ ಶಾಸನಗಳಿಗೆ ಉದಾಹರಣೆ: ಸವೋವ್ಯಾದ್ವೇಧಸಾ ಧಾಮಯನ್ನಾಭಿಕಮಲಂ ಕೃತ। ಹರಸ್ಯ ಯಸ್ಯಕಾಂತೇಂದು ಕಲಯಾ ಕಂ ಅಲಂಕೃತಂ॥

೪೨ ಚಾಳುಕ್ಯರ ಶಾಸನಗಳು: ಸ್ವಸ್ತಿ ಶ್ರೀಮತಾಂ ಸಕಲಭುವನ ಸಂಸ್ತೂಯಮಾನ ಮಾನವ್ಯ ಸಗೋತ್ರಾಣ ಹಾರಿತೀಪುತ್ರಾಣಾಂ ಮಾತೃಗಣ ಪರಿಪಾಲಿತಾನಾಂ ಸ್ವಾಮಿ ಮಹಾಸೇನ ಪಾದಾನುಧ್ಯಾತಾನಾಂ ಭಗವನ್ನಾರಾಯಣ ಪ್ರಸಾದ ಸಮಾಸಾದಿತಂ ವರಾಹ ಲಾಂಛನೇಕ್ಷಣ ಕ್ಷಣ ವಶೀಕೃತಾಶೇಷಾ ಭೂಮಂಡಲಾನಾಂ॥

೪೩ ತಲಕಾಡು ಗಂಗರ ಶಾಸನಗಳ ಆರಂಭ: ಜಿತಂ ಭಗವತಾ ಗತಘನ ಗಗನಾಭೇನ ಪದ್ಮನಾಭೇನಶ್ರೀಮಜ್ಜಾಹ್ನವೇಯ ಕುಲಾಮಲ ವ್ಯೋಮಾವ ಭಾಸನ ಭಾಸ್ಕರಸ್ಯ; ಸಾಲಂಕಾಯನರ ಶಾಸನ ಸ್ವಸ್ತಿ ವಿಜಯ ವೇಂಗೀಪುರಾದ್ ಭಗವಚ್ ಚಿತ್ರರಥಸ್ವಾಮಿ ಪಾದಾನುಧ್ಯಾತೋ ಶ್ರೀ ಸಾಲಂಕಾಯನ ಮಹಾರಾಜಃ

೪೪ ಕದಂಬರು: ಸ್ವಸ್ತಿ ವಿಜಯ ವೈಜಯನ್ತ್ಯಾಂ ಸ್ವಾಮಿ ಮಹಾಸೇನ ಮಾತೃ ಗಣಾನುದ್ಧ್ಯಾತಾಭಿಷಿಕ್ತಾನಾಂ ಮಾನವ್ಯ ಸಗೋತ್ರಾಣಾಂ ಹಾರಿತೀಪುತ್ರಾಣಾಂ ಪ್ರತಿಕೃತ ಸ್ವಾಧ್ಯಾಯ ಚರ್ಚಾಪರಾಣಂ॥

೪೫ ಪಲ್ಲವರ ಶಾಸನಗಳ ಆರಂಭ: ಜಿತಂಭಗವತಾ ಶ್ರೀ ವಿಜಯಪಲಕ್ಕಡ ಸ್ಥಾನಾತ್ ಪರಬ್ರಹ್ಮಣ್ಯಸ್ಯ॥

೪೬ ಲೇಖನದ ಈ ಉತ್ತರಾರ್ಧದಲ್ಲಿ ಉಲ್ಲೇಖಿಸಿರುವ ಶಾಸನ ಭಾಗಗಳಿಗೆ ಆಕರ: ಡಾ। ಎಸ್. ಶ್ರೀಕಂಠಶಾಸ್ತ್ರೀ, ಪುರಾತತ್ವ ಶೋಧನೆ, ಪುಟ ೨೬೨-೨೬೫.

೪೭ ಕದಂಬ ಮಯೂರಶರ್ಮನ ಚನ್ದವಳ್ಳಿ ಶಾಸನ(ಕಾಲ: ಕ್ರಿ.ಶ. ಸು.೩೩೦): ಕದಂಬ ಮಯೂರಶಮ್ಮಣವಿನಿಮ್ಮಿ ಅಂ। (ಸೂರ್ಯ ಚಂದ್ರ ಚಿಹ್ನೆ)। ತಟಾಕಂ ದುಭ(?)ತ್ರೆ ಕೂಟ ಆಭಿರ ಪಲ್ಲವ ಪುರಿ-। ಯೋತಿಕ ಸಕಸ್ಥನ ಸಯಿನ್ಧಕ ಪುಣಾಟ ಮೊಕರಿಣ (॥) ಇದರ ಭಾಷೆ ಪ್ರಾಕೃತ; ದಾಕ್ಷಿಣಾತ್ಯ ಬ್ರಾಹ್ಮಿ ಲಿಪಿ ಕಾಲ ಸು. ಕ್ರಿ.ಶ. ೩೩೦;

೪೮ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಾಳಗುಂದ ಊರಿನಲ್ಲಿರುವ ಪ್ರಣವೇಶ್ವರ ದೇವಾಲಯದ ಮುಂದಿನ ಶಿಲಾಸ್ತಂಭದ ಮೇಲೆ ಬರೆಯಲ್ಪಟ್ಟ, ಕದಂಬ ಕಾಕುತ್ಸ್ಥವರ್ಮನ ಮಗನಾದ ಶಾಂತಿ ವರ್ಮನ ಆಜ್ಞೆಯಂತೆ ಇದು ಸ್ಥಾಪಿತವಾಗಿದೆ. ಭಾಷೆ ಸಂಸ್ಕೃತ, ದಾಕ್ಷಿಣಾತ್ಯ ಬ್ರಾಹ್ಮೀ ಪೇಟಿಕಾಶಿರ ಲಿಪಿ ಕಾಲ ಕ್ರಿ.ಶ. ೫ನೇ ಶತಮಾನ, ಕವಿ ಕುಬ್ಜ. ಕಾಕುತ್ಸ್ಥವರ್ಮನ ತಾಳಗುಂದ ಶಿಲಾಸ್ತಂಭ ಶಾಸನ (ಕಾಲ ಕ್ರಿ.ಶ. ೫ನೆಯ ಶತಮಾನ); ಸಿದ್ಧಂ। ನಮಶ್ಶಿವಾಯ। ಜಯತಿ ವಿಶ್ವದೇವ ಸಂಘಾತ ನಿಚಿತೈಕ ಮೂರ್ತಿಸ್ಸನಾತನಃ। ಸ್ಥಾಣುರಿನ್ದುರಶ್ಮಿ ವಿಚ್ಛುರಿತ ದ್ಯುಲುತಿಮಜ್ಜಟಾಭಾರ ಮಣ್ಡನಃ॥

೪೯ ಗಂಗ ಇಮ್ಮಡಿ ಮಾಧವನ ಪೆನಗೊಂಡ ಶಾಸನ (ಕಾಲ ಸು. ಕ್ರಿ.ಶ. ೪೭೫): ಭಾಷೆ ಸಂಸ್ಕೃತ, ಕಾಲ ಕ್ರಿ.ಶ. ಸು. ೪೭೫. ಓಂ? ಸಿದ್ಧಂ ಸ್ವಸ್ತಿ.। ಜಿತಮ್ಭಗವತಾ ಗತಘನಗಗನಾಭೇನ ಪದ್ಮನಾಭೇನ । ಶ್ರೀಮಜ್ಜಾಹ್ನವೇಯಕುಲಾಮಲವ್ಯೋಮಭಾ- । ಸನಭಾಷ್ಕರಸ್ಯ ಸ್ವಭುಜಜವಜ ಜಯಜನಿತ ಸುಜನಜನ ಪದಸ್ಯ ದಾರುಣಾರಿಗಣ ವಿದಾರಣರಣೋಪ-.. ...॥

೫೦ ಕದಂಬ ಕಾಕುತ್ಸ್ಥವರ್ಮನ ಹಲ್ಮಿಡಿ ಶಾಸನ (ಕಾಲ ಸು. ಕ್ರಿ.ಶ. ಸ. ೪೫೦): ಜಯತಿ ಶ್ರೀ ಪರಿಷ್ವಙ್ಗಮಾನತಿರಚ್ಯುತಃ ದಾನವಾಕ್ಷೋಯರ್ುಗಾನ್ತಾಗ್ನಿಃ ಶಿಷ್ಟಾನಾಂತು ಸುದರ್ಶನಃ (॥)

೫೧ ೧೦-೧೧ನೇ ಶತಮಾನಗಳ ಜೈನ ಶಾಸನಗಳ ಪ್ರಾರಂಭ ಸಾಮಾನ್ಯವಾಗಿ ಹೀಗಿದೆ: ಶ್ರೀಮತ್ ಪರಮ ಗಂಭೀರಸ್ಯಾದ್ ವಾದಾಮೋಘ ಲಾಂಛನಂ। ಜೀಯಾತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನ ಶಾಸನಮ್॥

೫೨ ಬಾದಾಮಿ ಚಾಲುಕ್ಯ ಇಮ್ಮಡಿ ಪುಲಿಕೇಶಿಯ ಐಹೊಳೆ ಶಾಸನ, ಬಿಜಾಪುರ ಜಿಲ್ಲೆಯ ಐಹೊಳೆಯಲ್ಲಿರುವುದು. ಭಾಷೆ ಸಂಸ್ಕೃತ, ಲಿಪಿ ಏಳನೇ ಶತಮಾನದ ಕನ್ನಡ ತೆಲುಗು, ಕಾಲ ಕ್ರಿ.ಶ. ೬೩೪. ಜಯತಿ ಭಗವಜ್ಜೇನೇನ್ದ್ರೋ...ಣ ಜನ್ಮನೋ। ಜ್ಞಾನಸಮುದ್ರಾನ್ತರ್ಗತಮಖಿಲ ಜಗದನ್ತರೀಪಮಿವ॥

೫೩ ಯಂ ಶೈವಾ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ। ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯ್ಯಾಯಿಕಾಃ॥ ಅರ್ಹನ್ ಇತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ। ಸೋಯಂ ವೋ ವಿದಧಾತು ವಾಂಛಿತ ಫಲಂ ಶ್ರೀ ಕೇಶವಸ್ ಸದಾ॥

೫೪ ಹೊಯ್ಸಳ ವಿಷ್ಣುವರ್ಧನ ಬೇಲೂರು ಶಾಸನ (ಕಾಲ ಕ್ರಿ.ಶ. ?) ಶ್ರೀಮತ್ರೈಲೋಕ್ಯಪೂಜ್ಯಾಯ ಸರ್ವಕರ್ಮಸುಸಾಕ್ಷಿಣೇ । ಫಲದಾಯ ನಮೋ ನಿತ್ಯಂ ಕೇಶವಾಯ ಶಿವಾಯ ಚ॥

೫೫ ವಿಜಯನಗರದ ಒಂದನೆಯ ಹರಿಹರನ ಶೃಂಗೇರಿ ಶಾಸನ (ಕಾಲ ಕ್ರಿ.ಶ. ೧೩೪೬), ಭಾಷೆ ಕನ್ನಡ: ವಿದ್ಯಾತೀರ್ಥಾಯ ಗುರುವೇ ಪರಸ್ಮೈತೇಜಸೇ ನಮಃ। ಯಸ್ಯನಾಂಗೀಕೃತೇ ಸ್ನೇಹ ದಶಾ ಹಾನಿಃ ಕದಾಚನ॥ ಪೂರ್ವಾಪರ ಸಮುದ್ರಾನ್ತಾಂ ಜಿತ್ವಾ ಹರಿಹರೋ ಭುವಂ।

ಜಯೋತ್ಸವಂ ಖ್ಯಾಪಯಿತು ಮಕರೋದ್ಧರ್ಮ ಮುತ್ತಮಮ್ ॥

೫೬ ಇಮ್ಮಡಿ ಬುಕ್ಕನ ಶ್ರವಣಬೆಳಗೊಳ ಶಾಸನ (ಕಾಲ ಕ್ರಿ.ಶ. ೧೩೬೮) ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ। ಪಾಷಂಡಸಾಗರ ಮಹಾಬಡವಾಮುಖಾಗ್ನಿಃ ಶ್ರೀರಙ್ಗರಾಜ ಚರಣಾಮ್ಬುಜ ಮೂಲದಾಸಃ (ಪಾಲಭಕ್ತಃ) ಶ್ರೀವಿಷ್ಣುಲೋಕಮಣಿ ಮಣ್ಡಪಮಾರ್ಗದಾಯೀ। ರಾಮಾನುಜೋ ವಿಜಯತೇ ಯತಿರಾಜರಾಜಃ॥

೫೭ ಯಾವ ಯಾವ ದೇವತೆಗಳ ಚಿತ್ರಗಳು, ಯಾವ ಯಾವ ರಾಜರ ನಾಣ್ಯಗಳ ಮೇಲೆ ಅಚ್ಚು ಹಾಕಿಸಿದ್ದರು – ಎನ್ನುವ ವಿವರಗಳಿಗೆ ನೋಡಿ: ಡಾ। ಎ.ವಿ. ನರಸಿಂಹಮೂರ್ತಿ, ಕರ್ನಾಟಕ ನಾಣ್ಯ ಸಂಪತ್ತು, ಪುಟ ೨೬–೨೭

೫೮ ಹಂಪಿಯಲ್ಲಿ ದೊರಕಿದ ಒಂದು ಗಣೇಶ ನಾಣ್ಯದ ಬಗ್ಗೆ ಡಾ । ನರಸಿಂಹಮೂರ್ತಿಗಳು ಕೊಟ್ಟಿರುವ ವಿವರ ಹೀಗಿದೆ: ಇದು ಗಣೇಶ ನಮೂನೆಯ ಚಿನ್ನದ ನಾಣ್ಯ. ಈ ವರಾಹದ ತೂಕ ೩.೪ ಗ್ರಾಂ. ವ್ಯಾಸ ೧೩ ಮಿಲಿಮೀಟರ್, ಮುಂಭಾಗದಲ್ಲಿ ಒಂದು ವೃತ್ತದೊಳಗೆ ನಂತಿರುವ ಗಣೇಶ ಚತುರ್ಭುಜನಾಗಿ ಇದ್ದಾನೆ. ಎತ್ತರವಾದ ಕಿರೀಟ ಚೆನ್ನಾಗಿ ಕಾಣುತ್ತಿದೆ. ಕೈಗಳಲ್ಲಿ ಇರುವ ಆಯುಧಗಳು ಸರಿಯಾಗಿ ಕಾಣುತ್ತಿಲ್ಲ.

ನಾಣ್ಯದ ಹಿಂಭಾಗದಲ್ಲಿ ಮೂರು ಸಾಲುಗಳ ನಾಗರೀ ಲಿಪಿಯ ಬರಹ ಇದೆ. ಓದಲು ಕಷ್ಟ ಆದರೆ, ತೂಕ, ವಿನ್ಯಾಸ (ಪ್ಯಾಟರನ್) ಹಿಂಭಾಗದ ಬರಹ ಎಲ್ಲವನ್ನೂ ಗಮನಿಸಿದಾಗ ಇದು ವಿಜಯನಗರದ ನಾಣ್ಯ ಎಂದು ಖಚಿತವಾಗುತ್ತದೆ. ಆದರೆ ಇದನ್ನು ಠಂಕಿಸಿದ ರಾಜ ಯಾರು, ಯಾವ ಕಾಲದವನು – ಎಂಬುದು ಖಚಿತವಾಗಿ ತಿಳಿಯುತ್ತಿಲ್ಲ. (ನರಸಿಂಹಮೂರ್ತಿ, ಎ.ವಿ., ಡಾ।, ಕರ್ನಾಟಕ ನಾಣ್ಯ ಪರಂಪರೆ, ಪುಟ ೧೮೯)

೫೯ ತೂಕ ೧.೯ ಗ್ರಾಂ., ಮುಂಭಾಗದಲ್ಲಿ ಕುಳಿತಿರುವ ನಾಲ್ಕು ಭುಜಗಳ ಗಣಪತಿ ಇವನು. ಹಿಂಭಾಗದಲ್ಲಿ ಕಂಠೀರವ ಎಂಬ ಕನ್ನಡ ಅಕ್ಷರದ ಬರಹ ಇದೆ. ಚುಕ್ಕಿಗಳಿಂದ ಮಾಡಿದ ವೃತ್ತದೊಳಗಿರುವ ಚಿತ್ರ ಇದೆ. (ನರಸಿಂಹಮೂರ್ತಿ, ಎ.ವಿ., ಡಾ।, ಮೇಲೆ ಹೇಳಿದ ಪುಸ್ತಕ, ಪುಟ ೨೯೭)

೬೦ ಇದರ ವಿವರ ಹೀಗಿದೆ: ತಾಮ್ರ, ತೂಕ ೨.೭ ಗ್ರಾಂ, ವ್ಯಾಸ ೦.೭ ಅಂಗುಲ, ಮುಂಭಾಗದಲ್ಲಿ ಕುಳಿತಿರುವ ಗಣೇಶ ಇದ್ದಾನೆ. ಕೆಳಗಡೆ ಕುಳಿತಿರುವ ಅವನ ವಾಹನ ಇಲಿ ಇದೆ. ಹಿಂಭಾಗದಲ್ಲಿ ಅಡ್ಡ–ಉದ್ದ ಗೆರೆಗಳ (ಚೆಕರ್ಡ್) ವಿನ್ಯಾಸ ಇದೆ. ನರಸಿಂಹಮೂರ್ತಿ, ಎ.ವಿ., ಡಾ।, ಕರ್ನಾಟಕ ನಾಣ್ಯ ಪರಂಪರೆ, ಪುಟ ೩೧೪.

೬೧ ಇನ್ನು ಮುಂದೆ ಉಲ್ಲೇಖಿಸಿರುವ, ಹರಿಹರದ ಶಾಸನಗಳ ಪ್ರಾರಂಭ ಶ್ಲೋಕಗಳಿಗೆ ಆಕರ: ಪ್ರೋ। ಎಚ್. ಎಂ. ಶಂಕರನಾರಾಯಣರಾವ್ ಶ್ರೀ ಹರಿಹರ ದೇವಾಲಯ ಗ್ರಂಥ; ೧೯೮೭, ಪುಟ ೨೬೦–೪೧೩

೬೨ ಹರಿಹರ ಶಾಸನ ೧. (೬೬) (ಕಾಲ ಕ್ರಿ.ಶ. ೬೯೪; ಬಾದಮಿಯ ಚಾಳುಕ್ಯರಲ್ಲಿ ಪ್ರಸಿದ್ಧನಾದ ಇಮ್ಮಡಿ ಪುಲಿಕೇಶಿಯ ಮೊಮ್ಮಗ ವಿನಯಾದಿತ್ಯನ ಆಳ್ವಿಕೆಯ ಶಾಸನ): ಸ್ವಸ್ತಿ ॥ ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣವಂ। ದಕ್ಷಿಣೋನ್ನತದಂಷ್ಟ್ರಾಗ್ರ ವಿಶ್ರಾಂತಭುವನಂ ವಪುಃ॥ (ಸಾಗರವನ್ನು ಕೋಲಾಹಲಗೆ ಇಳಗು ಮಾಡಿ, ಉತ್ತುಂಗವಾದ ತನ್ನ ಬಲಕೋರೆ ದಾಡಿಯ ತುದಿಯಲಿ ಭೂದೇವಿಗೆ ಆಶ್ರಯವನ್ನು ಕೊಟ್ಟು, ಪ್ರಕಟವಾದ ವಿಷ್ಣುವಿನ ವರಾಹರೂಪಕ್ಕೆ ಜಯವಾಗಲಿ!

ಈ ಮತ್ತು ಇನ್ನಿತರ ಹರಿಹರದ ಶಾಸನಗಳ ಕನ್ನಡ ಗದ್ಯಾನುವಾದಗಳನ್ನು ಪ್ರೊ। ಶಂಕರನಾರಾಯಣರಾಯರ 'ಶ್ರೀ ಹರಿಹರ ದೇವಾಲಯ' ಗ್ರಂಥದಿಂದ ತೆಗೆದುಕೊಂಡಿದ್ದೇನೆ.)

೬೩ ಹರಿಹರದ ಶಾಸನ ೨. (೪೫) (ಕಾಲ ಕ್ರಿ.ಶ. ೧೧೪೦) ಕಲ್ಯಾಣದ ಚಕ್ರವರ್ತಿ ಇಮ್ಮಡಿ ಜಗದೇಕಮಲ್ಲ (ಕ್ರಿ.ಶ. ೧೧೩೯–೧೧೫೦)ನ ಕಾಲಕ್ಕೆ ಸೇರಿದ ಶಾಸನ.) [ಜಯತಿ ಆವಿಷ್ಕೃತಂ ವಿಷ್ಣೋರ್] ವಾರಾಹಂ ಕ್ಷೋಭಿತ ಅರ್ಣವಂ। ದಕ್ಷಿಣ ಉನ್ನತ ದಂಷ್ಟ್ರ ಅಗ್ರ ವಿಶ್ರಾಂತ–ಭುವನಂ ವಪುಃ॥..... ಗಾಯಮಾಣ ಅಭೂರ್ ಭೂಯಾ .... ಯಣಸ್ಯ ವಃ॥ ಶ್ರೀ ಲಕ್ಷ್ಮೀನಾರಾಯಣಾ(ಯ)ನಮಃ॥ [ಶ್ರೀವತ್ಸಶಶಿ–ವ] ತ್ಸಾಂಕಮುಪಲುಪ್ತಮನೋಭವಂ। ಪೀತವೀತಾಂಬರಂ ವಂದೇ ತೇಜೋ ಹರಿಹರಾ(ತ್ಮಕಂ) ॥ (ಶ್ರೀವತ್ಸ ಮತ್ತು ಚಂದ್ರರ ಗುರುತುಳ್ಳ, ಮನ್ಮಥನನ್ನು ಸುಟ್ಟ, ಪೀತಾಂಬರನೂ ದಿಗಂಬರನೂ ಆದ ಹರಿಹರಾಕಾರದ ತೇಜಸ್ಸನ್ನು ನಮಸ್ಕರಿಸುತ್ತೇನೆ.)

೬೪ ಹರಿಹರದ ಶಾಸನ ೩. (೬೧) (ಕಾಲ ಕ್ರಿ.ಶ. ೧೧೪೩; ೧೧೭೨) ಶ್ರೀ ಜಯತ್ಯಾನಮ್ರರಾಜೇಂದ್ರ ಚೂಡಾರತ್ನಾಂಶು... । .... ಯೋಗೇಶ್ವರರಸ್ಯ ಪಾದಾಬ್ಜಂ ಕ್ರೀಡಾ.... ಶ್ರಿಯಂ ॥

೬೫ ಹರಿಹರ ಶಾಸನ ೪. (೪೧) (ಕಾಲ ಕ್ರಿ.ಶ. ೧೧೪೮; ಚಾಳುಕ್ಯ ಚಕ್ರವರ್ತಿ ಮೂರನೆಯ ಸೋಮೇಶ್ವರನ ಮಗ ಇಮ್ಮಡಿ ಜಗದೇಕಮಲ್ಲನ ಸಾಮಂತ ವೀರಪಾಂಡ್ಯನ ಕಾಲದಲ್ಲಿ ನೆಟ್ಟ ಶಾಸನ ಇದು.) ಜಯತಿ ಸ್ಥಾಣು–ಹರ್ಯೋರ್ ಅದ್ವೈತ–ದ್ಯೋತನಾ ಉದ್ಯತಾಃ। ಅಕ್ಷಮಾಲಾ ತ್ರಿಶೂಲ–ಅರಿ–ಪಾಂಚಜನ್ಯ–ಧರಾಃ ಕರಾಃ॥೧॥ ಜಯಂತಿ ಸ್ಥಾಯಿ–ಸಂಚಾರಿಭಾವ ಅಭಿನಯ–ಭಾವಕಾಃ। ನೀಲಲೋಹಿತ–ಶೈಲೂಷ–ಭ್ರೂ ಲತಾಲಾಸ್ಯ–ವಿಭ್ರಮಾಃ॥೨॥ ಜಯತಿ ಆನಮಿತ ಅಶೇಷ–ಸುರಾಸುರ ನರ ಉರಗಂ। ಸ್ವರ್ಗ–ಅಪವರ್ಗ ಮಾರ್ಗ ಅನುಶಾಸನಂ ಧರ್ಮಶಾಸನಂ ॥೩॥ (ಹರಿಹರನ ಅದ್ವೈತವನ್ನು ಪ್ರಕಾಶಪಡಿಸಲು ಉದ್ಯುಕ್ತನಾದ, ಅಕ್ಷಮಾಲೆ ಶೂಲ, ಚಕ್ರ ಪಾಂಚಜನ್ಯಾದಿಗಳನ್ನು ಧರಿಸಿದ ಈಶ್ವರ ವಿಷ್ಣು ಇವರ ಹಸ್ತಗಳು ಗೆಲ್ಲುತ್ತವೆ॥೧॥ ಸ್ಥಾಯಿ ಸಂಚಾರಿ ಭಾವಗಳ ಅಭಿನಯನವನ್ನು ಆಗುಮಾಡಿಸುವ ಶಿವ (ನಟರಾಜ)ನ ಹುಬ್ಬಿನ ಬಳ್ಳಿಯ ಸೌಮ್ಯ ನಾಟ್ಯದ ಬೆಡಗುಗಳು ಮೆರೆಯುತ್ತವೆ॥೨॥ ಸಮಸ್ತ ದೇವದಾನವ ನಾಗವನ್ನು ತಲೆಬಾಗುವಂತೆ ಮಾಡಿದ ಸ್ವರ್ಗ ಮತ್ತು ಮುಕ್ತಿಮಾರ್ಗವನ್ನು ಅನುಶಾಸನ ಮಾಡುವ ಧರ್ಮಶಾಸನ ಗೆಲ್ಲುತ್ತದೆ.॥೩॥

೬೬ ಹರಿಹರ ಶಾಸನ ೫. (೩೫) (ಕಾಲ ಕ್ರಿ.ಶ. ೧೧೬೦) (ಬಿಜ್ಜಳನ ಒಬ್ಬ ಭುಜ ಇನ್ನೊಬ್ಬ ಭುಜಬಲನಂತಿದ್ದ ಬನವಾಸಿ ಹನ್ನೆರಡು ಸಾವಿರ ಪ್ರದೇಶವನ್ನು ಆಳುತ್ತಿದ್ದ ಕಸಪಯ್ಯನಾಯಕನ ಬಗ್ಗೆ ಇರುವ ಶಾಸನ.)

ನಮಾಮಿ ತದ್ವಪುರ್ನಿತ್ಯಮೇಕಂ ಹರಿಹರಾತ್ಮಕಂ । ಸಮಾಹಿತ ಜನಾನಂದ ಕದಳೀಕಂದವರ್ಧನಂ॥೧॥

ಶ್ರೀಗಿರಿಜಾಪ್ರಿಯರ್ ಶಿತಿಸಿತಚ್ಛವಿಗಳ್ ಸುತಕೌಸ್ತುಭಸ್ಫುರ। ದ್ಭೋಗಿ ವಿಭೂಷಣರ್ ವಿಹಗರಾಜವೃಷಾಸನರೇಕಮೂರ್ತಿಸಂ। ಯೋಗವಿರಾಜಿತರ್

ಹರಿಹರಪ್ರಭುಗಳ್ ದಯೆಗೆಯ್ಗನಾರತಂ । ರಾಗದೆ ಸೋಮಭೂಪತಿಗೆ ನಿಶ್ಚಲಲಕ್ಷ್ಮಿಯುಮಂ ಸ್ಥಿರಾಯುಮಂ ॥೨॥

[(ಹರಿಹರರ) ಧ್ಯಾನಸ್ಥರಾದ ಜನರ ಆನಂದವೆಂಬ ಬಾಳೆಯ ದಿಂಡನ್ನು ವರ್ಧಿಸುವ ಒಟ್ಟಾಗಿರುವ ಹರಿಹರಾತ್ಮಕವಾದ ಮೂರ್ತಿಯನ್ನು ನಿತ್ಯವೂ ನಮಿಸುತ್ತೇನೆ.॥೧॥

ಲಕ್ಷ್ಮೀ ಮತ್ತು ಪಾರ್ವತಿಯರಿಗೆ ಪ್ರಿಯರೂ, ಕಪ್ಪು ಬಿಳಿಯ ಕಾಂತಿಯುಳ್ಳವರೂ, ಶ್ರೇಷ್ಠವಾದ ಕೌಸ್ತುಭಸರ್ಪಭೂಷಣರೂ, ಗರುಡನಂದಿವಾಹನರೂ ಒಂದೇ ಮೂರ್ತಿಗಳಾಗಿ ಏಕೀಭವಿಸಿ ಶೋಭಿಸುವ ಹರಿಹರು ಸಂತೋಷದಿಂದ ಸೋಮಭೂಪತಿಗೆ ನಿಶ್ಚಲವಾದ ಸಂಪತ್ತನ್ನೂ ಸ್ಥಿರವಾದ ಆಯುಷ್ಯವನ್ನೂ ಸಂತತವಾಗಿ ದಯಪಾಲಿಸಲಿ॥೨॥]

೬೭ ಶ್ರೀಮದ್ ಅಮರೇಂದ್ರ–ರುಂದ್ರ–ಶಿಖಾಮಣಿ ಗಣತರುಣ–ಕಿರಣ ಪರಿವೃಢ–ಚರಣಂ। ಸೋಮ–ಅರ್ಕ–ಅನಳ–ನಯನಂ ಸೋಮೇಶ್ವರ ದೇವರಿಗೆ ಶಾಶ್ವತಸುಖಮಂ।– ಡಾ। ಬಾ. ರಾ. ಗೋಪಾಲ್, ಕನ್ನಡ ಶಾಸನಗಳು, ಪುಟ ೪೯.

೬೮ ಹರಿಹರ ಶಾಸನ ೬. (೪೨) (ಕಾಲ ಕ್ರಿ.ಶ. ೧೧೬೨; ಬಿಜ್ಜಳನ ಇನ್ನೊಬ್ಬ ಭುಜಬಲನಂತಿದ್ದ ಬರ್ಮರಸನ ಬಗ್ಗೆ ಇರುವ ಶಾಸನ.): [ನಮಾಮಿ ತದ್ವಪು] ರ್ನಿತ್ಯಮೇಕಂ ಹರಿಹರಾತ್ಮಕಂ। ಸಂಆಹಿತಜನಾನಂದ ಕದಳೀಕಂದವರ್ಧನಂ॥೧॥ ಶ್ರೀಮತ್‌ಚಿತ್ಸೌ.... ಭವಕೃತಿಯೊಳೇಕಾತ್ಮ ರಾಮೆಮಬುದಂ ನಿಸ್ಸೀಮಂ ಲೋಕಕ್ಕಭಿವ್ಯಂಜಿಪ ತೆಳದೆಸೆದ. [ಮೂ]ರ್ತಿ ಸ್ವಯಂಭೂ–। ಮತ್ವಂ ಚೆಲ್ವುವೆತ್ತಾ ಹರಿಹರ ಪರಮಾರಾಧ್ಯರ್ ಈಗಪ್ರಮೇಯ। ಪ್ರೇಮದರ್ಡಂಡಾಧಿಪಂ ಬಮ್ಮರಸ ನಭಿಮತಾವಾಪ್ತಿಯಂ ತಾಮೆ ನಚ್ಚಂ॥೨॥

[ವಿಷ್ಣು ಮತ್ತು ಈಶ್ವರರು ಆಕಾರದಲ್ಲಿ ತಾವಿಬ್ಬರೂ ಒಂದೇ ಎಂಬ ಅಂಶವನ್ನು ಲೋಕಕ್ಕೆ ಅತಿಶಯವಾದ ರೀತಿಯಲ್ಲಿ ವ್ಯಕ್ತಪಡಿಸುವ ಸ್ವಯಂಭೂ, ತರ್ಕಾತೀತ, ಭಕ್ತಪ್ರೇಮಿಗಳು ಹಾಗೂ ಸುಂದರಾಕಾರರೂ ಆದ ಹರಿಹರರು ಬರ್ಮದಂಡಾಧಿಪತಿಯ ಇಷ್ಟಾರ್ಥವನ್ನು ನಿತ್ಯವೂ ಸಲ್ಲಿಸಲಿ.॥೨॥]

೬೯ ಹರಿಹರ ಶಾಸನ ೭. (೪೩) (ಕಾಲ ಕ್ರಿ.ಶ. ೧೧೬೪) [ಕಳಚೂರ್ಯರ ಸಾಮಂತ, ಉಚ್ಚಂಗಿಯ ದೊರೆ, ವಜಯಪಾಂಡ್ಯನ ಮಂಡಳೇಶ್ವರ ಈಶ್ವರದೇವರಸನ ಕಾಲಕ್ಕೆ ಸಂಬಂಧಿಸಿದ ಶಾಸನ ಇದು.) ಸ್ವಸ್ತಿ ಶ್ರೀ ಜಯಾಭ್ಯುದಯಶ್ಚ॥ ನಮಃ ಕಮಳನಾಭಾಯ ವಿಷ್ಣವೇ ಪ್ರಭವಿಷ್ಣವೇ । ಜಗಿದಿಂದೀವರಾನಂದಬಂಧವೇ ಶೌರ್ಯಸಿಂಧವೇ ॥೧॥ ಪಾತು ವೋ ಮೇದಿನೀಡೋಳಾಬಾಳೆಂದುದ್ಯುತಿ ಶೋಭಿನೀ। ದಂಷ್ಟ್ರಾಮಹಾವರಾಹಸ್ಯ ಪಾತಾಳಗೃಹದೀಪಿಕಾ ॥೨॥

(ಮಂಗಳ ಜಯ ಅಭ್ಯುದಯಗಳು ಒದಗಿ ಬರಲಿ ॥ ಕಮಲನಾಭನು ಸರ್ವಶಕ್ತನೂ ಜಗತ್ತೆಂಬ ಕಮಲಕ್ಕೆ ಆನಂದವನ್ನುಂಟುಮಾಡುವ ಬಂಧುವೂ ಶೌರ್ಯಸಿಂಧುವೂ (ಸಮುದ್ರ) ಆದ ಶ್ರೀ ಮಹಾವಿಷ್ಣುವಿಗೆ ನಮಸ್ಕಾರ ॥೧॥ ಭೂದೇವಿಗೆ ಉಯ್ಯಾಲೆಯಂತಿರುವ, ಬಾಲಚಂದ್ರಕಾಂತಿಯಿಂದ ಶೋಭಿಸುವ, ಪಾತಾಳವೆಂಬ ಮನೆಗೆ ದೀಪದಂತಿರುವ ಮಹಾವರಾಹಸ್ವಾಮಿಯ ಕೋರೆಯದಾಡಿ ನಮ್ಮನ್ನು ಕಾಪಾಡಲಿ॥೨॥)

೭೦ ಹರಿಪರ ಶಾಸನ ೧೦. (೩೨) (ಕಾಲ ಕ್ರಿ.ಶ. ೧೧೭೭; ಉಚ್ಚಂಗಿಯ ಪಾಂಡ್ಯರ ಪ್ರತಿಷ್ಠಿತ ರಾಜರಲ್ಲಿ ಒಬ್ಬನಾದ ವಿಜಯಪಾಂಡ್ಯನ ಕಾಲಕ್ಕೆ ಸಂಬಂದಿಸಿದ ಶಾಸನ) ಶ್ರೀಹರಿಹರಾಯ ನಮಃ ॥ ಸ್ಮಿತಸಿತಕುಸುಶ್ರೀಶ್ಚಾರುದೋರ್ದಂಡಶಾಖಃ । ಕರ–ಕಿಶಲಯರಾಗೋ ಭೋಗಿವಲ್ಲೀಪಿನದ್ಧಃ। ಚತುರಚಿತಫಲಾಢ್ಯಶ್ಶಂಭು ನಾರಾಯಣೋ ವೋ। ವಿತರತು ಫಲಮಿಷ್ಟಂ ಸಂತತಂ ಕಲ್ಪವೃಕ್ಷಃ॥೧॥

(ಶ್ರೀ ಹರಿಹರರಿಗೆ ನಮಸ್ಕಾರ॥ ಮುಗುಳುನಗೆಯೆಂಬ ಅರಳಿದ ಹೂವುಳ್ಳ, ಮನೋಹರವಾದ ತೋಳೆಂಬ ಕೊಂಬೆಯುಳ್ಳ, ಕೈಯೆಂಬ ಚಿಗುರೆಲೆಯುಳ್ಳ, ಸರ್ಪವೆಂಬ ಬಳ್ಳಿಯಿಂದ ಸುತ್ತವರಿದು ಶ್ರೇಷ್ಠಫಲಗಳಿಂದ ತುಂಬಿದ ಕಲ್ಪವೃಕ್ಷದಂತಿರುವ ಶಂಕರನಾರಾಯಣರು ನಿಮ್ಮ ಇಷ್ಟಾರ್ಥವನ್ನು ಸಂತತವಾಗಿ ಸಲ್ಲಿಸಲಿ!॥೧॥)

೭೧ ಹರಿಹರ ಶಾಸನ ೧೧. (೩೩) (ಕಾಲ ಕ್ರಿ.ಶ. ೧೧೭೩) ವಿನತೇಂದ್ರಂ ವಿಷ್ಣುರ್ದೈವಂ ಗುನಗಣನಿಧಿ ಪೆರ್ಮಾಡಿದಂಡಾಧಿಪಂ । ಜನಕಂ ಸೌಭಾಗ್ಯಬಾಗ್ಯಾನ್ವಿತೆ ನೆಗಳ್ದಿ ಮಹಾದೇವಿ ತಾಯ್ ವಿಶ್ವವಿದ್ವ ಜ್ಜನ ಸೇವ್ಯಂ ಸೋಮದೇವಂ ತನಗನುಜನೆನಲ್ ಧಾತ್ರಿಯೊಳ್ಭಾಪು ಸಾಮಾ। ನ್ಯನೆ ವಿಶ್ವಾಮಿತ್ರಗೋತ್ರಾರ್ಣವ ತುಹಿನಕರಂ ದುರ್ಗದಂಡಾಧಿನಾಥಂ ॥

(ಇಂದ್ರನಿಂದ ನಮಸ್ಕೃತನಾದ ವಿಷ್ಣುವೇ ಮನೆದೈವ; ಗುಣಗಳಿಗೆ ನಿಧಿಯಂತಿರುವ ಪೆರ್ಮಾಡಿ ದಂಡಾಧಿನಾಥನೇ ತಂದೆ; ಸಕಲ ಸೌಭಾಗ್ಯಗಳಿಂದ ಕೂಡಿ ಪ್ರಸಿದ್ಧಳಾದ ಮಹಾದೇವಿಯೇ ತಾಯಿ; ಲೋಕದ ವಿದ್ವಜ್ಜನರಿಂದ ಸೇವಿತನಾದ ಸೋಮದೇವನೇ ಒಡಹುಟ್ಟಿದವನು; ಭಾಪು, ವಿಶ್ವಾಮಿತ್ರಗೋತ್ರವೆಂಬ ಸಮುದ್ರಕ್ಕೆ ಚಂದ್ರನಂತಿರುವ ದುಗ್ಗರಸದಂಡಾಧಿನಾಥನು ಸಾಮಾನ್ಯನೇ?॥)

೭೨ ಹರಿಹರ ಶಾಸನ ೨೧, ಇನ್ನು ಮುಂದೆ ಉಲ್ಲೇಖಿಸಿರುವ, ಹರಿಹರದ ಶಾಸನಗಳ ಪ್ರಾರಂಭ ಶ್ಲೋಕಗಳಿಗೆ ಆಕರ; ಪ್ರೊ । ಎಚ್.ಎಂ. ಶಂಕರನಾರಾಯಣರಾವ್ ಶ್ರೀ ಹರಿಹರ ದೇವಾಲಯ ಗ್ರಂಥ; ೧೯೭೨, ಪುಟ ೨೬೦–೪೧೩ (೩೬) (ಕಾಲ ಕ್ರಿ.ಶ. ೧೨೬೮) ಶ್ರೀಕಾಂತಸ್ಸಜಯತಿ ಕೇಳಿಕೋಳಮೂರ್ತಿಃ। ಲೋಕಾರ್ತಿಪ್ರಥಿತಪಯೋಧಿಕುಂಭಜನ್ಮಾ। ಯದ್ದಂಷ್ಟ್ರಾವಿಕಸಿತಕೇತಕಚ್ಛದಾಗ್ರೇ। ಭೃಂಗೀವ ಸ್ಫುರತಿ ಶುಭಾ ವಸುಂಧರೇಯಂ ॥೨॥ ಸಮವತು ಗಜವದನೋ ವಃ ಸಶ್ವದ್ ವಿಶ್ವಪ್ರಶಸ್ತ ವಿಸ್ತಾರಃ । ಅನುಕುರುತೇ ಯಃ ಪಿತರಂ ಮದಜಳ ಮಿಳಿತ–ಆಳಿನೀಲಿತ–ಗ್ರೀವಃ ॥೩॥

(ಯಾರ ದಂತವೆಂಬ ಅರಳಿದ ಕೇದಗೆಯ ಹೂವಿನ ತುದಿಯಲ್ಲಿ ಮಂಗಳರೂಪಿಯಾದ ಭೂದೇವಿ ಹೆಣ್ಣು ದುಂಬಿಯಂತೆ ಕಂಗೊಳಿಸುತ್ತಿರುವಳೋ ಅಂಥ ಲೋಕದ ದುಃಖವೆಂಬ ಸಮುದ್ರಕ್ಕೆ ಅಗಸ್ತ್ಯನಂತಿರುವ ಲೀಲಾವರಾಹ ಮೂರ್ತಿಯಾದ ಲಕ್ಷ್ಮೀಪತಿ ಜಯಿಸುತ್ತಾನೆ ॥೨॥ ವಿಶ್ವದಲ್ಲಿ ಶಾಶ್ವತವಾಗಿ ಹರಡಿದ ಕೀರ್ತಿಯುಳ್ಳ ಮತ್ತು ಮದಜಲಕ್ಕಾಗಿ ಗುಂಪುಗೂಡಿರುವ ದುಂಬಿಗಳಿಂದ ಕಪ್ಪಾದ ಕಂಠವುಳ್ಳವನಾಗಿ ತಂದೆಯನ್ನು ಹೋಲುವ ಗಣಪತಿ ನಮ್ಮನ್ನು ಕಾಪಾಡಲಿ!)

೭೩ ಹರಿಹರದ ಶಾಸನ ೨೪.(೪೯) (ಕಾಲ ಕ್ರ.ಶ. ೧೨೭೭/೮೦; ಎ.ಕ. ೧೧ ದಾವಣಗೆರೆ ೨೩ನೇ ಶಾಸನ) ಗಜಮುಖನ್ ಈಶಪುತ್ರನ್ ಅಮಳಾಂಬುರುಹ ಆಯತನೇತ್ರನ್ ಅಂಬಿಕಾ–। ತ್ಮಜನ್ ಅಜರಾಮರಂ ಜಠರ–ಪನ್ನಗ–ಮಸ್ತಕ–ರತ್ನಭಾನುವಿಂ। ರಜನಿಯೊಳ್ ಆದೊಡಂ ವಿಕಚ–ಪಾದ–ಪಯೋಜನ್ ಅಮೇಯವಿಕ್ರಮಂ। ತ್ರಿಜಗದ್ ಅಧೀಶ್ವರಂ ಕೊಡುಗೆ ನಮ್ಮ ಮನೋರಥಂ ಗಣಾಧಿಪಂ ॥೬॥

(ಗಜಮುಖನೂ, ಈಶ್ವರನ ಮಗನೂ, ಶ್ರೇಷ್ಠವಾದ ಕಮಲದಂತೆ ಅಗಲವಾದ ಕಣ್ಣುಳ್ಳವನೂ, ಪಾರ್ವತಿಯ ಪುತ್ರನೂ, ಮುಪ್ಪು ಸಾವುಗಳಿಲ್ಲದವನೂ, ತನ್ನ ಹೊಟ್ಟೆಯ ಸುತ್ತಲೂ ಸುತ್ತಿರುವ ಸರ್ಪಗಳ ಹೆಡೆಯಲ್ಲಿರುವ ರತ್ನವೆಂಬ ಸೂರ್ಯನಿಂದ ರಾತ್ರಿಯಲ್ಲಿಯೂ ಅರಳಿದ ಪಾದಪದ್ಮವುಳ್ಳವನೂ, ಅತಿಶಯವಾದ ಪರಾಕ್ರಮಶಾಲಿಯೂ, ಮೂರುಲೋಕಕ್ಕೆ ಅಧಿಪತಿಯೂ ಆದ ಗಣಪತಿ ನಮ್ಮ ಇಷ್ಟಾರ್ಥವನ್ನು ಪೂರೈಸಲಿ!)

೭೪ ಹರಿಹರ ಶಾಸನ ೩೪ (೨೯) ಕಾಲ ಕ್ರಿ.ಶ. ೧೪೨೪

೭೫ ಈ ಶಾಸನ ಈ ರೀತಿ ಮೊದಲಾಗುತ್ತದೆ. ವಿಶ್ವೇಶಂ ಮಾಧವಂ ಧುಂಡಿಂ ದಂಡಪಾಣಿಂ ಚ ಭೈರವಂ। ವಂದೇ ಕಾಶೀಂ ಗುಹಾಂ ಗಂಗಾಂ ಭವಾನೀಂ ಮಣಿಕರ್ಣಿಕಾಂ॥ ವಿಶ್ವೇಶ್ವರ, ಮಾಧವ, ಧುಂಡಿ, ದಂಡಪಾಣಿ, ಭೈರವ, ಕಾಶಿ, ಗುಹಾರಣ್ಯ, ಗಂಗೇ, ಭವಾನಿ, ಮಣಿಕರ್ಣಿಕೆ- ಇವರನ್ನು ನಮಸ್ಕರಿಸುತ್ತೇನೆ. ಚಿತ್ರದುರ್ಗದ ಪಾಳೆಯಗಾರ ಭರಮಣ್ಣನಾಯಕನು ಕ್ರಿ.ಶ. ೧೭೦೮ರಲ್ಲಿ ನೆಟ್ಟ ಶಾಸನ ಇದು. ಶಾಸನದ ಏಕೈಕ ಪ್ರಾರ್ಥನಾರೂಪವಾದ ಈ ಶ್ಲೋಕದಲ್ಲಿ ಗುಹಾರಣ್ಯವನ್ನು ಹೆಸರಿಸಿದೆ.

೭೬ ಹರಿಹರದ ಶಾಸನ ೩೭ (೩೧) (ಕಾಲ; ಕ್ರಿ.ಶ. ೧೫೩೧) ಶ್ರೀಗಣಾಧಿಪತಯೇ ನಮಃ । ನಿರ್ವಿಘ್ನಮಸ್ತು ।

*****

# ಚನ್ನರಾಯಪಟ್ಟಣ ತಾಲ್ಲೂಕಿನ ಶಾಸನೋಕ್ತ ಕೆರೆಗಳ ನಿರ್ಮಾಪಕರು

* ಡಾ॥ ಬಿ.ಆರ್. ಸತ್ಯನಾರಾಯಣ.

ಶಾಸನಶಾಸ್ತ್ರ ತರಗತಿಗಳಲ್ಲಿ ಆಗಾಗ ಹೇಳುತ್ತಿದ್ದ 'ಇತಿಹಾಸವೆಂದರೆ ಕೇವಲ ರಾಜಕೀಯ ಇತಿಹಾಸ ಮಾತ್ರವಲ್ಲ' ಎನ್ನುವ ಮಾತು ನನ್ನನ್ನು ಶಾಸನಗಳಲ್ಲಿನ ಇತರ ಅಂಶಗಳ ಕಡೆಗೆ ಗಮನಹರಿಸುವಂತೆ ಮಾಡಿತು. ಸುಮಾರು ಸಾವಿರ ವರ್ಷಗಳ ಹಿಂದೆ ರಾಜರು ಮಾಡಿದ ದಿಗ್ವಿಜಯ, ರಾಜ್ಯ ವಿಸ್ತರಣೆ ಮೊದಲಾದವುಗಳಿಂದ ೨೦-೨೧ನೇ ಶತಮಾನದಲ್ಲಿನ ನಮಗೆ ಎಷ್ಟರ ಮಟ್ಟಿನ ಪ್ರಯೋಜನವಾಗುತ್ತಿದೆಯೋ ಹೇಳುವುದು ಕಷ್ಟ. ಹಾಗೆಯೇ ಅಂದು ಕಟ್ಟಿಸಿದ ದೇವಾಲಯಗಳಿಂದ ಇಂದು ಯಾರು ಮತ್ತು ಎಷ್ಟು ಜನ ಪ್ರಯೋಜನ ಪಡೆಯುತ್ತಿದ್ದಾರೋ ಎಂದು ತಿಳಿಯುವುದೂ ಕಷ್ಟ. ಆದರೆ ಸಾವಿರಾರು ವರ್ಷಗಳ ಹಿಂದೆ ರಾಜರುಗಳು, ಮಂತ್ರಿ-ದಂಡನಾಯಕರುಗಳು, ಅವರ ಕೈಕೆಳಗಿನ ಅಧಿಕಾರಿಗಳು, ಊರ ಗಾವುಂಡರುಗಳು ಮತ್ತು ಶ್ರೀಸಾಮಾನ್ಯರು ಕಟ್ಟಿಸಿದ ಕೆರೆಗಳಿಂದ, ಅಂದಿನಿಂದ ಇಂದಿನವರೆಗೂ ನಿರಂತರವಾಗಿ ಈ ನಾಡಿನ ಬಹುಸಂಖ್ಯಾತ ಜನರು ಉಪಯೋಗ ಪಡೆಯುತ್ತಿದ್ದಾರೆ. ಇದು ಇನ್ನು ಮುಂದೆಯೂ ಮುಂದುವರೆಯುತ್ತದೆ. ಅಂತಹ ಮಹನೀಯವಾದ, ಬಹುಜನೋಪಯೋಗಿಯಾದ ಮಹತ್ಕಾರ್ಯಗಳನ್ನು ಮಾಡಿದ ಜನರು ಪ್ರಾತಃಸ್ಮರಣೀಯರಾಗಿದ್ದಾರೆ.

ಶಾಸನಗಳನ್ನು ಮತ್ತು ಒಟ್ಟಾರೆಯಾಗಿ ಇತಿಹಾಸವನ್ನು ಗಮನಿಸಿದಾಗ ಕೆರೆ ಕಟ್ಟಿಸುವುದು ಒಂದು ಪರಂಪರೆಯಂತೆ ಬೆಳೆದುಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಈ ಹಿನ್ನಲೆಯಲ್ಲಿ ವಿಜಯನಗರದ ಅರಸು ಇಮ್ಮಡಿ ದೇವರಾಯನ ಪ್ರಧಾನಿ ಲಕ್ಷ್ಮೀಧರನ ಶಾಸನದಲ್ಲಿನ ಒಂದು ಪದ್ಯವನ್ನು ಗಮನಿಸಬಹುದಾಗಿದೆ.

**ಕೆರೆಯುಂ ಕಟ್ಟಿಸು, ಬಾವಿಯುಂ ಸವೆಸು, ದೇವಾಗಾರಮಂ ಮಾಡಿಸು,**
**ಸೆರೆಯೊಳ್ ಸಿಕ್ಕಿದನಾಥರಂ ಬಿಡಿಸು, ಮಿತ್ರರ್ಗಿಂಬುಗೆಯ್, ನಂಬಿದ**
**ರ್ಗ್ಗೆರೆವಟ್ಟಾಗಿರು, ಶಿಷ್ಟರಂ ಪೊರೆ, ಎನ್ನುತ್ತಿಂತೆಲ್ಲವಮಂ ಪಿಂತೆ ತಾ**
**ನೆರೆದಳ್ ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನ॥**

ಇದು ತಾಯಿ ಸಿಂಗಾಂಬಿಕೆ, ಕೇವಲ ಲಕ್ಷ್ಮೀಧರನಿಗೆ ಹೇಳಿದ ಮಾತುಗಳಲ್ಲ. ಅಥವಾ ಸಿಂಗಾಂಬಿಕೆಯೊಬ್ಬಳೇ ಈ ರೀತಿ ಹೇಳುತ್ತಿದ್ದಳು ಎನ್ನುವಂತಿಲ್ಲ. ಕರ್ನಾಟಕದಲ್ಲಿ ಕದಂಬ ದೊರೆಗಳ ಕಾಲದಿಂದಲೂ ಕೆರೆ ಕಟ್ಟಿಸುವಂತಹ ಕೆಲಸ ಮಹತ್ಕಾರ್ಯದಂತೆ ಪರಿಗಣಿತವಾಗಿ ನಡೆದುಕೊಂಡು ಬಂದಿರುವುದನ್ನು ಗಮನಿಸಿದರೆ, ನಾಡಿನ ಎಲ್ಲಾ ತಾಯಂದಿರ ಪ್ರತಿನಿಧಿಯಾಗಿ ಸಿಂಗಾಂಬಿಕೆ ಈ ಮಾತುಗಳನ್ನು ಆಡಿದ್ದಾಳೆ ಎನ್ನಬಹುದು. ವಿಜಯನಗರದ ಕಾಲಕ್ಕಂತೂ ನೀರಾವರಿಗೆ ಕೊಟ್ಟ ಪ್ರಾಮುಖ್ಯತೆಯನ್ನು ಗಮನಿಸಿದರೆ ಅಂದಿನ ಎಲ್ಲಾ ತಾಯಂದಿರಿಗೂ ತಮ್ಮ ಮಕ್ಕಳು ಕೆರೆಯನ್ನು ಕಟ್ಟಿಸುವಂತಹ ಮಹತ್ಕಾರ್ಯವನ್ನು ಮಾಡಬೇಕೆಂಬ ಹಂಬಲವಿದ್ದಿರಬೇಕು ಅನ್ನಿಸುತ್ತದೆ. ಈ ದೃಷ್ಟಿಯಿಂದ ಅಂತಹ ಕೆಲವರಾದರೂ ಮಹನೀಯರ ಬಗ್ಗೆ ಸಾಧ್ಯವಾದಷ್ಟು ವಿಷಯಗಳನ್ನು ತಿಳಿಯಬೇಕೆಂಬುದು ಈ ಲೇಖನದ ಉದ್ದೇಶವಾಗಿದೆ.

ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ ಎರಡು ಮತ್ತು ಬಾ.ರಾ.ಗೋಪಾಲ ಅವರ ಸಂಪಾದಕತ್ವದಲ್ಲಿ ಬಂದಿರುವ ಸಂಪುಟ ಹತ್ತರಲ್ಲಿನ ಚನ್ನರಾಯಪಟ್ಟಣ ತಾಲ್ಲೂಕಿನ ಶಾಸನಗಳು ಮಾತ್ರ ಬರುತ್ತವೆ. ಶಾಸನಗಳಲ್ಲಿ ಬರುವ ಕೆರೆಗಳನ್ನು ಕಟ್ಟಿಸಿದ ಮಹನೀಯರ ವ್ಯಕ್ತಿಚಿತ್ರ ಮತ್ತು ಅವರ ವಂಶಾವಳಿಯನ್ನು ಸಾಧ್ಯವಾದಷ್ಟು ಮಟ್ಟಿಗೆ ಗ್ರಹಿಸಲು ಪ್ರಯತ್ನಿಸಿದ್ದೇನೆ. ಇಲ್ಲಿ ಕೆರೆಗಳ ಗಾತ್ರ, ವಿಸ್ತೀರ್ಣ, ತಾಂತ್ರಿಕತೆ ಮುಂತಾದವುಗಳ ಕಡೆಗೆ ಗಮನಹರಿಸದೆ, ಅವುಗಳನ್ನು ಕಟ್ಟಿದವರ ಮೇಲೆಯೇ ಹೆಚ್ಚು ಕೇಂದ್ರೀಕರಿಸಲಾಗಿದೆ. ಇಲ್ಲಿ ಸಿಗುವ ಕೆರೆ ನಿರ್ಮಾಪಕರುಗಳಲ್ಲಿ ಅರಸ-

---

* ನಂ. ೪೯, "ಈಕ್ಷಿತಾ", ೨ನೆಯ ಮುಖ್ಯರಸ್ತೆ, ಮಂಜುನಾಥನಗರ, ಬನಶಂಕರಿ ೩ನೆಯ ಹಂತ, ಇಟ್ಟಮಡು, ಬೆಂಗಳೂರು - ೫೬೦೦೮೫, ದೂ: ೦ ೯೫೩೫೫ ೭೦೭೪೮ ಈಮೇಲ್: satya_nbr@yahoo.com

ಅರಸಿಯರು, ದಂಡನಾಯಕರುಗಳು, ಅವರುಗಳ ತಾಯಿ ಅಥವಾ ಹೆಂಡತಿ ಅಥವಾ ಸಹೋದರಿಯರು ಅಲ್ಲದೆ ಜನಸಾಮಾನ್ಯರೂ ಇದ್ದಾರೆ. ಅವರ ಸ್ವಂತ ವಿಚಾರಗಳು, ಅವರ ಒಡಹುಟ್ಟಿದವರ ವಿಚಾರಗಳು ಮತ್ತು ಅವರುಗಳ ಇನ್ನಿತರ ಸತ್ಕಾರ್ಯಗಳನ್ನು ಗುರುತಿಸಲು ಪ್ರಯತ್ನಿಸಿರುತ್ತೇನೆ.

ಈ ಎರಡೂ ಸಂಪುಟಗಳಲ್ಲಿರುವ ಒಟ್ಟು ಶಾಸನಗಳು ೭೧೬.[೧] ಇಷ್ಟೂ ಶಾಸನಗಳ ಅವಲೋಕನದಿಂದ ಸಿಕ್ಕ ಕೆರೆಗಳು ಸುಮಾರು ೯೫.[೨] ಇಲ್ಲಿನ ಬಹುತೇಕ ಕೆರೆಗಳನ್ನು ವಿವಿಧ ಕಾರ್ಯನಿಮಿತ್ತವಾಗಿ ಬಿಟ್ಟ ದಾನ ದತ್ತಿಗಳಿಗೆ ಸಂಬಂಧಪಟ್ಟ ಜಮೀನುಗಳಿಗೆ ಗಡಿಯ ಗುರುತಾಗಿ ಬಳಸಿಕೊಳ್ಳಲಾಗಿದೆ. ಅವುಗಳನ್ನು ಕಟ್ಟಿಸಿದವರು ಯಾರು? ಎಂಬ ವಿಚಾರಗಳಿಗೆ ಅಲ್ಲಿ ಉತ್ತರವಿಲ್ಲ. ಆದರೆ ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಕೆರೆಗಳು ಆಯಾಯ ಶಾಸನಗಳಿಗಿಂತ ಹಿಂದಿನವು ಎಂಬುದು ನಿರ್ವಿವಾದವಾದ ಸಂಗತಿ. ಎರಡೂ ಸಂಪುಟಗಳ ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಎಲ್ಲಾ ಕೆರೆಗಳನ್ನು ಅಧ್ಯಯನದ ದೃಷ್ಟಿಯಿಂದ ನಾಲ್ಕು ವಿಭಾಗಗಳನ್ನು ಮಾಡಿಕೊಳ್ಳಬಹುದು.

೧ ಕೆರೆ ಕಟ್ಟಿಸಿದವರ ವಿಚಾರಗಳನ್ನು ತಿಳಿಸುವಂತವುಗಳು

೨ ಒಂದು ಪಂಗಡ ಅಥವಾ ವರ್ಗ ಅಥವಾ ಜಾತಿ ಸೂಚಕವಾದ ಕೆರೆಗಳು

೩ ವ್ಯಕ್ತಿಯ ಹೆಸರಿನಿಂದ ಸೂಚಿತವಾಗಿರುವಂತವುಗಳು

೪ ಕೇವಲ ಗಡಿಯ ಗುರುತಾಗಿ, ಊರಿನ ಹೆಸರಿನಿಂದ ಅಥವಾ ಭೌಗೋಳಿಕ ಪರಿಸರದಿಂದ ಸೂಚಿತವಾಗಿರುವಂತವುಗಳು.

## ೧ ಕೆರೆಕಟ್ಟಿಸಿದವರ ವಿಚಾರಗಳನ್ನು ತಿಳಿಸುವಂತವುಗಳು

ಈ ವಿಭಾಗದಲ್ಲಿ ಸುಮಾರು ೧೫ ಕೆರೆಗಳಷ್ಟೆ ಸಿಗುತ್ತವೆ. ಕೆರೆ ಕಟ್ಟಿಸಿದವರ ಪಟ್ಟಿಯಲ್ಲಿ ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲೆ, ಹೊಯ್ಸಳ ದಂಡನಾಯಕರುಗಳಾದ ಗಂಗರಾಜ, ಕೇಶೀರಾಜ, ಪೆರುಮಾಳೆ, ಅಧಿಕಾರಿಗಳಾದ ಪಸಾಯಿತ ಬೆಳ್ಳಪ್ಪನಾಯಕ, ಮಯಿಲೆನಾಯಕ, ಕಮ್ಮಟದ ಬಸವಣ್ಣ ಇವರುಗಳಲ್ಲದೆ ಲಕ್ಕವ್ವೆ, ಸಾತವ್ವೆ, ಜಾಕಬ್ಬೆಯಂತಹ ಮಹಿಳೆಯರು, ಉತ್ತಮಗಾವುಂಡ, ಬಾಚರಸ, ನಾಗದೇವಹೆಗ್ಗಡೆ ಮೊದಲಾದ ಶ್ರೀಸಾಮಾನ್ಯರೂ ಇದ್ದಾರೆ. ಇದು, ಈ ಅಧ್ಯಯನದ ಪ್ರಮುಖ ವಿಭಾಗವಾದ್ದರಿಂದ ಕೆರೆಗಳನ್ನು ಕಟ್ಟಿಸಿದ ಮಹನೀಯರ ವಿಚಾರಗಳನ್ನು ವಿವರವಾಗಿ ವಿವೇಚಿಸಲಾಗುವುದು.

### ಉತ್ತಮಗಾವುಣ್ಣ (೮-೯ನೆಯ ಶತಮಾನ)

ಬಸವನಪುರ ಗ್ರಾಮದ, ಸುಮಾರು ೮-೯ನೆಯ ಶತಮಾನಕ್ಕೆ ಸೇರಿದ ಒಂದು ಶಾಸನ[೩] ಗಂಗದೊರೆ ಎರೆಯಪ್ಪರಸನನ್ನು, ಮತ್ತು ಅವನ ಮಗ ಗೋಪಿಂದರಸನನ್ನು ಉಲ್ಲೇಖಿಸುತ್ತದೆ. ಚನ್ನರಾಯಪಟ್ಟಣ ತಾಲ್ಲೂಕಿನ ಶಾಸನಗಳಲ್ಲಿ ಕೆರೆಯ ನಿರ್ಮಾತೃವನ್ನು ಉಲ್ಲೇಖಿಸುವ ಅತ್ಯಂತ ಪ್ರಾಚೀನ ಶಾಸನ ಇದಾಗಿದೆ. ಉತ್ತಮಗಾವುಣ್ಡ ಎಂಬುವವನು ಕೆರೆ ಕಟ್ಟಿಸಿದ್ದನ್ನು ತಿಳಿದು, ಅಲ್ಲಿಗೆ ಬಂದ ಗಂಗದೊರೆ ಎರೆಯಪ್ಪರಸರ ಮಗ ಗೋವಿಂದರಸನು, ಕೆರೆಯ ಉಸ್ತುವಾರಿಗೆಂದು ಆರು ಖಂಡುಗ ಭೂಮಿಯನ್ನು, ಜಮ್ಬೂರಿನ ಪೆಮ್ಮಾಡಿಗಾವುಣ್ಡ ಬಾಗೆಯೂರಿನ ಕಮ್ಮಾರಗಾವಣ್ಡ, ಸವುಳಜ್ಜದ ಮಣ್ಡೆಗಾವುಣ್ಡ ಮತ್ತು ಬೆಳ್ವೂರಲ ಜನಮ್ಮ ಇವರನ್ನು ಸಾಕ್ಷಿಗಳಾಗಿ ಇಟ್ಟುಕೊಂಡು ದತ್ತಿ ಬಿಡುತ್ತಾನೆ. ಅದರಲ್ಲಿ 'ಪತ್ತೊನ್ದಿ' ಅಂದರೆ ಹತ್ತನೇ ಒಂದು ಭಾಗ ಉತ್ತಮಗಾವುಣ್ಡನಿಗೆ ಸೇರಬೇಕೆಂದು ವ್ಯವಸ್ಥೆ ಮಾಡುತ್ತಾನೆ.

ಸಾಮಾನ್ಯವಾಗಿ ಕೆರೆಯ ನಿರ್ಮಾತೃವೇ ದೇವಾಲಯಗಳಿಗೆ, ಬ್ರಾಹ್ಮಣರಿಗೆ ದಾನ ದತ್ತಿ ಬಿಡುವುದನ್ನು ಕಾಣುತ್ತೇವೆ. ಆದರೆ ಇಲ್ಲಿ ಕೆರೆ ಕಟ್ಟಿಸಿದವನೇ ಬಿಟ್ಟ ದತ್ತಿಯಲ್ಲಿ ಹತ್ತನೇ ಒಂದು ಭಾಗವನ್ನು ಪಡೆಯುವ ಸ್ಥಿತಿಯಲ್ಲಿದ್ದಾನೆ. ಅಂದರೆ ಆತ ಬಡವನಾಗಿರುವ ಅಥವಾ ಕೆರೆ ಕಟ್ಟಿಸಿ ಬರಿಗೈ ಆಗಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಇದೊಂದು ಶಾಸನವನ್ನು ಬಿಟ್ಟು ಮತ್ತಾವ ಶಾಸನದಲ್ಲಿಯೂ ಉತ್ತಮಗಾವುಣ್ಡನ ಉಲ್ಲೇಖವಿಲ್ಲ. ಆದ್ದರಿಂದ ಆತನ ಇತಿವೃತ್ತವನ್ನು ತಿಳಿಯಲಾಗುವುದಿಲ್ಲ. ಆದರೆ ಸುಮಾರು ೧೧೦೦ ವರ್ಷಗಳ ಹಿಂದೆ ಶ್ರೀಸಾಮಾನ್ಯನೊಬ್ಬ ತನ್ನ ಹೊಟ್ಟೆಬಟ್ಟೆ

ಕಟ್ಟಿ ಮಾಡಿಸಿದ ಕೆರೆ ಇಂದಿಗೂ ಸುಸ್ಥಿತಿಯಲ್ಲಿದೆ. ಈಗ ಅದನ್ನು 'ಸಿದ್ದಿಕಟ್ಟೆ' ಎಂದು ಕರೆಯಲಾಗುತ್ತಿದ್ದು, ಒಂದು ಕೋಡಿ ಮತ್ತು ಒಂದು ತೂಬು ಇದೆ. ಬಸವನಪುರ ಮತ್ತು ಸುತ್ತ ಮುತ್ತಲ ಹಳ್ಳಿಯ ಜನತೆಗೆ, ಜಾನುವಾರುಗಳಿಗೆ ಮತ್ತು ನೂರಾರು ಎಕರೆ ಭೂಮಿಗೆ ನೀರೊದಗಿಸುತ್ತಿದೆ. ಈ ದೃಷ್ಟಿಯಿಂದ ಉತ್ತಮಗಾವುಣ್ಡನನ್ನು ನಾವಿಲ್ಲಿ ನೆನೆಯಬೇಕಾಗಿದೆ.

**ಸಿಂಗಸಮುದ್ರ (೧೦-೧೧ನೇ ಶತಮಾನ)**

ಬೆಕ್ಕದಲ್ಲಿನ ಒಂದು ಶಾಸನ[೪], ನಯಕೀರ್ತಿ ಸಿದ್ಧಾಂತದೇವ ಮತ್ತು ಅವನ ಶಿಷ್ಯರಾದ ಭಾನುಕೀರ್ತಿ ಸಿದ್ಧಾಂತದೇವ ಮತ್ತು ಪ್ರಭಾಚಂದ್ರದೇವ ಅವರ ಸಲಹೆಯಂತೆ, ಮಹಪ್ರಧಾನಿ ಹಿರಿಯ ಬಂಡಾರಿ ರಾಮದೇವನಾಯಕ, ಬಂಡಾರಿ ಸಿಂಘಯ್ಯ ಮತ್ತು ಮಹಾವಡ್ಡಬ್ಯಹಾರಿ ಕವಡಮಯ್ಯನ ಸಾತಿಸೆಟ್ಟಿ ಮುಂತಾದವರು ಕೆರೆಯನ್ನು ಕಟ್ಟಲು ಭೂಮಿಯನ್ನು ನೀಡಿದರೆಂದು ಉಲ್ಲೇಖಿಸುತ್ತದೆ. ಅದೇ ಶಾಸನ ಮುಂದುವರೆದು, ಬೆಕ್ಕನ ನಾಗರಸನ ಮಗ ಚಾಮರಸನು ಮತ್ತು ಹುಳ್ಳರಸನು, ಮುದ್ದರಸನ ಮಗ ಸೋಮರಸನು 'ಸಿಂಗಸಮುದ್ರ'ವೆಂಬ ಕೆರೆಯನ್ನು ಕಟ್ಟಿ, ಕಲ್ಲತೂಬನ್ನು ಇಕ್ಕಿದರು ಎಂದು ಹೇಳುತ್ತದೆ. ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲದಿದ್ದರೂ ಹೊಯ್ಸಳ ವೀರಬಲ್ಲಾಳನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ. ಎಪಿಗ್ರಾಫಿಯಾ ಕರ್ನಾಟಿಕದಲ್ಲಿ ಈ ಶಾಸನದ ಕಾಲವನ್ನು ೧೦-೧೧ನೆಯ ಶತಮಾನ ಎಂದು ಉಲ್ಲೇಖಿಸಿದೆ. ಆದರೆ ವೀರಬಲ್ಲಾಳನ ಆಳ್ವಿಕೆ ಆರಂಭವಾಗುವುದೇ ಕ್ರಿ.ಶ. ೧೧೭೩ರಿಂದ. ಆದ್ದರಿಂದ ಪ್ರಸ್ತುತ ಶಾಸನದ ಕಾಲವನ್ನು ೧೨ನೆಯ ಶತಮಾನವೆಂದು ಹೇಳಬಹುದು.

ಎಪಿಗ್ರಾಪಿಯಾ ಕರ್ನಾಟಿಕದ ಪೀಠಿಕೆಯಲ್ಲಿ ಗುರುತಿಸಿರುವಂತೆ, ವಿದ್ವಾಂಸರು ಅಷ್ಟಾಗಿ ಗಮನ ಹರಿಸಿರದ ಚಾಲುಕ್ಯವಂಶದ ಮಾಂಡಲಿಕನೊಬ್ಬನನ್ನು, ಬೆಕ್ಕದಲ್ಲಿಯ ಇನ್ನೊಂದು ಶಾಸನ[೫] ಉಲ್ಲೇಖಿಸುತ್ತದೆ. ಅದರ ಕಾಲ ಕ್ರಿ.ಶ. ೧೦೭೯. ಆ ಮಾಂಡಲಿಕನ ಹೆಸರೂ ಹುಳ್ಳರಸ ಎಂದಿರುವುದರಿಂದ ಈ ಶಾಸನವು ಗಮನಾರ್ಹವಾಗಿದೆ. ಆತನು ವಿಷ್ಣುವರ್ಧನ ಜಗದೇಕಮಲ್ಲ ನರಸಿಂಹ ಹೊಯ್ಸಳದೇವನ ಅಧೀನನಾಗಿದ್ದಂತೆ ತೋರುತ್ತದೆ. ಶಾಸನದಲ್ಲಿ ಆತನ ವಂಶಾವಳಿಯನ್ನು ಕೊಟ್ಟಿದೆ. ಅದರಲ್ಲಿನ ಕೆಲವು ಹೆಸರುಗಳು ಮೊದಲಿನ (೫೬೪) ಶಾಸನದಲ್ಲಿನ ವ್ಯಕ್ತಿಗಳ ಹೆಸರುಗಳೇ ಆಗಿರುವುದು ಗಮನಿಸಬೇಕಾದ ಸಂಗತಿಯಾಗಿದೆ.




ಹುಳ್ಳರಸನು, ಅಯ್ಯಂದಿರು ಕಟ್ಟಿಸಿದ್ದ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದ್ದಲ್ಲದೆ, ಸೋಮೇಶ್ವರ ಮತ್ತು ಮುದ್ದೇಶ್ವರ ದೇವಾಲಯಗಳಿಗೆ ಭೂಮಿ ದಾನ ಮಾಡಿದ ವಿಚಾರವಿದೆ. ಅಲ್ಲದೆ 'ತಂದೆ ಮೂವರುಂ' ಮಾಡಿ ಬಿಟ್ಟ ದತ್ತಿ ಎಂದಿರುವುದರಿಂದ ಆ ದಾನದಲ್ಲಿ ಆತನ ತಂದೆ, ದೊಡ್ಡಪ್ಪ ಮತ್ತು ಅಜ್ಜನೂ ಭಾಗಿಯಾಗಿದ್ದಿರಬೇಕು.

೫೬೫ನೇ ಶಾಸನೋಕ್ತ ಮುದ್ದರಸ, ನಾಗರಸ ಮತ್ತು ಹುಳ್ಳರಸ ಅವರುಗಳು ೫೬೪ನೇ ಶಾಸನದಲ್ಲಿ ಬಂದಿರುವ ನಾಗರಸ ಮತ್ತು ಅವನ ಮಗ ಹುಳ್ಳರಸ, ಹಾಗೂ ಮುದ್ದರಸ ಎಂಬುವವರ ವಂಶದವರೇ ಆಗಿರುವ ಸಾದ್ಯತೆ ಇದೆ. ಆದರೆ ಎರಡೂ ಶಾಸನಗಳ ನಡುವೆ ಸುಮಾರು ಒಂದು ನೂರು ವರ್ಷಗಳ ಅಂತರವಿದೆ. ಆದ್ದರಿಂದ, ನಡುವೆ ಒಂದೆರಡು ತಲೆಮಾರುಗಳು ಇದ್ದಿರಬೇಕು ಎಂದು ಊಹಿಸಬಹುದಾಗಿದೆ. ಈ ಶಾಸನವು ಕೆರೆಯ ತೂಬಿನ ಮೇಲೆಯೇ ಇದ್ದು, ಆ ಕೆರೆಯೇ ಶಾಸನೋಕ್ತ 'ಸಿಂಗಸಮುದ್ರ' ಆಗಿದೆ ಎಂದು ಹೇಳಬಹುದು. ಈಗ ಆ ಕೆರೆಯನ್ನು 'ಬೆಕ್ಕನಕೆರೆ' ಎಂದು ಕರೆಯಲಾಗುತ್ತಿದೆ.

**ಗಂಗರಾಜ (ಕ್ರಿ.ಶ. ೧೧೧೮)**

ಕ್ರಿ.ಶ.೧೧೧೮ಕ್ಕೆ ಸೇರಿದ ಶ್ರವಣಬೆಳಗೊಳದ ಶಾಸನದಲ್ಲಿ,[೬] ಗಂಗರಾಜನು 'ಗಂಗಸಮುದ್ರ'ವೆಂಬ ಕೆರೆಯನ್ನು ಕಟ್ಟಿಸಿದ ವಿಚಾರವಿದೆ. ಆತ ಹೊಯ್ಸಳ ವಿಷ್ಣುವರ್ಧನನ ದಂಡನಾಯಕನಾಗಿದ್ದವನು. ಶ್ರವಣಬೆಳಗೊಳದ ಸುಮಾರು ಮೂವತ್ತಕ್ಕೂ ಹೆಚ್ಚು ಶಾಸನಗಳು ಆತನನ್ನು ಉಲ್ಲೇಖಿಸುತ್ತವೆ. ಆತನ ಬಗ್ಗೆ ಸಾಕಷ್ಟು ವಿವರಗಳೂ ಲಭ್ಯವಾಗಿವೆ. ವಿಷಯವಿಶ್ವಕೋಶದಂತಹ ಉದ್ಗ್ರಂಥಗಳು ಆತನ ಎಲ್ಲಾ ಸಾಧನೆಗಳನ್ನು ಹೇಳಿದ್ದರೂ, ಆತ ಕೆರೆಕಟ್ಟಿಸಿದ ವಿಚಾರದಲ್ಲಿ ಮೌನವಹಿಸಿವೆ! ಆತ ಕಟ್ಟಿಸಿದ ಕೆರೆ 'ಗಂಗಸಮುದ್ರ'ದ ಉಲ್ಲೇಖವೇ ಸುಮಾರು ಹದಿನೈದು ಶಾಸನಗಳಲ್ಲಿದೆ. ಆತನ ವಂಶಾವಳಿಯನ್ನು ಜಿನನಾಥಪುರದ ಒಂದು ಶಾಸನ[೭] ಮತ್ತು ಇತರ ಕೆಲವು ಶಾಸನಗಳಿಂದ ಗುರುತಿಸಬಹುದಾಗಿದೆ.




ನಾಗವರ್ಮ ಎಂಬುವವನ ವಂಶದ್ದವನಾದ ಗಂಗರಾಜನಿಗೆ ಬಮ್ಮಣ್ಣನಲ್ಲದೆ ಇನ್ನೊಬ್ಬ ಅಣ್ಣ ಇದ್ದಿರಬೇಕು ಎಂಬ ಅನುಮಾಗಳಿವೆ. ಆತ ಹೆಚ್ಚು ಗೌರವಿಸುತ್ತಿದ್ದ, ಆತನ ಅತ್ತಿಗೆ ಜಕ್ಕಣಬ್ಬೆ, ಬಮ್ಮಣ್ಣನ ಹೆಂಡತಿಯೊ ಅಥವಾ ಇನ್ನೊಬ್ಬ ಅಣ್ಣನ ಹೆಂಡತಿಯೊ ಸ್ಪಷ್ಟವಾಗುವುದಿಲ್ಲ. ಆಕೆಗೆ ಬೊಪ್ಪ ಎಂಬ ಮಗನಿದ್ದಂತೆ ತಿಳಿಯುತ್ತದೆ. ಚಾವುಂಡರಾಯ ಬಸದಿಯಲ್ಲಿನ ನೇಮೀಶ್ವರನ ಸಿಂಹಪೀಠದ ಮೇಲೆ ಇರುವ ಶಾಸನದಲ್ಲಿ[೮], ಗಂಗರಾಜನ ಮಗ ಏಚ ಎಂಬುವವನು ಬೊಪ್ಪನ ಚೈತ್ಯಾಲಯವನ್ನು ಕಟ್ಟಿಸಿದ ವಿಚಾರವಿದೆ. ಆದರೆ ಈ ಏಚನು ಗಂಗರಾಜನ ಇನ್ನೊಬ್ಬ ಮಗನಾಗಿದ್ದು, ತನ್ನ ಸಹೋದರ ಬೊಪ್ಪನ ಹೆಸರಿನಲ್ಲಿ ಚೈತ್ಯಾಲಯವನ್ನು ನಿರ್ಮಿಸಿದನೆ? ಅಥವಾ ಗಂಗರಾಜನ ಅಣ್ಣ ಬಮ್ಮಣ್ಣನ ಮಗ ಏಚನೇ ಬೊಪ್ಪನ ಹೆಸರಿನಲ್ಲಿ ಚೈತ್ಯಾಲಯವನ್ನು ನಿರ್ಮಿಸಿದನೆ? ಎಂಬುದು ಸ್ಪಷ್ಟವಾಗುವುದಿಲ್ಲ. ಆದರೆ, ಶ್ರವಣಬೆಳಗೊಳದ ಇನ್ನೊಂದು ಶಾಸನದಲ್ಲಿ[೯], ಗಂಗರಾಜನ ಅಣ್ಣ ಹೆಗ್ಗಡೆ ಬಮ್ಮಣಯ್ಯನ ಮಗ ಹಿರಿಏಚಿಮಯ್ಯ ಎಂದಿರುವುದರಿಂದ, ಗಂಗರಾಜನಿಗೆ ಏಚ ಎಂಬ ಇನ್ನೊಬ್ಬ ಮಗನಿದ್ದಿರಬಹುದು.

ಪ್ರಸ್ತುತ ಶಾಸನದಲ್ಲಿ[೧೦] ಕಣ್ಣಗಾಲದ ಬಿಜಾನಕಬಿಯ ಕಾಳಗದಲ್ಲಿ ಕಟಕದ ಹನ್ನಿರ್ವ್ವರು ಸಾಮಂತರನ್ನು ಓಡಿಸಿ ಗೆದ್ದಾಗ, ವಿಷ್ಣುವರ್ಧನನು ಮೆಚ್ಚಿ ಬೇಡಿಕೊ ಎಂದಾಗ ದೇವತಾ ಪೂಜೆ, ಆಹಾರದಾನಕ್ಕೆ ಕಾರುಣ್ಯದಿಂದ ಪರಮ ಗ್ರಾಮವನ್ನು ಪಡೆದು ಕೆಱೆಯನ್ನು ಕಟ್ಟಿಸಿ ಅದಕ್ಕೆ 'ಗಂಗಸಮುದ್ರ'ವೆಂದು ನಾಮಕರಣ ಮಾಡುತ್ತಾನೆ.

ಗಂಗರಾಜನ ಮತ್ತು ಆತನ ಕುಟುಂಬದವರ ಇನ್ನಿತರ ಸಾಧನೆಗಳನ್ನು, ಹೊಯ್ಸಳ ಸಾಮ್ರಾಜ್ಯದಲ್ಲಿ ಆತನಿಗಿದ್ದ ಪ್ರಾಮುಖ್ಯತೆಯನ್ನು ಕೆಳಕಂಡಂತೆ ಗಮನಿಸಬಹುದಾಗಿದೆ.

ಗಂಗರಾಜನು ಮೂಲಸಂಘದ ದೇಸಿಯಗಣದ ಶುಭಚಂದ್ರ ಸಿದ್ಧಾಂತದೇವ ಮುನಿಗೆ ಶಿಷ್ಯನಾಗಿದ್ದನು. ಗೊಮ್ಮಟನ ಸುತ್ತ ಸುತ್ತಾಲಯವನ್ನು ಮಾಡಿಸಿದ ಕೀರ್ತಿ ಗಂಗರಾಜನದು. ಕಣ್ಣೆಗಾಲದ ಯುದ್ಧದಲ್ಲಿ ಚಾಲುಕ್ಯ ಪೆರ್ಮಾಡಿಯನ್ನು ಸೋಲಿಸಿ ಪಡೆದ ಪರಮ ಗ್ರಾಮವನ್ನು ತನ್ನ ತಾಯಿ ಮತ್ತು ಹೆಂಡತಿಯರು ಕಟ್ಟಿಸಿದ ಬಸದಿಗಳ ಜೊತೆಗೆ ಹಲವಾರು

ಬಸದಿಗಳಿಗೆ ದತ್ತಿ ಬಿಡುತ್ತಾನೆ. ಗಂಗರಾಜನ ಹೆಂಡತಿ ಲಕ್ಷ್ಮಿಗೆ ದೇಮಿಯಕ್ಕ ಎಂಬ ಸಹೋದರಿಯೂ ಭೂಚಣ ಎಂಬ ಸಹೋದರನೂ ಇದ್ದಂತೆ ತಿಳಿಯುತ್ತದೆ. ಆಕೆಯ ತಾಯಿ ನಾಗಲೆಯನ್ನು ಲೀಲಾವತಿ ದಂಡನಾಯಿಕಿತಿ ಎಂದು ಕರೆಯಲಾಗಿದೆ. ದೇಮಿಯಕ್ಕ ನಿಧನಳಾದಾಗ ಲಕ್ಷ್ಮಿಯು ಅವಳಿಗೆ ನಿಸಧಿಯನ್ನು ನಿರ್ಮಿಸುತ್ತಾಳೆ. ಗಂಗರಾಜನ ಪತ್ನಿ ಲಕ್ಷ್ಮಿಯು ಮತ್ತು ತಾಯಿ ಪೋಚಿಕಬ್ಬೆಯು ಬಸದಿಗಳನ್ನು ನಿರ್ಮಾಣ ಮಾಡಿಸಿದ್ದಾರೆ. ಗಂಗರಾಜನ ಅಣ್ಣ ಹೆಗ್ಗಡೆ ಬಮ್ಮಣ್ಣನ ಮಗ ಹಿರಿಏಚಿಮಯ್ಯನು ಶಾಂತಿನಾಥ ಬಸದಿಯನ್ನು ಕಟ್ಟಿಸಿದ್ದಾನೆ. ಗಂಗವಾಡಿಯ ಎಲ್ಲಾ ಬಸದಿಗಳನ್ನು ಜೀರ್ಣೋದ್ಧಾರ ಮಾಡಿಸಿದಂತೆ ತಿಳಿದು ಬರುತ್ತದೆ. ಕಂಬದಹಳ್ಳಿಯ ಬಸದಿಗಳನ್ನು ಜೀರ್ಣೋದ್ಧಾರ ಮಾಡಿಸಿದ್ದಕ್ಕಾಗಿ ಅಲ್ಲಿನ ಶಾಸನಗಳಿಂದ ತಿಳಿದು ಬರುತ್ತದೆ. ಅತ್ತಿಗೆ ಜಾಕಬ್ಬೆಯು ನಯಣದ ದೇವರನ್ನು ಪ್ರತಿಷ್ಠೆ ಮಾಡಿಸುತ್ತಾಳೆ. ಜಕ್ಕಬ್ಬೆಯು 'ಜಕ್ಕೀಕೆರೆ' ಎಂಬುದನ್ನು ಕಟ್ಟಿಸಿದ್ದು, ಅದು ಈಗ 'ಜಕ್ಕಿಕಟ್ಟೆ' ಎಂದು ಕರೆಯಲ್ಪಡುತ್ತಿದೆ. ಗಂಗರಾಜನು ಜಕ್ಕಬ್ಬೆಯ ಮರಣಾನಂತರ ಅವಳಿಗೆ ನಿಸಿಧಿಯನ್ನು ನಿರ್ಮಿಸುತ್ತಾನೆ. ತಾಯಿ ಪೋಚಿಕಬ್ಬೆಯ ಮರಣಾನಂತರ ನಿಸಿಧಿಯನ್ನು ಮಾಡಿಸಿದ ಉಲ್ಲೇಖಗಳೂ ಇವೆ. ಜಿನನಾಥಪುರವನ್ನು ಮತ್ತು ಅಲ್ಲಿ ಜಿನಾಲಯವನ್ನು ಕಟ್ಟಿಸಿದ ಕೀರ್ತಿ ಗಂಗರಾಜನದು. ಶ್ರವಣಬೆಳಗೊಳದಲ್ಲಿ ಶಾಸನ ಬಸದಿ ಮತ್ತು ಕತ್ತಲೆಬಸದಿಯನ್ನು ಗಂಗರಾಜ ಕಟ್ಟಿಸಿದನೆಂದು ತಿಳಿಯುತ್ತದೆಯಾದರೂ ಅದರ ಬಗ್ಗೆ ಬಿನ್ನಾಭಿಪ್ರಾಯಗಳಿವೆ.

ಹತ್ತು ಹಲವಾರು ಧಾರ್ಮಿಕ ಕಾರ್ಯಗಳಲ್ಲಿ ಪ್ರಮುಖ ವ್ಯಕ್ತಿಯಾಗಿದ್ದ ಗಂಗರಾಜನು ರಾಜಕೀಯವಾಗಿಯೂ ಪ್ರಮುಖ ವ್ಯಕ್ತಿಯಾಗಿ ಕಂಡುಬರುತ್ತಾನೆ. ಹೊಯ್ಸಳ ವಿಷ್ಣುವರ್ಧನನ ನಿಷ್ಠಾವಂತ ದಂಡನಾಯಕನಾಗಿ ಹೆಸರು ಮಾಡಿದ್ದ ಗಂಗರಾಜನು ಚೋಳರನ್ನು ಓಡಿಸಿ ತಲಕಾಡನ್ನು ವಶಪಡಿಸಿಕೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾನೆ. ಆ ಯುದ್ಧದಲ್ಲಿ ಗಂಗರಾಜನು ಮುಂದೆ ನಿಂತು ಹೋರಾಡಿದನೆಂದು ಕಂಬದಹಳ್ಳಿಯ ಶಾಸನವು ಉಲ್ಲೇಖಿಸುತ್ತದೆ. ಆಗ ತನಗೆ ಕಾಣಿಕೆಯಾಗಿ ದೊರೆತ ಬಿಂಡಿಗನವಿಲೆಯನ್ನು, ತನ್ನ ಗುರುವಿಗೆ ದೇವತಾ ಕಾರ್ಯಕ್ಕಾಗಿ ದತ್ತಿ ಬಿಡುತ್ತಾನೆ. ವಿಷ್ಣುವರ್ಧನನು ಸಿಂಹಾಸನಾರೂಢನಾಗುವ ಸಂಧರ್ಭದಲ್ಲಿ ಪ್ರಧಾನ ಪಾತ್ರ ವಹಿಸುತ್ತಾನೆ. ಹೀಗೆ, ಅಂದಿನ ಹೊಯ್ಸಳ ಸಾಮ್ರಾಜ್ಯದಲ್ಲಿ ಪ್ರಮುಖ ದಂಡನಾಯಕನಾಗಿದ್ದ ಗಂಗರಾಜನನ್ನು, ಆತನ ಸಾಧನೆಗಳನ್ನು ಕೊಂಡಾಡಿರುವ ಒಂದು ಪದ್ಯವು ನಾಲ್ಕೈದು ಶಾಸನಗಳಲ್ಲಿ ಪುನರಾವರ್ತನೆಯಾಗಿದೆ.

**ಗಂಗವಾಡಿಯ ಬಸದಿಗಳೆನಿತೊಳವನಿತುಮಂ ತಾನೆಯ್ದೆ ಪೊಸಯಿಸಿದಂ**
**ಗಂಗವಾಡಿಯ ಗೊಮ್ಮಟದೇವರ್ಗ್ಗೆ ಸುತ್ತಾಲಯಮನೆಯ್ದೆ ಮಾಡಿಸಿದಂ**
**ಗಂಗವಾಡಿಯ ತಿಗುಳರಂ ಬೆಂಕೊಡು ವೀರಗಂಗಂಗೆ ನಿಮಿರ್ಚ್ಚಿ ಕೊಟ್ಟ**
**ಗಂಗರಾಜನಾಮುನ್ನಿನ ಗಂಗರಾಯಂಗಂ ನೂರ್ಮಡಿ ಧನ್ಯನಲ್ತೆ॥**

ಗಂಗರಾಜ ಕ್ರಿ.ಶ. ೧೧೩೩ರಲ್ಲಿ ಮರಣ ಹೊಂದಿದಾಗ, ಆತನ ಮಗ ಬೊಪ್ಪನು, ಹಳೇಬೀಡಿನಲ್ಲಿ 'ದ್ರೋಹರಘಟರಟ್ಟ'ವೆಂಬ ಪಾರ್ಶ್ವನಾಥ ಜಿನಾಲಯವನ್ನು ತನ್ನ ತಂದೆಯ ಹೆಸರಿನಲ್ಲಿ ನಿರ್ಮಿಸುತ್ತಾನೆ. ಸಂತೇಶಿವರದಲ್ಲಿ ಗಂಗರಾಜನ ಹೆಸರಿನಲ್ಲಿ ಗಂಗೇಶ್ವರ ದೇವಾಲಯವು ನಿರ್ಮಾಣವಾಗಿದ್ದು, ಅದನ್ನು ಆತನ ಮಗ ಬೊಪ್ಪನು ಜೀರ್ಣೋದ್ಧಾರ ಮಾಡಿಸಿ, ಕೆಲವು ದತ್ತಿಗಳೊಂದಿಗೆ ಎಣ್ಣೆ ಗಾಣವೊಂದನ್ನು ದೇವಾಲಯಕ್ಕೆ ಅರ್ಪಿಸುತ್ತಾನೆ. ತಂದೆಯ ಹಾದಿಯಲ್ಲಿಯೇ ಮುಂದುವರೆದ ಮಗ ಬೊಪ್ಪ ವಿಷ್ಣುವರ್ಧನನ ಕಡೆಗಾಲದವರೆಗೂ ಅವನಿಗೆ ನಿಷ್ಠನಾಗಿ ಜೊತೆಯಲ್ಲಿದ್ದುದಲ್ಲದೆ, ವಿಷ್ಣುವರ್ಧನನ ಮರಣಾನಂತರ ಆತನ ಅಂತ್ಯಕ್ರಿಯೆಯಲ್ಲಿ ಪ್ರಮುಖ ಪಾತ್ರವಹಿಸುತ್ತಾನೆ.

**ಜಕ್ಕಿಯಬ್ಬೆ (ಕ್ರಿ.ಶ. ೧೨ನೆಯ ಶತಮಾನ)**

೫೦೪ ನೇ ಶಾಸನವು ಗಂಗರಾಜನ ಅತ್ತಿಗೆ ಜಕ್ಕಬ್ಬೆಯು ಜಕ್ಕಿ ಕೆರೆಯನ್ನು ಕಟ್ಟಿಸಿ ನಯಣದ ದೇವರನ್ನು ಮಾಡಿಸಿದ ವಿಚಾರವಿದೆ. ಈಗ ಜಕ್ಕಿಕಟ್ಟೆ ಎಂದು ಕರೆಯುತ್ತಿರುವುದೇ ಆ ಕೆರೆಯಾಗಿದೆ. ಆಕೆ ಗಂಗರಾಜನ ಅತ್ತಿಗೆಯಾಗಿ ಮಾತ್ರ ಶಾಸನಗಳಲ್ಲಿ ಉಲ್ಲೇಖಿತಳಾಗಿದ್ದಾಳೆ. ಆದರೆ ಆಕೆಯ ಪತಿಯಾರೆಂದು ತಿಳಿಯುವುದಿಲ್ಲ. ಗಂಗರಾಜನಿಗೆ ಬಮ್ಮಣ್ಣನಲ್ಲದೆ ಬೇರೊಬ್ಬ ಅಣ್ಣನಿದ್ದಿರಬಹುದೆ? ಎಂಬುದರ ಬಗ್ಗೆ ಏನನ್ನು ಹೇಳಲು ಸಾಧ್ಯವಾಗಿಲ್ಲ.

**ನಾಗದೇವ ಹೆಗ್ಗಡೆ (ಕ್ರಿ.ಶ. ೧೨ನೆಯ ಶತಮಾನ)**

ಶ್ರವಣಬೆಳಗೊಳದಲ್ಲಿ ಈಗ ಜಿಗಣೆಕಟ್ಟೆಯ ಬಳಿಯಿರುವ ಶಾಸನದಲ್ಲಿ[೧] 'ನಾಗಸಮುದ್ರ' ಕೆರೆಯನ್ನು ನಾಗದೇವ ಹೆಗ್ಗಡೆ ಎಂಬುವವನು ಕಟ್ಟಿಸಿದ ವಿಚಾರವಿದೆ. ಆತನ ತಂದೆಯ ಹೆಸರು ಬೊಮ್ಮದೇವ ಹೆಗ್ಗಡೆ. ಗುರು ನಯಕೀರ್ತಿಸಿದ್ಧಾಂತ ಚಕ್ರವರ್ತಿ. ಕೆರೆಯ ಜೊತೆಗೆ ಒಂದು ತೋಟವನ್ನೂ ಮಾಡಿಸಿದ ವಿಚಾರ ಶಾಸನದಲ್ಲಿದೆ. ಈಗಿನ 'ಜಿಗಣೆಕಟ್ಟೆ'ಯೇ ಅಂದಿನ 'ನಾಗಸಮುದ್ರ'ವಾಗಿದ್ದಿರಬೇಕು. ಆತನ ಬಗ್ಗೆ ಹೆಚ್ಚಿನ ವಿವರಗಳು ಲಭ್ಯವಿಲ್ಲ. ಸುಂಡಹಳ್ಳಿಯ ಶಾಸನದಲ್ಲಿ[೨] ನಾಗದೇವ ಹೆಗ್ಗಡೆ, ಕೆಂಚೇಗೌಡ ಮತ್ತು ಮಾರೇಗೌಡ ಮುಂತಾದವರು ಒಂದು ಕೆರೆ ಕಟ್ಟಿಸಿದರೆಂದು ಉಲ್ಲೇಖವಿದೆ. ಆದುದ್ದರಿಂದ ನಾಗದೇವ ಹೆಗ್ಗಡೆಯು ಸುಂಡಹಳ್ಳಿಯವನಾಗಿದ್ದಿರಬೇಕು ಎಂದು ಊಹಿಸಬಹುದು. ಅವರು ಕಟ್ಟಿಸಿದ ಕೆರೆ ಯಾವುದೆಂದು ಶಾಸನದಲ್ಲಿ ಉಲ್ಲೇಖವಿಲ್ಲ.

**ಶಾಂತಲೆ (ಕ್ರಿ.ಶ. ೧೧೨೩)**

ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿನ ಶಾಸನವೊಂದು[೩] ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲೆಯು 'ಎಳಸನಕಟ್ಟೆ' ಎಂಬುದನ್ನು ಕೆರೆಯಾಗಿ ಕಟ್ಟಿಸಿ ಸವತಿಗಂಧವಾರಣ ಬಸದಿಗೆ, ಸುರಗಿಗೆ ಬಿಟ್ಟ ವಿಚಾರವನ್ನು ತಿಳಿಸುತ್ತದೆ. ಶಾಂತಲೆಯು, ಗಂಗರಾಜನು ಕಟ್ಟಿಸಿದ್ದ 'ಗಂಗಸಮುದ್ರ'ದ ಕೆಳಗೆ ಗದ್ದೆಗಳನ್ನು ದತ್ತಿ ಬಿಟ್ಟ ವಿಚಾರವನ್ನು ಈ ಶಾಸನ ಉಲ್ಲೇಖಿಸುತ್ತದೆ. ಶಾಂತಲೆಯ ಬಗ್ಗೆ ಹೆಚ್ಚಿಗೇನನ್ನು ಹೇಳುವ ಅವಶ್ಯಕತೆಯಿಲ್ಲ. ವಿಷ್ಣುವರ್ಧನನ ಮನಃಪ್ರಿಯೆಯಾಗಿ, ರಾಣಿಯಾಗಿ, ಹೊಯ್ಸಳ ಸಾಮ್ರಾಜ್ಞಿಯಾಗಿ ಕನ್ನಡ ಸಾಂಸ್ಕೃತಿಕ ಲೋಕದಲ್ಲಿ ಆಕೆಯ ಹೆಸರು ಅಜರಾಮರವಾಗಿದೆ. ಕರ್ನಾಟಕದಲ್ಲಿ ಆಗಿ ಹೋದ ಯಾವ ರಾಣಿಗೂ ಸಿಗದಷ್ಟು ಮಹತ್ವ ಶಾಂತಲೆಗೆ ದಕ್ಕಿದೆ. ಆದರೂ, ಚನ್ನರಾಯಪಟ್ಟಣ ತಾಲ್ಲೂಕಿನ ಶಾಸನಗಳ ಹಿನ್ನಲೆಯಲ್ಲಿ ಅವಳನ್ನು ಗಮನಿಸಬಹುದಾಗಿದೆ. ಸಂಪುಟ ಎರಡರಲ್ಲಿ ಸುಮಾರು ಆರು ಶಾಸನಗಳಲ್ಲಿ ಮತ್ತು ಸಂಪುಟ ಹತ್ತರಲ್ಲಿ ಎರಡು ಶಾಸನಗಳಲ್ಲಿ ಆಕೆಯ ಬಗ್ಗೆ ವಿವರಗಳು ದೊರೆಯುತ್ತವೆ. ಸವತಿಗಂಧಾವರಣ ಬಸದಿಯನ್ನು ಕಟ್ಟಿಸಿ, ಅದಕ್ಕೆ ಕಲ್ಕಣಿನಾಡಿನ ಮಟ್ಟನವಿಲೆ ಎಂಬ ಗ್ರಾಮವನ್ನು ದತ್ತಿಯನ್ನಾಗಿ ಬಿಟ್ಟು, ಅದನ್ನು ಮೇಘಚಂದ್ರ ತ್ರೈವಿದ್ಯಾದೇವರ ಶಿಷ್ಯರಾದ ಪ್ರಭಾಚಂದ್ರ ಸಿದ್ಧಾಂತ ದೇವರಿಗೆ ಧಾರೆಯೆಂದು ಕೊಡುತ್ತಾಳೆ. ಗಂಗರಾಜನ ಪತ್ನಿ ಲಕ್ಷ್ಮಿಮತಿಯೂ ಸಹ ಮೇಘಚಂದ್ರತ್ರೈವಿದ್ಯಾದೇವರ ಶಿಷ್ಯೆ ಎಂಬುದು ಗಮನಾರ್ಹ ವಿಷಯ. ಶಾಂತಲೆಯ ವಂಶಾವಳಿಯನ್ನು ಹೀಗೆ ಗುರುತಿಸಬಹುದಾಗಿದೆ.




ಶಾಂತಲೆಯು ಕ್ರಿ.ಶ. ೧೧೩೧ ರಲ್ಲಿ ಶಿವಗಂಗೆಯಲ್ಲಿ ಸತ್ತಳೆಂದು ಸಂಪುಟ ಎರಡರ ಪೀಠಿಕೆಯಲ್ಲಿ ಹೇಳಲಾಗಿದೆ. ಆದರೆ ಆಕೆ ಶ್ರವಣಬೆಳಗೊಳದಲ್ಲಿಯೇ ಸತ್ತಳೆಂಬುದು ಕೆಲವರ ಅಭಿಪ್ರಾಯ. ಶಿವಗಂಗೆಯ ತೀರ್ಥದಲ್ಲಿ ಮುಡುಪಿ ಸತ್ತಳು ಎಂಬುದರಲ್ಲಿ ಯಾವ ಶಿವಗಂಗೆ ಎಂಬ ಅನುಮಾನವಿದೆ. ಈ ವಿಷಯದಲ್ಲಿ ಸಾಕಷ್ಟು ಭಿನ್ನಾಬಿಪ್ರಾಯಗಳಿವೆ. ಆಕೆಯ ತಾಯಿ ಮಾಚಿಕಬ್ಬೆ ಒಂದು ತಿಂಗಳ ಕಾಲ ಸನ್ಯಸನ ವ್ರತವನ್ನು ಕೈಗೊಂಡು ಪಂಡಿತ ಮರಣವನ್ನು ಪಡೆದಳೆಂಬುದು ಗಮನಿಸಬೇಕಾದ ವಿಚಾರವಾಗಿದೆ. ಶಾಂತಲೆಯ ತಂದೆ ಶೈವಮತಾನುಯಾಯಿಗಿದ್ದರೂ ಮಾಚಿಕಬ್ಬೆಯ ಜೈನಮತನಿಷ್ಠೆ ಮೆಚ್ಚಬೇಕಾದ ವಿಷಯವಾಗಿದೆ. ಮುಂದೆ ಶಾಂತಲೆ ವಿಷ್ಣುವರ್ಧನನ ಪತ್ನಿಯಾದ ಮೇಲೆ, ಆತನು ಹಿಂದೂ (ವೈಷ್ಣವ)

ಮತಾನುಯಾಯಿಯಾಗಿದ್ದರೂ ಆಕೆ ಜೈನಧರ್ಮವೂ ಸೇರಿದಂತೆ ಸರ್ವಧರ್ಮಗಳಲ್ಲಿಯೂ ಸಮಾನ ಆಸಕ್ತಿಯುಳ್ಳವಳಾಗಿ ಕಂಡುಬರುತ್ತಾಳೆ. ಶಾಂತಲೆಯು ಮೂಲತಃ ಶೈವ ಸಂಪ್ರದಾಯದವಳೇ ಆಗಿದ್ದಾಳೆ ಎಂಬ ಅಭಿಪ್ರಾಯವೂ ಇದೆ. ಗಂಗೇಶ್ವರ ದೇವಾಲಯಕ್ಕೆ ಗಂಗರಾಜನ ಮಗ ಬೊಪ್ಪನು ಕೆಲವು ಭೂಮಿಗಳನ್ನು ಮತ್ತು ಒಂದು ಎಣ್ಣೆಗಾಣವನ್ನು ಶಾಂತಲೆಯ ಸಮ್ಮುಖದಲ್ಲಿ ದೇವರಿಗೆ ಅರ್ಪಿಸುವ ವಿಚಾರವಿದೆ.[೧೪]

**ಪಸಾಯಿತ ಬೆಳ್ಳಪ್ಪನಾಯಕ (ಕ್ರಿ.ಶ. ೧೧೬೫)**

ಬಾಗೂರು ಹೋಬಳಿ, ಬಿದರೆ ಗ್ರಾಮದ ಶಾಸನದಿಂದ[೧೫], ಪಸಾಯಿತ ಬೆಳ್ಳಪ್ಪನಾಯಕ ಎಂಬುವವನು ಕಗ್ಗನ ಬಿದರೆಯಲ್ಲಿ 'ಬಾಣಗರೆ'ಯನ್ನು ಕಟ್ಟಿಸಿದ ವಿಚಾರ ತಿಳಿಯುತ್ತದೆ. ಇದರ ಕಾಲ ಕ್ರಿ.ಶ. ೧೧೬೫. ಹೊಯ್ಸಳ ಒಂದನೆಯ ನರಸಿಂಹನಲ್ಲಿ ಅಧಿಕಾರಿಯಾಗಿದ್ದ ಬೆಳ್ಳಪ್ಪನಾಯಕನು, ನಿರ್ಗುಂದನಾಡಿನ ಕುಮಾರವ್ರಿತ್ತಿಯ ಕಗ್ಗನ ಬಿದರೆಯಲ್ಲಿ ಕಲಿದೇವನ ದೇವಾಲಯವನ್ನು ಕಟ್ಟಿಸಿ, ಮಹಾದೇವರಾಸಿ ಪಂಡಿತರ ಕಾಲನ್ನು ತೊಳೆದು ದೇವರ ಅಂಗಭೋಗಕ್ಕೆ, ನೈವೇದ್ಯಕ್ಕೆಂದು ದತ್ತಿ ಬಿಡುತ್ತಾನೆ. ಕಲಿದೇವರ ದೇವಾಲಯದ ಹಿಂದೆ ಬಾಣಗೆರೆಯನ್ನು, ನೆಲ್ಲಿಗುಂಡಿಯನ್ನು ಕಟ್ಟಿಸಿ ದೇವರಿಗೆ ಸಮರ್ಪಿಸುತ್ತಾನೆ. ನೆಲ್ಲಿಗುಂಡಿಯೂ ಒಂದು ಸಣ್ಣ ಕೆರೆ ಅಥವಾ ಕಟ್ಟೆಯಾಗಿರಬಹುದು. ಬೆಳ್ಳಪ್ಪನಾಯಕನನ್ನು ಮತ್ತು ಅವನು ಕಟ್ಟಿಸಿದ ದೇವಾಲಯವನ್ನು, ವೃತ್ತವೊಂದರಲ್ಲಿ ಹೀಗೆ ಹೊಗಳಿದೆ.

**ಇದು ಮದನಾರಿಗಂ ಸುರಗಣಾಂಬಿಕೆಗಂದು ವಿವಾಹ ಕಾಲದೊಳು**
**ಮುದದಿ ಸುರ್ಕ್ಕಳಿಂದ್ರ ಸಹಿತಂ ನೆರೆದರ್ತ್ತಿಯಿಸ್ವಕರ್ಮ ನೆ**
**ಮ್ಮದಿ ನೆರೆಮಾಡಲೆಂತೆಸವ ಸೋಬನ ಮಂಟಪದಂತಿರೋಪ್ಪುವೀ**
**ಬಿದರೆಯೊಳೀಸ್ವರಾಲಯಮನೆತ್ತಿಸಿದ ಬೆಳ್ಳಪನೇಂ ಕ್ರತಾರ್ತ್ಥನೋ ॥ ಚಂಪಕಮಾಲೆ॥**




ಬೆಳ್ಳಪ್ಪನಾಯಕನಿಗೆ ಇಬ್ಬರು ಹೆಂಡತಿಯರು. ಮೊದಲನೆಯವಳು ಅರ್ಧಾಂಗ ಲಕ್ಷ್ಮಿಯೆನಿಸಿದ ಹೊಲ್ಲವೆನಾಯಕಿತಿ. ಇವಳಿಗೆ ಮಲ್ಲಯ್ಯನಾಯಕ ಮತ್ತು ಕೇತಯ್ಯನಾಯಕ ಎಂಬಿಬ್ಬರು ಗಂಡು ಮಕ್ಕಳು. ಇಬ್ಬರನ್ನೂ, 'ಮರೆವೊಕ್ಕರ ತಪ್ಪದೆ ಕಾವವರು, ಕುಲದೀಪಕರು, ಸುಪುತ್ರರು ಎಂದು ಮುಂತಾಗಿ ಹೊಗಳಲಾಗಿದೆ. ಎರಡನೆ ಹೆಂಡತಿ ದಕ್ಷಿಣಗಂಗಾತೀರ್ಥಮೆನಿಸಿದ ತುಂಗಭದ್ರೆ ನಾಮಾಂಕಿತೆ ಚುಂಗೊಯ್ವೆನಾಯಕಿತಿ. ಇವಳಿಗೆ ದೇವಣ್ಣ ಬೋಕಣ ಎಂಬಿಬ್ಬರು ಗಂಡು ಮಕ್ಕಳು ಮತ್ತು ಗೌರಲಾದೇವಿ ಎಂಬ ಹೆಣ್ಣುಮಗಳು. ಗೌರಲಾದೇವಿಯನ್ನು 'ಗೋತ್ರಪವಿತ್ರೆ' ಯೆಂದು ಕರೆಯಲಾಗಿದೆ. ತಂದೆ ಮಗಳನ್ನು, ಬಿದರೆಯ ಪಕ್ಕದ ಗ್ರಾಮವಾದ ಕೆಂಬಾಳಿನ ಶಾಸನವೊಂದರಲ್ಲಿ[೧೬] ಉಲ್ಲೇಖಿಸಲಾಗಿದೆ. ಈ ಶಾಸನದಿಂದ ಗೌರಲದೇವಿ ಎಂಬುವವಳಲ್ಲಿ ನರಸಿಂಹನಿಗೆ ಎಱೆಯಂಗ ಎಂಬ ಮಗನಿದ್ದುದು ತಿಳಿಯುತ್ತದೆ. ಶಾಸನವು ಬೆಳ್ಳಪ್ಪನಾಯಕ ಮತ್ತು ಅವನ ಮಗಳು ಗೌರಲದೇವಿ ಅಥವಾ ಗೌರೀದೇವಿ ಮತ್ತಿತರರು ಮಲ್ಲಿಕಾರ್ಜುನದೇವರ ಸೇವೆಗೆ ಅನ್ನಸಂತರ್ಪಣೆಗೆಂದು ಗಾಣವೊಂದನ್ನು ಮತ್ತು ಭೂದಾನ ನೀಡಿದ್ದನ್ನು ದಾಖಲಿಸಿದೆ. ಅಮೃತರಾಶಿ ಪಂಡಿತನ ಶಿಷ್ಯನಾದ ಮಲ್ಲಿಕಾರ್ಜುನಜೀಯನಿಗೆ ದಾನ ನೀಡಲಾಗಿದೆ. ಈ ಕೆಲಸಕ್ಕೆ ಮಂಚಗೌಡ, ಹೆಗ್ಗಡೆ ಗಂಗಣ್ಣ, ಚೊಟ್ಟಿಗಾವುಂಡ, ಮಾಳಗಾವುಂಡ ಮತ್ತು ಅಲ್ಲಿಯ ಅರವತ್ತು ಒಕ್ಕಲು ಜನರು ನೆರವು ನೀಡುತ್ತಾರೆ. ತಂದೆಯ ಹಾದಿಯಲ್ಲಿಯೇ ನಡೆದ ಗೌರಲಾದೇವಿ ಆಗಿನ ಕಾಲಕ್ಕೆ ಪ್ರಮುಖ

ಮಹಿಳೆಯಾಗಿ ಬಾಳಿರಬಹುದು. ಹೊಯ್ಸಳ ನರಸಿಂಹನೇ ಆಕೆಯನ್ನು ಮದುವೆಯಾಗಿರುತ್ತಾನೆ. ಆಕೆಗೆ ಕುಮಾರ ಎಱೆಯಂಗದೇವನೆಂಬ ಮಗನಿದ್ದಾನೆ. ಶಾಸನದಲ್ಲಿ, ಮಹಾನುಭಾವೆಯೆನಿಸಿದ ಗೌರಲದೇವಿಗಂ ಶ್ರೀಮತು ಪ್ರತಾಪನಾರಸಿಂಘದೇವಂಗಂ ಪುಟ್ಟಿದನುದಯಾರ್ಕತೇಜಂ ಶ್ರೀಮತು ಕುಮಾರನೆಱೆಯಂಗದೇವರು ಕೆಂಬಾಳಂ ಸುಖಸಂಕಥಾವಿನೋದದಿಂನಾಳುತ್ತಮಿರ್ದ್ದನು ಎಂದು ಹೇಳಿದೆ.

**ಮಯಿಲೆಯನಾಯಕ (ಕ್ರಿ.ಶ. ೧೧೮೬)**

ಕಬ್ಬಳ್ಳಿಯಲ್ಲಿರುವ ಎರಡೂ ಶಾಸನಗಳು ಈ ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗುತ್ತವೆ. ಮೊದಲನೇ ಶಾಸನದಲ್ಲಿ[೧೭] ಮಯಿಲೆಯನಾಯಕನು ದೇವೇಶ್ವರ ದೇವಾಲಯವನ್ನು ಮತ್ತು 'ಕನ್ನೆಗೆರೆ'ಯನ್ನು ಕಟ್ಟಿಸಿದ ವಿಚಾರವಿದೆ. ಶಾಸನದ ಕಾಲ ಕ್ರಿ.ಶ. ೧೧೮೬. ಬಲ್ಲಾಳನ ಪಾದಪದ್ಮೋಪಜೀವಿಯಾಗಿದ್ದ ದೇವೆಯನಾಯಕನನ್ನು ಈ ಶಾಸನದಲ್ಲಿ "ಶ್ರೀಮತು ಮಂಡಳಿಕ ನಾಯಕ ಗೋಧೂವೆಘರಟ್ಟ ಶರಣಾಗತ ವಜ್ರ ಪಂಜರ ಮಾವನಂಕಕಾರ ವಿರೋಧಿನಾಯಕರ ಗಂಡ ಮಹಾಪಸಾಯ್ತಂ ಪರಮವಿಶ್ವಾಸಿ ದೇವೆಯನಾಯಕ" ಎಂದು ಹೊಗಳಿದೆ. ಈ ಬಿರುದುಗಳನ್ನು ಗಮನಿಸಿದರೆ ಬಲ್ಲಾಳನ ಆಪ್ತರಲ್ಲಿ ಈತನೂ ಒಬ್ಬನೆನಿಸುತ್ತದೆ. ದೇವೆಯನಾಯಕನ ಹೆಂಡತಿ ಪದುಮಲೆನಾಯಕಿತಿ. ಇವರ ಹಿರಿಯ ಮಗನೇ ಮಯಿಲೆಯನಾಯಕ. ಹಿರಿಯಮಗನೆಂದು ಕರೆದಿದ್ದರು ಇತರೆ ಮಕ್ಕಳ ಉಲ್ಲೇಖವಿಲ್ಲ. ಈತನನ್ನು "ಸುಪುತ್ರ ಗೋತ್ರಪವಿತ್ರ ದ್ವಿಜದೇವತಾತುಪರ ಯಾಚಕರಕಲ್ಪವ್ರಿಕ್ಷ ಸತ್ಯಧೀರ ತಂತ್ರದ ಹಿರಿಯಮಗ" ಎಂದು ಹೊಗಳಿದೆ.

ಮಯಿಲೆಯನಾಯಕನು ದಿಡುಗಿನ-ದಿಡಗ-ವ್ರಿತ್ತಿಯ ಕಬ್ಬಳ್ಳಿಯ ಊರಮುಂದೆ 'ಕಂನ್ನೆಗೆರೆ'ಯನ್ನು ಕಟ್ಟಿಸಿ ದೇವೇಶ್ವರ ದೇವಾಲಯಕ್ಕೆ ದತ್ತಿ ಬಿಡುತ್ತಾನೆ. ದೇವೇಶ್ವರ ದೇವಾಲಯವು ಆತನ ತಂದೆ ದೇವೆಯನಾಯಕನ ಹೆಸರಿನಲ್ಲಿ ಕಟ್ಟಿಸಿದ ದೇವಸ್ಥಾನವಾಗಿರಬಹುದೆಂದು ಊಹಿಸಬಹುದು. ಇಲ್ಲಿಯೂ 'ಕಂನ್ನೆಗೆರೆ' ಎಂದರೆ ಮೊದಲು ಕಟ್ಟಿಸಿದ ಕೆರೆಯೆಂದು ಅರ್ಥೈಸಬಹುದಾಗಿದೆ. ಆದರೆ ಸರಣಿಯಲ್ಲಿ ಬರುವ ಮೊದಲ ಕೆರೆ ಎಂದೂ ಅರ್ಥವಿದೆ. ತಾನೇ ಕಟ್ಟಿಸಿದ 'ಕಂನ್ನೆಗೆರೆ'ಯ ಎರಡೂ ಕೋಡಿಗಳಲ್ಲಿನ ಭೂಮಿಗಳನ್ನು ಮಾಚಜೀಯನ ಮಗ ಹೊಂನಜೀಯನ ಕಾಲನ್ನು ತೊಳೆದು ದತ್ತಿ ಬಿಡುತ್ತಾನೆ.

ಎರಡನೇ ಶಾಸನದಲ್ಲಿ[೧೮] 'ದಿವೇಸ್ವರ ದೇವರ ಕೆರೆಗೆ ಹೊಂನಜೀಯನ ಮಗ ಸಕಳೇಶ್ವರ ಪಣ್ಡಿತರು ವಿಳಂಬಿ ಸಂವತ್ಸರದ ವೈಸಾಕ ಸು ೧೦ ಸೋಮುವಾರದಂದು ತುಂಬಿನಾ ಖಂಭ ನಿಲಿಸಿದ ಮಾಡಿದ ಬಿನಾಣಿ ಮಸಣಯೋಜಮಲ್ಲೋಸುಜನು' ಎಂದಿದೆ. ಇಲ್ಲಿ ಬಂದಿರುವ ಎರಡು ಹೆಸರುಗಳು-ಹೊಂನಜೀಯ ಮತ್ತು ಮಸಣಯೋಜ ಮೊದಲಿನ ಶಾಸನದಲ್ಲಿಯೂ ಬಂದಿವೆ. ಅಲ್ಲಿ 'ಮಾಚಜೀಯನ ಮಗ ಹಂನಜೀಯ'ನೆಂದೂ 'ಮಾಡಿದ ಬಿವಣೆಮಾರೋಜನುಂ ಮಸಣೋಜನುಂ' ಎಂದೂ ಉಲ್ಲೇಖಿಸಲಾಗಿದೆ. ಮೊದಲ ಶಾಸನದಲ್ಲಿ ಉಲ್ಲೇಖವಾಗಿರುವ ಹಂನಜೀಯನು ಎರಡನೇ ಶಾಸನದಲ್ಲಿ ಆತನ ಮಗ ಸಕಳೇಸ್ವರ ಪಣ್ಡಿತನೊಂದಿಗೆ ಉಲ್ಲೇಖವಾಗಿರುವುದು ಸ್ಪಷ್ಟವಾಗಿದೆ. ಹಾಗೆಯೇ ಮೊದಲನೇ ಶಾಸನವನ್ನು ತಯಾರಿಸಿದವರು ಮಾರೋಜ ಮತ್ತು ಮಸಣಯೋಜ ಎಂಬುವವರು. ಅದೇ ಮಸಣೋಜ ಎರಡನೇ ಶಾಸನದಲ್ಲಿ ಸಕಳೇಸ್ವರಪಣ್ಡಿತ ನಿಲ್ಲಿಸಿದ ತೂಬಿನ ಕಂಬವನ್ನು ಮಾಡಿದವನಾಗಿದ್ದಾನೆ. ಅಂದರೆ ಈ ಶಾಸನ ಮೊದಲಿನ ಶಾಸನದ ಕಾಲ ಕ್ರಿ.ಶ.೧೧೮೬ ಕ್ಕಿಂತ ಸುಮಾರು ೫೦ ವರ್ಷಗಳ ಇತ್ತೀಚಿನದಾಗಿರುವ ಸಾಧ್ಯತೆಯಿದೆ. ಆದರೆ ಎರಡನೇ ಶಾಸನದಲ್ಲಿ ಶಕವರ್ಷದ ಉಲ್ಲೇಖವಿಲ್ಲದೆ, 'ವಿಳಂಬಿ ಸಂವತ್ಸರದ ವೈಸಾಕ ಸು ೧೦ ಸೋಮುವಾರ' ಎಂದಷ್ಟೇ ಇದ್ದು, ಅದರ ಕಾಲವನ್ನು ಸುಮಾರು ಹದಿನಾರನೇ ಶತಮಾನ ಎಂದಿರುವುದಲ್ಲದೆ, ೧೫೬೮ ಮೇ ೫ನೇ ತಾರೀಕಿಗೆ ಸರಿಹೊಂದಿಸಿದ್ದಾರೆ. ಅದಕ್ಕೆ ಅವರು ಬೇರಾವುದೆ ಕಾರಣವನ್ನೂ ಕೊಟ್ಟಿಲ್ಲ. ಪ್ರಸ್ತುತ ಶಾಸನದ ಕಾಲ ಹದಿಮೂರನೇ ಶತಮಾನವೆಂದು ಹೇಳಬಹುದಾಗಿದೆಯಲ್ಲದೆ, ಸಂವತ್ಸರದ ಆಧಾರದ ಪ್ರಸ್ತುತ ಶಾಸನದ ಕಾಲವು ಕ್ರಿ.ಶ. ೧೨೩೮ ಏಪ್ರಿಲ್ ೨೫ಕ್ಕೆ ಸರಿಹೊಂದುತ್ತದೆ. ಆದರೆ ಸೋಮವಾರದ ಬದಲಾಗಿ ಭಾನುವಾರ ಬರುತ್ತದೆ.[೧೯] ದಿವೇಸ್ವರ ದೇವರ ಕೆರೆಗೆ ತೂಬಿನ ಕಂಬವನ್ನು ನಿಲ್ಲಿಸಿದರೆಂದರೆ ಅದು ಮಯಿಲೆಯನಾಯಕ ಕಟ್ಟಿಸಿದ 'ಕಂನ್ನೆಗೆರೆ'ಯೇ ಆಗಿರುವ ಸಾಧ್ಯತೆಯಿದೆ. ದಿವೇಸ್ವರ ದೇವಾಲಯವನ್ನು ಮಯಿಲೆಯನಾಯಕನೇ ಕಟ್ಟಿಸಿದನೆಂದು ಮೊದಲನೇ ಶಾಸನದಿಂದ ಸ್ಪಷ್ಟವಾಗಿದೆ.

**ಬಾಚರಸ. (೧೨-೧೩ನೆಯ ಶತಮಾನ)**

ಬಾಚರಸನೆಂಬುವನು ಸಂತೇಶಿವರದಲ್ಲಿ ಕೆರೆಯೊಂದನ್ನು ಕಟ್ಟಿಸಿದ ವಿಚಾರ ಒಂದು ಶಾಸನದಲ್ಲಿದೆ.[೨೦] ಬಾಚರಸನ ಪೂರ್ವೋತ್ತರಗಳು ಈ ಶಾಸನದಲ್ಲಿಯಾಗಲಿ, ಸಂತೇಶಿವರದ ಉಳಿದ ಶಾಸನಗಳಲ್ಲಿಯೆ ಆಗಲಿ ಇಲ್ಲ. ಪ್ರಸ್ತುತ ಶಾಸನದಲ್ಲಿ ಭಾರದ್ವಾಜ ಗೋತ್ರದ ಕಾಳಿಮಯ್ಯನಿಂದ ಆರಂಭಿಸಿ, ನಾರಾಯಣ ಮತ್ತು ಕೇಶವ ಇವರವರೆಗೆ ಮೂರು ತಲೆಮಾರಿನ ವಿವರಗಳಿವೆ. ಇವರಲ್ಲಿ ನಾರಾಯಣನೆಂಬುವನು ಹೊಯ್ಸಳ ಬಲ್ಲಾಳನಲ್ಲಿ ಸಂಧಿವಿಗ್ರಹಿಯಾಗಿದ್ದನೆಂದೂ, ಅವನು ಸಂತೇಶಿವರದ ಗಂಗೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದನೆಂದು ಉಲ್ಲೇಖಿಸುತ್ತದೆ. ಅದೇ ಸಮಯದಲ್ಲಿ, ಬಾಚರಸನು 'ಕಂನ್ನೆಗರೆ'ಯನ್ನು ಕಟ್ಟಿಸಿ ದೇವರಿಗೆ ದತ್ತಿ ಬಿಡುತ್ತಾನೆ. 'ಕಂನ್ನಗೆರೆ' ಅಂದರೆ ಆತನು ಕಟ್ಟಿಸಿದ ಮೊದಲ ಕೆರೆ ಎಂದು ಅರ್ಥೈಸಬಹುದಾಗಿದೆ. ಆದರೆ ಭಾರದ್ವಾಜ ಗೋತ್ರದವರಿಗೂ ಬಾಚರಸನಿಗೂ ಇರುವ ಸಂಬಂಧವೇನೆಂಬುದು ಸ್ಪಷ್ಟವಾಗುವುದಿಲ್ಲ.

**ಸಾತವ್ವೆ (ಶಾಂತಲಾದೇವಿ) (ಕ್ರಿ.ಶ. ೧೧೮೧)**

ಚನ್ನರಾಯಪಟ್ಟಣದ ಶಾಸನದಲ್ಲಿ[೨೧] 'ಸಾತವ್ವೆ' ಎಂಬುವಳು 'ಶಾಂತಿಸಮುದ್ರ' ಎಂಬ ಕೆರೆಯನ್ನು ಕಟ್ಟಿಸಿದ ವಿಚಾರವಿದೆ. ಅಲ್ಲಿನ ಇತರ ಶಾಸನಗಳಿಂದ ಮುಖ್ಯವಾಗಿ ೯,೧೮ಮತ್ತು ೧೯ನೇ ಸಂಖ್ಯೆಯ ಶಾಸನಗಳಿಂದ ಸಾತವ್ವೆಯ ಬಗ್ಗೆ ಹೆಚ್ಚಿನ ವಿವರಗಳನ್ನು ತಿಳಿಯಬಹುದಾಗಿದೆ. ಈಕೆಯನ್ನು 'ಶಾಂತಲಾದೇವಿ' ಎಂದೂ ಕರೆಯಲಾಗಿದೆ.

ಶ್ರೀನಿಧಿ ದೇವಿಮಯ್ಯ ಮತ್ತು ಅರಸವ್ವೆಯವರ ಮಗ ಚಂದಿಮಯ್ಯ ಎಂಬುವವನು ಮಹಾಪ್ರಧಾನಿ ಹೆಗ್ಗಡೆಯಾಗಿದ್ದವನು. ಅವನ ಹೆಂಡತಿ ಚಾಮಲೆ. ಅವರಿಗೆ ಶಂಕರದೇವ, ಬಮ್ಮದೇವ, ಶಾಂತಲೆ ಮತ್ತು ರಾಮದೇವ ಎಂಬ ನಾಲ್ವರು ಮಕ್ಕಳು. ಶಾಂತಲೆಯನ್ನು ಹೊಯ್ಸಳ ದಂಡನಾಯಕರಲ್ಲಿ ಒಬ್ಬನಾದ ಮಾಚಿರಾಜನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಮಾಚಿರಾಜನ ತಂದೆ ಮಾರ ಎಂಬುವವನು. ಮಹಾಪ್ರಧಾನಿ ಹೆಗ್ಗಡೆಯ ಮಗಳೂ, ದಂಡನಾಯಕನ ಹೆಂಡತಿಯೂ ಆದ ಸಾತವ್ವೆಯನ್ನು ಶಾಸನದಲ್ಲಿ 'ಪರಮದಯಾಳು ಮಾನ್ಯೆ ನಿಜಗೋತ್ರಪವಿತ್ರೆ ಸನ್ಧಾನ ದಾನ ನಿರ್ಭ್ಬರತ ಭಕ್ತಿಯುಕ್ತಿ ಮಿತ್ರೇಶ ಪಾದಾಬ್ಜ ವರಪ್ರಸಾದದೆ ಬಾಸುರಕೀರ್ತಿ ನಿರ್ಮ್ಮಳಿತ ಮೂರ್ತಿ ಪಃತಿಬ್ರತೆ ಪೆಂಪನಾವಗಂ ಕರಣದ ಮಾಚಿರಾಜನ ಮನಪ್ರಿಯೆ ಶಾಂತಲದೇವಿ' ಎಂದು ಹೊಗಳಲಾಗಿದೆ.




ಇನ್ನೊಂದು ಶಾಸನದಲ್ಲಿ[೨೨] ಶಂಕರೇಶ್ವರ, ಬಮ್ಮದೇವ, ಶಾಂತೇಶ್ವರ ಮತ್ತು ರಾಮನಾಥ ದೇವಾಲಯಗಳ ಉಲ್ಲೇಖವಿದೆ. ಈ ದೇವಾಲಯಗಳ ಹೆಸರಿಗೂ, ಚಂದಿಮಯ್ಯನ ನಾಲ್ವರು ಮಕ್ಕಳ ಹೆಸರಿಗೂ ಇರುವ ಸಾಮ್ಯದಿಂದಾಗಿ, ಈ ನಾಲ್ಕೂ ಜನರ ಹೆಸರಿನಲ್ಲಿ ನಾಲ್ಕು ದೇವಾಲಯಗಳು ನಿರ್ಮಾಣವಾಗಿವೆ ಎನ್ನಬಹುದು ೯ನೆಯ ಶಾಸನದಲ್ಲಿ ಶಾಂತಲೆಯೇ ಶಾಂತೇಶ್ವರ ದೇವಾಲಯವನ್ನು ಕಟ್ಟಿಸಿದಳೆಂಬ ಉಲ್ಲೇಖವಿದೆ. ಅದರ ಜೊತೆ 'ಶಾಂತಿಸಮುದ್ರ'ವೆಂಬ ಕೆರೆಯನ್ನು ಮಾಡಿಸಿದಳೆಂದು ತಿಳಿದುಬರುತ್ತದೆ. ಶಾಂತಲೆಯ ಈ ಎಲ್ಲಾ ಕೆಲಸಗಳನ್ನು ಮತ್ತು ಅವಳ ತಂದೆ ಹಾಗೂ ಪತಿಯ ಅಧಿಕಾರಗಳನ್ನು ಗಮನಿಸಿದರೆ, ಆ ಕಾಲಕ್ಕೆ ಸಾತವ್ವೆಯು ಪ್ರಮುಖ ಮಹಿಳೆಯಾಗಿರಬೇಕು ಅನ್ನಿಸುತ್ತದೆ. ಆಕೆ ಮಾಡಿದ ಇತರ ಕೆಲಸಗಳೆಂದರೆ, ದೇವಾಲಯ ನಿರ್ಮಾಣಕ್ಕೆ ಮತ್ತು ಎರಡು ತಾಮ್ರ ಶಾಸನಗಳ ಕಂಡರಣೆಗೆ ದತ್ತಿ ಬಿಟ್ಟದ್ದು. ಅನೇಕ ತೆರಿಗೆಗಳ ಜೊತೆಗೆ ಬಿತ್ತುವಟ್ಟವನ್ನು ದೇವಾಲಯಗಳ ನಿರ್ವಹಣೆಗಾಗಿ ಕೊಟ್ಟಿದ್ದು ಮತ್ತು ಶಾಂತೇಶ್ವರ ದೇವಾಲಯವನ್ನು ಕಟ್ಟಿದ ಅಸಂದಿಯ ಸೋಮೋಜನ ಮಗ ಹರಿಯೋಜನಿಗೆ ದಾನ ಕೊಟ್ಟಿದ್ದು ಮುಂತಾದವುಗಳು.

**ಕೇಸಿರಾಜ (ಕ್ರಿ.ಶ. ೧೨೦೯)**

ಅಗ್ರಹಾರ ಬೆಳಗುಲಿಯ ಒಂದು ಶಾಸನವು[೨೨] 'ಕೇಶವಸಮುದ್ರ' ಮತ್ತು 'ಲಕ್ಷ್ಮಿಸಮುದ್ರ'ಗಳೆಂಬ ಎರಡು ಕೆರೆಗಳನ್ನು ಕೇಸಿರಾಜ ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ. ಈ ಕೇಸಿರಾಜ ಶಬ್ದಮಣಿದರ್ಪಣಂ ಕೃತಿಯ ಕರ್ತೃವಲ್ಲ. ಈ ಶಾಸನದ ಕಾಲ ಕ್ರಿ.ಶ. ೧೨೦೯. ಹೊಯ್ಸಳ ವೀರಬಲ್ಲಾಳನನ್ನು ಉಲ್ಲೇಖಿಸುವ ಈ ಶಾಸನದಲ್ಲಿ, ಕೇಸಿರಾಜನನ್ನು ಬಲ್ಲಾಳನ ದಂಡನಾಯಕನೆಂದು ಕರೆಯಲಾಗಿದೆ. ಇಲ್ಲಿನ ಏಳು ಶಾಸನಗಳು ಸಂ.೧೧ರಲ್ಲಿವೆ. ಇವುಗಳ ಅಧ್ಯಯನದಿಂದ ಕೇಸಿರಾಜನ ಬಗ್ಗೆ ಒಂದಿಷ್ಟು ವಿವರಗಳನ್ನು ತಿಳಿಯಬಹುದಾಗಿದೆ.




ಹೊಯ್ಸಳ ವಿನಯಾದಿತ್ಯನಲ್ಲಿ ಮಂತ್ರಿಯಾಗಿದ್ದವನು ರಾಮ. ಈ ರಾಮನ ಮಗ ಶ್ರೀಧರದಂಡನಾಥ ವಿನಯಾದಿತ್ಯನ ಮಗ ಎರೆಯಂಗನಲ್ಲಿ ಮಂತ್ರಿಯಾಗಿದ್ದವನು. ಶ್ರೀಧರದಂಡನಾಥನಿಗೆ ಮೂವರು ಮಕ್ಕಳು ಮಲ್ಲಿದೇವದಂಡನಾಥ, ದಾಮರಾಜ ಮತ್ತು ಕೇಶವರಾಜಸೇನಾಧಿಪ ಆ ಮೂವರೂ ಹೊಯ್ಸಳ ವಿಷ್ಣುವರ್ಧನನಲ್ಲಿ ಅಧಿಕಾರಿಗಳಾಗಿದ್ದರು. ಅವರಲ್ಲಿ ಹಿರಿಯ ಮಲ್ಲಿದೇವ ದಂಡಾಧಿಪನಿಗೆ ಮಾಧವಾಮಾತ್ಯ, ಬೆಟ್ಟರಸ ಮತ್ತು ದಾಮದಂಡೇಶ ಎಂಬ ಮೂವರು ಮಕ್ಕಳು. ಹೊಯ್ಸಳ ಒಂದನೇ ನರಸಿಂಹನಲ್ಲಿ ಅಧಿಕಾರಿಗಳಾಗಿದ್ದವರು. ಅವರಲ್ಲಿ ಹಿರಿಯನಾದ ಮಾಧವ ಅಮಾತ್ಯನಿಗೆ ನಾಚಣದಂಡನಾಥ, ದಾವರಸ, ಕೇಶವ, ಮಲ್ಲಪ ಮತ್ತು ಮಾರಮಯ್ಯ ಎಂಬ ಐವರು ಗಂಡುಮಕ್ಕಳು ಮತ್ತು ಕಂಚಲಾದೇವಿ ಎಂಬ ಒಬ್ಬ ಹೆಣ್ಣುಮಗಳು. ಅವರಲ್ಲಿ ಮಧ್ಯಮನಾದ ಕೇಶವನೇ ಪ್ರಸ್ತುತ ಶಾಸನದ ಕೇಂದ್ರ ವ್ಯಕ್ತಿ. ಆತನನ್ನು "ಕೇಶವಚಮೂಪಂ ವೀರಬಲ್ಲಾಳ ಭೂವರನಾಸ್ತಾನದೊಳಿರ್ದಪಂ ಮಣಿಗಳೊಳ್ ಮಾಣಿಕ್ಯಮಿರ್ಪಂದದಿ" ಎಂದು ಕೊಂಡಾಡಿದೆ. ಇನ್ನೊಂದು ಕಂದ ಪದ್ಯದಲ್ಲಿ, ಕೆಳಗಿನಂತೆ ವರ್ಣಿಸಲಾಗಿದೆ.

**ನಿಖಿಳ ಚಮೂಪರ ನುಡಿ ಜಳ**
**ಲಿಖಿತಂ ಕೇಶವ ಚಮೂವರಂ ಚತುರ ಚತು**
**ರ್ಮ್ಮುಖನಾಡಿನ ನುಡಿಯೆ ಶಿಳಾ**
**ಲಿಕೀತಂ ಬಲ್ಲಾಳ ಭೂಮಿಪಾಳನ ಸಭೆಯೊಳ್**

ಕೇಶವನು ಕ್ರಿ.ಶ. ೧೨೦೯ ಡಿಸೆಂಬರ್ ೫ ರಲ್ಲಿ ನಿರ್ಗುಂದ ನಾಡಿನ ಪಂಜಾಡಿಯ ಬೆಳ್ಗಲಿಯನ್ನು ಧಾರಾಪೂರ್ವಕವಾಗಿ ಪಡೆದು, ಕೇಶವಪುರವೆಂಬ ಅಗ್ರಹಾರವನ್ನು ಮಾಡಿಸಿ, ಕೇಶವೇಶ್ವರ ದೇವಾಲಯವನ್ನು ಮಾಡಿಸಿ 'ಕೇಶವಸಮುದ್ರ' ಮತ್ತು 'ಲಕ್ಷ್ಮಿಸಮುದ್ರ'ಗಳೆಂಬ ಎರಡು ಕೆರೆಗಳನ್ನು ಕಟ್ಟಿಸುತ್ತಾನೆ. ಅದರ ಶ್ರೀಕಾರ್ಯಕ್ಕೆ ವೀರಬಲ್ಲಾಳನಲ್ಲಿ ಭಿನ್ನವಿಸಿಕೊಂಡು, ಒಪ್ಪಿಸಿ, ಬೆಳ್ಗಲಿಯ ಗೌಡರುಗಳಿಂದ ಅರಸನಿಗೆ ಸಲ್ಲುತ್ತಿದ್ದ ಕೊಡುಗೆಯನ್ನು ದೇವದತ್ತಿಯಾಗಿ ಬಿಡಿಸುತ್ತಾನೆ. ಬೆಳ್ಗಲಿಯಿಂದ ಪಡುವಣಕ್ಕಿರುವ ತಗಡೂರಿನ ಕೇಶವ ದೇವಸ್ಥಾನಕ್ಕೂ ದಾನ ದತ್ತಿಗಳನ್ನು ಬಿಡುತ್ತಾನೆ.

ಕೇಶವನು ಕಟ್ಟಿಸಿದ ದೇವಾಲಯವು ನುಗ್ಗೆಹಳ್ಳಿಯ ಸದಾಶಿವ ದೇವಾಲಯವನ್ನು ಹೋಲುತ್ತದೆ. ದ್ವಿಕೂಟ ದೇವಾಲಯವಾಗಿದ್ದು, ಪೂರ್ವಕ್ಕೆ ಮುಖ ಮಾಡಿರುವ ಗರ್ಭಗುಡಿಯಲ್ಲಿ ಶಿವಲಿಂಗವೂ ದಕ್ಷಿಣಕ್ಕೆ ಮುಖ ಮಾಡಿರುವ ಗರ್ಭಗುಡಿಯಲ್ಲಿ ಕೇಶವನ ಶಿಲ್ಪವೂ ಇವೆ. ಶಾಸನಗಳಲ್ಲಿರುವಂತೆ ಈಗಲೂ ಕೇಶವೇಶ್ವರ ದೇವಾಲಯವೆಂದೇ ಕರೆಯಲಾಗುತ್ತಿದೆ.

ಕೇಶವನು ಕಟ್ಟಿಸಿದ ಕೆರೆಗಳಲ್ಲಿ 'ಲಕ್ಷ್ಮಿಸಮುದ್ರ'ವು ವಿಶಾಲವಾದ ಕೆರೆಯಾಗಿದೆ. ಅದನ್ನೀಗ 'ಹೊನ್ನಮ್ಮನಕೆರೆ' ಎಂದು ಕರೆಯಲಾಗುತ್ತಿದೆ. ನಂತರದ ದಿನಗಳಲ್ಲಿ, ಆ ಕೆರೆಯ ಏರಿಯ ಹಿಂಬದಿಗೆ ಇರುವ ಹೊನ್ನಮ್ಮ ಎಂಬ ಗ್ರಾಮದೇವತೆಯ ಗುಡಿಯಿಂದಾಗಿ ಕೆರೆಗೆ ಈ ಹೆಸರು ಬಂದಿರಬೇಕು. ಎರಡು ಕೋಡಿ ಒಂದು ತೂಬು ಇರುವ ಈ ಕೆರೆ ಸಾವಿರಾರು ಎಕರೆ ಜಮೀನಿಗೆ ನೀರೊದಗಿಸುತ್ತದೆ. ಮೊದಲು ಮೂರು ತೂಬುಗಳಿದ್ದವೆಂದು, ಅವುಗಳಲ್ಲಿ ಎರಡು ಹೂತು ಹೋಗಿವೆಯೆಂದು ಊರಿನವರು ಹೇಳುತ್ತಾರೆ.

'ಕೇಶವಸಮುದ್ರ'ವೆಂಬುದು ಕೇಶವೇಶ್ವರ ದೇವಾಲಯಕ್ಕೆ ಅಂಟಿಕೊಂಡಂತೆ ಇರುವ, ಈಗ 'ಹೊಸಕೆರೆ' ಎಂದು ಕರೆಯುವ ಸಣ್ಣ ಕೆರೆಯಾಗಿದೆ. ಇದರ ಕೆಳಗೆ, ಈಗ 'ನಾಚಗೆರೆ' ಎಂದು ಕರೆಯಲ್ಪಡುತ್ತಿರುವ ಕೆರೆಯಿದೆ. ಪ್ರಸ್ತುತ ಶಾಸನದಲ್ಲಿ 'ನಾಚರಸನಕೆರೆ' ಎಂಬುದರ ಉಲ್ಲೇಖವಿದ್ದು, 'ನಾಚರಸನಕೆರೆ'ಯೇ 'ನಾಚಗೆರೆ'ಯಾಗಿ ಬಳಕೆಯಲ್ಲಿರಬಹುದು. 'ನಾಚರಸನಕೆರೆ'ಯನ್ನು ಹೆಸರಿನ ಸಾಮ್ಯದಿಂದಾಗಿ, ಕೇಶವನ ಅಣ್ಣನಾದ ನಾಚಣ್ಣದಂಡನಾಯಕನು ಕಟ್ಟಿಸಿರಬಹುದೆಂದು ಊಹಿಸಲು ಸಾಧ್ಯವಿದೆ. ಕೇಶವೇಶ್ವರ ದೇವಾಲಯದ ನಿರ್ಮಾಣವಾದ ನಂತರ ದೇವಾಲಯದ ಬಳಕೆಗೆಂದು 'ನಾಚರಸನ ಕೆರೆ'ಯ ಒಂದು ಭಾಗಕ್ಕೆ ಏರಿ ಹಾಕಿ 'ಕೇಶವಸಮುದ್ರ' ಎಂದು ಪ್ರತ್ಯೇಕಿಸಿಕೊಂಡಿರುವ ಸಾಧ್ಯತೆಯಿದೆ.

**ಕಮ್ಮಟದ ಬಸವಣ್ಣ (ಕ್ರಿ.ಶ. ೧೨೫೨)**

ನುಗ್ಗೆಹಳ್ಳಿಯ ಒಂದು ಶಾಸನದಲ್ಲಿ[೨೮] ಕಮ್ಮಟದ ಬಸವಣ್ಣ ಎಂಬುವವನು ಒಂದು ಕೆರೆ ಕಟ್ಟಿಸಿದ ವಿಚಾರವಿದೆ. ಶಾಸನದ ಕಾಲ ಕ್ರಿ.ಶ. ೧೨೫೨. ಹೊಯ್ಸಳ ಸೋಮೇಶ್ವರನ ಮಹಾಪ್ರಧಾನಿ, ಸಂಧಿವಿಗ್ರಹಿ ಬೊಮ್ಮಣ್ಣದಂಡನಾಯಕನಿಗೆ ಪ್ರೀತಿಪಾತ್ರನಾಗಿದ್ದ ಕಮ್ಮಟದ ಬಸವಣ್ಣನದು ಕಾಶ್ಯಪಗೋತ್ರ. ತಂದೆ ವಿಷ್ಣುಭಟ್ಟ. ತಾಯಿ ಲಕ್ಷ್ಮೀದೇವಿ. ಬೊಮ್ಮಣ್ಣದಂಡನಾಯಕನನ್ನು ಬಸವಣ್ಣನ ಪೋಷಕ ತಂದೆ ಎಂದು ಕರೆಯಲಾಗಿದೆ. ಬಸವಣ್ಣನನ್ನು 'ಊರೊಡೆಯ ಬಸವರಸ' ಎಂದೂ 'ಕಮ್ಮಟದ ಬಸವಣ್ಣ' ಎಂದೂ ಕರೆಯಲಾಗಿದೆ. 'ಕಮ್ಮಟ' ಎಂಬುದು ನಾಣ್ಯ ಟಂಕಿಸುವ ಹುದ್ದೆಯ ಹೆಸರಿರಬಹುದು. ನುಗ್ಗೆಹಳ್ಳಿಯ ಕಾಲುವಳ್ಳಿಯಾಗಿದ್ದ 'ಗೊಟ್ಟಕೆರೆ'ಯಲ್ಲಿ ಒಂದು ಕೆರೆಯನ್ನು ಕಟ್ಟಿಸಿ 'ಬ್ರಹ್ಮಸಮುದ್ರ'ವೆಂದು ಕರೆಯುತ್ತಾನೆ. ಅದೇ ಕೆರೆಯ ಮೊದಲೇರಿಯ ಹಳುಗಿನಲ್ಲಿಯ ಭೂಮಿಗಳನ್ನು ತತ್ಕಾಲೋಚಿತ ಕ್ರಯಕ್ಕೆ ಮೂಲದ್ರವ್ಯವನ್ನು ಕೊಟ್ಟು ಕ್ರಯಧಾನವಾಗಿ ಪಡೆದು, ನುಗ್ಗೆಹಳ್ಳಿಯ ನಾನಾಗೋತ್ರದ ಬ್ರಾಹ್ಮಣರುಗಳಿಗೆ, ಪ್ರತಿದಿನ ಹನ್ನೆರಡು ಜನ ಬ್ರಾಹ್ಮಣ ಭೋಜನಕ್ಕೆ ವ್ಯವಸ್ಥೆ ಮಾಡುತ್ತಾನೆ. ಇಂತಹ ಪುಣ್ಯಕೆಲಸಗಳನ್ನು ಮಾಡಿದ ಬಸವಣ್ಣ ಜನ್ಮವಿತ್ತ ತಂದೆ ವಿಷ್ಣುವರ್ಧನನ ಕುಲವನ್ನೂ, ಪೋಷಿಸಿದ ಬೊಮ್ಮಣ್ಣ ದಂಡನಾಯಕನ ಕುಲವನ್ನೂ ಉದ್ಧರಿಸಿದನೆಂದು ಶಾಸನದಲ್ಲಿ ಹೇಳಿದೆ.

**ಲಕ್ಷ್ಮಿ (ಲಕ್ಕವ್ವೆಯಕ್ಕ) (ಕ್ರಿ.ಶ. ೧೨೫೩)**

ನುಗ್ಗೆಹಳ್ಳಿಯ ಮತ್ತೊಂದು[೨೯] ಶಾಸನವು ಲಕ್ಕವ್ವೆ ಎಂಬುವವಳು ಒಂದು ಕೆರೆಯನ್ನು ಕಟ್ಟಿಸಿ ದತ್ತಿ ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ. ಕೆರೆಯನ್ನು ಶಾಸನದಲ್ಲಿ 'ಹಿರಿಯಕೆರೆ' ಎಂದಷ್ಟೇ ಕರೆಯಲಾಗಿದೆ. ಈಗ 'ನುಗ್ಗೆಹಳ್ಳಿ ಕೆರೆ' ಎಂದೂ, 'ಹಿರೆಕೆರೆ' ಎಂದೂ ಕರೆಯಲ್ಪಡುತ್ತಿರುವ ಇದು ಸಾಕಷ್ಟು ದೊಡ್ಡ ಕೆರೆಯಾಗಿದ್ದು, 'ಹಿರಿಯಕೆರೆ' ಎಂಬ ಹೆಸರಿಗೆ ತಕ್ಕಂತೆಯೆ ಇದೆ. ಲಕ್ಷ್ಮಿ ಅಥವಾ ಲಕ್ಕವ್ವೆಯಕ್ಕ ಹೊಯ್ಸಳ ಸೋಮೇಶ್ವರನ ಮಹಾಪ್ರಧಾನಿ ಬೊಮ್ಮಣ್ಣದಂಡನಾಯಕನ ಅಕ್ಕ. ನುಗ್ಗೆಹಳ್ಳಿಯಲ್ಲಿ ವಿಜಯಸೋಮನಾಥಪುರ ಎಂಬ ಅಗ್ರಹಾರವನ್ನು ಮಾಡಿಸಿ, ಪ್ರಸನ್ನ ಕೇಶವ, ನರಸಿಂಹ, ಗೋಪಾಲಸ್ವಾಮಿ ದೇವರುಗಳ ತ್ರಿಕೂಟ ದೇವಾಲಯವನ್ನೂ ಮತ್ತು ಸದಾಶಿವ ದೇವಾಲಯವನ್ನೂ ಕಟ್ಟಿಸಿದ ಕೀರ್ತಿ ಬೊಮ್ಮಣ್ಣದಂಡನಾಯಕನದು.

ಲಕ್ಕವ್ವೆಯಕ್ಕನವರು ತಾವೇ ಕಟ್ಟಿಸಿದ 'ಹಿರಿಯಕೆರೆ'ಯ ಕೆಳಗೆ ಮೂವತ್ತೆರಡು ಮೆಟ್ಟಿನಗಳೆದು, ಕಂಬ ಮುಂಸೂರು ಬೀಜವರಿಯ ನಾಲ್ಕು ಸಲಗೆ ಗದ್ದೆಯನ್ನು, ಆ ಕಾಲಕ್ಕೆ ಉಚಿತವಾದ ಕ್ರಯಕ್ಕೆ ಕ್ರಯದಾನವಾಗಿ ಪಡೆದು ನುಗ್ಗೆಹಳ್ಳಿಯ ನಾನಾ ಗೋತ್ರದ ಬ್ರಾಹ್ಮಣರುಗಳಿಗೆ ಪ್ರತಿದಿನ ಎಂಟು ಜನ ಬ್ರಾಹ್ಮಣ ಭೋಜನಕ್ಕೆ ಛತ್ರವಾಗಿ ಬಿಡುತ್ತಾಳೆ. ಅಲ್ಲದೆ ಅಡುಗೆ ಮಾಡುವವರಿಗೂ ಕೆಲವು ದತ್ತಿಗಳನ್ನು ಬಿಡುತ್ತಾಳೆ. ನುಗ್ಗೆಹಳ್ಳಿಯ ಪಕ್ಕದಲ್ಲಿರುವ ಅಕ್ಕನಹಳ್ಳಿ ಎಂಬ ಊರಿದ್ದು, ಈ ಲಕ್ಕವ್ವೆಯಕ್ಕನ ಹೆಸರಿನಿಂದ ಕರೆದಿದ್ದಿರಬಹುದು ಅಥವಾ ಆಕೆ ಆ ಊರಿನವಳೇ ಆಗಿರುವ ಸಾಧ್ಯತೆಯಿದೆ.

ಮೊದಲೇ ಹೇಳಿದಂತೆ ಹೆಸರಿಗೆ ತಕ್ಕಂತೆಯೆ ಇರುವ ಈ 'ಹಿರಿಯಕೆರೆ'ಯು, ತಿಪಟೂರು ಚನ್ನರಾಯಪಟ್ಟಣ ರಸ್ತೆಯ ಪಕ್ಕದಲ್ಲಿಯೇ ಇದ್ದು, ಎರಡು ಕೋಡಿ ಮತ್ತು ಎರಡು ತೂಬುಗಳನ್ನು ಹೊಂದಿದೆ. ಹೊಯ್ಸಳ ಕಾಲದ ಕೆತ್ತನೆಯುಳ್ಳ ಎರಡು ತೂಬುಗಂಬಗಳು ಈಗಲೂ ಅಚ್ಚಳಿಯದಂತೆ ನಿಂತು ತಮ್ಮ ಗತಕಾಲದ ವೈಭವವನ್ನು ಸಾರುತ್ತಿವೆ.

**ಪೆರುಮಾಳೆ ದಂಡನಾಯಕ (ಕ್ರಿ.ಶ. ೧೨೭೬)**

ಕುಂದೂರಿನ ಶಾಸನವೊಂದು[೨೬] ಪೆರುಮಾಳೆ ದಂಡನಾಯಕನು 'ಪೆರುಮಾಳೆಸಮುದ್ರ' ಎಂಬ ಕೆರೆಯನ್ನು ಕಟ್ಟಿಸಿದ ವಿಚಾರವನ್ನು ತಿಳಿಸುತ್ತದೆ. ಶಾಸನದ ಕಾಲ ಕ್ರಿ.ಶ. ೧೨೭೬. ಹೊಯ್ಸಳ ಸೋಮೇಶ್ವರ ಮತ್ತು ಬಿಜ್ಜಳರಾಣಿಯ ಮಗ ಮೂರನೆಯ ನರಸಿಂಹನನ್ನು ಉಲ್ಲೇಖಿಸುತ್ತದೆ. ಗ್ಯಾರಹಳ್ಳಿಯ ಒಂದು ಶಾಸನ[೨೭] ಮತ್ತು ಬಾಳಗಂಚಿಯ ಒಂದು ಶಾಸನದಲ್ಲಿ[೨೮] ಪೆರುಮಾಳೆಯ ಬಗ್ಗೆ ವಿವರಗಳು ದೊರೆಯುತ್ತವೆ. ಮೂರನೆಯ ನರಸಿಂಹನಲ್ಲಿ ಮಂತ್ರಿಯಾಗಿದ್ದನೆಂದೂ, ಕುಂದೂರು ಶಾಸನದಲ್ಲಿ ಮಹಾಪ್ರಧಾನಿಯೆಂದೂ, ಗ್ಯಾರಹಳ್ಳಿಯ ಶಾಸನದಲ್ಲಿ ದಂಡನಾಯಕನೆಂದೂ ಕರೆಯಲಾಗಿದೆ. ಆತನದು ಆತ್ರೇಯ ಗೋತ್ರ. ತಂದೆ ವಿಷ್ಣುದೇವ. ತಾಯಿ ಮಂಚಲೆ. ಹೆಚ್ಚಿನ ವಿವರಗಳು ಲಭ್ಯವಿಲ್ಲ.

ಕುಂದೂರಿನಿಂದ ದಕ್ಷಿಣಕ್ಕೆ, ಗ್ಯಾರಹಳ್ಳಿಯಿಂದ ಪಶ್ಚಿಮಕ್ಕೆ 'ಪೆಱುಮಾಳೆಸಮುದ್ರ' ಎಂಬ ಕೆರೆಯನ್ನು ಕಟ್ಟಿಸಿ, ವಿಜಯಮಾಧವಪುರವಾದ ಕುಂದೂರಿನಲ್ಲಿ ಪಂಚಿಕೇಶ್ವರ ಧರ್ಮಕ್ಕೆಂದು ತಾನು ಕಟ್ಟಿಸಿದ ಕೆರೆಯ ಹಿಂದಿನ ಭೂಮಿಗಳನ್ನು ದತ್ತಿ ಬಿಡುತ್ತಾನೆ. ಇದೇ ವಿಷಯವನ್ನು ಗ್ಯಾರಹಳ್ಳಿಯ ಶಾಸನವು ಸ್ಪಷ್ಟಪಡಿಸುತ್ತದೆ. ಈಗ 'ಗ್ಯಾರಹಳ್ಳಿಕೆರೆ' ಎಂದು ಕರೆಯಲ್ಪಡುವ ಇದು ದೊಡ್ಡ ಕೆರೆಯಾಗಿದ್ದು, ಎರಡು ತೂಬು ಮತ್ತು ಒಂದು ಕೋಡಿಯನ್ನು ಒಳಗೊಂಡಿದೆ.

ಬಾಳಗಂಚಿಯಲ್ಲೂ ಸಹ, ನೀಲನಕಟ್ಟೆಯ ಕೆರೆಯನ್ನು ಮತ್ತು ಅದರ ಕಾಲುವೆ ತೂಬು ಕೋಡಿಗಳನ್ನು ಸರಿಯಾಗಿ ಇಟ್ಟುಕೊಳ್ಳಲು ದತ್ತಿಗಳನ್ನು ಬಿಡುತ್ತಾನೆ. ಆ ಕೆಲಸನ್ನು ಮಾಡುವ ಒಕ್ಕಲಿಗನಿಗೆ, ಬಿಟ್ಟದತ್ತಿಯ ಒಂದು ಭಾಗ ಸಲ್ಲುವಂತೆ ಏರ್ಪಾಡು ಮಾಡುತ್ತಾನೆ. ಅಲ್ಲದೆ ಊರಿನ ಜನತೆಗೆ ಕೆಲವು ತೆರಿಗೆಗಳನ್ನು ಮಾನ್ಯ ಮಾಡುತ್ತಾನೆ.

**೨. ಒಂದು ವರ್ಗದ ಅಥವಾ ಪಂಗಡದ ಹೆಸರಿನಿಂದ ಉಲ್ಲೇಖಿತವಾಗಿರುವ ಕೆರೆಗಳು**

ಈ ವರ್ಗದ ಕೆರೆಗಳು ಒಂದು ಜಾತಿಯ ಅಥವಾ ಒಂದು ಪಂಗಡದ ಹೆಸರಿನಿಂದ ಸೂಚಿತವಾಗಿವೆ. ಅವುಗಳನ್ನು ಕಟ್ಟಿಸಿದವರು ಯಾರೆಂದು ತಿಳಿದು ಬರುವುದಿಲ್ಲ. ಈ ವಿಭಾಗದಲ್ಲಿ ಐದು ಕೆರೆಗಳನ್ನು ಗುರುತಿಸಬಹುದಾಗಿದೆ.

**ಬಣಜಿಗನಕೆರೆ**

ನುಗ್ಗೆಹಳ್ಳಿಯ ಒಂದು ಶಾಸನದಲ್ಲಿ[೨೯] ಈ ಕೆರೆಯ ಉಲ್ಲೇಖವಿದೆ. ಪ್ರಸನ್ನಕೇಶವದೇವರ ಪ್ರತಿಷ್ಠಾಪನೆಯ ದಿನದಂದು ಹೊಯ್ಸಳ ದಂಡನಾಯಕ ಬೊಮ್ಮಣ್ಣನು ವೇದಾರ್ತ್ಥದ ಮಂಚಂಣ್ಣಳಿಗೆ ಕಬ್ಬಳಿಯ ವಿತ್ತಿಯೊಳಗಿನ 'ಬಣಜಿಗನಕೆರೆ'ಯನ್ನು ಪ್ರಾಯಶ್ಚಿತ್ತ ರೂಪದಲ್ಲಿ ಕೊಡುತ್ತಾನೆ. ಕೆರೆಯನ್ನು ದಾನ ಕೊಡುವ ಅಧಿಕಾರವನ್ನು ಹೊಂದಿದ್ದ ಬೊಮ್ಮಣ್ಣದಂಡನಾಯಕನೇ ಆ ಕೆರೆಯನ್ನು ಕಟ್ಟಿಸಿರಬಹುದು. ಆ ಕೆರೆ ಬಣಜಿಗ ಅಂದರೆ ವ್ಯಾಪಾರಿಗಳ ಪಂಗಡಕ್ಕೆ ಸೇರಿದ್ದಾಗಿರಬಹುದು ಅಥವಾ ಆ ಪಂಗಡದ ಯಾರೋ ಒಬ್ಬನು ಮಾಡಿಸಿದ ಕೆರೆಯಾಗಿರಬಹುದು. ಅಂದರೆ ಬಣಜಿಗ ಎಂಬ ಪಂಗಡ ಕ್ರಿ.ಶ.೧೨೪೬ ಕ್ಕಿಂತಲೂ ಮುಂಚಿನಿಂದ ಇತ್ತೆಂದು ಊಹಿಸಬಹುದು. ಆದರೆ ಅದು ಜಾತಿ ಸೂಚಕವಾಗಿರದೆ ವೃತ್ತಿಸೂಚಕವಾಗಿದ್ದಿರಬಹುದು.

**ಹಾರುವಗೆಱೆ**

ಅದೇ ೧೧೩ನೇ ಶಾಸನದಲ್ಲಿ 'ಹಾರುವಗೆಱೆ'ಯ ಉಲ್ಲೇಖವಿದೆ. ಸದಾಶಿವ ದೇವಾಲಯದ ಹಿಂಭಾಗದಲ್ಲಿ ಈಗಲೂ 'ಹಾರವನಕಟ್ಟೆ' 'ಹಾರುವಯ್ಯನಕಟ್ಟೆ' ಎಂದು ಕರೆಯಲ್ಪಡುವ ಸಣ್ಣ ಕೆರೆಯಿದೆ. ಅದಕ್ಕೆ ಒಂದು ತೂಬು ಸಹ ಇದೆ. ಇದೇ ಅಂದಿನ 'ಹಾರುವಗೆಱೆ'. ಬೊಮ್ಮಣ್ಣದಂಡನಾಯಕನ ಅಕ್ಕ ಲಕ್ಕವ್ವೆಯು ಕಟ್ಟಿಸಿದ ಹಿರಿಯಕೆರೆಯ ಮೇಲಿನ ಮೂಲೆಗೆ ಏರಿ ಹಾಕಿ ಈ ಕೆರೆಯನ್ನು ನಿರ್ಮಿಸಲಾಗಿದೆ. ಹಿರಿಯಕೆರೆಯನ್ನು ಎಲ್ಲಾ ಜನಾಂಗದವರು ಬಳಸುತ್ತಿದ್ದುದರಿಂದ, ಅಗ್ರಹಾರದ ಬ್ರಾಹ್ಮಣರಿಗೆ ಮತ್ತು ದೇವಾಲಯದ ಕಾರ್ಯಗಳಿಗೆ ಅನುಕೂಲವಾಗುವಂತೆ ದೇವಾಲಯದ ಹಿಂದೆಯೇ ಇದನ್ನು ನಿರ್ಮಿಸಿಕೊಂಡಿರಬಹುದು. ಆಗ್ಗೆ ಕೇವಲ ಬ್ರಾಹ್ಮಣರೇ ಬಳಸುತ್ತಿದ್ದುದರಿಂದ 'ಹಾರುವಗೆಱೆ' ಎಂಬ ಹೆಸರು ನಿಂತಿರಬೇಕು. ಆದರೆ ಈಗ ಅದನ್ನು ಎಲ್ಲಾ ವರ್ಗದವರು ಬಳಸುತ್ತಿದ್ದಾರೆ.

**ಹೊಲೆಗೆಱೆ**

ಕೆಂಬಾಳಿನ ಶಾಸನವೊಂದರಲ್ಲಿ[೩೦] 'ಹೊಲಗೆಱೆ' ಉಲ್ಲೇಖವಿದೆ. ಕೆಂಬಾಳಿನ ಸುತ್ತ ಮುತ್ತ ಒಂದು ದೊಡ್ಡ ಕೆರೆಯಲ್ಲದೆ ನಾಲ್ಕಾರು ಸಣ್ಣ ಪುಟ್ಟ ಕಟ್ಟೆಗಳಿವೆ. ಅದರಲ್ಲಿಯ ಒಂದು ಈ ಹೊಲಗೆಱೆಯಾಗಿರಬಹುದು. ಪ್ರಸ್ತುತ ಯಾವ ಕೆರೆ ಕಟ್ಟೆಯಾಗಲಿ ಈ ಹೆಸರಿನಿಂದ ಕರೆಯಲ್ಪಡುತ್ತಿಲ್ಲ. ಹೊಲೆಯರು ಕಟ್ಟಿಸಿದ್ದರಿಂದಲೋ ಅಥವಾ ಹೊಲೆಯರು ಮಾತ್ರ ಬಳಸುತ್ತಿದ್ದರಿಂದಲೋ ಈ ಹೆಸರು ಬಂದಿರಬೇಕು. ಮೊದಲಿನ ಅಭಿಪ್ರಾಯವೆ ಸರಿಯೆಂದಾದರೆ ಕೆರೆ ಕಟ್ಟಿಸುವಂತಹ ಸಾಮಾಜಿಕ ಕಾರ್ಯದಲ್ಲಿ ಆ ಪಂಗಡದವರೂ ಭಾಗಿಗಳಾಗುತ್ತಿದ್ದರು ಎನ್ನಬಹುದು. ಆದರೆ ಕರ್ನಾಟಕದ ಹಾಗೂ ಭಾರತದ ಸಾಮಾಜಿಕ ಇತಿಹಾಸವನ್ನು ಗಮನಿಸಿದರೆ ಇದು ಕಷ್ಟಸಾಧ್ಯವಾದ ವಿಚಾರ. ಆದ್ದರಿಂದ ಎರಡನೇ ಕಾರಣವೆ ಅಂದರೆ ಹೊಲೆಯರು ಮಾತ್ರ ಬಳಸುತ್ತಿದ್ದುದರಿಂದ 'ಹೊಲೆಗೆಱೆ' ಎಂಬ ಹೆಸರು ನಿಂತಿರಬೇಕು ಎನ್ನಬಹುದು.

**ಹೊಲೆಯರಹಳ್ಳ**

ದಿಂಡಗೂರಿನ ತಾಮ್ರಪಟವೊಂದರಲ್ಲಿ[೩೧] 'ಹೊಲೆಯರಹಳ್ಳ'ದ ಉಲ್ಲೇಖವಿದೆ. ಮೇಲೆ ಹೇಳಿದ 'ಹೊಲೆಗೆಱೆ'ಗೆ ಸಂಬಂಧಪಟ್ಟ ವಿಚಾರಗಳನ್ನು ಇದಕ್ಕೂ ಅನ್ವಯಿಸಬಹುದಾಗಿದೆ.

**ದಾಸಿಯಕೆರೆ**

ಮೇಲೆ ಹೇಳಿದ, ದಿಂಡಗೂರಿನ ತಾಮ್ರಪಟದಲ್ಲಿ 'ದಾಸಿಯಕೆರೆ'ಯ ಉಲ್ಲೇಖವಿದೆ. ಅದರ ಹೆಸರನ್ನಷ್ಟೇ ಆಧರಿಸಿ ಹೇಳುವುದಾದರೆ, ಯಾರೋ ದಾಸಿ ಅಂದರೆ ಉಳ್ಳವರ ಮನೆಯಲ್ಲಿ ಕೆಲಸ ಮಾಡಿಕೊಂಡಿದ್ದ ಕೆಲಸದವಳು ಕಟ್ಟಿಸಿದ ಕೆರೆಯಾಗಿರಬಹುದು.

**೩. ವ್ಯಕ್ತಿಯ ಹೆಸರಿನಿಂದ ಗುರುತಿಸಬಹುದಾದ ಕೆರೆಗಳು**

ಈ ವಿಭಾಗದಲ್ಲಿ ಕೆರೆಗಳು ಕಟ್ಟಿಸಿದ ವ್ಯಕ್ತಿಯ ಹೆಸರಿನಿಂದ ಸೂಚಿತವಾಗಿರಬಹುದು ಅಥವಾ ತಂದೆಯೊ ಮಕ್ಕಳೋ ಒಬ್ಬರು ಇನ್ನೊಬ್ಬರ ಹೆಸರಿನಲ್ಲಿ ಕಟ್ಟಿಸಿದ ಕೆರೆಗಳಾಗಿರಬಹುದು. ಈ ಕೆರೆಗಳ ಹೆಸರುಗಳನ್ನು ಗಮನಿಸಿದರೆ ಇವುಗಳನ್ನು ಆಳರಸರಲ್ಲದೆ ಸಾಮಾನ್ಯ ಜನತೆಯೂ ಊರ ಗೌಡರುಗಳೂ ಕಟ್ಟಿಸಿರಬಹುದಾಗಿದೆ ಎಂದು ಊಹಿಸಬಹುದು. ಅವುಗಳ ಪಟ್ಟಿ ಹೀಗಿದೆ.

| | | | |
|---|---|---|---|
| ೧. | ಜವನೆಯಹೆಗ್ಗಡೆಯಕೆಱೆ | ೨. | ನಾಚರಸನಕೆಱೆ |
| ೩. | ಬೊಪ್ಪಗೌಡನಕೆಱೆ | ೪. | ಮಾಕಗೌಡನಕೆಱೆ |
| ೫. | ಮಾನಪ್ಪನಕೆಱೆ | ೬. | ಮೊಲಸನಕೆಱೆ |
| ೭. | ರಾಜೋಜನಕೆಱೆ | ೮. | ಹೆಗ್ಗಡೆಬೊಮ್ಮಯ್ಯನಕೆಱೆ |

| | | | |
|---|---|---|---|
| ೯. | ಹೆಗ್ಗಡೆಯಕೆಱೆ | ೧೦. | ಹೊಮ್ಮಗೌಡನಕೆಱೆ |
| ೧೧. | ಕಲಿಯಮ್ಮನಕಟ್ಟೆ | ೧೨. | ಕೇಸಿಯಣ್ಣನಕೆಱೆ |
| ೧೩. | ಚೆಂನಣನಕೊಳ | ೧೪. | ಚಿಗದೇವರಾಜ ಕಲ್ಯಾಣಿ |
| ೧೫. | ದೊಡ್ಡನಕಟ್ಟೆ | ೧೬. | ಬಿಟ್ಟಿಸೆಟ್ಟಿಯಕೆಱೆ |
| ೧೭. | ಬಿಂಬಿಸೆಟ್ಟಿಯಕೆಱೆ | ೧೮. | ಬೀರಜ್ಜನಕೆಱೆ |
| ೧೯. | ಹಿರಿಯಜಕ್ಕಿಯಂವೆಯಕೆಱೆ | | |

**೪ ಉಳಿದ ಕೆಱೆಗಳು**

ಈ ವಿಭಾಗದ ಕೆರೆಗಳು ಊರಿನ ಹೆಸರಿನಿಂದ ಅಥವಾ ಭೌಗೋಳಿಕ ಪರಿಸರದ ಆಧಾರದಿಂದ ಹೆಸರನ್ನು ಪಡೆದುಕೊಂಡಿರಬಹುದಾದ ಸಾಧ್ಯತೆಗಳಿವೆ.

| | | | | | |
|---|---|---|---|---|---|
| ೧. | ಅಬ್ಬೆಯಕೆರೆ | ೨. | ಅಱೆಯಕೆಱೆ | ೩. | ಅವಳಗೆಱೆ |
| ೪. | ಕರಡಿಗೆಱೆ | ೫. | ಕಲ್ಲಕೆಱೆ | ೬. | ಕವಿಲೆಯತಿಕಯ್ಯನಕೆಱೆ |
| ೭. | ಕಾರೆಯಕೆಱೆ | ೮. | ಕೆಂಬರೆಯಹಳ್ಳ | ೯. | ಗುಂಡಿಗೆಱೆ |
| ೧೦. | ಚಂದನಕೆಱೆ | ೧೧. | ತಾವರೆಗೆಱೆ | ೧೨. | ತಾವರೆಯದವಿಗೆಱೆ |
| ೧೩. | ದೇವಿಗೆಱೆ | ೧೪. | ನಿಟ್ಟಾರಿಯಕೆಱೆ | ೧೫. | ಪಿರಿಯಕೆಱೆ |
| ೧೬. | ಬಿದಿರಕೆಱೆ | ೧೭. | ಬೆಂಣ್ಣಗೆಱೆ | ೧೮. | ಬ್ರಹ್ಮಸಮುದ್ರ |
| ೧೯. | ಹಿರಿಯಕೆಱೆ | ೨೦. | ಮಾಚಗಟ್ಟದಕೆಱೆ | ೨೧. | ಅತ್ತಿಕೆಱೆ |
| ೨೨. | ಅರೆಯಕೆಱೆ | ೨೩. | ಎಡವಲಗೆಱೆ | ೨೪. | ಎಡವಳ್ಳಿಗೆಱೆ |
| ೨೫. | ಎರೆಕಟ್ಟೆನಕೊಳ | ೨೬. | ಕಲ್ಲಕೆಱೆ | ೨೭. | ಕೆಂಕೆಱೆ |
| ೨೮. | ಕೆಸರಕೆಱೆ | ೨೯. | ಕೇತಂಗೆಱೆ | ೩೦. | ಕ್ಷೀರಸಾಗರ |
| ೩೧. | ಜನವುರದಹಿರಿಯಕೆಱೆ | ೩೨. | ದೇವಳಂಗೆಱೆ | ೩೩. | ನಗರಜಿನಾಲಯದಕೆಱೆ |
| ೩೪. | ನಜುಗೆಱೆ | ೩೫. | ನಾಗರಕಟ್ಟೆ | ೩೬. | ನಾಗಸಮುದ್ರ |
| ೩೭. | ನೇರಲಕೆಱೆ | ೩೮. | ಪಡವಲಗೆಱೆ | ೩೯. | ಬದಿಹಾಳಕೆಱೆ |
| ೪೦. | ಬಳ್ಳಿಯಕೆಱೆ | ೪೧. | ಬೆಕ್ಕನಕೆಱೆ | ೪೨. | ಮತ್ತಿಯಕೆಱೆ |
| ೪೩. | ಮಾವಿನಕೆಱೆ | ೪೪. | ಮೋರಿಂಗೆಱೆ | ೪೫. | ವಿಳಸನಕಟ್ಟೆ |
| ೪೬. | ಸಿಂಗಸಮುದ್ರ | ೪೭. | ಹೂಲಿಯಕೆಱೆ | ೪೮. | ಬಿಳಿಕೆರೆ |
| ೪೯. | ಮುಳ್ಳಕೆಱೆ | ೫೦. | ಸತ್ತಿಗೆಱೆ | ೫೧. | ಸಂಡಿಯಕೆಱೆ |
| ೫೨. | ಸಿಂಘಟಗೆಱೆ | ೫೩. | ಗಂಜಿಗೆಱೆ | ೫೪. | ಸುಡೆಯಕೆಱೆ |
| ೫೫. | ಸರಡಿಯಕೆಱೆ | | | | |

ಇದಿಷ್ಟು ಚನ್ನರಾಯಪಟ್ಟಣ ತಾಲ್ಲೂಕಿನ ಶಾಸನಗಳಲ್ಲಿ ಬರುವ ಕೆರೆ ಕಟ್ಟಿಸಿದವರ ವಿಚಾರಗಳು. ಇಲ್ಲಿ ಬರುವ ಕೆರೆ ನಿರ್ಮಾಪಕರುಗಳ ಉಲ್ಲೇಖ ಬೇರೆ ತಾಲ್ಲೂಕಿನ ಅಥವಾ ಬೇರೆ ಜಿಲ್ಲೆಗಳ ಶಾಸನಗಳಲ್ಲಿ ಬರುತ್ತವೆಯೇ? ಎಂಬುದನ್ನು ಖಚಿತಪಡಿಸಿಕೊಳ್ಳಲಾಗಿಲ್ಲ. ಇತಿಹಾಸದ ಕಾಲಗರ್ಭದಲ್ಲಿ ಹುದುಗಿ ಹೋಗಿರುವ, ಕೆರೆ ಕಟ್ಟಿಸುವಂತಹ ಮಹತ್ತರವಾದ ಕೆಲಸವನ್ನು ಮಾಡಿದ ಮಹನೀಯರ ವಿಚಾರಗಳನ್ನು ತಿಳಿಯುವಲ್ಲಿ ಇದೊಂದು ಸಣ್ಣ ಪ್ರಯತ್ನವಾಗಿದೆ.

**ಅಡಿಟಿಪ್ಪಣಿಗಳು**

೧ ಸಂಪುಟ ಎರಡರಲ್ಲಿ ೫೭೩ ಮತ್ತು ಸಂಪುಟ ಹತ್ತರಲ್ಲಿ ೧೪೩ ಶಾಸನಗಳಿವೆ.
೨ ಸಂಪುಟ ಎರಡರಲ್ಲಿ ೪೧ ಮತ್ತು ಹತ್ತರಲ್ಲಿ ೫೪ ಕೆರೆಗಳು
೩ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೭೭
೪ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೨, ೫೬೪
೫ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೨, ೫೬೩

೬ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೨, ೫೫೮
೭ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೨, ೫೩೨
೮ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೨, ೧೪೯
೯ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೨, ೧೭೯
೧೦ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೨, ೫೫೮
೧೧ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೨, ೪೪೩
೧೨ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೨, ೫೫೭
೧೩ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೨, ೧೬೨
೧೪ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೬೮
೧೫ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೭೬
೧೬ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೭೧
೧೭ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೧೨೨
೧೮ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೧೨೩
೧೯ ಕಬ್ಬಳ್ಳಿಯ ಈ ಎರಡು ಶಾಸನಗಳಲ್ಲಿ ಉಲ್ಲೇಖವಾಗಿರುವ ಮಾಚಜೀಯ, ಹೊಂನಜೀಯ, ಸಕಳೇಶ್ವರಪಣ್ಡಿತ ಮತ್ತು ಕೆಂಬಾಳಿನ ಶಾಸನದ ಅಮೃತರಾಸಿ ಪಣ್ಡಿಗ ಮತ್ತು ಆತನ ಶಿಷ್ಯ ಮಲ್ಲಿಕಾರ್ಜುನಜೀಯ, ಅಲ್ಲದೆ ಬಿದರೆಯ ಶಾಸನದಲ್ಲಿ ಉಲ್ಲೇಖವಾಗಿರುವ ಮಹಾದೇವರಾಸಿ ಪಣ್ಡಿತ ಅವರುಗಳು ಹೆಸರಿನ ರೀತಿಯಿಂದಾಗಿ ಕಾಳಾಮುಖ ಯತಿಗಳೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಕಾಳಾಮುಖ ಯತಿ ಪರಂಪರೆಯಲ್ಲಿ, ೧೨-೧೩ ನೇ ಶತಮಾನಗಳ ಕಾಲವನ್ನು ಶಿಷ್ಯ ಪರಂಪರೆಯಿಂದ ಪುತ್ರ ಪರಂಪರೆಯಾಗಿ ಬದಲಾಗುತ್ತಿದ್ದ ಸಂಕ್ರಮಣ ಕಾಲವೆಂಬುದನ್ನು ಗಮನಿಸಬಹುದಾಗಿದೆ
೨೦ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೮೫
೨೧ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೯
೨೨ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೧೯
೨೩ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೬೪
೨೪ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೧೧೨
೨೫ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೧೧೧
೨೬ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೫೩
೨೭ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೪೮
೨೮ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೩೪
೨೯ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೧೧೩
೩೦ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೭೦
೩೧ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೧೦, ಚನ್ನರಾಯಪಟ್ಟಣ ೪೦

*****

# ರಾಷ್ಟ್ರಕೂಟರ ಕಾಲದ ಶಾಸನೋಕ್ತ ನೀರಾವರಿ ವ್ಯವಸ್ಥೆ–ಒಂದು ಅವಲೋಕನ

* ಡಾ: ಟಿ. ವಿ. ನಾಗರಾಜ

ಪ್ರಾಚೀನ ಮತ್ತು ಮಧ್ಯಕಾಲೀನ ಕಾಲಘಟ್ಟಗಳಲ್ಲಿ ನೀರಾವರಿ ಕಾಮಗಾರಿಗಳು ಹಾಗೂ ಧಾರ್ಮಿಕ ಮಹೋನ್ನತಿಯ ಉದ್ದೇಶಗಳು ಪ್ರಧಾನವಾಗಿದ್ದವು. ಕೆರೆ, ಕಾಲುವೆಗಳನ್ನು ನಿರ್ಮಿಸುವುದು, ಒಡ್ಡುಗಳನ್ನು ಹಾಕುವುದು, ಭಾವಿಗಳನ್ನು ತೋಡಿಸುವುದು, ಒಂದು ಧಾರ್ಮಿಕ ಕಾರ್ಯ. ಇಂತಹ ಕಾರ್ಯಗಳನ್ನು ಕೈಗೊಂಡ ವ್ಯಕ್ತಿ, ಮತ್ತು ಕುಟುಂಬಗಳು ಪುಣ್ಯಕ್ಕೆ ಅರ್ಹರಾಗುತ್ತರೆ ಎಂಬ ನಂಬಿಕೆ ಇದ್ದಿತು. ಕೌಟಿಲ್ಯನ ಅರ್ಥಶಾಸ್ತ್ರವೂ ಸಹ "ರಾಜನು ಜನಪರಗಳಲ್ಲಿ ಅಣೆಕಟ್ಟುಗಳನ್ನು, ಕೆರೆಗಳನ್ನು ಕಟ್ಟಿಸಬೇಕು. ಕಟ್ಟಿಸುವವರೆಗೆ ಹಣ, ಉಪಕರಣಗಳನ್ನು ನೀಡಿ ಸಹಕರಿಸಬೇಕು" ಎಂದು ಪ್ರತಿಪಾದಿಸುತ್ತದೆ. ಹೀಗಾಗಿ ನೀರಾವರಿ ಚಟುವಟಿಕೆಗಳಿಗೆ ಪ್ರೋತ್ಸಾಹಿಸುತ್ತ ಬಂದಿರುವ ಪ್ರಕ್ರಿಯೆ ಒಂದು ಪರಂಪರೆಯಾಗಿ ಬೆಳೆದುಬಂದಿದೆ. ಬಹುತೇಕ ನೀರಾವರಿ ಕಾಮಗಾರಿಗಳನ್ನು ಸ್ಥಳೀಯ ಜನಸಮುದಾಯಗಳೇ ನಿರ್ವಹಿಸಿಕೊಂಡು ಬಂದಿರುವುದು ಕಂಡು ಬರುತ್ತದೆ. ಇಂತಹ ಕಾರ್ಯಗಳಿಗೆ ಪ್ರಭುತ್ವ ಪೂರಕವಾಗಿ ಸ್ಪಂದಿಸುತ್ತ ಹಲವು ಬಗೆಯ ಕೊಡುಗೆ, ಮಾನ್ಯ ಮತ್ತು ಇತರ ಸೌಲಭ್ಯಗಳನ್ನು ಕಲ್ಪಿಸುತ್ತ ಬಂದಿದೆ. ಇಂತಹ ಕಾರ್ಯಗಳಲ್ಲಿ ತೊಡಗಿಸಿಕೊಂಡವರಿಗೆ ರಾಜಕೀಯ ಮತ್ತು ಸಾಮಾಜಿಕ ಮನ್ನಣೆ ದೊರಕಿವೆ.

ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳಲ್ಲಿ ರಾಷ್ಟ್ರಕೂಟರು ಪ್ರಮುಖರು. ಎಂಟನೆಯ ಶತಮಾನದ ಮಧ್ಯದ ವೇಳೆಗೆ ದಖನ್ನಿನ ಅಧಿಪತ್ಯ ಚಾಳುಕ್ಯರ ಕೈಜಾರಿ ರಾಷ್ಟ್ರಕೂಟರ ಕೈ ಸೇರಿತ್ತು. ಅವರ ಪ್ರಾಬಲ್ಯ ಹತ್ತನೆ ಶತಮಾನದವರೆಗೆ ಮುಂದುವರಿಯುತ್ತ ವಿಂಧ್ಯದ ಉತ್ತರ ಮತ್ತು ದಕ್ಷಿಣದ ರಾಜ್ಯಗಳ ಅಸ್ಥಿರ ರಾಜಕೀಯದಲ್ಲಿ ರಾಷ್ಟ್ರಕೂಟರು ನಿರ್ಣಾಯಕ ಪಾತ್ರವಹಿಸಿದರು. ವಾಸ್ತವವಾಗಿ ಈ ಶತಮಾನಗಳಲ್ಲಿ ಹಲವು ರಾಜಮನೆತನಗಳ ಮೇಲಾಟದ ಚದುರಂಗದ ಹಾಸ್ಸಿನಲ್ಲಿ ರಾಷ್ಟ್ರಕೂಟರು ಉತ್ತಮ ಸ್ಥಾನದಲ್ಲಿ ಇದ್ದರು. ಉತ್ತರದಲ್ಲಿ ಅವರು ಮಾಡಿದ ಸಾಹಸಗಳು, ಪಡೆದ ಗೆಲವುಗಳು ವಿಶಿಷ್ಟ ಮನ್ನಣೆಗೆ ಪಾತ್ರವಾದದು, ಅಲ್ಲದೆ ದಕ್ಷಿಣದ ಶಕ್ತಿಯೊಂದು ಇತರ ರಾಜ್ಯಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವ ಅಪೂರ್ವ ನಿದರ್ಶನ ಸ್ವಲ್ಪಕಾಲದ್ದಾದರೂ ಸಹ, ಹೆಮ್ಮೆ ಪಡುವಂತಹುದು. ರಾಷ್ಟ್ರಕೂಟರ ಸಾಮ್ರಾಜ್ಯದ ವ್ಯಾಪ್ತಿ ಇಂದಿನ ಮಹಾರಾಷ್ಟ್ರ, ಕರ್ನಾಟಕ, ಮಧ್ಯ–ಪ್ರದೇಶದ ಭಾಗಗಳು ಮತ್ತು ಆಂದ್ರಪ್ರದೇಶ, ತಮಿಳುನಾಡಿನ ಭಾಗಗಳಿಗೂ ವಿಸ್ತರಿಸಿತ್ತು. ಉತ್ತರ ಭಾರತದ ಸಾಹಸಗಳನ್ನು ಕೈಗೊಳ್ಳುತ್ತಿದ್ದರಾದರೂ, ಗೆದ್ದ ಪ್ರದೇಶಗಳನ್ನು ಸ್ಥಳೀಯರಿಗೆ ಬಿಟ್ಟುಕೊಟ್ಟಿರುವುದು ವಿಶೇಷ. ಅರ್ಥವ್ಯವಸ್ಥೆ, ಕೃಷಿ ಮತ್ತು ನೀರಾವರಿ ಚೌಕಟ್ಟು ನಿರ್ಲಕ್ಷಿಸಿದಂತೆ ಕಾಣುತ್ತಿದೆ. ಹೀಗಾಗಿ ಪ್ರಸ್ತುತ ಲೇಖನದಲ್ಲಿ ರಾಷ್ಟ್ರಕೂಟರ ಕಾಲದ ನೀರಾವರಿ ಚೌಕಟ್ಟನ್ನು ಶಾಸನಗಳ ಹಿನ್ನಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನ ಮಾಡಲಾಗಿದೆ.

ರಾಷ್ಟ್ರಕೂಟರ ಸರಿ ಸುಮಾರು ೫೨ ಶಾಸನಗಳು ಆ ಕಾಲಘಟ್ಟದ ಕೃಷಿ ಮತ್ತು ನೀರಾವರಿ ಚೌಕಟ್ಟಿನ ಮೇಲೆ ಬೆಳಕು ಚೆಲ್ಲುತ್ತವೆ.[೧]

ಕ್ರಿ.ಶ. ೯ನೇ ಶತಮಾನದ ಆಂದ್ರಪ್ರದೇಶದ ಜಫರ್‌ಷಿಡ್ ಶಾಸನವು ಅಧಿಕಾರಿ ಸಂಕಲಗಂಡ ಬೂಪ ಎಂಬುವನು ಮೆಟ್ಟಿಗೊಂಡ ಬೆಟ್ಟದ ಮೇಲೆ ಕೆರೆಯೊಂದನ್ನು ಕಟ್ಟಿಸಿದನೆಂದು ದಾಖಲಿಸಿದೆ.[೨] ಪ್ರಾಯಶಃ ಅದು ಧಾರ್ಮಿಕ ಕೇಂದ್ರವಾಗಿದ್ದು, ಅಲ್ಲಿನ ಅಗತ್ಯಗಳಿಗೆ ಪೂರಕವಾಗಿ ಕೆರೆ ನಿರ್ಮಿಸಿರಬೇಕು. ಕ್ರಿ. ಶ. ೯೦೩ರ ಸಾಲೂರು ಶಾಸನದಲ್ಲಿ ಈ ಶರ್ಮ ಪೆರ್ಮಾಡಿಯ ಮಗ ಸಾಂತಕಂಪನು ಕೆರೆಯನ್ನು ಕಟ್ಟಿಸಿ, ದೇವಸ್ಥಾನ ಮಾಡಿಸಿ, ಸೇವಾ ಕಾರ್ಯಗಳಿಗೆ ಭೂದಾನ ನೀಡಿದ್ದನ್ನು ದಾಖಲಿಸಿದೆ.[೩] ಕ್ರಿ.ಶ. ೯೧೬ ರ ಹಿರೇಮಾನಮಾಲಿನ ಶಾಸನವೊಂದು ಕೆರೆವೂರು ಮತ್ತು ತಾಣಗುನ್ನೂರಿನ ಮಹಾಜನರ ಆಶೀರ್ವಾದದಿಂದ

* ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಾಗೇಪಲ್ಲಿ.

ಗಾವುಂಡನೊಬ್ಬನು ಗೋಸಾಸ ದಾನ ಮಾಡಿ, ಕೆರೆ ಮತ್ತು ದೇವಾಲಯವನ್ನು ಕಟ್ಟಿಸಿದನೆಂದು ವಿವರಿಸಲಾಗಿದೆ. ಕ್ರಿ.ಶ. ೯೩೬ ರ ತಾಳಗುಂದ ಶಾಸನದಲ್ಲಿ ಪೆಗ್ಗೆಡೆಮುಳಿದ್ಯುಮ್ಮನು ತಾಣಗುಂದದಲ್ಲಿ ಕೆರೆಯನ್ನು ಕಟ್ಟಿಸಿ, ದೇವರ ನೈವೇದ್ಯಕ್ಕೆ ಮತ್ತು ನಂದಾದೀಪಕ್ಕಾಗಿ ೫ ಮತ್ತರು, ಕೆರೆ ಕೆಳಗಿನ ತೋಟವನ್ನು, ೨೦ ಮತ್ತರು ಗದ್ದೆಯನ್ನು ಕೊಟ್ಟ ವಿಚಾರವಿದೆ. ಕ್ರಿ. ಶ. ೯೪೫ ರ ಕ್ಯಾತನೂರು ಶಾಸನದಲ್ಲಿ ಕೆರೆಯನ್ನು ಕಟ್ಟಿಸಲು ಸೀಗದ ಪೂರವಯ್ಯನ ಗದ್ದೆಯಲ್ಲಿ ಮತ್ತರು ಭೂಮಿಯನ್ನು ದಾನ ನೀಡಿದ್ದನ್ನು ದಾಖಲಿಸಿದೆ. ಕ್ರಿ.ಶ. ೯೫೪ರ ಕಕ್ಕರಸಿಯ ಶಾಸನದಲ್ಲಿ ಮಾಕಳ ದೇವಸ್ಥಾನದ ಕೆರೆಯ ಕೆಳಗಿನ ಭೂಮಿಯನ್ನು ದಾನವಾಗಿ ನೀಡಿದ್ದನ್ನು ಪ್ರಸ್ತಾಪಿಸುವ ಸಂದರ್ಭದಲ್ಲಿ, ಆ ಕೆರೆಯನ್ನು ಅವರ ತಾತಮುಗನೆ ಕಟ್ಟಿಸಿದನೆಂದು ದಾಖಲಿಸಿದೆ. ದೇವಾಲಯ ಒಂದು ಮಠ ಕೆರೆ ಹಾಗೂ ಬಾವಿಯ ನಿರ್ಮಾಣ ಕುರಿತಂತೆ ಕ್ರಿ.ಶ. ೯೬೫ ರ ಕೆಳಗಲ್ಲಿ ಶಾಸನ ದಾಖಲಾಗಿದೆ. ಶಿವಾಜಿಯರು ಭಿಕ್ಷಾವೃತ್ತಿಯಿಂದ ಕಲ್ಲು ದೇಗುಲ ಮಾಡಿಸಿ, ಹಲವಾರು ಕೆರೆಗಳನ್ನು ನಿರ್ಮಿಸಿದರೆಂದು ಕ್ರಿ.ಶ. ೯೬೧ ರ ರಾಮನಗರ ಶಾಸನ ಉಲ್ಲೇಖಿಸಿದೆ. ಅನ್ನಯ್ಯ ಎಂಬುವನು ಅರೆಯೂರಿನಲ್ಲಿ ಕಲ್ಲೇಶ್ವರ ದೇವಾಲಯಕ್ಕೆ ತಾನೇ ನಿರ್ಮಿಸಿದ್ದ ಕೆರೆಯ ಅಚ್ಚುಕಟ್ಟಿನ ಗದ್ದೆಯನ್ನು ದಾನವಾಗಿ ನೀಡಿದ್ದನ್ನು ದಾಖಲಿಸಲಾಗಿದೆ. ಹೀಗಾಗಿ ರಾಷ್ಟ್ರಕೂಟರ ಕಾಲದ ಕೆರೆ ಕಾಲುವೆಗಳ ನಿರ್ಮಾಣ ಚಟುವಟಿಕೆಗಳು ಧಾರ್ಮಿಕ ಚಟುವಟಿಕೆಗಳೊಂದಿಗೆ ನಡೆದಿದ್ದು, ಬಹುತೇಕ ಧಾರ್ಮಿಕ ಹಿನ್ನೆಲೆಯಲ್ಲಿ ಅನುಷ್ಠಾನಗೊಂಡಿರುವುದು ಕಂಡು ಬರುತ್ತದೆ.

ನೀರಾವರಿ ಕಾಮಗಾರಿಗಳ ದುಸ್ಥಿತಿ ಮತ್ತು ನಿರ್ವಹಣೆ ಕುರಿತಂತೆ ಕೆಲವು ಶಾಸನಗಳಾದರೂ ಮಾಹಿತಿ ನೀಡುತ್ತವೆ. ಕ್ರಿ.ಶ. ೧೦ ನೇ ಶತಮಾನದ ಶಿರಗಂಬಿ ಶಾಸನದಲ್ಲಿ ೧೨ ಮತ್ತರು ವ್ಯವಸಾಯ ಯೋಗ್ಯ ಭೂಮಿಯನ್ನು ಕೆರೆಯ ನಿರ್ವಹಣೆಗಾಗಿ " ಒತ್ತುವಟ್ಟಿ " ನೀಡಿರುವುದನ್ನು ದಾಖಲಿಸಿದೆ. ಬೆಳ್ವೊಲದ ಕ್ರಿ.ಶ. ೯೧೮ ರ ಶಾಸನವು ಬೆಳ್ವೊಲದ ೩೦೦ ರ ಆಡಳಿತ ನಡೆಸುತ್ತಿದ್ದ ಮಹಾಶ್ರೀಮಂತ ಮತ್ತು ಸ್ಥಳೀಯ ಜನರ ಮಧ್ಯೆ ಭಟ್ಟ ಕೆರೆಯ ಆದಾಯ ಹಂಚಿಕೆ ಬಗ್ಗೆ ಆದ ಒಪ್ಪಂದವನ್ನು ತಿಳಿಸುತ್ತದೆ. ಆದರೆ ಶಾಸನದ ಹಲವು ಸಾಲುಗಳಲ್ಲಿ ಅಕ್ಷರಗಳು ತೃಟಿತವಾಗಿದ್ದು ಪೂರ್ಣ ವಿವರಗಳು ದೊರೆಯುವುದಿಲ್ಲ.

ಕೆರೆಯ ನಿರ್ವಹಣೆಗಾಗಿ ಸಂಪನ್ಮೂಲಗಳನ್ನು ಕ್ರೋಢೀಕರಿಸುವ ಪ್ರಯತ್ನಗಳ ಮೇಲೆ ಬೆಳಕು ಚೆಲ್ಲುವ ಕ್ರಿ.ಶ. ೯೧೮ ರ ನರಗುಂದ ಶಾಸನದಲ್ಲಿ ಧೋರನ ವಿನಂತಿಯ ಮೇರೆಗೆ ೧೨ ಮತ್ತರು ಭೂಮಿಯನ್ನು ಕೆರೆಯ ನಿರ್ವಹಣೆಗಾಗಿ ಮಾನ್ಯ ನೀಡಿದೆ. ಅಲ್ಲದೆ ಬ್ರಾಹ್ಮಣ ವಿವಾಹಕ್ಕೆ ೩ ದ್ರಮ್ಮ, ಶೂದ್ರರ ಮದುವೆಯಲ್ಲಿ ಒಂದು ದ್ರಮ್ಮ ಪ್ರಾಯಶ್ಚಿತ್ತ ಇವುಗಳನ್ನು ತರ್ಗೆರೆಯ ಆದಾಯವೆಂದು ನಿರ್ಧರಿಸಿದೆ. ಮೊದಲು ಕೊಟ್ಟ ತೆರಿಗೆಯಷ್ಟೇ ಅಲ್ಲದೆ, ಕೇರಿಯವರೆಲ್ಲರ ಮೇರೆಗೆ ೧೬ ಮತ್ತರು ತೆರವುದೆಂದು ತೀರ್ಮಾನ ಕೈಗೊಂಡಿದ್ದನ್ನು ದಾಖಲಿಸಿದೆ.

ನೀರಾವರಿ ಚೌಕಟ್ಟಿನ ಕಾರ್ಯ ನಿರ್ವಹಣೆಯಲ್ಲಿ ಮುಖ್ಯ ಪಾತ್ರ ವಹಿಸಲು ತೂಬು ಕಾಯುವ ಅಧಿಕಾರಿ ದೇವಾಲಯಕ್ಕೆ ನಡೆದುಕೊಳ್ಳಬೇಕಾದ ರೀತಿ-ನೀತಿಗಳಿಗೆ ಒಪ್ಪಿಗೆ ಹಾಕಿದ ಪ್ರಸ್ತಾಪ ಇದೆ.

ಉತ್ತಿರ ವೇರೂಲಿನ ಕ್ರಿ.ಶ. ೯೭೨ ರ ಶಾಸನದಲ್ಲಿ, ಅಲ್ಲಿನ ಮಹಾಸಾಸಿ ದೇವಾಲಯಕ್ಕೆ ಸಲ್ಲಬೇಕಾದ ಹಲವು ತೆರಿಗೆಗಳಲ್ಲಿ "ನೀರಿನ ತೆರಿಗೆ ಅಥವಾ ನೀರಗಂದಾಯ" ಮುಖ್ಯವಾಗಿದ್ದುದನ್ನು ಪ್ರಸ್ತಾಪಿಸಲಾಗಿದೆ. ಕುಣಿಗಲ್‌ನ ಕ್ರಿ.ಶ. ೯೬೩ರ ಶಾಸನದಲ್ಲಿ ಮಹಾಸಾಮಂತನಾಗಿದ್ದ ಮಾನ್ಧಾತ ನೆಂಬುವನು ಈ ಹಿಂದೆ ಕುಣಿಗಲ್‌ನಲ್ಲಿ ಗಂಗದೊರೆ ಶ್ರೀಪುರುಷ ಕಟ್ಟಿಸಿದ ಕೆರೆಯನ್ನು ಜೀರ್ಣೋದ್ಧಾರ ಮಾಡಿಸಿದ ಸಂಗತಿಯನ್ನು ದಾಖಲಿಸಿದೆ. ವಿಡಿಯಾರಿನ ಕ್ರಿ.ಶ. ೯೬೭ ರ ಶಾಸನದಲ್ಲಿ ದಂಡನಾಯಕ ಅಧಿಕಾರಿ ವಲ್ಲಿವಾಗಯನ್ ಹಿರಿಯ ಕೆರೆಯ ಹೂಳೆತ್ತಿಸಿ, ಕೆರೆಗೆ ತೂಬನ್ನು ಕಟ್ಟಿಸಿದುದನ್ನು ಉಲ್ಲೇಖಿಸಿದೆ.

ಮೇಲಾಗಣೆಯ ಕ್ರಿ.ಶ. ೮ ನೇ ಶತಮಾನದ ಶಾಸನವೊಂದರಲ್ಲಿ ಪೆರ್ಗಡೆ ಗೌಡನ ಅಣತಿಯಂತೆ, ಕೆರೆಯ ಅಚ್ಚುಕಟ್ಟಿನ ಜಮೀನುಗಳ ಮೇಲೆ ವಿಧಿಸಿದ್ದ, ಪತ್ತೊಂದಿ(೧/೧೦ಭಾಗ) ಹಾಗೂ ಐದೊಂದಿ(೧/೫ ಭಾಗ) ನಿರ್ವಹಣೆಯ ಸಲುವಾಗಿ ಮನ್ನಾ ಮಾಡಿದ್ದನ್ನು ದಾಖಲಿಸಿದೆ. ಹೀಗಾಗಿ ನಿರ್ವಹಣೆ ಮತ್ತು ದುರಸ್ತಿ ಕಾರ್ಯಗಳನ್ನು ಕೈಗೊಳ್ಳಲು ಪ್ರೋತ್ಸಾಹದಾಯಕವಾದ ರಿಯಾಯಿತಿ ಮತ್ತು ಸೌಲಭ್ಯಗಳು ನೀರಾವರಿ ಚೌಕಟ್ಟಿನ ಯಶಸ್ವಿ ನಿರ್ವಹಣೆಯಲ್ಲಿ ಮುಖ್ಯ ಪಾತ್ರ ವಹಿಸಿದ್ದವು.

ರಾಷ್ಟ್ರಕೂಟರ ಹಲವು ಶಾಸನಗಳಲ್ಲಿ, ವಿಶೇಷವಾಗಿ ದಾನ ಶಾಸನಗಳಲ್ಲಿ, ಕೆರೆ / ನದಿಗಳ ಪ್ರಸ್ತಾಪ ಇರುವುದು. ಕೆರೆ ನೀರಾವರಿ ಚೌಕಟ್ಟನ್ನು ಅರ್ಥೈಸಲು ಸಹಾಯಕವಾಗಿದೆ. ಕ್ರಿ.ಶ. ೭೭ ರ ಥಂಡೋಕ್ ಶಾಸನದಲ್ಲಿ ರಾಜನಿಗೆ ಪುಣ್ಯವಾಗಬೇಕೆಂದು ಣಗನಪುರಿ ಗ್ರಾಮವನ್ನು ಬ್ರಹ್ಮದೇಯವಾಗಿ ನೀಡಿದೆ. ಈ ಗ್ರಾಮದ ಎಲ್ಲೆಗಳನ್ನು ಪ್ರಸ್ತಾಪಿಸುವಾಗ, ಈ ಊರಿನ "ದೇವತಟಾಕದ" ಉತ್ತರದಲ್ಲಿ ಹಾಗು "ರಾಣಿಜೀತತಾಕದ" ಪಶ್ಚಿಮಕ್ಕೆ ಇರುವ ನದೀ ತೀರದ ೧೦೦ ನಿವರ್ತನ ಭೂಮಿಯನ್ನು ದಾನವಾಗಿ ನೀಡಿದ್ದನ್ನು ದಾಖಲಿಸಿದೆ. ಆವಳಿಯ ಕ್ರಿ.ಶ. ೮ ನೇ ಶತಮಾನದ ಶಾಸನವೊಂದರಲ್ಲಿ ಕೊಣ್ಣನ್ದೆರ ಕೆರೆಯ ಸಮೀಪವಿರುವ ಕೋಟೆಯನ್ನು ವಶಪಡಿಸಿಕೊಳ್ಳಲು ತಮ್ಮ ಸಮಸ್ತಶಕ್ತಿಯನ್ನು ಉಪಯೋಗಿಸಿದರು ಎಂದು ಪ್ರಸ್ತಾಪಿಸಿದೆ. ನರೇಗಲ್‌ನ ಕ್ರಿ.ಶ. ೮೭೩ ರ ಶಾಸನವು ರಾಣಿ ಪದ್ಮಬ್ಬರಾಣಿಯು ಕಟ್ಟಿಸಿದ ಒಸಾಗೆ ಸೇರಿದ ದಾನಶಾಲೆಗೆ ದಾನವಾಗಿ ನೀಡಿರುವುದು ದಾಖಲಿಸಿದೆ. ಇಲ್ಲಿ ದಾನಶಾಲೆಗೆ ನಿರ್ವಹಣೆಗಾಗಿ ಒಂದು ಕೆರೆಯನ್ನು ದಾನವಾಗಿ ನೀಡಿದ್ದು, ಈ ವ್ಯವಸ್ಥೆಯ ನಿರ್ವಹಣೆಗಾಗಿ 'ಪಾದಿನೆಂಟರು' ಮತ್ತು 'ಪಾದಿನಾರರು' ಸಮಿತಿಗಳು ಕಾರ್ಯನಿರ್ವಹಿಸಲು ನಿರ್ದೇಶನ ನೀಡಿರುವುದು ಗಮನಾರ್ಹ ವಾದುದಾಗಿದೆ. ಮಹೋನ್ನತ ಉದ್ದೇಶಗಳಿಗಾಗಿ ಗ್ರಾಮಗಳನ್ನು ದಾನವಾಗಿ ನೀಡುವ ಸಂಪ್ರದಾಯದಂತೆ, ಧೃವನು ತಂದೆ-ತಾಯಿಗಳ ಶ್ರೇಯೋಭಿವೃದ್ಧಿಗಾಗಿ ವಸುದೇವಭಟ್ಟರಿಗೆ ಲಘುಲಿಂಗ ಗ್ರಾಮವನ್ನು ದಾನವಾಗಿ ನೀಡಿದ್ದನ್ನ ಪ್ರಸ್ತಾಪಿಸುತ್ತಾ, ಎಲ್ಲೆಗಳನ್ನು ಹೇಳುವಾಗ 'ನೀರಾವರಿ' ಉತ್ತರಕ್ಕೆ ಎಂದು ಉಲ್ಲೇಖಿಸಿದೆ. ಹೀಗಾಗಿ ನದೀ ತೀರದ ನೀರಾವರಿ ಸೌಲಭ್ಯದ ಗ್ರಾಮ ದಾನವಾಗಿ ನೀಡಿರುವುದು ಕಂಡು ಬಂದಿದೆ. ಕ್ರಿ.ಶ. ೮೦೫ ರ ನೇಪಾಲಿಕಾ ಶಾಸನದಲ್ಲಿ ಗ್ರಾಮ ದಾನದ ಸಂದರ್ಭದಲ್ಲಿ ಎಲ್ಲೆಗಳನ್ನು ತಿಳಿಸುತ್ತ, ದರ್ಪ್ಪರ್ಣಗಾಮದ 'ಜಲಪಾತದಿಂದಲೂ' ಎಂದು ಹೇಳುತ್ತ ನಿರಂತರ ನೀರಾವರಿ ಸೌಲಭ್ಯ ಕುರಿತಂತೆ ಬೆಳಕು ಚೆಲ್ಲುತ್ತಿದೆ. ಕ್ರಿ.ಶ. ೯೫೮ರ ನದೀತೀರದ ವಾಣಿಗೊಪ್ಪಾಡಿ ಪೆಣ್ಯೆ (ನದಿ)ಉಲ್ಲೇಖವಿದೆ. ತೇವರ್‌ಖಂಡದ ಕ್ರಿ.ಶ. ೬೩೧ ರ ಶಾಸನದಲ್ಲಿ ಅಮ್ಬವಿ ಅರೆಕಿನದಿ ತೀರದಲ್ಲಿ ಎರಡು ಗ್ರಾಮಗಳನ್ನು ಮಣ್ಣಭಟ್ಟನಿಗೆ ದಾನ ನೀಡಿದ್ದನ್ನು ದಾಖಲಿಸುವ ಪ್ರಸ್ತಾಪಗಳಿವೆ. ಗ್ರಾವುಂಡರ ಅನುಮತಿ ಪಡೆದು ಪೊಲೀಗಭಿ ಮತ್ತು ಸಂದ್ರಕಯ್ಯ ಅಡನೂರಿನ ನಿರಿಯಕೆರೆ ಬಳಿಯಿದ್ದ ಭೂಮಿಯನ್ನು ದಾನಮಾಡಿದ್ದನ್ನು ಪ್ರಸ್ತಾಪಿಸಿದೆ. ಹೀಗಾಗಿ ಹಲವು ದಾನ ಶಾಸನಗಳಲ್ಲಿ ಕೆರೆ ಮತ್ತು ನೀರಾವರಿ ಚೌಕಟ್ಟು ಪ್ರಾಯೋಗಿಕವಾಗಿ ಬಿಂಬಿತವಾಗಿದೆ.

ಪ್ರಾಚೀನ ಮತ್ತು ಮಧ್ಯಕಾಲೀನ ಕಾಲಘಟ್ಟದಲ್ಲಿ, ಕೃಷಿ ಮತ್ತು ನೀರಾವರಿ ಚೌಕಟ್ಟನ್ನು ಪರಿಚಯಿಸಲು ದಾನ ಶಾಸನಗಳೇ ಬಹುಮುಖ್ಯ ಆಧಾರಗಳಾಗಿವೆ. ಕುಂಸಿಯ ೮ ನೇ ಶತಮಾನದ ಶಾಸನವೊಂದರಲ್ಲಿ ಗೋಸಾಸವನ್ನು ನೀಡಿ ಕಲ್ಲನ್ನು ನಿಲ್ಲಿಸಿದ ಸಂದರ್ಭದಲ್ಲಿ ಒಂದು ಮತ್ತರು 'ತೋಟ' ವನ್ನು ದಾನನೀಡಿರುವುದನ್ನು ದಾಖಲಿಸಿದೆ. ಇಲ್ಲಿ ಪ್ರಸ್ತಾಪಿತ ತೋಟ ವಿವರಣೆ ಇಲ್ಲವಾದರೂ, ನೀರಾವರಿ ಸೌಲಭ್ಯದಿಂದ ಕೂಡಿದ ವ್ಯವಸಾಯ ಚಟುವಟಿಕೆಯನ್ನು ಗ್ರಹಿಸಬಹುದಾಗಿದೆ. ಚಿಕ್ಕಮದುರೆಯ (ಚಳ್ಳಕೆರೆ ತಾ;) ಕ್ರಿ.ಶ. ೮-೯ ನೇ ಶತಮಾನದ್ದೆಂದು ಹೇಳಲಾದ ಶಾಸನವೊಂದರಲ್ಲಿ ಶಿವಾಲಯಕ್ಕೆ ದಾನ ನೀಡಿದ ಎರಡು ಮತ್ತರು ಗದ್ದೆ ಪ್ರಸ್ತಾಪಗೊಂಡಿದೆ. ಹೀಗಾಗಿ ಗದ್ದೆ ಕೆರೆಯ ಅಚ್ಚುಕಟ್ಟಿನ ಭಾಗದ ಭೂಮಿಯಾಗಿದ್ದು, ನಿರಂತರ ಉತ್ಪನ್ನವನ್ನು ತಂದುಕೊಡುವಂತಹುದು.

ವಲ್ಲಿಕಾರ್ಜುನಪಲ್ಲಿಯ (ಮೊಡರ್‌ಪಲ್ಲಿ ಆ.ಪ್ರ.) ಕ್ರಿ.ಶ. ೮೪೬ ರ ಶಾಸನದಲ್ಲಿ ದೇವಾಲಯವೊಂದಕ್ಕೆ ೨ ಮತ್ತರು ಭೂಮಿಯ ಜೊತೆಗೆ ಒಂದು ಮತ್ತರು ನೀರಾವರಿ ಭೂಮಿಯನ್ನು ರಾಜಮಾನ್ಯವಾಗಿ ನೀಡಿರುವುದು ದಾಖಲಾಗಿದೆ.

ನಾಗಣ್ಣಾಚಾರ್ಯ ಎಂಬವನು, ಬಸದಿಯ ಮುಖ್ಯಸ್ಥನಾಗಿದ್ದು, ಅತ್ತಗೆರೆಯ ಹತ್ತಿರದ ಕೆರೆಯ ಅಚ್ಚುಕಟ್ಟಿನ ಒಂದು ಮತ್ತರು ಭೂಮಿ, ನಾಲ್ಕು ಮತ್ತರು ಗಡಿಗೆರೆಯ ಕೆಳಗಿನ ತೋಟ, ಮಜಲಿಗೆರೆಯ ತೆಂಕಣದಲ್ಲಿ ಒಂದು ಮತ್ತರು ಭೂಮಿ ದಾನವಾಗಿ ಸ್ವೀಕರಿಸುವ ಮೂಲಕ ಬಂದ ಪ್ರದೇಶದ ಉಲ್ಲೇಖವಿದೆ. ಹಲವು ಕೆರೆಗಳ ಅಚ್ಚುಕಟ್ಟಿನ ಭಾಗದ ಫಲವತ್ತಾದ ಮತ್ತು ನೀರಾವರಿ ಸೌಕರ್ಯದ ಭೂಮಿಗಳನ್ನು ದಾನವಾಗಿ ಪಡೆಯುವ ಮೂಲಕ, ಧಾರ್ಮಿಕ ಸಂಘಟನೆ ಚಟುವಟಿಕೆಗಳಿಗೆ ಆರ್ಥಿಕ ಸಂಪನ್ಮೂಲ ಲಭ್ಯತೆ ವ್ಯಕ್ತವಾಗುತ್ತದೆ.

ಚಿಂಚಳಿಯ ಶಾಸನವೊಂದರಲ್ಲಿ ಒಬ್ಬ ವ್ಯಕ್ತಿ ೫೬ ಮಹಾಜನರಿಗೆ ಗೋಸಾಸ, ಕೆರೆಯನ್ನು ಮತ್ತು ಒಂದು ತೋಟವನ್ನು ದಾನವಾಗಿ ನೀಡಿರುವುದು ದಾಖಲಾಗಿದೆ. ಪ್ರಾಯಶಃ ಅಗ್ರಹಾರದ ಅಗತ್ಯಗಳಿಗೆ ಸ್ಪಂದಿಸಿದ ದಾನಿ, ಕೆರೆ ಹಾಗೂ ತೋಟವನ್ನು ದಾನವಾಗಿ ನೀಡಿರುವುದು ಕಂಡು ಬಂದಿದೆ.

ತನ್ನ ಒಡೆಯನಿಗೆ ಧರ್ಮವಾಗಲಿ ಎಂದು, ದೇವಾಲಯದ ಮಹಾದೇವನಿಗೆ ದಾನ ನೀಡಲು ೧ ಮತ್ತರು ತೋಟ ಹಾಗೂ ೫ ಮತ್ತರು ಗದ್ದೆ ಬಳಕೆಯಾಗಿದೆ.

ಒಂದೆಡೆ ಎರಡು ಖಂಡುಗದ ಗದ್ದೆ ಹಾಗೂ ೫೦೦ ಬಳ್ಳಿಯ ತೋಟವನ್ನು ದಾನವಾಗಿ ನೀಡಿರುವುದು ಕಂಡು ಬಂದಿದ್ದು ನೀರಿನ ಸೌಲಭ್ಯದ ಭೂಮಿ–ತೋಟ ಆದ್ಯತೆ ಪಡೆದಿದೆ.

ಮತ್ತೊಂದೆಡೆ, ದೇವಾಲಯದ ಮುಂದಿನ ೧೨ ಮತ್ತರು ಭೂಮಿ, ೧೦೦೦ ಬಳ್ಳಿಯ ತೋಟದ ಜೊತೆಗೆ ಕೆರೆ ಅಚ್ಚುಕಟ್ಟಿನಲ್ಲಿ ತೂಬಿನ ಹತ್ತಿರದ ಗದ್ದೆಗಳು ಹೆಚ್ಚು ಮೌಲ್ಯಯುತದಾಗಿವೆ.

ನಾಗರಖಣ್ಡ ೭೦ ರ ಸಾಲ ತೀರುವಳಿಗಾಗಿ ಜಕ್ಕೆಯಬ್ಬೆ ದಾನವಾಗಿ ನೀಡಿದ್ದ ನಾಲ್ಕು ಮತ್ತರು ಗದ್ದೆ ಭೂಮಿಯನ್ನು ರಾಜಮಾರ್ತ ಶ್ರೇಷ್ಠ ಅಗ್ರಹಾರ ದೆಡ್ಡಿಗೆಗೆ ೧೦೮ ಜನರಿಗೆ ದಾನನೀಡಿದುದಾಗಿ, ಆ ದಾನದಲ್ಲಿ ವಿಷ್ಣು ದೇವರಿಗೆ ೧ ಮತ್ತರು ೧೫೦ ಕಮ್ಮ ಗದ್ದೆಯನ್ನು ನೀಡಿದೆ.

ಸ್ಥಳೀಯ ನಾಡಗೌಡರು ದೇಗುಲ ನಿರ್ಮಾಣದಂತಹ ಧಾರ್ಮಿಕ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವುದು ಸಾಮಾನ್ಯ. ಆ ದೇಗುಲಗಳಿಗೆ ೫೦ ರಾಜಮಾನ ಮತ್ತರು ಗದ್ದೆಯನ್ನು ಒಂದು ಮತ್ತರು ತೋಟವನ್ನು ದಾನವಾಗಿ ನೀಡಿದೆ. ಸಾಮಂತಸೋರ್ವ ಕೆರೆಗೆ ಪ್ರಾಯಶಃ ಭೂದಾನ ನೀಡಿದ್ದಾನೆ. ಕೆರೆ ನಿರ್ಮಾಣದ ಪೂರ್ವದಲ್ಲಿ ಕೆರೆಗೆಂದು ಭೂಮಿಯನ್ನು ಸುಧಾರಿಸಿ – ಎಂದರೆ ಪರಿ – ಪಟ್ಟಿಯನ್ನಾಗಿ ಮಾಡಿ ದಾನವಾಗಿ ನೀಡಿರುವುದು ಕಂಡು ಬಂದಿದೆ.

ಸಾಹಸ ಮೆರೆದು, ವೀರ ಮರಣವಪ್ಪಿದ ಮೇಲೂ ಭೂದಾನದಲ್ಲಿ ಕೆರೆಯ ಕೆಳಗಿನ ಭೂಮಿ ನೀಡಿರುವುದು ಕಂಡು ಬರುತ್ತಿದೆ.

ಮಧ್ಯಕಾಲೀನ ಶಾಸನಗಳಲ್ಲಿ ಭಾವಿಗಳ ಉಲ್ಲೇಖ ಕಂಡು ಬಂದಿದೆ. ಆದರೆ ಭಾವಿಗಳ ನಿರ್ಮಾಣ, ಉಪಯೋಗ ಮತ್ತು ಬಳಕೆ ಕುರಿತಂತೆ ಸ್ಪಷ್ಟ ಮಾಹಿತಿ ಇಲ್ಲ. ಸಾಮಾನ್ಯವಾಗಿ ಭಾವಿಗಳನ್ನು ದೇವಾಲಯ ಸಂಕೀರ್ಣಗಳಲ್ಲಿ ನಿರ್ಮಿಸಿರುವುದು ವ್ಯಾಪಕವಾಗಿ ಕಂಡು ಬರುತ್ತದೆ. ದೇವತಾಕಾರ್ಯ ಹಾಗೂ ಕುಡಿಯುವ ನೀರಿಗಾಗಿ ಈ ಭಾವಿಗಳು ಬಳಕೆಯಾಗಿವೆ. ಕೃಷಿ ಚಟುವಟಿಕೆಗಳಿಗಾಗಿ ಭಾವಿಗಳನ್ನು ತೋಡಿ, ನೀರಾವರಿ ಮಾಡಿರುವ ಸಾಧ್ಯತೆಗಳನ್ನು ನಿರಾಕರಿಸಲಾಗಿದೆ. ನಾಯಕಚೆಟ್ಟಿ ಎಂಬುವನು ದೇವಾಲಯ ನಿರ್ಮಿಸಿ, ದಾನಗಳನ್ನು ನೀಡಿರುವ, ಅವನ ತಮ್ಮ ಕೇಳೆಯನು ಭಾವಿ ಮತ್ತು ಮಠಗಳನ್ನು ಕಟ್ಟಿಸಿದ ವಿಷಯವನ್ನು ದಾಖಲಿಸಲಾಗಿದೆ.

ಮೂರ್ತಿಯನ್ನು ಸ್ಥಾಪಿಸಿ ಭೂ ದತ್ತಿಯನ್ನು, ಭಾವಿಯೊಂದನ್ನು ಅದರ ಅಂಗವಾಗಿಸಿ ನೀಡಿದ್ದನ್ನು ಶಾಸನವೊಂದು ದಾಖಲಿಸಿದೆ. ಮಹಾಜನರ ಅನುಕೂಲಕ್ಕಾಗಿ ೩೫ ಗದ್ಯಾಣವನ್ನೂ ಕೊಟ್ಟಿದ್ದಲ್ಲದೆ, ಭಾವಿಯೊಂದನ್ನು ಕಟ್ಟಿಸಿರುವುದು ದಾಖಲಾಗಿದೆ.

ದೇವರನ್ನು ಪ್ರತಿಷ್ಠಾಪಿಸಿ, ಭೂಮಿ–ತೋಟ ದಾನ ನೀಡುವುದರ ಜೊತೆಗೆ ಭಾವಿಯನ್ನು ತೋಡಿಸಿದ ಉಲ್ಲೇಖವಿದೆ.

ಭಾವಿಯೊಂದರಿಂದ ನೀರು ಒದಗಿಸಲ್ಪಡುತ್ತಿದ್ದ ಭೂಮಿಯನ್ನು ಜೈನ ಗುರುವಿಗೆ ನೀಡಿರುವುದು ಭಾವಿ ಆಧಾರಿತ ಕೃಷಿ ಚೌಕಟ್ಟನ್ನು ಪ್ರತಿಬಿಂಬಿಸುತ್ತಿದೆ.

ಹೀಗಾಗಿ ಕೇವಲ ಒಂದೆರಡು ಶಾಸನಗಳಲ್ಲಿ ಉಲ್ಲೇಖವಿದ್ದರೂ, ಭಾವಿಯಾದಾರಿತ ಕೃಷಿ ಚಟುವಟಿಕೆ ಇದ್ದಿತು ಎಂದು ಭಾವಿಸಬಹುದಾಗಿದೆ. ಶಾಸನಾಧಾರಗಳಿಲ್ಲ ಎಂಬ ಕಾರಣಕ್ಕೆ ಭಾವಿ ಆಧಾರಿತ ಕೃಷಿ ಚಟುವಟಿಕೆ ನಿರ್ಲಕ್ಷಿಸಲಾಗದು. ಬಹುತೇಕ ಶಾಸನಗಳು ದಾನಗಳನ್ನು ದಾಖಲಿಸುವ ಹಿನ್ನೆಲೆಯಲ್ಲಿ ಬಂದಿರುವುದರಿಂದ ದೇವಾಲಯ, ಮಠ ಮತ್ತಿತರ ಸಾಂಸ್ಕೃತಿಕ ಪರಿಸರದಲ್ಲಿ ನೀರಾವರಿಯ ವಿಷಯ ಕಂಡು ಬರುತ್ತವೆ.

ರಾಷ್ಟ್ರಕೂಟರು ಕರ್ನಾಟಕ ಮತ್ತು ದಕ್ಷಿಣ ಭಾರತದಲ್ಲಷ್ಟೇ ಅಲ್ಲದೆ ಉತ್ತರ ಭಾರತದಲ್ಲಿ ತಮ್ಮ ಅಸ್ತಿತ್ವ ಗುರುತಿಸಿಕೊಂಡವರು. ಪ್ರಾಚೀನ ಮತ್ತು ಮಧ್ಯಕಾಲೀನ ಕಾಲಘಟ್ಟದಲ್ಲಿ ರಾಜ್ಯಗಳ ರಾಜಧಾನಿ ಕೇಂದ್ರ ಆಡಳಿತ (Core region) ಪ್ರದೇಶಗಳಲ್ಲಿ ಪ್ರಭುತ್ವ ಪ್ರಾಯೋಜಿತ ನೀರಾವರಿ ಕಾಮಗಾರಿಗಳು ಕೇಂದ್ರೀಕೃತಗೊಳ್ಳುವುದು ಸಾಮಾನ್ಯ. ಆದರೆ ರಾಷ್ಟ್ರಕೂಟರ ಕಾಲದಲ್ಲಿ ಇಂತಹ ಬೆಳವಣಿಗೆ ಕಂಡು ಬರುವುದಿಲ್ಲ. ಬಹುತೇಕ ರಾಷ್ಟ್ರಕೂಟ ಅರಸರು ನೇರವಾಗಿ ಕೆರೆ ನೀರಾವರಿ ಪ್ರಾಯೋಜಿಕ ಕಾರ್ಯಗಳನ್ನು ಕೈಗೊಂಡಿರುವುದು ವಿರಳ. ಹೀಗಾಗಿ ಅಧೀನ ಸಾಮಂತರು, ಆಡಳಿತಾಧಿಕಾರಿಗಳು, ವ್ಯಕ್ತಿ ಮತ್ತು ಧಾರ್ಮಿಕ ಸಂಸ್ಥೆಗಳು ಹೆಚ್ಚಾಗಿ ಈ ಕಾಮಗಾರಿಗಳಲ್ಲಿ ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ. ಧಾರ್ಮಿಕ ಉದ್ದೇಶಗಳೇ ಪ್ರಧಾನ ಪಾತ್ರವಹಿಸಿವೆ. ಕೇವಲ ಕೆರೆ ನಿರ್ಮಾಣವಷ್ಟೆ ಅಲ್ಲದೆ ಅವುಗಳ ದುರಸ್ತಿ, ನಿರ್ವಹಣೆ ಸಹ ಆದ್ಯತೆ ಪಡೆದಿದೆ. ಕರ್ನಾಟಕದಲ್ಲಿ ಹಾಗೂ ದಕ್ಷಿಣ ಭಾರತದಲ್ಲಿ ೮–೯ ನೇ ಶತಮಾನದ ವೇಳೆಗೆ ಒಂದು ನಿರ್ದಿಷ್ಟ ಮಾದರಿಯ ಕೆರೆ ನೀರಾವರಿ ಚೌಕಟ್ಟು ಸ್ಪಷ್ಟ ರೂಪು ಪಡೆದಿದ್ದಿತು. ಇದೇ ಚೌಕಟ್ಟು ರಾಷ್ಟ್ರಕೂಟರ ಕಾಲದಲ್ಲಿಯೂ ಮುಂದುವರಿಯಿತು.

**ಅಡಿಟಿಪ್ಪಣಿಗಳು**

೧ ಡಾ॥ ಬಿ.ಆರ್. ಭಾರತೀ, ರಾಷ್ಟ್ರಕೂಟರ ಶಾಸನಗಳು. ಸಂ; ೧ ಮತ್ತು ೨, ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಮೈಸೂರು, ವಿ.ವಿ., ಮೈಸೂರು–೨೦೧೧, ಸಂಖ್ಯೆ–೨೧.

೨ ಅದೇ ಸಂಪುಟ; ೧ ಮತ್ತು ೨, ಸಂಖ್ಯೆ ೧೨೭.

೩ ಅದೇ ಸಂಖ್ಯೆ– ೯ ೨೪ (ಆವರಣದಲ್ಲಿ ಸೂಚಿಸಿರುವ ಸಂಖ್ಯೆ ಇದೇ ಸಂಪುಟದ ಶಾಸನ ಸಂಖ್ಯೆಗಳಾಗಿವೆ.)

*****



# ಹಾಸನ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ದೇವಾಲಯಗಳ ನಿರ್ಮಾಣ

* ಡಾ॥ ಎಚ್.ಎಸ್.ಗೋಪಾಲ ರಾವ್

ಹಾಸನ ಜಿಲ್ಲೆಯು ಮೊದಲಿಗೆ ಕದಂಬರ, ಗಂಗರ ಮತ್ತು ಹೊಯ್ಸಳರ ಪ್ರಮುಖ ನೆಲೆಯಾಗಿತ್ತು ಎನ್ನುವ ಬಗ್ಗೆ ಹೆಚ್ಚಿನ ಬಿನ್ನಾಭಿಪ್ರಾಯಗಳು ಇಲ್ಲ ಎಂದು ಭಾವಿಸಬಹುದು. ಸಧ್ಯಕ್ಕೆ ದೊರೆತಿರುವ ಕನ್ನಡ ಭಾಷೆಯ ಮೊದಲ ಶಾಸನ ಹಾಸನ ಜಿಲ್ಲೆಯ ಹಲ್ಮಿಡಿಯದು. ಗಂಗರ ಅಳ್ವಿಕೆಯಲ್ಲಂತೂ ಹಾಸನ ಜಿಲ್ಲೆಯ ಬಹುತೇಕ ಭಾಗಗಳು ಅವರ ಅಧೀನದಲ್ಲೇ ಇತ್ತು. ಗಂಗರ ನಂತರ ಈ ಭಾಗವು ಹೊಯ್ಸಳರ ವಶವಾಯಿತು. ಹೊಯ್ಸಳ ವಿಷ್ಣುವರ್ಧನನವರೆಗೆ ಹೊಯ್ಸಳ ರಾಜ್ಯವು ಕಲ್ಯಾಣ ಚಾಲುಕ್ಯರ ಆಳ್ವಿಕೆಗೇ ಸೇರಿತ್ತು ಎನ್ನುವುದೂ ಇತಿಹಾಸ ಬಲ್ಲವರಿಗೆ ತಿಳಿದ ಸಂಗತಿ. ಹೊಯ್ಸಳರು ಮೊದಲಿಗೆ ಕಲ್ಯಾಣ ಚಾಲುಕ್ಯರ ಸಾಮಂತರಾಗಿಯೇ ಆಳಿದರು. ಕಲ್ಯಾಣ ಚಾಲುಕ್ಯರಿಂದ ಬಿಡುಗಡೆ ಪಡೆದು ಸ್ವತಂತ್ರನಾಗಲು ಮೊದಲಿಗೆ ಪ್ರಯತ್ನಿಸಿದವನು ಹೊಯ್ಸಳ ವಿಷ್ಣುವರ್ಧನ; ಆದರೆ ಅವನು ತನ್ನ ಗುರಿಸಾಧನೆಯಲ್ಲಿ ಸಫಲನಾಗಲಿಲ್ಲ. ನಂತರ ಅವನ ಮೊಮ್ಮಗ ವೀರಬಲ್ಲಾಳ ಸ್ವತಂತ್ರ ಚಕ್ರವರ್ತಿಯಾದ. ಆದರೆ ಆ ಹೊತ್ತಿಗೆ ಕಲ್ಯಾಣ ಚಾಲುಕ್ಯ ಸಾಮ್ರಾಜ್ಯ ತನ್ನ ಕೊನೆಯ ದಿನಗಳನ್ನು ಸವೆಸುತ್ತಿತ್ತು.

ಈ ಲೇಖನದಲ್ಲಿ ಹೊಯ್ಸಳರ ಪ್ರಬಲ ನೆಲೆಯಲ್ಲಿ ದೇವಾಲಯಗಳಿಗೆ ಸಂಬಂಧಿಸಿದ ದಾಖಲೆಗಳ ಮೂಲಕ ಕಲ್ಯಾಣ ಚಾಲುಕ್ಯರ ಪ್ರಭಾವ ಎಷ್ಟಿತ್ತು ಎಂದು ತಿಳಿಯುವ ಪ್ರಯತ್ನ ಮಾಡಲಾಗಿದೆ. ದೇವಾಲಯಗಳ ನಿರ್ಮಾಣಕ್ಕೆ ಪ್ರೇರಣೆ ಆದ ವಿಚಾರಗಳ ಬಗ್ಗೆ ಹಾಸನ ಜಿಲ್ಲೆಯ ಕೋರಮಂಗಲದ ಎರಡು ಶಾಸನಗಳು ತಿಳಿಸಿವೆ. ಯಾವುದೇ ಜೀವಿ ಬದುಕಲು ಆಹಾರ ಬೇಕು. ಆಹಾರಕ್ಕೆ ಮುಖ್ಯವಾದ ಧವಸ, ಧಾನ್ಯ ಇತ್ಯಾದಿಗಳನ್ನು ಬೆಳೆಯಲು ಭೂಮಿ ಬೇಕು. ಅನ್ನಕ್ಕೆ ಮೂಲವಾದ ಭೂಮಿಯನ್ನು ದಾನ ನೀಡುವುದು ಶ್ರೇಷ್ಠ. ಅನ್ನದಾನದಿಂದ ಎಲ್ಲ ಪುಣ್ಯಗಳೂ ಲಭಿಸುತ್ತವೆ ಎಂಬುದು ಅಂದಿನ ನಂಬಿಕೆಯಾಗಿತ್ತು. ಕೋರಮಂಗಲದ ಎರಡು ಶಾಸನಗಳು ದಾನಗಳ ವೈಶಿಷ್ಟ್ಯಗಳ ಬಗ್ಗೆ ತಿಳಿಸುತ್ತವೆ. ಧರ್ಮಪ್ರಸಂಗದಿಂದ ಪ್ರೇರಿತನಾದ ಗೋವಿಂದರಾಜನು ತಾನು ಗಳಿಸಿದ ಹಣದಲ್ಲಿ ಹಾಗವೂ ಅನರ್ಥವಾಗದಂತೆ ದೇವರು ಮತ್ತು ಬ್ರಾಹ್ಮಣರಿಗೆ ದಾನ ನೀಡಿದ್ದಾನೆ. ಹಾಗೆ ಮಾಡುವುದರಿಂದ ಹಣದ ಸದ್ವಿನಿಯೋಗವಾಗುತ್ತದೆ ಎಂಬ ನಂಬಿಕೆ ಅವನದು. ಅದಕ್ಕಾಗಿ ಗೋವಿಂದರಾಜನು ತನ್ನ ಸ್ಥಳವಾಧ ಕೋರಮಂಗಲದಲ್ಲಿ ಶಿವಾಲಯವನ್ನು ನಿರ್ಮಿಸಿ, ಅಲ್ಲಿ ಶಿವಪ್ರತಿಷ್ಠೆ ಮಾಡಿಸಿ, ದೀನರು ಮತ್ತು ಅನಾಥರಿಗೆ ಆಶ್ರಯ ನೀಡಿ, ಶ್ರೀಪ್ರತಿಷ್ಠೆಯನ್ನು ಮಾಡಿ, ಮೂರು ಲೋಕಗಳಲ್ಲೂ ಯಶಃಪ್ರತಿಷ್ಠೆ ಮಾಡಿಕೊಂಡನೆಂದು ಒಂದು ಶಾಸನ ದಾಖಲಿಸಿದೆ.[೧] ದೇವಾಲಯ ನಿರ್ಮಾಣ, ದೇವಪ್ರತಿಷ್ಠೆ ಮತ್ತು ದೀನರಿಗೆ, ಅನಾಥರಿಗೆ ದಾನ ನೀಡಿ, ಗಳಿಸಿದ ಸಂಪತ್ತನ್ನು ಸದ್ವಿನಿಯೋಗ ಮಾಡುವುದರಿಂದ ಯಶಸ್ಸು ಮತ್ತು ಕೀರ್ತಿ ದೊರೆಯುತ್ತದೆ ಎಂಬ ಗೋವಿಂದರಾಜನ ನಂಬಿಕೆಯು ಅವನ ಮಕ್ಕಳಿಗೂ ಇತ್ತು. ಗೋವಿಂದರಾಜನ ಮಗ ನಾಕಿಮಯ್ಯನು 'ನೆಲದೊಳು ಪೊಂಗಳನೇಕೆ ಪೂಳ್ವರೆನುತಂ ತಾಂ ಲುಬ್ಧರಂ ಮಾಣದಂದಲೆಯುತ್ತಾ' ತನ್ನ ಜನ್ಮಭೂಮಿ ಕೋರಮಂಗಲವನ್ನು ಪ್ರಪಂಚದಲ್ಲಿ ಪ್ರಖ್ಯಾತ ಮಾಡುವ ಸಲುವಾಗಿ ಪರಿವಾರ ದೇವತೆಗಳ ಸಹಿತ ಪರಮೇಶ್ವರನ ಪ್ರತಿಷ್ಠೆಗೆಂದು ವಿನಿಯೋಗಿಸಿ, ಒಂದೇ ಮಹೂರ್ತದಲ್ಲಿ ಶಿವಪ್ರತಿಷ್ಠೆ, ಯಶಃಪ್ರತಿಷ್ಠೆ ಮತ್ತು ಕುಲಪ್ರತಿಷ್ಠೆಗಳನ್ನು ಸಾಧಿಸಿದನೆಂದು ಕೋರಮಂಗಲದ ಮತ್ತೊಂದು ಶಾಸನ ದಾಖಲಿಸಿದೆ.[೨]

ದೇವಾಲಯ ನಿರ್ಮಾಣ ಮತ್ತು ದೇವರ ಪ್ರತಿಷ್ಠೆಯ ಜೊತೆಗೇ ಊರಿಗೊಂದು ಕೆರೆಯ ನಿರ್ಮಾಣವೂ ಅವಶ್ಯಕ ಎಂಬುದು ಜನರಿಗೆ ತಿಳಿದಿತ್ತು. ಸಮಾಜಮುಖಿಯಾದ ಇಂತಹ ಚಿಂತನೆಯನ್ನು ಕಾರ್ಯರೂಪಕ್ಕೆ ತರುವ ಕೆಲಸವನ್ನು ಅನೇಕ ದಾನಿಗಳು ಮಾಡಿದ್ದಾರೆ.[೩] ಜನವಸತಿಗೆ ಊರು, ಕೃಷಿಗೆ ಕೆರೆ, ಸಾರ್ವಜನಿಕ ಮತ್ತು ಸಾಂಸ್ಕೃತಿಕ ಸಂಪರ್ಕ ಮತ್ತು ಸಂಘಟನೆಗೆ ದೇವಾಲಯಗಳು ಒಟ್ಟೊಟ್ಟಿಗೇ ನಿರ್ಮಾಣವಾಗುತ್ತಿದ್ದವು. ಈ ವಿಷಯಕ್ಕೆ ಸಂಬಂಧಿಸಿದಂತೆ ಹಾಸನ ಜಿಲ್ಲೆಯಲ್ಲಿ ಅನೇಕ ಶಾಸನಗಳನ್ನು ಉದಾಹರಣೆಯಾಗಿ ನೀಡಬಹುದು. 'ಪುಟ್ಟಿದ ಪೊನ್ನಿರದೆಂತುಂ ಕಟ್ಟಿಪುದದಱಿಂದೆ ಕೆಱೆಯುಮಂ

* ನಂ.೧೪೪, 'ಸ್ವಸ್ತಿಶ್ರೀ ಸ್ಕಂದ', ಐ.ವೈ.ಡಿ.ರಸ್ತೆ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ – ೫೬೨ ೧೨೩

ದೇಗುಲಮಂ' ಎಂಬ ಭಾವದಿಂದ ಚಟ್ಟಿಯ ಎಂಬುವವನು ದೇವಾಲಯವನ್ನೂ, ಕೆರೆಯನ್ನು ಕಟ್ಟಿಸಿದ್ದಾನೆ.[೪] ಕುಟುಂಬದ ಹಿರಿಯರಿಗೆ, ಆಪ್ತರಿಗೆ, ಪರೋಕ್ಷವಿನಯವಾಗಿ ಗೌರವಿಸುವ ಸಂಪ್ರದಾಯ ಇತ್ತು. ಪರೋಕ್ಷವಿನಯದ ನೆಪದಲ್ಲಿ ದೇವಾಲಯ ಮತ್ತು ಕೆರೆಗಳ ನಿರ್ಮಾಣ ಆಗಿರುವುದನ್ನು ಅನೇಕ ಶಾಸನಗಳು ದಾಖಲಿಸಿವೆ. ಪಣ್ಣುಯ ಗವುಣ್ಡ ಎಂಬುವವನು ತನ್ನ ಊರಾದ ಚಟ್ಟಕುಜುಗನ ಮೊಜಿಡಿಯಲ್ಲಿ ತಾಯಿಯ ಹೆಸರಿನಲ್ಲಿ ಜೋಳೇಶ್ವರ ದೇವರ ಲಿಂಗಪ್ರತಿಷ್ಠೆ ಮಾಡಿಸಿದ್ದಾನೆ.[೫] ವಿಷ್ಣುವರ್ಧನನ ತಮ್ಮ ಉದಯಾದಿತ್ಯನು ಕೆಲ್ಲವತ್ತಿಯಲ್ಲಿ ಸ್ವರ್ಗಸ್ಥನಾದಾಗ, ವಿಷ್ಣುವರ್ಧನನು ಅವನಿಗೆ ಪರೋಕ್ಷವಿನಯವಾಗಿ ಹದಿನೆಂಟು ವೃತ್ತಿಯನ್ನು ಅಗ್ರಹಾರವನ್ನಾಗಿ ಮಾಡಿ, ಅದರಲ್ಲ ಎರಡು ವೃತ್ತಿಯನ್ನು ಜನಾರ್ಧನ ದೇವರಿಗೆ ಬಿಟ್ಟಿದ್ದಾನೆ.[೬] ವಿಷ್ಣುವರ್ಧನನ ರಾಣಿ ಜಕ್ಕಲೆ ಮತ್ತು ಅವಳ ಮಗಳು ಚಿಕ್ಕ ಶಾಂತಲೆಯು 'ಸುರಲೋಕಮನೆಯ್ದಲು' ಶಾಂತಲೆಯ ತಾಯಿ ಜಕ್ಕಿಯಬ್ಬೆಯು ತನ್ನ ಮಗಳಿಗೂ ಮೊಮ್ಮಗಳಿಗೂ ಪರೋಕ್ಷವಿನಯವಾಗಿ ಎಲೆಗುಂದದಲ್ಲಿ ಶಾನ್ತಲೇಶ್ವರ ಮತ್ತು ಬೊಪ್ಪೇಶ್ವರ ಎಂದು ಶಿವಪ್ರತಿಷ್ಠೆ ಮಾಡಿಸುತ್ತಾಳೆ. ವಿಷ್ಣುವರ್ಧನನು ಜಕ್ಕಿಯಬ್ಬೆಗೆ ಮೂರು ವೃತ್ತಿಯನ್ನೂ, ಚಿಕ್ಕ ಶಾಂತಲ ದೇವಿಗೆ ಇಪ್ಪತ್ತು ವೃತ್ತಿಗಳನ್ನೂ ಪರೋಕ್ಷವಿನಯವಾಗಿ ದಾನವಾಗಿ ನೀಡುತ್ತಾನೆ.[೭] ಜಕ್ಕಿಯಬ್ಬೆಯು ತನಗೆ ದೊರೆತ ಮೂರು ವೃತ್ತಿಗಳನ್ನೂ ಮೊಮ್ಮಗಳು ಚಿಕ್ಕ ಶಾಂತಲೆಗೇ ಪರೋಕ್ಷವಿನಯವಾಗಿ ಸಾಂತಲೇಶ್ವರ ಮತ್ತು ಬೊಪ್ಪೇಶ್ವರಕ್ಕೆ ದಾನ ನೀಡುತ್ತಾಳೆ

ತಂದೆ, ತಾಯಿ, ಮಕ್ಕಳು, ಸಹೋದರ, ಸಹೋದರಿಯರು, ಗುರುಗಳು ಮತ್ತು ಆಪ್ತರಿಗೆ ಪರೋಕ್ಷವಿನಯವಾಗಿ ಅನೇಕ ದೇವಾಲಯಗಳ ನಿರ್ಮಾಣ ಆಗಿದೆ. ಆಕ್ಕವ್ವೆ ಎಂಬ ಮಹಿಳೆಯು ತನ್ನ ಪ್ರೀತಿಪಾತ್ರ ತಮ್ಮ ಅಜ್ಜಮನು ಸತ್ತಾಗ, ಅವನು ಸುರಲೋಕದಲ್ಲಿರಲೆಂದು ಶಿವಾಲಯವನ್ನು ಕಟ್ಟಿಸುತ್ತಾಳೆ.[೮]

ಪರೋಕ್ಷವಿನಯದ ಒಂದು ಭಾಗವಾಗಿಯೂ ದೇವಾಲಯ ನಿರ್ಮಾಣ ಆಗುತ್ತದೆ ಎಂದು ಈ ಹಿಂದೆಯೇ ತಿಳಿದಿದ್ದೇವೆ. ಬೊಪ್ಪ ಚಮೂಪನು ತನ್ನ ತಂದೆ ಗಂಗರಾಜನಿಗೆ ಪರೋಕ್ಷವಿನಯವಾಗಿ ಹನಸೋಗೆಯ ಬಳಿ ಬಸದಿಯೊಂದನ್ನು ನಿರ್ಮಿಸಿದ್ದಾನೆ.[೯] ತನ್ನ ಕುಲದ ಕೀರ್ತಿ ಇರುವವರೆಗೆ ತನ್ನ ಕೀರ್ತಿಯೂ 'ಚಂದ್ರಾರ್ಕತಾರಂಬರಂ' ಇರಲಿ ಮತ್ತು ತನಗೆ ಪುಣ್ಯ ಲಭಿಸಲಿ ಎಂದು ತಾಯಿ ಮತ್ತು ತಂದೆಗೆ ಪರೋಕ್ಷವಿನಯವಾಗಿ ಮನಿಜೆಟ್ಟಿಯು ದೇವಾಲಯ ನಿರ್ಮಾಣ ಮಾಡಿಸಿದ್ದಾನೆ.[೧೦] ಗುರುಗಳಿಗೆ ಪರೋಕ್ಷವಿನಯವಾಗಿ ದೇವಾಲಯ/ಬಸದಿ ನಿರ್ಮಾಣ ಮಾಡಿಸುವುದೂ ಅಪರೂಪವಾಗಿರಲಿಲ್ಲ. ಶ್ರೀ ವಾದಿರಾಜದೇವರು ತಮ್ಮ ಗುರುಗಳಿಗೆ ಪರೋಕ್ಷವಿನಯವಾಗಿ ಕುಂಬೆಯನ ಹಳ್ಳಿಯಲ್ಲಿ ಪರವಾದಿ ಜಿನಾಲಯ ಎಂದು ಬಸದಿ ನಿರ್ಮಿಸಿದ್ದನ್ನು ಒಂದು ಶಾಸನ ದಾಖಲಿಸಿದೆ.[೧೧]

ರಾಜರು, ಅವರ ಕುಟುಂಬದವರು ಹಾಗೂ ಅಧಿಕಾರಿಗಳು ತಮ್ಮ ಹೆಸರಿನಲ್ಲೋ, ತಮ್ಮ ಪ್ರೀತಿಪಾತ್ರರ ಹೆಸರಿನಲ್ಲೋ ದೇವಾಲಯಗಳನ್ನು ನಿರ್ಮಿಸುತ್ತಿದ್ದ ಅನೇಕ ಉದಾಹರಣೆಗಳನ್ನು ಶಾಸನಗಳು ನೀಡಿವೆ. ವಿಷ್ಣುವರ್ಧನನ ಪಿರಿಯರಸಿ, ಪಟ್ಟಮಹಾದೇವಿ ಶಾಂತಲ ಹೆಸರಿನಲ್ಲಿ ಅವಳಖ ತಂದೆ ಮಾರಸಿಂಗಮಯ್ಯನು ಶಾಂತಿಗ್ರಾಮದಲ್ಲಿ ಧರ್ಮೇಶ್ವರ ದೇವರ ಪ್ರತಿಷ್ಠೆ ಮಾಡಿಸಿದ್ದಾನೆ[೧೨]. ಅರಸೀಯಕೆರೆಯಲ್ಲಿ ವೀರಬಲ್ಲಾಳೇಶ್ವರ ದೇವರ ದೇವಲಯವನ್ನು ಇಮ್ಮಡಿ ವೀರಬಲ್ಲಾಳನು ನಿರ್ಮಿಸಿದ್ದಾನೆ.[೧೩] ದೋರಸಮುದ್ರದಲ್ಲಿ ಕೇತಮಲ್ಲ ಎಂಬ ಅಧಿಕಾರಿಯು ಶಿವ ದೇವಾಲಯವನ್ನು ನಿರ್ಮಿಸಿ, ಅದಕ್ಕೆ ವಿಷ್ಣುವರ್ಧನ ಪೊಯ್ಸಳೇಶ್ವರ ಎಂದು ಹೆಸರಿಟ್ಟದ್ದನ್ನು ಒಂದು ಶಾಸನ ದಖಲಿಸಿದೆ.[೧೪] ಅರಸಿಯಕೆರೆ ತಾಲ್ಲೂಕಿನ ಕಣಿಕಟ್ಟೆಯಲ್ಲಿ ಮಹಾ ಸಾಮಂತ ಸಿಂಗರಸನು ಮೊದಲು ಸಿಂಗೇಶ್ವರ ದೇವರನ್ನೂ, ಎರಡು ವರ್ಷಗಳ ನಂತರ ಬೆಟ್ಟದ ಕಲಿದೇವರ ಲಿಂಗಪ್ರತಿಷ್ಠೆಯನ್ನೂ ಮಾಡಿಸಿದ ವಿಷಯವನ್ನು ಶಾಸನಗಳು ದಾಖಲಿಸಿವೆ.[೧೫] ಶಂಕರ ದಂಡನಾಥ ಎಂಬ ಅಧಿಕಾರಿಯು ಅರಣಿಮಲೆ, ಕೊರಟ, ಕೋಳಾಲ, ಅರೆಯತ್ತಿಯ ಬಾಗಲ್ಲತ್ತಿ, ಕುಣುಂಗಿಲು, ತಾಮರೆಚೆರು, ಹಲಸೂರು, ಕಾಂಯಪುರ ಎಂಬ ಎಂಟು ಊರುಗಳಲ್ಲಿ ಹರಿಗೃಹಗಳನ್ನು ಮಾಡಿಸಿ, ಹೊನ್ನವಾರ ಎಂಬ ಅಗ್ರಹಾರದಲ್ಲಿ ಶ್ರೀ ಕೇಶವದೇವರ ಪ್ರತಿಷ್ಠೆಮಾಡಿಸಿದ್ದನ್ನು ಒಂದು ಶಾಸನ ದಾಖಲಿಸಿದೆ.[೧೬] ಅಂತಃಪುಸಾಯಿತ, ಅತ್ತರಕ್ಷಾಪಾಳ ಎನಿಸಿಕೊಂಡಿದ್ದ ಅಧಿಕಾರಿ ಬೆಳ್ಳಪ್ಪಯ್ಯನಾಯಕನು ಪುತ್ರೋತ್ಸವದ ಸಂದರ್ಭದಲ್ಲಿ ಕಗ್ಗನಬಿದಿರೆಯಲ್ಲಿ ಕಲಿ ದೇವರ ದೇಗುಲವನ್ನು ಮಾಡಿಸಿದ್ದಾನೆ.[೧೭] ಈ ಶಾಸನವು ಬೆಳ್ಳಪ್ಪಯ್ಯ ನಾಯಕನನ್ನು 'ನಡೆಗಲ್ತಂ ದೇವತಾಲಯಕ್ಕಡೆಯಾಡಿಯುಂ ನುಡಿಗಲ್ತಂ ನಮಶ್ಶಿವಾಯವೆಂಬೀ ನುಡಿಯಿಂ' ಎಂದು ಕೊಗಳಿದೆ. ಆದಿಗವುಂಡ ಮತ್ತು ಅವನ ಕುಟುಂದವರ ಶ್ರದ್ಧೆಯನ್ನು ವಿವರಿಸುವ ಒಂದು ಶಾಸನವು ಅವನ ಕುಟುಂಬದವರು ಕಾಡನ್ನು ಕಡಿದು, ಕನ್ನೆಗೆರೆಯನ್ನು ಕಟ್ಟಿಸಿ, ಊರನ್ನು ಮಾಡಿ, ಅಲ್ಲಿ

ದೇವಾಲಯವನ್ನು ಕಟ್ಟಿಸುತ್ತಾರೆ.[೧೮] ವೀರಬಲ್ಲಾಳನ ರಾಣಿಯರಲ್ಲಿ ಒಬ್ಬಳಾದ ಬಮ್ಮಲದೇವಿಯ ತಂದೆ ಮೊಖರಿ ಬೊಮ್ಮಯ್ಯ ಮತ್ತು ತಾಯಿ ಸೋಮವ್ವೆಯರು ಅಮೃತೇಶ್ವರ ದೇವಾಲಯವನ್ನು ನಿರ್ಮಿಸಿದ್ದನನ್ನು ಒಂದು ಶಾಸನ ದಾಖಲಿಸಿದೆ.[೧೯] ತಳ್ಮತೊರೆಯ ಮಾರಗವುಡ, ಚಂದಗಾವುಡ, ಸೇನಬೋವ ಮಸಣಗವುಡ, ಕಾಚಗವುಡ ಇವರುಗಳು ಒಟ್ಟಾಗಿ ದೇವಾಲಯವೊಂದನ್ನು ನಿರ್ಮಿಸಿದ್ದಾರೆ.[೨೦] ಕಣಿಕಟ್ಟೆಯಲ್ಲಿ ಜಗತಿಯ ಕೊತ್ತಳಿಯವರೆಲ್ಲರೂ ಸೇರಿ ಜಗತೇಸ್ವರ ಶಿವಗೃಹವನ್ನು ಮಾಡಿಸಿದ್ದಾರೆ[೨೧] ದೊಡ್ಡಗದ್ದವಳ್ಳಿಯಲ್ಲಿ ಶ್ರೀಮನ್ಮಹಾವಡ್ಡವ್ಯವಹಾರಿ ಕುಲ್ಲಹಣ ರಾಹುತ ಮತ್ತು ಅವನ ಹೆಂಡತಿ ಸಹಜಾದೇವಿಯು ಮಹಾಲಕ್ಷ್ಮೀ ಪ್ರಾಸಾದವನ್ನು ಮಾಡಿಸಿದ್ದನ್ನು ಅಲ್ಲಿಯದೇ ಒಂದು ಶಾಸನ ದಾಖಲಿಸಿದೆ.[೨೨] ಗಂಗ ಮಾರಸಿಂಹನು ಬಂಕಾಪುರದಲ್ಲಿ ಅಜಿತಸೇನ ಭಟ್ಟಾರಕರ ಪಾದ ಸನ್ನಿಧಿಯಲ್ಲಿ ಆರಾಧನಾ ವಿಧಿಯಿಂದ ನೋಂತು ಸಮಾಧಿ ಸಾಧಿಸಿದ್ದನ್ನು ತಿಳಿಸುವ ಶ್ರವಣಬೆಳಗೊಳದ ಒಂದು ಶಾಸನವು ಅವನು ಹಲವೆಡೆಗಳಲ್ಲಿ ಬಸದಿಗಳನ್ನೂ, ಮಾನಸ್ತಂಭಗಳನ್ನೂ ಮಾಡಿಸಿದನೆಂದು ಉಲ್ಲೇಖಿಸಿದೆ.[೨೩] ಬೆಳಗೊಳದಲ್ಲಿ ಮಂತ್ರಿ ಚಾಮುಂಡ ರಾಜನ ಮಗ ಜಿನದೇವಣ್ಣನು ಜಿನ ಗೃಹವನ್ನು ಮಾಡಿಸಿದ್ದನ್ನು ಅಲ್ಲಿಯದೇ ಒಂದು ಶಾಸನ ದಾಖಲಿಸಿದೆ.[೨೪]

ಎಲ್ಲಾ ಸಾಮಂತರನ್ನೂ ಸೋಲಿಸಿ, ಅವರ ವಸ್ತು ವಾಹನ ಸಮೂಹವನ್ನು ತಂದುಕೊಟ್ಟ ಮಹಾಪ್ರದಾನ ದ್ರೋಹಘರಟ್ಟ ಗಂಗರಾಜನ ಪರಾಕ್ರಮಕ್ಕೆ ಮೆಚ್ಚಿದ ಚಾಳುಕ್ಯ ಚಕ್ರವರ್ತಿ ತ್ರಿಭುವನಮಲ್ಲ ಪೆರ್ಮಾಡಿದೇವನು 'ನಿಮ್ಮನ್ನು ಮೆಚ್ಚಿದ್ದೇನೆ. ಏನನ್ನಾದರೂ ಬೇಡಿಕೊಳ್ಳಿ' ಎಂದು ಹೇಳಿದಾಗ ಗಂಗರಾಜನು ಯಾವುದೇ ಐಶ್ವರ್ಯವನ್ನೂ ಬೇಡದೆ ಪರಮ ಎಂಬ ಗ್ರಾಮವನ್ನು ಮಾತ್ರ ಬೇಡಿ ಪಡೆದು, ಅದನ್ನು ತನ್ನ ತಾಯಿ ಪೋಚಲದೇವಿ ಮಾಡಿಸಿದ್ದ ಜಿನಾಲಯಕ್ಕೆ ಮತ್ತು ತನ್ನ ಹೆಂಡತಿ ಮಾಡಿಸಿದ್ದ ಜಿನಾಲಯಕ್ಕೆ ನೀಡಿ ಸಂತೋಷಪಟ್ಟನೆಂದು ಶಾಸನ ತಿಳಿಸಿದೆ.[೨೫] ಇದೇ ಗಂಗರಾಜನು ವಿಷ್ಣುವರ್ಧನನಿಂದ ಗೋವಿಂದವಾಡಿಯನ್ನು ಪಡೆದು, ಗೊಮ್ಮಟ ದೇವರ ಪೂಜೆಗೆ ಬಿಟ್ಟಿದ್ದಾನೆ.[೨೬] ಹೊಯ್ಸಳನ ರಾಜಶ್ರೇಷ್ಠಿಗಳಾದ ಹೊಯ್ಸಳ ಸೆಟ್ಟಿ ಮತ್ತು ನೇಮಿಸೆಟ್ಟಿ ಎಂಬುವವರು ಜೈನ ಧರ್ಮಕ್ಕೆ ತಾಯ್ಗೆರೆಗಳಂತಿದ್ದರು. ಅವರ ತಾಯಂದಿರಾದ ಮಾಚಿಕಬ್ಬೆ ಮತ್ತು ಶಾಂತಿಕಬ್ಬೆಯರು ಜಿನಗೃಹವನ್ನೂ ಮನ್ದರವನ್ನೂ ನಿರ್ಮಿಸಿ ಪರಮ ದೀಕ್ಷೆಯನ್ನು ಸ್ವೀಕರಿಸಿದಾಗ ಹೊಯ್ಸಳ ಸೆಟ್ಟಿ ಮತ್ತು ನೇಮಿಸೆಟ್ಟಿಯರು ನಿರ್ಮಿತವಾದ ಎಲ್ಲ ಬಸದಿಗಳ ನಿರ್ವಹಣೆಗೂ ಹಲವು ದಾನಗಳನ್ನು ನೀಡಿದ್ದಾರೆ.[೨೭] ಕಿರಿಯ ಬಸವಾಚಾರಿ ಎಂಬುವವನು ಸಂಸಾರಭೀತನಾಗಿ ಕೆರೆಯನ್ನು ಕಟಿಸಿ, ದೇವಾಲಯವನ್ನು ನಿರ್ಮಿಸಿ ನಂತರ ಸನ್ಯಾಸ ಸ್ವೀಕರಿಸುತ್ತಾನೆ.[೨೮]

ಹೀಗೆ ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಅವಧಿಯಲ್ಲಿ ವಿವಿಧ ಕಾರಣಗಳಿಂದ ಬಹುತೇಕ ಎಲ್ಲ ವರ್ಗದ ಜನರು ದೇವಾಲಯಗಳು ಮತ್ತು ಬಸದಿಗಳನ್ನು ನಿರ್ಮಿಸಿ ತಮ್ಮ ಗಳಿಕೆಯನ್ನು ಸಾರ್ಥಕಪಡಿಸಿಕೊಂಡಿದ್ದಾರೆ.

**ಅಡಿಟಿಪ್ಪಣಿಗಳು**

೧ ಎ.ಕ. V (ರೈ), ಹಾಸನ ೭೨, ಕ್ರಿ.ಶ.೧೧೬೦
೨ ಅದೇ, ಹಾಸನ ೭೬, ಕ್ರಿ.ಶ.೧೧೬೮
೩ ಅದೇ, ಬೇಲೂರು ೧೩೭, ಕ್ರಿ.ಶ.೧೧೮೩
೪ ಅದೇ, ಬೇಲೂರು ೧೯೩, ಕ್ರಿ.ಶ.೧೧೬೧
೫ ಅದೇ, ಚನ್ನರಾಯಪಟ್ಟಣ ೧೮೯, ಕ್ರಿ.ಶ.೧೦೮೮
೬ ಅದೇ, ಹಾಸನ ೧೦೨, ಕ್ರಿ.ಶ.೧೧೨೩
೭ ಅದೇ, ಹಾಸನ ೮೯, ಕ್ರಿ.ಶ.೧೧೩೫
೮ ಅದೇ, ಅರಸೀಕೆರೆ ೧೧೦,ಮ ಕ್ರಿ.ಶ.೧೧೪೨
೯ ಅದೇ, ಬೇಲೂರು ೧೨೪, ಕ್ರಿ.ಶ.೧೧೩೩
೧೦ ಅದೇ, ಅರಸೀಕೆರೆ ೧೮, ಕ್ರಿ.ಶ.೧೧೪೦
೧೧ ಅದೇ, ಚನ್ನರಾಯಪಟ್ಟಣ ೧೫೧, ಕ್ರಿ.ಶ.೧೨೦೦
೧೨ ಅದೇ, ಹಾಸನ ೧೧೬, ಕ್ರಿ.ಶ.೧೧೨೩
೧೩ ಅದೇ, ಅರಸೀಕೆರೆ ೯೩, ಕ್ರಿ.ಶ.೧೧೮೯
೧೪ ಅದೇ, ಬೇಲೂರು ೧೪೭, ಕ್ರಿ.ಶ೧೧೨೧
೧೫ ಅದೇ, ಆರಸೀಕೆರೆ ೮೨ ಮತ್ತು ೬೭, ಕ್ರಿ.ಶ.೧೧೩೦ ಮತ್ತು ೧೧೩೨
೧೬ ಅದೇ, ಹಾಸನ ೬೫, ಕ್ರಿ.ಶ.೧೧೪೯
೧೭ ಅದೇ, ಚನ್ನರೈಪಟ್ಟಣ ೨೧೦, ಕ್ರಿ.ಶ.೧೧೬೫
೧೮ ಅದೇ, ಬೇಲೂರು ೧೩೭, ಕ್ರಿ.ಶ.೧೧೮೩
೧೯ ಅದೇ, ಚನ್ನರಾಯಪಟ್ಟಣ ೨೫೪, ಕ್ರಿ.ಶ.೧೧೮೪
೨೦ ಅದೇ, ಅರಸೀಕೆರೆ ೧೪೬, ಕ್ರಿ.ಶ.೧೧೩೬
೨೧ ಅದೇ, ಅರಸೀಕೆರೆ ೪೮, ಕ್ರಿ.ಶ.೧೧೮೯
೨೨ ಅದೇ, ಹಾಸನ ೧೪೯, ಕ್ರಿ.ಶ.೧೧೧೩ಶ
೨೩ ಎ..ಕ ೨ ಶ್ರವಣಬೆಳಗೊಳ ೫೯, ಕ್ರಿ.ಶ ೯೭೪
೨೪ ಎ..ಕ ೨ ಶ್ರವಣಬೆಳಗೊಳ ೧೨೧, ಕ್ರಿ.ಶ ೯೯೫
೨೫ ಎ..ಕ ೨ ಶ್ರವಣಬೆಳಗೊಳ ೭೪, ಕ್ರಿ.ಶ ೧೧೧೮
೨೬ ಎ..ಕ ೨ ಶ್ರವಣಬೆಳಗೊಳ ೫೯೭, ಕ್ರಿ.ಶ ೧೧೧೯
೨೭ ಎ..ಕ ೨ ಶ್ರವಣಬೆಳಗೊಳ ೧೩೭, ಕ್ರಿ.ಶ ೧೧೧೭
೨೮ ಎ..ಕ ೨ ಶ್ರವಣಬೆಳಗೊಳ ೬೦೨, ಕ್ರಿ.ಶ ೧೧೪೦

*****

# ಹೊಯ್ಸಳರ ಕಾಲದ ಕನ್ನಡ ಶಾಸನಗಳಲ್ಲಿನ ಸಾಹಿತ್ಯಕ ಅಂಶಗಳು

* ಡಾ॥ ಕೆ. ವಸಂತಲಕ್ಷ್ಮೀ

ಶಾಸನಗಳನ್ನು ಸಾಹಿತ್ಯದ ದೃಷ್ಟಿಯಿಂದ ವಿಶ್ಲೇಷಿಸುವಾಗ ಮುಖ್ಯವಾಗಿ ಕೆಳಗೆ ಸೂಚಿಸಿರುವ ನಾಲ್ಕು ಅಂಶಗಳನ್ನು ಗಮನಿಸಬೇಕಾಗುತ್ತದೆ. ಅವುಗಳೆಂದರೆ –

**೧) ಶಾಸನಕಾರನಲ್ಲಿದ್ದ ವಿಶೇಷ ಕಾವ್ಯ ಪ್ರತಿಭೆ**
**೨) ಶಾಸನ ಪಾಠದ ಮೇಲೆ ಕಾವ್ಯಲಕ್ಷಣಗಳ ಪ್ರಭಾವ**
**೩) ಶಾಸನದ ಕವಿಯ ಮೇಲೆ ಅನ್ಯಕವಿಗಳ ಪ್ರಭಾವ**
**೪) ಶಾಸನ ಕವಿಗಳ ಮಹತ್ವ ಮತ್ತು ಅವರು ನೀಡಿದ ಸಾಮಾಜಿಕ ವಿವರಗಳು**

ಹೊಯ್ಸಳರ ಶಾಸನಗಳನ್ನು ಪರಿವೀಕ್ಷಿಸಿದಾಗ ಆ ಕಾಲದಲ್ಲಿದ್ದ ಕೆಲವು ಪ್ರಸಿದ್ಧ ಕವಿಗಳು, ತಮ್ಮ ಕಾವ್ಯರಚನೆಗೆ ಮುಂಚೆ ಕಾವ್ಯಾಭ್ಯಾಸದ ಪೂರ್ವಸಿದ್ಧತೆ ಎಂಬಂತೆ ಶಾಸನಗಳನ್ನು ರಚಿಸಿರುವುದು ಕಂಡುಬರುತ್ತದೆ. ಈ ಕಾಲದ ಶಾಂತಿನಾಥ, ನಾಗಚಂದ್ರ, ಜನ್ನ, ಪಾರ್ಶ್ವನಾಥ ಪಂಡಿತ ಮೊದಲಾದ ಕವಿಗಳು ಅನೇಕ ಶಾಸನಗಳನ್ನು ರಚಿಸಿದ್ದಾರೆ. 'ಸುಕುಮಾರ ಚರಿತೆ'ಯನ್ನು ಬರೆದು ಪ್ರಸಿದ್ಧನಾದ ಕವಿ, ಶಾಂತಿನಾಥ ಅರಸೀಕೆರೆ ತಾಲೂಕಿನ ಕಣಿಕಟ್ಟೆ ಶಾಸನವನ್ನು ರಚಿಸಿದ್ದಾನೆ ; ಕನ್ನಡ ಶಾಸನ ಕವಿಗಳು ತಮ್ಮ ಬಣ್ಣನೆಗೆ ತಕ್ಕಂತೆ ಸೂಕ್ತವಾದ ಛಂದಸ್ಸನ್ನು ಬಳಸಿ ಪದ್ಯಗಳನ್ನು ರಚಿಸಿದ್ದಾರೆ. ಶೌರ್ಯ. ಪ್ರತಾಪಗಳನ್ನು ಬಣ್ಣಿಸುವಲ್ಲಿ ಯುದ್ಧದ ಭೀಕರತೆಯನ್ನು ಬಣ್ಣಿಸುವಾಗ ಮಹಾಸ್ರಗ್ಧರಾ ಛಂದಸ್ಸಿನಲ್ಲಿರುವ ಈ ಭಾಗಗಳು ಕವಿಯ ಪ್ರತಿಭೆಗೆ ಸಾಕ್ಷಿಯಾಗಿವೆ ಹೊಯ್ಸಳದೊರೆ ಎರೆಯಂಗನ ಪ್ರತಾಪವನ್ನು ಬಣ್ಣಿಸುವ ಪದ್ಯವು ಮಹಾಸ್ರಗ್ಧರ ವೃತ್ತ ಛಂದಸ್ಸಿನಲ್ಲಿ ರಚಿಸಿದ್ದು ಭೋಜನ ಧಾರಾನಗರಿಯನ್ನು ಸುಟ್ಟದ್ದನ್ನು ಸೊಗಸಾಗಿ ಬಣ್ಣಿಸಿದೆ.

**ಪೊಗೆ ಪೊಕ್ಕಾಶಾಧಿಪರ್ ಕಣ್ಗಳನೊರಸುವಿನಂ ದಿಗ್ಗಜಾಪಾಂಡುದಂತಂ ।**
**ಪೊಗೆ ಸುತ್ತಲ್ ಕರ್ಗ್ಗಿ ಕೊಂಡಿರ್ಪಿನಮಪಘನ ಮಾಗಿರ್ದರೋದೋಂತರಾಳಂ ॥**
**ಪೊಗೆಯಿಂದಂ ಮೇಘಬೃಂದಾನ್ವಿತಮೆನಿಸುವಿನಂ ತೀವ್ರತೇಜೋನಳಂ ಕೆ ।**
**ಯಿಗುವನ್ನಂ ಪೊಯ್ಸಳಂ ಭೋಜನ ಕುಜುಪಿನ ದುರ್ಗಂಗಳಂ ಕೂಡೆಸುಟ್ಟಂ ॥ [ಬೇ ೧೬. ಎಕ. ೯]**

ಬೇಲೂರಿನ ವೀರಗಲ್ಲಿನಲ್ಲಿ ಖಂಡೆಯರಾಯ ರಾಯಣನು ಸಾಳುವ ತಿಕ್ಕಮನ ಜೊತೆ ಹೋರಾಡಿ ಮಡಿದಾಗ ಆ ರಣರಂಗದ ಭೀಕರ ದೃಶ್ಯವನ್ನು ಶಾಸನ ಕವಿ ಹೀಗೆ ಬಣ್ಣಿಸಿದ್ದಾನೆ. [ಬೇ ೧೩೧. ಎಕ. ೯]

**ಧೊರೆಧೊರೆಯೆಂದು ಮೂದಲಿಸೆ ಬಿಟ್ಟಡೆ ಖಂಡೆಯರಾಯರಾಣೆಯಂ**
**ಧುರಗಲಿ ಪೊಯ್ದಡಾಹವದೊಳಟ್ಟೆಗಳಾಡಿದವಯ್ದೆ ಬಲ್ಪೆಣಂ**
**ಮೊರದವು ನೆತ್ತರೆಂಟು ದೆಸಗಂ ಕಳಲಾದುದು ಖಂಡದಿಂಡೆಗ**
**ಳ್ಪರಿದವು ಕಾಳಿಜಂ ಕರುಳ ಮಾಲೆಗಳುರ್ವ್ವಿದವೆತ್ತನೋಳ್ಪಡಂ ॥**

ಎಂದಿದ್ದಾನೆ. ಹೀಗೆ ಯುದ್ಧರಂಗದ ಭೀಕರತೆಯನ್ನು ಬಿಂಬಿಸುವ ಹಲವಾರು ಪದ್ಯಗಳು ದೊರೆಯುತ್ತವೆ. ಹಾಸನ (೧೧೬)ದ ಜಕ್ಕನಹಳ್ಳಿಯಶಾಸನ, ಹಗರಿಬೊಮ್ಮನಹಳ್ಳ(೨)ಯ ಬೆಣ್ಣೆಕಲ್ಲಿನ ಶಾಸನ; ಶಿಕಾರಿಪುರ ತಾಲೂಕಿನ ಕೋಡಿಮಠದ ಶಾಸನ (ಶಿ.ಪುರ. ೧೦೨) ಮುಂತಾದ ಶಾಸನಗಳಲ್ಲಿನ ರಣರಂಗದ ವರ್ಣನೆಗಳು ಗಮನಾರ್ಹವಾಗಿವೆ. ಬೇ ೪೧೦, ಹೊಯ್ಸಳ ಅರಸರ ಶೌರ್ಯ, ಸಾಹಸಗಳನ್ನು ಅವರ ವಿಶೇಷ ಗುಣಾವಳಿಗಳನ್ನು ಚಿತ್ರಿಸಿರುವ ನೂರಾರು ಸುಂದರ ಪದ್ಯ ಭಾಗಗಳು ಶಾಸನಗಳಲ್ಲಿ ದೊರೆಯುತ್ತವೆ. ಇಲ್ಲಿ ಪ್ರಮುಖ ದೊರೆಗಳನ್ನು ಬಣ್ಣಿಸಿರುವ ಒಂದೊಂದು ಉದಾಹರಣೆ ನೀಡಿ, ಕೆಲವು ಶಾಸನಗಳಲ್ಲಿನ ವರ್ಣನೆಯ ಕಡೆಗೆ ಗಮನ ಸೆಳೆಯಲಾಗಿದೆ. ಹೊಯ್ಸಳ ಅರಸರಲ್ಲಿ ಅತ್ಯಂತ ಪ್ರಮುಖರಾದ

---

* ೧೬೭೬, ೫ನೆ 'ಎ' ಅಡ್ಡರಸ್ತೆ, ೧೦ನೆ. ಮುಖ್ಯರಸ್ತೆ, ಬನಶಂಕರಿ ಮೊದಲನೆ ಹಂತ, ಬೆಂಗಳೂರು-೫೬೦ ೦೫೦

ವಿಷ್ಣುವರ್ಧನ, ನಾರಸಿಂಹದೇವ ಮತ್ತು ಎರಡನೇ ವೀರಬಲ್ಲಾಳರನ್ನು ಶಾಸನಗಳಲ್ಲಿ ವಿಶೇಷವಾಗಿ ಬಣ್ಣಿಸಲಾಗಿದೆ. ಹಾಸನ ತಾಲೂಕಿನ ಜಕ್ಕೇನಹಳ್ಳಿ ಶಾಸನವು (ಹಾಸನ ೧೧೬, ಎಕ. ೪) ಲೇಖಕ ಮದನ ಮಹೇಶ್ವರನೆನಿಸಿದ್ದ ಬರೆವರಾಚಾರ್ಯನಾಗಿದ್ದ ಸೂರ್ಯಣನು ಬರೆದ ಶಾಸನವಾಗಿದ್ದು. ವಿಷ್ಣುವರ್ಧನ ದೇವನನ್ನು ಹೀಗೆ ಬಣ್ಣಿಸಿದ್ದಾನೆ.

**ಪದದೊಳು ಕೂರ್ಮಸ್ವರೂಪಂ ನಯನಯುಗಳದೊಳು ಮತ್ಸ್ಯರೂಪಂ ಘನಗ್ರೀ**
**ವದೊಳಾದಿ ಕ್ರೋಢರೂಪಂ ನಡುವಿನೊಳು ನೃಸಿಂಹತ್ವನಾತ್ಮ ಪ್ರಭಾವಾಸ್ಪ**
**ದದೊಳು ರಾಮತ್ರಯತ್ವಂ ಮತಿವಿಕಸನದಲು ಬುದ್ಧರೂಪಾಗಿ ಗುಜ್ಞಾಂ**
**ಗದ ಕಲ್ಕಿತ್ವಕ್ಕೆ ಮೆಯ್ದೋರದ ಹರಿಯೆನಿಪ್ಪಂ ವಿಷ್ಣುಜಿಷ್ಣು ಕ್ಷಿತೀಶಂ ॥**

ಎಂದು ವಿಷ್ಣುವರ್ಧನನನ್ನು ವಿಷ್ಣುವಿನ ದಶಾವತಾರದರೂಪಗಳೊಂದಿಗೆ ಸಮೀಕರಿಸಿ ಬಣ್ಣಿಸಿದ್ದಾನೆ. ಇದರಂತೆ ಬೇಲೂರಿನ (ಬೇ ೧೬) ಶಾಸನವೊಂದು 'ವಿಷ್ಣುವರ್ಧನನೇ ಸಾಕ್ಷಾತ್ ವಿಷ್ಣುವಿನಂತೆ' ಎಂದು ಬಣ್ಣಿಸಿದೆ. [ದೆಸೆಗಳನೊತ್ತಿಕೊಂಡಧನದಿಂ . . . . . . ವಿಷ್ಣುಪುರುಷೋತ್ತಮನೆಂದಿವು ತಾವೇ ಪೇಳವೇ ॥] ಹೀಗೆಯೇ ಬೇಲೂರು ೪೧೦ ರ ಹುಲಿಕೆರೆ ಶಾಸನ, ಬೇ ೨೬೧ ರ ಘಟ್ಟದಹಳ್ಳಿ ಶಾಸನ, ಬೇ ೫೬೦ ರ ಬೆಳವಾಡಿ ಶಾಸನಗಳನ್ನು ಉದಾಹರಿಸಬಹುದು.

ನಾರಸಿಂಹ ದೇವನನ್ನು ಜಕ್ಕನಹಳ್ಳಿ ಶಾಸನವು (ಹಾಸನ ೧೧೬–ಎಕ. ೮)ಹೀಗೆ ಬಣ್ಣಿಸಿದೆ.

**ಅಹಿಪತಿಯಂತೆ ಭೋಗಿ ಸಸಿಯಂತೆ ಕಳಾಧರನೀಶಂತುಮಾ**
**ಸಹನಮರೇಂದ್ರನಂತೆ ವಿಭವಾನ್ವಿತಯಂನತ ಮೇರು ಸೂರ್ಯನಂ**
**ತಹಿ ಮಕರ ಪ್ರಭಾವನಮರೇಜ್ಯನವೋಲ್ ಬಹುತತ್ವ ಕೋವಿದಂ**
**ಮಹಿಸುತನೆಂದು ಬಣ್ಣಿಪುದು ಧಾತ್ರಿಯೊಳೀ ನರಸಿಂಹ ದೇವನಂ ॥**

ಎಂದಿದೆ. ಈ ರಾಜನನ್ನು ಹಾಸನ ತಾಲೂಕಿನ ಕೋರಮಂಗಲದ ಶಾಸನವು (ಹಾಸನ ೧೨೮) ಶತೃರಾಜರೊಂದಿಗೆ ಹೋರಾಡುವಲ್ಲಿ ಕ್ರೂರದೈತ್ಯೇಶ್ವರನನ್ನು ಸೀಳಿದ ನೃಸಿಂಹನಂತೆ ಗರ್ಜಿಸುತ್ತಿದ್ದನೆಂದು ಬಣ್ಣಿಸಿದೆ. ಈ ಪದ್ಯ ಹಲವಾರು ಶಾಸನಗಳಲ್ಲಿ ಕಾಣಸಿಗುತ್ತದೆ.

ಹೊಯ್ಸಳ ಅರಸರಲ್ಲಿ ಅತ್ಯಂತ ಪ್ರಸಿದ್ಧನಾದ ದೊರೆ ಇಮ್ಮಡಿ ವೀರಬಲ್ಲಾಳದೇವ. ಇವನ ಕಾಲದಲ್ಲಿ ಅತಿ ಹೆಚ್ಚು ಶಾಸನಗಳು ರಚನೆಯಾಗಿವೆ. ಇವನ ಗುಣಾತಿಶಯಗಳನ್ನು ಬಣ್ಣಿಸಿರುವ ಒಂದೆರಡು ಉದಾಹರಣೆಗಳನ್ನಿಲ್ಲಿ ನೀಡಲಾಗಿದೆ; ಅರಸಿಕೆರೆಯ ಶಾಸನವೊಂದನ್ನು ರಚಿಸಿದ (ಅಕೆರೆ ೨೩, ಎಕ ೧೦) ಕವಿರಾಜ ದೇವಪಾರ್ಯನು "ಉರುಗೇಂದ್ರನು ಧಾತ್ರಿಯನ್ನು, ಧಾರಿಣಿಯು ಹಿಮಗಿರಿಯನ್ನು, ಗೌರೀವರನು ಚಂದ್ರನನ್ನು, ಚಂದ್ರನು ಕಲಾಸ್ತೋಮವನ್ನು ಧರಿಸಿದಂತೆ ಯದುಕುಲೋದ್ಭೂತ ಸಾಮ್ರಾಜ್ಯಲಕ್ಷ್ಮಿಯನ್ನು ವೀರಬಲ್ಲಾಳಭೂಪನು ತನಗೆ ಸುಸಾಧ್ಯವೆಂದು ತಳೆದ" ನೆಂದು ಬಣ್ಣಿಸಿದ್ದಾನೆ. ಅರಸಿಕೆರೆ ತಾಲೂಕಿನ ತಳಲೂರಿನ ಶಾಸನ ಕವಿ ಈ ರಾಜನನ್ನು ಬಣ್ಣಿಸಿರುವ ಈ ಪದ್ಯ ಮಹಾಸ್ರಗ್ಧರಾ ವೃತ್ತದಲ್ಲಿದೆ. ಈ ಶಾಸನದ ಕವಿಯ ಹೆಸರು ತಿಳಿದಿಲ್ಲವಾದರೂ ಶಾಸನ ಪದ್ಯಗಳು ಅವನ ಕಾವ್ಯ ಪ್ರತಿಭೆಗೆ ಸಾಕ್ಷಿಯಾಗಿವೆ.

**ಧರೆ ತೇರ್ದರ್ಕ್ಕುಂಭಿಯುಗ್ಮಂ ರವಿಶಶಿವಟಿಯಂ ಗಾಲಿಗಳ್ ಮೇರು ಬಿಲ್ ನೀ**
**ಳ್ದುರುಗೇಂದ್ರಂ ಮೌರ್ವ್ವಿ ಕೃಷ್ಣಂ ಕಣೆಶಿಖಿಯಲಗಾವಾಯುಪಿಳ್ಳಾಗೆ ರುದ್ರಂ**
**ಸುರಸೈನ್ಯಂ ಕೂಡೆಸುಟ್ಟಂ ತ್ರಿಪುರನಮಳವಿಂದಂದು ಬಲ್ಲಾಳನಿಂದು**
**ದ್ಧರತೇಜಂ ವೈರಿದುರ್ಗ್ಗೋತ್ಕರಮನಡರ್ಸಿ ಸುಟ್ಟಂ ಪ್ರತಾಪ ತ್ರಿಣೇತ್ರಂ ॥**

ಎಂದು ವೀರಬಲ್ಲಾಳನು ತ್ರಿಪುರಸಂಹಾರದ ಶಿವನಂತೆ ದುರ್ಗ್ಗಗಳನ್ನು ನಾಶಮಾಡಿದ ಅಪ್ರತಿಮ ಸಾಹಸವನ್ನು ಬಣ್ಣಿಸಿದೆ. ಹಾಸನ ತಾಲೂಕಿನ ಕೊರಮಂಗಲದಶಾಸನವು (ಹಾ ೧೨೮– ಎಕ ೮) ಬಡವಗ್ಗಿರ್ಯದ ಚಾಗ, ವಾಜಿಮುಖದೊಳು ಜೆಂನಿತ್ತ ಶೌರ್ಯ, ದುರ್ಮಾರ್ಗದಲ್ಲಿ ನಡೆದ ಚರಣಗಳು ಧುರ್ಯಶಕ್ಕೆ ಗುರಿಯಾದ ಬಾಳ್ವೆ ತಮ್ಮದೆಂದೆನ್ನುವವರನ್ನು ಛೀಯೆನ್ನುವ ಬಲ್ಲಾಳಭೂಪನಂತೆ ಬೇರಾರಿದ್ದಾರೆ? ಎಂದು ಬಣ್ಣಿಸಿದೆ. ಅರಸಿಕೆರೆ ತಾಲೂಕಿನ ಬಾಣಾವರದ ಶಾಸನವನ್ನು ರಚಿಸಿದ ಕವಿ ತ್ರಿವಿಕ್ರಮ ಪಂಡಿತರು ಮತ್ತೇಭವಿಕ್ರೀಡಿತ ವೃತ್ತದಲ್ಲಿ ರಚಿಸಿದ ಅವನ ಕೀರ್ತಿಯ ಈ ಪದ್ಯ ಸೊಗಸಾಗಿದೆ; 'ಇಳೆ

ಶುದ್ಧ ಸ್ಫಟಿಕೋಪಳಸ್ಥಗಿತ . . . . . . ಪರ್ವ್ವಿತುಜಸಂ ಬಲ್ಲಾಳಭೂಪಾಳನ ॥ (ಅಕೆರೆ ೫೫ ಎಕ ೧೦) ಹೀಗೆ ಆ ಕಾಲದ ಶಾಸನ ಕವಿಗಳು ರಾಜರನ್ನು ಬಣ್ಣಿಸುವಲ್ಲಿ ಅವರ ಪಾಂಡಿತ್ಯಗರಿಗೆದರಿರುವುದನ್ನು ಕಾಣುತ್ತೇವೆ. ಇದರಂತೆ ಬೇಲೂರಿನ ೨೨೫ರ ಕೂಡಲೂರಿನ ಶಾಸನ ಬೇಲೂರಿನ ೩೦೦ರ ಹಳೇಬೀಡಿನ ಶಾಸನ; ಚಿಕ್ಕಮಗಳೂರಿನ ೧೮೨ರ ಖ್ವಾಡ್ಯದ ಶಾಸನ ಮುಂತಾದ ಶಾಸನಗಳಲ್ಲೂ ವೀರಬಲ್ಲಾಳದೇವನ ಸೊಗಸಾದ ವರ್ಣನೆಗಳಿವೆ.

ಶಾಸನಗಳನ್ನು ಮುಖ್ಯವಾಗಿ ಮೂರು ದೃಷ್ಟಿಯಿಂದ ಅಭ್ಯಸಿಸಬಹುದು.

೧) ಶಾಸನಗಳಲ್ಲಿರುವ ಸಾಹಿತ್ಯದ ಅಂಶಗಳನ್ನು ಗುರುತಿಸಿ, ಶಾಸನ ಸಾಹಿತ್ಯದ ರಚನೆಯ ಬಗೆಗೆ ತಿಳಿಯುವುದು

೨) ಶಾಸನಗಳನ್ನಾಧರಿಸಿ ಕನ್ನಡದ ಸೃಜನಶೀಲಸಾಹಿತ್ಯದ ಪ್ರಾಚೀನತೆ, ಮತ್ತು ಕವಿಗಳ ವೈಯುಕ್ತಿಕ ಜೀವನದ ಬಗೆಗೆ ತಿಳಿಯುವುದು

೩) ಶಾಸನಗಳನ್ನು ಆಧರಿಸಿ ಭಾಷಾಲಕ್ಷಣ ತನ್ಮೂಲಕ ಭಾಷಾಚರಿತ್ರೆಯ ಮಜಲನ್ನು ಗುರುತಿಸುವುದು.

ಸಾಹಿತ್ಯದ ಅಧ್ಯಯನದಲ್ಲಿ ವಿಶೇಷವಾಗಿ ಕಾಣಬರುವ ಲಕ್ಷಣಗಳೆಂದರೆ ಕವಿಯ ವರ್ಣನಾಸಾಮರ್ಥ್ಯ. ಭಾಷೆಯ ಪ್ರಗಲ್ಭತೆ, ಬಳಸಿರುವ ಅಲಂಕಾರಗಳು, ಧ್ವನಿಔಚಿತ್ಯ, ಛಂದಸ್ಸುಗಳ ಬಳಕೆ, ಇವುಗಳನ್ನು ಗಮನಿಸುತ್ತಾ ಕವಿಯಶೈಲಿ, ಪಾಂಡಿತ್ಯಗಳನ್ನು ಗುರುತಿಸಬಹುದು. ಆದರೆ ಶಾಸನಕಾರನಿಗೆ ನಿರ್ದಿಷ್ಟಘಟನೆಯ ಬಗೆಗೆ, ಶಾಸನರಚನೆಯಪದ್ಧತಿಗೆ ಅನುಗುಣವಾಗಿ ಶಾಸನ ಪಾಠವನ್ನು ರಚಿಸಬೇಕಾಗಿರುತ್ತದೆ. ಇದರಿಂದ ಸ್ವತಂತ್ರ ಕವಿಯಂತೆ ಶಾಸನಕಾರನಿಂದ 'ಸಾಹಿತ್ಯರಚನೆ'ಯಾಗಿರುವುದಿಲ್ಲ. ಹೀಗಿದ್ದರೂ ೯ನೇ ಶತಮಾನದ ನಂತರದ ಶಾಸನಗಳಲ್ಲಿ ಶಾಸನದ ಸ್ವರೂಪ ನಿಶ್ಚಿತವಾಗಿದ್ದು, ದೀರ್ಘ ಪಾಠಗಳುಳ್ಳ ಶಾಸನಗಳು ಲಭ್ಯವಿವೆ. ವೀರಗಲ್ಲು ಶಾಸನದಲ್ಲಿ ಗತಿಸಿದ ವೀರನ ಮಹತ್ವವನ್ನು, ಸತಿಕಲ್ಲಾದರೊ ಮಾಸ್ತಿಯಾದ ವ್ಯಕ್ತಿಯ ಮಹತ್ವವನ್ನು ಬಣ್ಣಿಸಿರುತ್ತದೆ. ಹೀಗೆ ಶಾಸನದಲ್ಲಿ ಘಟನೆಯ ನಿರೂಪಣೆಯು ಕೇವಲ ನೀರಸವಾದ ವರದಿಯಂತಿರದೇ. ಕೆಲವೊಮ್ಮೆ ಪುಟ್ಟ ಕಥಾನಕದಂತೆ, ಇರುತ್ತದೆ.. ಇವುಗಳಿಗೆ ಉದಾಹರಣೆಯಾಗಿ ಬೆಳತೂರಿನ ದೇಕಬ್ಬೆಶಾಸನ, ಹಳೇಬೀಡಿನ ಕುವರಲಕ್ಷ್ಮನ ಶಾಸನಗಳನ್ನು ನೋಡಬಹುದು. ಕೆಲವು ಶಾಸನಗಳು ಚಿಕ್ಕದಾದ ಚಂಪೂಕಾವ್ಯದಂತಿವೆ. ಶ್ರವಣಬೆಳಗೊಳದ ಬೊಪ್ಪಣನಗೊಮ್ಮಟ ಸ್ತುತಿ, ಕೇಶಿರಾಜನ ಅಬಲೂರುಶಾಸನ, ಬನ್ನಾನ ಅಮೃತಾಪುರದ ಶಾಸನ, ಶಿರಸಂಗಿಯ ಸಜ್ಜನ ತಿಲಕನಶಾಸನ, ಕುರಗೋಡಿನಶಾಸನ, ಸಾತೇನಹಳ್ಳಿಶಾಸನ ನಾಗಚಂದ್ರನು ಚಾಲುಕ್ಯರು ಮತ್ತು ಹೊಯ್ಸಳ ಅರಸರಿಂದ ಆದರಿಸಲ್ಪಟ್ಟವನು. 'ರಾಮಚಂದ್ರ ಚರಿತ ಪುರಾಣ', 'ಮಲ್ಲಿನಾಥ ಪುರಾಣ' ಇವನ ಪ್ರಸಿದ್ಧ ಕಾವ್ಯಗಳು ಇವನು ಬಿಜಾಪುರದ ಎರಡು ಶಾಸನಗಳನ್ನು ಬರೆದಿರುವನೆಂದು ತಿಳಿದುಬರುತ್ತದೆ.

ಹೊಯ್ಸಳರ ದೊರೆ ನರಸಿಂಹ ಬಲ್ಲಾಳನ ಆಸ್ಥಾನ ಕವಿಯಾಗಿ 'ಕವಿಚಕ್ರವರ್ತಿ', ಜನ್ನನು ಕಾವ್ಯರಚನೆಗೆ ಮೊದಲು ಕ್ರಿಶ ೧೧೯೧ರಲ್ಲಿ ಚನ್ನರಾಯ ಪಟ್ಟಣ ತಾಲೂಕಿನ ಆನೆಕೆರೆತಾಮ್ರ ಶಾಸನವನ್ನು ರಚಿಸಿದ್ದನು. ಕ್ರಿ.ಶ. ೧೧೯೬ರಲ್ಲಿ ತರೀಕೆರೆ ತಾಲೂಕಿನ ಅಮೃತಾಪುರದ ಶಿಲಾಶಾಸನವನ್ನು ರಚಿಸಿದ್ದಾನೆ. ಈ ಎರಡು ಶಾಸನಗಳ ಪಠ್ಯವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಜನ್ನನ ಶೈಲಿಯು ವಿಕಾಸವಾಗಿರುವುದನ್ನು ಕಾಣಬಹುದು. ಇದರಂತೆ ಅವನ ಜೀವನದ ಮೇಲೂ ಬೆಳಕು ಚೆಲ್ಲುವ ಈ ಶಾಸನಗಳು ಮೊದಲು ಜನ್ನಕವಿಯು ಹೊಯ್ಸಳ ಅಧಿಕಾರಿಗಳ, ದಂಡಾಧಿಪರ ವಿಶ್ವಾಸಗಳಿಸಿ, ಕ್ರಮೇಣ ಆಸ್ಥಾನಕವಿಯಾಗಿ 'ಕವಿಚಕ್ರವರ್ತಿ'ಯಾದನೆಂಬ 'ಸ್ಥೂಲಚಿತ್ರ'ವನ್ನು ಕಟ್ಟಿಕೊಡುತ್ತವೆ. ಅಮೃತಾಪುರದ ಶಾಸನದಲ್ಲಿನ ಪದ್ಯಭಾಗಗಳು ಸುಂದರವಾಗಿವೆ. ಒಂದೆಡೆ-"ಮೊರಡಿಯ ಮೇಲೆ "ಮಾದುಫಲವೆಲಾದುದು ತೀವಿನಿಂದ ಪೆರ್ಗದೆ. . . . " ಎಂಬ ಮಾತುಬಂದಿದ್ದು ಈ ಸಾಲು ಯಶೋಧರಚರಿತೆಯ ಉಕ್ತಿಯನ್ನು ನೆನಪಿಸುತ್ತದೆ.

ಜನ್ನನ ಸಮಕಾಲೀನ ಕವಿ ಪಾರ್ಶ್ವನಾಥ ಪಂಡಿತನು ರಚಿಸಿದ 'ಪಾರ್ಶ್ವನಾಥ ಪುರಾಣ' ಶ್ರೇಷ್ಠ ಕಾವ್ಯಗಳಲ್ಲಿ ಒಂದಾಗಿದೆ. ಕ್ರಿಶ ೧೨೨೨ರಲ್ಲಿ ಪಾರ್ಶ್ವನಾಥ ಪುರಾಣವನ್ನು ರಚಿಸುವ ಮೊದಲು ಈ ಕವಿಯು ಕ್ರಿ.ಶ. ೧೨೦೪ರಲ್ಲಿ ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಕಲ್ಲುಹೊಳೆ ಬಸದಿಯ ಶಾಸನವನ್ನು ರಚಿಸಿದ್ದಾನೆ. ೪೦ ಪದ್ಯಗಳನ್ನು ಹೊಂದಿರುವ

ಈ ಶಾಸನವು ಒಂದು ಚಿಕ್ಕ ಚಂಪೂಕಾವ್ಯದಂತಿದೆ. ಇವನ ಕಾವ್ಯಪ್ರತಿಭೆಗೆ ಇಲ್ಲೊಂದು ಉದಾಹರಣೆ;

**ಸಬಳಂಗೊಂಡು ಸಮುದ್ರ ಸಿಂಹಮಹಿಪಂ ಮೇಲ್ವಾಯಿಸಲ್ವಾಜಿಯಂ**
**ಸಬಳ್ದ ವೈರಿಬಳಂ ಜವಂಗೆ ಕಬಳಂ ಬೇತಾಳಜಾಳಕ್ಕೆ ಕೊ**
**ಟ್ಟಬಲಿಶ್ರೇಣಿ ಬಳಾರಿಗಿತ್ತಬಡಿ ನಂ ಹಾರ್ದಿರ್ದರ್ಹಂಗೆ ಬೇ**
**ದುರ್ಬ್ಬೃಕಕ್ಕೆತ್ತಿದ ಬುತ್ತಿಯೊಂದೊಡಹಿತ ಮೆರ್ಯ್ದೊರಿ ಮಾರಾಂಪರೇ ॥**

ಎನ್ನುತ್ತಾನೆ ಈ ನೀಳ್ಗಬ್ಬವನ್ನು ರಚಿಸಿದ ಪಾರ್ಶ್ವನಾಥಪಂಡಿತನು ತನ್ನ ಶಾಸನದಬಗೆಗೆ:-

**ಲಲಿತ ಪದಾರ್ಥಾಳಂಕೃತಿ**
**ಗಳಿನೊಸರ್ವರಸಂಗಳಿಂದೆ ಬುಧರೊಳ್ಪುಳಕಾ**
**ವಳಿಸಸ್ಯಮೊಗೆಯಕವಿಕುಳ**
**ತಿಳಕಂ ಶಾಸನಮನೊಲ್ದು ಪೇಳ್ದಂ ಪಾರ್ಶ್ವಂ ॥**

ಎನ್ನುತ್ತಾ, ತನ್ನ ಶಾಸನವು ಸತ್ಕೃತಿಯಂತೆ ಇದೆ. ಇದನ್ನು ಓದುವ ಮಧರ ಮನದಲ್ಲಿ-ಪುಳಕಾವಳಿಸಸ್ಯಗಳು ಉದ್ಭವಿಸುವುವು ಎಂದು ಬಣ್ಣಿಸಿದ್ದಾನೆ.

ಹೊಯ್ಸಳ ಕಾಲದ ಮತ್ತೊಬ್ಬ ಪ್ರಸಿದ್ದ ಕವಿ 'ಗೊಮ್ಮಟಸ್ತುತಿಯನ್ನು ಬರೆದ ಬೊಪ್ಪಣ. ಇವನಿಗೆ ಸುಜನೋತ್ತಂಸ ಎಂಬಬಿರುದು ಇದೆ. ಗೊಮ್ಮಟೇಶ್ವರನ ಭವ್ಯ ಆಕೃತಿಯ ಸೌಂದರ್ಯವನ್ನು ಬಣ್ಣಿಸಿರುವ ಕಾವ್ಯ ಪ್ರತಿಭೆಗೆ ಒಂದೆರಡು ಉದಾಹರಣೆಗಳನ್ನು ಗಮನಿಸಬಹುದು. ಇವನು 'ನಿರ್ವಾಣಲಕ್ಷ್ಮೀಪತಿ ನಕ್ಷತ್ರಮಾಲಿಕೆ' ಎಂಬ ಕೃತಿಯನ್ನು ರಚಿಸಿದ್ದಾನೆ. 'ಸುಕವಿಸಮಾಜನುತ', 'ಕನ್ನಡಕವಿ' ಎಂದೂ ಕರೆದು ಕೊಂಡಿದ್ದಾನೆ.

**ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯಮೌನ್ನತ್ಯಮುಂ**
**ನುತಸೌಂದರ್ಯಮುಮಾಗೆ ಮತ್ತತಿಶಯಂ ತಾನಾಗದೌನತ್ಯಮುಂ**
**ನುತ ಸೌಂದರ್ಯಮುಮೂರ್ಜ್ಜಿತಾತಿಶಯಮಂ ತಂನಲ್ಲಿ ನಿದ್ದಿರ್ದುವೇಂ**
**ಕ್ಷಿತಿಸಂಪೂಜ್ಯವೋ ಗೊಂಮಟೇಶ್ವರ ಜಿನಶ್ರೀರೂಪಮತ್ಮೋಪಮಂ ॥**

ಈ ಶಾಸನವನ್ನು ಖ್ಯಾತ ಕರ್ನಾಟಕ ವೃತ್ತಗಳನ್ನು ಬಳಸಿ ಸುಂದರವಾದ ಚಿಕ್ಕಚಂಪೂಕಾವ್ಯದಂತೆ ರಚಿಸಿದ್ದಾನೆ ತ್ರಿವಿಕ್ರಮಾರ್ಕನೆಂಬ ಕವಿ ಬಾಣಾವರ ಗ್ರಾಮವನ್ನು ಹೀಗೆ ಬಣ್ಣಿಸಿದ್ದಾನೆ. (ಅಗೂಡು ೫೫ ಎಕ.೧೦)

**ಬೆಳೆದೆಱಗಿನ ಕಳವೆಗಳಿಂ**
**ಗಿಳಿವಿಂಡಿಂ ನಂದನಂಗಳಿಂದಳಿಕುಳದಿಂ**
**ಬಳಸಿದ ಪೂರ್ಣತಟಕಾ**
**ವಳಿಯಿಂದುರ್ವ್ವರೆಗೆ ಬಾಣಪೂರ್ ಸೊಗಯಿಸುಗುಂ ॥**

ಇದರಂತೆ ಕಳಿಕಟ್ಟೆ ಶಾಸನದ ಕವಿಯು ಕಳಿಕಟ್ಟೆಯನ್ನು ಸುಂದರವಾಗಿ ಬಣ್ಣಿಸಿದ್ದಾನೆ (ಅ.ಕೆರೆ ೮೮, ಅದೇ). ಇದೇ ತಾಲೂಕಿನ ಅರಕೆರೆ ಅಗ್ರಹಾರವು ಸರ್ವಜ್ಞಪುರವೆನ್ನಿಸಿತ್ತು. ಶಾಸನಕವಿಯು ಇದನ್ನು (ಅಕೆರೆ ೩೧೪, ಅದೇ)

**ವೇದ ಮನೋದುತಿರ್ಪ್ಪಧಿಕ ಶಾಸ್ತ್ರಮನೊಂಮೆಯು ಕೇಳುತ್ತಿರ್ಪ್ಪಸಂ**
**ವಾದಿಪ ತರ್ಕಮಂ ಬಿಡದೆ ತರ್ಕ್ಕಿಸುತಿರ್ಪ ಪುರಾಣಮಂಮನೋ**
**ಹ್ಲಾದದೆ ವೇಳುತಿರ್ಪ್ಪ ಸಕಳಸ್ಮೃತಿನಾಟಕ ಕಾವ್ಯದರ್ಥಮಂ**
**ಸಾಧಿಸುತಿರ್ಪ್ಪ ವಿಪ್ರತತಿಯಂ ನೆಗಳ್ದಿರ್ಪ್ಪುತಲಿರ್ಕುಸತತಂತಂ ॥**

ಎಂದು ಬಣ್ಣಿಸಿದ್ದಾನೆ. ಈ ಸುಂದರವಾದ ಪದ್ಯವು ಉತ್ಪಲಮಾಲಾ ಛಂದಸ್ಸಿನ ರಚನೆಯಾಗಿದೆ. ಶಾಸನದಲ್ಲಿ ಖ್ಯಾತ ಕರ್ನಾಟಕ ವೃತ್ತಗಳೆಲ್ಲವನ್ನು ಬಳಸಿರುವ ಈ ಶಾಸನ ಕವಿ ಒಬ್ಬ ಅಜ್ಞಾತಶ್ರೇಷ್ಠಕವಿಯಾಗಿದ್ದಾನೆ. ಹಿರಿಯೂರಿನ ಶಾಸನವು (ಅಕೆರೆ ೩೧೭) ಕುಂಜನಂಬಿ ಸೆಟ್ಟಿಮಾಡಿಸಿದ ಶಿವಾಲಯವನ್ನು ಹೀಗೆ ಬಣ್ಣಿಸಿದೆ

ಯಿದು ಕೈಳಾಸಮೊ ಮೇಣದೆತ್ತಿದರುದ್ದತ್ತುಂಣ್ಯಸಂಶುದ್ದಬೀ
ಜದ ಹೇಱುಕೊಟ್ಟಲೊ ಮೇಣಿದಸ್ತವರ ಭಾಸ್ವತ್ಕೀರ್ತಿ ತನ್ವಂಗಿ ಕೂ
ಡೆ ದಿಶಾಳೋಕನಿಮಿತ್ತವೇಱುವೆಡೆಗೆಂ ದಿಕ್ಕಿರ್ದ್ದ
ವೇದೀವಿಳಾಸದ ವಿಸ್ತಾರವೋ ಪೇಳೆನಲ್ಕೆ ಮೆಱುಗುಂಶ್ರೀ ಕುಂಜನಾಥಾಶ್ರಯಂ ॥

ಈ ಪದ್ಯ ಮತ್ತೇಭವಿಕ್ರೀಡಿತ ಛಂದಿಸ್ಸಿನ ರಚನೆಯಾಗಿದ್ದು ಕೇವಲ ದೇವಾಲಯ ವರ್ಣನೆಯಾಗಿರದೆ, ಕುಂಜ ನಂಬಿ ಸೆಟ್ಟಿಯ ಧರ್ಮಕಾರ್ಯಗಳನ್ನು ಬಿಂಬಿಸಿದೆ. ಚನ್ನರಾಯ ಪಟ್ಟಣ ತಾಲೂಕಿನ ಕೆಂಬಾಳಿನ ಶಾಸನವು (ಚ.ಪ ೭೨. ಎಕ ೧೦) ಕೇತಮಲ್ಲನಾಯಕಮು ಯುದ್ಧದಲ್ಲಿ ಹೊರಾಡಿ ಮಡಿದಾಗ ಅವನನ್ನು ಅಪ್ಸರೆಯರು ವೀರಸ್ವರ್ಗಕ್ಕೊಯ್ದರೆಂಬುದನ್ನು ಬಣ್ಣಿಸಿದೆ.

ಸುರದುಂದುಮೆಯೆಸೆಯುತ್ತಿರೆ
ಸುರಕನ್ನಯರೊಲುದು ಚಾಮರಂಗಳನಿಕ್ಕಲು
ಕರಮೆಸವಸುರವಿಮಾನದೊ
ಳಿರಲುಯ್ದು ಕೇತಮಲ್ಲ ನಾಯಕನಸುವಂ ॥

ಅರಸಿಕೆರೆ ತಾಲೂಕಿನ ಬಾಣಾವರದ ಶಾಸನವು (ಅಕೆರೆ ೫೫. ಎಕ ೧೦) ಬೆಳ್ಳಿಯದಾಸಿ ಸೆಟ್ಟಿಯ ವಾಣಿಜ್ಯೋದ್ಯಮದ ಬಗೆಗೆ ತಿಳಿಸುತ್ತಾ ಹೀಗೆ ಬಣ್ಣಿಸಿದೆ. ಕವಿ ತ್ರಿವಿಕ್ರಮಪಂಡಿತನು ಮಹಾಸ್ರಗ್ಧರೆ ವೃತ್ತದಲ್ಲಿ ಬಣ್ಣಿಸಿರುವ ಈ ಪದ್ಯವು

ಹರಿದಾಶಾಭಾಂಡಮಂ ವಾರುಣಿಗೆ ನಡಸುವಂ ವಾರುಣೀವಸ್ತುವಂ ವಿ
ಸ್ತರದಿಂದಿಂ ದ್ರಾಶೆಯೋಳ್ಪೆರ್ಚಿಸುವನೊಸೆದು ಕೌಬೇರಿಯಂದುಸ್ಮುಮಂಸೋ
ಡಿರೆಯಾಮ್ಯಾಭಾಗದೊಳ್ ಸಂದಿಸುವನೆಸವಮೋಲ್ಸಂಗಳಂ ಯಾಮ್ಯದಿಂದು
ತ್ತರ ದಿಕ್ಕಿಂಗಟ್ಟುವಂ ನೋಡನುಪಮವಣಿಜಂದಾಸೆಯಂ ದೋಷದೂರಂ ॥

ಕವಿಪ್ರತಿಭೆಗೆ ಸಾಕ್ಷಿಯಾಗಿದೆ.

ಬೇಲೂರಿನ ಹಿರೇಹಳ್ಳಿಶಾಸನವು (ಬೇ ೨೪೦ ಎ.ಕ. ೯) ಆದಿಗಾವುಂಡನ ಗುಣವನ್ನು ಹೀಗೆ ತಿಳಿಸುತ್ತದೆ.

ಹಸಿದರ ಮಗಮಂ ನೋಡಂ।
ಹಸಿವುಂ ನೀರಳ್ಕೆ ಇಲ್ಲ ಕಂಡಡೆ ತಂನಂ
ವಸುಮತಿಗೆನಿಪ ಮಹಾಪ್ರಭು
ವಸುಧೆಯೊಳಾರ್ಸ್ವಮನಾದಿ ಗೌಂಡಿಂಗೆಣೆಯಂ ॥

ಆದಿಗಾವುಂಡನು ಕೆರೆ ಕಟ್ಟಿಸುವುದು ಆರವೆಯನ್ನು ಮಾಡಿಸುವುದು, ಅರವಟ್ಟಿಗೆಯನ್ನು ಇಡಿಸುವುದನ್ನೇ ತನ್ನ ಉದ್ಯೋಗವೆಂದು ಭಾವಿಸಿದ್ದನೆಂದು ಶಾಸನ ಬಣ್ಣಿಸಿದೆ . .

ಹಾಸನ ತಾಲೂಕಿನ ಕೋರಮಂಗಲದ ಶಾಸನವು, ನಾಕರಸನ ಗುಣಗಳನ್ನು ಹೀಗೆ ಬಣ್ಣಿಸಿದೆ(ಹಾ. ೧೩೩)

ವಿರೆದ ಮನುಜಂಗೆ ಸುರಭೂ
ಮಿರುಹಂ ಶರಣೆಂದವಂಗೆ ಕುಲಿಶಾಗಾರಂ।
ಪರವನಿತೆಗೆ ನಿಲತನಯಂ।
ನಿರುಪಮಗುಣಧರ್ಮತತಿಪತಾಕಂ ನಾಕಂ ॥

ಬೇಲೂರು ತಾಲೂಕಿನ ಹಳೇಬೀಡಿನ ಶಾಸನವು (ಬೇ ೩೩೦ ಎ.ಕ. ೯)

ಯತಿಮೂರ್ತಿಯ ಬಲಿ ಪಾಪಸ
ಸುತನುವ ಸುರಧೇನು ವರ್ಣವೇಷದ ನಿಧಿ ವಿ
ಶ್ರುತ ಮುನಿರೂಪದ ಪರುಸಂ।
ಕ್ಷಿತಿಯೊಳಗೀಶಾನ ಶಕ್ತಿ ದಾನವಿನೋದಂ ॥

ಎಂದು ಈಶಾನಶಕ್ತಿಮುನಿಯ ವ್ಯಕ್ತಿತ್ವವನ್ನು ಚಿತ್ರಿಸಿದೆ.

ಕಾವ್ಯಗಳಿಗೆ ಲಾಕ್ಷಣಿಕರು ಹೇಗೆ ಕಟ್ಟುಪಾಡುಗಳನ್ನು ರಚಿಸಿಕೊಟ್ಟು ಉತ್ತಮಕಾವ್ಯಗಳನ್ನು ಗುರುತಿಸುತ್ತಿದ್ದರೋ, ಹಾಗೇ ಶಾಸನಕವಿಗಳು ಶಾಸನರಚನೆಯಲ್ಲಿ ಇರಬೇಕಾದ ಗುಣಲಕ್ಷಣಗಳನ್ನು ಕೆಲವೆಡೆ ತಿಳಿಸಿದ್ದಾರೆ. ಕ್ರಿ.ಶ. ೧೨೦೬ರ ಶಾಸನ ಕವಿ ವಾಮನನೆಂಬುವನು.

**ಶಾಸನಮಾಗಿರೆ ಪೇಳ್ವುದು । ಶಾಸನಮಂ ಬರೆವುದಂತೆ ಶಾಸನಮಾಗಲ್ ॥**
**ಶಾಸನ ಪದ್ಧತಿ ಲಿಖಿತಂ । ಶಾಸನ ಕಾದಂಬರಿ ವಾಮನ ರಚಿತಂ ॥ (ಕಂದ)**

ಎಂದಿದ್ದಾನೆ.

ತುಮಕೂರು ಜಿಲ್ಲೆಯ ಹೆಗ್ಗೆರೆಯ ಶಾಸನವನ್ನು ಬರೆದ ದೇವಭದ್ರಮುನಿಯು ಶಾಸನವು ಉಚಿತ ಪದಾಳಂಕಾರ ಪ್ರಚುರ ರಸಗಳಿಂದ ಕೂಡಿರಬೇಕೆನ್ನುತ್ತಾನೆ. (ಚಿಕ್ಕನಾಯಕನಹಳ್ಳಿ ೨೧.)

ದಾವಣಗೆರೆ ತಾಲೂಕಿನ ಶಾಸನವೊಂದನ್ನು ರಚಿಸಿದ ಈಶ್ವರಾಚಾರ್ಯನೆಂಬುವನು ಶಾಸನರಚನೆಯು ಸಂಕ್ಷಿಪ್ತವಾಗಿ ತಿಳಿಸುವಂತೆ ಇರಬೇಕು ಎನ್ನುತ್ತಾ, ಅವನ ಬಗೆಗೆ ತಿಳಿಸುತ್ತಾ ವಾಚಸ್ಪತಿ ಗರಿದನೆ ಸಂಕೋಚದೆ ಶಾಸನಮನೀಶ್ವರಾಚಾರ್ಯ ಪೇಳ್ದಂ" ಎಂದಿದ್ದಾನೆ.

ಹೊಯ್ಸಳರ ಕಾಲದ ಶಾಸನಗಳಲ್ಲಿ ಅನೇಕ ಜನ ಶಾಸನಕವಿಗಳು, ಶಾಸನಾಂತ್ಯದಲ್ಲಿ ತಮ್ಮ ಪ್ರತಿಭೆ, ಸಾಹಿತ್ಯರಂಗದಲ್ಲಿನ ತಮ್ಮ ಘನತೆಯ ಬಗೆಗೆ ತಿಳಿಸಿದ್ದಾರೆ.

ಅರಸೀಕೆರೆ ತಾಲೂಕಿನ ಶಾಸನಗಳು ವಿಶೇಷವಾಗಿ, ಈ ದಿಸೆಯಲ್ಲಿ ಗಮನಾರ್ಹವಾಗಿವೆ. ಅರಸೀಕೆರೆ (೨೩, ಎ.ಕ. ಸಂ. ೧೦) ಶಾಸನವನ್ನು 'ಕವಿರಾಜ'ನೆನ್ನಿಸಿದ್ದ ದೇವಪಾರ್ಯನೆಂಬವನು ರಚಿಸಿದ್ದಾನೆ. ಇದೇ ಕವಿಯ ಇನ್ನೊಂದು ಶಾಸನ (ಅರಸೀಕೆರೆ ೭೧) ಅರಸೀಕೆರೆಯಲ್ಲಿದೆ.

ಬೊಮ್ಮೇನಹಳ್ಳಿ ಶಾಸನವನ್ನು ಮತ್ತು ಅರಸೀಕೆರೆಯಲ್ಲಿನ ಎರಡು ಶಾಸನಗಳನ್ನು (೭ ಮತ್ತು ೪೪) ಮತ್ತು ಬಾಣಾವರ ಗ್ರಾಮದ (೫೫) ಶಾಸನವನ್ನು ರಚಿಸಿರುವ ಕವಿ ತ್ರಿವಿಕ್ರಮ ಪಂಡಿತ. ಇವನನ್ನು ಶಾಸನವು 'ವಿವೇಕನಿಧಿ', 'ಬುಧನಿಧಿ' ಎಂದೂ ಕರೆದಿದೆ. ಇದೇ ತಾಲೂಕಿನ ಶೆಕ್ಕಂಗೆರೆ ಗ್ರಾಮದ ಶಾಸನವನ್ನು (ಅ.ಕೆರೆ-೧೫೧) ಶಾಂತಿನಾಥ ಪಂಡಿತನು ರಚಿಸಿದ್ದರೆ, ತಳಲೂರಿನ ಶಾಸನವು ವಿಧ್ಯಾಧರನ ರಚನೆಯಾಗಿದೆ. ಹಾರನಹಳ್ಳಿ ಗ್ರಾಮದ ಶಾಸನ (ಅ.ಕೆರೆ-೨೩೨)ವನ್ನು ಆನಂದಬೋಧ ಪ್ರಭುಗಳ ದಾಸನೂ, ಕವಿಕುಳತಿಳಕ, ಕವಿಕಂಠಾಭರಣನೆಂದು ಪ್ರಸಿದ್ಧರಾಗಿದ್ದ 'ಸೋಮನಾಥ ಪಂಡಿತರು' ರಚಿಸಿದ್ದಾರೆ. ಅರಸೀಕೆರೆಯ ಶಾಸನವೊಂದು (ಅ.ಕೆರೆ-೬) ಸತ್ಕವಿ ಮಲ್ಲಣ್ಣ ಪಂಡಿತನ ರಚನೆಯಾಗಿದೆ. ಚನ್ನರಾಯಪಟ್ಟಣದ ಶಾಸನವನ್ನು (ಚ.ಪ.-೧) ಜಾವಣಿ ಪಂಡಿತರು ರಚಿಸಿದ್ದಾರೆ. ಅರಸಿಕೆರೆಯ ಕಣಕಟ್ಟೆ ಗ್ರಾಮದ ಶಾಸನವನ್ನು (ಅ.ಕೆರೆ-೪೮) ರಚಿಸಿದ ಶಾಂತಿನಾಥ ಒಬ್ಬ ಪ್ರೌಢಕವಿ. ಇವನು ನಾಗಮಂಗಲದ ಲಾಲನಕೆರೆ ಗ್ರಾಮದ ಶಾಸನವನ್ನು (ನಾ.ಮಂ-೬೩) ರಚಿಸಿದ್ದಾನೆ; ಈ ಕವಿಯ ಲಾಕ್ಷಣಕವಿ, ಶಾಂತಿನಾಥ ಕವಿಕುಳತಿಳಕ, ದಾಕ್ಷಿಣ್ಯನಿಧಿ, ಗುಣೋತ್ಕರ ಶಿಕ್ಷಾಗುರು ಎಂದು ಹೇಳಿಕೊಂಡಿದ್ದಾನೆ.

ಅರಸೀಕೆರೆ ತಾಲೂಕಿನ ಹಲಕೂರಿನ ಶಾಸನ (ಜಯಚಾಮರಾಜಪುರ)ವನ್ನು ರಚಿಸಿದವನು. ಸತ್ಕವಿ ಸಾಂತಮಹಂತ (ಅ.ಕೆರೆ-೯೬) ಇವನು ಸೋಮಿಯಕ್ಕನಣುಗಿನ ಪುತ್ರ, ಸತ್ಕವಿ ಎಂದು ಹೇಳಿದ್ದು. ಇವನು ಲಾಲಕೆರೆಯ ಮತ್ತೊಂದು ಶಾಸನವನ್ನು (ನಾ.ಮಂ-೬೦) ರಚಿಸಿದ್ದಾನೆ. ಚನ್ನರಾಯಪಟ್ನ ತಾಲೂಕಿನ ನವಿಲೆ ಗ್ರಾಮದ ಶಾಸನವನ್ನು ಬರೆದ ಕವಿ – "ಅಭಿನವ ಸರ್ವಜ್ಞನೆನಿಸಿದ್ದ ಕವಿ ಸೋಮೇಶ್ವರ ಭಟ್ಟ, ಈ ಕವಿಗಳೆಲ್ಲ ಸಾಮಾನ್ಯವಾಗಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯ ಹೊಂದಿದ್ದು ಶಾಸನಗಳಲ್ಲಿ ಹಲವೆಡೆ ಸಂಸ್ಕೃತ ಶ್ಲೋಕಗಳನ್ನು ರಚಿಸಿದ್ದಾರೆ. ಸಂಸ್ಕೃತ ಛಂದಸ್ಸುಗಳನ್ನು ಬಳಸಿರುವುದು ಕಾಣಬರುತ್ತದೆ.

ಅರಕಲಗೂಡು ತಾಲೂಕಿನ ಸೂಳಗೋಡು ಸೋಮವಾರ ಗ್ರಾಮದ ಶಾಸನವನ್ನು ರಚಿಸಿದ ಕವಿ ಶ್ರೀರಾಜೇಂದ್ರಪೃಥ್ವೀ ಕೊಂಗಾಳ್ವನ ಸಂಧಿ ವಿಗ್ರಹಿಯಾಗಿದ್ದ, ಚತುರ್ಭಾಷಾಲಿಖಿತ್ಥಕ ವಿದ್ಯಾಧರ ನೆನಿಸಿದ್ದ ನಕುಳಾರ್ಯನೆಂಬುವನು (ಅ.ಗೂಡು-೧೩೩. ಎ.ಕ. ೮); ಹೊಳೆನರಸೀಪುರ ತಾಲೂಕಿನ ತೆರಣ್ಯ ಗ್ರಾಮದ ಶಾಸನವು ಸತ್ಕವಿ ಭಾಸ್ಕರ ಪಂಡಿತನ ರಚನೆ(ಹೊ.ನ.-೮೯ ಅದೇ). ಹೀಗೆ ನೂರಾರು ಶಾಸನಗಳು ಕಾವ್ಯ ಸೌಂದರ್ಯವುಳ್ಳದ್ದಾಗಿವೆ. ಇಲ್ಲಿ ಕೆಲವು ಶಾಸನೋಕ್ತ ಕವಿಗಳ ಉಲ್ಲೇಖಗಳನ್ನು ಗಮನಿಸಲಾಗಿದೆ. ಆದರೆ ಕೆಲವು ಶಾಸನಗಳ ಕವಿಗಳು ತಮ್ಮ ಹೆಸರನ್ನು ದಾಖಲಿಸದೇ ಅನಾಮಿಕರಾಗೇ ಉಳಿದಿದ್ದಾರ. ಅರಸಿಕೆರೆ ತಾಲೂಕಿನ ಬೆಂಡೆಕೆರೆ ಶಾಸನ (ಅಕೆ-೫೨), ಕುರುವಂಶ ಗ್ರಾಮದ ಶಾಸನ (ಅಕೆ-೫೯), ಬೆಳಗುಂಬದ ಶಾಸನ (ಅಕೆ-೧೭೫), ಹುಲ್ಲೇಕೆರೆ ಶಾಸನ (ಅ.ಕೆ.-೧೮೪), ಮುರುಂತಿಗ್ರಾಮದ ಶಾಸನ (ಅ.ಕೆ-೨೨೭), ಅರಕೆರೆ ಗ್ರಾಮದ ಶಾಸನ (ಅಕೆ-೩೧೪), ಹಿರಿಯೂರಿನ ಶಾಸನ (ಅಕೆ-೩೧೭), ಬೇಲೂರಿನ ಶಾಸನ (ಬೇಲೂರು-೧೬. ಎಕ. ೯), ಬೇಲೂರು ತಾಲೂಕಿನ ಮಾರೇನಹಳ್ಳಿ ಶಾಸನ (ಬೇ.೨೪೪.ಅದೇ), ಹಳೇಬೀಡಿನ ಕುವರ ಲಕ್ಷ್ಮನಶಾಸನ (ಬೇ.೩೦೦.ಅದೇ), ಬಸ್ತಿಹಳ್ಳಿಯ ಶಾಸನ (ಬೇ.೩೮೯), ಬೆಳವಾಡಿಶಾಸನ (ಬೇ.೫೬೦), ಹಾಸನ ತಾಲೂಕಿನ ನಿಟ್ಟೂರಿನ ವೀರಗಲ್ಲುಶಾಸನ (ಹಾ. ೬೯, ಎಕ. ೮), ಕೋರಮಂಗಲದ ಶಾಸನ (ಹಾ. ೧೩೩. ಎಕ. ೮), ಹಾಸನ ತಾಲೂಕಿನ ಮುದುಗೆರೆ ಶಾಸನ (ಹಾ. ೧೪೨. ಎಕ. ೮), ಮುಂತಾದವನ್ನು ಗಮನಿಸಬಹುದು.

ಕಲ್ಲಿನಲ್ಲಿ ಕೆತ್ತುವವರು ತಮ್ಮ ಘನತೆಯನ್ನು ಹೇಳಿಕೊಳ್ಳುತ್ತಿದ್ದರು. ಅರಸೀಕೆರೆ ಶಾಸನವೊಂದನ್ನು ಬರೆದ ಬಸವರಾಜನೆಂಬುವನು - (ಅಕೆರೆ-೨೩;ಎಕ.೧೦).

**"ಸಮವ್ಯಕ್ತಶ್ರೋತಂಗಳು**
**ಸಮಸ್ತ ಸಂಪತ್ಕರಂಗಳತಿನಿಬಿಡಂಗಳು**
**ಕಮನೀಯ ಮೃದುಸುರೇಖಾ**
**ರಮಣಂಗಳು ನೆಗಳ್ದ ಬಸವರಾಜನ ಬರಹಂ"**

ಎಂದು ಹೇಳಿಕೊಂಡಿದ್ದಾನೆ. ಅವನ ಬರವಣಿಗೆ ಅತಿನಿಬಿಡವಾದ ಅಕ್ಷರಗಳುಳ್ಳ ಸುಂದರವಾದ ಮೃದು ಸುರೇಖೆಗಳಿಂದ ಕೂಡಿತ್ತಂತೆ.

'ಬರೆವರಾಚಾರ್ಯ', 'ಬಿರುದಲೇಖಕ ಮದನಮಹೇಶ್ವರ' ಬಿರುದುಗಳನ್ನು ಹೊಂದಿದ್ದ ಸೂರ್ಯಣ ಎಂಬುವನು ವೀರಬಲ್ಲಾಳದೇವನ ಕಾಲದ ಅನೇಕ ಶಾಸನಗಳನ್ನು ಬರೆದಿದ್ದಾನೆ. ಅರಸಿಕೆರೆ ತಾಲೂಕಿನ ಹಲಕೂರಿನ ಶಾಸನ (ಅಕೆರೆ-೯೮), ಚನ್ನರಾಯಪಟ್ಟಣದ ಶಾಸನ (ಚ.ಪ-೧, ಎಕ. ೧೦), ಬೇಲೂರಿನ ಚೆನ್ನಕೇಶವ ದೇವಾಲಯದ ತಾಮ್ರಶಾಸನ (ಬೇ.-೧೬೮), ಅದೇ ತಾಲೂಕಿನ ವೀರದೇವನಹಳ್ಳಿ ಶಾಸನವನ್ನು (ಬೇ-೪೩೮, ಅದೇ), ಈ ಸೂರ್ಯಣ ಬರೆದಿದ್ದಾನೆ ಎಂದು ತಿಳಿಯುತ್ತದೆ.

ಅರಸೀಕೆರೆ ತಾಲೂಕಿನ ಹಾರನಹಳ್ಳಿ ಶಾಸನವನ್ನು (ಅಕೆರೆ-೨೩೩, ಎಕ. ೧೦) 'ಉಭಯಹಸ್ತ ಲೇಖನ ಕುಶಲ ನವದಾನ ಚಕ್ರವರ್ತಿ' ವಿಶ್ವನಾಥನು ಬರೆದಿದ್ದಾನೆ. ಇದರಿಂದ ವಿಶ್ವನಾಥನು ಎರಡೂ ಕೈಗಳಲ್ಲಿ ಬರೆಯಬಲ್ಲವನೆಂದು ತಿಳಿಯುತ್ತದೆ. ಇದರಂತೆ ತಳಲೂರಿನ ಶಾಸನವು 'ಸುಜನಜನಮಿತ್ರ ರೇಚಣ'ನ ಶೀಘ್ರಲಿಖಿತವಾಗಿದೆ. (ಅಕೆರೆ-೧೬೪) ಇವನು ಮಹಾಯೋಗೇಶ್ವರ ಬ್ರಹ್ಮಾನಂದ ಸ್ವಾಮಿಗಳ ಸುಪುತ್ರನಾಗಿದ್ದನು. ಇವನು ಬೇಲೂರಿನ ದಬ್ಬೇ ಅಗ್ರಹಾರದ ಶಾಸನವನ್ನು ಬರೆದಿದ್ದಾನೆ. (ಬೇ. ೧೯೧, ಎಕ. ೯)

ಹಳೇಬೀಡಿನ ಕುವರಲಕ್ಷ್ಮನ ಶಾಸನದ ಕವಿ ಲಕ್ಷ್ಮನು ತೊಟ್ಟಿದ್ದ ಗಂಡ ಪೆಂಡೇರವನ್ನು "ಮುತ್ತಿನ ಪೆಂಡೆಯುಂ ಮುರಹರಂ ಕನಕಾದ್ರಿಯೊಳಂದು ಶೇಷನಂ ಸುತ್ತಿದ ಭಂಗಿಯಿಂದ ಮೆಸೆದಿರ್ಪುದು" ಎನ್ನುತ್ತಾನೆ. (ಬೇ. ೩೦೦. ಎಕ. ಸಂ.೯) ಶಿಕಾರಿಪುರ ತಾಲೂಕಿನ ಕೋಡಿಮಠದ ಶಾಸನ ಕವಿ ಬಿಜ್ಜಳರಾಯನ ಮಂತ್ರಿಯಾಗಿದ್ದ ರವಿ ದೇವನನ್ನು ರವಿದೇವನ ಮಂತ್ರಾಲೋಚನೆಯಿಂದ ಉಳಿದ ಮಂತ್ರಿಗಳ ಮುಖ ಕಮಲಗಳು ಅರಳುತ್ತವೆ. ಕರಕಮಲಗಳು ಮುಚ್ಚಿಕೊಳ್ಳುತ್ತವೆ.

ಬಮ್ಮರಸನ ರಾಜ್ಯದಲ್ಲೆಲ್ಲೆಡೆ ಬ್ರಾಹ್ಮಣರ, ದೇವತೆಗಳ ಕಣ್ಣುಗಳು ಅಚ್ಚರಿಯಿಂದ ಅರಳುತ್ತವೆ ಎಂದು ಹೇಳುತ್ತ ನಿಸರ್ಗದ ಸೂರ್ಯದೇವನಿಗಿಂತ ರವಿದೇವನ ತೇಜಃಪ್ರಭಾವ ಹೆಚ್ಚಿನದೆಂಬಂತೆ ಬಣ್ಣಿಸಿದ್ದಾನೆ. (ಶಿಕಾ.ಪುರ. ೧೦೨, ಎಕ. ಸಂ. ೮) ದಾನಗಳಲ್ಲಿ ಅನ್ನದಾನವೇ ಶ್ರೇಷ್ಠವೆಂದು ತಿಳಿದು ಜಕ್ಕಿಯಬ್ಬೆ ಅನ್ನಸತ್ರಕ್ಕೆ ಭೂಮಿದಾನ ಮಾಡಿದಳೆಂದು ಶಾಸನವೊಂದು ತಿಳಿಸಿದೆ. (ತೀರ್ಥಹಳ್ಳಿ ಎಕ. ೧೧) ಶಂಕರಸ್ವಾಮಿಯ ವ್ಯಕ್ತಿತ್ವವನ್ನು ಶಾಸನವು,

"ಬಗೆ ಸಾಹಿತ್ಯರಸಪೂರ್ಣ ವಿಪುಳಸ್ರೋತಂ ಶ್ರುತಂ ವಾಗ್ವಧೂ
ಟಗೆ ಕೈಗನ್ನಡಿ ಸೂಕ್ತಿಸೂನೃತ ಸುಧಾವಾರಾಶಿ ಮುಕ್ತಾಳಿ ನಾ
ಲಗೆ ಸಾರಸ್ವತ ಪೀಠಮಾರ್ಪು ವರವಿಪ್ರವ್ರಾತ ವಿದ್ವಜ್ಜನಾ
ಳಿಗೆ ಕಲ್ಪದ್ರುಮಮೆಂದು ಧಾತ್ರಿ ಪೊಗಳುಂ ಶ್ರೀಶಂಕರ ಸ್ವಾಮಿಯಂ"

ಎಂದು ಬಣ್ಣಿಸಿದೆ.

ಹಳೇಬೀಡಿನ ಬಸ್ತಿಹಳ್ಳಿಯ ಶಾಸನವೊಂದು (ಬೇ. ೩೮೯, ಎಕ. ೯) ಗಂಗರಾಜನ ಮನೋಭಾವವನ್ನು ಹೀಗೆ ಬಣ್ಣಿಸಿದೆ. ಇದು ಅವನ ಜಿನಭಕ್ತಿಯ ಉತ್ಕೃಷ್ಠತೆಯನ್ನು ತೋರಿಸಿರುವ ಶಿಖರದಂತಿದೆ.

ನುಡಿತೊದಳಾದೊಡೊಂದು ಪೊಣರ್ವಂಜಿದೊಡಂತೆರಡನ್ಯನಾರಿಯೊ
ಳ್ನುಡಿಗೆಡೆಯಾಗೆ ಮೂಱುಮಱಿವೊಕ್ಕರನೊಪ್ಪಿಸೆನಾಲ್ಕು ಬೇಡಿದಂ
ಪಡೆಯದೊಡೈಯ್ದು ಕೂಡಿದೆಡೆಗೋಗದೊಡಾಱಧಿಪಂಗೆ ತಪ್ಪಿಬ
ರ್ದ್ದಡೆಗಡಿವೇಳು ವೇಳುನರಕಂಗಳಿವೆಂದಪನಲ್ತೆ ಗಂಗಣಂ ॥

ಹಾಸನದ ಶಾಂತಿಗ್ರಾಮದ ಶಾಸನವು (ಹಾಸನ.೧೫೮, ಎಕ. ೮) ಅಚಲ ಪ್ರಕಾಶ ಮುನಿಗಳ ವ್ಯಕ್ತಿತ್ವವನ್ನು ಹೀಗೆ ಬಣ್ಣಿಸಿದೆ.

ಹರಿಹಂಸಂ ರವಿಹಂಸನಂಚ್ಚೆ ಖಗರಾಜಂ ನಾಮದಿಂ ಹಂಸ ನೆಂ
ಬರವಂ ತಾಳ್ದಿವನೊಚ್ಚತಂ ಪರಮಹಂಸಂ ಸನ್ಮುನೀಂದ್ರಾಂಬುಜೋ
ತ್ಕರ ಹಂಸಂ ಕುಸ್ಮಾಸ್ತ್ರ ಸಂತಮಸಹಂಸಂ ಯೋಗ್ಯರಕ್ಷೈಕ ತತ್ವ
ರಹಂಸಂ ಪೆಸರಿಂದಮಂತೆಸದರಾರು ವಿಶ್ವಂಭರಾಭಾಗದೊಳೊ ॥

ಶಾಸನ ಕವಿಗಳ ಮೇಲಾಗಿರುವ ಬೇರೆ ಕವಿಗಳ ಹಾಗೂ ಕಾವ್ಯಗಳ ಪ್ರಭಾವವನ್ನು ಹೊಯ್ಸಳರ ಶಾಸನಗಳಲ್ಲಿ ಹಲವೆಡೆ ಕಾಣುತ್ತೇವೆ. ಶಾಸನ ಕವಿಗಳು ಅವರಿಗೆ ಮೆಚ್ಚಿಗೆಯಾದ ಕವಿಯ ಸುಂದರ ಪದ್ಯಗಳನ್ನು ಅನುಕರಿಸಿ ಪದ್ಯಗಳನ್ನು ರಚಿಸಿದ್ದಾರೆ. ಕೆಲವೆಡೆ ಮೆಚ್ಚಿಗೆಯಾದ ಪದ್ಯವನ್ನು ಸೂಕ್ತಕಂಡಲ್ಲಿ ಬಳಸಿದ್ದಾರೆ. ಇಂಥ ಶಾಸನ ಪದಗಳು ಕಾವ್ಯದ ಪಾಠ ಪರಿಷ್ಕರಣೆ ಮಾಡುವಲ್ಲಿ ನೆರವಾಗುತ್ತದೆ. ಆ ಪೂರ್ವಕವಿಯ ಕಾಲ ನಿಷ್ಕರ್ಷೆಗೂ ಇವು ಉತ್ತಮ ಆಧಾರಗಳಾಗುತ್ತವೆ. ಶಾಸನಗಳಲ್ಲಿ ಕಾಣಬರುವ ಕೆಲವು ಸಂಗತಿಗಳನ್ನಿಲ್ಲಿ ಗಮನಿಸಲಾಗಿದೆ;

ಬೇಲೂರು ತಾಲೂಕಿನ ಬಸ್ತಿಹಳ್ಳಿಯ ಶಾಸನವು ಈ ದಿಸೆಯಲ್ಲಿ ವಿಶಿಷ್ಟಶಾಸನವಾಗಿದೆ. (ಬೇ.೪೦೩, ಎಕ. ೯) ಈ ಶಾಸನದ ಆರಂಭದಲ್ಲಿ ಕವಿಯು

ಶ್ರೀದೇವೇಂದ್ರನತಶ್ರೀ
ಪಾದಂ ಶ್ರೀಪದವಿನಮ್ರ ಭವ್ಯಜನಂಗ
ಳ್ಗಾದರದಿಂ ದಯೆಗೆಯ್ಗೆ ಶು
ಭೋದಯಮಂ ಮುಕ್ತಿವಲ್ಲಭಂ ಮಲ್ಲಿಜಿನಂ ॥

ಎಂದೂ ಪ್ರಾರ್ಥಿಸಿದ್ದಾನೆ. ಈ ಪದ್ಯವು ಚಾವುಂಡ ರಾಯನು ಬರೆದ "ತ್ರಿಷಷ್ಠಿ ಲಕ್ಷಣ ಮಹಾಪುರಾಣಂ" ಕಾವ್ಯದ ಪದ್ಯವಾಗಿದೆ.

ಇದರ ಮುಂದಿನ ಪದ್ಯವು

**ಮುನಿಜನದೋದಿಸಿದೋಜಯ**

**– – – – – – – – – – –**

**– – – – – – – – – – –**

**– – – –ಕರುಣದಿಮ್ಮುನಿನವಹಂ ॥**

ಎಂಬ ಪದ್ಯವು ಪಂಪನ ಆದಿಪುರಾಣದಿಂದ ಆಯ್ದ ಭಾಗವಾಗಿದೆ. ಈ ಎರಡೂ ಪದ್ಯಗಳ ಪಾಠಗಳು ಉಪಲಬ್ಧವಿರುವ ಆಯಾಗ್ರಂಥಗಳ ಎಲ್ಲ ಹಸ್ತಪ್ರತಿಗಳಿಗಿಂತಲೂ ಪುರಾತನವಾಗಿದ್ದು, ಪಾಠ ನಿಷ್ಕರ್ಷಿಸುವಲ್ಲಿ ಹೆಚ್ಚು ಉಪಯುಕ್ತವಾಗಿವೆ. ಇದರಂತೆ "ಮುನಿನಾಥಂ ದಶಧರ್ಮಧಾರಿ . . . . ' ಎಂದು ಮೇಘಚಂದ್ರ ಯತಿಯನ್ನು ಸ್ತುತಿಸುವ ಪದ್ಯವು ನಾಗಚಂದ್ರ ಕವಿಯ ಪಂಪ ರಾಮಾಯಣದ (ರಾಮಚಂದ್ರಚರಿತ ಪುರಾಣಂ) ಪದ್ಯವಾಗಿದೆ. ಪ್ರಸಿದ್ಧವಾದ ಈ ಪದ್ಯಭಾಗವನ್ನು ಶ್ರವಣಬೆಳ್ಗೊಳದ ಶಾಸನ ೧೨೭ ರಲ್ಲಿ ಬಳಸ ಲಾಗಿದೆ. ಇದರಂತೆ "ಪ್ರಚುರಕಲಾನ್ವಿತ . . . . . . " ಎಂದು ಬಾಲಚಂದ್ರ ಮುನಿಯನ್ನು ಸ್ತುತಿಸಿರುವ ಪದ್ಯವೂ ಪಂಪರಾಮಾಯಣದ ಭಾಗವಾಗಿದೆ. ನಾಗಚಂದ್ರ ಕವಿಯ ಕಾಲನಿಷ್ಕರ್ಷೆಯಲ್ಲಿ ಈ ಶಾಸನವು ಮಹತ್ವದ್ದಾಗಿದೆ.

ಇದರಂತೆ ಮಾಘಣಂದಿ ಸಿದ್ಧಾಂತ ದೇವರನ್ನು ಬಣ್ಣಿಸಿರುವ ಪದ್ಯವನ್ನು ಕ್ರಿ.ಶ. ೧೧೬೩ರ ಶ್ರವಣಬೆಳ್ಗೊಳದ ಶಾಸನವು (ಶ್ರಬೆ. ೭೧) ದಾಖಲಿಸಿದೆ. ಈ ಪದ್ಯವು ಹಳೇಬೀಡಿನ ಶಾಸನ (ಬೇ. ४೦೫) ಅರಕಲಗೂಡು, ಮಳಲಕೆರೆ ಶಾಸನಗಳಲ್ಲೂ ಕಾಣಬರುತ್ತದೆ. ಈ ಪದ್ಯವನ್ನು ಕವಿ ಕಮಲಭವನು ಶಾಂತೀಶ್ವರಪುರಾಣದ 'ಸ್ತುತಿಪದ್ಯಗಳಲ್ಲೂ' ಸೇರಿಸಿಕೊಂಡಿರುವುದನ್ನು ಕಾಣುತ್ತೇವೆ. (ಆ. ೧–ಪ ೨೭) ಇಲ್ಲಿ ಶಾಸನ ಕವಿಯ ಪದ್ಯವನ್ನು ಕವಿಕಮಲಭವ ಸ್ವೀಕರಿಸಿದ್ದಾನ.

ಮಂಡ್ಯ ಜಿಲ್ಲೆಯ ಬಸರಾಳಿನ ಶಾಸನದಲ್ಲಿ ಕಾಣಬರುವ ಈ ಪದ್ಯವು –

"ಮುನ್ನಂ ರೂಢಿಯ ಕೃಷ್ಣಕಂಧರನುಮಂ ಮಾರ್ಕ್ಕೊಂಡು ಚೋಳೋರ್ವಿಯಂ . . . . . " ಕವಿ ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಸಂಗ್ರಹಿಸಿದ ಪದ್ಯವಾಗಿದೆ. (ಸೂಸು–೧–೨೧) ಈ ಪದ್ಯವನ್ನು ಆಧರಿಸಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರಸಿದ್ಧನಾದ ಮಲ್ಲಿಕಾರ್ಜುನನೂ, ಶಾಸನ ಬರೆಸಿದ ಚಿದಾನಂದನೂ ಒಬ್ಬನೇ ಎನ್ನುವ ತೀರ್ಮಾನಕ್ಕೆ ಬರಲಾಗಿದೆ. (ಪೀಠಿಕೆ. ಎಕ. ಸಂ. ೭, ಪು. ಖಫು) ಹೀಗೆ ಶಾಸನದ ಸಾಹಿತ್ಯಕ ಅಂಶಗಳನ್ನು ಗಮನಿಸಿದರೆ, ಶಾಸನಗಳು ಮತ್ತು ಸಾಹಿತ್ಯಕೃತಿಗಳು ಪರಸ್ಪರ ಪೂರಕವಾಗಿರುವುದನ್ನು ಕಾಣುತ್ತೇವೆ.

ಕವಿ ಜನ್ನನು ಬರೆದ ಅಮೃತಾಪುರದ ಶಾಸನದಲ್ಲಿ ಕಲಿಯಣ್ಣನ ಗುಣಾತಿಶಯವನ್ನು

**ಚಲದೊಳಭಿಮಾನದೊಳ್ಸ**
**ತ್ಕುಲದೊಳ್ ಸತ್ಯದೊಳುದಾರದೊಳ್ ।**
**ಕಲಿಯಣ್ಣಂ ನೆಗಲ್ದಪ್ಪಂ**
**ಕಲಿಯಣ್ಣಂ ಲೋಕದೊಳಗೆ ಕೃತಯುಗ ಚರಿತಂ ॥**

ಎಂದು ಬಣ್ಣಿಸಿದ್ದಾನೆ. ಈ ಪದ್ಯದ ಮೊದಲ ಸಾಲುಗಳಲ್ಲಿ ಪಂಪನ ವಿಕ್ರಮಾರ್ಜುನ ವಿಜಯದ ಸಾಲುಗಳ ಛಾಯೆಯನ್ನು ಕಾಣುತ್ತೇವೆ. (ತರೀಕೆರೆ ೧೨, ಎಕ. ಸಂ. ೧೨)

ಹೊಯ್ಸಳರ ಶಾಸನಗಳನ್ನು ಗಮನಿಸಿದರೆ ಅನೇಕ ಶಾಸನಗಳಲ್ಲಿ ಶಾಸನ ಕವಿಗಳೇ ಪದ್ಯಭಾಗಗಳ ಛಂದಸ್ಸನ್ನು ಗುರುತಿಸಿ ಬರೆದಿದ್ದಾರೆ. ಕಾವ್ಯದಲ್ಲಿ ಕಾಣಸಿಗುವ ವಿವಿಧ ಛಂದೋಪ್ರಕಾರಗಳನ್ನು ಶಾಸನ ಕವಿಗಳು ಬಳಸಿದ್ದಾರೆ. ಕೆಲವು ಉದಾಹರಣೆಗಳನ್ನಿಲ್ಲಿ ಗಮನಿಸಲಾಗಿದೆ. ತ್ರಿವಿಕ್ರಮಭಟ್ಟನೆಂಬ ಕವಿ ಬಾಣಾವರದ ಶಾಸನದಲ್ಲಿ ದಾಸಿಸೆಟ್ಟಿಯ ಹೆಂಡತಿಪೋಚಲೆಯನ್ನು (ಅ.ಕೆರೆ–೫೫)

**'ಕಮಳಮುಖಿ ಕಮಳಲೋಚನೆ**
**ಕಮಳಾಸವೆ ಸಾಧ್ವಿ ಸಕಲ ಸಕಲಗುಣಯುತೆ**

**ರೂಪಪ್ರಮದೆ ವಿಭುದಾಸಿ**
**ಸೆಟ್ಟಿಯ ರಮಣಿ ಮಹಾದಾನಿ ಪೋಚಲೆಯೆಸೆವಳ್'**

ಎಂದು ಬಣ್ಣಿಸಿ ಅವಳನ್ನು ಲಕ್ಷ್ಮಿಯೊಂದಿಗೆ ಸಮೀಕರಿಸಿದ್ದಾನೆ. ಹಲಕೂರಿನ ಶಾಸನದಲ್ಲಿ ವಿಷ್ಣುವರ್ಧನನ ರಾಣಿ ಬಮ್ಮಲಾದೇವಿಯನ್ನು ಕವಿಯೊಬ್ಬ ಹೀಗೆ ಬಣ್ಣಿಸಿದ್ದಾನೆ. (ಅಕೆರೆ ೯೬)

**ಮಲಮಲದು ಮಲೆದು ಮಲೆಪರ**
**ಕುಲಮಲ ಬೇರ್ವೆರಸಿ ಕಿತ್ತುಬಂಮಲೆ ಮುಂದದಿಂ**
**ಘಲಘಲಕು ಘಲಕು ಘಲಕೆ ನ**
**ಲಲೆವಳು ಪರಸತಿಯರ ವರ ಕೀರ್ತ್ಯೋನತಿಯಂ ॥**

ಈ ಭಾಗದಲ್ಲಿನ ಶಬ್ದಾಲಂಕಾರದ ಸೊಗಸನ್ನು ಗಮನಿಸಬಹುದು.

ಚನ್ನರಾಯ ಪಟ್ಟಣ ತಾಲೂಕಿನ ಆನೆಕೆರೆ ತಾಮ್ರಶಾನವನ್ನು ರಚಿಸಿದ ಕವಿ ಜನ್ನನು ಶಾಸನಾ ರಂಭದಲ್ಲಿ ವರಾಹ ದೇವನನ್ನು ಸ್ತುತಿಸಿದ ಈ ಪದ್ಯವು ಗಮನಾರ್ಹವಾಗಿದೆ.

**ಶ್ರೀ ವಧುವಿಂಗೆ ಪೀಲಿದಪೆಯರ್ಪವೊಲಿರ್ದ್ದುದು ಕೋಡೊಳಿರ್ದ್ದಧಾ**
**ತ್ರಿ ವಳಯಂ ಸಮುದ್ರಮದುಝಲ್ಲರಿಯಿರ್ಪ ವೊಲಿರ್ದ್ದುದಾಂತದಂ**
**ಷ್ಟ್ರಾವರಶೋಭೆ ತ್ತೆತ್ತಿಸಿದ ಮುತ್ತಿನ ಕಾವುವೊಲಿರ್ದ್ದದಿಂತು ಸ**
**ದ್ಭಾವಮುನಾಳ್ದ ಸೂಕರವರಂ ಪೊರಗೀ ಗಿರಿದುರ್ಗಮಲ್ಲನಂ ॥**

ಈ ಪದ್ಯದಲ್ಲಿ ಕವಿ ವರಾಹಸ್ವಾಮಿಗೂ ತನ್ನ ದೊರೆ ವೀರಬಲ್ಲಾಳದೇವನಿಗೂ ಹೊಂದುವಂತೆ ಶ್ಲೇಷಾಲಂಕಾರವನ್ನು ಬಳಸಿ ಪದ್ಯ ರಚಸಿದ್ದಾನೆ. ಇದಲ್ಲದೇ ರಾಜರ ಗುಣಾತಿಶಯವನ್ನು ಬಳಸುವಲ್ಲಿ ಬಿರುದಾವಳಿಗಳು ಉಪಮಾ ರೂಪಕಾಲಂಕಾರಗಳ ಬಳಕೆ ಎಲ್ಲೆಡೆ ಕಾಣಸಿಗುತ್ತವೆ. ಚಿಕ್ಕಮಗಳೂರು ತಾಲೂಕಿನ ಸಿಂಧಗಿರಿಯ ಶಾಸನ ಕವಿಯು 'ಸಂವತ್ಸರಾಖ್ಯ ಸಂಯೋಜನೆ' ಎಂಬ ಶ್ಲೇಸಾಲಂಕಾರವನ್ನು ಬಳಸಿದ್ದಾನೆ. (ಚಿ. ಮಂ ೨೧೧. ಎಕ ೧೨) ಈ ಪದ್ಯವು

**ಪ್ರಭವಸುಗೆ ವಿಭವವಿಶ್ವರ**
**ನಿಭ ಮೂರ್ತಿ ವಿರೋಧಿವಿಕ್ರಮ ಕ್ಷಯ ಕೇತನ**
**ಶುಭ ಕೃದ್ಗುಣ ನಿನಗೆ ಚಮೂ**
**ಪ್ರಭು ಭರತ ಸಹಸವತ್ತರಂಪುಗುವಿನಿನೆಗಂ ॥**

ಎಂದಿದೆ ಚಿಕ್ಕಮಗಳೂರು ತಾಲೂಕಿನ ಚಿತ್ತವಳ್ಳಿ ಗ್ರಾಮದ ಶಾಸನದಲ್ಲಿ (ಚಿ.ಮಂ.೧೨೯ ಎಕ ೧೨) ಕವಿ 'ತ್ರಿಪದಿ' ಛಂದಸ್ಸನ್ನು ಬಳಸಿದ್ದಾನೆ. ಇದರಂತೆ ಕಡೂರುತಾಲೂಕಿನ ಆಸಂದಿಗ್ರಾಮದ ಶಾಸನವು (ಕಡೂರು ೧೬ ಎಕ ೧೨) ಹೊಯ್ಸಳದೊರೆ ನಾರಸಿಂಹದೇವನನ್ನು ಹೀಗೆ ಬಣ್ಣಿಸಿದೆ.

**ಅರಿಭೂಪಾಳ ಶಿರಂಗಳಿಂದೆ ಸೊರೆಯಂತದ್ಬಾಹುಸಂದೋಹದಿಂ**
**ಕರೆಯಂ ದಂಡಿಗೆ ಮಾಡಿ ಬೆನ್ನೆಸೆವ ಬೀವಿಂ ತಂತಿಯಂ ಕಟ್ಟಿತ**
**ದ್ಧುರದೊಳ್ ಪಾಡುತಮಿರ್ಪಳೊಲ್ದು ನಲವಿಂ ಶ್ರೀಕಾಂತೆಯಾನಂದದಿಂ**
**ಧರಣೀಶೋತ್ತಮ ನಾರಸಿಂಹ ನೃಪನಂ ಸದ್ಭಾವದಿಂ ಸಂತತಂ ॥**

ಈ ಪದ್ಯವನ್ನು ಓದುತ್ತಿದ್ದಂತೆ ಸಾಹಿತ್ಯಭ್ಯಾಸಿಗಳಿಗೆ ಬಸವಣ್ಣನವರ ವಚನ "ಎನ್ನಕಾಯವದಂಡಿಗಯಮಾಡಯ್ಯ ಎನ್ನ ಶಿರವ ಸೋರೆಯ ಮಾಡಯ್ಯ । ಎನ್ನನರವತಂತಿಯ ಮಾಡಯ್ಯ . . . . ಕೂಡಲಸಂಗಮದೇವ । ಥಟ್ಟನೆ ನೆನಪಾಗುತ್ತದೆ ; ಈ ವಚನದ ಪಡಿನೆರಳನಂತಿದೆ ಮೇಲಿನ ಪದ್ಯವೆನ್ನುವುದರಲ್ಲಿ ಸಂಶಯವಿಲ್ಲ. ಹೀಗೆಯೇ ವಚನದ ಪ್ರಭಾವದಿಂದ ರಚಿತವಾದ ಹೊಳೆನರಸೀಪುರ ತಾಲೂಕಿನ ಮಾವನೂರಿನ ಶಾಸನವು ಗಮನಾರ್ಹವಾಗಿದೆ; ಈ ಶಾಸನವು ಗದ್ಯರೂಪದಲ್ಲಿದ್ದು ಕವಿ ಹರಿಹರನ ರಗಳೆಗಳಲ್ಲಿನ ಗದ್ಯಭಾಗದ ಸೊಗಸನ್ನು ಬಿಂಬಿಸುತ್ತದೆ. ಅಪ್ಪಯ್ಯದೇವ ಅರಸರನ್ನು ಬಣ್ಣಿಸುತ್ತಾ ಶಾಸನವು – "ತಿಲಮದ್ಯದೊಳಿಪ್ಪ ತೈಲದಂತೆ । ಕಾಷ್ಟಮಧ್ಯದೊಳಿಪ್ಪ ಅಗ್ನಿಯಂತೆ । ಜಲಮಧ್ಯದೊಳಿರ್ಪ

ಕಮಳದಂತೆ । ತಾವು ಮಾನುಷ ಚರಿತರಪ್ಪುದಜೆಂ ಸಂಸಾರಮಂ ಸೋಂಕದೆ ಅಣೋರಣೀಯಾಂ ಮಹತೋಮಹೀಯಾಂ ಎಂಬ ಶ್ರುತಿವುಂಟಾಗಿ ಯಿಜುಹೆ . . . ಎನ್ನುತ್ತಾರೆ. ಈ ಶಾಸನದಲ್ಲಿ ಮಾವಿಗೂರೊಡೆಯ ದೇವರಸನೆಂಬ ಶಿವಭಕ್ತನ ಜೀವನ ಚಿತ್ರಣವನ್ನು ಕಥಾರೂಪದಲ್ಲಿ ಕೊಡಲಾಗಿದೆ. ಇದೊಂದು ವಿಶಿಷ್ಟವಾದ ಶಾಸನವಾಗಿದೆ. ಮೇಲೆ ನೀಡಿರುವ ಸಾಲುಗಳು ದಾಸಿಮಯ್ಯನ ವಚನಗಳನ್ನು ನೆನಪಿಸುತ್ತವೆ. ಈ ಶಾಸನ ಗದ್ಯವು ಪದಿಮೂರನೇ ಶತಮಾನದ ಕನ್ನಡ ಗದ್ಯಸಾಹಿತ್ಯದ ವಿಕಾಸವನ್ನು ಸೂಚಿಸುತ್ತದೆ. ಚಿಕ್ಕಮಗಳೂರು ತಾಲೂಕಿನ ಗೌತಮೇಶ್ವರದ ಶಾಸನವು (ಚಿ,ಮ ೧೩೭ ಎಕ ೧೨) ಪಂಚತಂತ್ರದ ಹಾವುಮುಂಗಸಿಯ ಕಥೆಯನ್ನು ಅಲ್ಪವ್ಯತ್ಯಾಸಗಳೊಂದಿಗೆ ಅಳವಡಿಸಿಕೊಂಡಿದೆ. ಹೀಗೆ ಶಾಸನಗಳು ಸಾಹಿತ್ಯದ ಪ್ರಭಾವವನ್ನು ತೋರ್ಪಡಿಸುತ್ತಾ ತನ್ಮೂಲಕ ಗದ್ಯ ಸಾಹಿತ್ಯ, ಕಾವ್ಯ ಸಾಹಿತ್ಯಗಳು ವಿಕಾಸಗೊಂಡ ಪರಿಯನ್ನು ಸೂಚಿಸುತ್ತವೆ. ಶಾಸನಗಳಲ್ಲಿ ಕನ್ನಡ ಗದ್ಯದ ಸ್ವರೂಪವನ್ನು ತಿಳಿಯುವಲ್ಲಿ ಹಾಸನ ಜಿಲ್ಲೆಯ ಹೊಯ್ಸಳರ ಶಾಸನಗಳು ಹೆಚ್ಚು ಸಹಕಾರಿಯಾಗಿವೆ. ಹೊ.ನ ೯೫, ಅಗೂಡು ೧೫೭. ಹಾಸನ ೬೬, ೧೧೬,೧೨೮,೧೨೯ ಮುಂತಾದ ಶಾಸನಗಳಲ್ಲಿ ಗದ್ಯವು ಲಯಾನ್ವಿತವಾದ ಪ್ರೌಢಗದ್ಯದಂತಿದ್ದರೆ. ಹೊ.ನ.೭೬, ೮೫, ಅ.ಗೂಡು ೮, ೧೭, ೧೧೯, ಹಾಸನ ೨೪, ೩೫, ೪೧, ೧೩೮ ಮುಂತಾದ ಶಾಸನಗಳಲ್ಲಿ ವ್ಯವಹಾರದ ಭಾಷೆಯಂತಿರುವ ಸರಳ ಗದ್ಯದ ವಿವಿಧ ಮಾದರಿಗಳಿವೆ. ಆದುದರಿಂದಲೇ ಕನ್ನಡ ಭಾಷಾಚರಿತ್ರೆ ಮತ್ತು ಸಾಹಿತ್ಯ ಚರಿತ್ರೆಯ ಅಧ್ಯಯನಕ್ಕೆ ಕನ್ನಡ ಶಾಸನಗಳ ಅಧ್ಯಯನ ಆಕರ ಸಾಮಾಗ್ರಿಯಾಗಿ ಒದಗಿಬರುತ್ತಿದೆ.

****

# ನಾಗಮಂಗಲದ ತಾಲ್ಲೂಕಿನ ದಾನ ಶಾಸನಗಳು

* ಆರ್. ವೆಂಕಟೇಶ ಮೂರ್ತಿ

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕು ಗಂಗರು, ಹೊಯ್ಸಳರು, ವಿಜಯನಗರ ಅರಸರು ಮತ್ತು ಮೈಸೂರು ಅರಸರ ಆಳ್ವಿಕೆಯನ್ನು ಕಂಡಿದೆ. ಈ ತಾಲ್ಲೂಕಿನ ಶಾಸನಗಳಲ್ಲಿ ಮತ್ತು ಪೂರಕ ಶಾಸನಗಳಲ್ಲಿ ಭೂಮಿ, ಕೆರೆ ಹಾಗೂ ಗ್ರಾಮಗಳನ್ನು ದಾನವಾಗಿ ನೀಡಿರುವುದನ್ನು ಅವಲೋಕಿಸಿದೆ.

ಶ್ರೀಪುರುಷನ ಕ್ರಿ.ಶ. ೭೭೬–೭೭ ನೇವರ್ಷದ ತಾಮ್ರಶಾಸನದಲ್ಲಿ ಪೃಥವೀನಿರ್ಗುನಗದ ರಾಜ ನೆನಿಸಿದ ಪರಮಗೂಳನ ಪತ್ನಿ ಕುನ್ದಾಚಿ ಎಂಬುವಳು ಶ್ರೀಪುರದಲ್ಲಿ ಕಟ್ಟಿಸಿದ ಲೋಕತಿಲಕವೆಂಬ ಹೆಸರಿನ ಬಸದಿಗೆ ಅರಸನು ಪೊನ್ನಳ್ಳಿ ಎಂಬ ಗ್ರಾಮವನ್ನು ಬಸದಿಯಲ್ಲಿನ ಪೂಜೆ–ಪುನಸ್ಕಾರಗಳಿಗೆ ಹಾಗೂ ದುರಸ್ತಿಗೆ ದಾನ ನೀಡಿದ್ದಾನೆ.

ಪಲ್ಲವ ವಂಶದ ಗೋವಿಂದರ ಮತ್ತು ಚಾವುಂಡಬ್ಬರಿಸಿಯ ಮಗಳಾದ ಹಾಗೂ ವಿಷ್ಣುವರ್ಧನನ ಪಟ್ಟದರಸಿಯಾದ ಬಮ್ಮಲದೇವಿಯು ನಾಮಗಂಗಲದ ಶಂಕರ ನಾರಾಯಣ ದೇವಾಲಯವನ್ನು ದುರಸ್ತಿ ಮತ್ತು ಜೀರ್ಣೋದ್ಧಾರಗೊಳಿಸಿ ದೇವರ ಪೂಜೆ ಮತ್ತು ನೈವೇದ್ಯಗಳಿಗೆ ಅರಿನಕಟ್ಟ ಎಂಬ ಗ್ರಾಮವನ್ನು ದಾನವಾಗಿ ನೀಡಿದ್ದಾಳೆ.

ಏಚಿರಾಜ ದಂಡನಾಯಕನು ವಿಷ್ಣವರ್ಧನನಿಂದ ಗೌಡಿಕೆ ಉಂಬಳಿಯಾಗಿ ಪಡೆದ ನಾನಲಕೆಜಿ ಎಂಬ ಗ್ರಾಮವನ್ನು ಮಲ್ಲಿಕಾರ್ಜುನದೇವರ ಅಂಗಭೋಗ, ರಂಗಭೋಗ ನೈವೇದ್ಯ, ನಂದಾದೀವಿಗೆ ಖಂಡಸ್ಫುಟಿತ ಜೀರ್ಣೋದ್ಧಾರಗಳಿಗಾಗಿ ಕೇತಜೀಯ, ಜಕ್ಕಜೀಯ ಎಂಬುವವರಿಗೆ ದೇವದಾನವಾಗಿ ನೀಡಿರುತ್ತಾನೆ.

ಹೊಯ್ಸಳ ವಿಷ್ಣವರ್ಧನನು ಕಲ್ಕುಣಿನಾಡಿನ ಹೆಬ್ಬಿದಿರು ವಾಡಿಯಲ್ಲಿ ಉತ್ತುಂಗ ಚೈತ್ಯಾಲಯವೊಂದನ್ನು (ಬಸದಿ) ನಿರ್ಮಿಸಿ ಅಲ್ಲಿ ಪಾರ್ಶ್ವನಾಥನ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ್ದು, ಅಂಗಭೋಗ, ಆಹಾರ ದಾನ ಮತ್ತು ಬಸದಿಯ ಜೀರ್ಣೋದ್ಧಾರ ಹಾಗೂ ನಿರ್ವಹಣೆಯ ವೆಚ್ಚಕ್ಕಾಗಿ ಕಲ್ಕುಣಿನಾಡನ್ನು ಆಳುತ್ತಿದ್ದ ಭಾನುಕೀರ್ತಿಯು ಅರುಹನಹಳ್ಳಿ ಎಂಬ ಗ್ರಾಮವನ್ನು ದೇವದಾನವಾಗಿ ಮೂಲ ಸಂಘದ ಬ್ರಹ್ಮದೇವನಿಗೆ ನೀಡಿದ್ದಾನೆ.

ಶ್ರೀಕರಣಂ ಮಾದಿರಾಜನ ಹೆಸರಿನಲ್ಲಿ ನಿರ್ಮಿಸಲಾಗಿದ್ದ ಶ್ರೀಕರಣ ಜಿನಾಲಯಕ್ಕೆ ಹೊಯ್ಸಳ ಒಂದನೇ ನರಸಿಂಹನ ಮಹಾಪ್ರಧಾನಹೆಗ್ಗಡೆ ಭೋಗವತಿಯ ಬಲ್ಲಯ್ಯನು ಜಿನಾಲಯಕ್ಕೆ ಪಾರ್ಶ್ವನಾಥ ದೇವರ ಅಷ್ಟವಿಧಾರ್ಚನೆಗೆಂದು ಭೋಗವತಿಯಲುಳ್ಳ ಸಮಸ್ತ ಸುಂಕಗಳನ್ನು ಮತ್ತು ಇದಕ್ಕೇ ಸೇರಿದ ಕಾಳಬೋವನಹಳ್ಳಿಯನ್ನು ದಾನ ನೀಡಿರುತ್ತಾನೆ. ಈ ದಾನವನ್ನು ಶ್ರೀಪದ್ಮನಾಭಸ್ವಾಮಿ ಎಂಬುವನು ಸ್ವೀಕರಿಸಿದ್ದಾನೆ. ದೋರಸಮುದ್ರದ ತ್ರಿಕೂಟ ರತ್ನತ್ರಯ ಎಂದು ಕರೆಯಲ್ಪಡುವ ಶಾಂತಿನಾಥ ದೇವರ ಅಂಗಭೋಗ, ರಂಗಭೋಗ, ಆಹಾರ, ದಾನ ಮುಂತಾದವುಗಳಿಗಾಗಿ ಮೂರನೇ ನರಸಿಂಹನು ಚಿಕ್ಕನೆಯಹಳ್ಳಿಯನ್ನು ಮೂಲ ಸಂಘದ ಕುಮುದ ಚಂದ್ರ ಭಟ್ಟಾರಕ ದೇವನ ಶಿಷ್ಯನಾದ ಮಾಘನಂದಿ ಸಿದ್ಧಾಂತ ಚಕ್ರವರ್ತಿ ಎಂಬುವವನಿಗೆ ದಾನ ನೀಡಿರುತ್ತಾನೆ. ಕಂಬದಹಳ್ಳಿ ಬಸದಿಯ ಶಾಂತಿನಾಥದೇವರ ಪೂಜೆ ಮತ್ತು ಆಹಾರ ದಾನಕ್ಕೆಂದು ಒಂದೆ ವಿಷ್ಣುವರ್ಧನನಿಂದ ನೀಡಲಾಗಿದ್ದ ಮೊದಲಿಯಹಳ್ಳಿಯು, ಗಂದವಿಮುಕ್ತ ಸಿದ್ಧಾಂತದೇವನ ಶಿಷ್ಯರಾದ ವಜಿಯಾನೆದಂಡನಾಯಕ ಮತ್ತು ಭರತೀಮಯ್ಯ ದಂಡನಾಯಕರಗಳಿಗೆ ಹೊಯ್ಸಳ ನರಸಿಂಹನಿಂದ ಪುನರ್ ದಾನವಾಗಿದೆ. ಅರಸೀಕೆರೆಯ ಮಹಾದೇವಣ ಮತ್ತು ಪೂಜೆಗಾವುಂಡರು ಚನ್ನಲಿಂಗ ಕಲಿದೇವರ ಅಂಗಭೋಗ, ರಂಗಭೋಗ, ಜೀರ್ಣೋದ್ಧಾರ, ನಿತ್ಯಪಡಿ ನೈವೇದ್ಯಗಳಿಗಾಗಿ ಹಗವಮಗೆರೆ ಎಂಬ ಗ್ರಾಮವನ್ನು ಯಮಯಾಂಡನ ಮಗನಾದ ಬಲ್ಲಾಳ ಜೀಯನಿಗೆ ದೇವದಾನವಾಗಿ ನೀಡಿರುತ್ತಾರೆ. ತೆಪ್ಪದ ಮುದ್ದೆನಾಯಕನ ಮಗ ನಾಗೆಯನಾಯ್ಕ ಎಂಬುವವನು ದೇವಲಾಪುರ ಸ್ಥಳದ ಮಲೆಯನಾಯಕನಹಳ್ಳಿಯ ತಿರುಮಲದೇವರ ಅಮೃತಪಡಿಗಾಗಿ ಮುದಸಮುದ್ರ ಎಂಬ ಗ್ರಾಮವನ್ನು ದಾನವಾಗಿ ನೀಡಿರುತ್ತಾನೆ.

'ನವಸುಮ' ನಂ. ೨೭/೧, ೨೩ನೇ ಮುಖ್ಯರಸ್ತೆ, ಮುನೇಶ್ವರ ಬ್ಲಾಕ್, ಬೆಂಗಳೂರು–೫೬೦೦೮೫.

ಶ್ರೀರಂಗರಾಯನು ರಾಜ್ಯವಾಳುತ್ತಿದ್ದ ಕಾಲದಲ್ಲಿ ಸುರಗಿಯ ದೇವಪ್ಪನಾಯಕ ಎಂಬುವವನು ಕುಡುಗುಬಾಳ ಗ್ರಾಮದ ರಾಮಲಿಂಗದೇವರ ಸೇವೆಗಾಗಿ ದೇವಲಾಪುರ ಗ್ರಾಮವನ್ನು ಅದರ ಎಲ್ಲಾ ಆದಾಯಗಳೊಂದಿಗೆ ದಾನವಾಗಿ ನೀಡಿರುತ್ತಾನೆ.

ಸಾಳುವ ನರಸಿಂಗರಾಜನ ಗೃಹಮಂತ್ರಿ ಆಗಿದ್ದ ವಿರೂಪಾಕ್ಷದೇವ ಎಂಬುವನು ಮಕರಸಂಕ್ರಾಂತಿ ಸಂದರ್ಭದಲ್ಲಿ ಚುಂಚನಹಳ್ಳಿ ಗ್ರಾಮವನ್ನು ವಿರೂಪಾಕ್ಷಪುರ ಎಂದು ಪುನರ್ ನಾಮಕರಣ ಮಾಡಿ ಚುಂಚನ ಭಯಿರವದೇವರಿಗೆ ಸರ್ವಮಾನ್ಯವಾಗಿ ದಾನ ನೀಡಿರುತ್ತಾನೆ.

ದೊಡ್ಡಜಟಕದ ತಾಮ್ರಶಾಸನವು ಕೃಷ್ಣದೇವರಾಯನ ಕಾಲದಲ್ಲಿ ಅತಿರಾತ್ರ ಮಹಾಯಾಗವನ್ನು ಆಚರಿಸುವ ಶಾಸ್ತ್ರ, ಕಾವ್ಯ, ಪುರಾಣ ಇತ್ಯಾದಿಗಳಲ್ಲಿ ಪಾಂಡಿತ್ಯವನ್ನು ಹೊಂದಿದ್ದ ಶ್ರೀನಿವಾಸಾದ್ವರಿ ಎಂಬುವವನಿಗೆ ವೆಲ್ಲೂರ ಸೀಮೆಯ ಓರಿಜಟ್ಟಿಗ ಗ್ರಾಮವನ್ನು ಕೊಡುಗೆಯಾಗಿ ನೀಡಿರುವುದನ್ನು ಉಲ್ಲೇಖಿಸಿದೆ. ದೇವಲಾಪುರದ ತಾಮ್ರಶಾಸನವು ಕೃಷ್ಣದೇವರಾಯನ ಕಾಲದಲ್ಲಿ ನಡೆಸಲಾದ ಹೇಮಾಶ್ವಯಾಗದ ಸಂದರ್ಭದಲ್ಲಿ ಜಮದಗ್ನ್ಯ ಗೋತ್ರದ ನಂಜಪ್ಪದೇವನ ಮಗನಾದ ದೇವಭಟ್ಟ ಎಂಬುವವನಿಗೆ ಮಾದನಪುರ ಮತ್ತು ಮಲ್ಲಿಗೆರೆ ಗ್ರಾಮಗಳನ್ನು ದಾನವಾಗಿ ನೀಡಿದ್ದನ್ನೂ ಹಾಗೂ ಈ ಗ್ರಾಮಗಳಿಗೆ ಕೃಷ್ಣರಾಯಪುರ ಎಂದು ಪುನರ್ ನಾಮಕರಣ ಮಾಡಿದ್ದನ್ನು ದಾಖಲಿಸಿದೆ. ವಿಜಯನಗರದ ಕೃಷ್ಣರಾಯನು ನಾಗಮಂಗಲಕ್ಕೆ ಸೇರಿದ ದೇವಲಾಪುರ ಸ್ಥಳದ ತಿಬ್ಬನಹಳ್ಳಿ ಗ್ರಾಮವನ್ನು ಕೃಷ್ಣರಾಯಸಮುದ್ರ ಎಂದು ಪುನರ್ ನಾಮಕರಣ ಮಾಡಿ ಚೆನ್ನಪಟ್ಟಣದ ವೀರಪದೇವ ಎಂಬ ದೇವರಿಗೆ ಆಹಾರ ನೈವೇದ್ಯಕ್ಕಾಗಿ ದಾನ ನೀಡಿರುತ್ತಾನೆ. ಕೃಷ್ಣದೇವರಾಯನ ಆಡಳಿತ ಕಾಲದಲ್ಲಿ ಮೇಲುಕೋಟೆಯ ಚೊಳ್ಳಪಯ್ಯ ಎಂಬುವವನು ಕಾಳಿಮಗರಾಮನಹಳ್ಳಿಯ ದಕ್ಷಿಣ ಭಾಗವನ್ನು ಚೆಲ್ಲಪಿಳ್ಳೆದೇವರ ಸೇವೆಗಾಗಿಯೂ, ಉಳಿದ ಭಾಗವನ್ನು ಹಿರಿಯ ತಿರುಮಲ ದೇವರಿಗೂ ದಾನವಾಗಿ ನೀಡಿರುತ್ತಾನೆ.

ತಳವಾರಿಕೆ ದಾಸಪನಾಯಕನ ಮಗ ಚಿಕ್ಕರಸೆಯ ನಾಯಕನಿಗೆ ಕಾರಬಯಲು ಗ್ರಾಮವನ್ನು ದಂಡಿಗೆ ಉಂಬಳಿಯಾಗಿ ನೀಡಿರುವುದನ್ನು ಕಾರಬಯಲು ಗ್ರಾಮದ ಶಾಸನ ದಾಖಲಿಸಿದೆ. ಬಹುಪಾಲು ಸವೆದು ಹೋಗಿರುವ ನಾಗಮಂಗಲ ಶಾಸನವು ಚನ್ನಪಟ್ಟಣದ ಪ್ರಧಾನಿಯಾದ ಅಂಕುರರಾವು ಎಂಬುವವನು, ವೀರಾಂಬುಧಿ ಎಂಬ ಊರನ್ನು ದಾನವಾಗಿ ನೀಡಿರುವ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೭-೧೮ ನೇ ಶತಮಾನದ ದೊಡ್ಡಬಾಲದ ಶಾಸನವು ದೊಡಾಬಲ ಎಂಬ ಗ್ರಾಮವನ್ನು ದಾನವಾಗಿ ನೀಡಿರುವ ವಿಷಯವನ್ನು ತಿಳಿಸಿದೆಯಾದರೂ, ಲಿಪಿಯೆಲ್ಲವೂ ನಾಶವಾಗಿರುವುದರಿಂದ ಯಾವ ವಿಷಯಕ್ಕಾಗಿ ದಾನ ನೀಡಿದರು ಎಂಬ ವಿಷಯ ಸ್ಪಷ್ಟವಾಗುವುದಿಲ್ಲ.

ಕ್ರಿ.ಶ. ೧೫೪೪ ರ ಶಾಸನದಲ್ಲಿ ಸದಾಶಿವ ಮಹಾರಾಯರು ರಾಜ್ಯವನ್ನು ಆಳುತ್ತಿರಲು ಸಾಮಂತ ಚಂಗರಾಜ ತಿಂಮಪನಾಯಕ, ಕದಪನಾಯಕರು, ತಿರುಮಲನಾಯಕರು ತಮ್ಮ ಸ್ವಾಮಿಯ ನಿರೂಪದಲ್ಲಿ ಅಗ್ರಹಾರ ದೇವಸ್ಥಾನದಲ್ಲಿ ದಾನ ಮಾಡಿದ್ದನ್ನು ದಾಖಲಿಸಿದೆ. ಮತ್ತು ದೇವಸ್ಥಾನವನ್ನು ನಿರ್ಮಾಣ ಮಾಡಿದ್ದನ್ನು ತಿಳಿಸುತ್ತದೆ. ನಾಗಮಂಗಲದ ಮಹಾಜನಗಳ ನಿಯೋಗದ ಸೂಚನೆಯಂತೆ ವೀರಭದ್ರ ದೇವರಿಗೆ ವರ್ಷಪ್ರತಿ ೫ ಪಣಗಳು ತೆರಿಗೆಯನ್ನು ಬಾಲ್ದಳಿಸೆಟ್ಟಿಯ ಮಗ ಚೋಲಸೆಟ್ಟಿಯು ಧರ್ಮವಾಗಿ ಬಿಡುತ್ತಾನೆ. ಕ್ರಿ.ಶ. ೧೮೪೫ ರ ಶಾಸನವು ಹವಯಸಗೋತ್ರ ಚಿಕಂಣ್ಣೈಯ ಜಕಂಣಯನವರ ಸಂತತಿಯ ಕಂಮಗಾರ ಆದ ಚಿಂಣ್ಣೈಯ ವೆಂಕಟಪತ್ಯೆಯ್ಯ ತಿಮ್ಮಪ್ಪೈಯನವರ ಮಕ್ಕಳು, ಮೊಮ್ಮಕ್ಕಳು ಶ್ರೀಯವರ ಪಾದಕ್ಕೆ ಸೇವಾರ್ಥವಾಗಿ ಗೋಪುರ, ವಿಮಾನ ಜೋರ್ಣೋದ್ಧಾರ ಮಾಡಿಸಿ ದೇವರ ಪ್ರಭಾವಳಿಗಳು, ಬಾಗಿಲುವಾಡಗಳು, ಚಿನ್ನ, ಬೆಳ್ಳಿ ಆಭರಣಗಳನ್ನು, ಬೇಕಾದಂಥ ಸಲಕರಣೆಗಳನ್ನು ನೀಡಿದ ಬಗ್ಗೆ ತಿಳಿಸುತ್ತದೆ. ಆರಣಿ ಊರಿನಲ್ಲಿ ಕೆರೆ ಕಟ್ಟಿದ್ದಕ್ಕೋಸ್ಕರ ಮಂತ್ರಯಾ ಮಾಬಲಯ್ಯನು ಬಿತ್ತುವಟ್ಟವನ್ನು ದಾನ ನೀಡಿದ ದಾಖಲೆಯಿದೆ. ದಡಿಗದ ಶಾಸನದಲ್ಲಿ ದಡಿಗಕೆರೆಯ ಪಂಚ ಬಸದಿಗೆ ಬಾಹುಬಲಿ ಕೂಟಕ್ಕೆ ಎಲ್ಲಾ ಆದಾಯದಿಂದಲೂ ಕೆಲವು ಭೂಮಿಯನ್ನು ಇಬ್ಬರು ಮಂತ್ರಿಗಳಾದ ಮಹಾಪ್ರಧಾನ ದಂಡನಾಯಕ ಮರಿಯಾನೆ ಮತ್ತು ಭರತಿಮಯ್ಯನು ದಾನ ನೀಡಿರುತ್ತಾರೆ. ಈ ಒಂದು ದಾನವನ್ನು ನಾಲ್ಕು ಬಸದಿಗಳಿಗೆ ಸಮನಾಗಿ ಹಂಚಿದ್ದನ್ನು ದಾಖಲಿಸಿದೆ.

ಒಂದನೇ ನರಸಿಂಹನ ಕಾಲದ ಯಲ್ಲಾದಹಳ್ಳಿ ಶಾಸನದಲ್ಲಿ ಸೂರನಹಳ್ಳಿಯ ಪಾರ್ಶ್ವಜಿನ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ. ಈ ಗ್ರಾಮವನ್ನು ಪಾರ್ಶ್ವಪುರ ಎಂದು ಹೆಸರಿಸಿದೆ.

ಮೂರನೇ ನರಸಿಂಹನ ಪ್ರಸಿದ್ಧನಾದ ಸೇನಾನಿ ಪೆರುಮಾಳೆದೇವ ದಂಡನಾಯಕ ತನ್ನ ಅರಸನಿಗೆ ಬಹುಪ್ರಿಯನಾಗಿದ್ದ. ಈತನು ಸ್ವಾಮಿ ವಂಚಕರಗಂಡ, ರಾವುತ್ತರಾಯ, ಜವನಿಕೆನಾರಾಯಣ ಇತ್ಯಾದಿ ಅಭಿದಾನಗಳಿಂದ ಕೂಡಿ ಶ್ರೀರಾಮಕೃಷ್ಣ ಪದ್ಮಾರಾಧಕನೆನಿಸಿ ಮೂರನೇ ಬಲ್ಲಾಳನ ಕಾಲದವರೆವಿಗೂ ಅಧಿಕಾರವನ್ನು ಮುಂದುವರಿಸಿಕೊಂಡು ಬಂದಿದ್ದನೆಂಬುದು ಸರ್ವವಿದಿತ.

ಈ ಪೆರುಮಾಳೆ ದಂಡನಾಯಕನು ತನ್ನ ಆಡಳಿತಾವಧಿಯ ಕಾಲದಲ್ಲಿ ನಾಗಮಂಗಲವಷ್ಟೇ ಅಲ್ಲದೆ ಬೇರೆ ಸ್ಥಳಗಳಲ್ಲಿಯೂ ಸಹ ದಾನ ಧರ್ಮಗಳನ್ನು ನೀಡಿದ್ದಾನೆ.

ಈತನು ಹೊಯ್ಸಳ ವಿಷ್ಣುವರ್ಧನನಿಂದ ಪಡೆದ ಬೆಳ್ಳೂರಿಗೆ ಸೇರಿದ ಬೆಟ್ಟದ ಕೋಟೆ, ಬಿಲ್ಲಬೆಳಗುಂದ, ತಿಪ್ಪೂರು ಗ್ರಾಮಗಳು ಮತ್ತು ಇವುಗಳಿಗೆ ಸೇರಿದ ರಾಮಗವುಡನಹಳ್ಳಿ, ತಜಿಬಿನಕೋಟೆ, ಕಿತ್ತವಗಟ್ಟೆ, ಸಿವನಹಳ್ಳಿ, ಯಿರುಮನಹಳ್ಳಿ, ಬೀಚನಹಳ್ಳಿ, ಎರೆಹಳ್ಳಿ, ಹಟ್ಟಣ, ಕಾಳೆಗರಾಮನಹಳ್ಳಿ, ಸೆಟ್ಟಿಯಹಳ್ಳಿ, ಗುಮಗಮನಹಳ್ಳಿ, ಹರದಗೌಡನಹಳ್ಳಿ, ಬೇಗೂರು, ಕೂತನಹಳ್ಳಿ, ರಾಗಿಯಹಳ್ಳಿ, ಖಾಚನಹಳ್ಳಿ, ಗರುಡನಹಳ್ಳಿ, ಹಿರಿಯಬೇಡರಹಳ್ಳಿ ಚಿಕ್ಕಬೇಡರಹಳ್ಳಿ, ಹಂಚಿಯಹಳ್ಳಿ ಎಂಬ ಉಪಗ್ರಾಮಗಳನ್ನು, ಉದ್ಧವ ನರಸಿಂಹಪುರ ಅಲಿಯಾಸ್ ಬೆಳ್ಳೂರು ಗ್ರಾಮದ ಮಧ್ಯದಲ್ಲಿರುವ ಪ್ರಸನ್ನ ಮಾಧವ, ರಾಮಕೃಷ್ಣ ಮತ್ತು ಅಲ್ಲಾನಾಥ ದೇವರುಗಳ ಅಮೃತಪಡಿ, ನಿಬಂಧಕಾರರ ಜೀವಿತಗಳಿಗಾಗಿ ಕೊಡುಗೆಯಾಗಿ ಪಡೆದಿದ್ದನ್ನು ಈ ಎಲ್ಲಾ ದೇವರುಗಳ ಅಂಗಭೋಗ, ರಂಗಭೋಗ, ಚೈತ್ರಪವಿತ್ರ, ದೀಪೋತ್ಸವ, ತಿರುನಾಳು, ನಿಬಂಧಕಾರರ ಜೀವಿತಕ್ಕೆಂದು ಒಟ್ಟು ೮೬ ಮಹಾಜನಗಳಿಗೆ ದೇವದಾನವಾಗಿ ನೀಡಿರುತ್ತಾನೆ. (ಶಾ.ಸಂ.೭೩. ಬೆಳ್ಳೂರು)

ಕ್ರಿ.ಶ. ೧೨೭೧ ರ ಬೆಳ್ಳೂರಿನ ಶಾಸನವು (ಉದ್ಧವ ನರಸಿಂಹಪುರ) ಬೆಳ್ಳೂರಿನಲ್ಲಿ ತಾನು ಸ್ಥಾಪಿಸಿದ ಪಂಚಿಕೇಶ್ವರದಲ್ಲಿ ನಡೆಸುವ ಇಂದ್ರಪೂಜೆ ಮತ್ತು ಆರಣಪೂಜೆಗಾಗಿ ಭೂದಾನ ನೀಡಿ ಆ ಭೂಮಿಯಲ್ಲಿ ವ್ಯವಸಾಯ ಮಾಡುವ ೧೨ ವೊಕ್ಕಲುಗಳಿಗೆ ಮನೆಯನ್ನು ನೀಡಿ ಮನೆದೆಜೆಯನ್ನು ಮನ್ನಾಮಾಡಿ, ಬಾಡಿಗೆಯ ರೂಪದಲ್ಲಿ ಮೂರು ವರ್ಷಗಳ ವರೆಗೆ ೩೭ ಗದ್ಯಾಣ ಮತ್ತು ೨ ಪಣ, ಅನಂತರ ೫೪ ಗದ್ಯಾಣವನ್ನು ದೇವಾಲಯದ ಖರ್ಚುಗಳಿಗೆ ನೀಡುವಂತೆ ವ್ಯವಸ್ಥೆ ಮಾಡಿದುದು ಹಾಗೂ ತನ್ನ ಮನೆಯಲ್ಲಿ ನಡೆಸುವ ಅನ್ನಸತ್ರದಲ್ಲಿ ೧೬ ಬ್ರಾಹ್ಮಣರಿಗೆ ಮತ್ತು ಋಗ್ವೇದ, ಯಜುರ್ವೇದಗಳನ್ನು ಮಕ್ಕಳಿಗೆ ಹೇಳಿಕೊಡುವ ಉಪಾಧ್ಯಾಯರುಗಳ ಊಟದ ವ್ಯವಸ್ಥೆಗಾಗಿ ಭೂಮಿಯನ್ನು ಕೊಡುಗೆ ನೀಡಿರುವ ವಿಷಯಗಳನ್ನು ವ್ಯಕ್ತಪಡಿಸುತ್ತದೆ.

ರಾಜನ ವಿಷಯವನ್ನು ಕನ್ನಡದಲ್ಲಿಯೂ ಉಳಿದ ವಿಷಯಗಳನ್ನು ತಮಿಳುನಲ್ಲಿಯೂ ದಾಖಲಿಸಿರುವ ಚಾಮರಾಜನಗರದ ಎಡೂರು ಶಾಸನವು ಮಹಾಪ್ರದಾನ ಪೆರುಮಾಳೆದಂಡನಾಯಕನು ಪದಿನಾಡಿನ ಪ್ರಭುಗಾವುಂಡರೊಡಗೂಡಿ 'ಪೋಗೂರ್'ನ ಪ್ರದೇಶದ ನಾಯಕದೇವ ಎಂಬ ದೇವರಿಗೆ ಇಡೈಯೂರ್ ಎಂಬ ಹಳ್ಳಿಯನ್ನು ದೇವದಾನವಾಗಿ ನೀಡಿರುವುದನ್ನು ತಿಳಿಸುತ್ತದೆ. (ಶಾ.ಸಂ. ೧೨೮)

ವೀರಸೋಲೇಶ್ವರದೇವ ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ಪೆರುಮಾಳೆ ದೇವನು ದುರ್ಗೆಯಾರ್ ಅಗರ ಎಂಬ ಅಗ್ರಹಾರವನ್ನು ಪುನರ್ ಪ್ರತಿಷ್ಠಾಪಿಸಿದನು. ಎಂದು ಚಾಮರಾಜನಗರದ ಯಳಂದೂರು ಶಾಸನವು ತಿಳಿಸುತ್ತದೆ.

ಸರ್ವನಮಸ್ಯದಗ್ರಹಾರ ಬಿಜ್ಜಳಾಪುರ ಅಲಿಯಾಸ್ ಹಾನುಗಲ್ ಮಹಾಜನರು ಮತ್ತು ಮಾಸವೆರ್ಗಡೆ ಸಾಮ್ವಾದಿ ಮಂಚಣೋಪಾಧ್ಯಾಯನ ವಶದಲ್ಲಿ ಇದ್ದ, ಹಾನುಗಲ್ಲಿಗೆ ಸಂಬಂಧಿಸಿದ ಒಟ್ಟು ೧೦ ಸಲಗೆ ಹದಿನಾರು ಕೊಳಗ ಬೆಳೆಯುವ ಭೂಮಿಯನ್ನು ಕೊಂಡು ಹಾನಗಲ್ಲಿನ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣದ ಕಣಪೂಕಯ್ಯರ ಮಕ್ಕಳಿಗೆ ದಾನ ನೀಡಿದಲ್ಲದೆ, ಹಾನುಗಲ್ಲಿನ ಮುಂದೆ ಪೆರವಾಳೆಸಮುದ್ರವೆಂಬ ಕೆರೆಯನ್ನು ನಿರ್ಮಿಸಿದನು. ಎಂದು ಅರಕಲುಗೂಡು ತಾಲ್ಲೂಕಿನ ಹಾನಗಲ್ಲು ಶಾಸನ ತಿಳಿಸುತ್ತದೆ.

ಹೀಗೆ ಎಲ್ಲಾ ರಾಜರೂ ದಾನ, ದತ್ತಿಗಳು ಕೊಡುವ ಮೂಲಕ ರಾಜ್ಯದ ಧಾರ್ಮಿಕ ಮತ್ತು ಸಾಂಸ್ಕೃತಿಕತೆಯನ್ನು ಮೆರೆದಿದ್ದಾರೆ.

ಆಧಾರ : ಎಲ್ಲಾ ಶಾಸನಗಳೂ ಎಪಿಗ್ರಾಫಿಯ ಕರ್ನಾಟಕದ ನಾಗಮಂಗಲ ತಾಲ್ಲೂಕಿನದಾಗಿರುತ್ತವೆ.

*****

# ಹರಿಹರದ ಶಾಸನಗಳಲ್ಲಿ ಜನಪದರು

* ಡಾ॥ ಹರಿಹರ ಶ್ರೀನಿವಾಸರಾವ್

ಇಂದಿಗೆ, ಹಿಂದಿನ ನೆಲೆ ಇದ್ದೇ ಇರುತ್ತದೆಂಬ ಇತಿಹಾಸದ ಹೊಳಪುಗಳನ್ನು ಶಾಸನಗಳು ನೀಡಿದರೆ, ಈಗಿನ ಜನಪದದಲ್ಲೂ ತಲೆಮಾರುಗಳಿಂದ ನಡೆದು ಬಂದ ರೂಢಿಗತವಾದ ಹಲವಾರು ಸಾದೃಶ್ಯ, ವೈದೃಶ್ಯಗಳನ್ನು ನಮ್ಮ ಕಣ್ಣ ಮುಂದೆ ಇರುವ ಜಾನಪದದ ಆಕರದಿಂದಲೇ ಕಾಣಬಹುದಾದ್ದರಿಂದಲೇ ಪ್ರಾದೇಶಿಕ ಇತಿಹಾಸವು ನಾಡಿನ ಇತಿಹಾಸಕ್ಕೆ ಕಾಣಿಕೆಯನ್ನು ಕೊಡುತ್ತದೆ. ಆದ್ದರಿಂದಲೇ ಇತ್ತೀಚೆಗೆ ವಿದ್ವಾಂಸರು ಪ್ರಾದೇಶಿಕ ಇತಿಹಾಸಕ್ಕೆ ಹೆಚ್ಚಿನ ಮಹತ್ವವನ್ನು ನೀಡುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಪುಷ್ಕಳ ಸಾಮಗ್ರಿಯನ್ನು ಒದಗಿಸುವ ಹರಿಹರದ ಶಾಸನಗಳಲ್ಲಿ ರಾಜರಿಂದ ಮೊದಲಾಗಿ ಮಂತ್ರಿ, ಸಾಮಂತ, ಸಂಧಿವಿಗ್ರಹಿ, ನೀರಾವರಿ ತಜ್ಞರು, ಮಾಲೆಕಾರರು, ಗಾಣಿಗರು, ಕವಿಗಳು, ವೈಣಿಕರು ಇಂತಹ ನೂರಾರು ಹೆಸರುಗಳು ಅವರು ಕೊಟ್ಟ ದತ್ತಿಗಳ ಮೂಲಕ, ದೇವರ ಹೆಸರಿನಲ್ಲಿ ಅವರು ಸಲ್ಲಿಸಿದ ಸಮಾಜ ಸೇವೆಗಳಿಗೆ, ಧಾರ್ಮಿಕ ಆಚರಣೆಗಳಿಗೆ ಕನ್ನಡಿ ಹಿಡಿಯುತ್ತವೆ. ಇಂತಹ ಕೆಲವೇ ಅಪರೂಪದ ಗುಣ-ಕಾಯಕಗಳನ್ನು ಸೂಚಿಸುವ ಶಾಸನೋಕ್ತ ಶಾಸನಗಳ ವಿವರ ಜನಪದರನ್ನು ಸಂಕ್ಷಿಪ್ತವಾಗಿ ಪರಿಚಯಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ರಾಜರು:**

(೧) ಅಯ್ಯಣ[೧]: ಇವನ ತಂದೆ ಸತ್ಯಾಶ್ರಯ, ಅಣ್ಣ ವಿಕ್ರಮ. ಈ ವಿಕ್ರಮನ ಹೆಸರಿನಿಂದಲೇ ವಿಕ್ರಮಶಕೆ ಆರಂಭವಾಯಿತು.

(೨) ಅಮ್ಮುಗಿ[೨]: ತಂದೆ ಬಿಜ್ಜಳ. ಇವನಿಗೆ ೩ ಜನ ತಮ್ಮಂದಿರು. (೧) ಶಂಖವರ್ಮ (೨) ಕನ್ನರ (೩) ಜೋಗಮ. ತಂದೆ ಬಿಜ್ಜಳನ ನಂತರ ರಾಜ್ಯ ಭಾರವನ್ನು ವಹಿಸಿಕೊಂಡವ. ಬಿಜ್ಜಳ ವಂಶದ ಅಮ್ಮುಗಿಯ ವಶದಲ್ಲಿ ಈ ಪ್ರದೇಶವಿದ್ದಿತೆಂದು ಈ ಶಾಸನದ ಮೂಲಕ ತಿಳಿಯಬಹುದಾಗಿದೆ.

(೩) ಅಚ್ಯುತರಾಯ[೩]: ವಿಜಯನಗರದ ಅರಸನಿವ. ಇಲ್ಲಿಯ ಬ್ರಾಹ್ಮಣರು ವಿದ್ವತ್ ಪಕ್ಷಪಾತಿಗಳಾಗಿದ್ದರೂ ದರಿದ್ರರಾಗಿದ್ದುದರಿಂದ ಅವರನ್ನು ಧನಾಧಿಪತಿಗಳಾದ ಕುಬೇರರನ್ನಾಗಿ ಮಾಡುತ್ತೇವೆಂದು 'ಆನಂದ ನಿಧಿ' ಎಂಬ ಒಂದು "ಸಂರಕ್ಷಣ ನಿಧಿ" (ಬ್ಯಾಂಕ್ ಅಥವಾ ರಿಸರ್ವ್‌ಫಂಡ್)ಯೊಂದನ್ನು ಸ್ಥಾಪಿಸಿ ಅದರ ಮೂಲಕ ದಾನಗಳನ್ನು ಪೂಜಾದಿಗಳನ್ನು ನಡೆಸುವಂತೆ ನೋಡಿಕೊಂಡನು ಎಂದು ಹೇಳುತ್ತದೆ. ಈಗ ಕರೆಯಲಾಗುವ ಬ್ಯಾಂಕ್ ನಂತಹ ಒಂದು ವ್ಯವಸ್ಥೆಯನ್ನು ಹುಟ್ಟು ಹಾಕಿರುವುದಕ್ಕೆ ದಾವಣಗೆರೆಯ ಈ ಶಾ. ಸಂ. ೨೪ ಒಂದು ಮಹತ್ವದ ದಾಖಲೆಯಾಗಿದೆ. ಅಚ್ಯುತರಾಯನ ಇನ್ನೊಂದು ಶಾಸನ ೩೧ರಲ್ಲಿ ರಾಜಮುದ್ರಿಕೆಯೂ ಇರುವುದು ಗಮನಾರ್ಹ.

(೪) ಈಶ್ವರನೃಪಾಲ[೪]: 'ನಿನ್ನನ್ನು ರಕ್ಷಿಸುತ್ತೇನೆ'ಎಂದು ಪ್ರೀತಿಯಿಂದ ಈಶ್ವರದೇವನು ಆಡುವ ಮಾತು ಅಮೃತಕ್ಕೆ ಸಮಾನ. ಯಾಚಕನಿಗೆ ಪುಣ್ಯವೇ ಕಣ್ತೆರೆದು ಕೊಂಡಂತೆ ಅವನು ದಾನ ಕೊಡುತ್ತೇನೆ ಎನ್ನುತ್ತಿದ್ದ. ಯುದ್ಧ ಮಾಡುತ್ತೇನೆಂದು ಬಂದ ಶತ್ರುಗಳ ಕುದುರೆಗಳಿಗೆ ಮೃತ್ಯು ಸಮಾನನಾದವನು, ಭುಜಬಲದಲ್ಲಿ ಭೀಮ, ಸೂರ್ಯರಂತೆ ತೇಜಸ್ವಿ, ರೂಪದಲ್ಲಿ ಕಾಮ, ಮಾಂಡಲಿಕರಲ್ಲಿ ಅಗ್ರಗಣ್ಯ, ಶತ್ರುಗಳ ಕೊಬ್ಬನ್ನು ಇಳಿಸಿದವನು.

ಹೀಗೆ ಅವನನ್ನು ಹೊಗಳುವ ಶಾಸನವು, ಅವನು ಶೌರ್ಯದಿಂದ ಗೆದ್ದ ಪ್ರದೇಶಗಳನ್ನು ವಿವರವಾಗಿ ಹೇಳುತ್ತದೆ. ಇವನು ಪಟ್ಟಕ್ಕೆ ಬಂದದ್ದು ಕ್ರಿ.ಶ. ೧೧೫೫ರಲ್ಲಿ. ಮುಂದಿನ ಹತ್ತು ವರ್ಷಗಳಲ್ಲಿ ಬನವಾಸಿಯ ಪ್ರದೇಶಗಳಾದ ಮೂಸೂರು ೧೨, ಬಳ್ಳಾವೆ ೭೦, ಆಸಂದಿ ನಾಡಿನ ಅರಕೆರೆ, ಅತ್ತಿಗೆರೆ ಮುಂತಾದ ಊರುಗಳನ್ನು ಸಂಪಾದಿಸುವುದರಲ್ಲಿ ತನ್ನ ಮಾವನ ಸಹಾಯವನ್ನು ಪಡೆದಿದ್ದನೆಂಬ ಅಂಶವನ್ನು ಕ್ರಿ.ಶ. ೧೧೬೪ ರ ನಿಡನೇಗಿಲು ಶಾಸನ ತಿಳಿಸುತ್ತದೆ.

---

* 'ಸಮರ್ಥ', ೭೫/೧೫, ವಿಕಾಸ್ ಹೈಸ್ಕೂಲ್ ಎದುರು, ೫ನೇ ಬ್ಲಾಕ್, ೩ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು-೫೬೦೦೮೫

ಬಿಜ್ಜಳನ ಪ್ರತಾಪವನ್ನು ಗಮನಿಸಿ ಅವನ ಅಧಿರಾಜತ್ವಕ್ಕೆ ಒಪ್ಪಿ ಅವನಿಂದ ಮಹಾ ಮಂಡಳೇಶ್ವರ ನೆಂಬ ಪದವಿ ಪಡೆದದ್ದು, ೧೨ ನೇ ಶತಮಾನದಲ್ಲಿಯ ರಾಜಕೀಯ ಸಂಕ್ರಮಣ ಕಾಲದಲ್ಲಿಯ ಈತನ ಮುತ್ಸದ್ದಿ ತನವನ್ನು ಸೂಚಿಸುತ್ತದೆ. ಮಾಚರಸನ ಮೊಮ್ಮಗನಾದ ಈತ ಹರಿಹರದ ಯೋಗೇಶ್ವರ ದೇವರಿಗೆ ೨ ಮತ್ತರು ಭೂಮಿಯನ್ನು ದಾನವಾಗಿ ಹಿಂದೆ ಕೊಟ್ಟಿದ್ದನ್ನು ೩ ಮತ್ತರುಗಳಿಗೆ ಹೆಚ್ಚಿಸಿದ್ದನ್ನೂ ಈ ಶಾಸನ ತಿಳಿಸುತ್ತದೆ. ಅವನ ಧೈರ್ಯ ಸಾಹಸಗಳು ಶ್ರೀಯೋಗೇಶ್ವರನ ದಯದಿಂದ ಬಂದಿದ್ದುದ್ದರ ಪ್ರೀತಿಯ ದ್ಯೋತಕವಾಗಿಯೇ ದಾನದ ಹೆಚ್ಚಳಿಕೆ ಪಡೆದಿದೆ ಎನ್ನುವುದು ಇದರಿಂದ ತಿಳಿದು ಬರುತ್ತದೆ.

(೫) ಉದಯನ[೫]: ಉದಯನ ವತ್ಸ ದೇಶದ ದೊರೆ. ಉಜ್ಜೈನಿಯ ಅರಸು ಪ್ರದ್ಯೋತನ ಮಗಳು ವಾಸವದತ್ತೆ ಇವನ ಪತ್ನಿ. ಇವರ ಬಗ್ಗೆ ಅನೇಕ ಸಂಸ್ಕೃತ ನಾಟಕಗಳು ಬರೆಯಲ್ಪಟ್ಟಿವೆ. ವಿಶೇಷವೆಂದರೆ ಈತನು ವೀಣಾರವದಿಂದಲೇ ಆನೆಗಳನ್ನು ಆಕರ್ಷಿಸಿ ಅವುಗಳನ್ನು ಹಿಡಿಯುವುದರಲ್ಲಿ ನಿಸ್ಸೀಮನಾಗಿದ್ದನಂತೆ. ಸಂಗೀತಕ್ಕೆ ಇರುವ ಇಂತಹ ಶಕ್ತಿಯನ್ನು ರಾಜನು ಹೊಂದಿದ್ದನೆನ್ನುವುದು ಅಪರೂಪದ ಸಂಗತಿ.

(೬) ಮಹದೇವ[೬]: ಯಾದವ ರಾಮಚಂದ್ರನ ಮಗ. ಕೇರಳ, ಕೊಂಕಣ, ಚೋಳ, ಗೌಳ, ಉತ್ಕಳ, ಮಾಳವ, ಮುಂತಾದ ರಾಜರುಗಳನ್ನು ಗೆದ್ದ ಈತ ದಕ್ಷಿಣದ ದಿಗ್ವಿಜಯಕ್ಕೆ ಸನ್ನದ್ಧನಾಗಿ, ಆಕಾರಣದಿಂದಲೇ ಹರಿಹರಕ್ಕೆ ಬಂದುದಷ್ಟೇ ಅಲ್ಲ ತನ್ನ ಈ ಅಭೀಷ್ಟದ ಈಡೇರಿಕೆಗಾಗಿ ಹರಿಹರೇಶ್ವರನನ್ನು ಶಂಖದಲ್ಲಿ ನೀರೆರೆದು ಭಕ್ತಿಯಿಂದ ಪೂಜಿಸಿದನು. ಹರಿಹರ ಪ್ರದೇಶವನ್ನು ಸುಂಕ ಇತ್ಯಾದಿಗಳಿಂದ ಸರ್ವಮಾನ್ಯ(ವಿನಾಯತಿ)ಮಾಡಿದನು. ಹರಿಹರೇಶ್ವರನ ಪ್ರಸಾದದಿಂದ ತನಗೆ ವಿಜಯ ಪ್ರಾಪ್ತವಾಗುತ್ತದೆನ್ನುವ ನಂಬಿಕೆಯನ್ನು ಪಡೆದನೆಂಬುದನ್ನು ಈ ಶಾಸನ ಸ್ಪಷ್ಟವಾಗಿಸುತ್ತದೆ.

(೭) ವಿಜಯ ಪಾಂಡ್ಯ[೭]: ಉಚ್ಚಂಗಿ ದುರ್ಗದ ದೊರೆಯಾದ ಇವನ ತಂದೆ ಪಂಡಿತ ಪಾಂಡ್ಯ. ಇವನ ಅಮಾತ್ಯನಾದ ಪೆರ್ಮಾಡಿ ದಂಡನಾಯಕನ ಮನವಿಯಂತೆ ಕೇವಲ ೩೦೦ ನಿಷ್ಕಗಳ ಕಂದಾಯವನ್ನು ತೆಗೆದುಕೊಂಡು ಕೂಡಲೂರು ಗ್ರಾಮವನ್ನು ಅಲ್ಲಿಯ ವಿದ್ವಾಂಸರಿಗೆ ಮತ್ತು ಹರಿಹರೇಶ್ವರನ ಸತ್ರದಲ್ಲಿ ಬ್ರಾಹ್ಮಣ ಭೋಜನಕ್ಕೆ, ವಿದ್ಯಾಭ್ಯಾಸಕ್ಕೆಂದು ದತ್ತಿ ನೀಡಿದ.

ಕ್ರಿ.ಶ. ೧೧೮೦ ರಲ್ಲಿ ಈತನು ಹೊಯ್ಸಳ ಬಲ್ಲಾಳನೊಡನೆ ಯುದ್ಧ ಮಾಡಿ ಸೋತ. ಆದರೂ ಸ್ಥೈರ್ಯವನ್ನು ಕಳೆದುಕೊಳ್ಳದೆ ತನ್ನ ರಾಣಿಯರೊಂದಿಗೆ ಹರಿಹರೇಶ್ವರನಿಗೆ ಆಭರಣಗಳನ್ನು ಅರ್ಪಿಸಿದ. ಬಾಹುವಲಯ, ಕದಳಿಯೋಲೆ ಎನ್ನುವ ಆಭರಣಗಳ ಹೆಸರು ೪೪ ನೇ ಶಾಸನ ಸಂಖ್ಯೆಯಲ್ಲಿ ಲಿಖಿತವಾಗಿವೆ. ಕೇವಲ ವಿಜಯೋತ್ಸವದಲ್ಲಿ ಮಾತ್ರವಲ್ಲದೆ, ಯುದ್ಧದಲ್ಲಿ ಸೋತಾಗಲೂ ತಮ್ಮ ಮಾನಸಿಕ ಸ್ಥಿಮಿತತೆಯನ್ನು ಕಾಯ್ದುಕೊಳ್ಳಲು, ಕುಟುಂಬ ಸಹಿತವಾಗಿ ಬಂದು ದೇವರಿಗೆ ಸಲ್ಲಿಸಿದ ಪೂಜಾದಿ ಕೈಂಕರ್ಯಗಳಿಂದ ಮನಸ್ಸು ಸಮಾಧಾನಗೊಂಡು ಪುನಶ್ಚೇತನ ಪಡೆಯುತ್ತಿದ್ದುದರ ಐತಿಹಾಸಿಕ ದಾಖಲೆ ಈ ಶಾಸನದಿಂದ ತಿಳಿದು ಬರುತ್ತದೆ.

(೮) ಪೋಲಾಳ್ವ ದಂಡಾಧಿಪ[೮]: ಹರಿಹರೇಶ್ವರ ದೇವಸ್ಥಾನದ ನಿರ್ಮಾಣ ಕರ್ತೃ, ಈ ಪೋಲಾಳ್ವ ದಂಡನಾಥ. ಕ್ರಿ.ಶ. ೧೧೪೫-ಸ್ವಭಾನು-ಮಾಘ-ಶುದ್ಧ-ಏಕಾದಶಿ-ಗುರುವಾರದಂದು ಈ ದೇಗುಲದ ಪ್ರಾರಂಭೋತ್ಸವವಾಯಿತೆಂದು ದೇವಸ್ಥಾನದ ಬಲಪಾರ್ಶ್ವದಲ್ಲಿರುವ ಶಾಸನ ಸಂಖ್ಯೆ ೨೫ ರಿಂದ ತಿಳಿದುಬರುತ್ತದೆ.

ಪೋಲಾಳ್ವನು ಹೊಯ್ಸಳರ ಇಮ್ಮಡಿ ನರಸಿಂಹವರ್ಮನ ಬಳಿ ದಂಡಾಧಿಪನಾಗಿದ್ದವ. ಈತನ ಊರು ಆಂಧ್ರದ ನಾರಾಯಣಪುರ. ತಂದೆ ಅತ್ತಿರಾಜ. ತಾಯಿ ನವಿಲಾಡಿಯಕ್ಕ. ಬಲ್ಲಾಳ ಚಕ್ರವರ್ತಿ, ನರಸಿಂಹವರ್ಮ ಹಾಗೂ ಅವನ ಮಗ ವೀರನರಸಿಂಹ, ಈ ಮೂವರಲ್ಲಿಯೂ ಪೋಲಾಳ್ವನು ದಂಡಾಧಿಪನಾಗಿ ಸೇವೆ ಸಲ್ಲಿಸಿದ್ದರಿಂದಲೇ, ಆತನಿಗೆ ಈ ಭವ್ಯ ದೇಗುಲದ ನಿರ್ಮಾಣದ ಕಲ್ಪನೆಯನ್ನು ಕಾರ್ಯಗತಗೊಳಿಸಲು ಸಾಧ್ಯವಾಯಿತು ಎನ್ನಬಹುದಾಗಿದೆ. ಕೇವಲ ದೇವಾಲಯ ನಿರ್ಮಿಸಿದ್ದು ಮಾತ್ರವಲ್ಲದೇ, ಅದರ ನಿರ್ವಹಣೆಗೆಂದು ೧೦೪ ಜನ ಬ್ರಾಹ್ಮಣರನ್ನು ನೇಮಿಸಿ, ಅವರ ಜೀವನ ನಿರ್ವಹಣೆಗೆ

ಹರಿಹರದ ೬ ಮೈಲು ದೂರದಲ್ಲಿರುವ 'ಬಾನ್ವಳ್ಳಿ'ಯಲ್ಲಿಯೂ ಒಂದು ಲಕ್ಷ್ಮೀನಾರಾಯಣ ದೇವಸ್ಥಾನವನ್ನು ನಿರ್ಮಿಸಿ ಆ ಹಳ್ಳಿಯನ್ನು ಸರ್ವಮಾನ್ಯಮಾಡಿ ಹರಿಹರೇಶ್ವರನಿಗೆ ದಾನ ಕೊಟ್ಟನು.

ಈತನು ಕವಿಯೂ ಆಗಿದ್ದು, ತೆಲುಗಿನಲ್ಲಿಯ ಅಷ್ಟಪದಿಗಳನ್ನು ಅನುಸರಿಸಿ "ಹರಿ ಚಾರಿತ್ರ್ಯ" ಎಂಬ ಷಟ್ಪದಿ ಕಾವ್ಯವೊಂದನ್ನು ರಚಿಸಿರುವುದಾಗಿ ತಿಳಿದು ಬಂದರೂ ಈಗ ಆ ಕೃತಿ ಲಭ್ಯವಿಲ್ಲ. ಹರಿಹರೇಶ್ವರ ದೇವಾಲಯದ ಪ್ರಾರಂಭೋತ್ಸವದ ದಿನ ಹರಿಹರ, ರಾಘವಾಂಕ ಮುಂತಾದ ಕವಿಗಳು, ಪೋಲಾಳ್ವ ದಂಡನಾಯಕನೂ ಸೇರಿದಂತೆ ಅನೇಕ ವಿದ್ವಾಂಸರು "ಷಟ್ಪದಿಯ" ಬಗ್ಗೆ ಸುದೀರ್ಘ ಚರ್ಚೆ ನಡೆಸಿರಬೇಕೆಂದು ಕೆಲವು ವಿದ್ವಾಂಸರು ಊಹಿಸುತ್ತಾರೆ.

ರಾಜರು ಮತ್ತು ದಂಡಾಧಿಪತಿಗಳಲ್ಲಿ ಕೆಲವರ ಗುಣ–ಕಾರ್ಯಗಳನ್ನು ತಿಳಿದನಂತರ ಅವರ ಅಪ್ಪಣೆ ಪಡೆದು, ಹರಿಹರದ ಸ್ಥಳೀಕರೇ ಆಗಿದ್ದರೆನ್ನಬಹುದಾದ ಕೆಲವರು, ಜನ ಹಾಗೂ ಜಾನುವಾರುಗಳಿಗೆ, ಪೂಜಾದಿ, ಕೈಂಕರ್ಯಗಳಿಗೆ ದೇವರ ಹೆಸರಿನಲ್ಲಿ ಕೆರೆ, ಕಟ್ಟೆ, ಕಾಲುವೆಗಳನ್ನು ನಿರ್ಮಿಸಿದಂತಹ "ನೀರಾವರಿ ತಜ್ಞರು" ಇಲ್ಲಿಯ ಶಾಸನಗಳಲ್ಲಿ ಬಹುದೀರ್ಘವಾಗಿ ವರ್ಣನೆಗೊಂಡಿದ್ದು, ಕರ್ನಾಟಕದ ಆ ಕಾಲದ (ಕ್ರಿ.ಶ. ೧೪೦೦ ರಿಂದ ಕ್ರಿ.ಶ. ೧೪೨೪ ರವರೆಗಿನ ಕಾಲದ) ಮೌಲ್ಯಗಳ ಉಲ್ಲೇಖವನ್ನು ಸ್ಪಷ್ಟವಾಗಿ ನಮೂದಿಸಲಾಗಿದೆ.

ಗೌರಿಬಿದನೂರಿನ ಶಾಸನವೊಂದು ಜಲಸೂತ್ರಧಾರ ಸಿಂಗಿರಾಯ ಭಟ್ಟನು ಪೆನ್ನಾರ್ ನದಿಯ ನೀರನ್ನು ಕಾಲುವೆಯ ಮೂಲಕ ವಿಜಯನಗರದ ಇನ್ನೊಂದು ಪ್ರಮುಖ ಪಟ್ಟಣವಾದ ಪೆನುಗೊಂಡೆಗೆ ವೀರಪ್ರತಾಪ ಬುಕ್ಕರಾಯನ ನಿರೂಪದಂತೆ (ಕಾಲ ಕ್ರಿ.ಶ. ೧೩೮೮) ನಿರ್ಮಿಸಿದ ಕಾರ್ಯವನ್ನು ತಿಳಿಸುವ ಶಾಸನಕ್ಕಿಂತ ಹೆಚ್ಚು ನಿರ್ದಿಷ್ಟವಾಗಿ ಅನೇಕ ಮಾಹಿತಿಗಳನ್ನು ಹರಿಹರದ ಶಾಸನ ಸಂಖ್ಯೆ ೨೩ ನೀಡುತ್ತದೆ. ಈ ವಿವರವನ್ನು ಮುಂದೆ ಹೇಳಲಾಗಿದೆ.

೧ ಜಗನ್ನಾಥ್: ತಂದೆ ಮಂಗರಾಜ, ವಿಜಯನಗರದ ದೊರೆ ಒಂದನೇ ದೇವರಾಜ ಮತ್ತು ಮಂತ್ರಿ ನಾಗಪ್ಪ ಇಬ್ಬರಲ್ಲಿಯೂ ತುಂಗಭದ್ರೆ ಮತ್ತು ಹರಿದ್ರೆಗಳನ್ನು ಸೇರಿಸಿ ಕಾಲುವೆಯೊಂದನ್ನು ನಿರ್ಮಿಸಬೇಕೆಂದು ವಿನಂತಿಸಿಕೊಳ್ಳುತ್ತಾನೆ. ಅಷ್ಟೇ ಅಲ್ಲದೆ ಮಗನಾದ ಬುಳ್ಳಪನಿಗೆ ದೊರೆಯ ಅಪ್ಪಣೆಯ ಮೇರೆಗೆ ಈ ಕಾರ್ಯವನ್ನು ಕೈಗೆತ್ತಿಕೊಂಡು ನಿರ್ವಹಿಸಲು ಆಜ್ಞೆ ಮಾಡುತ್ತಾನೆ. ಜಗನ್ನಾಥನ ದೂರ ದೃಷ್ಟಿ, ಕಾರ್ಯನಿರ್ವಹಣೆಗೆ ಸೂಕ್ತ ವ್ಯಕ್ತಿಯ ಆಯ್ಕೆ ಮತ್ತು ಇಂತಹ ಕಾರ್ಯಗಳಿಗೆ ಬೇಕಾಗುವ ವೆಚ್ಚದ ಸರಿಯಾದ ಮಾಹಿತಿ ಸಂಗ್ರಹಣೆ, ರಾಜಾಜ್ಞೆ ಇಲ್ಲದೆ ಅಂದಿನ ದಿನಗಳಲ್ಲಿ ಯಾವ ಕೆಲಸವೂ ನಡೆಯುತ್ತಿರಲಿಲ್ಲವೆಂಬ ಸಂಗತಿ ಇದರಿಂದ ತಿಳಿದು ಬರುತ್ತದೆ. ಇನ್ನೊಂದು ಮುಖ್ಯ ಅಂಶವೆಂದರೆ ಬುಳ್ಳಪನಂಥ ನೀರ ವಿಜ್ಞಾನಿ ಜಲ ಸೂತ್ರಧಾರನಿಗೆ ತಕ್ಕ ಪರಿಸರ ನಿರ್ಮಿಸಿದ್ದನೆನ್ನುವ ಸುಮಾರು ಐದುವರೆ ಶತಮಾನಗಳಷ್ಟು ಹಿಂದಿನ ಐತಿಹಾಸಿಕ ದಾಖಲೆಯೂ ಆಗಿದೆ.

೨ ನಾಗಪ್ಪ: ಒಂದನೇ ದೇವರಾಯನಲ್ಲಿ ಮಂತ್ರಿಯಾಗಿದ್ದ ಈತ ತನ್ನ ಪ್ರಭಾವವನ್ನು ಬೀರಿ ಜಗನ್ನಾಥ ಮಂತ್ರಿಯು ಹರಿದ್ರಾ ನದಿಯು ಕಾಲುವೆಯ ಮೂಲಕ ತುಂಗಭದ್ರೆಗೆ ಸೇರುವ ಕಾರ್ಯವು ಕೈಗೂಡುವಲ್ಲಿ ಮಹತ್ತರ ಪಾತ್ರ ವಹಿಸಿದಾತ.

೩ ಬುಳ್ಳಪ್ಪ: ಜಗನ್ನಾಥನ ಮಗನಾದ ಈತ–ಮಾತಾಪಿತೃ ಭಕ್ತಿಗಳಿಗೆ ಹೆಸರಾದವನೂ, ವೀರ ಪುರುಷರಿಗೆ ಆಶ್ರಯ ಸ್ಥಾನವನ್ನು ನೀಡಿದ ಉದಾರಿ, ಮೃದುಭಾಷಿ, ಮಂದಹಾಸದ ಮುಖವುಳ್ಳ ಸುಖದ ತವರು, ಸ್ತ್ರೀಯರಿಗೆ ಮನ್ಮಥ. ಇಷ್ಟೆಲ್ಲವನ್ನೂ ಶಾಸನ ವಾಕ್ಯಗಳು ಕಾವ್ಯಮಯವಾಗಿ ಹೇಳುತ್ತಿದ್ದರೂ ಬುಳ್ಳಪನು ಇಂದಿಗೆ ಪ್ರಸ್ತುತವಾಗಲು ಮುಖ್ಯಕಾರಣ, ಇಂತಹ ಒಬ್ಬ ಜನಪ್ರಿಯ ಮಂತ್ರಿ ಈ ಪ್ರದೇಶಕ್ಕೆ ಅಡಕೆ, ಹೊಂಗೆ, ಫಲಭರಿತವಾದ ಕಬ್ಬು ಇತ್ಯಾದಿ ಬೆಳೆಗಳನ್ನು ಹರಿದ್ರೆಯ ನೀರನ್ನು ಉಪಯೋಗಿಸಿ ಬೆಳೆಸಲು ಅನುವುಮಾಡಿಕೊಟ್ಟದ್ದು ಹರಿಹರದ ಸುತ್ತಮುತ್ತಲಿನ ಹಳ್ಳಿಗಳ ಭೂಭಾಗವನ್ನು ಹಸಿರುಗೊಳಿಸಿ ಉತ್ತಮ ಸಮಾಜ ಸೇವಕ ಕಾರ್ಯ ನಿರ್ವಹಿಸಿದ್ದವ, ಈ ಬುಳ್ಳಪ್ಪ.

ಎರಡನೆಯದಾಗಿ ತಾನು ಹರಿಹರದ ಪೂರ್ವೋತ್ತರ ದಿಕ್ಕಿನಲ್ಲಿ ನಿರ್ಮಿಸಿದ ಕಾಲುವೆ ೧೪ ವರ್ಷಗಳ ನಂತರ ಒಡೆದು ಹೋದಾಗ ತನಗಿಂತ ಈ ಕಾರ್ಯದಲ್ಲಿ ಪರಿಣಿತನಾದ ಚಾಮರಾಜನನ್ನು ಕರೆಯಿಸಿ ಆತನಿಂದ ಆ ಕಾಲುವೆಯನ್ನು ಮತ್ತೆ

ಸರಿಪಡಿಸಿದುದು[೧೦]. ಮೂರನೆಯದಾಗಿ, ಹರಿದ್ರಾನದಿ ನೀರಿನ ಫಲಾನುಭವಿಗಳಿಂದ ಬಂದ ಸುಂಕದಿಂದ ಆಗಾಗ್ಗೆ ಕಾಲುವೆಯನ್ನು ದುರಸ್ತಿ ಪಡಿಸಿಕೊಂಡು ತಮ್ಮ ತಮ್ಮ ಆಯವ್ಯಯಗಳನ್ನು ಸರಿದೂಗಿಸಿಕೊಳ್ಳುವಂತೆ ಅಪ್ಪಣೆ ಮಾಡಿದ್ದು. ಇದಕ್ಕಿಂತ ಹೆಚ್ಚಾಗಿ ತಾನು ಕಟ್ಟಿಸಿದ ಕಟ್ಟೆ ಒಡೆದು ಹೋಗಲು ಸ್ವಯಾರ್ಜಿತವಾದ ಹಣದಿಂದ ಅದನ್ನು ಜೀರ್ಣೋದ್ಧಾರ ಮಾಡಿದ್ದು! ಈಗಿನ ಎಷ್ಟು ಜನ ಮಂತ್ರಿಗಳಿಗೆ ಅಥವಾ ಕೆರೆ ಕಟ್ಟೆ ನಿರ್ಮಾಣ ಮಾಡಿದ ಅಧಿಕಾರಿಗಳಿಗೆ, ಅದು ಒಡೆದು ಹೋದುದಕ್ಕೆ ಸ್ವತಃ ಹಣ ಖರ್ಚು ಮಾಡುವ ಮಾತಿರಲಿ, ಅಂಥದೊಂದು ತಪ್ಪು ನಡೆದಿರುವುದನ್ನು ಒಪ್ಪಿಕೊಳ್ಳುವ ಉದಾರ ಮನಸ್ಸು ಅಥವಾ ಜವಾಬ್ದಾರಿ ಇರುತ್ತದೆ?

ಹೀಗೆ ಮಂತ್ರಿ, ಬುಳ್ಳಪ್ಪನ ಔದಾರ್ಯ ಮತ್ತು ತನ್ನಿಂದಾದ ತಪ್ಪು ಹಾಗೂ ಅದನ್ನು ಆತ ಸರಿಪಡಿಸಿಕೊಂಡ ಬಗೆಯನ್ನು ಕಾವ್ಯವಾಗಿ ವರ್ಣಿಸುತ್ತದೆ ಈ ಶಾಸನ.

**ವೀರ ಭಗೀರಥಂ ಗಗನ ಗಂಗೆಯನುರ್ವಿಗೆ ತಂದನಂತೆದೇಂ**
**ಪೌರುಷವಲ್ತು ಕೇಳ್ ಗಗನದಿಂ ಕೆಳಗಿರ್ದು ಹರಿದ್ರೆಯೆತ್ತಲುಂ**
**ಬಾರದಿರಲ್ಕೆ ಕಟ್ಟೆ ಪಿಡಿದಟ್ಟಿ ಹರೀಶಪುರಕ್ಕೆ ಕೊಂಡು ಬಂ**
**ದೀರಸೆಯೊಳ್ ಪೆಸರ್ವಡೆದ ಬುಳ್ಳ ಚಮೂಪನಿದೇಂ ಸೌಭಾಗ್ಯನೋ**

ವೀರಭಗೀರಥನು ಆಕಾಶದಿಂದ ಗಂಗೆಯನ್ನು ಭೂಮಿಗೆ ತಂದನೆಂಬುದೇನೂ ಪೌರುಷವಲ್ಲ. ಆದರೆ ಆಕಾಶದಿಂದ ಕೆಳಗಿದ್ದೂ ಹರಿದ್ರಾ ನದಿಯು ಯಾವ ಕಡೆಗೂ ಬಾರದಿರಲು, ಅದನ್ನು ಕಟ್ಟಿ ಹಾಕಿ, ಹಿಡಿದು, ಅಟ್ಟಿಕೊಂಡು ಹರಿಹರಕ್ಕೆ ಕರೆತಂದು, ಲೋಕದಲ್ಲಿ ಕೀರ್ತಿಪಡೆದ ಬುಳ್ಳ ಸೇನಾಧಿಪನು ಏನು ಪುಣ್ಯವಂತನೋ!

ಬುಳ್ಳರಾಜನು ನಿರ್ಮ್ಮಿಸಿದ ಜಲಾಶಯ ಭೂದೇವಿಗೆ ರಚಿಸಿದ ವಿಸ್ತಾರವಾದ ಬೈತಲೆಯ ತುದಿಯ ಸಿಂಧೂರದಂತೆ ಒಂದೇ ಸಮನಾಗಿ ತುಂಬಿ ಬರುವ ಕೆಂಪುನೀರಿನ ಕಾಲುವೆಯಿಂದ ಶೋಭಿಸುತ್ತಿದೆ. ಇಲ್ಲಿರುವ ಶಾಸನೋಕ್ತಿ ಕಾವ್ಯೋಕ್ತಿ ಎಂದೆನಿಸಿದರೂ, 'ಕೆಂಪುಮೀರಿನ ಕಾಲುವೆ' ಎನ್ನುವ ಪದಗಳು ಮುಂಗಾರಿನ ಮಳೆಯಿಂದಾಗಿ ಇಲ್ಲಿರುವ ಕೆಂಪು ಮರಡಿಯ ಮಣ್ಣು ಕೊಚ್ಚಿಕೊಂಡು ಬಂದು ನದಿಯ ನೀರು ಕೆಂಪಾಗಿ ಕಾಣುತ್ತಿತ್ತೆಂಬ ವೈಜ್ಞಾನಿಕ ದಾಖಲೆಯೇ ಆಗಿದೆ. ಕಾಲುವೆಯ ನೀರಿನಿಂದ ಅಡಕೆ, ಕಬ್ಬು ಇತ್ಯಾದಿ ವಾಣಿಜ್ಯ ಬೆಳೆಗಳು ಮಲೆನಾಡಿಗಷ್ಟೇ ಸೀಮಿತವಾಗಿರದೇ ಬಯಲು ಸೀಮೆಯಲ್ಲೂ ಬೆಳೆಯುತ್ತಿದ್ದವೆಂದು ತಿಳಿದು ಬರುತ್ತದೆ.

೪ ತಿಪ್ಪರಸ[೧೧]: ಯಾದವ ರಾಮಚಂದ್ರನ ಸರ್ವಾಧಿಕಾರಿ ಪ್ರಧಾನಮಂತ್ರಿ ಈತ. ಬಾನುವಳ್ಳಿ ಎನ್ನುವ ಅಗ್ರಹಾರದ ಕೆರೆಯ ಪುನರುದ್ಧಾರಕ್ಕೆಂದು ಅಪುತ್ರಕರ (ಮಕ್ಕಳಿಲ್ಲದವರ) ಧನವನ್ನು ದತ್ತಿಯಾಗಿ ಬಿಟ್ಟಿದ್ದು ಈತನ ಔದಾರ್ಯಕ್ಕೆ ದ್ಯೋತಕವಾಗಿದೆ. ಮಕ್ಕಳಿಲ್ಲದವರ ಆಸ್ತಿಯನ್ನು ರಾಜಬೊಕ್ಕಸಕ್ಕೆ ಸೇರಿಸಿಕೊಂಡು ಅದನ್ನು ಸಾಮಾಜಿಕ ಕಾರ್ಯಗಳಿಗೆ ಬಳಸುತ್ತಿದ್ದ ಪದ್ಧತಿ ಈ ಮೂಲಕ ನಮಗೆ ಪರಿಚಯವಾಗುತ್ತದೆ.

೫ ಕೃಷ್ಣಪ್ಪನಾಯಕ[೧೨]: ಕ್ರಿ.ಶ. ೧೫೨೪–೬೬ ರಲ್ಲಿ ಆಳಿದ ಸದಾಶಿವರಾಯನ ಆಪ್ತ ಸಾಮಂತ ದೊರೆ ಈತ. ಇವನನ್ನು ಶಾಸನದಲ್ಲಿ 'ಹಡಪದ ಸಿಂಧು, ಗೋವಿಂದ, ಸಿತಗರ ಗಂಡ, ಧವಳಾಂಕಭೀಮ, ಮಣಿನಾಗಪುರವರಾಧೀಶ್ವರ' ಎಂದು ಹೊಗಳಲಾಗಿದೆ.

೬ ಯಾದವ ರಾಮಚಂದ್ರನ ಮಕ್ಕಳಲ್ಲಿ ಒಬ್ಬನು ಬೇಡತಿ ಸ್ತ್ರೀಯನ್ನು ಮೋಹಿಸಿ ವಿವಾಹವಾಗುತ್ತಾನೆ. ಇದರಿಂದ ಕುಪಿತನಾದ ತಂದೆಯ ಪ್ರೀತಿಯನ್ನೂ ರಾಜ್ಯವನ್ನೂ ಕಳೆದುಕೊಂಡು ನಿರ್ಗತಿಕನಾದಾಗ ಇಂತಹವನಿಗೆ ಚಿತ್ರದುರ್ಗದ ಪಾಳೆಯಗಾರನೊಬ್ಬ ಆಶ್ರಯ ನೀಡುತ್ತಾನೆ. ಹೀಗೆ ಈ ಶಾಸನವು ಬೇರೆ ಜಾತಿಯ ಸ್ತ್ರೀಯನ್ನು ವಿವಾಹವಾದ ಕಾರಣಕ್ಕಾಗಿ ಅವನು ತನ್ನ ತಂದೆಯಿಂದಲೇ ನಿರ್ಗತಿಕನಾಗಿ, ಪ್ರೀತಿಗೆ ತೆತ್ತಬೆಲೆಯನ್ನು ಮತ್ತು ಅಂದಿನ ಕಟ್ಟು ನಿಟ್ಟಾದ ವರ್ಣಾಶ್ರಮ ಧರ್ಮ ವ್ಯವಸ್ಥೆಯಲ್ಲೂ ಅಂತರ್ ಜಾತೀಯ ವಿವಾಹವಾದುದನ್ನು ದಾಖಲಿಸಿದೆ.

ಮತೀಯ ವಿರೋಧವನ್ನು ಎದುರಿಸಿದವನೊಬ್ಬನಿಗೆ ಇನ್ನೊಂದು ಮತದ ಪಾಳೆಗಾರನೊಬ್ಬ ಆಶ್ರಯ ನೀಡಿದ ಎನ್ನುವಲ್ಲಿ ರಾಜಕೀಯ ಕಾರಣವೂ ಸೇರಿತ್ತೆಂದು ಊಹಿಸಲು ಅವಕಾಶಗಳಿವೆ. ಏಕೆಂದರೆ ಯಾದವ ರಾಮಚಂದ್ರ ಒಬ್ಬ ಪ್ರಮುಖ ರಾಜನೂ ಹೌದು. ಸಣ್ಣ ಪಾಳೆಯಗಾರನೊಬ್ಬ ರಾಜನ ಮಗನ ಸಹಾಯದಿಂದ ತಾನೂ ಒಬ್ಬ ಸ್ವತಂತ್ರರಾಜನಾಗಬಹುದೆಂಬ ಕಲ್ಪನೆಯಿಂದಲೂ ಅವನಿಗೆ ಸಹಾಯ ಹಸ್ತವಿತ್ತಿರಬಹುದು.

ಇನ್ನು ಶಾಸನ ಕವಿ, ಲಿಪಿ ಮತ್ತು ಕಂಡರಣೆ ಕಾರರನ್ನು ಪರಿಚಯಿಸಿಕೊಳ್ಳೋಣ.

ಅ) **ಅನಿವಾರಿತ ಧನಂಜಯ ಪುಣ್ಯವಲ್ಲಭ:** ಈತನ ತಾತ ರಾಮಪುಣ್ಯ ವಲ್ಲಭ ಹಾಗೂ ತಂದೆ ನಿರವದ್ಯ ಪುಣ್ಯ ವಲ್ಲಭ. ೨ನೇ ವಿಕ್ರಮಾದಿತ್ಯ ಮತ್ತು ೨ನೇ ಕೀರ್ತಿವರ್ಮನ ಆಸ್ಥಾನದಲ್ಲಿ ಸಂಧಿವಿಗ್ರಹಿಯೂ ಆಗಿದ್ದ ವಿದ್ವಾಂಸನೂ ಹೌದು. ವಿಕ್ರಮಾದಿತ್ಯ ೮ನೇ ವರ್ಷದ ಆಳ್ವಿಕೆಯಲ್ಲಿ ಅಂದರೆ ಶಕೆ ೬೬೪ ರಲ್ಲಿ ಒಂದು ತಾಮ್ರಶಾಸನ, ಕಂಚಿಯ ಶಿಲಾಶಾಸನ ಹಾಗೂ ೨ ನೇ ಕೀರ್ತಿವರ್ಮನ ೯ ನೇ ವರ್ಷದ ಆಳ್ವಿಕೆ ಶಕೆ ೬೭೨ ರಲ್ಲಿ ಕೆಂದೂರಿನ ತಾಮ್ರಶಾಸನ, ಕ್ರಿ.ಶ. ೭೫೭ ರಲ್ಲಿ ವಕ್ಕಲೇರಿ ತಾಮ್ರಶಾಸನ, ಹೀಗೆ ಒಟ್ಟು ೪ ಶಾಸನಗಳನ್ನು ರಚಿಸಿದ ಕೀರ್ತಿ ಈತನದು.

ಆ) **ಈಶ್ವರಾರ್ಯ :** ೫೫ ಶ್ಲೋಕಗಳಿರುವ ದಾವಣಗೆರೆ ಶಾಸನ ಸಂಖ್ಯೆ ೨೫ ನ್ನು ರಚಿಸಿದಾತ. ಈಶ್ವರಾರ್ಯ. ಕಾಲ ಕ್ರಿ.ಶ. ೧೨೨೪. ಹರಿಹರ ದೇವಾಲಯ ನಿರ್ಮಿಸಿದ ಪೋಲಾಳ್ವ ದಂಡನಾಥನ ಹೆಸರನ್ನೂ, ಅದರಿಂದ ಆತನು ಆಚಂದ್ರಾರ್ಕ ತಾರಾಂಬರವಾಗಿ ಉಳಿಯುವಂತಹ ಕೀರ್ತಿಯನ್ನು ಗಳಿಸಿದ್ದನ್ನೂ ಐತಿಹಾಸಿಕ ಹಾಗೂ ಕಾವ್ಯ ಸಂಪತ್ತನ್ನು ಸಮನ್ವಯಗೊಳಿಸಿಕೊಂಡು ಹೇಳಿರುವ ಈ ಶಾಸನವಿಲ್ಲದಿದ್ದರೆ, ಈಗಿನ ಹರಿಹರೇಶ್ವರ ದೇವಸ್ಥಾನದ ನಿರ್ಮಾಣ ಕಾರ್ಯ ಯಾವಾಗ ನಡೆಯಿತೆಂಬುದನ್ನು ನಿರ್ಧರಿಸಲು ಆಗುತ್ತಲೇ ಇರಲಿಲ್ಲ. ಈತನನ್ನು 'ವಾಚಸ್ಪತಿಗರಿದೆನೆ ಸಂಕೋಚದೆ ಶಾಸನಮುನೀಶ್ವರಾರ್ಯಂ ಪೇಳ್ದಂ' ಎಂದು ಶಾಸನವು ಹೊಗಳುತ್ತದೆ.

ಇ) **ಧರಣೋಜ :** ಈ ಕವಿಯು ವಿಜಯನಗರ ಕಾಲದ ಅನೇಕ ಶಾಸನಗಳನ್ನು ದಾವಣಗೆರೆ ಶಾ. ಸಂ. ೨೯, ೩೪ ಅ, ೩೪ ಮುಂತಾದುವುಗಳನ್ನು ರಚಿಸಿದ್ದಾನೆ. ಈತನೊಬ್ಬ ಉಭಯ ಭಾಷಾಕವಿಯೆಂದು ತಿಳಿಯಬಹುದು. ಮಾಚಿದೇವ ಈತನ ತಂದೆ. ಹರಿಹರದೇವರ ಕೃಪೆಯಿಂದಲೇ ತನಗೆ ಕವಿತಾ ಶಕ್ತಿ ಬಂದಿತು ಎಂದು ಹೇಳಿದ್ದಾನೆ.

**"ಹರಿಹರ ದೇವರ ವರದಿಂ**
**ವರ ಗದ್ಯಂ ಪದ್ಯಂಗಳವಂ ಶಾಸನದೊಳ್**
**ಬರೆದಂ ಮನುಕುಲ ರತ್ನಾ**
**ಕರ ಚಂದ್ರಂ ಮಾಚಿ ದೇವ ಸುತ 'ಧರಣೋಜಂ'**

ಈತನು ಅಕ್ಕಸಾಲಿಗ ಮನೆತನದವನು.

ಈ) **ಬಾಯಣಾಚಾರ್ಯ :** ಹರಿಹರದ ಬಹುದೀರ್ಘ ಶಾಸನವಾದ ಶಾ. ಸಂಖ್ಯೆ ೨೩ ರನ್ನು ರಚಿಸಿದ ಕವಿ. ಇದನ್ನು ತಾಮ್ರ ಮತ್ತು ಶಿಲಾಶಾಸನಗಳೆರಡರಲ್ಲೂ ಬರೆದಿದ್ದೇನೆ ಎಂದು ಹೇಳಿಕೊಂಡಿದ್ದಾನೆ.

ಉ) **ಮಧುಸೂಧನ :** ಹಳಗನ್ನಡದ ಚಂಪೂ ಕೃತಿಯನ್ನು ನೆನಪಿಗೆ ತರುವ ಉಭಯ ಭಾಷಾ (ಕನ್ನಡ-ಸಂಸ್ಕೃತ) ಪಾಂಡಿತ್ಯವನ್ನು ಮೆರೆಯಲು ಈ ಕವಿ ಸಂಸ್ಕೃತ ಪದ್ಯಗಳನ್ನು ಹೇರಳವಾಗಿ ಬಳಸಿದ್ದಾನೆ. ಆದರೆ ಪಾಂಡ್ಯರ ಬಿರುದುಗಳನ್ನು ತಿಳಿಸುವಾಗ ಮಾತ್ರ ಪ್ರಾಕೃತ ಭಾಷೆಯನ್ನು ಉಪಯೋಗಿಸಿರುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ದಾನ ಶಾಸನ ಸಂಖ್ಯೆ. ೪೧ ರಲ್ಲಿ ಈ ಎಲ್ಲ ಲಕ್ಷಣಗಳೂ ಕಂಡು ಬರುತ್ತವೆ. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಕೊಟ್ಟಕಲ್ಲಿನಲ್ಲಿರುವ ಶಾಸನವೂ ಈತನಿಂದ ರಚಿತವಾಗಿದೆ ಎಂದು ತಿಳಿದುಬರುತ್ತದೆ. ಪ್ರಾಯಶಃ ಮಧುಸೂಧನ ಕವಿಯು ಹರಿಹರದವನೇ ಆಗಿರಬಹುದೆಂದು ಊಹಿಸಲಾಗಿದೆ.

**ಕಂಡರಣೆಕಾರರು :**

ಶಾಸನಗಳನ್ನು ಕಲ್ಲಿನ ಮೇಲೆ ಅಥವಾ ತಾಮ್ರಪಟದ ಮೇಲೆ ಮೊದಲು ಮಸಿಯಿಂದ ಬರೆದು ನಂತರ ಕೆತ್ತುತ್ತಿದ್ದರು. ಇವರೇ ಕಂಡರಣೆಕಾರರು. ಇವರು ತಮ್ಮ ಹೆಸರುಗಳನ್ನು ಶಾಸನದ ಕೊನೆಯಲ್ಲಿ ಬರೆದಿಟ್ಟಿರುತ್ತಾರೆ. ಸಾಮಾನ್ಯವಾಗಿ ಇವರು ಅಕ್ಕಸಾಲಿಗಳಾಗಿರುತ್ತಿದ್ದರೆಂದು ತಿಳಿದು ಬರುತ್ತದೆ.

೧. ಸೋಮ: ಮಧುಸೂಧನ ಕವಿ ತಾಳೆಗರಿಯ ಮೇಲೆ ಬರೆದಿರುವ ದಾ. ಸಂಖ್ಯೆ ೪೧ ನ್ನು ಕಲ್ಲಿನ ಮೇಲೆ ಬರೆದಿರುವವನು ಶಂಕರದೇವ. ಅದನ್ನು (ಕೆತ್ತಿದವ) ಕಂಡರಿಸಿದವ ಸೋಮ.

೨. ತಿಪ್ಪೋಜ: ಈತನು ವಿರೋಜನ ಮಗ. ದಾ. ೩೧ ನೇ ಶಾಸನವನ್ನು ಕೆತ್ತಿದಕ್ಕಾಗಿ ಬೆಳುವಡಿ ಗ್ರಾಮ (ಹರಿಹರ ತಾಲ್ಲೂಕು)ದಲ್ಲಿ ಒಕ್ಕುಳ ಎರೆ ಭೂಮಿಯನ್ನು ದಾನವಾಗಿ ಸ್ವೀಕರಿಸಿದ್ದಾನೆ. ಇದರಿಂದ ತಿಪ್ಪೋಜನು ಹರಿಹರದವನೇ ಆಗಿರಬೇಕೆಂದು ಊಹಿಸಲಾಗಿದೆ.

೩. ಲಿಪಿಕಾರ–ಶಂಕರದೇವ: ಈತ ವೀರ ಪಾಂಡ್ಯನ ಶಾಂತಿ ಹಾಗೂ ಸಮರ ಸಮಯಗಳೆರಡರಲ್ಲೂ ಸಂಧಿ ವಿಗ್ರಹಿಯಾಗಿದ್ದವನು. ದಾವಣಗೆರೆ ಶಾ. ಸಂ. ೪೧ನ್ನು ಬರೆದವನು ಈತನೇ.

ದಾನ ಶಾಸನಗಳನ್ನು ಹೇಳುವಾಗ ತಂದೆ ತಾಯಿ ಮಕ್ಕಳು ರಾಜರವಂಶ ಇತ್ಯಾದಿ ವಿವರಗಳನ್ನು ನೀಡುವಂತೆ ಇಲ್ಲಿಯೂ ರಾಜರ, ಪ್ರಧಾನಿಗಳ, ದಂಡನಾಯಕ, ಕವಿ, ಕಂಡರಣೆಕಾರರ ಹೆಂಡತಿಯರ ಹೆಸರುಗಳು ಪ್ರಾಸಂಗಿಕವಾಗಿ ಹೇಳಲಾಗಿದ್ದು, ಕೆಲವೊಮ್ಮೆ ಅತಿಶಯೋಕ್ತಿಯ ಕಾವ್ಯಗುಣಗಳಿಂದ ಹೊಗಳಲಾಗಿದೆ. ಹೀಗಿದ್ದರೂ ಪರೋಕ್ಷವಾಗಿ ಅವರ ಧಾರ್ಮಿಕ ಕೊಡುಗೆ ಹಾಗೂ ನಂಬಿಕೆಗಳನ್ನು ಈ ಮೂಲಕ ಶಾಸನಗಳಲ್ಲಿ ಕಾಣಬಹುದಾಗಿದೆ.

ಅ) **ಕಾಳಲಾದೇವಿ[೧೩]:**

**ಆನೃಪವನಿತೆ ಶರಚ್ಚಂ**
**ದ್ರಾನನೆ ಕಾಮಕಲ್ಪಲತಿಕಾತನುಭೂ**
**ಮಿತೆ ಕಾಳಲಾದೇವಿಕ**
**ಳಾನಿಧಿ ಪರಿವಾರ ಸುರಭಿಯೆನೆ ಪೆಸರ್ಪಡೆದಳ್**

ಈಕೆ ಬರ್ಮರಾಜನ ಹೆಂಡತಿ. ಕಾಮನೆಂಬ ಕಲ್ಪಲತೆಗೆ ಜನ್ಮ ಭೂಮಿ. ಕಲೆಗಳ ನಿಧಿ. ಪರಿವಾರದವರಿಗೆ ಕಾಮಧೇನು ಎಂದೆನ್ನಿಸಿಕೊಂಡವಳು ಕಾಳಲಾದೇವಿ. ಇವಳ ಮಗ ಬೊಪ್ಪದೇವ.

ಆ) **ಚೆನ್ನಾಂಬಿಕೆ[೧೪]**: ಈಕೆ ಜಗನ್ನಾಥನ ಪತ್ನಿ. ಹರಿದ್ರಾಕಾಲುವೆಯನ್ನು ದುರಸ್ತಿ ಮಾಡಿಸಿದ ಚಾಮರಾಜನ ತಾಯಿ.

ಇ) **ಜಕ್ಕಣವ್ವೆ[೧೫]** : ಕುಪ್ಪು ಗಡ್ಡೆಯ ಶಾನುಭೋಗ 'ಮೆದಯಿ'ಯ ಹೆಂಡತಿ. ಹರಿಹರ ದೇವರ ಹೂವಿನ ಮಾಲೆ, ತುಳಸಿಯ ಸೇವೆಗಾಗಿ ಹರಿಹರದ ಮಹಾಜನರ ಕೈಯಲ್ಲಿ ೩ ಗದ್ಯಾಣಗಳನ್ನು ದಾನ ನೀಡಿ ಶಾಶ್ವತ ಸೇವೆಗೆ ಅನುವು ಮಾಡಿಕೊಟ್ಟ ಸ್ತ್ರೀ.

ಈ) **ತುಳಬಾಯಿ[೧೬]**: ಸ್ವಕುಲದ ಉದ್ಧಾರಕ್ಕಾಗಿ, ತನ್ನ ಪತಿಯು ರಾಜ್ಯವನ್ನು ಗೆಲ್ಲಲು, ಹಾಗೂ ಜೀವನದ ಸೌಭಾಗ್ಯವನ್ನು ಪಡೆದುಕೊಳ್ಳಲು ಹರಿಹರ ದೇವರಿಗೆ ದೀಪ ಮಾಲೆ ಮಾಡಿಸಿಕೊಟ್ಟಿದ್ದಾಳೆ. ರಾಮಚಂದ್ರ ಪ್ರಭುವರ್ಮನ ಹೆಂಡತಿ.

ಉ) **ಭೂಚಲದೇವಿ[೧೭]**: ಸಿಂಧ್ ವಂಶದ ಈಕೆ ಗುಣದಲ್ಲಿ ಜಾಣ್ಮೆಯಲ್ಲಿ ಶುಭ ಲಕ್ಷಣ ಹಾಗೂ ಪಾತಿವ್ರತ್ಯದಲ್ಲಿ ಪಾರ್ವತಿ, ಸರಸ್ವತಿ, ಲಕ್ಷ್ಮಿಯರಿಗೆ ಸಮಾನಳು. ಈಶ್ವರನೃಪಾಲ ಈಕೆಯ ಮಗ. ಬಿಜ್ಜಳನ ಮಹಾಮಂಡಳೇಶ್ವರ ನಾಗಿದ್ದವನು.

ಊ) **ಸಿರಿಯವ್ವೆ[೧೮]** : ಈಕೆ ಅಣ್ಣಮ್ಮ ಹೆಗ್ಗಡೆಯ ಮಗಳು. ನಂದಾದೀವಿಗೆಗೆ, ವನಮಾಲೆಗೆ, ಮಾಲೆಕಾರರಿಗೆಂದು ೪

ಗದ್ಯಾಣಗಳನ್ನು ದೇವಸ್ಥಾನದ ಮಹಾಜನರಿಗೆ ನೀಡುತ್ತಾಳೆ. ೪ ಗದ್ಯಾಣಗಳಿಂದ ಬಂದ ಬಡ್ಡಿಯಿಂದ ಸೇವಾದಿಗಳು ತನ್ನ ಹೆಸರಿನಲ್ಲಿ ಶಾಶ್ವತವಾಗಿ ನಡೆದುಕೊಂಡು ಹೋಗಬೇಕೆಂಬುದೇ ಆಕೆಯ ಇಚ್ಛೆ. ಈ ದಾನವು ೨೦-೮-೧೨೫೫ ರಲ್ಲಿ ಬುಧವಾರದಂದು ಕೊಡಲಾಯಿತೆಂದು ಶಾಸನದಿಂದ ತಿಳಿದು ಬರುತ್ತದೆ.

ಖ) **ಹೊನ್ನಿಯವ್ವೆ**[೧೯] : ಅಣ್ಣಮ ಹೆಗ್ಗಡೆಯ ಮಗಳಾದ ಈಕೆ ಹರಿಹರ ದೇವರ ನಂದಾದೀಪ ಮತ್ತು ಹೂವಿನ ಸೇವೆಗೆಂದು ೪ ಗದ್ಯಾಣಗಳನ್ನು ದಾನವಾಗಿ ಕೊಟ್ಟಿದ್ದಾಳೆ.

ಹೀಗೆ ರಾಣಿಯರಿಂದ ಮೊದಲಾಗಿ ಸಾಮಾನ್ಯ ಸ್ತ್ರೀಯರೂ, ಬಡ್ಡಿ ಹಣದಿಂದ ಹರಿಹರೇಶ್ವರನ ಸೇವೆ ನಿರಂತರವಾಗಿ ಮುಂದುವರೆದು ತಮ್ಮ ಪತಿ, ಮಕ್ಕಳು ಹಾಗೂ ವಂಶದ ಶ್ರೇಯಸ್ಸಿಗೆಂದು ದಾನ ನೀಡುತ್ತಿದ್ದುದನ್ನು ಹರಿಹರದ ಶಾಸನಗಳು ಹೇಳುತ್ತವೆ.

ಸಾಮಾನ್ಯರು ಮತ್ತು ಅಧಿಕಾರಿಗಳು ಹಾಗೂ ಅವರ ಕೆಳಗಿನವರು ತಮ್ಮ ಅಭೀಷ್ಟಗಳನ್ನು ಪೂರೈಸಲೆಂದು, ಅಧಿಕಾರಿಗಳಿಗೆ ಶ್ರೇಯಸ್ಸನ್ನು ಕೋರಿ ದಾನ ನೀಡಿದ ಕೆಲವರನ್ನು ಶಾಸನಗಳು ತಿಳಿಸುವುದನ್ನು ಈಗ ನೋಡೋಣ.

೧) **ಅಚ್ಯುತ ಮಲ್ಲಪಣ್ಣನೃಪತಿ**[೨೦]: ವಿಜಯನಗರದ ಅಚ್ಯುತರಾಯನಿಗೆ ಈತ ಸ್ವಾಮಿಭಕ್ತ. ಕುಂದವಾಡ ಎಂಬ ಗ್ರಾಮವನ್ನು ತನ್ನ ಸ್ವಾಮಿಯ ಪುಣ್ಯ ಹಾಗೂ ಕೀರ್ತಿ ಪ್ರಾಪ್ತಿಗಾಗಿ ಶಾಶ್ವತ ದಾನ ಕೊಟ್ಟಿದ್ದಾನೆ.

೨) **ಕೊಂಡಮ ರಾಜು**[೨೧]: ಚದುಪುರಾಲ ಕೊದಂಡರಾಜು. ಈತ ತೆಲುಗಿನವನೆಂದು ಈತನ ಹೆಸರಿನಿಂದಲೇ ತಿಳಿಯಬಹುದು. ಈತನ ಮಗ ಸೂರ ಪೈ.

೩) **ಕಾಳಪ್ಪನಾಯಕರು**[೨೨]: ಪಾಳೆಗಾರ ಕೃಷ್ಣಪ್ಪನಾಯಕನಗೆ ನೆರವು ನೀಡಿದವ. ಸೈನ್ಯ ಕೊಂಡೊಯ್ಯುವಾಗ ಈತನ ಮಕ್ಕಳು ಮಾರ್ಗ ಸಹಾಯಕರಾಗಿ ಕೆಲಸ ಮಾಡುತ್ತಿದ್ದರೆಂದು ಶಾಸನದಿಂದ ತಿಳಿದು ಬರುತ್ತದೆ.

೪) **ಗೋವಿಂದ ಸೇನಬೋವ**[೨೩]: ದೇವಸ್ಥಾನದ ಆಗು ಹೋಗುಗಳನ್ನು ನೋಡಿಕೊಳ್ಳುತ್ತಿದ್ದ ಲೆಕ್ಕ ಪತ್ರಾಧಿಕಾರಿ. ಚೌಡ ವೆಗ್ಗಡೆ ಮತ್ತು "ಪೆರುಮಾಳೆದೇವರು" ಈತನ ಮೂಲಕ ದೇವರ ಸೇವೆಗಾಗಿ ೪ ಗದ್ಯಾಣಗಳನ್ನು ದಾನವಿತ್ತಿದ್ದಾರೆ.

೫) **ತಿಮ್ಮಣಾರಾಧ್ಯ**[೨೪]: ಕೋಪೀಶ ವಂಶದವನು. ದಾ. ೨೭ ನೇ ಶಾಸನದ ಕವಿ ಮಲ್ಲಣಾರಾಧ್ಯನ ತಂದೆ ಈತ.

೬) **ದಾನಪ್ಪ**[೨೫]: ಭಾನುವಳ್ಳಿಯ ಧರ್ಮಸತ್ರಕ್ಕೆ ದಾನ ಬಿಟ್ಟಿದ್ದಾನೆ.

೭) **ಸುಂಕದ ಹರಿಯಪ್ಪ**[೨೬]: ಹೆಸರೇ ಹೇಳುವಂತೆ ಈತ ಸುಂಕದ ಅಧಿಕಾರಿ. ಸುಂಕದ ಹಣವಲ್ಲಿ ಶ್ರೀಯೋಗೇಶ್ವರ ದೇವರಿಗೆ ನೈವೇದ್ಯಕ್ಕೆಂದು ದಾನ ನೀಡಿದ್ದಾನೆ.

೮) **ಸೂರ ಪೈ**: ಈತನ ತಂದೆ ಚದುಪುರಾಲ ಕೋದಂಡರಾಜು. ತೆಲುಗಿನವನಾದ ಈತ ಹರಿಹರೇಶ್ವರ ರಥದ ಜೀರ್ಣೋದ್ಧಾರ ಮಾಡಲಿಕ್ಕೆಂದು, ಹರಿಹರದ ಹತ್ತಿರವಿರುವ ಗಂಗನರಸಿ ಗ್ರಾಮವನ್ನು ಒತ್ತೆಯಿಟ್ಟು ನಂತರ ಬಿಡಿಸಿಕೊಂಡನು.

೯) **ಸಿಂಗನಾಯಕ**[೨೭]: ಹಿಂದೆ ಹರಿಹರವನ್ನು ದಾನ ಮಾಡಿದ್ದು, ನಂತರ ಅದರ ಪುನರ್ ದತ್ತಿಯನ್ನು, ಹರಿಹರದ ಮಹಾಜನರಿಗೆ ವಿಷ್ಣುಪಾದಕ್ಕೆಂದು ಧಾರೆಯೆರೆಯುವುದರ ಮೂಲಕ, ಈತನ ಮಗ ಖಂಡೇರಾಯನು ಪುನರ್ ನವೀಕರಿಸಿದ್ದಾನೆ. ಕಮ್ಮಟದುರ್ಗದ ಸ್ಥಾಪಕನು ಈತನೇ ಎಂದು ಶಾಸನವು ಹೇಳುತ್ತದೆ.

೧೦) **ಹಂಪರಸ**[೨೮]: ನಾಗತಿಯರಸನ ಚಿಕ್ಕಪ್ಪ ಈತ. ಇವನ ತಮ್ಮ ಸತ್ತಿಯರಸ.

ಹೀಗೆ ಹರಿಹರದ ಶಾಸನಗಳು ಆಯಾಕಾಲಘಟ್ಟದ ಜನ, ಸೇವೆಯನ್ನು ಈಶ ಸೇವೆಯ ಹೆಸರಿನಲ್ಲಿ ಮಾಡಿದುದರ ಐತಿಹಾಸಿಕ ದಾಖಲೆಗಳಾಗಿವೆ.

ಹರಿಹರದ ಈ ಜನಪದ ಪರಂಪರೆಯಲ್ಲಿ ಅಂದಿನಂತೆ ಇಂದಿನವರೆಗೂ ಖ್ಯಾತಿವೆತ್ತ ರಾಜಕಾರಣಿಗಳಿಗೆ, ಕಿರ್ಲೋಸ್ಕರ್‌ರಂಥವರಿಗೆ ಕರ್ಮ ಭೂಮಿಯಾಗಿದೆ. ಭಿರ್ಲಾರಂಥವರು ಇಲ್ಲಿ ಕಟ್ಟಿರುವ ಧರ್ಮಛತ್ರವು, ಸಮಾಜ ಸೇವೆಯೇ ಆಗಿದೆ. ಕವಯಿತ್ರಿ ಹೆಳವನಕಟ್ಟೆ ಗಿರಿಯಮ್ಮ, ಲೇಖಕಿ ಲಲಿತಮ್ಮ, ಚಂದ್ರಶೇಖರ್ , ಡಾ॥ ಹೆಚ್, ಗಿರಿಜಮ್ಮ ಮುಂತಾದವರಿಗೆ ಸ್ಫೂರ್ತಿಯ ತಾಣವಾಗಿದೆ. ಕನ್ನಡದ ಹೆಸರಾಂತ ಸಾಹಿತಿದ್ವಯರಾಗಿದ್ದ ದಾಶರಥಿ ದೀಕ್ಷಿತ್, ನಾಡಿಗೇರ್ ಕೃಷ್ಣರಾವ್ ಅವರ ಹುಟ್ಟೂರು ಹರಿಹರ. ಪೋಲಂಕಿ ರಾಮಮೂರ್ತಿಯವರಂತಹ ಲೇಖಕರ, ಖ್ಯಾತಿ ಇತಿಹಾಸ ತಜ್ಞ ಡಾ॥ ಜಿ.ಎಸ್. ದೀಕ್ಷಿತ್ ಅವರ ಜನ್ಮಸ್ಥಾನವಾಗಿದೆ. ಶಿಕ್ಷಣ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆ ನೀಡಿದ ಶ್ರೀಶೈಲ ಜಗದ್ಗುರು ಪೀಠವನ್ನು ಅಲಂಕರಿದ್ದ ಶ್ರೀ ಪಂಡಿತಾರಾಧ್ಯರು, ಹರಿಹರೇಶ್ವರನ ಮಹಿಮೆಯನ್ನೂ, ಆತನ ಶಿಲ್ಪ ಸೌಂದರ್ಯದ ಪ್ರತಿ ಕೃತಿಯೊಂದನ್ನು ಆಂಧ್ರದ ರಾಜಧಾನಿ ಹೈದ್ರಾಬಾದ್‌ನವರೆಗೂ ಕೊಂಡೊಯ್ದಿದ್ದಾರೆ. ಶ್ರೀ ಸಮರ್ಥನಾರಾಯಣ ಮಹಾರಾಜರವರಿಗೂ ಹರಿಹರ ಸ್ಫೂರ್ತಿ, ತಪಸ್ಸಿನ ಕೇಂದ್ರವಾಗಿದೆ. ಮೇರಿ ಮಾತೆಯ ಹೆಸರಿನಲ್ಲಿ ನಿಂತಿರುವ ಚರ್ಚು ಹಾಗೂ ಹರಿಹರೇಶ್ವರನ ರಥವಿರುವ ತಾಣದ ಮುಂದೆಯೇ ಕಟ್ಟಲಾಗಿರುವ ಮುಸ್ಲಿಂ ಬಾಂಧವರ ಮಸೀದಿ, ಊರಮ್ಮನ ದೇವಸ್ಥಾನ, ಶಿವಾಜಿಯ ದೇಗುಲ ಇಂತಹ ಹತ್ತು ಹಲವು ಸ್ಮಾರಕಗಳು ಸರ್ವಧರ್ಮ ಸಮನ್ವಯದ ಹಾದಿಯಲ್ಲಿ ನಡೆದಿರುವ ಇಂದಿನ ಜನಪದದ ಸಂಕೇತವಾಗಿದೆ. ಅಂದಿನವರ ಆದರ್ಶ ಗುಣಗಳಲ್ಲಿ ಕೆಲವನ್ನಾದರೂ ಇಂದೂ ಕಾಣಬಹುದಾಗಿದೆ.

**ಆಕರಗಳು**


೧) ಎಪಿಗ್ರಾಫಿಯಾ ಕರ್ನಾಟಕ ಚಿತ್ರದುರ್ಗ ಜಿಲ್ಲೆ, ಕ್ರಮ ಸಂ. XI ಬಿ.ಎಲ್.ರೈಸ್,೧೯೦೩,

೩) ಸ್ವಸಮೀಕ್ಷೆ.


**ಅಡಿಟಿಪ್ಪಣಿಗಳು**

೧ ಶಾಸನ ಸಂಖ್ಯೆ ೩೫. ಕ್ರಿ.ಶ. ೧೧೬೦.
೨ ಶಾ. ಸಂ. ೪೨ ಕ್ರಿ.ಶ. ೧೧೬೨.
೩ ಶಾ. ಸಂ. ೨೪. ಕ್ರಿ.ಶ. ೧೫೩೯.
೪ ಶಾ. ಸಂ. ೪೨. ಕ್ರಿ.ಶ. ೧೧೬೪.
೫ ಶಾ. ಸಂ. ೪೧. ಕ್ರಿ.ಶ. ೧೧೪೮.
೬ ಶಾ. ಸಂ. ೫೯. ಕ್ರಿ.ಶ. ೧೨೭೭.
೭ ಶಾ. ಸಂಖ್ಯೆಗಳು; ೪೨. ಕ್ರಿ.ಶ. ೧೧೬೪; ೩೯. ಕ್ರಿ.ಶ. ೧೧೬೮; ೩೨. ಕ್ರಿ.ಶ. ೧೧೭೨; ೪೪. ಕ್ರಿ.ಶ. ೧೧೮೦.
೮ ಶಾಸನ. ಸಂಖ್ಯೆ ೨೫. ಕ್ರಿ.ಶ. ೧೨೨೪.
೯ ಶಾ. ಸಂಖ್ಯೆ ೨೩. ಕ್ರಿ.ಶ. ೧೪೧೦.
೧೦ ಶಾ. ಸಂ. ೨೯. ಕ್ರಿ.ಶ. ೧೪೨೪.
೧೧ ಶಾ. ಸಂ. ೨೫. ಕ್ರಿ.ಶ. ೧೨೨೪.
೧೨ ಶಾ. ಸಂ. ೨೨. ಕ್ರಿ.ಶ. ೧೫೫೪.
೧೩ ದಾ. ಶಾ. ಸಂ. ೩೫. ಕ್ರಿ.ಶ. ೧೧೬೦.
೧೪ ದಾ. ಶಾ. ಸಂ. ೨೯. ಕ್ರಿ.ಶ. ೧೪೨೪.
೧೫ ದಾ. ಶಾ. ಸಂ. ೪೪. ಕ್ರಿ.ಶ. ೧೧೮೦.
೧೬ ದಾ. ಶಾ. ಸಂ. ೫೬. ಕ್ರಿ.ಶ. ೧೨೬೨.
೧೭ ದಾ. ಶಾ. ಸಂ. ೩೭. ಕ್ರಿ.ಶ. ೧೪೭೯.
೧೮ ದಾ. ಶಾ. ಸಂ. ೫೫. ಕ್ರಿ.ಶ. ೧೨೫೯.
೧೯ ದಾ. ಶಾ. ಸಂ. ೫೭. ಕ್ರಿ.ಶ. ೧೨೫೫.
೨೦ ದಾ. ಶಾ. ಸಂ. ೨೭. ಕ್ರಿ.ಶ. ೧೫೩೮.
೨೧ ದಾ. ಶಾ. ಸಂ. ೩೦. ಕ್ರಿ.ಶ. ೧೫೬೨.
೨೨ ದಾ. ಶಾ. ಸಂ. ೩೦. ಕ್ರಿ.ಶ. ೧೫೬೨.
೨೩ ದಾ. ಶಾ. ಸಂ. ೫೨. ಕ್ರಿ.ಶ. ೧೨೬೭.
೨೪ ದಾ. ಶಾ. ಸಂ. ೨೭. ಕ್ರಿ.ಶ. ೧೫೩೮.
೨೫ ದಾ. ಶಾ. ಸಂ. ಕ್ರಿ.ಶ. ೧೫೫೪.
೨೬ ದಾ. ಶಾ. ಸಂ. ೬೧. ಕ್ರಿ.ಶ. ೧೧೭೨.
೨೭ ದಾ. ಶಾ. ಸಂ. ೨೬. ಕ್ರಿ.ಶ. ೧೩೦೦.
೨೮ ದಾ. ಶಾ. ಸಂ. ೩೨. ಕ್ರಿ.ಶ. ೧೧೭೧.

*****

# ತುಳುನಾಡಿನ ಶಾಸನಗಳಲ್ಲಿ ಅಳತೆ ಪ್ರಮಾಣ

* ಡಾ. ಇಂದಿರಾ ಹೆಗ್ಗಡೆ

ಕರ್ನಾಟಕದ ಕರಾವಳಿಯ ಬೈಂದೂರಿನಿಂದ ಕೇರಳದ ಕಾಸರಗೋಡಿನವರೆಗೆ ತುಳುನಾಡು. ಆಧುನಿಕ ದಿನಗಳಲ್ಲಿ ಬ್ರಹ್ಮಾವರದ ಉತ್ತರಕ್ಕೆ ತುಳು ಭಾಷಿಕರು ಕಡಿಮೆ ಇದ್ದರೂ ಇಲ್ಲಿಯದು ತುಳು ಮಿಶ್ರತ ಕನ್ನಡ. ಈ ಪ್ರದೇಶದಲ್ಲಿ ದೊರಕುವ ಶಾಸನಗಳು ಮಾತ್ರ ಈ ಬಹಳ ಹಿಂದೆ ತುಳು ಭಾಷಿಕರ ನಾಡಗಿತ್ತು ಎನ್ನುವುದನ್ನು ಸಾದರಗೊಳಿಸುತ್ತವೆ. ಬೈಂದೂರಿನಿಂದ ಕಾಸರಗೋಡಿನವರೆಗೆ ಬಳಸುವ ಅಳತೆಯ ಮಾಪನಗಳನ್ನು ತುಳುನಾಡಿನಲ್ಲಿ ಶಾಸನಗಳಲ್ಲಿ ದಾಖಲಾಗಿವೆ. ರೂಢಿಯಲ್ಲಿ ಇರುವ ಅಳತೆ ಮಾಪನಗಳು ಹೀಗಿವೆ.

೧ ಮುಡಿ –೩ ಕಲಸೆ ಅಕ್ಕಿ
೧ ಕಲಸೆ–೧೪ ಸೇರು (ಬೇರೆ ಬೇರೆ ಅಳತೆಯ ಕಲಸೆ ಇದೆ.)
೧ ಸೇರು –೪ ಪಾವು.
೧ ಪಾವು –೨ ಕುಡ್ತೆ (ಕುಡ್ತೆ ಸಾಮಾನ್ಯವಾಗಿ ದ್ರವ ಪದಾರ್ಥದ ಅಳತೆ ಮಾನ)
೧ ಕುತ್ತಿ –೯ ಕುಡ್ತೆ (ದ್ರವ ಪದಾರ್ಥದ ಅಳತೆ ಮಾನ.)– ಪಾಡದ ಎಣ್ಣೆ ಕುತ್ತಿದ ನೆಯಿ ಎಂಬುದು ರೂಢಿ ಮಾತು.
೧ ಪಾಡ(ಕಲ್ಪಡ)–೨ ಕುತ್ತಿ ಎಣ್ಣೆಯ ಅಳೆತ (ಮಣ್ಣಿನ)ಪಾತ್ರೆ –ಪಾಡದ ಎಣ್ಣೆ ಕುದ್ವೆವ (ಮಣ್ಣಿನ ಸಣ್ಣ ಮಡಕೆ)ನೆಯಿ–
ತುಪ್ಪ ಎನ್ನುವುದು ರೂಢಿ ಮಾತು.
೧ ಬಳ್ಳ – ೩ ಪಾವು
೧ ಬಳ್ಳ – ೫ ಪಾವು (ಕಾಸರಗೋಡು ಕಡೆ)
೧ ಬಳ್ಳ – ೪ ಮಾನ
೧ ಕೊಳಗ –೪ ಬಳ್ಳ
೧ ಖಂಡುಗ/ಕಂಡಿ, ೨೦ ಮಣ, ಸು. (೨೫೦ ಕಿಲೋ ತೂಕ)
೧ ಮಣ –ಸುಮಾರು ೪೦ ಸೇರು
೧ ಪಲ್ಲ –೧೦೦ ಸೇರು.
೧ ಹಾ(ಪಾ)ನೆ ೩.೫ ಸೇರು (ಮರ ಬಿದಿರು ಬಿಳಲು ಮೊದಲಾದುವುಗಳಿಂದ ಮಾಡಿದ ಅಳತೆ ಸಾಧನ–ತು.ನಿ)

ಶಾಸನಗಳಲ್ಲಿ ಮುಡಿ, ಹಾನೆ /ಹೇರು. ಬಳ್ಳ ಕಲಸೆ, ಕೊಳಗ ಖಂಡುಗ, ಪಡಿ ಮಾನ, ಪಲ, ಪುಟ್ಟಿಗೆ– ಬುಟ್ಟಿ, ಕುಡ್ತೆ – ಮುಂತಾದ ಅಳತೆ ಮಾಪನಗಳು ಇವೆ. ಹೇರು ಎಂಬುದು ಕೆಲವೆಡೆ ಹೊರೆ ಎಂಬರ್ಥದಲ್ಲಿಯೂ ಇನ್ನು ಕೆಲವೆಡೆ ಸೇರು ಎಂಬರ್ಥವದಲ್ಲಿಯೂ ಪ್ರಯೋಗಗೊಂಡಿದೆ. ಕ್ರಿ.ಶ. ೧೨೭೧ರ ಆಳುಪ ರಾಣಿ ಬಲ್ಲಮಹಾದೇವಿಯ ಶಾಸನದಲ್ಲಿ "ನಿರುವಾರದ ಭಗವತಿಗೆ ಅಯ್ದು ಮಾನ ಅಕ್ಕಿಯ ಮೂಡೆ' ಕೊಟ್ಟ ಮಾಹಿತಿ ಇದೆ..(S.I.I.Vol. XXVII No. 214) ವೀರ ಪಾಂಡ್ಯನ ಹಿರಿಯಂಗಡಿ ಶಾಸನದಲ್ಲಿ (ಕ್ರಿ.ಶ. ೧೫೪೫) ಖಂಡುಗದ ಅಳತೆ ಮಾಪನದಲ್ಲಿ ಅಕ್ಕಿಯ ಲೆಕ್ಕ ನೀಡಲಾಗಿದೆ. "ಅಕ್ಕಿ ಖಂಡುಗ ೧೬೬..."(S.I.I.Vol., VII No 248) ಈ ಶಾಸನದಲ್ಲಿ ಅನೇಕ ಕಡೆ 'ಖಂಡುಗ' ಉಲ್ಲೇಖವಾಗಿದೆ. ವೀರ ಕುಲಶೇಖರನ ಕ್ರಿ.ಶ. ೧೨೦೪ರ ಶಾಸನದಲ್ಲಿ ನಿತ್ಯ ಪಡಿಗೆ ಕೊಳಗ ೪ರ ಉಲ್ಲೇಖವಿದೆ. (ಕೆ.ವಿ ರಮೇಶ ಮತ್ತು ಎಂ. ಜಿ. ಶರ್ಮ ತುಳುನಾಡಿನ ಶಾಸನಗಳು ಸಂ ೩೭)

ಒಂದು ಮುಡಿ ಅಕ್ಕಿ ಎಂದರೆ ೪೨ ಸೇರು ಅಕ್ಕಿ ಎಂದು ಲೆಕ್ಕ. ಹಿಂದೆ ಸೇರಿನ ಅಳತೆಗಿಂತ ಬಳ್ಳದ ಅಳತೆ ಹೆಚ್ಚಾಗಿ ಇತ್ತು ಈಗಲೂ ಅನೇಕ ಮನೆಗಳಲ್ಲಿ ಬಳ್ಳ ಇದೆ. ಇದು ಮರದಿಂದ ಕೊರದು ಮಾಡಿದ ಅಳತೆ ಮಾಪನ. ಕಲಸೆ ಪಾವು

* ನಂ. ೬ ಕೃಷ್ಣಾ ರೆಸಿಡೆನ್ಸಿ, ೪ನೆಯ ತಿರುವು ಅಮರಜ್ಯೋತಿ ನಗರ, ವಿಜಯನಗರ ಬೆಂಗಳೂರು ೪೦ ದೂ: ೯೮೪೫೫೭೭೫೫೩

ಸೇರು ಕೂಡಾ ಮರದಿಂದ ಕೊರೆದು ತಯಾರಿಸುತ್ತಾರೆ. ಮುಂದೆ ಚೆಂಬಿನ ಸೇರು ಪಾವು ಬಂತು. ಬಳ್ಳ ಮೂಲೆಗುಂಪಾಯಿತು. ಆದರೂ ಈಗಲೂ ಕೆಲವು ಆಚರಣೆಗಳಿಗೆ ಬಳ್ಳ ಬೇಕಾಗುತ್ತದೆ.

ಶಾಸನಗಳಲ್ಲಿ ಬೀಜದ ಭತ್ತದ ಮುಡಿಯು ಬಳ್ಳದ ಅಳತೆಯಲ್ಲಿ ಇವೆ. ಬೆಟ್ಟಿನ ಗದ್ದೆ ಒಂದಕ್ಕೆ ಬೀಜ ಬಳ್ಳ ಮೂವತ್ತರ ಲೆಕ್ಕದಲ್ಲಿ ಬತ್ತ ಮೂಡೆ ೨ ....ಪಾಪಿ ನದಿಯೆಂಬ ಗದ್ದೆ ೧ಕ್ಕಂ ಬೀಜ ಬಳ್ಳ ಮೂವತ್ತರ ಲೆಕ್ಕದ ಬೀಜ ಮೂಡೆ ೪ –(ಕೆ.ವಿ ರಮೇಶ ಮತ್ತು ಎಂ. ಜೆ. ಶರ್ಮ ತುಳುನಾಡಿನ ಶಾಸನಗಳು ಸಂ. ೮೭. ೧೫೫೬) ಇನ್ನು ಕೆಲವು ಶಾಸನಗಳಲ್ಲಿ ೩೦ ಬಳ್ಳಕ್ಕೆ ಒಂದು ಮುಡಿ ಲೆಕ್ಕ ನೀಡಿದೆ. ಒಂದು ಬಳ್ಳಕ್ಕೆ ೩ ಪಾವು ಲೆಕ್ಕ. ಈ ಲೆಕ್ಕದಲ್ಲಿ ಒಂದು ಮುಡಿಗೆ ೨೨.೫ ಸೇರು ಆಗುತ್ತದೆ. ೫ಪಾವು ಅಳತೆಯ ಬಳ್ಳದ ಲೆಕ್ಕದಲ್ಲಿ ೩೭.೫ ಸೇರು ಆಗುತ್ತದೆ.

ಅಕ್ಕಿ ಮುಡಿ ಅಳತೆಯ ೪೨ ಸೇರು ಭತ್ತ ಬಿತ್ತಿದರೆ ನೇಜಿದಟ್ಟಣಿ ಅಗುತ್ತದೆ ಇಲ್ಲಿಯ ಗದ್ದೆಗಳನ್ನು ಮುಡಿ ಅಳತೆಯಲ್ಲಿ ಗುರುತಿಸುತ್ತಾರೆ ಎಂಬ ವಿಚಾರ ಹಿಂದೆ ಹೇಳಿದೆ. ಒಂದು ಮುಡಿ ಗದ್ದೆ, ಎರಡು ಮುಡಿ ಗದ್ದೆ., ೬೦ ಮುಡಿ, ೨೫೦ ಮುಡಿ......ಇತ್ಯಾದಿ. ಇದೇ ಮಾಪನ ಶಾಸನಗಳಲ್ಲೂ ಬರುತ್ತದೆ. ಇದೇ ಅಳತೆ ಪದ್ಧತಿ ರೂಢಿಯಲ್ಲಿದೆ.ಇದೇ ಶಾಸನದಲ್ಲಿ ಬಳ್ಳ ಐವತ್ತರ ಲೆಕ್ಕದಲ್ಲಿ ಅಕ್ಕಿ ಮೂಡೆ ೨೪...ಎಂಬ ಉಲ್ಲೇಖ ಇದೆ. ಇದು ಮೂರು ಪಾವಿನ ಬಳ್ಳವೋ ೫ ಪಾವಿನ ಬಲ್ಲವೋ ತಿಳಿದಿಲ್ಲ. (೫ ಪಾವಿನ ಬಳ್ಳ ಕಾಸರಗೋಡು ಕಡೆ ಇದ್ದು ಈ ಕಡೆ ಸೇರಿನ ಅಳತೆ ಇಲ್ಲ ಎನ್ನುತ್ತಾರೆ.) ಒಂದು ಬಳ್ಳಕ್ಕೆ ಮೂರು ಪಾವು ಲೆಕ್ಕ. ೫೦ಬಳ್ಳಕ್ಕೆ ೩೭.೫ ಸೇರು ಅಕ್ಕಿ ಆಗುತ್ತದೆ. ೫ ಪಾವು ಲೆಕ್ಕದಲ್ಲಿ ೬೨.೫ ಸೇರು ಆಗುತ್ತದೆ. ರೂಢಿಯಲ್ಲಿ ಒಂದು ಮುಡಿಗೆ ೪೨ ಸೇರು ಆದ್ದರಿಂದ ಅಳತೆಯಲ್ಲಿ ಸ್ವಲ್ಪ ವ್ಯತ್ಯಾಸ ಕಾಣುತ್ತದೆ. ಮುಡಿ/ಮೂಡೆಯ ಅಳತೆ ನಮಗೆ ಕ್ರಿ.ಶ.೧೨೦೪ರ ಒಂದನೆಯ ಕುಲಶೇಖರನ ಶಾಸನದಿಂದ ಕಾಣಬರುತ್ತವೆ. (S.I.I.Vol., VII No.224) ಅದಕ್ಕೆ ಹಿಂದೆ ಗದ್ದೆ ದಾನ ನೀಡಿದ ಶಾಸನಗಳು ಇಲ್ಲ. ಹದಿಮೂರನೆಯ ಶತಮಾನದ ಅನಂತರ ಗದ್ದೆ, ಭೂಮಿ ದಾನ ನೀಡಿದ ಶಾಸನಗಳು ಇವೆ. ಗದ್ದೆಯ ದಾನ ಶಾಸನಗಳಲ್ಲಿ ಈ ಅಳತೆ ಕಂಡು ಬರುತ್ತದೆ.

ಹಾನೆ ಎಂಬ ಪದ ಅಕ್ಕಿಯ ಅಳತೆ ಮಾಪನವಾಗಿ ಅನೇಕ ಕಡೆ ಪ್ರಯೋಗವಾಗಿದೆ. ಆದರೆ ಸೇರು ಎಂಬ ಪದ ಬಳಕೆ ಇಲ್ಲ. ಮರದ ಹಾನೆ ಕೆಲವು ಮನೆಗಳಲ್ಲಿ ಇತ್ತು. ಅನೇಕ ಶಾಸನಗಳಲ್ಲಿ ನಾಲ್ವತ್ತು ಹಾನೆಯ ಲೆಕ್ಕದಲ್ಲಿ ಒಂದು ಮುಡಿ ಅಕ್ಕಿಯ ಅಳತೆಯ ಉಲ್ಲೇಖ ಇದೆ. ಒಂದು ಹಾನೆಗೆ ೩.೫ ಸೇರು ಆದರೆ ಮುಡಿಯ ಗಾತ್ರ ಬೃಹತ್ ಆಗಬಹುದು.

ಅಕ್ಕಿ ಕಂಚಿನ ಹಾನೆ (S.I.I.Vol., XXVII. No 171) ಎಂದರೆ ಬಹುಷ ಕಂಚಿನಿಂದ ಮಾಡಿದ ತಾಮ್ರದ ಹಾನೆ ಆಗಿರಬಹುದು. ತಾಮ್ರದ ಸೇರು ಈಗಲೂ ಇದೆ. ಮರದ ಸೇರಿನ ಅಳತೆಗಿಂತ ತಾಮ್ರದ ಸೇರು ಹೆಚ್ಚು ನಿಖರ. ತಾಮ್ರದ ಸೇರಿನಳತೆಯಲ್ಲಿ ಅಡ್ಡ ಗೀಸಿ/ಸವರಿ ಸಮ ಮಾಡಿದರೆ ಮರದ ಅಳತೆಯಲ್ಲಿ ಶಿಖರದಂತೆ ತುಂಬಿಸುತ್ತಾರೆ.

ಹಾನೆಯ ಆಳತೆಯನ್ನು ದ್ರವ ವಸ್ತುವಿಗೂ ಪ್ರಯೋಗಿಸಿರುವುದನ್ನು ಕ್ರಿ.ಶ. ೧೫ನೆಯ ಶತಮಾನದ ಬೊಮ್ಮರಬೆಟ್ಟು ಶಾಸನದಲ್ಲಿ ಕಾಣಬಹುದು. 'ಚವುತಿಗೆ ಹಾನೆ ತುಪ್ಪ, ಷಷ್ಟಿಗೆ ೩ ತೆಂಗು ತುಪ್ಪ, ಮು.೨೦ ಸೋನೆ ತಿಂಗಳು ಚವುತಿ, ಷಷ್ಟಿಗೆ ೪ ದಿವಸಕ್ಕೆ ತುಪ್ಪ ೧೩ ಹಾನೆ.....(S.I.I.Vol., XVII. No. 351')

೧ನೆಯ ಕುಲಶೇಖರನ ಮೂಡಬಿದಿರೆಯ ಕ್ರಿ.ಶ. ೧೨೦೪ರ ಶಾಸನದಲ್ಲಿ ಮೂಡೆ, ಕೊಳಗ ಮತ್ತು ಹೇರಿನ ಅಳತೆ ಮಾಪನ ಇದೆ. .....ನಿವೇದ್ಯಕ್ಕೆ ನಿತ್ಯ ಪಡಿ ಅಕ್ಕಿ ಕೊಳಗ ನಾಲ್ಕರ ಯಕ್ಕಿಯಂ ಸ್ವಾಂತೆಯವನ ಮುಂದೆ ಅಳೆದಿಕಿ ೩ ಹೇರಿಂಗೆ ನಿವೇದಿಸಿ ....೫ ಮುಟ್ಟಿನಲು ೩ ಹೇರಿಂಗೆ ತೋಟು ಗೆಯ್ಯದಿ(ರ್ದ)ಡೆ ......" (ಕೆ.ವಿ ರಮೇಶ ಮತ್ತು ಎಂ. ಜೆ. ಶರ್ಮ ತುಳುನಾಡಿನ ಶಾಸನಗಳು ಸಂ. ೩೭) ಎಂಬ ಉಲ್ಲೇಖ ಇದೆ.

**ಪಲ್ಲ:**

'ಪಲಂ' ಎಂಬ ಅಳತೆ ಪ್ರಮಾಣವು ವಿಜಯಾದಿತ್ಯ ಮಾರಮ್ಮನ ಕ್ರಿ.ಶ. ೯ನೆಯ ಶತಮಾನದ ಉದಿಯಾವರ ಶಾಸನದಲ್ಲಿ ಉಲ್ಲೇಖವಾಗಿದೆ. "...ಪಳ್ಳಿಪದಿನಾರು ಪಲಂ(ಪಲ್ಲ) ಅಡಕೆಯ ಪೇರಿಂಗೆ ಮುನ್ನೂರು ವೆಳಸಿನ ಪೇರಿಂಗೆ

ಪದಿನಾರು ಪಲಂ" 'ಪಲಂ' ಅಂದರೆ ಮೂರು ತೊಲ, ಮೂರು ರುಪಾಯಿ ತೂಕ ಈ ಬಗ್ಗೆ ಅಭಿಪ್ರಾಯ ಭೇದಗಳಿವೆ ಎಂದಿದೆ ನಿಘಂಟಿನಲ್ಲಿ. ಆದರೆ ರೂಢಿಯಲ್ಲಿ ಒಂದು 'ಪಲ/ಪಲ್ಲ' ಎಂದರೆ ೧೦೦ಸೇರು ಎನ್ನುತ್ತಾರೆ. "...ಪಳ್ತಿಪದಿನಾರು ಪಲಂ ಅಡಕೆಯ ಪೇರಿಂಗೆ.'..ಎನ್ನುವ ಶಾಸನ ಉಲ್ಲೇಖಕ್ಕೆ ರೂಢಿಯಲ್ಲಿ ಇದ್ದ ೧೦೦ ಸೇರಿನ ಅಳತೆ ನಿಖರವಾಗುತ್ತದೆ. (ಕೆ.ವಿ ರಮೇಶ ಮತ್ತು ಎಂ. ಜೆ. ಶರ್ಮ ತುಳುನಾಡಿನ ಶಾಸನಗಳು ಸಂ.೨೩ ) ಈ ಶಾಸನದಲ್ಲಿ ಸಜ್ಜುರ, ಮಟ್ಟಿ, ಮಳವೆ ಎಂಬ ಅಳತೆ ಮಾನಗಳಿವೆ. ಮಟ್ಟಿ/ಬುಟ್ಟಿ ಆಗಿರಬೇಕು. ಕೊರಗರು ರಚಿಸುವ 'ಮುಡಾಯಿ' ಆಳತೆಯಮಾಪನವಾಗಿ ಈಗಲೂ ಬಳಕೆಯಲ್ಲಿದೆ.

ವರನ್ /ಹ: ತುಳುನಾಡಿನಲ್ಲಿ 'ವರನ್' ಎಂಬ ಚಿನ್ನದ ನಾಣ್ಯದ ನೆನಪು ನನ್ನ ಹಿಂದಿನ ತಲೆಮಾರಿನವರೆಗೆ ಇತ್ತು. ನಾಲ್ಕು ಬೆಳ್ಳಿ ರುಪಾಯಿಯ ಬೆಲೆ ಒಂದು ಚಿನ್ನದ ವರನ್. ತುಳು ಪಾಡ್ದನಗಳಲ್ಲಿ ವರನ್ ಪ್ರಯೋಗ ಇದೆ. 'ಸಾವಿರ ವರನ್ ಬೆಲೆಯ ಆನೆಯೂ ಸಾಯುತ್ತದೆ'ಎಂಬ ರೂಢಿ ಮಾತು ಇದೆ. ಅನೇಕ ಶಾಸನಗಳಲ್ಲಿ 'ವರಹ'ದ ಪ್ರಸ್ತಾಪ ಇದೆ. ಕ್ರಿ.ಶ. ೧೫೪೫ರ ಶಾಸನದಲ್ಲಿ ವರಹ ಗದ್ಯಾಣದ ಉಲ್ಲೇಖ ಇದೆ. (S.I.I.Vol. VII No 248) 'ವರಹ' ಹೋಗಿ 'ವರನ್' ಎಂದು ರೂಢಿಯಾಗಿರಬಹುದು.

**ಪಣ –ತುಳು ಪಣವು:**

'ಬಂಗಾರದ ನಾಣ್ಯಗಳನ್ನು ಶಾಸನಗಳಲ್ಲಿ 'ಪೊನ್ನು' ಅಥವಾ 'ಹೊನ್ನು' ಎಂದು ಕರೆಯಲಾಗಿದೆ. ಕೆಲವು ಕಡೆ 'ಪಣ' ಎಂದು ಪ್ರಯೋಗಿಸಲಾಗಿದೆ. (ಕೆ.ವಿ.ರಮೇಶ. ತುಳುನಾಡಿನ ಇತಿಹಾಸ ಪು ೭೪) ಸಿರಿ ಪಾಡ್ದನದಲ್ಲಿ 'ಐನ್ ಪಣವು'ದ ಕಾಸ್ ದೀತೆರುಗೆನಾ..." ಎಂಬ ನಿರೂಪಣೆಯಲ್ಲದೆ ಸಿರಿಯ ಮತ್ತೊಂದು ಪಾಠದಲ್ಲಿ 'ಬೊಂಬೆ ಪಣವು' ಎಂಬ ನಿರೂಪಣೆ ಇದೆ.

ಈಗ ರೂಢಿಯಲ್ಲಿ ಪಣ ಎನ್ನುವುದು ಬಂಗಾರದ ನಾಣ್ಯ ಅಲ್ಲ. ಒಂದು ಪಣವುದು ಕಾಸ್ ಎಂದರೆ ಈಗಿನ ನಾಲ್ಕಾಣೆ. ನಾಲ್ಕಾಣೆಗೆ ಪಣ, ಪಣವು ಎಂದು ಕರೆಯುವ ರೂಢಿ ಇದೆ. ತುಳುನಾಡಿನಲ್ಲಿ ಈಗಲೂ ಮದುವೆ ಮುಂತಾದ ಸಂಸ್ಕಾರ ಸಮಾರಂಭಗಳಲ್ಲಿ ದೇವರಿಡುವ ಪದ್ಧತಿ ಇದೆ. ಇದಕ್ಕೆ 'ಐನ್ ಪಣವು' (ಐದು ಪಣವು) ಹಾಕಬೇಕು. ನಾಲ್ಕಾಣೆಯ ೫ ಪಾವಲಿ. ತುಳುವರಲ್ಲಿ ಮುಡಿಪು ಕಟ್ಟುವ ಪದ್ಧತಿ ಇದೆ. ಇದನ್ನು 'ಪಣವು ಕಟ್ಟುವುದು' ಎಂದೂ ಕರೆಯುತ್ತಾರೆ. ಕುಟುಂಬದ ಸದಸ್ಯರನ್ನು ಲೆಕ್ಕ ಹಾಕಿ ತಲೆಗೆ ನಾಲ್ಕಾಣೆ (ಒಂದು ಪಣವು)ಯಂತೆ ಹುಂಡಿಗೆ ಹಾಕುವ ಪದ್ಧತಿ ಉಳಿದು ಬಂದಿದೆ. ಕ್ರಿ.ಶ. ೧೪೫೧ರ ಸುರಾಲು ಶಾಸನದಲ್ಲಿ "ಅದಕೆ ಒಂದು ಹಣವ ತಂಬುಗೆಯಲಿ ...ಯಿಕ್ಕಿ ಎರೆವುದು" (SII.,VOL.XVII.No. 363) ಎನ್ನಲಾಗಿದೆ. ಧಾರೆ ಎರೆಯುವಾಗ ಧಾರೆಯಗಿಂಡಿಯ ನೀರನಲ್ಲಿ ಪಣವು ಹಾಕುವ ಪದ್ಧತಿ ಇದೆ. ಈಗೀಗ ಕೆಲವರು ಒಂದು ಸವರನ್ ಅಥವಾ ಉಂಗುರ ಹಾಕುತ್ತಾರೆ.

**ಎಣ್ಣೆಯ ಅಳತೆ ಕಲ್ಪಡ /ಹಾಡ? :**

ಕ್ರಿ.ಶ. ೧೩೭೮ರ ಬಾರಕೂರು ಶಾಸನದಲ್ಲಿ ತೆಂಗಿನ ಕಾಯಿಯ ಲೆಕ್ಕದಲ್ಲಿ ಎಂಣೆಯ ಅಳತೆ ನೀಡಿರುವುದನ್ನು ಕಾಣಬಹುದು. "....ಎರಡು ತಳುವಂಗೆ ಎಂಣೆ ತೆಂಗು ೩ ದೇವರ ಒಳಸುತ್ತು ಪಉಳಿಯ ದೀವಿಗೆಗೆ ಎಂನೆ ತೆಂಗು ೬ ನಂದಿ ಮಂಟಪದ ಸುತ್ತು ತಳುವಿಂಗೆ ಎಂಣೆ ತೆಂಗು ೬...ಅಂತು ಎಂಣೆತೆಂಗು ೧೫ ....." ಇತ್ಯಾದಿ. (S.I.I.Vol., VII. No.316) ಕೆಲವು ಶಾಸನಗಳಲ್ಲಿ 'ಹಾಡ' ಎಂಬ ಎಂಣೆಯ ಅಳಯೆ ಮಾಪನ ಇದೆ. 'ತೆಂಗಿನೆಂಣೆಯ ಹಾಡ ೪ ಉದಯ ಪೂಜೆಗೆ ಎಂಣೆಯ ಹಾಡ ಮುಕ್ಕಾಲು (ಕೆ.ವಿ ರಮೇಶ ಮತ್ತು ಎಂ. ಜೆ. ಶರ್ಮ ತುಳುನಾಡಿನ ಶಾಸನಗಳು ಸಂ.೭೪)

ತುಳುಭಾಷೆಯಲ್ಲಿ 'ಕಲ್ಪಡ' ಎನ್ನುತ್ತಾರೆ. ಎಣ್ಣೆ ತುಂಬಿಸಿಡುವ ದೊಡ್ಡ ಮಣ್ಣಿನ ಪಾತ್ರೆಯನ್ನು 'ಕಲ್ಪಡ' ಎನ್ನುತ್ತಾರೆ. ಕಲ್ಪಡ>ಪಾಡ>ಹಾಡ. ಹಿಂದೆ ಕಲ್ಲಿನಲ್ಲಿ ಪಾಡವನ್ನು ತಯಾರಿಸುತ್ತಿದ್ದಿರಬೇಕು. ನಿತ್ಯಬಳಕೆಯ ಎಣ್ಣೆಯ ಚಿಕ್ಕ ಕಂಚಿನ ಪಾತ್ರೆಯನ್ನು 'ಅರಿಯ' ಎನ್ನುತ್ತಿದ್ದರು.

ಕುಡ್ತೆ ಎಂಬ ಅಳತೆ ಮಾಪನವೂ ಶಾಸನದಲ್ಲಿ ಇದೆ. ೬ ಕುಡ್ತೆಗೆ ಒಂದು ಲೀಟರ್ ಆಗುತ್ತದೆ. ಈಗಲೂ ತುಪ್ಪ, ಎಣ್ಣೆ , ಹಾಲನ್ನು ಹಳ್ಳಿಗಳಲ್ಲಿ ಕುಡ್ತೆಯಲ್ಲಿ ಅಳೆಯುತ್ತಾರೆ. ಕ್ರಿ.ಶ. ೧೪೧೩ರ ಇರುವೈಲಿನ ಶಾಸನದಲ್ಲಿ 'ದೇವರ ಕುಡುತೆಯಲಿ ಇಪ್ಪತ್ತು ಕುಡ್ತೆ ಎಂಣೆ ಕೊಟ್ಟು ಬಿಟ್ಟರು' ಎಂದು ಉಲ್ಲೇಖವಾಗಿದೆ. (S.I.I.Vol., XVII No 353) ಇತರ ಕೆಲವು ಶಾಸನಗಳಲ್ಲಿಯೂ ಕುಡ್ತೆಯ ಅಳತೆಮಾಪನದಲ್ಲಿ ಅಳತೆ ತೋರಿಸಲಾಗಿದೆ. 'ನಿತ್ಯ ನಡೆವ ನೈವೇದ್ಯಕ್ಕೆ ೪ ಕುಡುತೆ ಅಕ್ಕಿಯ ಮುಳುಕ...'. (S.I.I.Vol., XVII No 351') ಎಂದಿದೆ. ಎರಡು ಕುಡ್ತೆ ಅಕ್ಕಿ ಒಂದು ಪಾವು ಆಗುತ್ತದೆ.

**ಪಡಿ :**

ಪಡಿಯಕ್ಕಿ ಅಳೆಯುವುದು ಎಂದರೆ ಅಕ್ಕಿ ಅಳೆದು ಕೊಡುವುದು. 'ನಿತ್ಯ ಪಡಿ' ಎಂದರೆ ನಿತ್ಯ ಕೊಡಬೇಕಾದ ಅಕ್ಕಿಯನ್ನು ಕೊಡುವುದು. ತುಳುನಾಡಿನಲ್ಲಿ ಈಗಲೂ ರೂಢಿಯಲ್ಲಿರುವ 'ಪಡಿ'ಯ ಪದ್ಧತಿ ೧೨೦೦ವರ್ಷಗಳಿಂದ ಮುಂದುವರಿದಿದೆ. ಕ್ರಿಶ ೮ನೆಯ ಶತಮಾನದ ಉದಿಯಾವರ ಶಾಸನದಲ್ಲಿ 'ನಿತ್ಯ ವ್ಯವಸ್ಥೆ ಪಡಿ, ಮೆಳಸು ಅಕ್ಕಿಯುಳ್ಳ ನೆಲ್ಲುಳ್ಳಮುದಿಯಪುರ (ಕೆ.ವಿ. ರಮೆಶ ಮತ್ತು ಎಂ ಜೆ. ಶರ್ಮ ತುಳುನಾಡಿನ ಶಾಸನಗಳು ಸಂ.೧೨) ಎಂಬ ಉಲ್ಲೇಖವನ್ನು ಕಾಣಬಹುದು. ಕ್ರಿ.ಶ. ೧೨೦೪ರ ವೀರ ಕುಲಶೇಖರನ ಶಾಸನದಲ್ಲಿ ದುರ್ಗಾ ದೇವಿಗೆ ನೈವೇದ್ಯಕ್ಕೆ .....ನಿತ್ಯ ಪಡಿ ಅಕ್ಕಿ ಕೊಳಗ ೪ರ ಅಕ್ಕಿಯಂ..." SII.,VOL.VII,No.224) ಎಂಬ ಮಾಹಿತಿ ಇದೆ. ಆಳುಗಳ ಊಟದ ಬದಲಿಗೆ ನೀಡುವ ಅಕ್ಕಿಯನ್ನು 'ಪಡಿ' ಎಂದೂ ಕರೆಯುತ್ತಾರೆ. ಬ್ರಾಹ್ಮಣರಿಗೆ ನೀಡುವ ಪಡಿ ದಾನ ರೂಪದಲ್ಲಿ ಇರುತ್ತದೆ. 'ಪಡಿದಾನ'ದಲ್ಲಿ ಅಕ್ಕಿ ಅಗತ್ಯವಾಗಿ ಇರುತ್ತದೆ. ಇತರ ವಸ್ತುಗಳು ಐಚ್ಛಿಕವಾಗಿರುತ್ತದೆ. ಮೃತರ ಮೋಕ್ಷಾರ್ಥ ಮಹಾಲಯ ಅಮವಾಸ್ಯೆಯಂದು ಹಾಗೂ ಉತ್ತರಕ್ರಿಯೆಯಂದು ಬ್ರಾಹ್ಮಣರಿಗೆ ನೀಡುವ ಅನೇಕ ಬಗೆಯ ದಾನವನ್ನೂ 'ಪಡಿದಾನ' ಎನ್ನುತ್ತಾರೆ. ಮೇಲಿನ ಶಾಸನದಲ್ಲಿ ನಿತ್ಯ ನೈವೇದ್ಯಕ್ಕೆ ಬೆಕಾಗುವ 'ಪಡಿ'ಗೆ ಮಾಡಿದ ವ್ಯವಸ್ಥೆ ವಿವರ ಇದೆ.

ಹೀಗೆ ತುಳುನಾಡಿನ ಶಾಸನಗಳಲ್ಲಿ ಅಳತೆ ಪ್ರಮಾಣಗಳು ಶಾಸನಾಂಕಿತವಾಗಿದೆ.. ಇವುಗಳಲ್ಲಿ ಕೆಲವು ಅಳತೆಗಳು ಈಗಲೂ ರೂಢಿಯಲ್ಲಿವೆ.

*****

# ಶಿವಗಂಗೆಯ ಪ್ರಾಚೀನತೆ : ಶಾಸನೋಕ್ತ ಸ್ಥಳನಾಮಗಳ ಹಿನ್ನೆಲೆಯಲ್ಲಿ

* ಡಾ. ಪಿ. ವಿ ಕೃಷ್ಣಮೂರ್ತಿ

ಮನುಕುಲದ ಇತಿಹಾಸದ ವಿವಿಧ ಮುಖಗಳಾದ ಧರ್ಮ, ಜಾತಿ, ಬುಡಕಟ್ಟು, ಕೃಷಿ, ಕಸಬು, ಆರ್ಥಿಕತೆ, ಭಾಷೆ-ಸಾಹಿತ್ಯ, ಕಲೆ ಇತ್ಯಾದಿಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಚಾರಿತ್ರಿಕ ನಾಮಗಳ ಅಧ್ಯಯನ ಬಹಳ ಸಹಕಾರಿ ಎಂಬುದು ನಿರ್ಧಾರವಾಗಿದೆ. ನಮ್ಮ ನಾಡಿನ ಪ್ರಾಚೀನತೆಗೆ ಸಂಬಂಧಿಸಿದ ಎಲ್ಲ ವಿಷಯಗಳಿಗೆಂತೋ ಅಂತೆ ಪ್ರಾಚೀನ ನಾಮಶಾಸ್ತ್ರದ ಜ್ಞಾನಕ್ಕೆ ಕೂಡ ನಾವು ಮುಖ್ಯವಾಗಿ ಶಾಸನ ದಾಖಲೆಗಳನ್ನು ಅವಲಂಬಿಸಬೇಕಾಗಿದೆ. ಆ ಆಕರಗಳಿಂದಲೇ ನಾಮಗಳ ಅಂಶಗಳನ್ನು ಹೊರತೆಗೆಯಬೇಕು. ಹೆಚ್ಚಿನ ವಿವರಗಳನ್ನು ಮಾತ್ರ ಹೊರಗಿನ ಆಕರಗಳಿಂದ ಅಂದರೆ ಧಾರ್ಮಿಕ ಗ್ರಂಥಗಳು, ಮಹಾಕಾವ್ಯ, ಸಾಮಾನ್ಯಕಾವ್ಯ, ಚಾರಿತ್ರಿಕಕಾವ್ಯ, ಸಾಹಿತ್ಯ ಕೃತಿಗಳ ಆದ್ಯಂತಗಳು, ಪ್ರವಾಸಿಕಥನ, ಪೌರಾಣಿಕ ಭೂಗೋಳ, ಪಾರಂಪರಿಕ ಐತಿಹ್ಯಗಳು, (ವಂಶಪತರ್?), ಇತಿವೃತ್ತಗಳು, ಭೂಸಂಬಂಧಿ ದಾಖಲೆಗಳು, ಸೈನಿಕ ವೃತ್ತಾಂತಗಳು, ದೇವಾಲಯದ ದಾಖಲೆಗಳು ಮತ್ತು ಹಳೆಯ ನಕ್ಷೆಗಳೇ ಮುಂತಾದವುಗಳ ನೆರವಿನಿಂದ ತಕ್ಕಮಟ್ಟಿಗೆ ಪಡೆದುಕೊಳ್ಳಬಹುದಾಗಿದೆ.

ಒಂದು ನಿರ್ದಿಷ್ಟ ಪ್ರದೇಶದ ಅಥವಾ ಸ್ಥಳದ ಇತಿಹಾಸವು ಮೂಲತಃ ಅದರ ಉಗಮವನ್ನು ಆಧರಿಸುತ್ತದೆ. ಅಂದರೆ ಅದರ ಸ್ಥಳ ವಿವರಣೆ (Topography) ಲಕ್ಷಣಗಳ ವೈಶಿಷ್ಟ್ಯತೆಯನ್ನು ಅವಲಂಬಿಸಿರುತ್ತದೆ. ಯಾವುದೇ ಒಂದು ಪ್ರದೇಶದಲ್ಲಿ ಮಾನವ ವಸತಿಯ ಉಗಮಕ್ಕೆ ಕಾರಣವಾದ, ಆದರೆ ಮರೆತುಹೋದ ವಿಷಯವನ್ನು ಕಂಡುಕೊಳ್ಳುವಲ್ಲಿ ಸ್ಥಳವಿವರಣೆಯ ಅಧ್ಯಯನವು ಸಹಕಾರಿಯಾಗುತ್ತದೆ. ಸ್ಥಳವಿವರಣೆಗೆ ಸಂಬಂಧಿಸಿದ 'ನಾಮವಿಜ್ಞಾನವು (onomistics) ಭಾಷಿಕ ಸ್ತರದಲ್ಲಿ ಪ್ರಾರಂಭವಾಗಿ ಚಾರಿತ್ರಿಕ ಭೂಗೋಳ ಸ್ತರವನ್ನು ಅಪ್ಪಿಕೊಂಡು, ಸಾಂಸ್ಕೃತಿಕ ಸ್ತರದಲ್ಲಿ ಅದು ವಿರಮಿಸುತ್ತದೆ'. ಎಂಬ ವಿದ್ವಾಂಸರ ಅಭಿಪ್ರಾಯ ಗಮನಾರ್ಹವಾದುದಾಗಿದೆ. ಆದರೆ ಸಾಮಾನ್ಯವಾಗಿ ಚಾರಿತ್ರಿಕ ನಿರೂಪಣೆಗಳಲ್ಲಿ ಉಕ್ತವಾಗುವ ಸ್ಥಳನಾಮಗಳ ಪ್ರಾಚೀನ ರೂಪ ಮತ್ತು ಆ ಬಗೆಗಿನ ವಿವರಗಳು ಕಾಲಕಳೆದಂತೆ ಮಸುಕಾ.,. ಅಸ್ಪಷ್ಟತೆ ಕಾಣಿಸಿಕೊಂಡಿರುತ್ತದೆ. ಯಾವುದೇ ಸ್ಥಳದ ಹೆಸರಿಡುವಲ್ಲಿ, ಇತಿಹಾಸದ ಮೊದಲನೆಯ ಘಟ್ಟದಲ್ಲಿ ಅಲ್ಲಿಯ ನೈಸರ್ಗಿಕ ಸ್ಥಿತಿಯನ್ನೇ ಆ ಸ್ಥಳದ ನಾಮವೆಂದು ಇಡಲಾಗುತ್ತದೆ. ಎರಡನೆಯ ಘಟ್ಟದಲ್ಲಿ ಜನಾಂಗವಾಚಿಗಳೂ, ಮೂರನೆಯ ಘಟ್ಟದಲ್ಲಿ ದೈವ ಅಥವಾ ವ್ಯಕ್ತಿ ವಾಚಿಗಳೂ ಆ ಪ್ರದೇಶದ ಸಂಸ್ಕೃತಿಯ ಬೆಳವಣಿಗೆಯನ್ನು ಗುರುತಿಸಲು ನೆರವಾಗುತ್ತವೆ. ಒಟ್ಟಾರೆ ಸ್ಥಳನಾಮಗಳ ಸಹಾಯದಿಂದ ಆಯಾ ಪ್ರದೇಶದ ಸಾಮಾಜಿಕ, ಧಾರ್ಮಿಕ, ಭೌಗೋಳಿಕ ಸ್ವರೂಪವನ್ನು ಅರಿಯಲು ಬರುವಂತೆ, ಅಲ್ಲಿಯ ಸಾಮಾಜಿಕ, ಧಾರ್ಮಿಕ, ಭೌಗೋಳಿಕ ಪರಿಸರಗಳ ಸಹಾಯದಿಂದಲೂ ಕಣ್ಣಮುಂದಿರುವ ನಾಮವನ್ನು ಸರಿಯಾಗಿ ಅರ್ಥೈಸಲು ಸಾಧ್ಯವಾಗುತ್ತದೆ.

ಪ್ರಸ್ತುತ, ಶಿವಗಂಗೆ ಮತ್ತು ಅಲ್ಲಿನ ದೈವದ ಹೆಸರುಗಳನ್ನು, ಶಾಸನಗಳಲ್ಲಿ ಉಕ್ತವಾಗಿರುವ ವಿವರಗಳನ್ನು, ಗಮನಿಸೋಣ: ಶೀವಗಂಗೆಶಾಧ್ರಿ, ಕಕುದ್ಗಿರಿ, ಶಿವಗಂಗಿನಾಥದೇವರಗಿರಿ, ದಕ್ಷಿಣಕೈಲಾಸ, ದಕ್ಷಿಣಕಾಶಿ, ದಕ್ಷಿಣವಾರಾಣಾಸಿ, ಶಿವಗಂಗೆಬೆಟ್ಟ, ಶಿವಗವಿ, ಶಿವಗಂಗೆದೇವರಬೆಟ್ಟ ಎಂದು ಮುಂತಾಗಿ ಈ ಕ್ಷೇತ್ರ ಕಾಲಾನುಕ್ರಮದಲ್ಲಿ ಉಲ್ಲೇಖಿತವಾಗಿದೆ. ಈ ಶಿವಗಂಗೆಯ ಪ್ರಧಾನ ದೇವರಾದ ಶ್ರೀಗಂಗಾಧರೇಶ್ವರ ಸ್ವಾಮಿಯನ್ನು ಸಿವಗಂಗೆನಾಥ, ಶ್ರೀಗಂಗನಾಥದೇವ, ಶ್ರೀಗಂಗಾಧರದೇವರು, ಗಂಗಾಧರಸ್ವಾಮಿ ಎಂದು ಮುಂತಾಗಿ ಕರೆಯಲಾಗಿದೆ.

ಹೀಗೆ ಉಲ್ಲೇಖಗೊಂಡಿರುವ ಆ ಸ್ಥಳದ ಮತ್ತು ದೈವದ ನಾಮಗಳಲ್ಲಿ 'ಶಿವಗಂಗಿನಾಥ', 'ಸಿವಗಂಗೆನಾಥ', 'ಶ್ರೀಗಂಗನಾಥದೇವ' ಎಂಬುವು ದೇವರ ಹೆಸರಿನ ವಿಶಿಷ್ಟ ಅಂಶವನ್ನು ಒಳಗೊಂಡ, ಪ್ರಾಚೀನತಮ ಹೆಸರುಗಳಾಗಿವೆ ಇವು ಬಹುಮಟ್ಟಿಗೆ ನಾಥಪಂಥ ಪರಂಪರೆಯ ಶೈವನಾಮದ ಪಳೆಯುಳಿಕೆಗಳಂತೆ ತೋರುತ್ತವೆ.

---

* ೩೭. 'ಶ್ರೀಕೃಷ್ಣಕೃಪ', ೩ನೇ ಅಡ್ಡರಸ್ತೆ, ಸುಬ್ಬಣ್ಣಲೇಔಟ್, ಹರಿನಗರ ಕ್ರಾಸ್, ಬೆಂಗಳೂರು- ೫೬೦೦೬೨.

ಈ ಹಿನ್ನೆಲೆಯಲ್ಲಿ ಶಿವಗಂಗೆಯ ಪರಿಸರದ ಅಂದರೆ ಸುತ್ತಮುತ್ತಲ ಪ್ರಾಗೈತಿಹಾಸಿಕ ಮತ್ತು ಪ್ರಾಚೀನ ಐತಿಹಾಸಿಕ ವಿವರಗಳನ್ನು ಸೂಕ್ಷ್ಮವಾಗಿ ಅವಲೋಕಿಸುವ ಅಗತ್ಯತೆ ಕಂಡುಬರುತ್ತದೆ. ಹಾಗೆಯೇ ಅದರ ಭೌಗೋಳಿಕ ವಿವರಣೆಯನ್ನು ಗಮನಿಸಬಹುದಾಗಿದೆ.

ದಕ್ಷಿಣ ಕರ್ನಾಟಕವನ್ನು ಪ್ರಸ್ಥಭೂಮಿಯೆಂದು ಕರೆದಿದ್ದರೂ ಅದರ ಮೇಲ್ಮೈ ಸಮತಟ್ಟಾಗಿಲ್ಲ. ಅಲ್ಲಲ್ಲೆ ಹರಿಯುವ ಹೊಳೆ, ಹಳ್ಳ-ಕೊಳ್ಳಗಳು, ಆಳವಾಗಿರುವ ಕಣಿವೆಗಳು, ಮಹಾಕಂದರಗಳು ಅಚ್ಚರಿಯನ್ನುಂಟು ಮಾಡುವಷ್ಟು ಒರಟೊರಟಾಗಿರುವ ಶಿಲಾಮಾಲೆಗಳಿಂದ ಕೂಡಿದೆ. ಅದರಲ್ಲೂ ದಕ್ಷಿಣ ಕರ್ನಾಟಕದ ಬಯಲುನಾಡಿನ ದಕ್ಷಿಣದ ಮೈದಾನವು ಹೆಚ್ಚಿನ ಪ್ರಮಾಣದ ಇಳಕಲುಗಳಿಂದ ಕೂಡಿದೆ. ದಕ್ಷಿಣ ಕರ್ನಾಟಕದ ದಕ್ಷಿಣದ ಗಡಿಯಾದ ನೀಲಗಿರಿ ಶ್ರೇಣಿಯಿಂದ ಒಂದು ಬೆಟ್ಟಸಾಲು ಉತ್ತರಕ್ಕೆ ಹಬ್ಬಿದೆ. ಅದು ಬಿಳಿಗಿರಿರಂಗನ ಬೆಟ್ಟದಲ್ಲಿ ಎದ್ದು ಕಾಣುವಂತಿದ್ದು ಪಾವಗಡದವರೆಗೂ ಹಬ್ಬಿದೆ. ಉತ್ತರ ದಕ್ಷಿಣವಾಗಿ ಹರಡಿರುವ ಈ ಬೆಟ್ಟಸಾಲು ಗುಂಡಾದ ಉಬ್ಬುಗಳ ಮತ್ತು ಅರ್ಧಗೋಲಗಳ ಕಿರು ವಯಸ್ಸಿನ ಒರಟು ಹರಳಿನ ಪೆಟ್ಯಾನಿಕ್ ಗ್ರಾನೈಟುಗಳನ್ನು ಹೊಂದಿರುವ ಇವನ್ನು, ಬೈಯೋಟೈಟ್ ಮೈಕ ಹಾಗು ಫಲ್ಸಪಾರ್ ಖನಿಜಗಳನ್ನು ಹೊಂದಿರುವ 'ಕ್ಲೋಸ್ಪೇಟೆ ಗ್ರಾನೈಟ್ಗಳು' ಎಂದು ಹೆಸರಿಸಲಾಗಿದೆ. ಈ ಒರಟು ಹರಳಿನ ಗ್ರಾನೈಟುಗಳು ಸುಮಾರು ೧೬-೨೨ ಕಿ.ಮೀ ಅಗಲದ ಪಟ್ಟಿಕೆಗೆ ವಿಶೇಷವಾಗಿ ಸೀಮಿತವಾಗಿವೆ. ಈ ಪಟ್ಟಿಕೆಯ ಪ್ರದೇಶದಲ್ಲೇ ಪ್ರಸ್ತುತ ಶಿವಗಂಗಾ ಬೆಟ್ಟಗಳು ಇವೆ. ಈ ಗ್ರಾನೈಟುಗಳು ಭಾರತದ ಅತ್ಯಂತ ರಮ್ಯವಾದ ದೃಶ್ಯಗಳನ್ನು ರೂಪಿಸಿರುವ ಶಿಲಾಪುಂಜಗಳೆಂದು ಲೂಯಿರೈಸ್‌ರವರು ತಮ್ಮ ಮೈಸೂರು ಗೆಜೆಟಿಯರ್‌ನ ಮೊದಲ ಆವೃತ್ತಿಯಲ್ಲಿ ಬಣ್ಣಿಸಿರುವುದಲ್ಲದೆ ಅವು ತಳೆದಿರುವ ವಿಲಕ್ಷಣಸ್ವರೂಪಗಳಿಂದ ಅಮೇರಿಕಾದ ಡಾರ್ಟ್ ಮೂರ್‌ನ ದೃಶ್ಯಗಳನ್ನು ಮೀರಿಸುವಂತಿವೆ ಎಂದಿದ್ದಾರೆ. ಇವು ಇಳಕಲುಗಳಾದ ಕಡಿದಾದ ಮುಖಗಳುಳ್ಳ ವಿಶಿಷ್ಟ ಶಿಲಾಶೈಲಗಳಾಗಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲೂಕಿನಲ್ಲಿ ನೆಲಮಂಗಲಕ್ಕೆ ವಾಯುವ್ಯ ದಿಸೆಯಲ್ಲಿ ೩೧ ಕಿ.ಮೀ. ಅಂತರದಲ್ಲಿ ಶಿವಗಂಗೆ ಬೆಟ್ಟವು ಸಮುದ್ರ ಮಟ್ಟದಿಂದ ಸುಮಾರು ೧೩೮೦ ಮೀಟರ್ ಎತ್ತರದಲ್ಲಿದೆ. ಈ ಬೆಟ್ಟದ ಪೂರ್ವಕ್ಕೆ ಮಹಿಮರಂಗನಗುಡ್ಡ, ಪಶ್ಚಿಮಕ್ಕೆ ರಾಗಿಬೆಟ್ಟ(ರಾಮೇಶ್ವರ ಬೆಟ್ಟ) ಉತ್ತರಕ್ಕೆ ನರಸಿಂಹಬೆಟ್ಟ, ದಕ್ಷಿಣಕ್ಕೆ ಉಚುಕಲ್ಲಪ್ಪನ ಬೆಟ್ಟಗಳಿವೆ. ಶಿವಗಂಗೆಯ ಬೆಟ್ಟದಲ್ಲಿ ಪ್ರಧಾನವಾಗಿ ಗಂಗಾಧರೇಶ್ವರ ಮತ್ತು ಹೊನ್ನಾದೇವಿಯರ ಗುಹಾಂತರ ದೇವಾಲಯಗಳಿವೆ. ಅಲ್ಲದೆ ಅನೇಕ ಇತರ ದೇವರುಗಳ ಗುಡಿಗಳು, ಬಸವನ ಶಿಲ್ಪಗಳು ಹಾಗೂ ಚಕ್ರತೀರ್ಥ, ಮೌದ್ಗಲ್ಯತೀರ್ಥ, ಪಾತಾಳಗಂಗಾ ಎಂಬ ನೀರಿರುವ ಸ್ಥಳಗಳೂ, ಮೇಲಣಮಠವೆಂದು ಕರೆಯಲಾಗುವ ವೀರಶೈವಮಠ ಮುಂತಾದ ಸಂದರ್ಶನೀಯ ಎಡೆಗಳು ಸಾಕಷ್ಟು ಇವೆ.

ಪ್ರಾಗೈತಿಹಾಸಿಕವಾಗಿ, ಶಿವಗಂಗೆಯ ಬೆಟ್ಟದ ಪರಿಸರವು ಪ್ರಧಾನವಾಗಿ ಬೃಹತ್ ಶಿಲಾಯುಗದ ಅವಶೇಷಗಳಿಂದ ಕ್ರಿ.ಪೂ. ೧೨೦೦ ರಿಂದ ೨೫೦ರವರೆಗೆ ಆವೃತವಾಗಿರುವುದು ಕಂಡುಬರುತ್ತದೆ. ಈ ಬೃಹತ್ ಶಿಲಾಯುಗದ ಪಳೆಯುಳಿಕೆಗಳು ಶಿವಗಂಗೆಯ ಸುತ್ತಲಿನ ಪ್ರದೇಶವಾದ ನೆಲಮಂಗಲ ತಾಲೂಕಿನ ಎಲೆಕ್ಯಾತನಹಳ್ಳಿ, ಬಂಡೆಚಿಕ್ಕನಹಳ್ಳಿ, ಬಿಲ್ಲನಕೋಟೆ, ಮಹದೇವಪುರ, ಮಹಿಮಾಪುರ, ಮಾದಿಪುರ, ಮೈಲನಹಳ್ಳಿ, ಶ್ರೀನಿವಾಸಪುರ, ಮಾಗಡಿ ತಾಲೂಕಿನ ಅಂಕನಪಾಳ್ಯ, ಕಲ್ಯಾಣಪುರ, ಕೆಂಜಗರನಹಳ್ಳಿ, ಗಂಗರಾಜರಹಳ್ಳಿ, ಬಾಣವಾಡಿ, ಬಸವನಪುರ, ಬಿಲ್ಲನಕೋಟೆ, ಮಹಿಮಾಮರಂಗನಬೆಟ್ಟ, ವಡೇರಹಳ್ಳಿ, ಸಾವನದುರ್ಗ, ಹೂಜಿಗಲ್ಲು, ಹೊಸಪಾಳ್ಯ, ತುಮಕೂರು ಜಿಲ್ಲೆಯ ತುಮಕೂರು ತಾಲೂಕಿನ ಅಗ್ರಹಾರ, ಕೈದಾಳ, ಗೌಡನಕಟ್ಟೆ, ಚಿನಗ, ಚಿನವಾರ, ಥಣಾಪುರ, ಬಂಡೇಹಳ್ಳಿ, ಬೆಳ್ಳಿಬಟ್ಟಲಹಳ್ಳಿ, ಮಾರನಾಯಕನಪಾಳ್ಯ, ಮಂಚಕಲ್‌ಕುಪ್ಪೆ, ಸಿದ್ಧಗಂಗಾಬೆಟ್ಟ, ಸೀಗೆಹಳ್ಳ, ಹಿರೇಗುಂಡಗಲ್ಲು, ಕುಣಿಗಲ್ ತಾಲೂಕಿನ ತೆಪ್ಪಸಂದ್ರ ಗ್ರಾಮಗಳಲ್ಲಿ ಕಂಡುಬರುತ್ತವೆ. ಕ್ರಿ.ಪೂ. ೨೦೦೦ ದಿಂದ ೧೦೦೦ ದವರೆಗೆ ಅಸ್ತಿತ್ವದಲ್ಲಿದ್ದ ನೂತನಶಿಲಾಯುಗದ ಅವಶೇಷಗಳು ಮಾಗಡಿ ತಾಲೂಕಿನ ಸಾವನದುರ್ಗ, ತುಮಕೂರು ತಾಲೂಕಿನ ಕೈದಾಳ, ಜಲಗಾರದಿಬ್ಬ, ಬೆಳ್ಳಿಬಟ್ಟಲಹಳ್ಳಿ, ಮಾರನಾಯಕನಪಾಳ್ಯ, ಸಿದ್ಧಗಂಗಾಬೆಟ್ಟ, ಕುಣಿಗಲ್ ತಾಲೂಕಿನ ಗಂಗದಾನಹಳ್ಳಿ, ಹೆರೂರು ಮುಂತಾದ ಎಡೆಗಳಲ್ಲಿ ಲಭ್ಯವಾಗಿವೆ. ಹಾಗೆಯೇ ಅತ್ಯಂತ ಹಳೇ ಶಿಲಾಯುಗ ಮತ್ತು ನೂತನ ಶಿಲಾಯುಗದ ಹಲವಾರು ನಿವೇಶನಗಳು ಶಿವಗಂಗೆಯ ನೆರೆ ಹೊರೆಯ ಪ್ರದೇಶಗಳಲ್ಲಿ ಅಸ್ತಿತ್ವ ಪಡೆದಿದ್ದವು. ಹಾಗಾಗಿ ಶಿವಗಂಗೆಯ ಪರಿಸರವು ಬಹು ಪ್ರಾಚೀನ ಕಾಲದಿಂದಲೂ ಜನವಸತಿಯಿಂದ

ಕೂಡಿದ್ದಿತು. ಅಂತೆಯೇ ಕ್ರಿಪೂ. ಆಚೀಚಿನ ಅವಧಿಯಲ್ಲಿ ಬೌದ್ಧಮತದ ಪ್ರವೇಶ, ಈ ಪ್ರದೇಶಗಳಿಗೂ ಆಗಿದ್ದಿತೆಂದು ಹೇಳಬಹುದಾಗಿದೆ. ಶಿವಗಂಗೆಯ ದಕ್ಷಿಣಕ್ಕೆ ಬರುವ ಮಾಗಡಿ ತಾಲೂಕಿನ ಕಲ್ಯಪ್ರದೇಶವು ಪ್ರಾಚೀನ ಕಾಲದಲ್ಲಿ ಬೌದ್ಧಧರ್ಮದ ಪ್ರಭಾವಕ್ಕೊಳಪಟ್ಟಿದ್ದ ವಿಚಾರವನ್ನು ಪ್ರಸಿದ್ಧ ಸಂಶೋಧಕರಾದ ಡಾ॥ ಎಂ. ಚಿದಾನಂದ ಮೂರ್ತಿ ಅವರು ತಮ್ಮ ಲೇಖನವೊಂದರಲ್ಲಿ ಖಚಿತಪಡಿಸಿದ್ದಾರೆ. ಹಾಗೇ ಶಿವಗಂಗೆಯ ಉತ್ತರಕ್ಕೆ ಬರುವ ದೊಡ್ಡಬಳ್ಳಾಪುರ ತಾಲೂಕಿನ ರಾಜಘಟ್ಟದಲ್ಲಿ ಸು. ಕ್ರಿಶ. ೫–೬ನೆಯ ಶತಮಾನಕ್ಕೆ ಸೇರಿದ ಬೌದ್ಧ ಚೈತ್ಯಾಲಯ ಮತ್ತು ಮಣ್ಣಿನ (ಅರಿಕೆ) ಸ್ತೂಪಗಳು ಉತ್ಖನನದಲ್ಲಿ ಲಭ್ಯವಾಗಿದ್ದು, ಈ ಪ್ರದೇಶದಲ್ಲಿ ಬೌದ್ಧಧರ್ಮವೂ ಸಾಕಷ್ಟು ನೆಲೆಯನ್ನು ಪಡೆದಿದ್ದಿತೆಂಬುದನ್ನು ದೃಢಪಡಿಸಿದೆ. ಹಾಗಾಗಿ ಶಿವಗಂಗೆ ಪ್ರದೇಶವು ಕ್ರಿಸ್ತಪೂರ್ವದ ಆಚೀಚಿನ ಅವಧಿಯಲ್ಲಿ ಇಲ್ಲವೆ ಕ್ರಿಶ. ೭–೮ನೆಯ ಶತಮಾನಕ್ಕೆ ಹಿಂದಿನ ಅವಧಿಯಲ್ಲಿ ಬೌದ್ಧ, ಅನಂತರದಲ್ಲಿ ನಾಥಪಂಥದ ಪ್ರಭಾವಕ್ಕೆ ಒಳಪಟ್ಟಿತ್ತೆಂದು ಹೇಳಲು ಅವಕಾಶವಿದೆ. ಇಲ್ಲಿ ಬೌದ್ಧ ಮತ್ತು ನಾಥಪಂಥಗಳ ಸಂಬಂಧಗಳ ಬಗ್ಗೆ ಒಂದು ಸಣ್ಣ ವಿವರಣೆಯ ಅಗತ್ಯವಿದೆ. ಪ್ರಾಚೀನ ಬೌದ್ಧಕ್ಷೇತ್ರವಾಗಿದ್ದ ಮಂಗಳೂರು ಸಮೀಪದ ಕದರೀಕ್ಷೇತ್ರ ಮುಂದೆ ನಾಥಪಂಥದ ಕೇಂದ್ರವಾದುದು. ಈ ಹಿನ್ನೆಲೆಯಲ್ಲಿ ತಲೆಯೆತ್ತಿದ ಶೈವಪರಂಪರೆಯ ನಾಥಪಂಥ ಅದರ ಮುಂದುವರೆದ ಭೈರವ ಮತ್ತು ಮೈಲಾರದೇವರುಗಳ ಆರಾಧನೆಗಳು ಸಮಾಜದ ಕೆಳವರ್ಗದ ಜನಸಮುದಾಯಗಳಲ್ಲಿ ಬೇರೂರಿರುವುದನ್ನು ಕಾಣಬಹುದಾಗಿದೆ. ತಾಂತ್ರಿಕಾಚರಣೆ ಪ್ರಧಾನವಾದ ಮಹಾಯಾನ ಪಂಥದ ಮಿತಿಮೀರಿದ ಗೌಪ್ಯ ಆಚರಣೆಗಳು, ಸಮಕಾಲೀನ ಇತರ ಮತಗಳ ಅವಹೇಳನಕ್ಕೆ ಈಡಾಗಿ, ಕ್ರಮಕ್ರಮವಾಗಿ ಬೌದ್ಧಧರ್ಮ ತಳಕಚ್ಚಿತೇನೋ ? ಕ್ರಿಶ. ೧೨ನೆಯ ಶತಮಾನದ ವೇಳೆಗೆ ಅಳಿದುಳಿದಿದ್ದ ಬೌದ್ಧ ಅವಶೇಷಗಳು ನಾಶವಾದ ಬಗ್ಗೆ ಶಾಸನಗಳು ಬೆಳಕು ಚೆಲ್ಲುತ್ತವೆ. ಅಂತೆಯೇ ಪ್ರಾಚೀನ ಕಾಲದಲ್ಲಿ ಶಿವಗಂಗೆಯು ನಾಥಪಂಥದ ಶೈವಕ್ಷೇತ್ರವಾಗಿ ರೂಪತಾಳಿ, ಕಾಲಾಂತರದಲ್ಲಿ ಕಾಳಾಮುಖ ಇಲ್ಲವೆ ಲಾಕುಳಾಗಮಿಕರ ಶಿವಕ್ಷೇತ್ರವೆನಿಸಿ ದಕ್ಷಿಣ ಕೈಲಾಸ, ದಕ್ಷಿಣ ಕಾಶಿ, ವಾರಣಾಸಿ ಎಂದು ಮುಂತಾಗಿ ಕರೆಯಿಸಿಕೊಂಡು ತನ್ನಸ್ಥಾನದ ಪಾವಿತ್ರತೆಯನ್ನು ಔನ್ನತ್ಯಕ್ಕೇರಿಸಿಕೊಂಡಿತೆಂದು ಶಾಸನಗಳಿಂದ ಮನವರಿಕೆಯಾಗುತ್ತದೆ. 'ಶಿವಗಂಗಾ' ಎಂಬುದನ್ನು ಶುಭಕಾರಕವಾದ ತೀರ್ಥ ಅಥವಾ ಜಲ ಎಂದು ಅರ್ಥೈಸಿದರೆ ಅದು ಪ್ರಧಾನವಾಗಿ 'ಪವಿತ್ರತೀರ್ಥಕ್ಷೇತ್ರ'ವೆನಿಸಿ ಪವಿತ್ರ ಜಲಸೂಚಿ ತಾಣವಾಗಿಯೂ ಕಂಡುಬರುತ್ತದೆ.

ಶಿವಗಂಗೆಯ ಪಶ್ಚಿಮಕ್ಕೆ ತುಮಕೂರು ಜಿಲ್ಲೆಯ ಕುಣಿಗಲ್ ತಾಲೂಕಿನ ಆಚೆಗಿನ ಅಂದರೆ ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಆದಿಚುಂಚನಗಿರಿ ಕ್ಷೇತ್ರವು ಒಂದು ಪ್ರಾಚೀನವಾದ ನಾಥಪಂಥದ ಪ್ರಸಿದ್ಧ ಕ್ಷೇತ್ರವಾಗಿತ್ತು. ಶಿವಗಂಗೆಯ ಪೂರ್ವಕ್ಕೆ ಇದ್ದ ಕುಕ್ಕಲನಾಡಿನ ಪ್ರದೇಶದಲ್ಲಿ ನಾಥಪಂಥದ ಕುರುಹುಗಳು ನಿಚ್ಚಳವಾಗಿ ಕಂಡುಬಂದಿದೆ. ಸಿದ್ಧಮತ, ಸಿದ್ಧಮಾರ್ಗ, ಯೋಗಮಾರ್ಗ, ಅವಧೂತಮಾರ್ಗ, ಅವಧೂತ ಸಂಪ್ರದಾಯ ಎಂದು ಕರೆಯುವ ನಾಥಪಂಥದ ಬಗ್ಗೆ ಬೆಳಕು ಚೆಲ್ಲುವ ಮೌನಿನಾಥ ಮುನಿಯ ಗುರುಪರಂಪರೆಯ ವಿವರಗಳುಳ್ಳ ಶಾಸನವೊಂದು ಕುಕ್ಕಲನಾಡಿನ ಪ್ರದೇಶದಲ್ಲಿ ಕಂಡುಬಂದಿದೆ. ಮೌನಿನಾಥ ಮುನಿಯನ್ನು 'ಪರವಾದ್ಯದೃಷ್ಯ', 'ನಿಜರುದ್ರರೂಪ' ಎಂದು ವರ್ಣಿಸಲಾಗಿದೆ. ರಾಜೇಂದ್ರಚೋಳನ ಮಂತ್ರಿ ವಾಮನಯ್ಯನು ಮೌನಿನಾಥ ಮುನಿಯ ಪರಮಭಕ್ತನಾಗಿದ್ದನು. ಆ ಮುನಿಯ ಕಾಲವಶನಾದಾಗ, ಪರೋಕ್ಷವಿನಯವಾಗಿ 'ಶಿಲಾಮಂಚ'ವನ್ನೂ 'ಸಿದ್ಧೇಶ್ವರ ಭವನ'ವನ್ನೂ ಪ್ರಾಕಾರ ಸಮನ್ವಿತವಾಗಿ ಕಟ್ಟಿಸಿ ಪೂಜಾಕೈಂಕರ್ಯಗಳಿಗೆ ದತ್ತಿ ಬಿಟ್ಟಿರುವ ವಿಷಯವನ್ನು ತಿಳಿಸುವ ಶಾಸನ ಕ್ರಿ.ಶ. ೧೦೨೯ಕ್ಕೆ ಸೇರಿದ್ದು, ಸೋಲದೇವನಹಳ್ಳಿಯಲ್ಲಿ ದೊರೆತಿರುತ್ತದೆ. ಈ ಶಾಸನದಲ್ಲಿನ ವಿವರಗಳ ಹಿನ್ನೆಲೆಯಲ್ಲಿ ನಾಥಪಂಥದ ಮುನಿಯೊಬ್ಬ ಕಾಲಾತೀತನಾದರೆ 'ಶಿಲಾಮಂಚ' ಹಾಗೂ 'ಸಿದ್ಧೇಶ್ವರಭವನ' ವೆಂಬ ಗುಡಿಯನ್ನು ಕಟ್ಟಿಸುತ್ತಿದ್ದರು ಎಂಬ ಅಂಶ ಸ್ಪಷ್ಟವಾಗುತ್ತದೆ. ಇಲ್ಲಿನ 'ಶಿಲಾಮಂಚ' ಎನ್ನುವುದು ವೀರಶೈವ ಮುಂತಾದ ಧರ್ಮಾನುಯಾಯಿಗಳಲ್ಲಿ ಕಂಡುಬರುವ 'ಗದ್ದುಗೆ'ಯೇ ಆಗಿದೆಯೆಂದು ವೇದ್ಯವಾಗುತ್ತದೆ. ಬೌದ್ಧರ ಸ್ತೂಪಗಳು, ಮುಸ್ಲಿಮರ ದರ್ಗಾ, ಹಿಂದೂಗಳ ಸಮಾಧಿ, ಬೃಂದಾವನ ಇತ್ಯಾದಿಗಳ ಆರಾಧನೆ ಒಂದು ರೀತಿಯಲ್ಲಿ ಇಂತಹುದೇ ಆಚರಣೆಯ ರೀತಿಯದೆಂದು ಹೇಳಬಹುದಾಗಿದೆ.

ಹೀಗೆ ಶಿವಗಂಗೆಯು ಪ್ರಾಚೀನ ಕಾಲದಲ್ಲಿ ಬೌದ್ಧರ ನೆಲೆಯಾಗಿ, ಅನಂತರದಲ್ಲಿ ನಾಥಪಂಥದ ಶೈವ ಕ್ಷೇತ್ರವಾಗಿ, ಹಲವು ಕಾಲ ಅಸ್ತಿತ್ವದಲ್ಲಿದ್ದ ಬಗ್ಗೆ ಸೂಚನೆಗಳನ್ನು ಇಲ್ಲಿನ ಶಾಸನಗಳ ಅಧ್ಯಯನದಿಂದ ಗ್ರಹಿಸಬಹುದಾಗಿದೆ. ಹೊಯ್ಸಳರ

ಕಾಲದಲ್ಲಿ ಇಲ್ಲಿ ಅನೇಕ ವಾಸ್ತುರಚನೆಗಳು ತಲೆಯೆತ್ತಿ ಶಿವಗಂಗೆಯು ಪ್ರಸಿದ್ಧಿ ಪಡೆಯಿತು. ವಿಜಯನಗರ ಕಾಲದಲ್ಲಿ ವೀರಶೈವಧರ್ಮದ ಬಹುಮುಖ್ಯ ಕೇಂದ್ರವಾಗಿ ಇಲ್ಲಿನ ಮೇಲಣಗವಿಮಠ ಪಾತ್ರ ವಹಿಸುವುದು ಕಂಡುಬರುತ್ತದೆ. ೧೬-೧೭ನೆಯ ಶತಮಾನಗಳ ಅವಧಿಯಲ್ಲಿ ಎಲಹಂಕನಾಡ ಪ್ರಭುಗಳ ಕೈಂಕರ್ಯ ಈ ಕ್ಷೇತ್ರಕ್ಕೆ ಸಂದಿದೆ.

**ಆಧಾರಸೂಚಿ**


೧ ಎಪಿಗ್ರಾಫಿಯ ಕರ್ಣಾಟಿಕ, ಸಂ IX ಮತ್ತು ಪುರವಣಿ ಸಂಪುಟ

೨ ಮೈಸೂರು ಪುರಾತತ್ತ್ವ ವಾರ್ಷಿಕ ವರದಿ, ವರ್ಷ ೧೯೩೪.

೩ ಡಾ. ಪಿ. ವಿ. ಕೃಷ್ಣಮೂರ್ತಿ, ಕುಕ್ಕಲನಾಡು-ಒಂದು ಪ್ರಾಚೀನ ಪ್ರಾದೇಶಿಕ ವಿಭಾಗ, ಇತಿಹಾಸ ದರ್ಶನ, ಸಂ. ೭(೧೯೯೨), ಪು. ೧೪೪-೧೪೮

೪ ಡಾ. ಪಿ. ವಿ. ಕೃಷ್ಣಮೂರ್ತಿ, ಸಿಗಲ್‌ನಾಡು-ಒಂದುನೈಜ ಭೌಗೋಳಿಕ ಪ್ರಾದೇಶಿಕ ವಿಭಾಗ, ಇತಿಹಾಸ ದರ್ಶನ, ಸಂ ೧೩(೧೯೯೮), ಪು. ೧೩೪-೧೩೭.

೫ ಡಾ. ಪಿ. ವಿ. ಕೃಷ್ಣಮೂರ್ತಿ, ಶಿವಗಂಗಾ ಕ್ಷೇತ್ರದ ಶಾಸನಗಳು-ಒಂದು ಅವಲೋಕನ, ಶಾಸನ ಮಂಥನ, ಪುಟ೧೭೪-೧೮೬, ತುಮಕೂರುವಿಶ್ವವಿದ್ಯಾಲಯ, ೨೦೧೧.

೬ ಡಾ. ಎಂ. ಚಿದಾನಂದ ಮೂರ್ತಿ, ಬೌದ್ಧಕೇಂದ್ರ 'ಕಲಾವತಿ' ನಗರದ ಅಭಿಜ್ಞೆ ಈಗಿನ 'ಕಲ್ಯ' ಜೊತೆ, ಹೊಸತು ಹೊಸತು, ಕನ್ನಡ ವಿಶ್ವವಿದ್ಯಾಲಯದ ಪ್ರಕಟಣೆ ಪುಟ ೨೫೭-೨೬೪, (ಮೊದಲ ಮುದ್ರಣ) ಹಂಪಿ ೧೯೯೩.

೭ ಡಾ. ಎಂ. ಎಂ. ಕಲಬುರ್ಗಿ. 'ಪ್ರಾಚೀನ ಕರ್ನಾಟಕದಲ್ಲಿ ದೇವಾಲಯಗಳನಾಶ', ಅಮೃತವರ್ಷ, ದೇಜಗೌ ಅಭಿನಂದನ ಗ್ರಂಥ, ಬೆಂಗಳೂರು, ೧೯೯೫. ಪುಟ ೫೦೧-೫೧೯.


*****

# ಮಧ್ಯಕಾಲೀನ ಕರ್ನಾಟಕದಲ್ಲಿ ತಾಂಬೂಲ

* ಡಾ.ಎನ್. ನಂದೀಶ್ವರ

ಭಾರತೀಯ ಸಂಪ್ರದಾಯದಲ್ಲಿ ಕಾಣುವ ಶ್ರೀಮಂತಿಕೆ, ರಸಿಕತೆಗೆ ತಾಂಬೂಲ ಚರ್ವಣವು ಅತ್ಯುತ್ತಮ ಉದಾಹರಣೆ ಎನ್ನಬಹುದು. ನಮ್ಮ ನಾಡಿನವರು ಅಷ್ಟಭೋಗಗಳನ್ನು ಬಹು ಉತ್ಸಾಹದಿಂದ ನಡೆಸಿಕೊಂಡು ಬಂದವರು. ನಮ್ಮ ಊಟ ಉಪಚಾರಗಳಲ್ಲಿ ತಾಂಬೂಲಕ್ಕೆ ಅವರು ಕೊಟ್ಟ ಪ್ರಾಶಸ್ತ್ಯ ಅಸದೃಶವಾದುದು. ತಾಂಬೂಲ ನಮ್ಮ ಜನರ ಅವಿಭಾಜ್ಯ ಅಂಗ. ಅದು ಭಾರತೀಯರ ಜೀವನಕ್ರಮದಲ್ಲಿ ಎಷ್ಟು ಪ್ರಾಮುಖ್ಯತೆಯನ್ನು ಪಡೆಯಿತೆಂದರೆ, ಅವರ ಸಾಮಾಜಿಕ, ಧಾರ್ಮಿಕ ಜೀವನದಲ್ಲಿ ಅದಕ್ಕೊಂದು ಮಹತ್ವದ ಸ್ಥಾನ ದೊರೆಯಿತು. ತಾಂಬೂಲ, ಭೋಜನಾನಂತರ ಸವಿಯುವ ರುಚಿಕರವಾದ, ಆರೋಗ್ಯದಾಯಕವಾದ ವಸ್ತು ಮಾತ್ರವಲ್ಲ ಸಾರ್ವಜನಿಕ ಶುಭ ಮುಹೂರ್ತಗಳಲ್ಲಿ ಧಾರ್ಮಿಕ ಸಮಾರಂಭಗಳಲ್ಲಿ ಅತ್ಯವಶ್ಯಕವಾಗಿ ಬಳಸುವ ವಸ್ತುವಾಗಿ ಪರಿಣಮಿಸಿದೆ.

ಭಾರತೀಯರ ಜನಜೀವನದಲ್ಲಿ ತಾಂಬೂಲ ಬಹಳ ಹಿಂದಿನಿಂದಲೂ ಹಾಸುಹೊಕ್ಕಾಗಿ ಬೆರತು ಹೋಗಿದೆ. ಅದಿಲ್ಲದೆ ಅವರ ಜೀವನ ನೀರಸ. ಆಸೇತುಹಿಮಾಚಲ ಪರ್ಯಂತ ಯಾವುದೇ ಜಾಗಕ್ಕೆ ಭೇಟ ಇತ್ತರೂ ವೀಳ್ಯದೆಲೆಯ ಪ್ರಭಾವ ಕಾಣಬಹುದು. ಆದರೆ ಎಷ್ಟು ಹಿಂದಿನಿಂದ ತಾಂಬೂಲ ತನ್ನ ಪ್ರಭಾವವನ್ನು ಬೀರುತ್ತಾ ಬಂದಿದೆ ಎಂಬುದನ್ನು ಖಚಿತಾಗಿ ಹೇಳಲು ಬರುವಂತಿಲ್ಲ. "ಸುಡು ತಾಂಬೂಲವಿಹೀನ ವಕ್ತ್ರವ"[೧] ಎಂದು ವೀಳ್ಯದ ವಿಷಯವಾಗಿ ವೈದ್ಯಗ್ರಂಥಗಳು ತಿಳಿಸುತ್ತವೆ. ವೇದ ವಾಙ್ಮಯದಲ್ಲಿ ವೀಳ್ಯದೆಲೆಯ ಪ್ರಸ್ತಾಪವಿಲ್ಲ. ಇದು ಬಹುಶಃ ಪಾಲಿನೇಷಿಯ ಪ್ರಾಂತದಿಂದ ತೆಂಗಿನಮರ ಮುಂತಾದುವುಗಳೊಡನೆ ಮೊದಲು ದಕ್ಷಿಣ ದೇಶಕ್ಕೆ ಬಂದು ಅನಂತರ ಉತ್ತರ ದೇಶದಲ್ಲಿ ವ್ಯಾಪಿಸಿತೆಂದು ಊಹಿಸಲಾಗಿದೆ.

ಕನ್ನಡ ಸಾಹಿತ್ಯ ಕೃತಿಗಳಲ್ಲೂ ನಾವು ತಾಂಬೂಲದ ಹೆಸರನ್ನು ಕೇಳುತ್ತೇವೆ ಕನಕದಾಸರು 'ಮೋಹನತರಂಗಿಣಿ'ಯಲ್ಲಿ ದ್ವಾರಕಾಪುರ ವರ್ಣನೆಯಲ್ಲಿ "ಲಲಿತ ಬೆಳ್ಳಲೆಗಳಂಗಡಿಗಳೊಪ್ಪಿದವು" ಎಂದು ಬೆಳ್ಳಲೆಯ ಅಂಗಡಿಗಳೂ ಇದ್ದವೆಂದು ತಿಳಿಸಿರುವರು[೨]. ಹೊಸಮಲೆಯದುರ್ಗದಲ್ಲಿ ವಾಸಿಸುತ್ತಿದ್ದ ಬೇರೆ ಬೇರೆ ವೃತ್ತಿಯವರ ಕೇರಿಗಳನ್ನು ಹೇಳುವಾಗ ನಂಜುಂಡಕವಿ, 'ಹಡಪಿಗರ' (ಅಡಪವಳ್ಳರ) ಕೇರಿಯೂ ಇತ್ತೆಂದು ಹೇಳುತ್ತಾನೆ[೩]. ರಾಜನ ಬಳಿ ವೀಳ್ಯದ ವ್ಯವಸ್ಥೆಯನ್ನು ನೋಡಿಕೊಳ್ಳಲು ಹಡಪದ ಎಂಬ ವೀಳಯದ ಒಬ್ಬ ಅಧಿಕಾರಿ ಇರುತ್ತಿದ್ದನು[೪] ಎಂಬುದನ್ನು ತಿಳಿದಾಗ ವೀಳ್ಯವು ಎಷ್ಟೊಂದು ಪ್ರಾಮುಖ್ಯತೆಯನ್ನು ಪಡೆದಿತ್ತೆಂದು ಗೊತ್ತಾಗುತ್ತದೆ. ತೊರವೆ ರಾಮಾಯಣದಲ್ಲಿ "....ಕಾಳಸಿಗ ತಂಬುಳಿಗ ಜಂಗಮ ಜೋಗಿಗಳ ಜಂಗುಳಿಗಗೇರಿಗಳೊಳಗೆ..." ಎಂದು 'ತಂಬುಲಿಗರ' ಕೇರಿಯ ವಿವರಣೆ ದೊರೆಯುತ್ತದೆ. ಸಮರದಲ್ಲಿದ್ದ ಬೇರೆ ಬೇರೆ ವೃತ್ತಿಯ ಸೈನಿಕರನ್ನು ಹೇಳುವಾಗ 'ರಾಮನಾಥ ಚರಿತೆ'ಯಲ್ಲಿ ಕವಿ ಹೇಳಿರುವ "ಹಡಪದ ಬಲಗಲುಗ"ನ ಹೆಸರನ್ನು ಗಮನಿಸಬಹುದು[೫]. ಜನರ ಅಂತಸ್ತು ಯಾವುದೇ ಇರಲಿ ಅವರ ಸ್ಥಾನಮಾನದ ಪರಿವೆ ಇಲ್ಲದೆ ಎಲ್ಲ ಜನರ ಕೈಯ್ಯಿ ಬಾಯಿಗಳಲ್ಲಿ ಸದಾ ತಾಂಬೂಲವಿರುತ್ತಿತ್ತು. "ತಾಂಬೂಲ ವಿಹೀನವಕ್ತ್ರ ಅತಿ ನಿಕೃಷ್ಟ"[೬] ಎಂದು ಪಾಲ್ಕುರಿಕೆ ಸೋಮನಾಥನು 'ಸೋಮೇಶ್ವರ ಶತಕ'ದಲ್ಲಿ ಹೇಳುತ್ತಾನೆ.

ಯುದ್ಧಗಳಿಗೆ ಹೊರಡುವಾಗ ನೀಡುವ ವೀಳ್ಯಕ್ಕೆ 'ರಣವೀಳ್ಯ' ಎಂದೇ ಹೆಸರು. ಸಮರಕ್ಕೆ ಸಾಗುತ್ತಿದ್ದ ಬಂಟರ ಕೈಯಲ್ಲೂ ಅಡಕೆಲೆ.[೭] ರಾಣಿ ರತ್ನಾಜಿ ಅಲಂಕರಿಸಿಕೊಂಡು ಹೊರಟಾಗ, "ಕತ್ತರಿಸಿದ ಬಿಳಿಯೆಲೆ ಕೈಯ್ಯೊಳಗೆ ಪೊರೆಯೆತ್ತಿದಡಕೆ ಬಾಯೊಳಗೆ"[೮] ದ್ರೌಪದಿಯ ಸ್ವಯಂವರಕ್ಕೆಂದು ಬಂದು ನೆರೆದ ನೃಪರ ಕೈಯಲ್ಲಿ "ಮಡಿಸಿದೆಲೆಯೊಳಗೆ ಬಾಯೊಳಗೆಡಸಿವೆಲೆ..."[೯] ಹೀಗೆ ಸದಾ ಕಾಲದಲ್ಲೂ ತಾಂಬೂಲ ಎಲ್ಲ ಜನರ ಮನಸ್ಸನ್ನೂ ಸೂರೆಗೊಂಡಿತ್ತು. ಬಾರ್ಬೋಸನು ಹೆಂಗಸರು, ಗಂಡಸರು ಹಗಲೂ ರಾತ್ರಿ, ಮನೆಯ ಒಳಗೆ, ಹೊರಗೆ, ಬೀದಿ ಬಂಕಗಳಲ್ಲಿ ಎಚ್ಚರವಾಗಿರುವಾಗ ಮಲಗಿರುವಾಗಲೆಲ್ಲ ಈ ಎಲೆಯನ್ನು ಒಂದೇ ಸಮನೆ ಅಗಿಯುತ್ತಿರುತ್ತಾರೆ[೧೦] ಎಂದು ತಿಳಿಸುತ್ತಾನೆ.

---

* ಪ್ರಾಂಶುಪಾಲರು, ಎಸ್.ಎಂ.ಆರ್.ಪಿಯು ಕಾಲೇಜು, ಕಳ್ಳಂಬೆಳ್ಳ, ಸಿರಾ ತಾಲ್ಲೂಕು, ತುಮಕೂರು ಜಿಲ್ಲೆ.

ಎಲ್ಲಾ ಕಾಲದಲ್ಲೂ ತಾಂಬೂಲ ಹಾಕುವುದು ಜನರ ಸ್ವಭಾವವಾಗಿದ್ದರೂ ಸಂಪ್ರದಾಯದ ದೃಷ್ಟಿಯಿಂದ ತಾಂಬೂಲ ಹಾಕುವುದಕ್ಕೆ ಕೆಲವು ನಂಬಿಕೆಗಳು ಬೆಳೆದುಬಂದಂತೆ ಕಂಡುಬರುತ್ತದೆ. ಉಂಡ ಹೊಟ್ಟೆಗೆ ತಾಂಬೂಲವೇ ಹೊರತು, ಹಸಿದ ಹೊಟ್ಟೆಗಲ್ಲ: "ಪಸಿದವಗೆ ತಾಂಬೂಲ.... ಬಿಸಿಲಿಂದ ಬಂದವರಿಗೆ ತಪ್ತ ಜಲ ಸೊಗೆಯಿಪುದೆ"[೧೧]. ಊಟವಾದ ಮೇಲೆ ತಾಂಬೂಲ ಹಾಕುವುದು ಒಂದು ಸಾಮಾನ್ಯ ಪದ್ಧತಿ. ಆ ಪದ್ಧತಿಯನ್ನು ಇಂದಿಗೂ ನಾವು ಕಾಣಬಹುದು. ದೊಡ್ಡ ಭೋಜನ ಸಮಾರಂಭಗಳಾದರೂ ಕೂಡ, ಊಟವಾದ ನಂತರ, ಪನ್ನೀರಿನಿಂದ ಚಿಮುಕಿಸಿ, ಶ್ರೀಗಂಧವನ್ನು ಕರತಲಕಿತ್ತು, ಕರ್ಪೂರವೆರಸಿ ವೀಳೆಯವನ್ನು ಕೊಡುವುದು ಪದ್ಧತಿ[೧೨]. ಜನರು ತಾಂಬೂಲವನ್ನು ಹಾಕುವಾಗ ಕೆಲವು ವೇಳೆ ಪಚ್ಚ ಕರ್ಪೂರವನ್ನು ಸೇರಿಸಿಕೊಳ್ಳುತ್ತಾರೆ ಎಂದು ಹೇಳಿದ ಅಬ್ದುಲ್ ರಜಾಕ್ ರಾಜನನ್ನು ವಿದೇಶೀಯರು ಭೇಟಿಮಾಡಲು ಹೋದಾಗಲೆಲ್ಲ ಅವರಿಗೆ ಒಂದು ಕಟ್ಟು ವೀಳ್ಯದೆಲೆ, ಫನ ನಾಣ್ಯಗಳ ಚೀಲ ಮತ್ತು ಒಂದಿಷ್ಟು ಮಿತ್ಕಾಲ್ ಕರ್ಪೂರ ಬಹುಮಾನವಾಗಿ ಕೊಡುತ್ತಿದ್ದರು ಎಂದು ಹೇಳುತ್ತಾನೆ[೧೩].

ವೀಳ್ಯದೆಲೆಯನ್ನು ಆಸ್ವಾದಿಸಲು ಸಿದ್ಧಪಡಿಸುವುದು ಒಂದು ಕಲೆ, ಅದಕ್ಕೆ ಸಂಬಂಧಪಟ್ಟ ಹಾಗೆ ಅದೆಷ್ಟು ಪರಿಕರಗಳು, ಸಿದ್ಧತೆಗಳು! ನಮ್ಮ ರಸಿಕ ಕವಿಗಳು ಅದನ್ನು ಸುಂದರವಾಗಿ ವರ್ಣಿಸಿದ್ದಾರೆ. ತಾಂಬೂಲಕ್ಕಾಗಿ ಎಂತಹ ಎಲೆಗಳನ್ನು ಉಪಯೋಗಿಸಬೇಕು ಎಂಬುದನ್ನು ಬಸವರಾಜನ 'ಶಿವತತ್ತ್ವರತ್ನಾಕರ'ವು ವಿವರಿಸುತ್ತದೆ. ತಾಂಬೂಲಕ್ಕಾಗಿ ಕರ್ಪೂರವಲ್ಲಿ ಅಥವಾ ನಾಗವಲ್ಲಿಯ ಎಲೆಗಳನ್ನು ಉಪಯೋಗಿಸಬೇಕು. ಇವು ಚೆನ್ನಾಗಿ ನೀರಿರುವ ಉತ್ತಮ ಭೂ ಪ್ರದೇಶದಲ್ಲಿ ಸುಮಾರು ಒಂದು ವರ್ಷಕಾಲ (ಮೀರದೆ) ಚಪ್ಪರದಲ್ಲಿಯೇ ನದಿ ನೀರಿನಿಂದ ಬೆಳೆದಿರಬೇಕು. ಸ್ವಲ್ಪ ಬಿಳಿ ಬಣ್ಣದಲ್ಲಿದ್ದ ಹಿಂಭಾಗ ಮತ್ತು ತುದಿ ಸುತ್ತಲೂ ಸ್ವಲ್ಪ ಕಪ್ಪಾಗಿರಬೇಕು. ಕನಿಷ್ಟ ಬಳ್ಳಿಯಲ್ಲಿ ಐವತ್ತೆರಡು ಎಲೆಗಳಿರಬೇಕು. ಅಂತಹ ಎಲೆಗಳನ್ನು ಪೆಟ್ಟಿಗೆಯಲ್ಲಿ ಹಾಕಿ ಉಪಯೋಗಿಸಬೇಕು. ಇದೇ ರೀತಿಯ ಅಭಿಪ್ರಾಯವನ್ನು 'ಮಾನಸೋಲ್ಲಾಸ'ವು ವ್ಯಕ್ತಪಡಿಸುತ್ತದೆ[೧೪].

ಮೂರನೇ ಸೋಮೇಶ್ವರನ 'ಮಾನಸೋಲ್ಲಾಸ'ವು ಎಂತಹ ಸುಣ್ಣವನ್ನು ವೀಳ್ಯದಲ್ಲಿ ಉಪ ಯೋಗಿಸಬೇಕು ಎಂಬುದನ್ನು ತಿಳಿಸುತ್ತಾ "ಬೆಟ್ಟ ಮತ್ತು ನೀರಿನ ಮೂಲಗಳಿಂದ ಸುಣ್ಣವು ಲಭಿಸುತ್ತದೆ. ಸುಣ್ಣದ ಕಲ್ಲುಗಳನ್ನು ಸುಟ್ಟು ತಯಾರಿಸಿದ, ಮುತ್ತಿನ ಚಿಪ್ಪುಗಳಿಂದ ತಯಾರಿಸಿದ ಸುಣ್ಣಗಳನ್ನು (ಡಬ್ಬಿ) ಪೆಟ್ಟಿಗೆಯಲ್ಲಿ ತುಂಬಿಸಿಟ್ಟು ಉಪಯೋಗಿಸಬೇಕು"[೧೫]. ಪಕ್ವ, ಉಜ್ವಲ; ಸ್ವಚ್ಛವಾಗಿರುವ ಅದು ಕರ್ಪೂರ ಸ್ಫಟಿಕದಂತಿರಬೇಕು[೧೬] ಎನ್ನುತ್ತಾನೆ.

ಮೂರನೇ ಸೋಮೇಶ್ವರನ 'ಮಾನಸೋಲ್ಲಾಸ'ವು ಎಂತಹ ಅಡಿಕೆಯನ್ನು ತಾಂಬೂಲಕ್ಕೆ ಉಪಯೋಗಿಸಬೇಕು ಎಂಬುದನ್ನು ಈ ರೀತಿಯಾಗಿ ತಿಳಿಸುತ್ತದೆ. ನೈಲವರ್ತಿಪುರದಲ್ಲಿ, ಈಶ್ವರಪುರದಲ್ಲಿ ಇಲ್ಲವೆ ಕಂಡಿಕಾಪುರದಲ್ಲಿ ಬೆಳೆದು, ಚೆನ್ನಾಗಿ ಬಲಿತ ಅಡಿಕೆಯ ಫಲಗಳನ್ನು, ಪಾಟಲವರ್ಣದ್ದಾಗಿಯೂ, ಕಷಾಯ ಮತ್ತು ಮಧುರ ರುಚಿವುಳ್ಳದ್ದಾಗಿಯೂ, ತುಂಡು ತುಂಡಾಗಿ ಕತ್ತರಿಸಿದ್ದನ್ನಾಗಿಯೂ ಮಾಡಿ, ತೊಳೆದು ಒಣಗಿಸಿ ಕುಟ್ಟಬೇಕು. ಕಸ್ತೂರಿ ಪುಡಿಯಲ್ಲಿ ಅದನ್ನು ಬೆರೆಸಬೇಕು. ಮನೋಹರವಾದ ಅದನ್ನು ನೆರಳಿನಲ್ಲಿ ಒಣಗಿಸಬೇಕು. ಅಡವಿಯಲ್ಲಿ ಬೆಳೆದ ಅಡಿಕೆಮರದ ಎಳೆಯಕಾಯಿಗಳನ್ನು ಸಿಪ್ಪೆ ಸಹಿತವಾಗಿ ಚೆನ್ನಾಗಿ ಕುದಿಸಬೇಕು. ಆಮೇಲೆ ಸಿಪ್ಪೆಯನ್ನು ತೆಗೆದುಹಾಕಿ ನೆರಳಿನಲ್ಲಿ ಒಣಗಿಸಬೇಕು. ಅವುಗಳನ್ನು ನಾಲ್ಕು ಭಾಗಗಳಗಿ ಕತ್ತರಿಸಿ, ತಾಂಬೂಲಕ್ಕಾಗಿ ಉಪಯೋಗಿಸಬೇಕು.

ಬಸವರಾಜನ 'ಶಿವತತ್ತ್ವರತ್ನಾಕರ'ವು ಎಂತಹ ಪಚ್ಚ ಕರ್ಪೂರವನ್ನು ತಾಂಬೂಲಕ್ಕೆ ಉಪಯೋಗಿಸಬೇಕು ಎಂಬುದನ್ನು ತಿಳಿಸುತ್ತದೆ. "ಮಲಯ ಪರ್ವತದ ಶಿಖರದಲ್ಲಿನ ಬಳ್ಳಿಗಳ ರಸದಿಂದ ಪಡೆದ, ಪಾಕ ಮಾಡದೇ ಪಚ್ಚಕರ್ಪೂರವು ಸ್ವಚ್ಛವಾಗಿರುತ್ತದೆ. ಮಾವಿನ ಹಣ್ಣಿನಂತೆ ಸುವಾಸನೆಯಿಂದ ಕೂಡಿದ ಇದರ ಹೆಸರು ಈಶವಾಸ. ಇದು ಸಹಜವಾದ ಪಚ್ಚಕರ್ಪೂರ. ಕಸ್ತೂರಿ ಪುಡಿಯಿಂದ ಕೂಡಿದ ಪಚ್ಚಕರ್ಪೂರವನ್ನು ತಾಂಬೂಲಕ್ಕಾಗಿ ಉಪಯೋಗಿಸಬೇಕು. ಕಸ್ತೂರಿ, ಪಚ್ಚಕರ್ಪೂರ, ಡಕ್ಕೊಲ (ಬಾಲ ಮೆಣಸು), ಜಾತಿಪುಷ್ಪ ಮುಂತಾದ ಪರಿಮಳ ದ್ರವ್ಯದೊಡಗೂಡಿದ ಅರಳಿನ ಹಿಟ್ಟನ್ನು ವೀಳ್ಯದೊಡನೆ ಸೇವಿಸಬಹುದು. ಇದು ಹೃದಯಕ್ಕೆ ಹಿತಕರವೂ ಹೌದು. ಕಗ್ಗಿಲೆ ಕಷಾಯದಿಂದ ತಯಾರಿಸಿದ ಕಾಚು, ಆ ಶ್ರೀಗಂಧದ ಪುಡಿ, ಪಚ್ಚಕರ್ಪೂರ ಇವುಗಳನ್ನು ಸಮ ಪ್ರಮಾಣದಲ್ಲಿ ಸೇರಿಸಿ, ಸಣ್ಣ ಚೂರು ಕಸ್ತೂರಿಯನ್ನು ಸೇರಿಸಿ ನುಣ್ಣಗೆ

ಅರೆದು ಚಿಕ್ಕಚಿಕ್ಕ ಮಾತ್ರೆಗಳನ್ನು ತಯಾರಿಸುವುದು. ಇವನ್ನು ವೀಳ್ಯದೊಡನೆ ಸೇವಿಸುವುದರಿಂದ ತ್ರಿದೋಶ (ವಾತ, ಪಿತ್ತ ಮತ್ತು ಕಫ) ಶಮನವಾಗುತ್ತದೆ. ಸ್ವರವರ್ಧನೆ ಮತ್ತು ಹಲ್ಲುಗಳು ಗಟ್ಟಿಯಾಗುತ್ತದೆ. ಕಗ್ಗಿಕಲೆಚಕ್ಕೆಯ ಕಷಾಯದಿಂದ ತಯಾರಿಸಿದ ಕಾಚು ಒಂದು ಭಾಗ, ಇದರ ಅರ್ಧದಷ್ಟು ಚಂಗಲ್‌ಕೋಷ್ಟ, ಒಂದು ಚೂರು ಜಾಯಿಕಾಯಿ, ಲಿಂಬೇಗಿಡದ ಮೊಗ್ಗು, ಮಾದಲಫಲದ ಮೊಗ್ಗು ಇವೆಲ್ಲವನ್ನು ಸೇರಿಸಿ, ವೀಳ್ಯದೊಡನೆ ಸೇವಿಸುವುದರಿಂದ ಬಾಯಿ ತುಂಬಾ ಕೆಂಪಾಗುತ್ತದೆ. ಪಚ್ಚಕರ್ಪೂರದೊಡನೆ ಸೇರಿದ ವೀಳ್ಯವನ್ನು ಮೊದಲು ತಿನ್ನಬೇಕು. ನಂತರ ಅಡಿಕೆಯೊಡನೆ ವೀಳ್ಯದ ಸೇವನೆ ಮಾಡಬೇಕು[೧೬].

ಬಸವರಾಜನ 'ಶಿವತತ್ತ್ವರತ್ನಾಕರ'ವು ತಾಂಬೂಲದಲ್ಲಿ ಯಾವ ಸಮಯದಲ್ಲಿ ಯಾವ ವಸ್ತು ಹೆಚ್ಚಾಗಿರಬೇಕು, ಅದರಿಂದ ಏನು ಪ್ರಯೋಜನ ಎಂಬುದನ್ನು ತಿಳಿಸುತ್ತದೆ. ವೀಳ್ಯದಲ್ಲಿ ಬೆಳಿಗ್ಗೆ ಅಡಿಕೆ ಹೆಚ್ಚಾಗಿರಬೇಕು. ಮಧ್ಯಾಹ್ನ ಸುಣ್ಣ ಹೆಚ್ಚಿರಬೇಕು. ಸಾಯಂಕಾಲದಲ್ಲಿ ವೀಳ್ಯದೆಲೆ ಹೆಚ್ಚಾಗಿರಬೇಕು. ಈ ರೀತಿ ತಾಂಬೂಲ ಸೇವನೆಯಿಂದ ಇದು ಆಯುಸ್ಸನ್ನು, ಆರೋಗ್ಯವನ್ನೂ ಹೆಚ್ಚಿಸುತ್ತದೆ[೧೭].

ಬಸವರಾಜನ 'ಶಿವತತ್ತ್ವರತ್ನಾಕರ'ವು ಎಂತಹ ವೀಳ್ಯದೆಲೆಯನ್ನು ಸೇವಿಸಬಾರದು ಎಂಬುದನ್ನು ತಿಳಿಸುತ್ತಾ, ಬಹಳಷ್ಟು ಎಳಸಾದ ಅಥವಾ ಬಲಿತ, ಹುಳು ಹಿಡಿದ, ಒಂದು ವರ್ಷಕ್ಕಿಂತಲೂ ಹೆಚ್ಚು ಕಾಲ ಗಿಡದಲ್ಲಿದ್ದ, ಸುಟ್ಟುಹೊದ, ಒಣಗಿದ, ಕಪ್ಪಾದ, ಕೊಳೆತ, ಚುಕ್ಕೆ ಇದ್ದ ವೀಳ್ಯದೆಲೆಯನ್ನು ಸೇವಿಸಲೇಬಾರದು.

ಬಸವರಾಜನ 'ಶಿವತತ್ತ್ವರತ್ನಾಕರ'ವು ವೀಳ್ಯದೆಲೆಯ ಯಾವ ಭಾಗ ತಿಂದರೆ ದೋಷ ಉಂಟಾಗುತ್ತದೆ. ವೀಳ್ಯದೆಲೆಯ ಬುಡದಲ್ಲಿ (ತಟ್ಟನ) ಭಾಗದಲ್ಲಿ ರೋಗವಿರುತ್ತದೆ. ತುದಿ ತಿಂದರೆ ಪಾಪಬರುತ್ತದೆ. ಹರಿದು ಹೋದ ಎಲೆಯು ಆಯಸ್ಸನ್ನು ಕಡಿಮೆ ಮಾಡುತ್ತದೆ. ಎಲೆಯಲ್ಲಿನ ನರಗಳು (ದಂಟುಗಳು) ಬುದ್ಧಿಯನ್ನು ಕುಂಠಿತಗೊಳಿಸುತ್ತವೆ. ಆದ್ದರಿಂದ ತುದಿ, ಬುಡ ಮತ್ತು ನರಗಳನ್ನು ತೆಗೆದು ಹಾಕಿ ತಿನ್ನಬೇಕು ಎಂಬುದಾಗಿ ತಿಳಿಸಿದೆ[೧೮].

ಬಸವರಾಜನ 'ಶಿವತತ್ತ್ವರತ್ನಾಕರ' ಕೃತಿಯು ವೀಳ್ಯದೆಲೆಯ ತುಂಬ ದೇವತೆಗಳ ವಾಸ ಎಂಬ ವಿಷಯವನ್ನು ವಿವರಿಸುತ್ತದೆ. ವೀಳ್ಯದೆಲೆಯ ತುದಿಯಲ್ಲಿ ಲಕ್ಷ್ಮಿಯ ವಾಸ, ಬಲಭಾಗದಲ್ಲಿ ಬೃಹಸ್ಪತಿಯ ವಾಸ, ಮಧ್ಯದ ದಂಟಿನ ಭಾಗದಲ್ಲಿ ಸರಸ್ವತಿಯ (ಅಲಕ್ಷ್ಮೀಯ) ವಾಸ. ಎಡಭಾಗದಲ್ಲಿ ಪಾರ್ವತಿಯ ವಾಸ, ಎಲೆಯ ಒಳಭಾಗದಲ್ಲಿ ವಿಷ್ಣುವಿನ ವಾಸ, ಹಿಂಭಾಗದಲ್ಲಿ ಚಂದ್ರನ ವಾಸ, ಎಲ್ಲ ಮೂಲೆಗಳಲ್ಲೂ ಶಿವನ ವಾಸ, ಎಲ್ಲಾ ಭಾಗಗಳಲ್ಲೂ ಮನ್ಮಥನ ಆವಾಸವಿರುತ್ತದೆ ಎಂಬುದಾಗಿ ತಿಳಿಸುತ್ತದೆ.

ಬಸವರಾಜನು ತಾಂಬೂಲವನ್ನು ಜನ ಕೇವಲ ಬಾಯಿ ಚಪಲಕ್ಕಾಗಿ ಉಪಯೋಗಿಸುತ್ತಿರಲಿಲ್ಲ. ಅದನ್ನು ಅನೇಕ ಆರೋಗ್ಯದಾಯಕ ಗುಣಗಳಿಗಾಗಿ ಉಪಯೋಗಿಸುತ್ತಿದ್ದರು ಎಂಬುದನ್ನು ವಿವರಿಸಿದ್ದಾನೆ. ವೀಳ್ಯದೆಲೆ ವಾತಶಾಮಕ ಕಫವೃದ್ಧಿಯನ್ನು ಅಡಿಕೆ ನಿವಾರಿಸುತ್ತದೆ. ಸುಣ್ಣ ಅಗ್ನಿಮಾಂದ್ಯನಾಶಕ. ಖದಿರ ಸಾರವು (ಕಾಚು) ಪಿತ್ತಶಾಮಕ[೨]. ಜಾಯಿಕಾಯಿಯಲ್ಲಿ ಒಗರು ಮತ್ತು ಖಾರ ರಸಗಳಿವೆ. ಉಷ್ಣವೀರ್ಯ ಮತ್ತು ಲಘು ಗುಣಗಳಿದ್ದು, ಕಂಠರೋಗ, ವಾತಾತಿಸಾರ ಪ್ರಮೇಹರೋಗ ನಿವಾರಕ ಆಗಿರುತ್ತದೆ. ವೃಷ್ಯವೂ (ಉತ್ತೇಜಕ) ಅಗ್ನಿದೀಪಕವು ಆಗಿರುತ್ತದೆ. ಲವಂಗವು ಖಾರ ಮತ್ತು ಮಧುರವಾಗಿಯು ಲಘು ಗುಣದಿಂದ ಕೂಡಿದ್ದಾಗಿಯೂ ಇರುತ್ತದೆ. ಕಣ್ಣಿಗೆ ಬಲಕಾರಕ, ಕ್ಷಯ ರೋಗವನ್ನೂ ನಿವಾರಿಸುತ್ತದೆ. ಹಸಿವನ್ನು ಹೆಚ್ಚಿಸುತ್ತದೆ. ಕೆಮ್ಮು, ದಮ್ಮು, ಮೈಯುರಿ, ಬಾಯಿವಾಸನೆ ಅತಿಯಾದ ಮೇದಸ್ಸು(ಕೊಬ್ಬು) ಹೆಚ್ಚು ಬೆವರುವುದು ಇವುಗಳನ್ನು ನಿವಾರಿಸುತ್ತದೆ. ಕಣ್ಣಿಗೆ ಶಕ್ತಿದಾಯಕ, ದೇಹಕ್ಕೂ ಉತ್ತೇಜಕ. ಪ್ರಿಯಂಗುವು (ಪ್ರೇಂಖಣ ಕುಸುಮ) ಶೀತವೀರ್ಯವುಳ್ಳದ್ದು, ವಾತಜ್ವರ, ರಕ್ತ ಪಿತ್ತ, ಬಾಯಿ ಒಣಗುವಿಕೆ, ದಾಹಗಳನ್ನು ನಿವಾರಿಸುತ್ತದೆ. ಹೃದಯ ಉತ್ತೇಜಕವೂ ಶುಕ್ರವರ್ಧಕವೂ ಆಗಿರುತ್ತದೆ. ತಾಂಬೂಲದ ಅತಿಸೇವನೆಯಿಂದ ಹಲ್ಲು ಅಲುಗಾಡಲು ಪ್ರಾರಂಭವಾಗುತ್ತವೆ. ಮೈ ಬಿಳುಚುತ್ತದೆ. ಕಣ್ಣಿನ ಬೇನೆಗಳು, ಬಲಕ್ಷಯವೂ ಉಂಟಾಗುತ್ತದೆ. ವಿಶೇಷವಾಗಿ ಕುಷ್ಠ, ಪ್ರಮೇಹ ಮತ್ತು ಮೂತ್ರ ರೋಗಗಳುಂಟಾಗುತ್ತವೆ. ಹಾಲು ಕುಡಿದು ಒಂದು ಮುಹೂರ್ತ (೪೮ ನಿಮಿಷ)ದೊಳಗೆ ವೀಳ್ಯ ತಿಂದರೆ ಎದೆಯಲ್ಲಿ ನೋವು ಕಂಡುಬರುತ್ತದೆ, ಮತ್ತು ಕೂಡಲೇ ಪಿತ್ತವು ಹೆಚ್ಚುತ್ತದೆ. ಅದ್ದರಿಂದ ಹಾಲು ಕುಡಿದು ಒಂದು ಮುಹೂರ್ತದ ನಂತರವೇ ವೀಳ್ಯ ತಿನ್ನಬೇಕು ಅಬ್ದುಲ್‌ರಜಾಕ್ ತಾಂಬೂಲ ವಿಶೇಷತೆಯ ಬಗ್ಗೆ ಈ ರೀತಿ ತಿಳಿಸಿದ್ದಾನೆ. ಹೊಟ್ಟೆ ತುಂಬ ಊಟ ಮಾಡಿದಾಗ ವೀಳ್ಯ ಹಾಕಿಕೊಂಡರೆ ಆಹಾರ ಜೀರ್ಣವಾಗುತ್ತದೆ. ವೀಳ್ಯದೆಲೆ ಎಷ್ಟು

ಬಲವರ್ಧಕ, ಎಷ್ಟು ಕಾಮೋತ್ತೇಜಕ ಎಂಬುದನ್ನು ವರ್ಣಿಸಲಾಗಿದೆ. ಈ ದೇಶದ ರಾಜ ತನ್ನ ಅಂತಃಪುರದಲ್ಲಿ ಲೆಕ್ಕವಿಲ್ಲದಷ್ಟು ಸ್ತ್ರೀಯರನ್ನು ಹೊಂದಿರುವುದಕ್ಕೆ ತಾಂಬೂಲದ ಮೋಹಕ ಪ್ರಭಾವವೇ ಕಾರಣವಾಗಿರಬೇಕು.[೧೯] ತಾಂಬೂಲವನ್ನು ಗಾಯಕ್ಕೆ ಔಷಧಿಯಾಗಿಯೂ ಉಪಯೋಗಿಸುತ್ತಿದ್ದರೆಂದು ತೋರುತ್ತದೆ. ಕಾಡಿನಲ್ಲಿ ಬೇಟೆಯಾಡುವಾಗ ಮೃಗಗಳಿಂದ ಗಾಯಗೊಂಡ ಬೇಡರನ್ನು ಬೇಡತಿಯರು, ಎತ್ತಿ ಹಿಡಿದು ತಾಂಬೂಲದಿಂದ ಗಾಯವನ್ನು ಒತ್ತಿ ಬಿಗಿದು ಕಟ್ಟಿ ಹೊತ್ತು ನಡೆದರು ಎಂದು ನಂಜುಂಡ ಕವಿ 'ರಾಮನಾಥ ಚರಿತೆ'ಯಲ್ಲಿ ಹೇಳುತ್ತಾನೆ.[೨೦] ದೇವರಿಗೆ ನಡೆಸುವ ಅನೇಕ ಸೇವೆಗಳಲ್ಲಿ ತಾಂಬೂಲ ಸೇವೆಯೂ ಒಂದು. ಪುರಂದರದಾಸರು ದೇವ ಪೂಜೆಯ ಸಮಯದಲ್ಲಿ, ಶ್ರೀಹರಿಯನ್ನು ಉದ್ದೇಶಿಸಿ "ತಾಂಬೂಲವ ಕೊಳ್ಳೊ ಅಂಬುಜಾಕ್ಷಿ ಮೋದದಿಂ ಮಡಚಿ ಕೊಡುತ್ತಾಳೆ" ಎಂದು, "ಚಕ್ಕಡಿ ಅಡಿಕೆ ಕೇದಿಗೆ ಕಾಚ್ ಕೂಡಿದ ಏಲಕ್ಕಿ ಜಾಯಿಕಾಯಿ ಲವಂಗ ಜಾಯಪತ್ರ ಮೌಕ್ತಿಕದ ಸುಣ್ಣ ಕರ್ಪೂರ ಬೆರೆಸಿ ತಾರುಕ್ಮಿಣಿ ದೇವಿ ಸಮರ್ಪಿಸುತ್ತಾಳೆ" ಎಂದು ಹೇಳುತ್ತಾರೆ.[೨೧]

**ತಾಂಬೂಲ ವರ್ಜರು**

ಕಳಲೆವೀರರಾಜನ 'ಸಕಲ ವೈದ್ಯ ಸಂಹಿತಾ ಸಾರಾರ್ಣವ'ವು ಯಾವ ರೋಗದವರು ತಾಂಬೂಲವನ್ನು ಉಪಯೋಗಿಸಬಾರದೆಂದು ತಿಳಿಸಿರುವುದು. ಬಡವಾದ ದೇಹದವರು, ಕ್ಷಯ ರೋಗದವರೂ, ಜ್ವರವುಳ್ಳವರೂ, ಮೂಗಿನಲ್ಲಿ ರಕ್ತಬೀಳುವ ರೋಗದವರೂ, ಮೂರ್ಛೆರೋಗ, ಮೇಹರೋಗ, ರೋಗ ಕಾಣಿಸಿದ ಪ್ರಥಮ ಕಾಲದಲ್ಲಿಯೂ, ಪಾಂಡುರೋಗವುಳ್ಳವರೂ, ಹಸಿವಿನಿಂದ ಕಂಗೆಟ್ಟಿರುವವರೂ, ತಾಂಬೂಲವನ್ನು ಉಪಯೋಗಿಸಬಾರದೆಂದು ತಿಳಿಸಿರುವುದು.[೨೨]

ತಾಂಬೂಲವನ್ನು ಸಿದ್ಧಪಡಿಸುವಾಗ ಇರಬೇಕಾದ ಎಚ್ಚರಿಕೆಯನ್ನು ನಿಜಗುಣರು 'ವಿವೇಕ ಚಿಂತಾಮಣಿ'ಯಲ್ಲಿ ಹೇಳಿದ್ದಾರೆ. ಅಡಕೆಯ ನೋಡದೆ ಎಲೆಯ ತೊಳೆಯದೆ, ಸುಣ್ಣವನ್ನು ಶೋಧಿಸದೆ ತಾಂಬೂಲಕ್ಕೆ ಉಪಯೋಗಿಸಬಾರದೆಂದು ತಿಳಿಸಿರುವರು. ವೀಳ್ಯದೆಲೆ ಮತ್ತು ಅದರ ಪರಿಕರಗಳನ್ನು ಇಡುವುದಕ್ಕೆ ಸಂಚಿ ಅಥವಾ ಹಡಪ ಎಂದೂ ಅದನ್ನು ಹಿಡಿದಿರುವವನಿಗೆ ಸಂಚಿಯವ ಅಥವಾ ಹಡಪಿಗನೆಂದು[೨೩] ಹೆಸರು. (ಹದಿಬದೆಯ ಧರ್ಮದ ಸಂಚಿಯ ಹೊನ್ನಮ್ಮನನ್ನು ನೆನೆಯಬಹುದು) "ಸಂಚಿಯಿಲ್ಲದ ವೀಳೆ ಮಂಚವಿಲ್ಲದ ನಿದ್ರೆ ಕಿಲುಬಿದ ಕಂಚಿನಂತಕ್ಕು"[೨೪] ಎಂದು ಹೇಳಿದ ಸರ್ವಜ್ಞ, ಸಂಚಿಯ ಸ್ಥಾನವನ್ನು ಸ್ಪಷ್ಟಪಡಿಸಿದ್ದಾನೆ. ಸಂಚಿ ಇಲ್ಲದವರು ತಮ್ಮ ಉತ್ತರೀಯದ ಅಥವಾ ಯಾವುದಾದರೂ ಬಟ್ಟೆಯ ತುದಿಯಲ್ಲಿ ತಾಂಬೂಲದ ಪರಿಕರಗಳನ್ನು ಕಟ್ಟಿರುವರು. ನಾರಣಪ್ಪ ಇಂತಹ ಒಂದು ಚಿತ್ರವನ್ನು ಕೊಡುತ್ತಾನೆ. "......ದೌತೌಂಕುಶದೊಳಗೆ (ಬಿಳಿಯ ಬಟ್ಟೆಯೊಳಗೆ) ತುಂಬುಲವ ಕಟ್ಟಿದರಕುಟುಪಾಧ್ಯರ (ರಕಟು–ಹರಕು ಚಿಂದಿ) ಮೋರೆಯನು".[೨೫] ಹಳ್ಳಿಗಳ ಕಡೆ ಈಗಲೂ ಸಾಮಾನ್ಯವಾಗಿ ಹೆಂಗಸರೂ ಗಂಡಸರೂ ಸೆರಗಿನ ತುದಿಯಲ್ಲಿ ಎಲೆ ಅಡಿಕೆಯನ್ನು ಕಟ್ಟಿರುವುದನ್ನು ಕಾಣಬಹುದು.

ತಾಂಬೂಲ ಹಾಕುವವರ ಚಿತ್ರ ವಿಚಿತ್ರ ಪದ್ಧತಿಗಳನ್ನೂ, ಅವರ ಹಾವ ಭಾವಗಳನ್ನು ನಮ್ಮ ಕವಿಗಳು ನೈಜವಾಗಿ ಚಿತ್ರಿಸಿದ್ದಾರೆ. ತಾಂಬೂಲ ಹಾಕುವ ಜನ ಸಾಮಾನ್ಯವಾಗಿ ಬಾಯಲ್ಲಿ ತಾಂಬೂಲದ ರಸ ತುಂಬಿಕೊಂಡು, ಮಾತನಾಡುವ ಸಮಯ ಬಂದಾಗ ತಂಬುಲ(ಳ) ಉಗುಳಿ ಮಾತನಾಡುವರು. "ಉಗುಳಿದವನು ತಂಬುಲವ ನಾನೇ ಹೋಗುವೆನಹಿತ ರಣಕೆನುತ".[೨೬] ನೃತ್ಯ, ನಾಟಕ ಮುಂತಾದ ಮನೋರಂಜನೆಯಲ್ಲಿ ರಾಜರು, ಜನರು ಮಧ್ಯೆ ಮಧ್ಯೆ ತಾಂಬೂಲ ಹಾಕಿಕೊಂಡು ಸವಿದು, ಆಗಾಗ ತಾಂಬೂಲ ಉಗುಳಿ ನೀರು ಕುಡಿದು ಬಾಯಿ ಶುದ್ಧಿ ಮಾಡಿಕೊಳ್ಳುವುದು ಒಂದು ಸಾಮಾನ್ಯ ದೃಶ್ಯವಾಗಿತ್ತೆಂದು ತೋರುತ್ತದೆ. "ಗಿಂಡಿಯ ನೀರ ಮುಕ್ಕಳಿಸಿಯುಗಳುತೋಜೆಗೊಂಡು ವೀಳೆಯವ ಕೈಗೊಳುತ ಮಂಡಲಿಕರ ಮುಂದೆಮೊಡೆಯನೋಳ್ಪನು ತನ್ನ ಮಂಡೆಯೊಲೆದು ಪಾತ್ರಗಳನು"[೨೭] ನಟನಟಿಯೆಂಬ ಬೆಳ್ಳೆಲೆಯ ಫಳಿಗೆಯನು ಕಟಿಕಟಿಯೆನೆ ಕಚ್ಚಿ ಕೊಳುತ ನಡನವ ನೋಡಿ ನಗುತ ನೋಡುವನು ರಾಯ........[೨೮] ಕೂರುಗುರಿಂದ ವೀಳ್ಯದೆಲೆಯ ನಾರು ತೆಗೆದು, ಸೀಳಿ, ಸುಣ್ಣವನ್ನು ಎಲೆಗೆ ಸವರಿ, ಅದನ್ನು ಸುರುಳಿ ಸುತ್ತಿ ಬೆರಳಸಂದಿಯಲ್ಲಿ ಸಿಕ್ಕಿಸಿಕೊಂಡು ಅದನ್ನು ಬೇಕೆಂದಾಗ ಕಟಕಟನೆ ಕಚ್ಚಿ ತಿನ್ನುವ[೨೯] ಸಂದರ್ಭಗಳನ್ನು ವಿದೇಶಿ ಪ್ರವಾಸಿಗರೂ ಗಮನಿಸಿದ್ದಾರೆ[೩೦].

ತಾಂಬೂಲದಲ್ಲಿ ಅದರ ರಸವೇ ಜೀವಾಳವೆಂದು ಕಾಣುತ್ತದೆ. ಆ ರಸವನ್ನು ಬಾಯಲ್ಲಿ ಸದಾ ತುಂಬಿಕೊಂಡಿದ್ದರೆ ಅವರಿಗೆ ಅದರ ಆನಂದ, ತಾಂಬೂಲದ ರಸ ಗಂಟಲಿಗಿಳಿದಾಗ ಶೋಭೆ, "ಬಿಮಗದ ಕುಪ್ಪಗೆಗಿಳಿವ ಕುಂಕುಮದ ನಿರಂಗದಿ

ತಾಂಬೂಲ ರಸವನುಂಗುವಾಗಿದಿರಿಗೆ ತೋರುವುದರಸನ ಸುಂಗೋರಳೇನ ಬಣ್ಣಿಪೆನು"[೩೧]. ತಾಂಬೂಲ ಸವಿಯುವಾಗ ಒಮ್ಮೊಮ್ಮೆ ತುಟಿಯ ಮಧ್ಯದಿಂದ ರಸ ಒಸರಿ, ಬಾಯಿಬಿಟ್ಟರೆ ಸೂಸುತ್ತದೆ. 'ಗದುಗಿನ ಭಾರತ'ದಲ್ಲಿ ನಾರಣಪ್ಪ ಇಂತಹ ಒಂದು ಚಿತ್ರವನ್ನು ಕೊಟ್ಟಿದ್ದಾನೆ. "ಅಳಲುವೀ ದೃತರಾಷ್ಟ್ರನುರುಕಳಕಳವ ಕೇಳಿದು ಕರ್ಣ ಶಕುನಿಗಳುಲಿದು ತಂಬೂಲಸೊಸೆನಕ್ಕರು ಹೊಯ್ದು ಕರತಳವ"[೩೨]. ಅಬ್ದುಲ್‌ರಜಾಕನು ಈ ತಾಂಬೂಲದ ರಸವನ್ನು ಕುರಿತು ರಸವನ್ನು ಒಮ್ಮೊಮ್ಮೆ ಉಗಿಯುತ್ತಾರೆ; ಅದು ಕೆಂಪುಬಣ್ಣಕ್ಕಿರುತ್ತದೆ ಎಂದು ವೀಳ್ಯವನ್ನು ಸಾರವತ್ತಾಗಿ ವರ್ಣಿಸಿರುವನು[೩೩].

ತಾಂಬೂಲ ಸೇವನೆಯಲ್ಲಿ ನಲ್ಲನಲ್ಲೆಯರ ರಸಿಕತೆಯನ್ನು ನಮ್ಮ ಕವಿಗಳು ವಿವರಿಸಿದ್ದಾರೆ. ಚಿಂತೆಯಿಂದ ಕೂಡಿದ ರಾಣಿ ರತ್ನಾಜಿಯನ್ನು ಸಂತೈಸುವಾಗ ಕಂಪಿಲ, ಆಕೆಯ ನುಣ್ಗಲ್ಲವ ಪಿಡಿದು, ಬಾಯೊಳು ಬಾಯನಿಟ್ಟು ಕುಡುಕುದಂಬುಲಪಿಕ್ಕಿ (ಕುಡುಕುದಂಬಲ?) ಕರುಳ ನೇವರಿಸಿದನು. ಊಟದಲ್ಲಿ ಗಂಡನ ಎಂಜಲನ್ನು ಹೆಂಡತಿ ತಿನ್ನುವ ಒಂದು ಪದ್ಧತಿ ಮದುವೆಯಿಂದಲೇ ಪ್ರಾರಂಭವಾಗಿ ಬೆಳೆದುಬಂದಿದೆ. ಹಾಗೆಯೇ ತಾಂಬೂಲದಲ್ಲೂ ಎಂಜಲು ತಿನ್ನುವ ಪದ್ಧತಿ ಇದ್ದಿರಬೇಕೆಂದು ಕಂಡುಬರುತ್ತದೆ. ಈ ನಲ್ಲನಲ್ಲೆಯರ ಪ್ರೇಮದ ಪರಮಾವಧಿ ಒಬ್ಬರೊಬ್ಬರ ಬಾಯಿಂದ ತಾಂಬೂಲವನ್ನು ಕೊಳ್ಳುವವರೆಗೂ ಹೋಗಿರುತ್ತದೆ. ಭರತೇಶನ ಬಳಿಯಲ್ಲಿ ಅವನ ಹೆಂಡತಿಯರು ಮಡಿ ಮಡಿದೆಲೆಯ ಫಳಿಗೆಯ ನಲ್ಲನ ಕೈಗೆ ಕೊಡುತ ನಡೆವರು ಕೆಲಬರು ಕೊಡದೆ ಕೆಲವರು ಮತ್ತವನ ಬಾಯ್ದೆರೆ ಗೂಡುತಡಿಯಿಟ್ಟರಧಿಕ ಲೀಲೆಯೊಳು. ಬಾಯ್ದೆರದೆಲೆಯ ಫಳಿಗೆಯ ಕೆಲವರೂಡಿ ಕೆಲರವನ ಬಾಯ್ದೆರೆದರ್ಧ ಫಳಿಗೆಯ ಕೊಟ್ಟರ್ಧನೊಯ್ದು ಕೊಂಬರು ತಮ್ಮ ಬಾಯ್ಗೆ ಎಂಬುದಾಗಿ 'ಭರತೇಶ ವೈಭವ'ದಲ್ಲಿ ಹೇಳಿದೆ[೩೪].

ಜನರು ತಮ್ಮ ದೈನಂದಿನ ಜೀವನದಲ್ಲಿ ಊಟ ತಿಂಡಿಗಳಿಗೆಂದು ಹೇಗೆ ಹಣವನ್ನು ಗೊತ್ತು ಪಡಿಸುತ್ತಿದ್ದರೋ ಹಾಗೆ ತಾಂಬೂಲದ ಖರ್ಚಿಗೆಂದು ಸ್ವಲ್ಪ ಹಣವನ್ನು ತಮ್ಮ ಆದಾಯದಲ್ಲಿ ತೆಗೆದಿಡುತ್ತಿದ್ದರು. ಬೊಂಬೆಯ ಲಕ್ಕನ 'ಹರಿಶ್ಚಂದ್ರ ಸಾಂಗತ್ಯ'ದಲ್ಲಿ ಹರಿಶ್ಚಂದ್ರ ತನ್ನ ಪತ್ನಿ ಪುತ್ರರನ್ನು ಮಾರಿ ಒಡೆಯನ ಋಣ ತೀರಿತೆಂದು ಭಾವಿಸಿ ಹಣವನ್ನು ನಕ್ಷತ್ರಿಕನ ಕೈಗೆ ಕೊಟ್ಟಾಗ ಅವನು ಹೇಳುವುದೇನು? "ಕೊಟ್ಟವೆ ನಾಲ್ವತ್ತೆಂಟು ಸಾವಿರವೆನೆ ದುಷ್ಟಮುನಿಗೆ ಬಂದಿತಾಗಿ ಇಷ್ಟು ದಿನ ನನ್ನ ಊಟ ವೀಳ್ಯಕೆ ಸರಿಕೊಟ್ಟುದಿಲ್ಲ ಸಾಲಕೆಂದು"[೩೫]. ನೀನು ಈಗ ಕೊಟ್ಟಿದ್ದು ನನ್ನ ಊಟ ವೀಳ್ಯದ ಖರ್ಚಿಗಾಯಿತು ಎಂಬ ಹೇಳಿಕೆ ಅತ್ಯಂತ ಕುತೂಹಲಕಾರಿಯಾಗಿದೆ.

ಸಮಾಜದಲ್ಲಿ ತಾಂಬೂಲ ತನ್ನದೇ ಆದ ಸ್ಥಾನಮಾನವನ್ನು ಘನತೆ ಗೌರವಗಳನ್ನು ಬೆಳೆಸಿಕೊಂಡು ಬಂದಿದೆ. ತಾಂಬೂಲ ಅನ್ನುವುದರ ಅರ್ಥ ವ್ಯಾಪ್ತಿ ಬರುಬರುತ್ತ ವಿಸ್ತಾರಗೊಂಡು ಅದು ಜನರು ಬಹಳವಾಗಿ ಉಪಯೋಗಿಸುವ ಒಂದು ವಸ್ತು ಅನ್ನುವುದಕ್ಕಿಂತ ಹಿರಿದಾದ ಅರ್ಥವನ್ನು ಬೆಳೆಸಿಕೊಂಡಿದೆ. ದೊಡ್ಡವರ ಜೊತೆಯಲ್ಲಿ ಕುಳಿತು ತಾಂಬೂಲ ಹಾಕುವ ಒಂದು ಅವಕಾಶ ವ್ಯಕ್ತಿಗೆ ದೊರೆಕಿದರೆ ಅದು ಒಂದು ಅಪೂರ್ವ ಅವಕಾಶ ಮತ್ತು ಅದು ಸಮಾಜದಲ್ಲಿ ಅವನು ಗಳಿಸಿರುವ ಸ್ಥಾನದ ಮಹತ್ವವನ್ನು ತಿಳಿಸುತ್ತದೆ. ವಿಜಯನಗರದಲ್ಲಿ ಜಟ್ಟಿಗಳಿಗೆ, ದೇವದಾಸಿಯರಿಗೆ ಎಂತಹ ಗೌರವವಿತ್ತು ಎಂಬುದನ್ನು ಹೇಳುವಾಗ ಪ್ರವಾಸಿ ಪಾಯೇಸ್ 'ಈ ಸ್ತ್ರೀಯರು ರಾಜನ ಅಂತಃಪುರದ ಸ್ತ್ರೀಯರ ಬಳಿಗೆ ಹೋಗಬಹುದಲ್ಲದೆ, ಅವರೊಡನೆ ಕುಳಿತು ಎಲೆ ಅಡಿಕೆ ಸೇವಿಸಬಹುದು, ಬೇರೆ ಯಾರಿಗೂ, ಅವರು ಎಷ್ಟೇ ದೊಡ್ಡವರಾದರೂ ಇಂಥ ಅವಕಾಶ ಸಿಕ್ಕುವುದಿಲ್ಲ' ಎಂದು ಹೇಳಿದ್ದಾನೆ[೩೬].

ಈ ರೀತಿಯಲ್ಲಿ ತಾಂಬೂಲ ಪ್ರಾಚೀನ ಕಾಲದಿಂದಲೂ ಶ್ರೀಮಂತಿಕೆಯ, ರಸಿಕತೆ ಮತ್ತು ಪೂಜನೀಯ ವಸ್ತುವಾಗಿ ಉಪಯೋಗಿಸುತ್ತಿರುವುದನ್ನು ಕಾಣಬಹುದಾಗಿದೆ.

**ಅಡಿಟಿಪ್ಪಣಿಗಳು**

೧ ಪಾಲ್ಕುರಿಕೆ ಸೋಮನಾಥನ ಸೋಮೇಶ್ವರ ಶತಕ, (ಸಂ.) ಬೆಳ್ಳಾವೆ ವೆಂಕಟನಾರಾಯಣಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೦, ಪ.೨೧.

೨ ಕನಕದಾಸರ ಮೋಹನ ತರಂಗಿಣಿ, (ಸಂ.) ಆರ್.ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩. ೩–೧೩, ನೋಡಿ 'ಭೈರವೇಶ್ವರ ಕಾವ್ಯ', ೨೪–೮೧.

೩ ನಂಜುಂಡಕವಿಯ ರಾಮನಾಥ ಚರಿತೆ, ಭಾಗ ೧-೨, (ಸಂ.) ಹೆಚ್. ದೇವಿರಪ್ಪ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೫೯-೬೪, ೪-೧೧೧.

೪ ಡಾ.ಜಿ. ಶಿವರುದ್ರಪ್ಪ, 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'. ಭಾಗ ೧. ಸಂ.೪, ಬೆಂಗಳೂರು, ಪು.೨೫.

೫ ನಂಜುಂಡಕವಿಯ ಪೂರ್ವೋಕ್ತ, ೧೧-೫೭. ೬ ಪಾಲ್ಕುರಿಕೆ ಸೋಮನಾಥನ ಪೂರ್ವೋಕ್ತ, ಪ.೨೧.

೭ ನಂಜುಂಡಕವಿಯ ಪೂರ್ವೋಕ್ತ, ೪೧-೬೧ ; ಭೀಮಕವಿಯ ಬಸವಪುರಾಣ (ಸಂ.) ಇಷ್ಟಲಿಂಗಪ್ಪ ಸಿದ್ದಪ್ಪ ಪಾವಟೆ ಮತ್ತು ಇತರರು, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೬೯, ೬೧-೬. ವೀರದಂಬುಲ.

೮ ನಂಜುಡಕವಿಯ ಪೊರ್ವೋಕ್ತ, ೨೧-೩೭.

೯ ರತ್ನಾಕರವರ್ಣಿಯ ಭರತೇಶ ವೈಭವ, (ಸಂ.) ಪಿ. ಮಂಗೇಶರಾವ್, ಜೈನ ಯುವಕ ಸಂಘ, ಪುತ್ತೂರು, ೧೯೨೩. ೭೧-೧೫.

೧೦ ನಾಗೇಗೌಡ. ಹೆಚ್.ಎಲ್., ಪ್ರವಾಸಿ ಕಂಡ ಇಂಡಿಯಾ, ಸಂ.೨, ಮೈಸೂರು ವಿಶ್ವವಿದಯಾಲಯ, ಮೈಸೂರು. ಪು.೨೭೬.

೧೧ ಅದೃಶ್ಯ ಕವಿಯ ಪ್ರೌಢರಾಯನ ಕಾವ್ಯ, (ಸಂ.) ಸುಬ್ರಹ್ಮಣ್ಯಶಾಸ್ತ್ರಿ ಮತ್ತು ಸಂ.ಶಿ. ಭೂಸನೂರ ಮಠ, ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ, ೧೯೫೭. ೬-೫೮.

೧೨ ಭೈರವೇಶ್ವರ ಕಾವ್ಯ, ಪು. ೧೭೪, ಪದ್ಯ ೧೯೮; 'ಗದುಗಿನ ಭಾರತ', ೭-೧೬.

೧೩ ನಾಗೇಗೌಡ. ಹೆಚ್.ಎಲ್., ಪೂರ್ವೋಕ್ತ, ಪು. ೧೬೨.

೧೪ ಕೆಳದಿ ಬಸವರಾಜ ಸಂಕಲಿಸಿದ ಶಿವತತ್ತ್ವರತ್ನಾಕರ, ಸಂ. ೧, ೨, (ಸಂ) ಮಲ್ಲೇಪುರಂ ಜಿ. ವೆಂಕಟೇಶ, ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪು.೫೨೮.

೧೫ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಸರ್ವಜ್ಞ ಸೋಮೇಶ್ವರ ವಿರಚಿತ ಮಾನಸೋಲ್ಲಸ, (ಪ್ರ.ಸಂ.) ಎಂ.ಎಂ. ಕಲಬುರ್ಗಿ, ಕನ್ನಡ ಅನುವಾದ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮. ಪು.೨೯೮.

೧೬ ಕೆಳದಿ ಬಸವರಾಜ ಸಂಕಲಿಸಿದ ಪೂರ್ವೋಕ್ತ, ಪು.೫೨೮. ೧೭ ಕೆಳದಿ ಬಸವರಾಜ ಸಂಕಲಿಸಿದ ಪೂರ್ವೋಕ್ತ, ಪು.೫೨೮.

೧೮ ಕೆಳದಿ ಬಸವರಾಜ ಸಂಕಲಿಸಿದ ಪೂರ್ವೋಕ್ತ, ಪು.೫೨೯. ೧೯ ನಾಗೇಗೌಡ. ಹೆಚ್.ಎಲ್., ಪೂರ್ವೋಕ್ತ, ಪುಟ ೧೬೨.

೨೦ ನಂಜುಂಡಕವಿಯ ಪೂರ್ವೋಕ್ತ, ೨೭ - ೧೨೭.

೨೧ ಪುರಂದರದಾಸರು, ಪುರಂದರದಾಸರ ಕೀರ್ತನೆಗಳು, ಉಡುಪಿ, ೧೯೬೬, ೩ - ೮೪.

೨೨ ಕಳಲೆವೀರರಾಜ, 'ಸಕಲ ವೈದ್ಯ ಸಂಹಿತಾಸಾರಾರ್ಣವ', ಪು. ೫೩.

೨೩ ಹಡಪ - ಹಡಪಿಗ : "ಬಿತ್ತರದ ತಾಂಬೂಲ ಸಂಗ್ರಹಂ ಅಕ್ಕುಂ" (ಮಂಗರಾಜ. ಪು. ೨೬೫ ಉಲ್ಲೇಖ, 'ಕನ್ನಡ ನಿಘಂಟು', ಪು. ೭೧೯) ವಿರಕ್ತ ತೋಂಟದಾರ್ಯನ ಸಿದ್ದೇಶ್ವರ ಪುರಾಣ, (ಸಂ.) ಪಿ.ಆರ್. ಕರಿಬಸವಶಾಸ್ತ್ರಿ, ಕನ್ನಡ ಆಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೬೦. ೨ - ೫೮. "ಆರೋಗಣೆ ಮಾಡಿ ಯಡ್ಡಕ್ಕೆಯ ತೆಗೆದು ವೀಳಯಂಗೊಳ್ಳೋಳ್ವಲ್ಲಿ ಹಡಪದೊಳಗೆ" ನೋಡಿ; ಲಕ್ಕಣದಂಡೇಶ ವಿರಚಿತ ಶಿವತತ್ತ್ವ ಚಿಂತಾಮಣಿ, (ಸಂ.) ಎಸ್. ಬಸಪ್ಪ, ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೬. ೧೩ - ೭: ನ್ಯೂನಿಜನು ಸಹಗಮನದ ವಿಚಾರವನ್ನು ಹೇಳುವಾಗ, ಅಗ್ನಿಗೆ ಬೀಳುವುದಕ್ಕೆ ಮುಂಚೆ, ಆ ಸತಿಯಾಗಲಿರುವ ಹೆಂಗಸರು, ಅಗ್ನಿಕುಂಡಕ್ಕೆ ವೀಳದೆಲೆ ಇಡುವ ಚೀಲವನ್ನು (ಸಂಚಿ) ಕನ್ನಡಿ ಬಾಚಣಿಗೆ ಮುಂತಾದುವುಗಳನ್ನು ಎಸೆದಳೆಂದು ಹೇಳುವನು. ನೋಡಿ ನ್ಯೂನಿಜ್ 'ಎ ಫರ್‌ಗಾಟನ್ ಎಂಪೈರ್', ಪು. ೩೭೩.

೨೪ 'ಸರ್ವಜ್ಞನ ವಚನಗಳು', ೧೭೩೩; ಸಂಚಿಯ ಅವಶ್ಯಕತೆಯನ್ನು ಹೇಳಿದ ಸರ್ವಜ್ಞ, ಇನ್ನೊಂದು ವಚನವಲ್ಲಿ, " ಸುಣ್ಣವಿಲ್ಲದ ವೀಳೆ...., ಮಳಲೊಳಗೆ ಎಣ್ಣೆ ಹೊಯ್ದಂತೆ". ('ಸರ್ವಜ್ಞನ ವಚನಗಳು', ೧೭೨೧) ಎಂದು ಸುಣ್ಣದ ಅಗತ್ಯವನ್ನು ಹೇಳುತ್ತಾನೆ; ನೋಡಿ: 'ಪುರಂದರದಾಸರ ಕೀರ್ತನೆಗಳು', ೨ - ೮೪ (ಸುಣ್ಣವಿಲ್ಲ ಭಾಗವತರೆ ವೀಳ್ಯ ಹಾಕುವವನಲ್ಲ ವ್ಯಾಧಿಷ್ಠ ಗಂಡಸು....").

೨೫ 'ಗದುಗಿನ ಭಾರತ', ೧೮ - ೮

೨೬ ಕುಮಾರ ವಾಲ್ಮೀಕಿಯ (ನರಹರಿ) 'ತೊರವೆಯ ರಾಮಾಯಣ', (ಸಂ.) ಹೊ. ರಾಮಸ್ವಾಮಿಶಾಸ್ತ್ರಿ, ಬೆಂಗಳೂರು ೧೮೭೦. ೨-೨೦-೧.

೨೭ ರತ್ನಾಕರವರ್ಣಿಯ ಭರತೇಶ ವೈಭವ, (ಸಂ.) ಪಿ. ಮಂಗೇಶರಾವ್, ಜೈನ ಯುವಕ ಸಂಘ, ಪುತ್ತೂರು, ೧೯೨೩, ೧೨-೯೪.

೨೮ ರತ್ನಾಕರವರ್ಣಿಯ ಭರತೇಶ ವೈಭವ, (ಸಂ.) ಪಿ. ಮಂಗೇಶರಾವ್, ಜೈನ ಯುವಕ ಸಂಘ, ಪುತ್ತೂರು, ೧೯೨೩, ೧೨-೯೫.

೨೯ ಕನಕದಾಸರ ಮೋಹನ ತರಂಗಿಣಿ, (ಸಂ.) ಆರ್.ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩. ೧೬-೩೨ ರಿಂದ ೩೪.

೩೦ "ವೀಳೆಯದೆಲೆಗೆ ಸುಣ್ಣವನ್ನು ಹಚ್ಚಿ ಸುರುಳಿ ಮಾಡಿ ಬಾಯಲ್ಲಿಟ್ಟು ಅಗಿಯುತ್ತಾರೆ. ಒಂದೊಂದು ಸಲ ನಾಲ್ಕಾರು ಎಲೆಗಳನ್ನು ಬಾಯಲ್ಲಿ ಹಾಕಿಕೊಂಡು ಅದಿಯುವುದುಂಟು" (ನಾಗೇಗೌಡ. ಹೆಚ್. ಎಲ್., ಪೂರ್ವೋಕ್ತ, ಪು. ೧೬೨).

೩೧ ರತ್ನಾಕರವರ್ಣಿಯ ಪೂರ್ವೋಕ್ತ, ೬-೫೫.

೩೨ ಗುಬ್ಬಿ ಮಲ್ಲಣ್ಣನ ಗಣಭಾಷಿತ ರತ್ನಮಾಲೆ, (ಸಂ.) ಪ್ರಭುಸ್ವಾಮಿಗಳು, ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ, ಧಾರವಾಡ, ೧೯೪೮, ೧೭-೮.

೩೩ ನಾಗೇಗೌಡ. ಹೆಚ್.ಎಲ್., ಪೂರ್ವೋಕ್ತ, ೫-೧೦. ೩೪ ರತ್ನಾಕರವರ್ಣಿಯ ಪೂರ್ವೋಕ್ತ, ೫-೧೦.

೩೫ ಎನ್. ಬಸವಾರಾಧ್ಯ (ಸಂ.) ಬೋಂಬೆಯ ಲಕ್ಕನ 'ಹರಿಶ್ಚಂದ್ರ ಸಾಂಗತ್ಯ', ೩-೧೧೩.

೩೬ ರಾಬರ್ಟ್ ಸಿವೆಲ್,'ಎ ಫರ್‌ಗಾಟನ್ ಎಂಪೈರ್', ಪು. ೨೩೪.

****

# ವಿಜಯನಗರದ ತುಳುವ ಅರಸರ ತಮಿಳುನಾಡಿನ ಇಬ್ಬರು ಅಧಿಕಾರಿಗಳು: ಸಾಳುವ ಶೆಲ್ಲಪ್ಪನಾಯಕ, ವಾಸಲ್ ಮಲ್ಲಪ್ಪನಾಯಕ

* ಡಿ. ಸೀತಾರೆಡ್ಡಿ,

ಹೊಯ್ಸಳರ ನಂತರ ಅವರ ಉತ್ತರಾಧಿಕಾರಿಗಳಾಗಿ ಬಂದ ವಿಜಯನಗರ ಅರಸರು ಇಡೀ ದಕ್ಷಿಣ ಭಾರತದಲ್ಲಿ ತಮ್ಮ ಪ್ರಭುತ್ವ ಸ್ಥಾಪಿಸಿದರು. ವಿಶಾಲ ಸಾಮ್ರಾಜ್ಯವನ್ನು ನಿಯಂತ್ರಿಸುವ ಸಲುವಾಗಿ ಆಡಳಿತದಲ್ಲಿ ಹಲವಾರು ಮಾರ್ಪಾಟುಗಳನ್ನು ತರುವುದು ಅನಿವಾರ್ಯವಾಯಿತು. ಆಡಳಿತದ ಅನುಕೂಲಕ್ಕಾಗಿ ಹೊಸ ಸಾಮ್ರಾಜ್ಯವನ್ನು ಪಾಳೆಯಪಟ್ಟು, ನಾಯಕಟ್ಟಣ, ಸೀಮೆ, ಛಾವಡಿಗಳಾಗಿ ವಿಭಜಿಸಿ, ಅವುಗಳಿಗೆ ರಾಜಮನೆತನದವರನ್ನು ಮಹಾಮಂಡಲೇಶ್ವರ, ಮಹಾದಂಡನಾಯಕರಾಗಿ, ಕೆಲವೊಮ್ಮೆ ಸ್ಥಳೀಯ ಅಧಿಕಾರಿಗಳನ್ನು ನಾಯಕರನ್ನಾಗಿ ನೇಮಿಸುತ್ತಿದ್ದರು.

ತಮಿಳುಣಾಡಿನಲ್ಲಿ ದೊರೆತ ವಿಜಯನಗರದ ಅರಸರ ಶಾಸನಗಳಲ್ಲಿ ಅಟ್ಟವಣೈ, ಅಮರಂ, ಕರಣಿಕ್ಕಂ, ಅಧಿಕಾರಂ, ರಾಯಸಂ, ಅಡೈಪ್ಪಮ್, ವಾಶಲ್‌ಕರಣಿಕಂ, ಮುಗಪ್ಪೌಆಡ್ಯೆ, ಅವಸರಂ, ವಾಸಲ್ ಮುಂತಾದಂತಹ ಹಲವಾರು ಹುದ್ದೆಗಳು ಇದ್ದುದು ಕಂಡುಬರುತ್ತದೆ.

ವಿಜಯನಗರದ ಅರಸರು ಸುಮಾರು ಎರಡು ಶತಮಾನಗಳಿಗೂ ಹೆಚ್ಚಿನ ಕಾಲ ಶಾಂತಿ-ದಕ್ಷತೆಯಿಂದ ಆಡಳಿತ ನಡೆಸುವುದಕ್ಕೆ ಹಲವಾರು ವ್ಯಕ್ತಿಗಳು ಕಾರಣಕರ್ತರಾಗಿದ್ದಾರೆ. ಅಂಥ ಹಲವಾರು ಅಧಿಕಾರಿಗಳ ಪೈಕಿ ಈ ಲೇಖನದಲ್ಲಿ ವಿಜಯನಗರದ ತುಳುವ ವಂಶದ ಅರಸರ ಅವಧಿಯಲ್ಲಿದ್ದಂತಹ ಇಬ್ಬರು ಅಧಿಕಾರಿಗಳಾದ (೧) ಸಾಳುವ ಶೆಲ್ಲಪ್ಪನಾಯಕ (ಸಾಳುವ ವೀರ ನರಸಿಂಗನಾಯಕ) ಮತ್ತು (೨) ವಸವಸಂಕರ ವಾಸಲ್ ಮಲ್ಲಪ್ಪನಾಯಕನ ಮನೆತನದ ಬಗ್ಗೆ ಚರ್ಚಿಸಲಾಗಿದೆ.

## ಸಾಳುವ ಶೆಲ್ಲಪ್ಪ ನಾಯಕ

ಸಾಳುವ ಶೆಲ್ಲಪ್ಪ ನಾಯಕನ ಇನ್ನೊಂದು ಹೆಸರು ಸಾಳುವ ವೀರ ನರಸಿಂಗರಾಯ. ತಮಿಳುನಾಡಿನಲ್ಲಿ ಈತನಿಗೆ ಸಂಬಂಧಿಸಿದಂತೆ ಕ್ರಿ.ಶ. ೧೫೧೯ ರಿಂದ ೧೫೩೨ ರವರೆಗೆ ಸುಮಾರು ೧೦ ಶಾಸನಗಳು ದೊರೆತಿವೆ. ಕೃಷ್ಣದೇವರಾಯನ ಆಳ್ವಿಕೆಯ ಕಾಲದಿಂದ ಅಚ್ಯುತದೇವರಾಯನ ಆಳ್ವಿಕೆಯ ಕಾಲದ ಶಾಸನಗಳಲ್ಲಿ ಈತ ಕಾಣಿಸಿಕೊಂಡಿದ್ದಾನೆ. ಈತನಿಗೆ ಕಾಂಜೀಪುರವರಾಧೀಶ್ವರ ಎಂಬ ಬಿರುದೂ ಇತ್ತು.

ಸಾಳುವ ಶೆಲ್ಲಪ್ಪ ನಾಯಕನ ಮೊದಲ ಶಾಸನ ಕುನ್ನತೂರ್‌ನಲ್ಲಿ ದೊರೆತಿದೆ. ಇದರಲ್ಲಿ ಕೃಷ್ಣದೇವರಾಯನು ದೇವಾಲಯದ ಪೂಜೆ, ದೀಪ, ಧೂಪ, ನೈವೇದ್ಯಗಳಿಗಾಗಿ ಕಾಂಚೀಪುರಂನ ತಿರುವೇಂಕಟಮುಡಯ ನಾಯಿನಾರ್ ದೇವಾಲಯದ 'ದೇಕನ್ಮಿ'ಯಾದ ಸಾಳುವ ನಾಯಕ್ಕರ್ ಶೆಲ್ಲಪ್ಪರ್‌ಗೆ ಕುನ್ನತ್ತೂರು ಗ್ರಾಮ ದತ್ತಿ ನೀಡಿದ್ದನ್ನು ಉಲ್ಲೇಖಿಸುತ್ತದೆ[೧]

ಕ್ರಿ.ಶ. ೧೫೧೦ರ ಸೆಂಗಲ್‌ಮನ್ ಶಾಸನವು,[೨] ತುಳುವಕ್ಕುಲೈಂಡಾನ್ ಭಟ್ಟನ ಮಗ ಶೆಲ್ಲಪ್ಪ ವೀರ ನರಸಿಂಗರಾಯ ನಾಯಕರು ಆಮೂರು ಕೋಟ್ಟಂನ ಕುಮಿಲಿನಾಡು ವಿಭಾಗದ ಆಯಿರವೇಲಿ ಪಟ್ರುವಿನಲ್ಲಿರುವ ರಾಜಕೇಸರಿನಲ್ಲೂರು ಅಭಿನಾಮಧೇಯದ ತೈಮೂರ್‌ನ ಶೆಂಗಲ್ ಮಾಲೀಕಶುರಮುಡಯ ನಾಯಿನಾರ್ ದೇವಾಲಯದ ಪೂಜೆ, ದುರಸ್ತಿಗಾಗಿ ೧೦ ಉಪ್ಪಿನ ಹರಿವಾಣಗಳ ಮೇಲಿನ ವರಮಾನದ ಜೊತೆಗೆ, ಸೆಂಗಲುನೀರ್ ಪಟ್ರುವಿನಲ್ಲಿರುವ ಅರೈಯೆನ್‌ಶೇರಿಯಿಂದ ಒಂದು ಗ್ರಾಮವನ್ನು ಪ್ರತ್ಯೇಕಿಸಿದ್ದನ್ನು ದಾಖಲಿಸುತ್ತದೆ.

---

* ನಂ. ೭೦೨ ಕೃಷ್ಣಾ ಬ್ಲಾಕ್, ರಾಷ್ಟ್ರೀಯ ಕ್ರೀಡಾಗ್ರಾಮ ವಸತಿ ಸಂಕೀರ್ಣ, ಬೆಂಗಳೂರು-೫೬೦೦೪೭

ಈ ಶಾಸನದ ನಂತರ ೧೫೧೮ರವರೆಗೆ ಈತನ ಶಾಸನಗಳು ಕಂಡುಬರುವುದಿಲ್ಲ. ೧೫೧೮ರ ಶಾಸನವು[೩] ಕಾಂಚೀಪುರವರಾಧೀಶ್ವರ ಬಿರುದಾಂಕಿತನಾದ ಸ್ವಾಮಿ ಶೆಲ್ಲಪ್ಪರ್ ಹೆಸರಿನ ವೀರಸಿಂಹ ನಾಯಕರ ಧರ್ಮಕ್ಕಾಗಿ ನೆಡುಮೂರು ಗ್ರಾಮದ ಕೆರೆಯ ಏರಿಯಲ್ಲಿನ ಕಾಲುವೆಯ ನಿರ್ವಹಣೆಗಾಗಿ ಚನ್ನಪಟ್ಟುವಿನ ಕೃಷ್ಣರಾಜನ ಮಗ ವೆಂಗಳನಾಯಕ ಅಲಿಯಾಸ್ ತಿಮ್ಮಪ್ಪ ಭೂಮಿಯನ್ನು ದತ್ತಿ ನೀಡಿರುವುದನ್ನು ಉಲ್ಲೇಖಿಸುತ್ತದೆ. ೧೫೨೯ರ ಶಾಸನವು[೪] ವೀರನರಸಿಂಗ ರಾಯನ ಧರ್ಮಾರ್ಥವಾಗಿ ಅಳಗಪೆರುಮಾಳ್ ದೇವಾಲಯಕ್ಕೆ ತಿರುವಿಡೈಯಾಟ್ಟಂ ಆಗಿ ಭೂದಾನ ನೀಡಿದ್ದನ್ನು ತಿಳಿಸುತ್ತದೆ. ಅದೇ ವರ್ಷದ ಮತ್ತೊಂದು ಉತ್ಸವ ನಡೆಸುವುದಕ್ಕಾಗಿ, ಶೆಲ್ಲಪ್ಪ ಸಾಳುವ ದಂಡನಾಯಕರ ಪುಣ್ಯಾರ್ಥವಾಗಿ ಕಾಂಜೀವರಂನ ತುಳುವಕ್ಕುಳಯಾಂಡನ್ ಭಟ್ಟನು ಪುಲಾಲ್‌ನಲ್ಲಿರುವ ಎರಡು ಗ್ರಾಮಗಳನ್ನು ದತ್ತಿಯಾಗಿ ಬಿಟ್ಟಿಮದನ್ನು ಉಲ್ಲೇಖಿಸುತ್ತದೆ. ದಿನಾಂಕದ ಉಲ್ಲೇಖವಿರದ, ಕೃಷ್ಣದೇವರಾಯರ ಆಳ್ವಿಕೆಗೆ ಸಂಬಂಧಿಸಿದ ಶಾಸನವು,[೫] ಶೆಲ್ಲಪ್ಪರ್ ತುಳುವಕ್ಕುಲೈಂಡಾಮ್ ಭಟ್ಟರ್ ಅಲಿಯಾಸ್ ವೀರನರಸಿಂಗರಾಯ ನಾಯಕರಿಗೆ ಕೃಷ್ಣದೇವರಾಯನು ದತ್ತಿ ನೀಡಿದ್ದನ್ನು ದಾಖಲಿಸುತ್ತದೆ. ಅಚ್ಯುತದೇವರಾಯನ ಆಳ್ವಿಕೆಗೆ ಸೇರಿದ ಉಜಿತ್ತೂರ್ ಶಾಸನದಲ್ಲಿ[೬] **ಸಾಳುವ ದಣ್ಣಾಯಕ** ವೀರ ನರಸಿಂಗರಾಯ ನಾಯಕರ ಪುಣ್ಯಕ್ಕಾಗಿ ತಿರುವಾಗುತ್ತೀಶ್ವರ ದೇವಾಲಯಕ್ಕೆ ಜಯಗೊಂಡಚೋಳ ಮಂಡಲಂನಲ್ಲಿರುವ ಇರಂರೈರ ವೇಲಿಪಟ್ರು ವಿಭಾಗದ ಉರೈಯೂರ್ ಮತ್ತು ಪನ್ನೈತಾಂಗಲ್ ಗ್ರಾಮಗಳನ್ನು ದತ್ತಿ ಬಿಡಲಾಗಿದೆ.

೧೫೩೧ರ ಶಾಸನವು,[೭] ಕೃಷ್ಣದೇವರಾಯರ ಕಾಲದಲ್ಲಿ ಮಂಜೂರು ಮಾಡಿದ್ದ ೫೦ ಪೊನ್ ಜೋಡಿ ತೆರಿಗೆಯನ್ನು ಈತ ಹಾಗೇ ಇಟ್ಟುಕೊಂಡಿರುತ್ತಾನೆ. ಈ ಸಂಬಂಧದಲ್ಲಿ ಸಾಳುವ ತಿಮ್ಮನಾಯಕ ಆದೇಶ ನೀಡಿದ್ದರೂ ಸಹ ಅದನ್ನು ನಿರ್ಲಕ್ಷಿಸಿದ್ದ. ತಿರುಮಲೈದೇವ ತಿರುವದಿಡಿ? ರಾಜ್ಯದ ಮೇಲೆ ದಂಡಯಾತ್ರೆ ಕೈಗೊಂಡು ವೀರನರಸಿಂಹ ನಾಯಕನನ್ನು ಸೆರೆಹಿಡಿದು ಕಾಂಚೀಪುರಂನಲ್ಲಿ ಬೀಡುಬಿಟ್ಟಿದ್ದಾಗ ದೇವಾಲಯದ ಸ್ಥಾನಿಕರು ಈ ವಿಷಯವನ್ನು ತಿರುಮಲ ದೇವನಿಗೆ ತಿಳಿಸಿದುದನ್ನು ದಾಖಲಿಸುತ್ತದೆ.

೧೫೩೨ರ ಶಾಸನವು, ಅಚ್ಯುತದೇವರಾಯನು ತನ್ನ ಪಟ್ಟಾಭಿಷೇಕದ ದಿನದಂದು ವರದರಾಜ ಮತ್ತು ಏಕಾಂಬರನಾಥ ದೇಪಾಲಯಗಳಿಗೆ ಕೆಲವು ಗ್ರಾಮಗಳನ್ನು ಹಂಚಿಕೆಮಾಡಿ ಅವನ್ನು ಎರಡೂ ದೇವಾಲಯಗಳಿಗೆ ಸಮಾನವಾಗಿ ಹಂಚಿಕೆ ಮಾಡಬೇಕೆಂದು ತಿಳಿಸಿದ್ದ. ಆದರೆ ಸಾಳುವ ನರಸಿಂಗ ನಾಯಕನು ಏಕಾಂಬರನಾಥ ದೇವಾಲಯಕ್ಕೆ ಹೆಚ್ಚಿಗೆ ನೀಡಿ ವರದರಾಜ ದೇವಾಲಯಕ್ಕೆ ಕಡಿಮೆ ಹಂಚಿಕೆ ಮಾಡಿರುತ್ತಾನೆ. ವಿಷಯ ತಿಳಿದ ಅಚ್ಯುತದೇವರಾಯನು ಅದನ್ನು ಮತ್ತೆ ಸಮನಾಗಿ ಹಂಚಿಕೆ ಮಾಡಿದ್ದನ್ನು ಉಲ್ಲೇಖಿಸುತ್ತದೆ.

ಈ ಎಲ್ಲ ಹತ್ತು ಶಾಸನಗಳನ್ನು ಅವಲೋಕಿಸಿದಾಗ ಒಂದು ದೇವಾಲಯದ 'ದೇವಕನ್ಮಿ'ಯಾಗಿದ್ದ ಒಬ್ಬ ವ್ಯಕ್ತಿ ಪ್ರಬಲನಾಗಿ ರಾಜನಿಗೇ ಸೆಡ್ಡು ಹೊಡೆಯುವಷ್ಟು ಪ್ರಬಲನಾಗಿದ್ದುದನ್ನು ಕಾಣಬಹುದು. ಮೊದಲ ಶಾಸನದಲ್ಲಿ ಈತ ಕೇವಲ ಸಾಳುವ ಶೆಲ್ಲಪ್ಪ ನಾಯಕ ಎಂಬ ಹೆಸರಿನನಿಂದ ಮಾತ್ರ ಕಾಣಿಸಿಕೊಳ್ಳುತ್ತಾನೆ. ಈತ ಕಂಚಿಯ ತುಳುಕಲೈಯಾಂಡನ್ ಭಟ್ಟನ ಮಗ. ಬಹುಶಃ ತುಳುಕಲೈಯಾಂಡನ್ ದೇವಾಲಯದ ಅರ್ಚಕನಿರಬಹುದು. ಕೃಷ್ಣದೇವರಾಯನ ಆಳ್ವಿಕೆಯ ಕ್ರಿ.ಶ. ೧೫೦೯ರ ಶಾಸನದಲ್ಲಿ ಈತನು ಕಾಂಚೀಪುರಂನ ತಿರುವೇಂಕಟ ಮುಡಯನಾಯಿನಾರ್ ದೇವಾಲಯದ 'ದೇವಕನ್ಮಿ'ಯಾಗಿದ್ದ. 'ದೇವಕನ್ಮಿ'ಯು ಪ್ರಾಯಶಃ ದೇವಾಲಯದ ಪ್ರಧಾನ ಅರ್ಚಕ ಹುದ್ದೆಯಾಗಿದ್ದು ಇಡೀ ದೇವಾಲಯದ ನಿರ್ವಹಣೆಗಾಗಿ ಕನ್ನತ್ತೂರ್ ಗ್ರಾಮವನ್ನು ದಾನ ಪಡೆಯುತ್ತಾನೆ.

ಆದರೆ ಒಂದೇ ವರ್ಷದ ಅವಧಿಯಲ್ಲಿ ಅಂದರೆ, ಕ್ರಿ.ಶ. ೧೫೧೦ರ ವೇಳೆಗೆ ಸಾಳುವ ಶೆಲ್ಲಪ್ಪ ನಾಯಕನಾಗಿದ್ದವನು ಸಾಳುವ ವೀರ ನರಸಿಂಗನಾಯಕನೆಂಬ ಅಭಿದಾನವನ್ನು ಪಡೆಯುವ ಹಂತಕ್ಕೆ ಪ್ರವರ್ಧಮಾನಕ್ಕೆ ಬರುತ್ತಾನೆ. ಅಲ್ಲದೆ ಹಿಂದೆ ದೇವಾಲಯದ ನಿರ್ವಹಣೆಗಾಗಿ ದತ್ತಿ ಪಡೆದಿದ್ದವನು ಈಗ ಆ ಮೂರು ಕೋಟ್ಟಂನ ಕುಮಿಲಿನಾಡು ವಿಭಾಗದ ಆಯಿರವೇಲಿ ಪಟ್ರುವಿನಲ್ಲಿರುವ ತಾಯೂರನ್ ಶೆಂಗನ್ ಮಾಲೀಶುರಮುಡಯ ನಾಯಿನಾರ್ ದೇವಾಲಯದ ಪೂಜೆ–ಪುನಸ್ಕಾರಗಳಿಗಾಗಿ ಉಪ್ಪಿನ ಅರಿವಾಣಗಳ ಮೇಲಿನ ತೆರಿಗೆಯ ಜೊತೆಗೆ ಅರೈಯನ್ ಶೇರಿಯಿಂದ ಒಂದು ಗ್ರಾಮವನ್ನು ಪ್ರತ್ಯೇಕಿಸುವಷ್ಟು

ಪ್ರಬಲನಾಗುತ್ತಾನೆ. ಬಹುಶಃ ಈ ವೇಳೆಗೆ ಆತ ಆಯಿರವೇಲಿ ಪಜ್ಜುವಿನ ಅಥವಾ ಕುಮಿಲಿನಾಡು ವಿಭಾಗದ ನಾಯಕನಾಗಿದ್ದಂತೆ ತೋರುತ್ತದೆ. ನಂತರ ೮ ವರ್ಷಗಳ ಕಾಲ ಈತ ಎಲ್ಲೂ ಕಂಡುಬರುವುದಿಲ್ಲ. ಆದರೆ ಕ್ರಿ.ಶ. ೧೫೧೮ರ ವೇಳೆಗೆ ಈತ ಕಾಂಚೀಪುರವರಾಧೀಶ್ವರ ಎಂಬ ಬಿರುದನ್ನು ಧರಿಸಿರುತ್ತಾನೆ. ಮತ್ತು ಈತನ ಧರ್ಮಾರ್ಥವಾಗಿ ಈತನ 'ಕಾರ್ಯಟ್ಟುಕಾಡವ(ಕರ್ತಾರ)ನಾದ ಕೃಷ್ಣರಾಜನ ಮಗ ತಿಮ್ಮಪ್ಪನಾಯಕ ಭೂದಾನ ನೀಡುತ್ತಾನೆ. ೧೫೨೯ರ ವಲ್ಲವೂರ್ ಮತ್ತು ಪೂಲಾಲ್ ಶಾಸನಗಳು ಈತನಿಗೆ ಪುಣ್ಯವಾಗಲೆಂದು ಕ್ರಮವಾಗಿ ಅಳಗ ಪೆರುಮಾಳ್ ಭೂಮಿಯನ್ನು ಮತ್ತು ಕಾಂಚೀವರಂನ ತುಳುವಕ್ಕುಳಯಾಂಡನ್ ಭಟರ್‌ನು ಪೂಲಾಲ್‌ನಲ್ಲಿರುವ ಎರಡು ಗ್ರಾಮಗಳನ್ನು ದತ್ತಿ ನೀಡುತ್ತಾನೆ. ಇಲ್ಲಿ ಉಲ್ಲೇಖಗೊಂಡಿರುವ ಕಾಂಚೀವರಂನ ತುಳುವಕ್ಕುಲಯಾಂಡನ್ ಭಟರ್‌ನು ಬಹುಶಃ ಈತನ ತಂದೆಯಾಗಿರಬಹುದೇ? ಎಂಬ ಸಂಶಯ ಬರುತ್ತದೆ. ಬಹುಶಃ ಮಗನಿಗೆ ಅನಾರೋಗ್ಯವುಂಟಾದ್ದರಿಂದ ಈ ದತ್ತಿ ನೀಡಿರುವ ಸಾಧ್ಯತೆಯಿದೆ. ಕೃಷ್ಣದೇವರಾಯನ ಕಾಲದಲ್ಲಿ ಈತ ಪ್ರಭಾವಿ ನಾಯಕನಾಗಿ ಬೆಳೆದಿರುವುದಕ್ಕೆ, ಸ್ವತಃ ಕೃಷ್ಣದೇವರಾಯನೇ ವೀರನರಸಿಂಗನಾಯಕನಿಗೆ ದತ್ತಿ ಬಿಟ್ಟಿರುವುದು ಸಾಕ್ಷಿಯಾಗಿದೆ.

ಅಚ್ಯುತದೇವರಾಯನ ಆಳ್ವಿಕೆಯ ೧೫೩೦ರ ಶಾಸನವು ಈತನನ್ನು **ಸಾಳುವ ದಣ್ಣಾಯಕ** ಎಂದು ಹೇಳಿದೆ. ಆದರೆ ಈತನ ನಾಯಕಟ್ಟಣ ಸೀಮೆ ಯಾವುದಾಗಿತ್ತು ಎಂಬುದು ಸ್ಪಷ್ಟವಿಲ್ಲ. ಅಚ್ಯುತದೇವರಾಯನ ಅವಧಿಯಲ್ಲಿ ಈತನು ಸ್ವತಂತ್ರ ದಂಡನಾಯಕನಾಗಲು ಪ್ರಯತ್ನಿಸಿದಂತೆ ತೋರುತ್ತದೆ. ಇದಕ್ಕೆ ಪೂರಕವಾಗಿ ತಮಿಳುನಾಡಿನಲ್ಲಿ ಹಲವಾರು ಶಾಸನಗಳು ದೊರೆಯುತ್ತವೆ. ಈತನು ಅಚ್ಯುತದೇವರಾಯನ ಆದೇಶಗಳನ್ನೇ ಪಾಲಿಸದೆ ಧಿಕ್ಕರಿಸಿದಂತೆ ತೋರುತ್ತದೆ. ಆಗ ತಿರುಮಲೈದೇವ ತಿರುವದಿ ರಾಜ್ಯದ ವಿರುದ್ಧ ದಂಡಯಾತ್ರೆ ಕೈಗೊಂಡಾಗ ವೀರ ನರಸಿಂಗನಾಯಕನ ವಿಷಯ ತಿಳಿದು ಕ್ರಿ.ಶ. ೧೫೩೧ರಲ್ಲಿ ಆತನನ್ನು ಸೆರೆಹಿಡಿಯಲಾಯಿತು. ೧೫೩೨ರ ಒಂದು ಶಾನದಲ್ಲಿ ಈತನ ಉಲ್ಲೇಖವಿದೆಯಾದರೂ ಅದು ಸಾಳುವ ನರಸಿಂಗನಾಯಕನು ಎಸಗಿದ್ದ ಲೋಪವನ್ನು ಅಚ್ಯುತದೇವರಾಯ ಸರಿಪಡಿಸುವ ಸಂದರ್ಭದಲ್ಲಿ ಈತನ ಹೆಸರು ಪ್ರಾಸಂಗಿಕವಾಗಿ ಬಂದಿದೆ.

ಕ್ರಿ.ಶ. ೧೫೩೧ರಲ್ಲಿ ಸೆರೆಯಾದ ನಂತರ ಸಾಳುವ ನರಸಿಂಗನಾಯಕನ ಶಾಸನಗಳು ನಮಗೆ ದೊರೆಯುವುದಿಲ್ಲ. ವಿದೇಶೀ ಪ್ರವಾಸಿ ನ್ಯೂನಿಜ್ ಸಹ ಅಚ್ಯುತನ ವಿರುದ್ಧ ಬಂಡೆದ್ದ ಒಬ್ಬ ಸಾಳುವ ನಾಯಕನನ್ನು ಉಲ್ಲೇಖಿಸುತ್ತಾನೆ. ನಬೋರು ಕರಾಶಿಮರವರು ಕ್ರಿ.ಶ. ೧೫೩೩ರ ಕಾಂಚೀಪುರ ಶಾಸನದಲ್ಲಿ ಕಾಣಿಸುವ[೯] ಸಾಳುವ ಕೃಷ್ಣಮ ನಾಯಕ ಮತ್ತು ಕೃಷ್ಣದೇವರಾಯನ ಕಾಲದಲ್ಲಿ ಸಾಳುವರಾಯನಾಯಕ,[೯] ಸಾಳುವನಾಯಕ,[೧೦] ಕ್ರಿ.ಶ. ೧೫೩೩ರಲ್ಲಿನ ಕಾಂಜೀವರಂ ಶಾಸನಗಳಲ್ಲಿನ ಸಾಳುವನಾಯಕರು ಮತ್ತು ಈ ವೀರನರಸಿಂಗನಾಯಕ ಒಂದೇ ಎಂದು ಅಭಿಪ್ರಾಯಪಡುತ್ತಾರೆ. ಆದರೆ ಸಾಳುವ ದಂಡನಾಯಕ, ಸಾಳುವನಾಯಕ ಬಹುಶಃ ಒಬ್ಬರೇ ಇರಬಹುದೆಂದುಕೊಂಡರೂ ಕೂಡ, ಸಾಳುವ ಕೃಷ್ಣಮನಾಯಕನನ್ನು ವೀರ ನರಸಿಂಗನಾಯಕನೊಂದಿಗೆ ಸಮೀಕರಿಸಲಾಗುವುದಿಲ್ಲ. ಕೃಷ್ಣದೇವರಾಯನ ದೀರ್ಘಸೇವೆ ಮಾಡಿದ್ದರಿಂದ ಕೃಷ್ಣರಾಯನ ಹೆಸರನ್ನು ಧರಿಸಿರಬಹುದೆಂದು ನಬೋರು ಕರಾಶಿಮಾರವರು ಹೇಳುತ್ತಾರೆ. ಆದರೆ ಇದಕ್ಕೆ ಸಮರ್ಥನೀಯ ಆಧಾರಗಳಿಲ್ಲ. ಆದ್ದರಿಂದ ಇದನ್ನು ಕೇವಲ ಊಹೆ ಎಂದಷ್ಟೇ ಪರಿಗಣಿಸಬಹುದು.

### ವಸವಸಂಕರ ವಾಸಲ್ ಮಲ್ಲಪ್ಪ ನಾಯಕ

ತಮಿಳುನಾಡಿನಲ್ಲಿ ಹಲವಾರು ಶಾಸನಗಳು ವಾಸಲ್ ಮಲ್ಲಪ್ಪನಾಯಕ ಮತ್ತು ಆತನ ಕುಟುಂಬಕ್ಕೆ ಸಂಬಂಧಿಸಿವೆ. ಈ ನಾಯಕನ ಕಾಲದಲ್ಲಿ ಇದೇ ಹೆಸರಿನ ಹಲವಾರು ನಾಯಕರು ಕಂಡುಬರುತ್ತರಾದರೂ, ಈ ಮಲ್ಲಪ್ಪನಾಯಕನನ್ನು ವಿಶೇಷವಾಗಿ 'ವಾಸಲ್' ಮಲ್ಲಪ್ಪನಾಯಕ ಎಂದು ಹೆಸರಿಸಿವೆ. ಸಾಳ್ವವೀರನರಸಿಂಹನ ಆಳ್ವಿಕೆಯ ಕಾಲದಿಂದ(ನರಸನಾಯಕ) ಅಚ್ಯುತರಾಯನ ಆಳ್ವಿಕೆಯ ಅವಧಿಯವರೆಗೆ ಈ ಮನೆತನದ ಶಾಸನಗಳು ದೊರೆಯುತ್ತವೆ. ಇವುಗಳಲ್ಲಿ ಕೇವಲ ಮೂರು ಶಾಸನಗಳು ಮಾತ್ರ ಮಲ್ಲಪ್ಪನಾಯಕನ ಸ್ವಯಂ ಕಾರ್ಯಚಟುವಟಿಕೆಗಳಿಗೆ ಸಂಬಂಧಪಟ್ಟದ್ದರೆ, ಉಳಿದ ಶಾಸನಗಳಲ್ಲಿ ಸಂಬಂಧ ಸೂಚಕವಾಗಿ ಉಲ್ಲೇಖಿಸಲಾಗಿದೆ.

ವಾಸಲ್ ಮಲ್ಲಪ್ಪನಾಯಕ ಸಾಳುವ ವೀರ ನರಸಿಂಹನ ಕಾಲದಲ್ಲಿಯೇ 'ವಾಸಲ್' ಆಗಿದ್ದ. 'ವಾಸಲ್' ಎಂಬ ಪದಕ್ಕೆ ಅರಮನೆ ಎಂದರ್ಥವಿದೆ. ಇದು ನಾಯಕ ಪದವಿಗಿಂತ ಮೇಲ್‌ಸ್ತರದ ಹುದ್ದೆಯಾಗಿರಬೇಕು. ಕಲ್ಯಾಣ ಚಾಳುಕ್ಯರ ಅವಧಿಯ ಶಾಸನಗಳಲ್ಲಿ ಶ್ರೀಮನ್ಮಹಾಪ್ರದಾನನನ್ತಜ್ಜುರಾಧ್ಯಕ್ಷ ಬರ್ಮ್ಮದೇವಯ್ಯ[೧೧] ಕೇಸಿಮಯ್ಯ ಇವರನ್ನು ವೃತ್ತಿವಿಶೇಷಣಗಳಿಂದ ಪ್ರಶಂಸಿಸುವಾಗ ಮೊದಲಿಗೆ 'ಶ್ರೀ ಮನ್ಮಹಾಪ್ರಧಾನನನ್ತಜ್ಜುರಾಧ್ಯಕ್ಷ' ಎಂಬ ವಿಶೇಷಣವನ್ನು ಬಳಸಲಾಗಿದೆ. ಬಹುಶಃ ಇದು 'ವಾಸಲ್'ಗೆ ಸಮಾನವಾದ ಹುದ್ದೆಯಾಗಿರಬಹುದೆಂದು ತೋರುತ್ತದೆ.

ಮಲ್ಲಪ್ಪ ನಾಯಕ ಕ್ರಿ.ಶ. ೧೫೦೦ರ ಸೊರಂಜೇರಿ ಶಾಸನದ ವೇಳೆಗಾಗಲೇ 'ವಾಸಲ್' ಆಗಿದ್ದು, ರಾಜ ಸಾಳುವ ವೀರ ನರಸಿಂಹರಾಯನ ಒಳಿತಿಗಾಗಿ ತನ್ನ ನಾಯಕಟ್ಟಣ ಸೀಮೆಯಲ್ಲಿನ ಗ್ರಾಮವನ್ನು ದತ್ತಿ ನೀಡುತ್ತಾನೆ.[೧೨] ಶಾಸನದಲ್ಲಿ ಆತನ ನಾಯಕಟ್ಟಣ ಸೀಮೆ ಯಾವುದಾಗಿತ್ತು ಎಂಬ ಬಗ್ಗೆ ಉಲ್ಲೇಖವಿಲ್ಲ. ರಾಯಂಚೇರಿ ಶಾಸನವೂ ಸಹ[೧೩] ಮಲ್ಲಪ್ಪನಾಯಕ ನೀಡಿದ ದತ್ತಿಯನ್ನು ದಾಖಲಿಸುತ್ತದಲ್ಲದೆ ಆತನನು ಕೃಷ್ಣದೇವರಾಯನ ಅಧಿಕಾರಿ (ರಾಯರ್ ವಾಸಲ್) ಎಂದು ದಾಖಲಿಸುತ್ತದೆ.

ಸಾಳುವ ನರಸನಾಯಕನ ಅವಧಿಯಲ್ಲಿ 'ವಾಸಲ್' ಅಧಿಕಾರಿಯಾಗಿದ್ದ ಮ್ಲಲಪ್ಪನಾಯಕನು ನಂತರ ಕೃಷ್ಣದೇವರಾಯನ ಕಾಲದಲ್ಲೂ ಅದೇ ಹುದ್ದೆಯಲ್ಲಿ ಮುಂದುವರೆಯುತ್ತಾನೆ. ಆತ ಅರಮನೆಯ ಅಧಿಕಾರಿಯಾಗಿದ್ದರಿಂದ ರಾಜನಿಗೆ/ರಾಜಪರಿವಾರಕ್ಕೆ ಹೆಚ್ಚು ಆಪ್ತನಾಗಿದ್ದಂತೆ ತೋರುತ್ತದೆ. ವಾಸಲ್ ಮಲ್ಲಪ್ಪನಾಯಕನಿಗೆ ಆದಿಯಪ್ಪನಾಯಕ, ಚಿನ್ನಪ್ಪನಾಯಕ, ತಿಮ್ಮಪ್ಪನಾಯಕ ಹಾಗೂ ವಯಿಚಮ್ಮ ಎಂಬ ನಾಲ್ಕು ಮಕ್ಕಳಿದ್ದು, ಅವರೂ ಸಹ ವಿವಿಧ ಸೀಮೆಗಳ ನಾಯಕರಾಗಿದ್ದರು. ಅವರಲ್ಲಿ ಮೂವರು ಗಂಡುಮಕ್ಕಳು ಎಂದರೆ ಆದಿಯಪ್ಪನಾಯಕ, ಚಿನ್ನಪ್ಪನಾಯಕ ಮತ್ತು ತಿಮ್ಮಪ್ಪನಾಯಕರು 'ವಾಸಲ್' ಪದವಿಯನ್ನು ಪಡೆದಿದ್ದುದು ಶಾಸನಳಿಂದ ಕಂಡುಬರುತ್ತದೆ.

ಇವರಲ್ಲಿ ಆದಿಯಪ್ಪ ನಾಯಕನಿಗೆ ನೇರವಾಗಿ ಸಂಬಂಧಿಸಿದ ಶಾಸನಗಳು ಇಲ್ಲ. ಶ್ರೀರಂಗಂನ ೧೫೧೩ರ[೧೪] ಶಾನವು ಕೃಷ್ಣದೇರಾಯನ 'ವಾಸಲ್' ಆದ ವಸವಸಂಕರ ಮಲ್ಲಪ್ಪನಾಯಕನ ಮಗ ಆದಿಯಪ್ಪ ನಾಯಕನು ತನ್ನ ಸಹೋದರನೊಂದಿಗೆ ಶ್ರೀರಂಗದೇವಾಲಯಕ್ಕೆ ದತ್ತಿ ನೀಡಿದ್ದಾರೆ.

ಇದೇ ಅವಧಿಯ (ಕರಿ.ಶ. ೧೫೧೩) ಶ್ರೀಮುಷ್ಣಂ ಶಾಸನವು[೧೫] ರೈತರು ಮಿತಿಮೀರಿದ ತೆರಿಗೆಯನ್ನು ಕಟ್ಟಲಾರದೆ ಗ್ರಾಮಗಳನ್ನು ಬಿಟ್ಟು ಹೋಗುತ್ತಿದ್ದುದನ್ನು ಮತ್ತು ಇದನ್ನು ಕೇಳಿ ವಾಸಲ್ ಆದಿಯಪ್ಪ ನಾಯಕನ ಸಹೋದರ ಚಿನ್ನಪ್ಪನಾಯಕನ ಆದೇಶದ ಮೇರೆಗೆ ಆತನ ಕಾರ್ಯಕರ್ತನಾದ ತಾಯಾಲಾರ್‌ನು ೧೭ ಪಟ್ರುಗಳ ರೈತರಿಗೆ (ನಾಟ್ಟವಾರ್) ಅನುಕೂಲವಾಗುವಂತೆ ತೆರಿಗೆಯನ್ನು ಮನ್ನಾ ಮಾಡಿದ್ದನ್ನು ತಿಳಿಸುತ್ತದೆ. ಈ ವೇಳೆಗೆ ಆದಿಯಪ್ಪ ನಾಯಕ ಸಹ 'ವಾಸಲ್' ಆಗಿದ್ದ. ಆದರೆ ಯಾವ ಸೀಮೆ ಈತನ ನಾಯಕಟ್ಟಣವಾಗಿತ್ತು ಎಂಬುದು ಸ್ಪಷ್ಟವಿಲ್ಲ. ಮತ್ತು ಚಿನ್ನಪ್ಪನಾಯಕನ ನಾಯಕಟ್ಟಣ ಸೀಮೆಯು ಈ ಶಾಸನೋಕ್ತ ೧೭ ಪಟ್ರುಗಳನ್ನು ಒಳಗೊಂಡಿದ್ದಿರಬಹುದು.

ಮಲ್ಲಪ್ಪನಾಯಕನ ಎರಡನೇ ಮಗ ಚಿನ್ನಪ್ಪನಾಯಕನನ್ನು ಹಲವಾರು ಶಾಸನಗಳು ಉಲ್ಲೇಖಿಸುತ್ತವೆ. ಚಿನ್ನಪ್ಪನಾಯಕನ ಆದೇಶದ ಪ್ರಕಾರ ಆತನ ಕಾರ್ಯಕರ್ತ ೧೭ ಪಟ್ರುಗಳ ರೈತರಿಗೆ ತೆರಿಗೆ ಮನ್ನಾಮಾಡಿದ್ದನ್ನು ಹಿಂದಿನ ಶಾಸನದಲ್ಲಿ ನೋಡಿದ್ದೇವೆ. ಅರಕಂಡನಲ್ಲೂರ್‌ನ ಕ್ರಿ.ಶ. ೧೫೨೩ರ ಶಾಸನವು[೧೬] ವಾಸಲ್ ಮಲ್ಲಪ್ಪನಾಯಕನ ಪುಣ್ಯಕ್ಕಾಗಿ ತನ್ನ ತಿರುಕ್ಕೋವಲೂರ್ ಸೀಮೆಯ ೩ ಗ್ರಾಮಗಳನ್ನು ಮಠಕ್ಕೆ ದತ್ತಿ ನೀಡಿದ್ದನ್ನು ಹೇಳುತ್ತದೆ. ತಿರುವೇದಗಾಂನ ೧೫೨೮ರ ಅವಧಿಯ ಶಾಸನವು[೧೭] ಚಿನ್ನಪ್ಪ ನಾಯಕನು ಮಧುರೈ ಮಂಡಲಂನಲ್ಲಿ ಆಳುತ್ತಿದ್ದಾಗ, ಆತನ ಕಾರ್ಯಕರ್ತ ಕಂಡಿಯತೇವಾರ್ ರಾಜನ ಧರ್ಮಕ್ಕಾಗಿ ಚಿನ್ನಪ್ಪನಾಯಕನ ಅನುಮತಿ ಪಡೆದು ಗ್ರಾಮವನ್ನು ದತ್ತಿ ನೀಡುತ್ತಾನೆ. ಶಿವಪುರಿಯ ಕ್ರಿ.ಶ. ೧೫೧೩ರ ಶಾಸನದಲ್ಲಿ[೧೮] ರಾಯರ್ ವಾಸಲ್ ಆದ ಚಿನ್ನಪ್ಪನಾಯಕನ ಕಾರ್ಯಕರ್ತ ವಸವಪ್ಪ ರಾಮಪ್ಪ ನಾಯಕ ತನ್ನ ನಾಯಕನ ಒಳಿತಿಗಾಗಿ ಕೇರಳೋ ಸಿಂಗವಳನಾಡಿನಲ್ಲಿರುವ ಶಿವಪುರಿ ದೇವಾಲಯಕ್ಕೆ ಪಾಂಡ್ಯವಳನಾಡಿನಲ್ಲಿರುವ ಕನ್ನಮಂಗಲ ಗ್ರಾಮವನ್ನು ದತ್ತಿ ಬಿಡುತ್ತಾನೆ.

ಚಿನ್ನಪ್ಪನಾಯಕನ ಮೇಕ್ಲಂಡ ಶಾಸನಗಳಿಂದ ಚಿನ್ನಪ್ಪನಾಯಕನು ಕ್ರಿ.ಶ. ೧೫೨೩ರಲ್ಲಿ ತಿರುಕ್ಕೋವಲೂರು ಪಟ್ರು ಸೀಮೆಯ ನಾಯಕನಾಗಿರುತ್ತಾನೆ. ಕ್ರಿ.ಶ. ೧೫೨೬ರ ವೇಳೆಗೆ ಮಗದೈ ಮಂಡಲಂನ ನಾಯಕನಾಗಿರುತ್ತಾನೆ. ಹಾಗೂ ಕ್ರಿ.ಶ. ೧೫೩೧ರಲ್ಲಿ ಅಚ್ಯುತದೇವರಾಯನ ಕಾಲಕ್ಕೆ ಅಚ್ಯುತದೇವರಾಯನ 'ವಾಸಲ್' ಆಗಿರುತ್ತಾನೆ.

ಇನ್ನು ವಾಸಲ್ ಮಲ್ಲಪ್ಪಣಾಯಕನ ಇನ್ನೊಬ್ಬ ಮಗ ತಿಮ್ಮಪ್ಪನಾಯಕನಿಗೆ ಸಂಬಂಧಿಸಿದಂತೆ ಹಲವಾರು ಶಾಸನಗಳು ಕಂಡುಬರುತ್ತವೆ. ಕ್ರಿ.ಶ. ೧೫೧೫ರ ಜಂಭುಕೇಶ್ವರ ಶಾಸನವು[೧೯] ಕೃಷ್ಣದೇವರಾಯನ ಅಧಿಕಾರಿ ವಾಸಲ್ ಮಲ್ಲಪ್ಪನಾಯಕನ ಮಗ ತಿಮ್ಮಪ್ಪನಾಯಕನು ದೈನಂದಿನ ದೇವರ ಪೂಜೆಗಾಗಿ ೩ ಗ್ರಾಮಗಳಲ್ಲಿನ ೧೧೨ ವೇಲಿ ಭೂ ದತ್ತಿ ನೀಡಿದ್ದನ್ನು ತಿಳಿಸುತ್ತದಲ್ಲದೆ, ಆತನ ನಾಯಕಟ್ಟಣ ಸೀಮೆ ತಿರುಚಿರಾಪಳ್ಳಿಯಲ್ಲಿತ್ತು ಎಂದು ದಾಖಲಿಸುತ್ತದೆ. ರಿಷಿವಂದ್ಯದ ಕ್ರಿ.ಶ. ೧೫೨೦ರ ಶಾಸನವು[೨೦] ವಾಸಲ್ ತಿಮ್ಮಪ್ಪನಾಯಕನು ರಾಜನ ತನ್ನ ನಾಯಕಟ್ಟಣ ಇರೈವಾರಾಯೂರ್ ಸೀಮೆಯಲ್ಲಿರುವ ಉಣ್ಣಾಮಲೈ ಗ್ರಾಮವನ್ನು ದಾನ ಮಾಡುತ್ತಾನೆ. ಅದೇ ಅವಧಿಯ ಮತ್ತು ಸ್ಥಳದ ಮತ್ತೊಂದು ಶಾಸನವು[೨೧] ತಿಮ್ಮಪ್ಪನಾಯಕನು ತನ್ನ ಸೋದರಿ ವಯಿಚಮ್ಮನ ಧರ್ಮವಾಗಿ ಎಲ್ಲ ತೆರಿಗೆಗಳನ್ನು ರದ್ದು ಮಾಡಿದ್ದನ್ನು ಹೇಳುತ್ತದೆ.

ಕ್ರಿ.ಶ. ೧೫೨೦ ರ ಎಲವಾನಸೂರ್ ಶಾಸನವು[೨೨] ರಾಮಯ್ಯ ಎಂಬ ವ್ಯಕ್ತಿ ವಾಶಲ್ ಮಲ್ಲಪ್ಪನಾಯಕನ ನಾಲ್ಕು ಮಕ್ಕಳ ಧರ್ಮಕ್ಕಾಗಿ ತಿಮ್ಮಪ್ಪ ನಾಯಕನ ಅನುಮತಿಯೊಂದಿಗೆ, ಶೂರಿಯನ್ ಕುರುಚ್ಚಿ (ಭಂಡಾರವಾಡ) ಎಂಬ ಗ್ರಾಮವನ್ನು ಪಂಡಾರವಾಡೈ ಆಗಿ (ಸರ್ವಬಾಧಾರಹಿತವಾಗಿ ಪರಿವರ್ತಿಸಿ ದತ್ತಿ ನೀಡಿದ್ದನ್ನು ದಾಖಲಿಸುತ್ತದೆ. ಅದೇ ಅವಧಿಯ ಎಲವಾನಸೂರ್‌ನ ಮತ್ತೊಂದು ಶಾಸನವು[೨೩] ತಿಮ್ಮಪ್ಪ ನಾಯಕನು ತನ್ನ ನಾಯಕಟ್ಟಣವಾದ ವಲುಡಿಲಂಪಟ್ಟು ಚಾವಡಿಯ ಭುವನೇಕ ವೀರ ಪಟ್ಟಣ ಸೀಮೆಯ ಗ್ರಾಮವನ್ನು ರಾಜನ ಧರ್ಮಕ್ಕಾಗಿ ದತ್ತಿ ನೀಡಿದ್ದನ್ನು ಹೇಳುತ್ತದೆ. ಕಲಿಯನೂರ್‌ನ ಕ್ರಿ.ಶ. ೧೫೧೩ರ ಶಾಸನವು[೨೪] ವಾಸಲ್ ತಿಮ್ಮಪ್ಪನಾಯಕನ ಕಾರ್ಯಕರ್ತ ಪಟ್ಟಮ ನಾಯಕನು ತಿಮ್ಮಪ್ಪನಾಯಕ ಮತ್ತು ರಾಜ ಅಚ್ಯುತದೇವರಾಯನ ಒಳಿತಿಗಾಗಿ ದೇವಾಲಯಕ್ಕೆ ದತ್ತಿ ಬಿಟ್ಟಿದ್ದನ್ನು ದಾಖಲಿಸುತ್ತದೆ. ಈ ಶಾಸನದಲ್ಲಿ ತಿಮ್ಮಪ್ಪನಾಯಕನನ್ನು 'ವಾಸಲ್' ಎಂದು ಕರೆದಿದ್ದು, ಈ ವೇಳೆಗೆ ತಿಮ್ಮಪ್ಪ ನಾಯಕ 'ವಾಸಲ್' ಆಗಿದ್ದಿದು ಕಂಡು ಬರುತ್ತದೆ. ಅಗರಂನ ಕ್ರಿ.ಶ. ೧೫೪೯ರ ಒಂದು ಶಾಸನವು[೨೫] ..ಮ್ಮಪ್ಪನಾಯಕನು ಬ್ರಾಹ್ಮಣರಿಗೆ ಅಗ್ರಹಾರವಾಗಿ ಒಂದು ಗ್ರಾಮವನ್ನು ದತ್ತಿ ನೀಡಿದ್ದನ್ನು ಉಲ್ಲೇಖಿಸುತ್ತದೆ.

ಈ ಎಲ್ಲ ಶಾಸನಗಳಿಂದ ತಿಮ್ಮಪ್ಪನಾಯಕನು ಚೋಳಮಂಡಲವೂ ಸೇರಿದಂತೆ ತಿರುಚಿನಾಪಳ್ಳಿಯನ್ನು ತನ್ನ ನಾಯಕಟ್ಟಣಂ ಸೀಮೆಯಾಗಿ ಹೊಂದಿದ್ದನೆಂದು ತೋರುತ್ತದೆ. ಕ್ರಿ.ಶ. ೧೫೨೦ರ ವೇಳೆಗೆ ಇರೈವಾಣ ರಾಯೂರ್ ಸೀಮೆಯ ನಾಯಕನಾಗಿದ್ದು, ಮತ್ತೆ ಅದೇ ವರ್ಷ ತಿರುಚಿರಾಪಳ್ಳಿಯ ಸೀಮೆಗೆ ನಾಯಕನಾಗಿರುತ್ತಾನೆ. ರಿಷಿವಂದ್ಯದ ಕ್ರಿ.ಶ. ೧೫೨೦ರ ಶಾಸನದ ವೇಳೆಗೆ ನಾಯಕಟ್ಟಣಂನ ನಾಯಕನಾಗಿರುವುದರ ಜೊತೆಗೆ 'ವಾಸಲ್' ಹುದ್ದೆಗೂ ಏರಿರುತ್ತಾನೆ. ಕ್ರಿ.ಶ. ೧೫೩೭ರ ಶಾಸನದಲ್ಲಿ ಆತನು ಬ್ರಾಹ್ಮಣರಿಗೆ ಅಗ್ರಹಾರವನ್ನು ದತ್ತಿ ನೀಡಿರುವುದನ್ನು ಮಾತ್ರ ಉಲ್ಲೇಖಿಸುವುದರಿಂದ ಬಹುಶಃ ಈ ವೇಳೆಗೆ ವಯಸ್ಸಾಗಿದ್ದುದರಿಂದ ಯಾವುದೇ ಹುದ್ದೆಗಳನ್ನು ಹೊಂದದಿರುವ ಸಾಧ್ಯತೆ ಕಂಡುಬರುತ್ತದೆ.

ಕ್ರಿ.ಶ. ೧೫೩೭ರ ನಂತರ ಈ ಮನೆತನದ ಶಾಸನಗಳು ಲಭ್ಯವಾಗುವುದಿಲ್ಲ. ಸಾಳುವ ವೀರ ನರಸಿಂಹನ ಅವಧಿಯಲ್ಲಿ ಕಂಡುಬರುವ ಈ ಮನೆತನ ಕೃಷ್ಣದೇವರಾಯನ ಕಾಲದಲ್ಲಿ ಹಂತಹಂತವಾಗಿ ಬೆಳೆಯುತ್ತಾ ವಂಶ ಪಾರಂಪರ್ಯವಾಗಿ 'ವಾಸಲ್' ಆಗಿ ಅಚ್ಯುತದೇವರಾಯನ ಅವಧಿಯಲ್ಲಿ ಮುಂದುವರೆಯುತ್ತಾರೆ. ಹಲವಾರು ಜನಹಿತ ಕಾರ್ಯಗಳನ್ನು ಕೈಗೊಳ್ಳುತ್ತಾರೆ.

ಈ ಎಲ್ಲ ಶಾಸನಗಳ ಹಿನ್ನೆಲೆಯಲ್ಲಿ ಗಮನಿಸಬೇಕಾದ ಒಂದು ಮುಖ್ಯ ಸಂಗತಿಯೆಂದರೆ, ಇವರ ನಾಯಕಟ್ಟಣ ಸೀಮೆಗಳು ಪ್ರಾರಂಭದಿಂದ ಕೊನೆತನಕ ಒಂದೇ ಇರದೆ ಬದಲಾಗುತ್ತಿರುವುದು. ಉದಾಹರಣೆಗೆ ಚಿನ್ನಪ್ಪನಾಯಕ ಕ್ರಿ.ಶ. ೧೫೨೩ರಲ್ಲಿ ತಿರುಕ್ಕೋವಲೂರ್ ಪಟ್ರು ಸೀಮೆಯಲ್ಲಿದ್ದ. ಕ್ರಿ.ಶ. ೧೫೨೬ರ ವೇಳೆಗೆ ಮಗದೈ ಮಂಡಲಂ ಆಳುತ್ತಿದ್ದ. ನಂತರ ಅಚ್ಯುತದೇವರಾಯನ ಅವಧಿಯಲ್ಲಿ 'ವಾಸಲ್' ಆಗಿದ್ದ. ಹಾಗೆಯೇ ತಿಮ್ಮಪ್ಪ ನಾಯಕನು ಬೇರೆ ಬೇರೆ ಅವಧಿಯಲ್ಲಿ

ಇರೈವಾಣರಾಯೂರ್ ಮತ್ತು ತಿರುಚಿರಾಪಳ್ಳಿ ಸೀಮೆಗಳ ನಾಯಕನಾಗಿದ್ದುದನ್ನು ಶಾಸನಗಳು ಉಲ್ಲೇಖಿಸುತ್ತವೆ. ನಂತರ 'ವಾಸಲ್' ಆಗಿ ಕಾಣಿಸಿಕೊಳ್ಳುತ್ತಾನೆ. ಅಂದರೆ ನಾಯಕರನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ವರ್ಗಾವಣೆ ಮಾಡಲಾಗುತ್ತಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಈ ಬಗ್ಗೆ ಈಗಾಗಲೇ ಹಲವಾರು ವಿದ್ವಾಂಸರು ಚರ್ಚಿಸಿ ವಿಜಯನಗರ ಅವಧಿಯಲ್ಲಿ ನಾಯಕರನ್ನು ವರ್ಗಾವಣೆ ಮಾಡುತ್ತಿದ್ದರೆಂಬುದನ್ನು ಸಮರ್ಥಿಸಿದ್ದಾರೆ.[೨೬]

ಈ ಎಲ್ಲ ಅಂಶಗಳಿಗೂ ಮುಖ್ಯವಾಗಿ 'ವಾಸಲ್' ಪದವಿಯು ರಾಜಪ್ರಭುತ್ವದ ಅಧಿಕಾರ ವ್ಯವಸ್ಥೆಯಲ್ಲಿ ಬಹುಶಃ ರಾಜ, ಮಹಾದಂಡನಾಯಕರ ನಂತರದ ಅತ್ಯಂತ ಪ್ರಮುಖ ಹುದ್ದೆಯಾಗಿತ್ತೆಂದು ತೋರುತ್ತದೆ. ಈ ಮನೆತನದವರು ಮೊದಲು ವಿವಿಧ ಸೀಮೆಗಳ ನಾಯಕರಾಗಿ ಕಾಣಿಸಿಕೊಂಡು, ನಂತರ 'ವಾಶಲ್' ಆಗಿ ಗುರುತಿಸಿ ಕೊಂಡಿರುವುದು ಗಮನಾರ್ಹ. ಹಿಂದೆಯೇ ಹೇಳಲಾದ ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ಉಲ್ಲೇಖಿತರಾದ 'ಶ್ರೀಮನ್ಮಹಾಪ್ರಧಾನನನ್ತಃಪುರಾಧ್ಯಕ್ಷ' ಪದವಿಗೆ ಇದು ಸಮಾನವಾದ ಅಧಿಕಾರವೆಂದಾದರೆ, 'ವಾಸಲ್' ಸಹ ಅರಮನೆಯ ಸಂಪೂರ್ಣ ಉಸ್ತುವಾರಿಯನ್ನು ನೋಡಿಕೊಳ್ಳುವ ಕಾರ್ಯವಿರಬಹುದು. ಅರಮನೆಯ ಖಾರ್ಯ ನೋಡಿಕೊಳ್ಳಲು ಏಕಲಾಲಕ್ಕೆ ಒಂದೇ ಹುದ್ದೆಯ ಅಷ್ಟು ವ್ಯಕ್ತಿಗಳ ಅಗತ್ಯವಿದೆಯೇ? ಎಂಬ ಸಂದೇಹ ಉದ್ಭವಿಸುವುದು ಸಹಜವೇ. ಇಲ್ಲಿ 'ಅರಮನೆ' ಎಂಬ ಪದಕ್ಕೆ 'ರಾಜನಿರುವ ನಿವಾಸ' ವೆಂಬ ಸೀಮಿತ ಅರ್ಥಕ್ಕಿಂತ ಹಲವಾರು ನಾಯಕಟ್ಟಣ ಸೀಮೆಗಳಿಗೆ ಸಂಬಂಧಿಸಿದ ಸಮಗ್ರ ಮೇಲುಸ್ತುವಾರಿ ಮಾಡುವ ಕಾರ್ಯವೆಂದು ಊಹಿಸಬಹುದು.

ವಿಶಾಲ ದಕ್ಷಿಣ ಭಾರತದಲ್ಲಿ ತನ್ನ ಆಧಿಪತ್ಯ ಸ್ಥಾಪಿಸಿದ್ದ ವಿಜಯನಗರ ಸಾಮ್ರಾಜ್ಯವು, ಆಡಳಿತದಲ್ಲಿ ಹಲವಾರು ಮಾರ್ಪಾಟುಗಳನ್ನು ತಂದಿತು. ಈ ಬಗ್ಗೆ ಎಷ್ಟು ಅಧ್ಯಯನ ನಡೆಸಿದರೂ ಕಡಿಮೆಯೇ ಎನ್ನಬಹುದು.

**ಅಡಿಟಿಪ್ಪಣಿಗಳು**

೧ AR-1929/B-182, ಕ್ರಿ.ಶ. ೧೫೪೯ ಜನವರಿ
೨ AR-1916/C-225, ಕ್ರಿ.ಶ. ೧೫೧೦, ಸೆಂಗಲ್‌ಮನ್(ಚಿಂಗಲ್‌ಪೇಟೆ)
೩ AR-1935/B-177, ತಿರುಪತ್ತೂರ್, ಕ್ರಿ.ಶ. ೧೫೧೮
೪ AR-1923/C-83, ವಲ್ಲವೂರ್, ಕ್ರಿ.ಶ. ೧೫೨೯.
೫ AR-1923/ C-63, ವೇಲಿಯೂರ್.
೬ AR-1910/B-256, ಉರತ್ತೂರ್, ಕ್ರಿ.ಶ. ೧೫೩೧.
೭ SII-17, 253, ತಿರುಪ್ಪನಂಗಾಡು, ಕ್ರಿ.ಶ. ೧೫೩೧
೮ SII. XVI-102, ಕ್ರಿ.ಶ. ೧೫೩೩
೯ AR-1933/B-22, ಲಳವೂರ್, ಕ್ರಿ.ಶ. ೧೫೨೧.
೧೦ SII. XXVI, ೧೦೨, ತಿರುಕ್ಕಚ್ಚೂರ್.
೧೧ ಹಂಪಿ ವಿ.ವಿ. ಶಾಸನ ಸಂಪುಟ-೫, ಭಾಗ-೧, ಸಂ. ಡಾ. ಕೆ.ಆರ್. ಗಣೇಶ ಮತ್ತು ಡಾ. ಆರ್. ಶೇಷಶಾಸ್ತ್ರಿ, ಹಂಪಿ ವಿ. ವಿದ್ಯಾಲಯ, ಸಂಖ್ಯೆ ೧೧೪, ೨೮೪, ೩೩೦.
೧೨ AR-1945/46, ಸೊರಂಜೇರಿ, ಕ್ರಿ.ಶ. ೧೫೦೦
೧೩ AR-1952-53, 254, ರಾಯಂಜೇರಿ.
೧೪ SII. XXIV, 364, ಶ್ರೀರಂಗಂ, ಕ್ರಿ.ಶ. ೧೫೧೩
೧೫ AR-1916/C-246, ಅರಕಂಡನಲ್ಲೂರ್,
೧೬ AR-1934-35/B-175, ಅರಕಂಡನಲ್ಲೂರ್,
೧೭ AR-1905/C-677, ತಿರುವೇದಗಾಂ, ಕ್ರಿ.ಶ. ೧೫೨೬
೧೮ AR-1929/B-33, ಶಿವಪುರಿ, ಕ್ರಿ.ಶ. ೧೫೩೧
೧೯ AR-1936-37/B-105, ಜಂಭುಕೇಶ್ವರಂ,
೨೦ AR-1943-44/B-110, ರಿಷಿವಂದ್ಯ, ಕ್ರಿ.ಶ. ೧೫೨೦
೨೧ AR-1943-44/B-111, ರಿಷಿವಂದ್ಯ, ಕ್ರಿ.ಶ. ೧೫೪೯
೨೨ AR-1937-38/C-495, ಎಲವಾಸೂರ್,
೨೩ AR-1937-38/494, ಎಲವಾಸೂರ್, ಕ್ರಿ.ಶ. ೧೫೨೦
೨೪ AR-1916/167, ಕಲಿಯನೂರ್, ಕ್ರಿ.ಶ. ೧೫೩೧
೨೫ AR-1935/55, ಅಗರಂ, ೧೫೩೯.
೨೬ A concordance of Nayakas : The Vijayanagar inscriptions in south India, ನಬೋರುಕರಶಿಮಾ, ೨೦೦೨, ಪುಟ ಸಂ. ೬೫.

*****

# ತಾಡಯೋಲೆ ಹಸ್ತಪ್ರತಿಯಲ್ಲಿ ದಾಖಲಾಗಿರುವ ಕೆಳದಿ ರಾಮರಾಜನಾಯಕನ ಅಪ್ರಕಟಿತ ಶಾಸನ

* **ಡಾ. ಕೆಳದಿ ವೆಂಕಟೇಶ್ ಜೋಯಿಸ್.**

ಶ್ರೀ ಹುಲಿಮನೆ ಗಣಪತಿ ಎಂಬುವವರು ರಾಷ್ಟ್ರೀಯ ಮಿಷನ್‌ನ ಕೆಳದಿ ಹಸ್ತಪ್ರತಿ ಸಂಪನ್ಮೂಲ ಕೇಂದ್ರದ ಹಸ್ತಪ್ರತಿ ದಾಖಲಾತಿ ಯೋಜನೆಯಲ್ಲಿ ಕಾರ್ಯ ನಿರ್ವಹಿಸಿತ್ತಿದಸ್ದ ಸಂದರ್ಭದಲ್ಲಿ ಸರ್ವೇಕ್ಷಣೆಯಲ್ಲಿ ದೊರೆತ ಹಸ್ತಪ್ರತಿ ಇದಾಗಿದ್ದು ಐತಿಹಾಸಿಕವಾಗಿ ಪ್ರಾಮುಖ್ಯತೆ ಪಡೆದಿದೆ. ಈ ಹಸ್ತಪ್ರತಿ ಸುಮಾರು ೩೦ ಪುಟಗಲಿಗೂ ಹೆಚ್ಚಿದ್ದು ಅದರಲ್ಲಿ ಹಲವು ನಿರೂಪಗಳು ದಾಖಲಾಗಿದೆ. ಅದರಲ್ಲಿ ಒಂದು ಕೆಳದಿ ರಾಮರಾಜನಾಯಕನ ಕಾಲಕ್ಕೆ ಸಂಬಂಧಿಸಿದ್ದಾಗಿದೆ.

ಈ ಶಾಸನವು ಈ ಮೊದಲು ಎಲ್ಲಿಯೂ ಪ್ರಕಟಣೆ ಆಗಿರುವುದಿಲ್ಲ. ಇದು ಕೆಳದಿ ಇತಿಹಾಸಕ್ಕೆ ಸಂಬಂಧಿಸಿದಂತೆ ಹೊಸ ಸೇರ್ಪಡೆಯಾಗಿರುತ್ತದೆ. ಚನ್ನಿಗನ ತೋಟವು ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಭೀಮನ ಕೋಣೆಯಿಂದ ಸುಮಾರು ಮೂರು ಕಿ.ಮಿ. ದೂರದಲ್ಲಿರುವ ಸಣ್ಣ ಗ್ರಾಮ. ಇಲ್ಲಿ ಈಗಲೂ ಶ್ರೀ ಲಕ್ಷ್ಮೀನಾರಾಯಣ ದೇವಾಲಯ, ಶ್ರೀ ಈಶ್ವರ ದೇವಾಲಯವಿದೆ.

ಚಂನಿಗನತೋಟ ಗ್ರಾಮದ ಲಕ್ಷ್ಮೀನಾರಾಯಣ ದೇವಾಲಯದ ಬಳಿ ಇದ್ದ ಶಾಸನ ಎಂಬುದಾಗಿ ಒಂದು ಶಾಸನವನ್ನು ಎಪಿಗ್ರಾಫಿಯ ಕರ್ನಾಟಕದ ಸಂಪುಟ ಎಂಟರಲ್ಲಿ ಸಾಗರ ತಾಲ್ಲೂಕಿನ ಶಾಸನ ಸಂಗ್ರಹದ ಭಾಗದಲ್ಲಿ ಪ್ರಕಟವಾಗಿದೆ. ಈ ಶಾಸನದ ಕಾಲ ಸುಮಾರು ೧೫೭೬. ಈ ಶಾನವು ಶ್ರೀ ಲಕ್ಷ್ಮೀನಾರಾಯಣ ದೇವರ ಅಮೃತಪಡಿ ಮತ್ತು ಶ್ರೀ ಕಾರ್ಯಗಳಿಗೆ ಬಿಟ್ಟ ಸ್ವಾಸ್ತಿಯ ವಿವರವನ್ನು ತಿಳಿಸುತ್ತದೆ. ಇದು ೪೨'.೩" ಪ್ರಮಾಣದ್ದಾಗಿದ್ದು ಐವತ್ತಾರು ಸಾಲುಗಳನ್ನೊಳಗೊಂಡಿದೆ. ಈ ಶಾಸನದಲ್ಲಿ ಉಲ್ಲೇಖವಾ..ರುವ ಶ್ರೀ ಲಕ್ಷ್ಮೀನಾರಾಯಣ ದೇವರ ಉತ್ಸವ ಮೂರ್ತಿಗಳೂ ಸಹ ಇಲ್ಲಿದ್ದು ಇದು ಕೆಳದಿ ಕಾಲದ್ದಾಗಿರುವುದರಲ್ಲಿ ಅನುಮಾನವಿಲ್ಲ. ಈಗ ದೊರೆತಿರುವುದು ಹಸ್ತಪ್ರತಿಯಲ್ಲಿ ಉಲ್ಲೇಖಗೊಂಡಿರುವ ನಿರೂಪಗಳು ಇದು ಸುಮಾರು ಹದಿನೈದು ನಿರೂಪಗಳನ್ನು ಒಳಗೊಂಡಿರುವ ಹಸ್ತಪ್ರತಿಯಾಗಿದ್ದು ಅದರಲ್ಲಿರುವ ಕೆಳದಿ ರಾಮರಾಜನಾಯಕನ ಕಾಲದ ನಿರೂಪವನ್ನು ಯಥಾವತ್ತಾಗಿ ಇಲ್ಲಿ ದಾಖಲಿಸಲು ಪ್ರಯತ್ನಿಸಿದ್ದೇನೆ.

ಹಸ್ತಪ್ರತಿ ವಿವರ: ಉದ್ದ: ೩೫ ಸೆಂ.ಮೀ: ಹಸ್ತಪ್ರತಿ ದೊರೆತ ಸ್ಥಳ: ಹುಲಿಮನೆ: ಅಕ್ಷರಗಳು: ೫೫: ಸಾಲುಗಳು: ೭: ಹಸ್ತಪ್ರತಿಯಲ್ಲಿ ಉಲ್ಲೇಖವಾಗಿರುವ ಕಾಲ: ಶಾ.ಶ. ೧೪೯೮ ಕ್ರಿ.ಶ. ೧೫೭೬: ಭಾಷೆ: ಕನ್ನಡ: ಲಿಪಿ ಕನ್ನಡ:

**ಶಾಸನ ಪಾಠ**

ಶ್ರೀ ಮಹಾ ಗಣಾಧೀಶ್ವರಾಯ ನಮಃ ನಮಸ್ತುಂಗ ಶಿರಸ್ಚುಂಬಿ ಚಂದ್ರ ಚಾಮರ ಚಾರವೆ
ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ ಶಂಭವೆ। ಸ್ವಸ್ತಿ ಶ್ರೀ
ಜಯಾಭ್ಯುದೆಯ ಶಾಲಿವಾಹನ ಶಕ ವರುಷ ೧೪೯೮ನೇ ರಾಮರಾಜನಾ
ಯಕೈಯನವರು । ಬೆಗಾಡಿ ಈಶ್ವರ ದೆವಗೆ ಕೊಟ್ಟ ದಾನ ಪಟ್ಟೆ ಕ್ರಮವೆಂತೆಂದರೆ। ನಂಮ
ಕಾಣಂಜಿ ಕೆಳದಿ ಸೀಮೆಗೆ ಸಲುವ ಆತವಾ
ಡಿ ಸೀಮೆ ಒಳಗಣ। ಚಂನಿಗನತೋಟದ ಗ್ರಾಮದಲ್ಲು । ನೀನು ಆಳಿ ಬರುತ್ತಿಪ್ಪ ಉತ್ತಿ ಸಿದ್ಧಾಯದ
ಭೂಮಿ ಒಳಗೆ । ಪ್ರಾಕು
ಮೊದಲು ಬಿಟ್ಟ ನಾಲ್ಕು ವರಹನ ಗಡೀಯಲು ಬಿಟ್ಟ ಕುಳ ಸಿದ್ಧಾಯದ ಭೂಮಿ ಒಳಗೆ ।

---

* ಪೋಸ್ಟ್ ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ-೫೭೭೪೦೧.

ಸಂಖ ಚಕ್ರದ ಕಲ್ಲಂನು ನೆಡಿಸಿ ಕೊ
ಟ್ಟೆಉ. ಆ ಭೂಮಿ ಕುಳ ಸಿದ್ಧಾಯ ಗ ೪ ಹಾ ಬಿರಾಡ ಗ ೧ ಕ್ಕೆ ಗ ೫ ಲು ಸಲುವುದು ಗ ೨೦ ಉಭಯಂ ಕುಳ ಸಹ ಗ
೨೪ ಅಕ್ಷಾರ
ದಲ್ಲು ೨೪ ವರಹಾನ ಮೊದಲು ಕೊಟ್ಟ ದಾನ ಪಟ್ಟೆ ಕುಳ ಸಿದ್ಧಾಯ ಗ ೪ ಬಿರಾಡ ಗ ೧ ಕ್ಕೆ ಗ ೫ ಲು ಸಲುವುದು ಗ ೨೦
ಉಭ
ಯಂ ಕುಳ ಸಹ ಪ್ರಾಕು ಪಟ್ಟೆ ಪ್ರಮಾಣು। ಗ ೨೪ ಯಭುಂ ಪ್ರಾಕು ತೊಟದ ಪಟ್ಟಿ ಕುಳ ಸಿದ್ಧಾಯ ಸಹಾ । ೫ ಗ ೮ ವರಾಡ
ಗ ೧ ಕ್ಕೆ ಗ ೫ ಲು ಸಲುವುದು ಗ ೪೦ ಉಭಯಂ

**ಹಿಂಭಾಗ**



ಕುಳ ಸಿದ್ಧಾಯ ಬಿರಾಡ ಸಹಾ ಗ ೪೮ ಅಕ್ಷಾರದಲ್ಲು ಅಲ್ಲುವುದು ನಾಲ್ವತ್ತೆಂಟು ವರಹಾನು
ಚಂನಿಗನ ತೋಟದಲ್ಲು । ನೀನು ಕಟ್ಟಿಸಿದ ಲಕ್ಷ್ಮೀನಾರಾಯಣ ದೇವರಿಗೆ। ಅಮೃತ ಪಡಿ
ನಂದಾದೀಪ್ತಿ ಬ್ರಾಹ್ಮಣ ಭೋಜನ ಸತ್ರಕ್ಕೆ ಆಚಂದ್ರಾರ್ಕಸ್ಥಾಯಿಗಳಾಗಿ ಲಕ್ಷ್ಮೀನಾರಾಯಣ
ದೇವರಿಗೆ ತೆತ್ತು ಬಾಹದು ಎಂದು । ಕೊಟ್ಟ ದಾನ ಪಟ್ಟೆ । ಯಿಂತೊಪ್ಪುವದಕ್ಕೆ ಸಾ
ಕ್ಷಿಗಳು ಆದಿತ್ಯ ಚಂದ್ರಾವನಿಲೋನಲಶ್ಚ ದ್ಯೋರ್ಭೂಮಿರಾಪೋ ಹೃದಯಂ ಯಮಶ್ಚ ಅಹಶ್ಚ
ರಾತ್ರಿಶ್ಚ ಉಭೇಚ ಸಂಧ್ಯಾ । ಧರ್ಮಸ್ಯ
ಜಾನಾತಿ ನರಸ್ಯ ಉತ್ತಿಂ । ದಾನಪಾಲನೆಯೋರ್ಮಧ್ಯೆ । ದಾನೇನ ಕ್ರಿಯ ಪಾಲನಂ । ದಾನೆ; ಸ್ವ
ರ್ಗಮವಾಪ್ನೋತಿ ಪಾಲನಾದಚ್ಚುತಂ ಪ
ದಂ । ಕತ್ರ್ಯ ಒಪ್ಪಿತ ಶ್ರೀ ಸದಾಶಿವನಾಯಕರ ಒಪ್ಪಿತ। ಯಥಾ ಪ್ರತಿ। ಶ್ರೀ ಶ್ರೀ ಶ್ರೀ।

ಈ ಶಾಸನವು ಶಾಲಿವಾಹನ ಶಕ ೧೪೯೮ ಅಂದರೆ ಕ್ರಿ.ಶ. ೧೫೭೬ ಎಂದಾಗಿದೆ. ಇದನ್ನು ಕೆಳದಿಯನ್ನಾಳಿದ ೫ನೆಯ ದೊರೆ ರಾಮರಾಜನಾಯಕನು ಜಗಾಡಿ ಈಶ್ವರ ದೇವರಿಗೆ ಕೊಟ್ಟುದ್ದಾಗಿದೆ. ಅವನು ಆತವಾಡಿ ಸೀಮೆಯೊಳಗಿರುವ ಚನ್ನಿಗನ ತೋಟದಲ್ಲಿ ಶ್ರೀ ಲಕ್ಷ್ಮೀನಾರಾಯಣ ದೇವಾಲಯವನ್ನು ಕಟ್ಟಿಸಿದ್ದು ಅದಕ್ಕೆ ಈ ಮೊದಲು ಈತನಿಗೇ ಕೊಡಲ್ಪಟ್ಟಿದ್ದ ಶಂಕ ಚಕ್ರದ ಕಲ್ಲನ್ನು ಹಾಕಿದ್ದ ೨೪ ವರಹದ ಜೊತೆಗೆ ಇನ್ನು ೨೪ ವರಹನ ಭೂಮಿಯನ್ನು ಶ್ರೀ ಲಕ್ಷ್ಮೀನಾರಾಯಣ ದೇವರಿಗೆ ಅಮೃತ ಪಡಿ, ನಂದಾದೀಪ, ಬ್ರಾಹ್ಮಣ ಭೋಜನ ಮತ್ತು ಛತ್ರಕ್ಕೆ ಬಿಟ್ಟಿರುವುದನ್ನು ಶಾಸನ ತಿಳಿಸುತ್ತದೆ.

ಇಲ್ಲಿ ಗಮನಿಸಬಹುದಾದ ಕೆಲವು ಪ್ರಮುಖ ಅಂಶಗಳೆಂದರೆ–

೧. ಶಂಕ ಚಕ್ರದ ಕಲ್ಲು ಹಾಕುತ್ತಿದ್ದುದು ವೈಷ್ಣವರಿಗೆ ಕೊಡುವ ಭೂಮಿಯಲ್ಲಿ. ಆದರೆ ಈ ಈಶ್ವರ ದೇವ ಶೈವನಾಗಿದ್ದು ಇವನಿಂದ ನಿರ್ಮಿತವಾದ ಶ್ರೀಲಕ್ಷ್ಮಿನಾರಾಯಣ ದೇವರಿಗೆ ಬಿಟ್ಟ ಭೂಮಿಯ ಗಡಿಗೂ ಇದೇ ಕಲ್ಲನ್ನು ಹಾಕಿರುವುದು. ಇದು ಈಗಲೂ ಈ ಚನ್ನಿಗನ ತೋಟದಲ್ಲಿರುವ ದೇವಾಲಯದಲ್ಲಿ ಇದೆ.

೨. ಆತವಾಡಿ: ಇದು ಕೆಳದಿಯ ಮೊದಲ ರಾಜ ಚೌಡಪ್ಪನಾಯಕನಿಗೆ ವಿಜಯನಗರದ ಕೃಷ್ಣರಾಯನಿಂದ ಕೊಡಲ್ಪಟ್ಟ ಮಾಗಣೆಗಳಲ್ಲಿ ಒಂದು. ಅಂದು ಕೆಳದಿ ಇಕ್ಕೇರಿ, ಪೆರ್ಬಯಲು, ಆತವಾಡಿ, ಚಂದ್ರಗುತ್ತಿ ಮೊದಲಾಗಿ ಎಂಟು ಮಾಗಣೆಗಳನ್ನು ಕೊಡಲ್ಪಟ್ಟಿರುವುದು ಕೆಳದಿ ನೃಪವಿಜಯ. ಶಿವತತ್ವ ರತ್ನಾಕರ ಮೊದಲಾದ ಕೃತಿಗಳಿಂದ ತಿಳಿದುಬರುತ್ತದೆ. ಇಂದೂ ಇಲ್ಲಿ ಒಂದು ಈಶ್ವರ ದೇವಾಲಯ ಇರುವುದನ್ನು ಗಮನಿಸಬಹುದು.

೩. ಶಾಸನದಲ್ಲಿ ಕಾಲ ಸ್ಪಷ್ಟವಾಗಿರುವುದರಿಂದ ಇದರಲ್ಲಿ ಉಕ್ತವಾಗಿರುವ ಕಾಲವೂ, ಕೆಳದಿ ನೃಪವಿಜಯ, ಶಿವತತ್ವ ರತ್ನಾಕರ ಮೊದಲಾದುವುಗಳಲ್ಲಿ ಉಕ್ತವಾಗಿರುವ ರಾಮರಾಜನಾಯಕನ ಕಾಲಕ್ಕೂ ಸರಿಹೊಂದುತ್ತದೆ.

೪. ಚನ್ನಿಗನ ತೋಟದಲ್ಲಿ ಇನ್ನೊಂದು ಶಾಸನ ದೊರೆತಿದ್ದು ಅದು ಈಗಾಗಲೇ ಎಪಿಗ್ರಾಫಿಯ ಕರ್ನಾಟಕ ಸಂಪುಟದಲ್ಲಿ ಪ್ರಕಟವಾಗಿದೆ.

೫. ಇಂದು ಚನ್ನಿಗನ ತೋಟದಲ್ಲಿ ಲಕ್ಷ್ಮಿನಾರಾಯಣ ದೇವಾಲಯ ಇದೆ. ಅಲ್ಲಿರುವ ಒಂದು ದೇವಾಲಯದಲ್ಲಿ ಸುಂದರವಾದ ಪಂಚ ಲೋಹದ ಶಿಲ್ಪಗಳಿದ್ದು ಅವು ಗಮನ ಸೆಳೆಯುತ್ತದೆ.

೬. ಚನ್ನಿಗನ ತೋಟದ ಕುರಿತು ಅಲ್ಲಿಯವರು ಹೇಳುವ ಐತಿಹ್ಯವೆಂದರೆ ಇದು ಚನ್ನಿ ಎಂಬ ಕೆಳದಿ ರಾಜ ಕುಟುಂಬ ಇಟ್ಟುಕೊಂಡಿದ್ದ ಒಬ್ಬ ವೇಶ್ಯೆ ವಾಸವಾಗಿದ್ದ ಸ್ಥಳವಾಗಿದೆ. ಇಲ್ಲಿಯ ಭೂಮಿಯೆಲ್ಲ ಅವಳಿಗೇ ಸೇರಿತ್ತು. ಕಾಲಾನಂತರದಲ್ಲಿ ಅವಳು ಊರು ಬಿಟ್ಟು ಹೋದಳು. ಅದರೂ ನಂತರದಲ್ಲಿ ಇಲ್ಲಿಂದ ಕೆಳದಿ ದೇವಾಲಯಕ್ಕೆ ಒಂದು ಡಬ್ಬ ದೀಪದ ಎಣ್ಣೆಯನ್ನು ಕಳುಹಿಸಿಕೊಡುವ ವ್ಯವಸ್ಥೆ ಮಾಡಿ ಹೋಗಿದ್ದಳು. ಅದು ಇಂದಿಗೂ ಮುಂದುವರೆದುಕೊಂಡು ಬರುತ್ತಿದೆ ಯಂಬುದು ಗಮನಿಸಬೇಕಾದ ಅಂಶ.

* ಈ ಹಸ್ತಪ್ರತಿಯನ್ನು ಉಪಯೋಗಿಸಿಕೊಳ್ಳಲು ಅವಕಾಶ ಕಲ್ಪಿಸಿಕೊಟ್ಟ ಹಸ್ತಪ್ರತಿ ಸಂಪನ್ಮೂಲ ಕೇಂದ್ರದ ಸಂಚಾಲಕರಾದ ಶ್ರೀ ಕೆಳದಿ ಗುಂಡಾಜೋಯಿಸ್ ಮತ್ತು ಸಂಗ್ರಾಪಕರಾದ ಶ್ರೀ ಹುಲಿಮನೆ ಗಣಪತಿ ಅವರಿಗೆ ನಾನು ಅಭಾರಿಯಾಗಿದ್ದೇನೆ.

*****

# ಮೊರಟದ ಬಂಕಯ್ಯ ಸುಂಕದ ಬಂಕಯ್ಯ ಒಬ್ಬನೇ?

* ಡಾ॥ ಚನ್ನಬಸಪ್ಪ. ಬಿ

ಹನ್ನೆರಡನೆಯ ಶತಮಾನದ ಪ್ರಮುಖ ಶಿವಶರಣರಲ್ಲಿ ಬಂಕಯ್ಯ ಒಬ್ಬನಾಗಿದ್ದಾನೆ. ಈತನ ಬಗ್ಗೆ ಅರವತ್ತುಮೂರು ಪುರಾತನರ ಚರಿತ್ರೆ, ಅಮರಗಣಾಧೀಶ್ವರರ ಚರಿತ್ರೆಗಳು ಆತನ ಜನನ ಪವಾಡ ಮಾಡಿದ್ದು, ನಂತರದ ದಿನಗಳಲ್ಲಿ ಕಲ್ಯಾಣ ಪಟ್ಟಣದಲ್ಲಿ ಸುಂಕದ-ಅಧಿಕಾರಿಯಾಗಿ ಕಾರ್ಯನಿರ್ವಹಿಸಿದುದನ್ನು ನಿರೂಪಿಸುತ್ತವೆ.

**ಆರಂಭ ಜೀವನ**

ಪೂರ್ವದಲ್ಲಿ ವ್ಯೋಮಕೇಶನೆಂಬ ರುದ್ರನು ಹರಲೋಕದಲ್ಲಿ ಛಲದಂಕ ಭೀಮನೆಂಬ ಗಣೇಶ್ವರನಾಗಿದ್ದು, ಮಹೇಶ್ವರನ ಆಜ್ಞೆಯಿಂದ ಭೂಲೋಕದಲ್ಲಿ ಮೊರಟವೆಂಬ ಗ್ರಾಮದಲ್ಲಿ ಬಂಕಯ್ಯನೆಂಬ ಹೆಸರಿನಿಂದ ಹುಟ್ಟಿ, ಶಿವಭಕ್ತಿಯುಳ್ಳವನಾಗಿ ಜಂಗಮಾರ್ಚನಾಸಕ್ತನಾಗಿದ್ದನು. ಆತನ ಶಿವ ನಿಷ್ಠೆಯನ್ನು ಪರೀಕ್ಷಿಸಲು ಶಂಕರನು ಅವನ ಮನೆಗೆ ಅರ್ಧರಾತ್ರಿಯಲ್ಲಿ ಒಬ್ಬ ವಟು ವೇಷಧಾರಿಯಾಗಿ ಬರಲು, ಬಂಕದೇವನು ಅವನ ಪಾದಕ್ಕೆ ನಮಸ್ಕರಿಸಿ, 'ಸ್ವಾಮಿ, ! ಶಿವಾರ್ಚನೆ ಮಾಡಿಕೊಳ್ಳಿ' ಎಂದು ಬೇಡಿಕೊಂಡನು. ಆಗ ಆ ಜಂಗಮನು ಅಯ್ಯಾ! ನಮ್ಮ ನೇಮದಂತೆ ಒಣಗಿದ ಕೊರಡಿನ ಬಿಲ್ವದಳವನ್ನು, ಗೊಡ್ಡು[ಬರಡು] ಹಸುವಿನ ಹಾಲನ್ನು ತಂದು ಕೊಟ್ಟರೆ ನಮ್ಮ ಲಿಂಗಪೂಜೆ ಆಗುವುದೆಂದನು. ಆಗ ಬಂಕಯ್ಯನು ಆಗಬಹುದೆಂದು ಹೇಳಿ ಪಾದೋದಕವನ್ನು ತೆಗೆದುಕೊಂಡು ಆ ತೀರ್ಥವನ್ನು ಮನೆಯ ಮುಂದೆಯೆ ಕಟ್ಟಿದ್ದ ಬರಡು ಹಸುವಿನ ಮೇಲೆಯೂ, ಅದನ್ನು ಕಟ್ಟಿದ್ದ ಮೋಟು ಮರದ ಮೇಲೂ ಚಿಮುಕಿಸಿದನು. ಆಗಲೇ ಆ ಗೊಡ್ಡು ಹಸು ಹಾಲನ್ನು ಕರೆಯಿತು. ಕೊರಡು ಚಿಗುರಿತು. ಅವರೆಡನ್ನು ತಂದು ಆ ಜಂಗಮನಿಗೆ ಕೊಡಲು ಅವನು ತನ್ನ ಶಿವಪೂಜೆಯನ್ನು ಮುಗಿಸಿಕೊಂಡು ತನ್ನ ನಿಜರೂಪವನ್ನು ತೋರಿ, ಎಲೈ ಭಕ್ತನೆ, ನಿನ್ನ ಜಂಗಮಾರ್ಚನೆಯ ಭಕ್ತಿಗೆ ಮೆಚ್ಚಿದೆನು, ಏನು ಬೇಕು ಬೇಡು ಎನ್ನಲು ಅದಕ್ಕೆ ಬಂಕಯ್ಯನು ದೇವಾ, ನಾನು ಇನ್ನೂ ಭೂಲೋಕದಲ್ಲಿ ಶಿವಭಕ್ತಿಯನ್ನು ಆಚರಿಸಿ, ಶಿವಭಕ್ತಿ ಪ್ರಸಾದವನ್ನು ಹೆಚ್ಚು ಹೆಚ್ಚಾಗಿ ಪ್ರಸರಿಸಿ ಆ ಮೇಲೆ ಕೈಲಾಸಕ್ಕೆ ಬರುವೆನೆಂದಾಗ ಆಶೀರ್ವದಿಸಿದ ಶಿವ ಅದೃಶ್ಯನಾದನು.

ಮೊರಟ[ಮಲ್ಲಟ] ಗ್ರಾಮದಲ್ಲಿ ಬಂಕಯ್ಯನು ಶಿವಭಕ್ತನಾಗಿ ಸಂತೋಷದಿಂದ ಇರುತ್ತಿರಲು ಗೋವಿಂದಭಟ್ಟಾರಕ, ಜಂಬೂರಿನ ಮಹಾಕಾಳರೆಂಬ ಶರಣರು ತಮ್ಮ ತಲೆಯನ್ನು ಕತ್ತರಿಸಿ ಶಂಕರನಿಗೆ ಆರತಿ ಬೆಳಗಿ ಮೂರು ದಿನಗಳಾದ ಬಳಿಕ ಬೇರೊಂದು ಶಿರವನ್ನು ಪಡೆದುಕೊಂಡರು. ಈ ಸುದ್ದಿಯನ್ನು ಬಂಕಯ್ಯನು ಕೇಳಿ ಆಹಾ! ಭಕ್ತನು ಶಿರವನ್ನು ಕತ್ತರಿಸುವುದನ್ನು ನೋಡಿ, ಶಿವನು ಸುಮ್ಮನೆ ಇರಬೇಕಾದರೆ, ನಾನು ಯಾಕೆ ನನ್ನ ತಲೆಯನ್ನು ಕತ್ತರಿಸಿಕೊಳ್ಳಬಾರದೆಂದು ತನ್ನ ಕೈ ಕತ್ತಿಯಿಂದ ಕೊರಳನ್ನು ಕತ್ತರಿಸಿಕೊಂಡು, ಲಿಂಗಕ್ಕೆ ಆರತಿಯನ್ನು ಬೆಳಗುವಷ್ಟರಲ್ಲಿ ಅವನ ವೀರಭಕ್ತಿಯ ಮಹತ್ವದಿಂದ ಮತ್ತೊಂದು ತಲೆಯು ಅಲ್ಲಿಯೇ ಮೂಡಿತು. ಅದನ್ನು ಕತ್ತರಿಸಿ ಶಿವನಿಗೆ ಸಮರ್ಪಿಸಿದನು. ಹೀಗೆ ಹುಟ್ಟಿದ ಶಿರಗಳನ್ನೆಲ್ಲಾ ಕತ್ತರಿಸುತ್ತಾ ಅರವತ್ತೆರಡು ಸಲ ಆರತಿ ಬೆಳಗಿದನು. ಆಗ ಮತ್ತೊಂದು [೬೩ ನೇ] ಶಿರವು ಮೂಡಲು, ಶಂಕರನು ಪ್ರತ್ಯಕ್ಷನಾಗಿ, ಎಲೈ ಛಲದಂಕನಾದ ಬಂಕಯ್ಯನೆ, ನಿನ್ನ ಸದ್ಭಕ್ತಿಗೆ ನಾನು ಸೋತೆನು; ಸಾಕು ನಿಲ್ಲಿಸು, ಈ ಕೊರಳನ್ನು ಕತ್ತರಿಸಿಕೊಳ್ಳುವ ಛಲವನ್ನು ಬಿಡು ಎಂದು ಅವನ ಕೈಯನ್ನು ಹಿಡಿದು ನಿಲ್ಲಿಸಲು ಆಗ ಬಂಕಯ್ಯನು ಪರಮೇಶ್ವರನಿಗೆ ನಮಸ್ಕರಿಸಿದನೆಂಬ ಕಥೆಯು ಇದೆ.[೧]

ಹಾಗೆಯೇ ಇದಕ್ಕೆ ಆಧಾರವೆಂಬಂತೆ ಮೊರಟದ ಬಂಕಯ್ಯ ಪವಾಡ ಮಾಡಿದ ನಂತರದ ದಿನಗಳಲ್ಲಿ ಹಾವೇರಿ ಜಿಲ್ಲೆ, ಹಿರೇಕೆರೂರು ತಾಲ್ಲೂಕು, ಅಬ್ಬಲೂರು ಗ್ರಾಮದಲ್ಲಿ ಏಕಾಂತ ರಾಮಯ್ಯ ಜೈನರೊಂದಿಗೆ ವಾದಕ್ಕಿಳಿದು, ತನ್ನ ಶಿರವನ್ನು

---

* ಬಿನ್ ಭೀಮಣ್ಣ, ಮಲ್ಕಂದಿನ್ನಿ, ಕೊತದೊಡ್ಡಿ ಅಂಚೆ, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ – ೫೮೪ ೧೧೧.

ಕಡಿದುಕೊಂಡು ಮತ್ತೆ ಪಡೆದುದನ್ನು ಅಬ್ಬಲೂರು ಗ್ರಾಮದ ಸೋಮೇಶ್ವರ ದೇವಾಲಯದ ಶಿಲ್ಪಗಳು ಮತ್ತು ಕ್ರಿ.ಶ. ಸು. ೧೨೦೦ರ ಶಾಸನ[೨]ದಿಂದ ಕಂಡುಕೊಳ್ಳಬಹುದಾಗಿದೆ.

**ಕಲ್ಯಾಣಕ್ಕೆ ಆಗಮನ**

ಹನ್ನೆರಡನೆಯ ಶತಮಾನದಲ್ಲಿ ಬಸವೇಶ್ವರನ ಕೀರ್ತಿ ಕೇಳಿ ದೇಶದ ನಾನಾ ಮೂಲೆಗಳಿಂದ ಶಿವಶರಣರು ಕಲ್ಯಾಣಕ್ಕೆ ಆಗಮಿಸುತ್ತಿದ್ದರು. ಅವರಲ್ಲಿ ಮೊರಟ ಗ್ರಾಮದ ಬಂಕಯ್ಯನು ಒಬ್ಬನಾಗಿದ್ದಾನೆ. ಇವನು ತನ್ನ ಗ್ರಾಮದಲ್ಲಿ ಪವಾಡ ಮೆರೆದ ಮೇಲೆ ಕಲ್ಯಾಣದಲ್ಲಿ ಅಂದು ರಾಜ್ಯಭಾರ ಮಾಡುತ್ತಿದ್ದ ಕಳಚೂರಿ ಅರಸ ಎರಡನೆಯ ಬಿಜ್ಜಳನ ಆಸ್ಥಾನದಲ್ಲಿ ಸುಂಕದ ವಿಭಾಗದ ಕರಣಿಕನಾಗಿದ್ದನು. ಒಂದು ಸಲ ಬಂಕಯ್ಯನಿಗೆ ದುಷ್ಟರು–ಹನ್ನೆರಡು ಸಾವಿರ ವರಹದ ಸುಂಕದ ಆದಾಯಕ್ಕೆ ಸಂಚು ಮಾಡಿದರಂತೆ. ಅದನ್ನು ಬಂಕಯ್ಯ ಬಿಜ್ಜಳನ ಬಂಡಾರಕ್ಕೆ ತುಂಬುವ ದುರ್ಧರ ಪ್ರಸಂಗ ಬಂತು. ಆಗ ಚಿಂತೆಗೊಳಗಾಗಿ ಬಂಕಣ್ಣ ಮಹಾಮಂತ್ರಿ ಬಸವಣ್ಣನವರ ಮಹಾಮನೆಯತ್ತ ನಡೆದಿದ್ದ. – ಮಾರ್ಗ ಮಧ್ಯೆ ಕಲಿಕೇತ ಬೊಮ್ಮಯ್ಯಗಳು ಭೇಟಿಯಾದರು. ಬಂಕಣ್ಣನ ಕಷ್ಟ ಪರಿಹರಿಸಲೆಂದು ಹೊನ್ನಿನ ಕುಡಿಕೆಯೊಂದನ್ನು ದಯಪಾಲಿಸಿದರು. ಅದರಲ್ಲಿ ಹನ್ನೆರಡು ಸಾವಿರ ಹೊನ್ನು ತುಂಬಿತ್ತು.[೩] ಬೊಮ್ಮಯ್ಯಗಳ ಕೃಪೆಯಿಂದ ಬಂಕಣ್ಣ ಋಣಮುಕ್ತನಾಗಿ ಕಲ್ಯಾಣದಲ್ಲಿಯೇ ಜಂಗಮ ದಾಸೋಹ ಮಾಡುತ್ತ ಬಾಳು ಸವೆಸಿದನು. ಮೊದಲಿನ ಮೊರಟದ ಬಂಕಯ್ಯನೆಂಬ ಹೆಸರು ಮುಂದೆ ಸುಂಕದ ಅಧಿಕಾರಿಯಾಗಿ ಕಲ್ಯಾಣದಲ್ಲಿ ಕೆಲಸ ಮಾಡಿದ್ದರಿಂದ ಸುಂಕದ ಬಂಕಯ್ಯನೆಂಬ ಹೆಸರು ಹೆಚ್ಚು ಪ್ರಚಾರವಾದಂತೆ ಕಂಡು ಬರುತ್ತದೆ.

**ಮೊರಟ[ಮಲ್ಲಟ]ಗ್ರಾಮದ ಐತಿಹಾಸಿಕ ಹಿನ್ನೆಲೆ**

ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ 'ಮಲ್ಲಟ' ಗ್ರಾಮವು ಹಿಂದೆ ಎಡತೊರೆ–೨೦೦೦ ನಾಡಿನ, ಮೊರಟ–೩೦೦ರ ವಿಭಾಗವಾಗಿದುದಲ್ಲದೆ, ಇಲ್ಲಿಂದಲೇ ಹೈಹೇಯ ವಂಶದ ಅರಸರು, ಕಲ್ಯಾಣದ ಚಾಳುಕ್ಯರು, ಕಳಚೂರಿಗಳ ಮಹಾಮಂಡಳೇಶ್ವರರಾಗಿ ಮೊರಟ [ಇಂದಿನ ಮಲ್ಲಟ] ಗ್ರಾಮವನ್ನು ಕೇಂದ್ರ ಸ್ಥಾನ ಮತ್ತು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಿರ್ವಹಿಸಿದರು. ಈ ಗ್ರಾಮದಲ್ಲಿ ಒಟ್ಟು ಏಳು ಶಿಲಾಶಾಸನಗಳು ಪತ್ತೆಯಾಗಿವೆ. ಅವುಗಳಲ್ಲಿ ಒಂದು ಶಾಸನ ಮಾತ್ರ ಪ್ರಕಟಗೊಂಡಿದ್ದು, ಉಳಿದ ಆರು ಶಿಲಾಶಾಸನಗಳನ್ನು ನಾನು ಪ್ರಕಟಪಡಿಸಿದ್ದೇನೆ.[೪] ಈ ಶಿಲಾಶಾಸನಗಳಿಂದ ಇಂದಿನ ಮಲ್ಲಟ ಗ್ರಾಮವು ಕ್ರಿ.ಶ. ೧೧ ರಿಂದ ೧೩ ನೇ ಶತಮಾನಗಳವರೆಗೆ ಕರ್ನಾಟಕದಲ್ಲಿಯೇ ಖ್ಯಾತಿವೆತ್ತ ಮಹಾಘಟಕಾ ಸ್ಥಾನವಾಗಿತ್ತು. ಹಾಗೆಯೇ ಶಾಸನ ಉಲ್ಲೇಖಿತ ಸ್ವಯಂಭು ಮಲ್ಲಿಕಾರ್ಜುನ, ಪಲ್ಲವೇಶ್ವರ, ಸಪ್ತನಾಥದೇವ, ಮಾದೇಶ್ವರ, ನಖರೇಶ್ವರ, ಸೋಮನಾಥ, ಲೋಕೇಶ್ವರ ದೇವಾಲಯಗಳಿದ್ದವೆಂದು ತಿಳಿದು ಬರುತ್ತದೆ. ಆದುದರಿಂದ ಇಲ್ಲಿಗೆ ಬೇರೆ ಬೇರೆ ಪ್ರದೇಶಗಳಿಂದ ವಿದ್ವಾಂಸರು ಉನ್ನತ ಪದವಿ ಮತ್ತು ತಮ್ಮ ಪಾಂಡಿತ್ಯವನ್ನು ಪ್ರಚುರ ಪಡಿಸಿಕೊಳ್ಳುವ ಸಲುವಾಗಿ ಇಲ್ಲಿಗೆ ಆಗಮಿಸುತ್ತಿದ್ದರು. ಅಂತಹವರಲ್ಲಿ ಇಂದಿನ ಆಂಧ್ರಪ್ರದೇಶ ರಾಜ್ಯದ ಮೆಹಬೂಬನಗರ ಜಿಲ್ಲೆಯ "ವಜ" ಗ್ರಾಮದ ಶಿವಶರಣ ಸಕಳೇಶ್ವರ ಮಾದರಸ ಪ್ರಮುಖನಾಗಿದ್ದಾನೆ. ಇವನು ತನ್ನ ಮಗಳಾದ ಬೆಸವಲದೇವಿಯನ್ನು ಮೊರಟ[ಮಲ್ಲಟ] ಹೈಹೇಯ ವಂಶದ ಮಲ್ಲರಸನಿಗೆ ಮದುವೆ ಮಾಡಿಕೊಟ್ಟಿದ್ದನೆಂಬ ವಿಷಯವು ಶಾಸನದಲ್ಲಿದೆ.[೫]

**ಕರ್ನಾಟಕದಲ್ಲಿ ಬಂಕೇಶ್ವರ ದೇವಾಲಯಗಳ ಹಿನ್ನೆಲೆ**

ರಾಷ್ಟ್ರಕೂಟ ಅರಸ ಒಂದನೆಯ ಅಮೋಘವರ್ಷ [ಕ್ರಿ.ಶ. ೮೧೪–೮೭೮]ನ ಸೇನಾಪತಿ [ದಂಡನಾಯಕ] ಬಂಕೆಯನು ಚಲ್ಲಕೇತನ ಮನೆತನಕ್ಕೆ ಸೇರಿದವನಾಗಿದ್ದನು. ಬಂಕೆಯ ಅಪ್ರತಿಮವೀರ, ಅವನ ಶೌರ್ಯ–ಸಾಹಸಗಳಿಂದ ರಾಷ್ಟ್ರಕೂಟರ ಶತ್ರುಗಳೆಲ್ಲರೂ ಬೆಮರಿ ಕಂಗಾಲಾಗಿದ್ದರು. ಬಂಕೆಯನ ಪ್ರಮುಖ ಸಾಧನೆಯೆಂದರೆ, ಅವನು ದೊರೆಯ ಅಪ್ಪಣೆಯಂತೆ ಗಂಗವಾಡಿಯನ್ನು ಹಿಡಿಯಲು ಮಾಡಿದ ಪ್ರಯತ್ನ. ಹಾಗೆಯೇ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ಉಂಟಾಗಿದ್ದ ಆಂತರಿಕ ಕಲಹಗಳಿಂದ ಇವರ ಅನೇಕ ಸಾಮಂತರು ದಂಗೆಯೆದ್ದರು. ಅವರಲ್ಲಿ ಒಬ್ಬನಾದ ಗಂಗರಾಜ ರಾಚಮಲ್ಲನನ್ನು ಶಿಕ್ಷಿಸಲು ಅಮೋಘ ವರ್ಷ ಉದ್ಯುಕ್ತನಾದಾಗ ಇತರ ರಾಷ್ಟ್ರಕೂಟ ಸಾಮಂತರು ಉದಾಸೀನ ತೋರಿದರು. ಬಂಕೇಯನು ಧೈರ್ಯಗೆಡದೆ

ಏಕಾಂಗಿಯಾಗಿ ಮುನ್ನುಗ್ಗಿ. ತುಮಕೂರು ಹತ್ತಿರದ ದುರ್ಗಮವಾದ ಕೈದಾರ ಕೋಟೆಯನ್ನು ಕೈವಶಮಾಡಿಕೊಂಡನು. ಆ ನಂತರ ಗಂಗರಾಜನನ್ನು ತಲವನಪುರ[ಇಂದಿನ ತಲಕಾಡು]ದಿಂದ ಓಡಿಸಿ ಕಾವೇರಿ ನದಿಯನ್ನು ದಾಟಿ ಗಂಗ ರಾಜ್ಯವನ್ನು ಆಕ್ರಮಿಸಿದ. ಆದರೆ ಗಂಗ ರಾಜ್ಯಪೂರ್ಣವಾಗಿ ಕೈವಶವಾಗುವ ಮೊದಲೇ ಅಮೋಘವರ್ಷನ ಅನುಜ್ಞೆಯ ಮೇರೆಗೆ ಹಿಂದಿರುಗಬೇಕಾಯಿತು. ಪ್ರಾಯಶಃ ಆಗ ಅಮೋಘವರ್ಷನ ಮಗ ಇಮ್ಮಡಿಕೃಷ್ಣ ಬಂಡೆದ್ದುದರಿಂದ ರಾಜ್ಯದ ಸ್ಥಿತಿ ಉತ್ತಮವಾಗಿರಲಿಲ್ಲದ ಕಾರಣ ಬಂಕೇಶ ಮತ್ತೆ ಶಾಂತಿಯನ್ನು ಸ್ಥಾಪಿಸಲು ಮುಂದಾದ. ರಾಜಧಾನಿಯಿಂದ ಓಡಿಹೋಗಿದ್ದ ಕೃಷ್ಣನನ್ನು ಹಿಡಿದು ತಂದು ಅಮೋಘವರ್ಷನಿಗೆ ಒಪ್ಪಿಸಿದಾಗ, ಸಂತೋಷಗೊಂಡ ಅಮೋಘವರ್ಷನು ಬಂಕೇಶನ ಹೆಸರಿನಲ್ಲಿ ಬಂಕಾಪುರ[ಇಂದಿನ ಹಾವೇರಿ ಜಿಲ್ಲೆ ಶಿಗ್ಗಾಂವ ತಾಲ್ಲೂಕು]ಎಂಬ ನಗರ ನಿರ್ಮಿಸಿದನು. ಕಲ್ಬುರ್ಗಿ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ರಟಕಲ್ ಗ್ರಾಮದ ಬಂಕನಾಥ ದೇವಾಲಯ ಮತ್ತು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕು ಬಲ್ಲಟಗಿ ಗ್ರಾಮಗಳಲ್ಲಿ ಬಂಕೇಶ್ವರ ದೇವಾಲಯಗಳು ರಾಷ್ಟ್ರಕೂಟ ಅರಸರಕಾಲದಲ್ಲಿ ನಿರ್ಮಾಣವಾದಂತೆ ತಿಳಿದು ಬರುತ್ತವೆ. ಇವಕ್ಕೆ ಆಧಾರವೆಂಬಂತೆ ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕು ನುಗಡೋಣಿ ಗ್ರಾಮದ ಊರ ಹೊರಗೆ ಬಳ್ಳನಿಟ್ಟಗೆ[ಬಲ್ಲಟಗಿ]ಯಲ್ಲಿ ಬಂಕೇಶ್ವರ ದೇವರಿಗೆ ನಿವೇಶನ, ಗಾಣ, ತೋಟ ಮೊದಲಾದವುಗಳನ್ನು ಗೀಕರ್ಣರಾಶಿಜೀಯರಿಗೆ ದತ್ತಿ ಬಿಟ್ಟುಕೊಟ್ಟ ಬಗ್ಗೆ ಉಲ್ಲೇಖವಿದೆ. ಈ ಶಾಸನದ ಆಧಾರದಿಂದ ಅಂದಿನ ದಿನಗಳಲ್ಲಿ ಬಲ್ಲಟಗಿ ಗ್ರಾಮದಲ್ಲಿ ಬಂಕೇಶ್ವರ ದೇವಾಲಯ ಪ್ರಸಿದ್ಧವಾಗಿದ್ದು, ಬಂಕಣ್ಣನ ತಂದೆ ತಾಯಿಗಳು ತನ್ನ ಮಗನಿಗೆ 'ಬಂಕಣ್ಣ' ಎಂಬ ಹೆಸರನ್ನು ಈ ದೇವರಿಗೆ ನಡೆದುಕೊಂಡು ನಾಮಕರಣ ಮಾಡಿದಂತೆ ತಿಳಿದು ಬರುತ್ತದೆ.

**ಸುಂಕದ ಬಂಕಯ್ಯನ ಗದ್ದುಗೆ**

ಮಾನ್ವಿ ತಾಲ್ಲೂಕು ಮಲ್ಲಟ ಗ್ರಾಮದಲ್ಲಿ ದಿನಾಂಕ- ೨೬/೮/೨೦೦೨ ರಂದು ಬಂಕಯ್ಯನ ಗದ್ದುಗೆಯನ್ನು ಮಲ್ಲಿಕಾರ್ಜುನ ದೇವಾಲಯದ ಮುಂದೆ[ದಕ್ಷಿಣ] ನಿರ್ಮಿಸಲಾಗಿದ್ದು, ಈ ಗದ್ದುಗೆಯ ಮೇಲೆ ಈ ಹಿಂದೆ ಹೇಳಿದ ವಿಷಯದಂತೆ ಬಂಕಯ್ಯ ಶರಣನು ೬೩ ಸಲ ತನ್ನ ಶಿರವನ್ನು ಕತ್ತರಿಸಿಕೊಳ್ಳುವ ಶಿಲ್ಪವನ್ನು ಇರಿಸಿದ್ದಾರೆ. ಈ ಶಿಲ್ಪ ಕರಿಯ ಕಲ್ಲಿನಲ್ಲಿದ್ದು, ಕ್ರಿ. ಶ. ೧೨- ೧೩ ನೇ ಶತಮಾನಕ್ಕೆ ಸೇರಿದ್ದಾಗಿದೆ. ಅಂದಿನ ದಿನಗಳಲ್ಲಿ ಬಂಕಯ್ಯ ಪ್ರಸಿದ್ಧ ಶಿವ ಶರಣನಾಗಿದ್ದ ಕಾರಣ ಅವನ ಮೂರ್ತಿ ಶಿಲ್ಪವನ್ನು ಪ್ರತಿಷ್ಠಾಪಿಸಿದ್ದಾರೆ, ಈಗ ಗದ್ದುಗೆ ಇರುವ ಜಾಗದಲ್ಲಿ ಬಂಕೇಶ್ವರ ದೇವಾಲಯವಿದ್ದಿತೆಂದು ಮಲ್ಲಟ ಗ್ರಾಮದ ಜನರು ಹೇಳುತ್ತಾರೆ. ಹಾಗೆಯೇ ಇದಕ್ಕೆ ಇನ್ನೂ ಹೆಚ್ಚಿನ ಆಧಾರವೆಂಬಂತೆ ದೇವಾಲಯದ ಬಿಡಿಭಾಗಗಳಾದ ಸ್ತಂಭಗಳು, ತೊಲೆಗಳು, ಬಾಗಿಲುವಾಡ, ಜಾಲಂದ್ರಗಳು, ಛತ್ತಿನಶಿಲ್ಪ[ಮುಚ್ಚಿಗೆ] ಮುಂತಾದವುಗಳು ಅಲ್ಲಿ ಕಂಡು ಬರುತ್ತಿವೆ. ಇನ್ನೂ ಕೆಲವು ಜನರು ಹೇಳುವ ಪ್ರಕಾರ ಈಗ ಗದ್ದುಗೆ ಮೇಲೆ ಇರುವ ಮೂರ್ತಿ ಶಿಲ್ಪ ವೀರಭದ್ರೇಶ್ವರ ದೇವಾಲಯದಲ್ಲಿತ್ತು, ಅದನ್ನು ತೆಗೆದುಕೊಂಡು ಬಂದು ಹೊಸದಾಗಿ ಕಟ್ಟಿದ ಗದ್ದುಗೆಯ ಮೇಲೆ ಇರಿಸಿದ್ದಾರೆ. ಆದುದರಿಂದ ಈಗ ಇರುವ ವೀರಭದ್ರೇಶ್ವರ ದೇವಾಲಯ ಅಂದಿನ ದಿನಗಳಲ್ಲಿ ಬಂಕೇಶ್ವರ ದೇವಾಲಯ ಏಕೆ ಆಗಿರಬಾರದು? ಇದರ ಬಗ್ಗೆ ಹೆಚ್ಚಿನ ಸಂಶೋಧನೆ ನಡೆಯಬಾಕಾಗಿದೆ.

**ಸಾಹಿತ್ಯ**

ಕಲ್ಯಾಣದ ಶಿವಶರಣರಂತೆ ಸುಂಕದ ಬಂಕಯ್ಯನು ವಚನಗಳನ್ನು ಬರೆದಿದ್ದಾನೆ. ಇವನ ವಚನಾಂಕಿತ "ಬಂಕೇಶ್ವರಲಿಂಗ". ಸಂಕೀರ್ಣ ವಚನ ಸಂಪುಟ-೪ ರಲ್ಲಿ ಈತನ ವಚನಗಳು ೧೦೮ ಇವೆ. ಈ ವಚನಗಳು ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕು ಗಬ್ಬೂರು ಗ್ರಾಮದ ಬಿಟ್ಟಿಬಾಚಯ್ಯನ ವಚನಗಳನ್ನು ಹೋಲುತ್ತವೆ. ಅವುಗಳಲ್ಲಿ ಎರಡು ವಚನಗಳನ್ನು ಇಲ್ಲಿ ಉದಾಹರಿಸಲಾಗಿದೆ.

**ಎಂಬತ್ತನಾಲ್ಕುಲಕ್ಷಕೋಟಿಮಾರಿನಲ್ಲಿ**
**ಮಾರಿಸಿಕೊಂಡ ಶರೀರಇದತಂದವರಾರಣ್ಣಾ**
**ಕಾಯಕ್ಕೆ ಜೀವ ಸುಂಕವ ಕೊಡದೆ,**

**ಕಾಯದೊಳಗಣ ಬಂದ ಭಾವಭ್ರಮೆ ಸುಂಕ**
**ಈವಿಧದ ಚೀಟ ಬಂಕೇಶ್ವರ ಲಿಂಗದಲ್ಲಿ ಒಪ್ಪಿಸಿಕೊಳ್ಳಿರಣ್ಣಾ. – [ವ.ಸಂ–೬]**

ಎಂಬತ್ತನಾಲ್ಕು ಲಕ್ಷಕೋಟಿ ಜೀವರಾಶಿಯಲ್ಲಿ ಮಾನವ ಜನ್ಮ ಶ್ರೇಷ್ಠವಾದುದು. ಇದನ್ನು ರೂಪವಕೊಟ್ಟು ಭೂಮಿ ಮ್ಯಾಲೆ ತಂದವರಾರಣ್ಣಾ. ಕಾಯಕವ ಮಾಡುತ್ತ ಈ ಶರೀರವನ್ನ ರಚನೆ ಮಾಡಿರುವವನಿಗೆ ಸುಂಕವನ್ನು ಕೊಡದೆ ಕಂಜಾಟವನ್ನ ತೆಗೆದು ಈ ಮಧ್ಯ ಬಂದ ಸಂಸಾರದ ವ್ಯಾಮೋಹವನ್ನು ಅಥವಾ ಭಾವಭ್ರಮೆಯನ್ನು ನಾನು–ನನ್ನದು ಎನ್ನುವುದನ್ನು ಗುರು ಬಂಕೇಶ್ವರ ಲಿಂಗಕ್ಕೆ ಅರ್ಪಿಸಿ ಮುಕ್ತಿ ಪಡೆದುಕೊಳ್ಳಿರಣ್ಣಾ ಎನ್ನುವುದು ಈ ವಚನದ ತಾತ್ಪರ್ಯ.

**ಕೋಡಗ ಬಲಿದುಕೋಣನಾಗಿ, ಕೋಣನಕೋಡಿನಲ್ಲಿ ಈರಾರು ಸೇನೆ**
**ಸೇನೆಗೊಬ್ಬ ಭಟ, ಭಟಗೆ ಮೂವರು ಸತಿಯರು.**
**ಸತಿಯರ ಕುಚದ ನಡುವೆ ಒಂದುಕಸ.**
**ಹಾವು ಕಚ್ಚಿ ಭಟರೆಲ್ಲರೂ ಸತ್ತರು.**
**ನಿರ್ಭೀತಿ ವಂತರು ಕೇಳಿ ಬಂಕೇಶ್ವರ ಲಿಂಗವ. – [ವ.ಸಂ.–೩೬]**

ಮನಸ್ಸಿನ ಚಂಚಲತೆ ಬಲಿತು ಕೆಲಸಕ್ಕೆ ಬಾರದ ಕೋಣನಂತಾಗಿ ಅದಕ್ಕೊಂದು ಈ ದೇಹವೆಂಬ ಸೇನೆ. ಈ ದೇಹವೆಂಬ ಸೇನೆಯನ್ನು ನೋಡಿಕೊಳ್ಳಲು ಒಬ್ಬ ಭಟ ನೀತಿವಂತ. ಆ ನೀತಿವಂತ ಭಟನಿಗೆ ಮೂವರು ಸತಿಯರು[ಹೆಂಡತಿಯರು]. ಸತಿಯರ ಕುಚಯೌವ್ವನದ ಮಧ್ಯದಲ್ಲಿ ಒಂದು ವಿಘ್ನ. ಹಾವುಕಚ್ಚಿ ಉಳಿದ ಭಟರೆಲ್ಲರೂ ಅಂದರೆ ಇಂತಹ ಅನೀತಿವಂತರು ನಾಶಹೊಂದಿದರು. ಇದನ್ನು ನಿರ್ಭೀತಿವಂತರು ತಿಳಿದುಕೊಳ್ಳಿ ಬಂಕೇಶ್ವರ ಲಿಂಗವನರಿತು.

ಈ ಮೇಲೆ ವಿವರಿಸಿದ ವಿಷಯದಿಂದ ತಿಳಿದು ಬರುವದೇನೆಂದರೆ, ಮರಟದ ಬಂಕಯ್ಯ, ಸುಂಕದ ಬಂಕಯ್ಯ ಎಂಬ ಎರಡು ಹೆಸರುಗಳು ಶಿವಶರಣ ಬಂಕಯ್ಯನಿಗೆ ಇದ್ದವು. ಏಕೆಂದರೆ ಬಂಕಯ್ಯ ಶಿವಶರಣನು ಜನಿಸಿ ಪವಾಡ ಮಾಡಿದ್ದು ಮರಟ[ಇಂದಿನ ಮಲ್ಲಟ]ಗ್ರಾಮದಲ್ಲಿ, ಅದಕ್ಕೆ ಇವನಿಗೆ ಮರಟದ ಬಂಕಯ್ಯನೆಂಬ ಹೆಸರು ಬಂದಿದೆ. ಈತನು ಬಸವೇಶ್ವರನ ಕೀರ್ತಿ ಕೇಳಿ ಕಲ್ಯಾಣಕ್ಕೆ ಹೋಗಿ ಅಲ್ಲಿ ಕಳಚೂರಿ ಅರಸ ಎರಡನೇ ಬಿಜ್ಜಳನ ಆಸ್ಥಾನದಲ್ಲಿ ಸುಂಕದ ವಿಭಾಗದಲ್ಲಿ ಕರಣಿಕ ಸ್ಥಾನವನ್ನು ಆಲಂಕರಿಸಿದ ಕಾರಣ, ಈತನಿಗೆ ನಂತರದ ದಿನಗಳಲ್ಲಿ ಸುಂಕದ ಬಂಕಯ್ಯ ಎಂಬ ಹೆಸರು ಹೆಚ್ಚು ಪ್ರಚಾರದಲ್ಲಿ ಬಂದಿತ್ತೆಂದು ಹೇಳಬಹುದು. ಆದುದರಿಂದ ಶಿವಶರಣ ಬಂಕಯ್ಯನು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಮಲ್ಲಟ ಗ್ರಾಮದವನೇ ಹೊರತು, ಬೇರೆ ಪ್ರದೇಶಕ್ಕೆ ಸೇರಿದವನಾಗಿರಲಿಲ್ಲವೆಂದು ಸ್ಪಷ್ಟಪಡಿಸಬಹುದು.

**ಅನುಬಂಧ**[೬]

ರಾಯಚೂರು ಜಿಲ್ಲೆಯ ನುಗಡೋಣಿಗ್ರಾಮದ ಮಣ್ಣಪ್ಪನ ಹೊಲದಲ್ಲಿರುವ ಕಲ್ಲಿನ ಮೇಲಿರುವ ಶಾಸನ

ತ್ರುಟಿತ. ಶಾಸನೋಕ್ತ ಕಾಲವು ಶಕವರ್ಷ ೯೫೭, ಯುವ, ಪುಷ್ಯ, ಬ. ಬುಧವಾರ, ಉತ್ತರಾಯಣ ಸಂಕ್ರಾಂತಿಯೆಂದಿದ್ದು, ಇದು ಕ್ರಿ.ಶ. ೨೨–೧–೧೦೩೬ಕ್ಕೆ ಸಮನಾಗುತ್ತದೆ. ಆದರೆ, ಅಂದು ದಾನವನ್ನು ಕೊಟ್ಟಿರದೆ ಮಾಘ, ಬಹುಳ, ಬ್ರಹಸ್ಪತಿವಾರದ ದಿನ ದಾನವನ್ನು ಮಾಡಲಾಗಿದೆ.

ಸೋಮಲದೇವಿಯು ಪೊಟ್ಟಲಕೆರೆಯ ನೆಲೆವೀಡಿನಲ್ಲಿದ್ದಾಗ, ಜಯ ಚಂಡರತಿ ಮಾರಬೆಯ ಕೋರಿಕೆಯ ಮೇರೆಗೆ ಎಡೆದೊರೆ–೨೦೦೦ದಲ್ಲಿಯ ಮೊಸಳಿಕಲ್ಲು–೩೦೦ ರ ಭತ್ತಗ್ರಾಮ ಬಳ್ಳನಿಟ್ಟಗೆಯ ಬಂಕೇಶ್ವರ ದೇವರಿಗೆ ನಿವೇಶನ, ಗಾಣ, ತೋಟ ಮೊದಲಾದುವುಗಳನ್ನು ಗೋಕರ್ಣರಾಸಿ ಜೀಯರಿಗೆ ಬಿಟ್ಟಕೊಟ್ಟಿದ್ದನ್ನು ತಿಳಿಸುತ್ತದೆ.

೧ ಸ್ವಸ್ತಿ ಶ್ರೀಮತ್ಸೋಮಲದೇವಿಯರ್ ಪೊಟ್ಟಳಕೆರೆಯ
೨ ನೆಲೆವೀಡಿನೊಳ್ ಸಕವರ್ಷ ೯೫೭ನೆಯ ಯುವ ಸಂವತ್ಸ
೩ ರದ ಪುಷ್ಯ ಬಹುಳ ಬುದವಾರದಿಂದನುತ್ತರಾಯಣ ಸಂ
೪ ಕ್ರಾನ್ತಿಯ ಪರ್ವ್ವನಿಮಿತ್ತ [ಮಲಿ]ಯ ಜಿ

೫.	ನ್ದದ ಗೋಕರ್ಣ್ಣರಾಸಿ ಜೀಯರ್ಗ್ಗೆ ಹಸ್ತೋದಕಂ ಗೆಯ್ದು ಕ
೬	ರದು ಲೆಕ[ವೊಳ] ಸಮ್ಮನ್ದದಿಂ ಮಾಘ ಬಹುಳ ಬೃಹ
೭	ಸ್ಪತಿವಾರದಂದು ಜಯಚಣ್ಡರತಿ ಮಾರಬೆಯ ಆ
೮	ಣತಿಯ ಎಡೆದೊಱೆ ೨೦೦೦ರ ದೊಳಕಣ ಮೊಸಳಿಕಲ್ಲ
೯	೩೦೦ಱ ಬಳಿಯ ಭತ್ತಗ್ರಾಮ ಬಳ್ಳನಿಟ್ಟಗೆಯ ಕಸಿಗೆ
೧೦	ಗ[ಣ ಬಂ]ಕೇಸ್ವರ ದೇವರ್ಗ್ಗೆ . . . . . .
೧೧	ದಿಂ ಸರ್ವನಮಸ್ಯಂ ಬಿಟ್ಟ ನೆಲ ಮತ್ತರಿಪ್ಪತ್ತು ತೋಂಟ ಮ
೧೨	ತ್ತರೊಂದು ನಿವೇಶನ ದೇವರ್ಗ್ಗೆ ಅ[ಯ್ದು] ಊರೊಳಗೆ ಗಾಣ .
೧೩.	ಲಿ ಎಣ್ಣೆ ನನ್ದಾದೀವಿಗೆ ನಡವನ್ತೆ [ಘಾ]ಣ ೧

**ಅಡಿಟಿಪ್ಪಣಿಗಳು**


೧ ಕೈ. ರೋಣದ ಸಿದ್ದಲಿಂಗಚಾರ್ಯರು ಮತ್ತು ಗದುಗಿನ ಗಿರಿಜಾಶಂಕರ; ಅರವತ್ತು ಮೂರು ಪುರಾತನರ ಚರಿತ್ರೆ, ಪುಟ. ೧೭೭-೧೭೮. ಪ್ರಕಾಶಕರು: ಬಿ.ಜಿ. ಸಂಕೇಶ್ವರ ಮೃತ್ಯುಂಜಯ ನಿಲಯ, ಗದಗ-೧೯೬೨.

೨ ಎ.ಎಂ. ಅಣ್ಣಿಗೇರಿ, ಡಾ. ಆರ್ ಶೇಷಶಾಸ್ತ್ರೀ, ಶಾಸನ ಸಂಗ್ರಹ, ಪುಟ ೬೦-೭೦. ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೯೯೯.

೩ ರಾ.ಬ.ಫ.ಗು. ಹಳಕಟ್ಟಿ, ೭೭೦ ಅಮರ ಗಣಾದೀಶ್ವರ ಚರಿತ್ರೆಗಳು, ಪುಟ. ೧೬೧-೧೬೨: ಉಪ್ಪಲಿ ಬುರುಜ ಹತ್ತಿರ, ಬಿಜಾಪುರ-೧೯೫೪.

೪ ರಾಯಚೂರವಾಣಿ, ದಿನ ಪತ್ರಿಕೆ [ಸಾಪ್ತಾಹಿಕ ಸಂಪದ] ಚನ್ನಬಸಪ್ಪ. ಬಿ, ಮಲ್ಲಟ ಗ್ರಾಮದಲ್ಲಿ ಐದು ಶಿಲಾಶಾಸನಗಳು ಪತ್ತೆ, ದಿನಾಂಕ. ೧೯-೦೬-೨೦೦೫, ಪುಟ-೪

೫ ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ಮಾನ್ವಿ - ೧೦೨.

೬ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ ಸಂ.ಡಾ. ದೇವರಕೊಂಡಾರೆಡ್ಡಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೩.



* ಈ ಲೇಖನವನ್ನು ಬರೆಯಲು ಪ್ರೋತ್ಸಾಹಿಸುವುದರೊಂದಿಗೆ, ಇದರ ಕರಡು ಪ್ರತಿಯನ್ನು ತಿದ್ದಿದ ನನ್ನ ಮಾರ್ಗದರ್ಶಕರಾದ ಡಾ. ಬೆಂ.ಶಾ. ಶ್ಯಾಮಲಾರತ್ನಕುಮಾರಿಯವರ ಉಪಕಾರಕ್ಕೆ ನಾನು ಬಹಳ ಋಣಿಯಾಗಿರುತ್ತೇನೆ.


*****

# ಮೈಸೂರು ಸಂಸ್ಥಾನದ ರಾಜ ಒಡೆಯರ ಸೈನಿಕ ಸಾಧನೆಗಳು

* ಡಾ॥ ಲ.ನ. ಸ್ವಾಮಿ

ಭಾರತೀಯ ಇತಿಹಾಸದಲ್ಲಿ ಉತ್ತಮ ಭವಿಷ್ಯವನ್ನು ಅರಸಿ, ಪ್ರದೇಶದಿಂದ ಪ್ರದೇಶಕ್ಕೆ ವಲಸೆಯಾದ ಆಡಳಿತ ಯಂತ್ರದ ಅಧಿಕಾರಿಗಳ ಬಹುದೊಡ್ಡ ಯಾದಿ ನಮ್ಮ ಮುಂದೆ ಇದೆಯಾದರೂ ಅದನ್ನು ಅಧ್ಯಯನ ಮಾಡುವ ಸಂಪ್ರದಾಯ ನಮ್ಮಲ್ಲಿ ಇನ್ನೂ ಆರಂಭವಾಗಬೇಕಿದೆ. ಇತ್ತೀಚೆಗೆ ವಿಜಯನಗರದ ಸಾಮ್ರಾಟ ಕೃಷ್ಣರಾಯನ ದಕ್ಷಿಣದ ಧಾಳಿಗಳು ಸಣ್ಣ ರಾಜಮನೆತನಗಳ ಉಗಮಕ್ಕೆ ಕಾರಣವಾದ ಬಗ್ಗೆ ಕೆಲವು ಲೇಖನಗಳು ಪ್ರಕಟವಾಗಿವೆ. ಕೃಷ್ಣರಾಯನ ಕಳಿಂಗದ ದಂಡೆಯಾತ್ರೆಯ ನಂತರ ಕೆಲವು ಮಹಾಪಾತ್ರರು ಚಾಮರಾಜನಗರ ಜಿಲ್ಲೆಯಲ್ಲಿ ಬಂದು ಆಡಳಿತಾಧಿಕಾರಿಗಳಾಗಿದ್ದನ್ನು ಕೆಲವು ಶಾಸನಗಳೂ ಖಚಿತಪಡಿಸುತ್ತವೆ. ಚಾಮರಾಜನಗರದ ಪ್ರದೇಶದಲ್ಲಿ ಉತ್ತರ ಭಾರತದ ತ್ರಿವೇದಿ, ದಿವೇದಿ ಬ್ರಾಹ್ಮಣ ಮನೆತನಗಳು ವಲಸೆ ಬಂದು ನೆಲೆಸಿರುವುದೂ ಕಂಡುಬರುತ್ತದೆ. ಮಧ್ಯಕಾಲೀನ ಸಂಸ್ಕೃತಿಯಲ್ಲಿ ಬ್ರಾಹ್ಮಣ ಸಮುದಾಯ, ಕ್ಷತ್ರಿಯ ಮತ್ತು ಬ್ರಾಹ್ಮಣ ವೃತ್ತಿಗಳಲ್ಲಿ ಹೆಚ್ಚಾಗಿ ತೊಡಗಿಕೊಂಡಿದ್ದನ್ನು ನೋಡಿದರೆ ಉತ್ತಮ ಅವಕಾಶಕ್ಕಾಗಿ ಅವರು ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಬರುತ್ತಿದ್ದುದು ಹೊಸದೇನಲ್ಲ. ಕದಂಬ ಕಾಕುಸ್ಥವರ್ಮನ ತಾಳಗುಂದ ಶಾಸನದಲ್ಲಿ ಉಕ್ತವಾಗಿರುವಂತೆ, ಮೈಸೂರು ಜಿಲ್ಲೆಯ ಕೆಲವು ಶಾಸನಗಳಲ್ಲಿ ಸಹ ಬ್ರಾಹ್ಮಣ ಉದ್ಧಾರಕ್ಕೆ ಅವರನ್ನು ಈ ಪ್ರದೇಶಕ್ಕೆ ಕರೆತಂದು ನೆಲೆಗೊಳಿಸಿದಂತೆ ಶಾಸನಗಳಲ್ಲಿ ಉಲ್ಲೇಖಗಳಿವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಮೈಸೂರು ಅರಸರ ಪ್ರಾರಂಭವನ್ನು ವಿಜಯನಗರದ ಸಾಳುವ ನರಸಿಂಹನ ಶ್ರೀರಂಗಪಟ್ಟಣದ ದಂಡೆಯಾತ್ರೆಯಿಂದ ಪ್ರಾರಂಭಿಸಬೇಕಾಗುತ್ತದೆ. ಸಾಳುವ ನರಸನು, ಒರಿಸ್ಸಾದವರೆಗೆ ದಂಡೆಯಾತ್ರೆ ಮಾಡಿ ಆನಂತರ ಉಮ್ಮತ್ತೂರು ನಾಯಕರನ್ನು ಶ್ರೀರಂಗಪಟ್ಟಣದಲ್ಲಿ ಸೋಲಿಸಿದನು. ಸಾಳುವ ನರಸಿಂಹನು ಪ್ರಾಯಶಃ ಉಮ್ಮತ್ತೂರು ನಾಯಕರ ಸೋದರ ಸಂಬಂಧಿಗಳನ್ನು ವಿಜಯನಗರ ಸಾಮ್ರಾಜ್ಯದ ಮಾಹಿತಿದಾರರಾಗಿ ಈ ಪ್ರದೇಶದಲ್ಲಿ ನೇಮಿಸಿರಬೇಕು. ಉಮ್ಮತ್ತೂರು ನಾಯಕರು ತಮ್ಮನ್ನು "ಪೆನುಗೊಂಡೆ ಚಕ್ರೇಶ್ವರ"ರೆಂದು ಕರೆದುಕೊಳ್ಳುತ್ತಾರೆ. ಉಮ್ಮತ್ತೂರು ನಾಯಕರು ಮತ್ತು ಹುರದ ಅರಸರು ದಾಯಾದಿಗಳೆಂದು ಡಾ॥ ಬಿ.ಆರ್. ಗೋಪಾಲ್ ನಿರೂಪಿಸಿರುತ್ತಾರೆ. ಹುರದ ಅರಸರಿಗೂ ಮೈಸೂರು ಅರಸರಿಗೂ ವೈವಾಹಿಕ ಸಂಬಂಧವಿತ್ತು. ಈ ಎಲ್ಲಾ ಹಿನ್ನೆಲೆಯಲ್ಲಿ ಗಮನಿಸಿದಾಗ ಮೈಸೂರು ಅರಸರ ಮೂಲ, ವಿಜಯನಗರ ಸಾಮ್ರಾಜ್ಯದ ದಕ್ಷಿಣದ ದಂಡೆಯಾತ್ರೆಗಳಲ್ಲಿ ಅಡಗಿರುವುದು ವೇದ್ಯವಾಗುತ್ತದೆ.

ಪ್ರಾಯಶಃ ಇಲ್ಲಿನವರೆಗೆ ಕಂಡುಕೊಂಡಂತೆ ಉಮ್ಮತ್ತೂರಿನ ಆಡಳಿತಕ್ಕೆ ಸೇರಿದ ಈ ಪ್ರದೇಶಕ್ಕೆ ಹೊರಗಿನವರನ್ನು ಕೃಷ್ಣರಾಯ ೧೫೧೨ರ ಶ್ರೀರಂಗಪಟ್ಟಣ ದಾಳಿಯಲ್ಲಿ ಇಲ್ಲಿನ ಮಾಹಿತಿದಾರರು ಹಾಗೂ ಆಡಳಿತಗಾರರಾಗಿ ನೇಮಿಸಿರುವ ಸಾಧ್ಯತೆಯನ್ನು ಈಗಾಗಲೇ ಲೇಖನಗಳಲ್ಲಿ ಪ್ರಕಟವಾಗಿರುವುದನ್ನು ಮುಂದುವರಿಸಿ, ವಿಜಯನಗರ ಮತ್ತು ಮೈಸೂರಿನ ಸಂಸ್ಥಾನದ ಸಂಬಂಧವನ್ನು ಇಲ್ಲಿ ಅಭ್ಯಸಿಸಲಾಗಿದೆ.

ರಾಜ ಒಡೆಯರು ೩೩ ಹಳ್ಳಿಗಳಿಂದ ಕೂಡಿದ್ದ ಪಾಳೇಪಟ್ಟನ್ನು ರಾಜ್ಯವಾಗಿ ಪರಿವರ್ತಿಸುವಲ್ಲಿ ಕೆಸರೆಯ ಯುದ್ಧಕ್ಕೆ ಪೂರ್ವದಲ್ಲಿ ಸಾಕಷ್ಟು ಸೈನಿಕ ಕಾರ್ಯಾಚರಣೆಗಳನ್ನು ಕೈಗೊಂಡ ಮಹಾನ್ ದೂರದೃಷ್ಟಿಯುಳ್ಳ ಯೋಜಕರು. ಯೋಜನೆಯನ್ನು ಪರಿಪಕ್ವವಾಗಿ ತಮ್ಮಂತೆಯೇ ಪರಿವರ್ತಿಸಿಕೊಂಡ ಕ್ರಿಯಾಶೀಲರಾಗಿ ಕಂಡುಬರುತ್ತಾರೆ.

ಶ್ರೀರಂಗಪಟ್ಟಣದ ರಾಜಪ್ರತಿನಿಧಿಯ ಸಿಂಹಾಸನವನ್ನು ಏರುವ ಹೊತ್ತಿಗೆ ರಾಜ ಒಡೆಯರಿಗೆ ೫೮ ವರ್ಷ ವಯಸ್ಸಾಗಿದ್ದಿತು. ಮೂರು ದಶಕಗಳಿಗೂ ಹೆಚ್ಚು ಕಾಲ ರಾಜ ಒಡೆಯರ್ ಮೈಸೂರು ಸಂಸ್ಥಾನದ ನಿಷ್ಠಾವಂತ ಸ್ಥಾನಿಕರಾಗಿ ಕಾರ್ಯನಿರ್ವಹಿಸಿರುವರೆಂದು ಭಾವಿಸಬೇಕಾಗುತ್ತದೆ. ಈ ಭಾವನೆಯನ್ನು ಹಯವದನರಾವ್[೧] ಕೂಡ ಉಲ್ಲೇಖಿಸಿದ್ದಾರೆ.

---

* ನಂ. ಎಲ್.ಐ.ಜಿ. ೧೨೧, ಕೆ.ಹೆಚ್.ಬಿ. ಕಾಲೋನಿ, ೪ನೆ ಹಂತ, ಕುವೆಂಪುನಗರ, ಮೈಸೂರು – ೫೭೦ ೦೨೩.

ಶ್ರೀರಂಗಪಟ್ಟಣವು ಮೈಸೂರು ಅರಸರ ರಾಜಧಾನಿಯಾಗಿ ಪರಿವರ್ತಿತವಾದ ನಂತರ ಕೇವಲ ೭ ವರ್ಷಗಳ ಕಾಲ ಆಡಳಿತದ ಚುಕ್ಕಾಣಿಯನ್ನು ಹಿಡಿದಿದ್ದರು. ಅಷ್ಟರಲ್ಲಿಯೆ ಮಹತ್ವದ ಸಾಧನೆ ಮಾಡಿದವರು ರಾಜ ಒಡೆಯರು.

ರಾಜ ಒಡೆಯರ ಆಡಳಿತ ಕಾಲದ ಸೈನಿಕ ಸಾಧನೆಗಳನ್ನು ಮೂರು ಹಂತಗಳಲ್ಲಿ ಅಧ್ಯಯನ ಮಾಡಬಹುದು. ಶ್ರೀರಂಗಪಟ್ಟಣದ ಸ್ವಾಧೀನದವರೆಗಿನ ರಾಜ ಒಡೆಯರ ಆಳ್ವಿಕೆಯನ್ನು ಎರಡು ಹಂತಗಳಲ್ಲಿ ವಿಭಾಗಿಸಿಕೊಳ್ಳಬಹುದು.[೨] ಮೊದಲನೆ ಹಂತ ೧೫೭೮ರಿಂದ ೧೫೮೫ರ ವರೆಗಿನ ಅವಧಿ. ದ್ವಿತೀಯ ಹಂತವನ್ನು ೧೫೮೫ರಿಂದ ೧೬೧೦ರ ವರೆಗಿನ ಅವಧಿಯೆಂದೂ ಗುರುತಿಸಬಹುದು. ಸತ್ಯನಾರಾಯಣರವರು[೩] ರಾಜ ಒಡೆಯರ ಸಾಧನೆ ಬಗೆಗೆ ಬರೆಯುತ್ತಾ ಶ್ರೀರಂಗಪಟ್ಟಣದ ಸ್ವಾಧೀನದ ನಂತರ ರಾಜ ಒಡೆಯರ್ ಅಂತ್ಯದವರೆಗಿನ ಕಾಲವನ್ನು (ಕ್ರಿ.ಶ. ೧೬೧೦-೧೬೧೭) ರಾಜ ಒಡೆಯರ ತೃತೀಯ ಆಡಳಿತದ ಹಂತವೆಂದು ಗುರುತಿಸಿದ್ದಾರೆ.

**ಮೊದಲ ಹಂತ**

ರಾಜ ಒಡೆಯರ್ ಅಧಿಕಾರಕ್ಕೆ ಬಂದ ತಕ್ಷಣ ರಾಜಮನೆತನದ ಆಳ್ವಿಕೆಯಲ್ಲಿದ್ದ ಹಲವಾರು ಕುಂದುಕೊರತೆಗಳನ್ನು ನಿವಾರಿಸಿಕೊಳ್ಳಬೇಕಾದ ಅನಿವಾರ್ಯತೆಯಿದ್ದಿತು. ಅದೇನೆಂದರೆ ಮೂರನೆ ಹಿರಿಯ ಬೆಟ್ಟದ ಚಾಮರಾಜ ಒಡೆಯರು ಮೈಸೂರು, ಕೆಂಬಾಳು ಮತ್ತು ಮಲ್ಲೂರುಗಳೆಂದು ತಮ್ಮ ಪಾಳೆಪಟ್ಟನ್ನು ವಿಭಾಗಿಸಿದ್ದರು.[೪] ಈ ಆಡಳಿತ ವಿಭಾಗಗಳು ರಾಜ ಒಡೆಯರ್ ಪಟ್ಟಾಭಿಷೇಕದವರೆಗೆ ಹಾಗೆಯೇ ಮುಂದುವರಿದಿದ್ದಿತು. ಇವನ್ನು ಒಂದುಗೂಡಿಸಬೇಕಾದ ಪ್ರಮೇಯ ಇದ್ದಿತು. ೧೫೯೧ರ ವರೆಗೆ ಹಾಗೆಯೇ ಮುಂದುವರಿದಿದ್ದಿತು.[೫] ರಾಜ ಒಡೆಯರು ಅಧಿಕಾರಕ್ಕೆ ಬಂದ ವರ್ಷದಿಂದ ೧೫೮೫ರ ಅವಧಿಯಲ್ಲಿ ಯಾವುದೇ ಸೈನಿಕ ಕಾರ್ಯಾಚರಣೆಗಳನ್ನು ಕೈಗೊಳ್ಳದೆ ಎರಡನೆ ಶ್ರೀರಂಗ ಮತ್ತು ಶ್ರೀರಂಗಪಟ್ಟಣದ ರಾಜಪ್ರತಿನಿಧಿಯಾಗಿದ್ದ ರಾಮರಾಜಯ್ಯನ ಅತ್ಯಂತ ನಿಷ್ಠಾವಂತ ಸಾಮಂತರಾಗಿ ಮುಂದುವರಿದರು.[೬] ಶ್ರೀರಂಗಪಟ್ಟಣದ ರಾಜಪ್ರತಿನಿಧಿಯ ದಳವಾಯಿಯಾಗಿದ್ದ ರೇಮಟಿ ವೆಂಕಟಯ್ಯನೊಂದಿಗೆ ಸಹ ಅನ್ಯೋನ್ಯ ಸಂಬಂಧವನ್ನೂ ಹೊಂದಿದ್ದರು. ಈ ಕಾಲದಲ್ಲಿ ಎರಡನೇ ತಿರುಮಲನು ಇನ್ನೂ ಅಪ್ರಾಪ್ತನಾಗಿದ್ದ ಕಾರಣ ರೇಮಟಿ ವೆಂಕಟಯ್ಯನೇ ಆತನ ಪ್ರತಿನಿಧಿಯಂತೆ ಶ್ರೀರಂಗಪಟ್ಟಣವನ್ನು ಆಳುತ್ತಿದ್ದನು.[೭]

ಎರಡನೇ ತಿರುಮಲನು, ರಾಮರಾಜಯ್ಯನ ಹಿರಿಯ ಪುತ್ರನು. ೧೫೮೮ರಲ್ಲಿ ಶ್ರೀರಂಗಪಟ್ಟಣದ ರಾಜಪ್ರತಿನಿಧಿಯ ಸ್ಥಾನ ತೆರವಾಗಿದ್ದರಿಂದ ಮತ್ತು ರಾಮರಾಜಯ್ಯನ ಪುತ್ರರು ಪೆನುಗೊಂಡೆಯಲ್ಲಿ ರಕ್ಷಣೆಯನ್ನೂ ಪಡೆದಿದ್ದರಿಂದ ರಾಜ ಒಡೆಯರ್ ತಮ್ಮ ಚಟುವಟಿಕೆಗಳನ್ನು ಅಂದರೆ ಇತರೆ ಪಾಳೇಪಟ್ಟುಗಳ ವಿರುದ್ಧ ಸೈನಿಕ ಕಾರ್ಯಾಚರಣೆ ಕೈಗೊಳ್ಳುವ ಮತ್ತು ಬಲವೃದ್ಧಿಸಿಕೊಳ್ಳುವ ಕಾರ್ಯಕ್ಕೆ ಕೈ ಹಾಕಿದರು. ೧೫೮೮ರ ಮಾರ್ಚ್ ತಿಂಗಳಲ್ಲಿ ಅಕ್ಕಿಹೆಬ್ಬಾಳನ್ನು ಹೊಳೆನರಸೀಪುರದ ಪಾಳೆಪಟ್ಟಿನ ನಾಯಕನಾದ ನರಸಿಂಹ ನಾಯಕನಿಂದ ವಶಪಡಿಸಿಕೊಂಡನು.[೮]

**ಎರಡನೆ ಹಂತ**

ರಾಜ ಒಡೆಯರ ದ್ವಿತೀಯ ಆಡಳಿತಾವಧಿ ಕ್ರಿ.ಶ. ೧೫೮೫ರಿಂದ ೧೬೧೦ರ ವರೆಗಿನ ಕಾಲಘಟ್ಟ. ಈ ಕಾಲಘಟ್ಟದಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಒಂದನೇ ವೆಂಕಟನು ಆಳುತ್ತಿದ್ದನು. ಇದೇ ಕಾಲಘಟ್ಟದಲ್ಲಿ ತಿರುಮಲನು ಶ್ರೀರಂಗಪಟ್ಟಣದ ರಾಜಪ್ರತಿನಿಧಿಯಾಗಿದ್ದನು. ಶ್ರೀರಂಗಪಟ್ಟಣದ ಸುತ್ತಮುತ್ತಲಿನಲ್ಲಿ ದೊರಕಿರುವ ಶಾಸನ ಆಕರಗಳು ಆ ಹೊತ್ತಿಗಾಗಲೇ ತಿರುಮಲನು ರಾಜಪ್ರತಿನಿಧಿಯಾಗಿದ್ದನ್ನು ದಾಖಲಿಸಿವೆ.[೯] ಈ ಕಾಲಘಟ್ಟದಲ್ಲಿ ರೇಮಟಿ ವೆಂಕಟಯ್ಯನ ಉತ್ತರಾಧಿಕಾರಿ ದಳವಾಯಿ ರಾಮಾನುಜಯ್ಯನು ತಿರುಮಲನೊಂದಿಗೆ ಸಹಕರಿಸುತ್ತಿದ್ದನು. ತಿರುಮಲನ ರಾಜಪ್ರತಿನಿಧಿತ್ವದ ಮೊದಲನೆಯ ವರ್ಷದಲ್ಲಿ ಅಂದರೆ ೧೫೮೫ರಲ್ಲಿ ರಾಜ ಒಡೆಯರು ಶ್ರೀರಂಗಪಟ್ಟಣಕ್ಕೆ ಮೊದಲ ಭೇಟಿಯನ್ನೂ ಇತ್ತಿದ್ದರು. ಈ ಭೇಟಿಯ ಕಾಲದಲ್ಲಿ ತಿರುಮಲನು ಮೈಸೂರು ಸಂಸ್ಥಾನದಿಂದ ಬಾಕಿಯಿದ್ದ ಕಂದಾಯದ ಹಣವನ್ನು ಸಲ್ಲಿಸುವಂತೆ ಸೂಚಿಸಿದನು. ಇದಕ್ಕೆ ಪ್ರತಿಯಾಗಿ ರಾಜ ಒಡೆಯರು ಕಾಡುಮೃಗಗಳ ಹಾವಳಿಯಿಂದಾಗಿ ಬೆಳೆ ಹಾಳಾಗಿರುವ ಕಾರಣ ಕಂದಾಯ ಸಲ್ಲಿಸಲಾಗುವುದಿಲ್ಲವೆಂದು ಉತ್ತರಿಸಿದ್ದು ದಾಖಲಿಸಲಾಗಿದೆ.[೧೦]

ಇದೇ ಸಂದರ್ಭದಲ್ಲಿ ರಾಜ ಒಡೆಯರು ಮೈಸೂರು ನಗರದ ಸುತ್ತ ಆಳೆತ್ತರದ ಕೋಟೆಯನ್ನು ಕಟ್ಟಲು ತಿರುಮಲನಿಂದ ಅನುಮತಿಯನ್ನೂ ಸಹಾ ಪಡೆದುಕೊಂಡರು. ಅಲ್ಲದೆ ಸೈನ್ಯವನ್ನು ಬಲಪಡಿಸಿಕೊಂಡು ಕಾಲಕಾಲಕ್ಕೆ ಸರಿಯಾಗಿ ಪೊಗದಿಯನ್ನು ಸಲ್ಲಿಸುವುದಾಗಿ ವಚನವಿತ್ತರು. ಆನಂತರ ಮೈಸೂರಿನಲ್ಲಿ ಕೋಟೆಯನ್ನು ಕಟ್ಟುವುದಕ್ಕೆ ತಿರುಮಲನ ಅಪ್ಪಣೆ ದೊರೆತ ನಂತರ ಅಲ್ಲಿಂದ ವಿಜಯನಗರದ ತೆರಿಗೆ ವಸೂಲಿದಾರರನ್ನು ಹೊರಹಾಕಿದರು.[೧೧]

ರಾಜ ಒಡೆಯರು ಶ್ರೀರಂಗಪಟ್ಟಣದ ಪ್ರಾಂತ್ಯಕ್ಕೆ ಹೊಸದಾಗಿ ಬಂದ ರಾಜ ಪ್ರತಿನಿಧಿಯ ಶಕ್ತಿ ಸಾಮರ್ಥ್ಯಗಳ ಅರಿವಿದ್ದಿದ್ದರಿಂದಲೇ ಅವರು ಈ ಮೇಲಿನ ನಿರ್ಧಾರವನ್ನೂ ಕೈಗೊಂಡಂತೆ ಕಂಡುಬರುತ್ತದೆ. ಈ ಮೇಲಿನ ಹೇಳಿಕೆಗೆ ಪೂರಕವಾಗಿ ರಾಜ ಒಡೆಯರು ೧೫೮೬ರ ಫೆಬ್ರವರಿಯಲ್ಲಿ ರಂಗಸಮುದ್ರ ಮತ್ತು ಅದರ ೧೨ ಗ್ರಾಮಗಳನ್ನು ತಿರುಮಲನಿಂದ ವಶಪಡಿಸಿಕೊಳ್ಳುತ್ತಾರೆ.೧೨ ೧೫೯೦ರ ಹೊತ್ತಿಗೆ ಮೈಸೂರಿನಿಂದ ಆಡಳಿತಗಾರರಾಗಿ ರಾಜ ಒಡೆಯರ್ ಸ್ಥಾನಮಾನ ಸಂಪೂರ್ಣ ಸುಭದ್ರವಾಗಿದ್ದಿತು. ಅಷ್ಟೇ ಅಲ್ಲದೆ ಶ್ರೀರಂಗಪಟ್ಟಣದ ರಾಜಪ್ರತಿನಿಧಿಯೊಂದಿಗೆ ರಾಜತಾಂತ್ರಿಕ ಸಂಬಂಧವನ್ನು ಮತ್ತೂ ಮುಂದುವರಿಸಿಕೊಂಡು ಹೋದರು.

ಕ್ರಿ.ಶ. ೧೫೯೦ರಲ್ಲಿ ರಾಜ ಒಡೆಯರ್ ಎರಡನೆಯ ಬಾರಿ ತಿರುಮಲನ ಆಸ್ಥಾನಕ್ಕೆ ಭೇಟಿ ನೀಡಿದ್ದರು.[೧೩] ಈ ಕಾಲಘಟ್ಟದಲ್ಲಿ ಒಂದು ಸ್ವಾರಸ್ಯಕರ ಘಟನೆ ನಡೆದಂತೆ ಕೆಲವೊಂದು ಐತಿಹಾಸಿಕ ಕೃತಿಗಳಲ್ಲಿ ದಾಖಲಾಗಿದೆ. ಈ ಘಟನೆಯು ರಾಜಪ್ರತಿನಿಧಿ ತಿರುಮಲ ಮತ್ತು ರಾಜ ಒಡೆಯರ ನಡುವೆ ಇದ್ದ ಸಂಬಂಧ ಮತ್ತು ರಾಜಕೀಯ ಸ್ಥಿತಿಯ ಬಗ್ಗೆ ಬೆಳಕು ಚೆಲ್ಲುತ್ತದೆ. ರಾಜ ಒಡೆಯರು ಶ್ರೀರಂಗಪಟ್ಟಣ ತಲುಪುವ ಹಾದಿಯಲ್ಲಿ ಕೆಂಬಾಳಿನಲ್ಲಿ ಆಡಳಿತ ನಡೆಸುತ್ತಿದ್ದ ದೇವರಾಜ ಒಡೆಯರು ಅವರೊಂದಿಗೆ ಸೇರಿಕೊಂಡರು. ಈ ಸಂದರ್ಭದಲ್ಲಿ ರಾಜ ಒಡೆಯರು ತಮ್ಮ ಪಂಚವಾದ್ಯಗಳ ನಿಲ್ಲಿಸಿ ಅರಮನೆಯನ್ನು ಪ್ರವೇಶಿಸಿದರು. ರಾಜ ಒಡೆಯರ ಈ ವರ್ತನೆಗೆ ತಿರುಮಲನು ಕಾರಣ ಕೇಳಿದಾಗ ಅವರು ತನಗಿಂತ ಶ್ರೇಷ್ಠತೆಯಲ್ಲಿ ಅತಿ ಕಿರಿಯವನಾದ ದೇವರಾಜ ಒಡೆಯರೊಂದಿಗೆ ಪಂಚವಾದ್ಯಗಳೊಡನೆ ಗೌರವಿಸಿಕೊಳ್ಳುವುದು ಅಸಾಧ್ಯವೆಂದು ಈ ರೀತಿ ನಡೆದುಕೊಳ್ಳಬೇಕಾಯಿತೆಂದು ತಿಳಿಸುತ್ತಾರೆ. ಈ ಕಾರಣಕ್ಕಾಗಿ ರಾಜ ಒಡೆಯರು ದೇವರಾಜನ ವಿರುದ್ಧ ಸೈನಿಕ ಕಾರ್ಯಾಚರಣೆ ನಡೆಸಿ ಅದೇ ವರ್ಷ ಕೆಂಬಾಳನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿಕೊಂಡರು.[೧೪]

ಈ ಘಟನೆಯ ಸತ್ಯಾಸತ್ಯತೆ ಏನೇ ಇದ್ದರೂ ಇದು ರಾಜ ಒಡೆಯರ್ ಹೊಂದಿದ್ದ ಆತ್ಮಗೌರವ ಮತ್ತು ರಾಜಕೀಯ ಮುತ್ಸದ್ಧಿಯಾಗಿ ಬೆಳೆದಿದ್ದ ಹಂತವನ್ನು ತೋರುತ್ತದೆ. ಅಲ್ಲದೆ ತಮ್ಮ ರಾಜಕೀಯ ಸ್ಥಾನಮಾನವನ್ನು ಕಾಪಾಡಿಕೊಳ್ಳಲು ಉತ್ಸುಕರಾಗಿದ್ದುದನ್ನು ವ್ಯಕ್ತಪಡಿಸುತ್ತದೆ. ಕ್ರಿ.ಶ. ೧೫೯೧ರಲ್ಲಿ ತನ್ನ ದಾಯಾದಿಯಿಂದ ಮುಳ್ಳೂರನ್ನು ವಶಪಡಿಸಿಕೊಂಡನು.[೧೫] ಈ ಎರಡೂ ಘನೆಗಳಿಂದಾಗಿ ಹಿರಿಯ ಬೆಟ್ಟದ ಚಾಮರಾಜ ಒಡೆಯರ್ ಕಾಲದಲ್ಲಿ ವಿಭಜನೆಯಾಗಿದ್ದ ಮೈಸೂರು ಸಂಸ್ಥಾನ ಮತ್ತೆ ಒಂದಾಗಿಯಿತು.

ಸೈನಿಕ ಕಾರ್ಯಾಚರಣೆ ಮುಂದುವರಿಸಿದ ರಾಜ ಒಡೆಯರ್ ಒಂದೇ ಗತಿಯಲ್ಲಿ ಆಕ್ರಮಣ ಮತ್ತು ಪ್ರತ್ಯಾಕ್ರಮಣ ಮಾಡದೆ ಕೆಲ ಕಾಲ ತಾಟಸ್ಥ್ಯ ನೀತಿಯನ್ನೂ ಸಹ ಅನುಸರಿಸಿದರು. ೧೫೯೦ರಿಂದ ೧೫೯೨ರ ವರೆಗೆ ರಾಜ ಒಡೆಯರ್ ಆಡಳಿತಾವಧಿ ಒಂದು ರೀತಿಯಲ್ಲಿ ತಾಟಸ್ಥ್ಯ ನೀತಿಗೆ ವಿರುದ್ಧವಾದ ಅತಿವೇಗದ ಆಕ್ರಮಣಗಳ ಕಾಲ.[೧೬] ಈ ಕಾಲಘಟ್ಟದಲ್ಲಿ ತಿರುಮಲನು ರಾಜಧಾನಿಯಿಂದ ದೂರವಿದ್ದನು. ಈ ಕಾಲವನ್ನು ಬಳಸಿಕೊಂಡ ರಾಜ ಒಡೆಯರ್ ತಮ್ಮ ರಾಜಕೀಯ ಮಹತ್ವಾಕಾಂಕ್ಷೆಯನ್ನು ಸೈನಿಕ ವಿಜಯಗಳ ಆಧಾರದ ಮೇಲೆ ಸಾಧಿಸಲಾರಂಭಿಸಿದರು. ಕ್ರಿ.ಶ. ೧೫೯೨ರಲ್ಲಿ ರಂಗಸಮುದ್ರದಲ್ಲಿ ಬಲವಾದ ಕೋಟೆಯನ್ನು ನಿರ್ಮಿಸಿದರು.[೧೭]

ಕ್ರಿ.ಶ. ೧೫೯೩ರಲ್ಲಿ ಹಾರೋಹಳ್ಳಿಯನ್ನು ಗೆದ್ದುಕೊಂಡರು[೧೮] ಮತ್ತು ೧೫೯೪ರ ಜುಲೈ ತಿಂಗಳಲ್ಲಿ ನರುನೇಹಳ್ಳಿಯನ್ನು ಮಲ್ಲರಾಜನಿಂದ ಗೆದ್ದುಕೊಂಡರು.[೧೯] ೧೫೯೪ರ ಅಕ್ಟೋಬರ್‌ನಲ್ಲಿ ರಾಜ ಒಡೆಯರವರ ತಮ್ಮ ಬೆಟ್ಟದ ಚಾಮರಾಜ ಒಡೆಯರ ನೇತೃತ್ವದಲ್ಲಿ ೩೦೦ ಜನ ಆಯ್ದು ಸೈನಿಕರ ಸಹಾಯದಿಂದ ತಮ್ಮ ಸಂಬಂಧಿ ವೀರರಾಜಯ್ಯನನ್ನೂ ಸೋಲಿಸಿದರು.[೨೦] ಈತನು ಚಾಮುಂಡಿಬೆಟ್ಟದ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದನಲ್ಲದೆ ರಾಜ ಒಡೆಯರನ್ನು ಕೊಲ್ಲಲು ಸಂಚು ರೂಪಿಸಿದ್ದನು. ಒಂದು ಆಧಾರದಂತೆ ಈ ಯುದ್ಧ ಕಾಡುಬಸವನ ತಿಟ್ಟಿನಲ್ಲಿ ನಡೆಯಿತೆಂದು ದಾಖಲಿಸಲಾಗಿದೆ.

ರಾಜ ಒಡೆಯರ್ ಕುದುರೆಯ ಮೇಲೆ ಕುಳಿತು ವೀರರಾಜಯ್ಯನೊಂದಿಗೆ ದ್ವಂದ್ವ ಯುದ್ಧದಲ್ಲಿ ಭಾಗಿಗಳಾಗಿದ್ದರು. ಈ ಯುದ್ಧದಲ್ಲಿ ರಾಜ ಒಡೆಯರ್ ಬೀಸು ಸುತ್ತಿಗೆಯಿಂದ ಅವನ ಮೂಗನ್ನು ಜಜ್ಜಿ ಸೋಲಿಸಿ ಅನಂತರ ಕೋಟೆಯನ್ನು ನೆಲಸಮಮಾಡಿ ನಗರವನ್ನು ಹಾಳುಗೆಡವಿ, ಉತ್ತು, ಹರಳು ಬಿತ್ತಿದಂತೆ ದಾಖಲಿಸಲಾಗಿದೆ.

ಈ ಎಲ್ಲ ಸೈನಿಕ ಕಾರ್ಯಾಚರಣೆಗಳು ರಾಜ ಒಡೆಯರನ್ನೂ ಮತ್ತೊಮ್ಮೆ ತಿರುಮಲನ ವಿರೋಧಿಯನ್ನಾಗಿ ರೂಪಿಸಿ ನೇರವಾದ ಸಂಘರ್ಷಕ್ಕೆ ಎಡೆಮಾಡಿಕೊಟ್ಟವು. ರಾಜ ಒಡೆಯರು ಮೈಸೂರು ಸಂಸ್ಥಾನವನ್ನು ಪ್ರಥಮ ಮತ್ತು ದ್ವಿತೀಯ ಹಂತದಲ್ಲಿ ಒಂದು ಮಹತ್ವದ ಸಂಸ್ಥಾನವನ್ನಾಗಿ ಬೆಳೆಸಿದುಲ್ಲದೆ ಶ್ರೀರಂಗಪಟ್ಟಣದ ರಾಜಪ್ರತಿನಿಧಿ ತಿರುಮಲನೊಂದಿಗೆ ರಾಜ ಒಡೆಯರ್ ಸಂಬಂಧ ನಕಾರಾತ್ಮಕ ಬೆಳವಣಿಗೆಯನ್ನು ಪಡೆಯಲು ಪ್ರೇರೇಪಿಸಿದವು.

ಕ್ರಿ.ಶ. ೧೫೯೨ರಿಂದ ೧೫೯೫ರ ವರೆಗೆ ವಿಜಯನಗರದ ರಾಜಪ್ರತಿನಿಧಿ ತಿರುಮಲನು ವಿಜಯನಗರ ಸಾಮ್ರಾಜ್ಯದ ವಿರುದ್ಧ ಬಂಡೆದ್ದ ಮಧುರೆಯ ನಾಯಕನನ್ನು ಶಿಕ್ಷಿಸಲು ವಿಜಯನಗರ ಸಾಮ್ರಾಟನ ನಿರ್ದೇಶನದಂತೆ ತನ್ನ ಸೇನೆಯೊಂದಿಗೆ ಮಧುರೆಯತ್ತ ಪ್ರಯಾಣ ಮಾಡಿ ಸೈನಿಕ ಕಾರ್ಯಾಚರಣೆಯಲ್ಲಿ ಪಾಲ್ಗೊಂಡು ಹಿಂತಿರುಗಿದನೆಂದು ತಿಳಿದುಬರುತ್ತದೆ. ಕೆಲವೊಂದು ಆಕರಗಳಲ್ಲಿ ತಿರುಮಲನು ಸಾಮ್ರಾಟನಿಗೆ ಸಂಪೂರ್ಣ ನಿಷ್ಠನಾಗಿರುವುದಕ್ಕೆ ಬದಲಾಗಿ ಸಾಮ್ರಾಜ್ಯದ ಶತ್ರುವಾದ ಮಧುರೆಯ ನಾಯಕನೊಂದಿಗೆ ಕೈ ಜೋಡಿಸಿ ಸಾಮ್ರಾಟನ ಕೋಪಕ್ಕೆ ಗುರಿಯಾದನೆಂದು ಚಿತ್ರಿಸಲಾಗಿದೆ. ಮತ್ತೆ ಕೆಲವು ಆಕರಗಳು ಇದು ಆಧಾರ ರಹಿತವೆಂದೂ ಮಧುರೆಯ ನಾಯಕನ ವಿರುದ್ಧದ ಕಾರ್ಯಾಚರಣೆಗಳಲ್ಲಿ ತಿರುಮಲನು ಹೆಚ್ಚಿನದನ್ನು ಸಾಧಿಸಲಾಗಲಿಲ್ಲವೆಂದು ಅದು ಆತನ ಅದಕ್ಷತೆಯನ್ನು ಹೊರಹಾಕಿತೆಂದು ವ್ಯಾಖ್ಯಾನಿಸಿವೆ. ತಿರುಮಲನ ಮಧುರೆಯ ಪಯಣ ಒಂದು ರೀತಿಯಲ್ಲಿ ರಾಜ ಒಡೆಯರು ತಮ್ಮ ಮಹತ್ವಾಕಾಂಕ್ಷೆಯನ್ನು ಬೆಳೆಸಿಕೊಳ್ಳಲು ಮತ್ತು ಅದನ್ನು ಸಾಧಿಸಲು ಬೇಕಾದ ಎಲ್ಲ ಪೂರ್ವ ತಯಾರಿಯನ್ನು ಮಾಡಿಕೊಳ್ಳಲು ಸಾಕಷ್ಟು ಅವಕಾಶಗಳನ್ನು ಮತ್ತು ಕಾಲಾವಕಾಶವನ್ನು ಒದಗಿಸಿತು ಮತ್ತು ತಿರುಮಲನ ಅಶಕ್ತತೆಯನ್ನು ಬಯಲು ಮಾಡುವಲ್ಲಿ ಫಲಕಾರಿಯಾಯಿತು. ತಿರುಮಲನು ಮಧುರೆಯಿಂದ ಹಿಂತಿರುಗಿದ ಮೇಲೆ ಆತನ ಪ್ರಾಂತ್ಯದ ಹಲವಾರು ಪಾಳೇಗಾರರುಗಳು ಶ್ರೀರಂಗಪಟ್ಟಣದ ಆಸ್ಥಾನಕ್ಕೆ ತೆರಳಿ ರಾಜ ಒಡೆಯರ ಸೈನಿಕ ಕಾರ್ಯಾಚರಣೆಗಳು ಮತ್ತು ಆತನು ದಿನೇ ದಿನೇ ತಿರುಮಲನ ವಿರೋಧಿಯಾಗುತ್ತಿರುವುದರ ಬಗ್ಗೆ ದೂರಿದರು. ಈ ಮಧ್ಯೆ ರಾಜ ಒಡೆಯರ ನಿಯೋಗಿಗಳೂ ತಿರುಮಲನ ಆಸ್ಥಾನಕ್ಕೆ ಭೇಟಿ ನೀಡಿ ರಾಜ ಒಡೆಯರು ತಿರುಮಲನೊಂದಿಗೆ ಸ್ನೇಹಭಾವದಿಂದ ವರ್ತಿಸಲು ಸನ್ನದ್ಧವಾಗಿರುವ ವಿಷಯವನ್ನು ಅರುಹಿದರು.

ಈ ವಿಷಯವನ್ನು ಚಿಕ್ಕದೇವರಾಜ ವಂಶಾವಳಿ ಮತ್ತು ಕಂಠೀರವ ನರಸರಾಜ ವಿಜಯ ಕೃತಿಗಳು ಎರಡೂ ಅನುಮೋದಿಸುತ್ತವೆ. ಚಿಕ್ಕದೇವರಾಜ ವಂಶಾವಳಿಯು[೨೧] ತಿರುಮಲನು, ರಾಜ ಒಡೆಯರ ನಿಯೋಗಿಗಳನ್ನು ಗೌರವದಿಂದ ಕಂಡು ಅವರಿಗೆ ಕಾಣಿಕೆಗಳನ್ನು ಇತ್ತು ರಾಜ ಒಡೆಯರು ಮುಂದಿನ ಮಾತುಕತೆಗಾಗಿ ಆಸ್ಥಾನವನ್ನು ಸಂದರ್ಶಿಸಬಹುದೆಂಬ ಒಪ್ಪಿಗೆಯನ್ನು ನೀಡುದ್ದನ್ನು ತಿಳಿಸುತ್ತದೆ. ಇದೇ ಸಮಯದಲ್ಲಿ ತಿರುಮಲನ ರಾಜಕೀಯ ಮುತ್ಸದ್ದಿ ಪರಾಕ್ರಮಿಯೂ ಆದ ರಾಜ ಒಡೆಯರಂತಹವರನ್ನು ತನ್ನ ಆಡಳಿತದಲ್ಲಿ ಸಾಮಂತನಾಗಿ ಇಟ್ಟುಕೊಳ್ಳಲು ಉದ್ವೇಗಸಹಿತವಾದ ಭಯ ಇದ್ದಿತೆಂಬ ಅಭಿಪ್ರಾಯ ಸಹ ದಾಖಲಾಗಿದೆ.[೨೨] ಅಂದರೆ ತಿರುಮಲನು ಮೈಸೂರಿನಲ್ಲಿ ರಾಜ ಒಡೆಯರು ಸಾಮಂತನಾಗಿರುವುದು ಒಂದು ರೀತಿಯಲ್ಲಿ ತನ್ನ ಸ್ಥಾನಮಾನಗಳಿಗೆ ಕುತ್ತಾಗುವುದೆಂದು ಭಾವಿಸಿದಂತೆ ಸಹ ತಿಳಿದು ಬರುತ್ತದೆ. ಪಾಳೆಪಟ್ಟನ್ನು ಸೈನಿಕ ಕಾರ್ಯಾಚರಣೆ ಮೂಲಕ ವಶಪಡಿಸಿಕೊಳ್ಳುವ ಲೆಕ್ಕಾಚಾರದಲ್ಲಿ ತೊಡಗಿದನು. ಈ ಹಂತದಲ್ಲಿ ತಿರುಮಲನು ತನ್ನ ಪ್ರಾಂತ್ಯದ ಎಲ್ಲ ಅರಸುಗಳಿಗೆ ತಮ್ಮ ಸೇನೆಯನ್ನು ಮಹಾನವಮಿಯ ಆಚರಣೆಯ ಸಂದರ್ಭದಲ್ಲಿ ತರುವಂತೆ ತಾಳೆ ಓಲೆಯನ್ನು ಕಳುಹಿಸಿದನು.[೨೩] ಈ ಎಲ್ಲ ವಿದ್ಯಮಾನಗಳೂ ರಾಜ ಒಡೆಯರಿಗೆ ಬೇಹುಗಾರರಿಂದ ಅಂದಂದಿನ ಸಮಾಚಾರಗಳ ರೀತಿಯಲ್ಲಿ ಅರುಹಲ್ಪಟ್ಟವು. ರಾಜ ಒಡೆಯರವರು ತಮ್ಮ ಸೋದರ ಸಂಬಂಧಿ ದೇವರಾಜಯ್ಯನ ಸಲಹೆಯಂತೆ ಮೈಸೂರು ಪಾಳೆಪಟ್ಟು ಮತ್ತು ಇತರ ಪಾಳೆಪಟ್ಟುಗಳ ನಡುವಿನ ಸಂಬಂಧವನ್ನು ಗಮನದಲ್ಲಿಟ್ಟುಕೊಂಡು ರಾಜ ಒಡೆಯರು ಮತ್ತೆ ತಿರುಮಲನ ಆಸ್ಥಾನಕ್ಕೆ ನಿಯೋಗಿಗಳನ್ನು ಕಳುಹಿಸಿದರು. ಈ ನಿಯೋಗಿಗಳು ರಾಜ ಒಡೆಯರು ತಿರುಮಲನ ಭೇಟಿಗೆ ಉತ್ಸುಕರಾಗಿರುವ ವಿಚಾರವನ್ನು ಅರುಹಿದರು.[೨೪] ಆದರೂ ತಿರುಮಲನ ಮನಸ್ಸಿನಲ್ಲಿ ರಾಜ ಒಡೆಯರನ್ನು ಕೊಲ್ಲುವ

ಕುಟಿಲ ಯೋಜನೆಯು ಹುಟ್ಟಿತು. ಈ ವಿದ್ಯಮಾನಗಳು ನಡೆದ ಸ್ವಲ್ಪ ಕಾಲದಲ್ಲೇ ರಾಜ ಒಡೆಯರು ತಮ್ಮ ಸೋದರ ಸಂಬಂಧಿ ದೇವರಾಜ ಒಡೆಯನೊಂದಿಗೆ ತಿರುಮಲನ ಆಸ್ಥಾನಕ್ಕೆ ಭೇಟಿ ನೀಡುವ ಸಲುವಾಗಿ ಶ್ರೀರಂಗಪಟ್ಟಣಕ್ಕೆ ತೆರಳಿ ತಮ್ಮ ಆರಾಧ್ಯದೈವನೂ ಆದ ಶ್ರೀ ರಂಗನಾಥನ ದರ್ಶನ ಮಾಡುವ ಯೋಜನೆಯನ್ನು ಹಾಕಿಕೊಂಡರು.

ರಾಜ ಒಡೆಯರು ಶ್ರೀರಂಗಪಟ್ಟಣಕ್ಕೆ ಬರುವ ಸುದ್ದಿಯನ್ನು ಪಡೆದ ತಿರುಮಲನು ಕಾವೇರಿ ನದಿಯ ದಕ್ಷಿಣದ ಭಾಗವನ್ನು ದಾಟಿ ಪಶ್ಚಿಮವಾಹಿನಿಯವರೆಗೆ ಬಂದು ಸೇನಾ ಸಮೇತರಾಗಿ ರಾಜ ಒಡೆಯರನ್ನು ಸಂಧಿಸಲು ಯೋಜಿಸಿ ಕಾರ್ಯಪ್ರವೃತ್ತನಾದನು. ಈ ಪ್ರದೇಶದಲ್ಲಿ ತಿರುಮಲನು ರಾಜ ಒಡೆಯರನ್ನು ಸಂಧಿಸಿದನು. ರಾಜ ಒಡೆಯರ ಬಿಡಾರಕ್ಕೆ ಬಂದ ತಿರುಮಲನು ತಮ್ಮ ನಡುವೆ ಆಗಬೇಕಾದ ಸೌಹಾರ್ದತೆಯ ಬೆಳವಣಿಗೆಯ ಬಗೆಗೆ ಒಮ್ಮತದ ಅಭಿಪ್ರಾಯಕ್ಕೆ ಬಂದು ತನ್ನ ಬಿಡಾರಕ್ಕೆ ಹಿಂತಿರುಗಲು ಸನ್ನದ್ಧನಾದನು. ತಿರುಮಲನು ರಾಜ ಒಡೆಯರ ಬಿಡಾರದಿಂದ ಹಿಂತಿರುಗುವ ಸಂದರ್ಭದಲ್ಲಿ ರಾಜ ಒಡೆಯರ ಪ್ರಹರಿಯು ರಾಜ ಒಡೆಯರಿಗೆ ಪರಾಕು ಹೇಳುತ್ತಾ ಬಿರುದಂತೆಂಬರಗಂಡ ಎಂಬ ಬಿರುದನ್ನು ಹೇಳಿದನು. ಇದರಿಂದ ಕುಪಿತನಾದ ತಿರುಮಲನು ಬಿರುದಂತೆಂಬರಗಂಡ ಬಿರುದು ಅತಿ ಹಿಂದಿನಿಂದಲೂ ನಮ್ಮ ಮನೆತನದ ಬಿರುದಾಗಿರುವುದೆಂದು ಅದನ್ನು ಮೈಸೂರು ದೊರೆಗಳು ಬಳಸಬಾರದೆಂದು ತನ್ನ ಮಂತ್ರಿಗಳ ಮೂಲಕ ತಿಳಿಹೇಳುವ ಪ್ರಯತ್ನವನ್ನು ಮಾಡಿದನು.[೨೫] ರಾಜ ಒಡೆಯರು ತಮ್ಮ ಸೋದರ ಸಂಬಂಧಿ ದೇವರಾಜಯ್ಯನೊಂದಿಗೆ ಈ ಬಿರುದು ಮೈಸೂರು ಅರಸರಿಗೆ ಅವರ ಶೌರ್ಯದಿಂದ ಪ್ರದತ್ತವಾದ ಬಿರುದು ಎಂದು ತಿಳಿಸಿ ನಾವು ಅದನ್ನು ಉಪಯೋಗಿಸಿಯೇ ತೀರುತ್ತೇವೆಂದು ಪುನಃ ತಿರುಮಲನಿಗೆ ಹೇಳಿ ಕಳುಹಿಸಿದನು. ಈ ಬಿರುದು ಎರಡನೇ ತಿಮ್ಮರಾಜ ಮತ್ತು ಮುಮ್ಮಡಿ ಹಿರಿಯ ಬೆಟ್ಟದ ಚಾಮರಾಜ ಒಡೆಯರವರ ಕಾಲದಿಂದಲೂ ಮೈಸೂರು ಅರಸರು ಬಿರುದಾಗಿ ಹೊಂದಿರುವುದನ್ನು ತಿರುಮಲನಿಗೆ ತಿಳಿಸುವ ಪ್ರಯತ್ನ ನಡೆಯಿತು. ಈ ಹೊತ್ತಿಗೆ ತಿರುಮಲನು ರಾಜ ಒಡೆಯರೊಂದಿಗಿನ ಎಲ್ಲ ಸ್ನೇಹ ಸಂಬಂಧವನ್ನು ತೊರೆದು ಅವರೊಂದಿಗಿನ ಸಂಘರ್ಷದ ಮಾರ್ಗವನ್ನು ಹಿಡಿಯುವ ಯೋಜನೆಯಲ್ಲಿ ಮುಳುಗಿದ್ದನು. ಇದೇ ಸಮಯದಲ್ಲಿ ತಿರುಮಲನ ಆಸ್ಥಾನದಲ್ಲಿದ್ದ ಮೈಸೂರು ಪ್ರಾಂತ್ಯದ ಪಾಳೆಗಾರರುಗಳ ಸಭೆಯಲ್ಲಿ ರಾಜ ಒಡೆಯರನ್ನು ನಿಗ್ರಹಿಸುವ ಯೋಜನೆಯನ್ನು ರೂಪಿಸಿದನು.

ಈ ವಿಷಯವನ್ನು ತಿರುಮಲನ ಆಸ್ಥಾನದಲ್ಲಿದ್ದ ಸೋಮಯಾಜಿಯು ರಾಜ ಒಡೆಯರಿಗೆ ಅರುಹಿದನು. ರಾಜ ಒಡೆಯರು ತಿರುಮಲನ ಭೇಟಿಯ ನಂತರ ತನ್ನ ಆರಾಧ್ಯದೈವವಾದ ಶ್ರೀರಂಗನಾಥನ ದರ್ಶನಕ್ಕಾಗಿ ಶ್ರೀರಂಗಪಟ್ಟಣ ಪ್ರವೇಶಿಸುವ ಯೋಜನೆಯನ್ನು ಇಟ್ಟುಕೊಂಡಿದ್ದರು. ತಿರುಮಲನು ಈ ಸಂದರ್ಭವನ್ನು ಬಳಸಿಕೊಂಡು ಶ್ರೀರಂಗನಾಥನ ದೇವಸ್ಥಾನದಲ್ಲಿ ಒಂಟಿಯಾಗಿ ನಿರಾಯುಧರಾಗಿ ಪರಮಾತ್ಮನ ಸೇವೆಯಲ್ಲಿರುವಾಗ ರಾಜ ಒಡೆಯರನ್ನು ಬಂಧಿಸುವ ಯೋಜನೆಯನ್ನು ಮಾಡಿದ್ದನು. ಆದರೆ ರಾಜ ಒಡೆಯರ್ ಶ್ರೀರಂಗನಾಥನ ದರ್ಶನವನ್ನು ಮಾಡಿ ಬ್ರಹ್ಮಪುರಿ ದ್ವಾರದ ಮೂಲಕ ಶ್ರೀರಂಗಪಟ್ಟಣದಿಂದ ಹೊರಬಂದು ಮೈಸೂರು ತಲುಪುವಂತೆ ಅವರ ಸೋದರ ಸಂಬಂಧಿ ದೇವರಾಜನು ಎಲ್ಲ ವ್ಯವಸ್ಥೆಗಳನ್ನೂ ಮಾಡಿದ್ದನು. ತಿರುಮಲನ ಯೋಜನೆ ವಿಫಲವಾದುದು ಆತನಿಗೆ ಅತೀವವಾದ ನಿರಾಶೆಯನ್ನುಂಟು ಮಾಡಿತು.[೨೬] ಆತನು ಮೈಸೂರನ್ನು ಮುತ್ತುವ ಯೋಜನೆಯನ್ನು ಮಾಡಿದನು. ಈ ಸಂದರ್ಭದಲ್ಲಿ ತಿರುಮಲನ ಪಕ್ಷಪಾತಿಗಳಾದ ಪಾಳೆಗಾರರು ಈತನ ತಂದೆ ರಾಮರಾಜಯ್ಯನ ಕಾಲದಲ್ಲಿ ಮೈಸೂರಿನ ಮೇಲೆ ನಡೆದ ಆಕ್ರಮಣ ಮತ್ತು ಅದರ ಫಲಿತಾಂಶವನ್ನು ವಿವರಿಸಿ ಮೈಸೂರನ್ನು ಮುತ್ತುವುದಕ್ಕೆ ಬದಲಾಗಿ ಮೈಸೂರಿನಂಚಿನಲ್ಲಿರುವ ಕೆಸರೆ ಕೋಟೆಯನ್ನು ಮುತ್ತುವುದು ಸೂಕ್ತವೆಂದು ತಿರುಮಲನಿಗೆ ತಿಳಿಸಿದರು.[೨೭]

**ಕೆಸರೆ ಕದನದ ಹಿನ್ನೆಲೆ**

ರಾಜ ಒಡೆಯರು ಮತ್ತು ತಿರುಮಲನ ಸಂಘರ್ಷಕ್ಕೆ ಕಾರಣವಾದ ಅಂಶಗಳನ್ನು ಹುಡುಕುವ ಯಾವುದೇ ಇತಿಹಾಸಕಾರರಿಗೆ ಎರಡು ಪ್ರಮುಖ ಕಾರಣಗಳು ಎದುರಾಗುತ್ತವೆ. ಒಂದನೆಯ ತಿರುಮಲನು ಮಧುರೆಯ ಆಕ್ರಮಣದ ಸಮಯದಲ್ಲಿ ರಾಜ ಒಡೆಯರ ಸಹಾಯ ನೀಡುವಂತೆ ಕೋರಿದ್ದನು. ರಾಜ ಒಡೆಯರು ತಿರುಮಲನ ಕೋರಿಕೆಯನ್ನು ಮನ್ನಿಸಲಿಲ್ಲ. ಹಾಗಾಗಿ ತಿರುಮಲನು ರಾಜ ಒಡೆಯರ ಬಗ್ಗೆ ಅಸಮಾಧಾನವನ್ನು ಬೆಳೆಸಿಕೊಂಡಿದ್ದನು.[೨೮] ಎರಡನೇ ಕಾರಣವನ್ನು ಗುರುತಿಸುವುದಾದರೆ ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯ ಮತ್ತು ತಿರುಮಲಾರ್ಯನ ಚಿಕ್ಕದೇವರಾಜ ವಂಶಾವಳಿ ಕೃತಿಗಳೆರಡೂ

ತಿರುಮಲನು ಶ್ರೀರಂಗಪಟ್ಟಣಕ್ಕೆ ಹಿಂತಿರುಗಿದ ನಂತರ ವಿಜಯನಗರ ಸಾಮ್ರಾಜ್ಯದ ರಾಜ ಪ್ರತಿನಿಧಿಯ ಸಾಮಂತರುಗಳು ಕಾರುಗಹಳ್ಳಿ, ಶ್ರೀರಂಗಪಟ್ಟಣ, ಕನ್ನಂಬಾಡಿ, ತಲಕಾಡು, ಅಮ್ಮಚವಾಡಿ ಮುಂತಾದ ಪ್ರದೇಶಗಳ ನಾಯಕರುಗಳು ತಿರುಮಲನ ಆಸ್ಥಾನವನ್ನು ಸಂದರ್ಶಿಸಿ ತಿರುಮಲನಿಗೆ ರಾಜ ಒಡೆಯರ್ ವಿರುದ್ಧ ಕಾರ್ಯಾಚರಣೆಯನ್ನು ಕೈಗೊಳ್ಳುವಂತೆ ಹುರಿದುಂಬಿಸಿದರೆಂದು ತಿಳಿಸುತ್ತದೆ.

ರಾಜ ಒಡೆಯರು, ತಿರುಮಲರಾಜನು ಮಧುರೆಯಲ್ಲಿದ್ದ ಸಂದರ್ಭದಲ್ಲಿ ಮೈಸೂರಿನ ಸುತ್ತಮುತ್ತ ಕೈಗೊಂಡ ಸೈನಿಕ ಕಾರ್ಯಾಚರಣೆಗಳು ಮತ್ತು ಅವರು ಸಣ್ಣಪುಟ್ಟ ಪಾಳೇಗಾರರ ವಿರುದ್ಧ ಸಾಧಿಸಿದ ಮೇಲುಗೈ ಈ ಮೇಲೆ ಹೇಳಿದ ಮೈಸೂರಿನ ಎಲ್ಲೆಯ ನಾಯಕರುಗಳನ್ನು ಮೈಸೂರಿನ ವಿರೋಧಿಗಳಾಗಿ ರೂಪಿಸಿತು. ರಾಜ ಒಡೆಯರು ತಿರುಮಲನಿಗೆ ಮಧುರೆಯ ಕಾರ್ಯಾಚರಣೆಯಲ್ಲಿ ಸಹಾಯ ನೀಡದ ನೆಪವನ್ನು ಮುಂದಿಟ್ಟುಕೊಂಡು ಇವರು ತಿರುಮಲನನ್ನು ರಾಜ ಒಡೆಯರ್‌ನ ವಿರುದ್ಧ ಎತ್ತಿಕಟ್ಟಿದರು. ಈ ಹಂತದಲ್ಲಿ ರಾಜ ಒಡೆಯರು ತಿರುಮಲನಿಗೆ ಸಹಕಾರ ನೀಡದೇ ಇದ್ದುದು ಮತ್ತು ಈ ನಾಯಕರುಗಳು ತಿರುಮಲನಿಗೆ ರಾಜ ಒಡೆಯರ್‌ನನ್ನು ಶಿಕ್ಷಿಸುವ ಕಾರ್ಯದಲ್ಲಿ ಕೈಜೋಡಿಸುವುದೂ ತಿರುಮಲನ ರಾಜ ಒಡೆಯರ್ ವಿರುದ್ಧದ ಸೇಡನ್ನು ವೃದ್ಧಿಸಿ ಅವರನ್ನು ದಮನ ಮಾಡುವ ಮಹತ್ವಾಕಾಂಕ್ಷೆಯನ್ನು ದ್ವಿಗುಣಗೊಳಿಸಿದವು. ಈ ಹಿನ್ನೆಲೆಯಲ್ಲಿ ತಿರುಮಲನು ಕೆಸರೆಯ ಅಧೀನದಲ್ಲಿದ್ದ ಕೆರೆಹಟ್ಟಿ, ಸತ್ಯಾಗಾಲ, ಹಂಚ್ಯಾ, ಸಾತಹಳ್ಳಿ ಮತ್ತು ಬೆಲವತ್ತಗಳನ್ನು ಮುತ್ತಿದನು.[೨೯]

ಇದೆಲ್ಲದರ ತರುವಾಯ ಶ್ರೀರಂಗಪಟ್ಟಣದ ಸಮೀಪವಿರುವ ಕೊಡಿಯಾಲದಲ್ಲಿ ತಲಕಾಡು, ಅಮ್ಮಚವಾಡಿ ಮುಂತಾದ ನಾಯಕರ ಸೇನೆಯನ್ನು ಮೈಸೂರು ಸೇನೆ ಸೋಲಿಸಿತು. ಇದರಿಂದಾಗಿ ತಿರುಮಲನು ಕೆಸರೆಯನ್ನು ಮುತ್ತುವ ಕಾರ್ಯಕ್ಕೆ ಹಿನ್ನೆಡೆ ಉಂಟಾಯಿತು. ಈ ಎಲ್ಲ ಚಟುವಟಿಕೆಗಳಲ್ಲಿ ತಿರುಮಲನ ಹಿನ್ನೆಡೆ ಆತನನ್ನು ಮತ್ತಷ್ಟು ಉದ್ರೇಕಿಸಿತೇ ವಿನಃ ಸೈನಿಕ ಕಾರ್ಯಾಚರಣೆಯಿಂದ ಹಿಂದೆ ಸರಿಯುವಂತೆ ಮಾಡಲಿಲ್ಲ. ತಿರುಮಲನನ್ನು ಕೆಸರೆಯ ಹೊರ ಪ್ರದೇಶಗಳಲ್ಲಿ ಮತ್ತು ಕೊಡಿಯಾಲದ ಬಳಿ ಸೋಲಿಸಿದ ರಾಜ ಒಡೆಯರ್ ಮಾನಸಿಕವಾಗಿ ಹೆಚ್ಚು ಪ್ರಬಲರಾದರು. ಅಲ್ಲದೆ ತಿರುಮಲನಿಗೆ ಯಾವುದೇ ಕಪ್ಪಕಾಣಿಕೆಗಳನ್ನು ಸಲ್ಲಿಸದಿರಲು ನಿರ್ಧರಿಸಿದರು. ಕೊಡಬೇಕಾಗಿದ್ದ ಎಲ್ಲ ರಾಜಧನವನ್ನು ನಿಲ್ಲಿಸಿಬಿಟ್ಟರು. ಇದಾದ ನಂತರ ತಿರುಮಲನು ರಾಜ ಒಡೆಯರನ್ನು ಪುನಃ ಕೊಲ್ಲುವ ವಿಫಲ ಯತ್ನವನ್ನು ಮಾಡಿದನು.

ಕಂಠೀರವ ನರಸರಾಜ ವಿಜಯ ಕೃತಿಯಲ್ಲಿ ತಿರುಮಲನೊಂದಿಗೆ ಕೈಜೋಡಿಸಿದ ಪಾಳೆಯಗಾರರ ಪಟ್ಟಿಯೇ ಕಂಡುಬರುತ್ತದೆ. ಅದರಂತೆ ಹದಿನಾಡಿನ ರಾಮರಾಜೇಂದ್ರ, ಪಿರಿಯಾಪಟ್ಟಣದ ರುದ್ರಗಣಭೂಪ, ತಲಕಾಡಿನ ನಂಜೇಂದ್ರ, ಕೆರೆಯೂರ ತಿಮ್ಮನಾಯಕ, ಸಾಲನಾಯಕನ ಬೈರೇಂದ್ರ, ನರಸಿಂಹಪುರದ ನಾಯಕ, ಬೇಲೂರಿನ ನಾಯಕ, ನುಗ್ಗೇಹಳ್ಳಿಯ ದಾಸನಾಯಕ, ಯಲಹಂಕ ನಾಡಿನ ಕೆಂಗೇಂದ್ರ, ಕೋಲಾಲ, ದೊಡ್ಡಬಳ್ಳಾಪುರ ಹಾಗೂ ಬೆಂಗಳೂರ ನಾಯಕರು ತಿರುಮಲನಿಗೆ ಮೈಸೂರು ಅರಸನ ವಿರುದ್ದವಾಗಿ ಕೈಜೋಡಿಸಿದ್ದರು. ಕೆಸರೆಯ ಯುದ್ಧಕ್ಕೆ ಈ ನಾಯಕರುಗಳು ಕರೆತಂದ ಸೈನ್ಯದ ವಿವರ ಸಹ ದೊರೆಯುತ್ತದೆ. ಅದನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

| | ರಾಜ | ಆನೆ | ಕುದುರೆ | ಕಾಲ್ದಳ |
|---|---|---|---|---|
| ೧ | ಹದಿನಾಡ ರಾಜರಾಜೇಂದ್ರ | ೫೦ | ೧,೦೦೦ | ೧೦,೦೦೦(ಸಂ.೩, ಪ.೨೩) |
| ೨ | ಪಿರಿಯಾಪಟ್ಟಣದ ರುದ್ರ ಗಣಭೂಪ | ೫೦ | ೨,೫೦೦ | ೨೦,೦೦೦ (ಸಂ. ೩, ಪ. ೨೪) |
| ೩ | ತಲಕಾಡು ನಂಜೇಂದ್ರ | ೩೦ | ೧,೦೦೦ | ೧೬,೦೦೦ (ಸಂ. ೩, ಪ. ೨೫) |
| ೪ | ಕೆಯೂರ ತಿಮ್ಮನಾಯಕ | ೨೦ | ೫೦೦ | ೮,೦೦೦ (ಸಂ. ೩, ಪ. ೨೬) |
| ೫ | ಸಾಲನಾಯಕನ ಭೈರೇಂದ್ರ | ೨೦ | ೫೦೦ | ೧೦,೦೦೦ (ಸಂ. ೩, ಪ. ೨೭) |
| | ಒಟ್ಟು | ೧೭೦ | ೫,೫೦೦ | ೬೪,೦೦೦ |

ತಿರುಮಲನ ಕೂಟಕ್ಕೆ ಬಂದು ಐದು ಅರಸರು ಕರೆತಂದ ಸೈನ್ಯದಲ್ಲಿ ೬೪,೦೦೦ ಕಾಲ್ದಳ; ೫,೫೦೦ ರಾವುತರು; ಮತ್ತು ೧೭೦ ಗಜಗಳು ಇದ್ದವೆಂದು ತಿಳಿದುಬರುತ್ತದೆ. ಮುಂದಿನ ಪದ್ಯವೊಂದರಲ್ಲಿ ಕವಿ ಗೋವಿಂದವೈದ್ಯ ಸೈನ್ಯದ ಸಂಖ್ಯೆಯನ್ನು ಹೀಗೆ ವಿವರಿಸಿದ್ದಾನೆ.

ಕುದುರೆಗಳೆಂಟುಸಾವಿರ ಹೆಚ್ಚಿನ
ಮದಸಾಮಜಗಳಿನ್ನೂರು
ಒದವಿಹ ಬಲ ಲಕ್ಷ ಸಹ ತಿರುಮಲರಾಜ
ಕವನಕೈದಿದನೇನೆಂಬೆ.[೩೦]

ಅಂದರೆ ರಾವುತರು ೮,೦೦೦, ಗಜಗಳು ೨೦೦, ಮತ್ತು ಕಾಲ್ದಳ ಒಂದು ಲಕ್ಷವಾಗಿತ್ತು. ವ್ಯಕ್ತಿಗತ ಸಂಖ್ಯಾಬಲ ಮತ್ತು ಒಟ್ಟಾರೆ ಸೈನ್ಯಬಲದ ಪಟ್ಟಿಯಲ್ಲಿ ಸ್ವಲ್ಪ ವ್ಯತ್ಯಾಸ ಕಂಡುಬರುತ್ತದೆ. ಅದೇನೆಂದರೆ ಸೈನಿಕರಲ್ಲಿ ೩೬,೦೦೦, ರಾವುತರಲ್ಲಿ ೨೫೦೦ ಮತ್ತು ೩೦ ಆನೆಗಳ ವ್ಯತ್ಯಾಸ ಎದುರಾಗುತ್ತದೆ. ಇದನ್ನು ನಾವು ತಿರುಮಲನ ಸೇನೆ ಎಂದು ಗ್ರಹಿಸಿದಲ್ಲಿ ಮೇಲಿನ ಗೋವಿಂದವೈದ್ಯನ ಅಂಕಿಸಂಖ್ಯೆಗಳು ಎರಡೂ ಸಂದರ್ಭಗಳಲ್ಲಿ ಸರಿ ಇತ್ತೆಂದು ಭಾವಿಸಬೇಕಾಗುತ್ತದೆ. ಕಾರಣ ಪೂರ್ವದಲ್ಲಿ ತಿರುಮಲನು ಹೊಂದಿದ್ದ ಸೇನೆಯನ್ನು ಹೇಳಿಲ್ಲ. ಎರಡನೇ ಸಂದರ್ಭದಲ್ಲಿ ಅದನ್ನು ಸೇರಿಸಿ ಒಟ್ಟಾರೆ ಅಂಕಿಅಂಶವನ್ನು ತಿಳಿಸಿದ್ದಾನೆಂದು ಭಾವಿಸಬೇಕಾಗುತ್ತದೆ.

ಕೆಸರೆಯನ್ನು ಮುತ್ತಿದ ತಿರುಮಲನ ಸೇನೆಯ ವಿವರವನ್ನು ದಾಖಲಿಸುತ್ತಾ ಹಯವದನರಾಯರು ಶ್ರೀರಂಗಪಟ್ಟಣದ ಸೇನೆಯು ಒಂದು ಲಕ್ಷಕ್ಕೂ ಮಿಗಿಲಾದ ಪದಾತಿದಳವನ್ನು ೭ರಿಂದ ೧೨ ಸಾವಿರ ಸಂಖ್ಯೆಯವರೆಗಿನ ರಾವುತರನ್ನೂ ೧೦೦ರಿಂದ ೨೦೦ ಸಂಖ್ಯೆಯ ಗಜಬಲವನ್ನೂ ತಿರುಮಲನೂ ತನ್ನ ಸ್ಥಾನಿಕ ಆಡಳಿತಗಾರರಿಮದ ಪಡೆದು ಅದರ ಸಹಾಯದಿಂದ ಮುತ್ತಿದನೆಂದೂ ತಿಳಿಸುತ್ತಾರೆ.[೩೧] ಇದೇ ಸಂಖ್ಯಾಬಲವನ್ನು ಕಂಠೀರವ ನರಸರಾಜ ವಿಜಯದ ಒಂದು ಪದ್ಯ ಉಲ್ಲೇಖಿಸುತ್ತದೆ. ಇಷ್ಟು ಬಲವನ್ನು ಹೊಂದಿದ ತಿರುಮಲನ ಸೇನೆಯು ಬಹುಪಾಲು ಕೆಸರೆಯನ್ನು ಮುತ್ತಿತು. ಇದರ ಮತ್ತೊಂದು ಭಾಗ ಉಮ್ಮತ್ತೂರು ಮತ್ತು ಮೂಗೂರು ನಾಯಕನ ನೇತೃತ್ವದಲ್ಲಿ ಕೆಸರೆಯ ಯುದ್ಧದಲ್ಲಿ ಗೆದ್ದರೆ ಮೈಸೂರನ್ನು ಮುತ್ತುವ ಸಲುವಾಗಿ ಕೆರೆಹಟ್ಟಿ (ಸತ್ಯಾಗಾಲದ ಸಮೀಪ ಪಾಳ್ಯಂ)ಯಲ್ಲಿ ಬೀಡುಬಿಟ್ಟಿದ್ದಿತು. ತಿರುಮಲನು ಕೆಸರೆ ಮುತ್ತಿಗೆಯ ನಾಯಕತ್ವವಹಿಸಿಕೊಂಡು ಅದರಲ್ಲಿ ನಿರತನಾಗಿದ್ದನು. ರಾಜ ಒಡೆಯರ ಇಬ್ಬರು ಸಹೋದರರಾದ ಬೆಟ್ಟದ ಚಾಮರಾಜ ಒಡೆಯರ್, ಚನ್ನರಾಜ ಒಡೆಯರವರು ಮೈಸೂರು ಮುತ್ತಿಗೆಗಳ ಎಲ್ಲಾ ಅವಶ್ಯಕತೆಗಳನ್ನೂ ಅನುಕ್ರಮವಾಗಿ ನೋಡಿಕೊಳ್ಳುತ್ತಿದ್ದರು.

**ಕೆಸರೆಯ ಕದನ**

ಚಿಕ್ಕದೇವರಾಜ ವಂಶಾವಳಿ ಕೃತಿಯು ಕೆಸರೆಯ ಯುದ್ಧಕ್ಕೆ ತಿರುಮಲನು ಅಣಿಮಾಡಿಕೊಂಡ ಬಗೆಯನ್ನು ಸಹ ವಿವರಿಸುತ್ತದೆ. ಚಿಕ್ಕದೇವರಾಜ ವಂಶಾವಳಿ, ಕಂಠೀರವ ನರಸರಾಜ ವಿಜಯ ಕೃತಿಗಳು ಕೆಸರೆಯ ಕಾಳಗದ ವಿವರವನ್ನೂ ಒದಗಿಸುತ್ತವೆ.

"ಬೆಟ್ಟದ ಚಾಮರಾಜ, ಚೆನ್ನರಾಜರೂ ಲಗ್ಗೆಯೇರಿದ ಎಲ್ಲರನ್ನೂ ಸ್ವರ್ಗಕ್ಕೇರಿಸಿ ಚಿಕ್ಕದಳವೊಂದನ್ನು ಊರಲ್ಲಿಟ್ಟು ಉಳಿದ ಸೈನ್ಯದೊಡನೆ ಹೊರಬಿದ್ದು ತಮ್ಮ ತಮ್ಮ ಪಾಳಯದಲ್ಲಿ ಕೋಲಾಹಲ ಉಂಟುಮಾಡಿದುದನ್ನು ಕೇಳಿ ಕೆಟ್ಟೋಡುತ್ತಿರುವ ದಕ್ಷಿಣ–ಪಶ್ಚಿಮದವರನ್ನು ಬಿಟ್ಟು ಪೂರ್ವಕ್ಕೆ ನಡೆದು ಅಡ್ಡಗಟ್ಟಿ ತರಿದು ಇರಿದು ತಲ್ಲಣಗೊಳಿಸಿ ಧೃತಿಗೆಡಿಸಿ ಶರಣು ಬಂದವರಿಗೆ ದಯದೋರಿ, ತಿರುಗಿ ಉತ್ತರಕ್ಕೆ ಬರುತ್ತ ಅಣ್ಣನನ್ನು ಕಂಡು ಅಡಿಗೆರಗಿ, ಬೇಗನೆ ನಾಲ್ವರೂ ಒಡಹುಟ್ಟಿದವರು ಶ್ರೀರಂಗಪಟ್ಟಣಕ್ಕೆ ಓಡಿಹೋಗುತ್ತಿರುವ ತಿರುಮಲ ರಾಜನನ್ನು ಬೆನ್ನಟ್ಟಿ ಬರಲು, ಅವನೂ ಸಾವಿಗೆ ಹೆದರಿ, ಬೆಳ್ಗೊಡೆಯನ್ನು ಬಿಟ್ಟು, ಸೀಗುರಿಗಳನ್ನು ನೀಗಿ ಚಾಮರವನ್ನು ಕಳೆದುಕೊಂಡು ಧ್ವಜವನ್ನು ಹಳಿದು ವಾದ್ಯಗಳನ್ನು ತ್ಯಜಿಸಿ ಕುದುರೆಯಿಂದಿಳಿದು ಆಭರಣಗಳನ್ನು ತೊರೆದು ಒಳ್ಳೆಯ ಬಟ್ಟೆಗಳನ್ನು ಬಿಟ್ಟು ವೇಷವನ್ನು ಮರೆಮಾಚಿ ಅಂಜಿ ಓಡಿಹೋದನು. ಬೆಳ್ಗೊಡೆ ಮುಂತಾದುವೆಲ್ಲ ಚಕ್ರವರ್ತಿತ್ವ ಸೂಚಕವಾದವುಗಳು) ಅವನ ಅರಸುತನದ ಕುರುಹುಗಳನ್ನೆಲ್ಲ ತೆಗೆದುಕೊಂಡು ಪೌರುಷ ಹೆಚ್ಚಿದವರಾಗಿ ಮೈಸೂರು ಸೇರಿದರು. ಸೆರೆಸಿಕ್ಕವರಾರು? ಎಂದು ವಿಚಾರಿಸಿದನು ಅವರು ಬಿನ್ನವಿಸಿದರು.

ಈ ದಳವಾಯಿ ಚೆನ್ನಮನಾಯಕನೂ ಈ ಪ್ರಧಾನಿ ರಾಮಾನಂಜಯ್ಯನೂ ನನ್ನ ಎಡ–ಬಲಗಳಲ್ಲಿದ್ದೂ ನನ್ನ ಮೇಲೆರಗಿದ ಯುದ್ಧಭರಕ್ಕೆ ಹೋರಾಡುವವರಂತೆ ಮುಂದಕ್ಕೆ ನಡೆದು ಮುಖ ತಪ್ಪಿಸಿದರು. ನನ್ನನೊಪ್ಪಿಸಿ ತಪ್ಪುದಾರಿ ಹಿಡಿದು (ತಾವು ಮಾತ್ರ) ಒಪ್ಪವಾಗಿ ನಡೆದರು. ನಾನು ಈವರೆಗೆ ಇವರನ್ನು ಮನ್ನಣೆಯಿಂದ ಪೋಷಿಸಿದ್ದು ಅರಣ್ಯರೋಧನದಂತೆ.

ಇವರನ್ನು ನೆಚ್ಚಿ ಮೈಸೂರವರೊಡನೆ ಸೆಣಸಿದೆನು. ಅರಿತರಿತೂ ಅರಿಯದವನಾದೆನು, ಕೊಡೆಯನ್ನು ಮರೆಗೊಂಡು ಸಿಡಿಲೆಗೆದುರಾದೆನು. ನಾಯಬಾಲ ಹಿಡಿದು ಗಂಗೆಯನ್ನು ದಾಟಲೆಳಸಿದೆನು. ಗಿಡುಗವನ್ನು ಸಿಟ್ಟಿದ್ದ ಸಿಂಹವನ್ನು ಕೆಣಕಿ ಕೆಟ್ಟೆನು. ಇನ್ನು ಈ ಪಟ್ಟಣದ ಆಸೆಬಿಟ್ಟು ಹೊರಡುವುದೇ ಕ್ಷೇಮ. ಮುನ್ನವೇ ಸಾಗುವೆನೆಂದು ಪಯಣ ಸಿದ್ಧತೆ ಮಾಡುತ್ತಿದ್ದನು."[೩೨]

ಕಂಠೀರವ ನರಸರಾಜ ವಿಜಯ ಮತ್ತು ಚಿಕ್ಕದೇವರಾಜ ವಂಶಾವಳಿಯಲ್ಲಿ ಕಂಡುಬರುವ ವರ್ಣನೆಗಳು ಕವಿಯ ವರ್ಣನೆಗಳಾಗಿದ್ದರೂ ಮಹತ್ವದ ಐತಿಹಾಸಿಕ ವಿವರಗಳನ್ನು ಒಳಗೊಂಡಿವೆ. ಕೆಸರೆಯ ತಿರುಮಲನ ಆಕ್ರಮಣವನ್ನು ದುರ್ಮುಖಿ ನಾಮ ಸಂವತ್ಸರದ ಭಾದ್ರಪದ ಶುದ್ಧ ಪಂಚಮಿಯಂದು ಅಂದರೆ ಕ್ರಿ.ಶ. ೧೫೯೬ರ ಅಕ್ಟೋಬರ್ ೧೮ರಂದು ಪ್ರಾರಂಭವಾಯಿತೆಂದು ಹಯವದನರಾಯರು, ಮೈಸೂರು ದೊರೆಗಳ ಪೂರ್ವೋತ್ತರ ಮತ್ತು ವಿಲ್ಕ್ಸನ ಕೃತಿಯಲ್ಲದೆ ಚಿಕ್ಕದೇವರಾಜ ವಂಶಾವಳಿಯನ್ನು ಆಧರಿಸಿ ನಿರ್ಧರಿಸಿದ್ದಾರೆ.[೩೩]

ಬೆಟ್ಟದ ಚಾಮರಾಜ ಒಡೆಯರು ಪರಿಸ್ಥಿತಿಯ ಗಂಭೀರತೆಯನ್ನು ಅರಿತು ರಾಜ ಒಡೆಯರ ನೇತೃತ್ವದಲ್ಲಿ ಮೈಸೂರಿನ ಸೇನೆಯನ್ನು ಮೈಸೂರಿನಲ್ಲಿಯೇ ಉಳಿಸಿ ಕೆಸರೆಯ ಕೋಟೆಯ ಮೇಲಿನ ಮುತ್ತಿಗೆಯನ್ನು ಚದುರಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಮೈಸೂರಿನಿಂದ ದಕ್ಷಿಣಕ್ಕೆ ಹೊರಟ ಬೆಟ್ಟದ ಚಾಮರಾಜ ಒಡೆಯರು ನಂಜನಗೂಡನ್ನು ದಾಟಿ ಹೆಗ್ಗಡದೇವನ ಕೋಟೆಯನ್ನು ಮುತ್ತಿದರು. ಆನಂತರ ಅವರು ಕೆರೆಹಟ್ಟಿಯಲ್ಲಿ ಬೀಡುಬಿಟ್ಟಿದ್ದ ತಿರುಮಲನ ಸೈನ್ಯದ ಮೇಲೆ ರಾತ್ರಿ ದಾಳಿಯನ್ನು ಮಾಡಿ ಇಡೀ ಅವನ ಬಿಡಾರವನ್ನು ಕೊಳ್ಳೆ ಹೊಡೆದರು.[೩೪] ನಂತರ ಅತಿ ವೇಗವಾಗಿ ಮುಂದುವರಿದು ಸೋಸಲೆಯ ಬಳಿ ಕಾವೇರಿಯನ್ನು ದಾಟಿ ಕಿರಂಗೂರಿನಲ್ಲಿ ಬೀಡುಬಿಟ್ಟಿದ್ದ ಮತ್ತೊಂದು ಸೇನೆಯನ್ನು ಪುನಃ ರಾತ್ರಿ ಯುದ್ಧದಲ್ಲಿ ಲೂಟಿಮಾಡಿ ಪಡೆದುಕೊಂಡ ಎಲ್ಲ ಧನಕನಕ ವಸ್ತುಗಳನ್ನು ಹೊಂದಿ ಮೈಸೂರಿಗೆ ಹಿಂತಿರುಗಿದರು.[೩೫] ಈ ಕಾರ್ಯ ಕೇವಲ ಮೂರು ರಾತ್ರಿಯಲ್ಲಿ ನೆರವೇರಿತೆಂದು ಕಂಠೀರವ ನರಸರಾಜ ವಿಜಯ ಉಲ್ಲೇಖಿಸುತ್ತದೆ. ಕೆಸರೆಯಲ್ಲಿ ನಿಜವಾದ ಯುದ್ಧ ಪ್ರಾರಂಭವಾಗುವುದಕ್ಕೆ ಪೂರ್ವದಲ್ಲಿಯೇ ಮೈಸೂರು ಸಂಸ್ಥಾನದ ಬೆಟ್ಟದ ಚಾಮರಾಜ ಒಡೆಯರು ತಿರುಮಲನ ಸೇನೆಯ ಬಹುತೇಕ ನಾಯಕ‍ುಗಳನ್ನು ಕೆರೆಹಟ್ಟಿ ಮತ್ತು ಕಿರಂಗೂರು ಪ್ರದೇಶದಲ್ಲಿ ಸೋಲಿಸಿ ಅವರ ಸೇನೆಯ ಬಲವನ್ನೇ ನಿಸ್ತೇಜಗೊಳಿಸಿದ್ದರು.

ಇದಾದ ನಂತರ ತಿರುಮಲನು ಕೆಸರೆಯ ಮುತ್ತಿಗೆಯನ್ನು ಮುಂದುವರಿಸಲು ಹಿಂದೆ ಸರಿದನು. ಈ ಕಾಲದಲ್ಲಿ ಕೆಸರೆಯು ೩೦ ಓಲೆಕಾರರ ಮತ್ತು ೧೨ ಕೋವಿಗಳು ಸಹಾಯದಿಂದ ಹಾಗೂ ಅಲ್ಲಿನ ಜನರ ಅಪಾರ ಧೈರ್ಯದಿಂದ ರಕ್ಷಣೆಯನ್ನು ಪಡೆದುಕೊಂಡಿದ್ದಿತು.[೩೬] ಕೆಸರೆಯ ನಾಗರೀಕರು ಕೆಸರೆಯನ್ನು ಮುತ್ತಿದ ಸೇನೆಯ ಧನಕನಕಗಳನ್ನು ಪ್ರಾಣಿಗಳನ್ನೂ ಅಪಾರವಾಗಿ ದೋಚಿದರು. ಇದೇ ಸಮಯದಲ್ಲಿ ತಿರುಮಲನ ಸೇನೆಯ ನಾಯಕನಾದ ಜಕ್ಕನು ಮೈಸೂರಿನ ಆಡಳಿತದಲ್ಲಿದ್ದ ಹಂಚ್ಯಾ ಗ್ರಾಮವನ್ನು ಮುತ್ತಲು ಯೋಚಿಸಿದನು. ರಾಜ ಒಡೆಯರ ತಮ್ಮಂದಿರಾದ ಬೆಟ್ಟದ ಚಾಮರಾಜ ಒಡೆಯರು ಮತ್ತು ಚನ್ನರಾಜ ಒಡೆಯರು ಸೇನಾ ಸನ್ನದ್ಧರಾಗಿ ಜಕ್ಕನ ಮೇಲೆ ಬಿದ್ದು ಸೋಲಿಸಿ ಅವನ ಸೇನೆಯನ್ನೂ ಲೂಟಿ ಮಾಡಿದರು. ಈ ಮಧ್ಯೆ ರಾಜ ಒಡೆಯರು ಕೆಸರೆಯ ದಾಳಿಗೋಸ್ಕರವಾಗಿ ಬೀಡುಬಿಟ್ಟಿದ್ದ ಎಲ್ಲ ನಾಯಕರುಗಳು ಹಿಂದೆ ಸರಿಯುವಂತೆ ಸಂಧಾನ ಮಾಡಿಕೊಳ್ಳುವಲ್ಲಿ ಯಶಸ್ವಿಯಾದರು. ಅಲ್ಲದೆ ತಮ್ಮ ಸೇನೆಯೊಂದಿಗೆ ಚಾಮರಾಜ ಮತ್ತು ಚನ್ನರಾಜರನ್ನು ಸತ್ತೆಗಹಳ್ಳಿಯಲ್ಲಿ ಸೇರಿಕೊಂಡು ಅಲ್ಲಿ ಬೀಡುಬಿಟ್ಟಿದ್ದ ತಿರುಮಲನ ಸಂಪೂರ್ಣ ಸೈನ್ಯವನ್ನು ದೋಚಿದರು. ತಿರುಮಲನ ನೇತೃತ್ವದಲ್ಲಿದ್ದ ಆನೆ, ಕುದುರೆ, ಸಾಗಾಣಿಕೆಯ ಎತ್ತು ಮತ್ತು ಸೇನೆಯ ಎಲ್ಲ ಸರಂಜಾಮುಗಳನ್ನು ವಶಪಡಿಸಿಕೊಂಡು ಮೈಸೂರಿಗೆ ಹಿಂತಿರುಗಿದರು.[೩೭]

ಆದರೆ ರಾಜ ಒಡೆಯರ ತಾವು ವಶಪಡಿಸಿಕೊಂಡ ಆನೆಗಳನ್ನು ತಿರುಮಲನಿಗೆ ಹಿಂತಿರುಗಿಸಿದರು.[೩೮] ಏಕೆಂದರೆ ರಾಜ ಒಡೆಯರ ಒಂದು ಆನೆಗೆ ಬದಲಾಗಿ ೪೦ ಓಲೆಕಾರರನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಲು ಸಾಧ್ಯವೆಂದು ಮನಗಂಡು ಈ ರೀತಿ ನಡೆದುಕೊಂಡರೆಂದು ತಿಳಿದುಬರುತ್ತದೆ. ಇದಾದ ನಂತರ ರಾಜ ಒಡೆಯರ್ ತನ್ನ ಸೇನೆಯ ವಸ್ತುಸ್ಥಿತಿಯನ್ನರಿಯಲು ಸೇನಾ ಸಮೀಕ್ಷೆಯನ್ನು ಬೆಳುವಲದ ಸಮೀಪದ ಎತ್ತರವಾದ ಪ್ರದೇಶದಲ್ಲಿ ಕೈಗೊಂಡರು.[೩೯]

ಆನಂತರ ಕೆಸರೆಗೆ ಪೂರ್ವದಲ್ಲಿ ಬೀಡುಬಿಟ್ಟಿದ್ದ ತಿರುಮಲನ ನಾಯಕರುಗಳ ಮೇಲೆ ದಾಳಿಯನ್ನು ಮಾಡಲು ಸೂಚಿಸಿದರು. ಅದರಂತೆ ಬೆಟ್ಟದ ಚಾಮರಾಜ ಮತ್ತು ಚನ್ನರಾಜ ಒಡೆಯರು ತಿರುಮಲನ ಸಹಾಯಕ್ಕಿದ್ದ ಪಾಳೇಗಾರರುಗಳನ್ನು ಅವರವರ ಬಿಡಾರದಲ್ಲಿ ಸೋಲಿಸಿದುದಲ್ಲದೆ ಬ್ರಹ್ಮಪುರಿಯವರೆಗೆ ಬೆನ್ನಟ್ಟಿಕೊಂಡು ಹೋದರು.[೪೦] ಈ ಸೈನಿಕ ಕಾರ್ಯಾಚರಣೆಯಲ್ಲಿ ಹಳೇ ಪೈಕದ ಸೈನಿಕರು ಅಪಾರವಾಗಿ ಶ್ರಮಿಸಿದರು. ಈ ಆಕ್ರಮಣದ ತರುವಾಯ ಚಾಮರಾಜ ಮತ್ತು ಚನ್ನರಾಜ ಉತ್ತರದ ಕಡೆಗೆ ಪ್ರಯಾಣ ಬೆಳೆಸಿ ರಾಜ ಒಡೆಯರ್‌ನ್ನು ಸೇರಿಕೊಂಡರು ಮತ್ತು ತಿರುಮಲನ ವಿರುದ್ಧ ಸಜ್ಜಾದರು. ಈ ಎಲ್ಲ ಮಾಹಿತಿಯನ್ನು ಪಡೆದು ತಿರುಮಲನು ಯಾವುದೇ ಪ್ರತಿರೋಧವನ್ನು ತೋರದೆ ಕೆಸರೆಯ ದಾಳಿಯನ್ನು ಓಂಪಡೆದು ಶ್ರೀರಂಗಪಟ್ಟಣದ ಕೋಟೆಯನ್ನು ಸೇರಿಕೊಂಡನು.[೪೧]

ಈ ಎಲ್ಲ ಘಟನಾವಳಿಗಳನ್ನು ಸಮೀಕ್ಷಿಸಿದಾಗ ನಮಗೆ ಖಚಿತವಾಗುವುದೇನೆಂದರೆ ರಾಜ ಒಡೆಯರು, ತಿರುಮಲನು ಮುತ್ತಿದ ಕೆಸರೆಯ ಕೋಟೆಯನ್ನು ಬಿಡಿಸಿಕೊಳ್ಳುವುದಕ್ಕೆ ಬದಲಾಗಿ ತಿರುಮಲನೊಂದಿಗೆ ನೇರ ಸಂಘರ್ಷಕ್ಕೆ ಇಳಿಯದೆ ತಿರುಮಲನಿಗೆ ಸಹಕಾರಿಗಳಾಗಿದ್ದ ಅನೇಕ ಪಾಳೇಗಾರರನ್ನೂ ಅವರುಗಳು ಮೈಸೂರಿನ ನಾಲ್ಕು ದಿಕ್ಕುಗಳಲ್ಲಿಯೂ ಬೀಡುಬಿಟ್ಟಿದ್ದ ಸ್ಥಳಗಳಲ್ಲಿಯೇ ಸೋಲಿಸಿ, ತಿರುಮಲನಿಗೆ ಪಾಳೇಗಾರರ ಸಹಾಯ ದೊರೆಯದಂತೆ ಮಾಡಿದರು. ಅಲ್ಲದೆ ಅವರು ತಮ್ಮ ತಮ್ಮ ಬಿಡಾರಗಳಿಂದಲೇ ಹಿಂದೆ ಸರಿಯುವಂತೆ ಮಾಡಿದ್ದಲ್ಲದೆ ತಿರುಮಲನೂ ಕೆಸರೆ ಮುತ್ತಿಗೆಯನ್ನು ಓಂಪಡೆದು ಶ್ರೀರಂಗಪಟ್ಟಣವನ್ನು ಸೇರಿಕೊಳ್ಳುವಂತೆ ಮಾಡಿ ತಮ್ಮ ರಾಜ್ಯದ ಎಲ್ಲೆಗಳನ್ನು ಸಂರಕ್ಷಿಸಿಕೊಂಡರು. ಇಷ್ಟಲ್ಲದೆ ಈ ಯುದ್ಧದ ಕಾಲದಲ್ಲಿ ಅಪಾರವಾದ ಧನಕನಕ ಮತ್ತು ಯುದ್ಧ ಸಾಮಗ್ರಿಗಳು ಹಾಗೂ ಸೈನ್ಯದ ಅವಶ್ಯಕತೆಗಳಾದ ತರಬೇತಿಗೊಂಡ ಆನೆ, ಕುದುರೆ, ಎತ್ತುಗಳು ಮತ್ತು ಅಪಾರ ಯುದ್ಧಸಾಮಗ್ರಿ ರಾಜ ಒಡೆಯರ ವಶವಾದವು.

**ಕೆಸರೆ ಕದನದ ಪರಿಣಾಮಗಳು**

ಕೆಸರೆ ಯುದ್ಧದ ನಂತರ ರಾಜ ಒಡೆಯರು ಮತ್ತಷ್ಟು ಪ್ರಬಲರಾದರಲ್ಲದೆ ವಿಜಯನಗರ ಸಾಮ್ರಾಜ್ಯದ ರಾಜಪ್ರತಿನಿಧಿ ತಿರುಮಲನ ಆಡಳಿತಕ್ಕೆ ಒಳಪಟ್ಟ ಹಲವಾರು ಪ್ರದೇಶಗಳನ್ನು ಕೈವಶಮಾಡಿಕೊಳ್ಳುವ ಪ್ರಯತ್ನವನ್ನು ಮತ್ತೂ ಮುಂದುವರಿಸಿದರು. ಕೆಸರೆ ಯುದ್ಧವಾದ ಮರು ವರ್ಷವೇ ಅಂದರೆ ಕ್ರಿಸ್ತ ಶಕ ೧೫೯೭ರ ಹೇವಿಳಂಬಿ ಸಂವತ್ಸರದಲ್ಲಿ ಹರಿಹರಪುರವನ್ನು ಗೆದ್ದುಕೊಂಡರು.[೪೨] ರಾಜ ಒಡೆಯರು ೧೫೯೮ರಲ್ಲಿ ತಿರುಮಲನ ಆಸ್ಥಾನವನ್ನು ಸಂದರ್ಶಿಸಿದಂತೆ ತಿಳಿದುಬರುತ್ತದೆ. ಈ ಭೇಟಿಯ ಸಂದರ್ಭದಲ್ಲಿ ನೂರು ಖಂಡುಗ ಬತ್ತ ಬೆಳೆಯುವ ಭೂಮಿಯನ್ನು ತಿರುಮಲನಿಂದ ದಾನವಾಗಿ ಪಡೆದುಕೊಂಡಂತೆ ಶಾಸನವೊಂದು ಉಲ್ಲೇಖಿಸುತ್ತದೆ.[೪೩] ಕ್ರಿ.ಶ. ೧೫೯೮ರ ಅಕ್ಟೋಬರ್ ೨೪ರಲ್ಲಿ ತಿರುಮಲನು ರಾಜಬೊಕ್ಕಸಕ್ಕೆ ಸಲ್ಲಬೇಕಾದ ರಾಜಧನವನ್ನು ನೀಡುವಂತೆ ರಾಜ ಒಡೆಯರವರಿಗೆ ನಿರ್ದೇಶನ ಇತ್ತನು. ಆದರೆ ರಾಜ ಒಡೆಯರು ತಿರುಮಲನ ಅಧಿಕಾರಿಗಳು ತಮ್ಮ ಪ್ರಾಂತ್ಯದಲ್ಲಿ ನಡೆಸಿದ ದಾಳಿಗಳ ಉಪಟಳದಿಂದಾಗಿ ಹಾನಿಯುಂಟಾಗಿದ್ದು ಕಂದಾಯವನ್ನು ತೆರಲಾಗುವುದಿಲ್ಲವೆಂದು ತಿರುಮಲನಿಗೆ ತಿಳಿಸುತ್ತಾರೆ. ತಿರುಮಲನು ತನ್ನ ಅಧಿಕಾರಿಗಳಿಂದಾದ ದಾಳಿಗೆ ಬದಲಾಗಿ ರಂಗಸಮುದ್ರವನ್ನು ರಾಜ ಒಡೆಯರ್ ಬಿಟ್ಟುಕೊಡುತ್ತಾನೆ.[೪೪] ೧೫೯೮ರಿಂದ ಪ್ರಾರಂಭ ಮಾಡಿ ೧೬೦೭ರ ವರೆಗೆ ರಾಜ ಒಡೆಯರವರು ತಿರುಮಲನ ಆಡಳಿತಕ್ಕೊಳಪಟ್ಟ ಪ್ರದೇಶಗಳ ಮೇಲೆ ಸ್ವಲ್ಪ ಸ್ವಲ್ಪವಾಗಿ ತಮ್ಮ ಪ್ರಭುತ್ವವನ್ನು ಸಾಧಿಸಲಾರಂಭಿಸಿದರು. ಮಾರ್ಚ್ ೧೬೦೦ರಲ್ಲಿ ಅರಕೆರೆಯನ್ನು ಜಗದೇವರಾಯನ ಸೇನಾನಿ ಆದಟ್ಟರಾಯನಿಂದ ವಶಪಡಿಸಿಕೊಂಡರು.[೪೫] ೧೬೦೬ರಲ್ಲಿ ಸೋಸಲೆ, ೧೬೦೭ರಲ್ಲಿ ಬನ್ನೂರು ಮತ್ತು ತಲಕಾಡನ್ನೂ ವಶಪಡಿಸಿಕೊಂಡರು.[೪೬] ಈ ಎಲ್ಲ ಚಟುವಟಿಕೆಗಳು ತಿರುಮಲನನ್ನು ಮತ್ತೊಮ್ಮೆ ರಾಜ ಒಡೆಯರ್ ವಿರುದ್ಧ ಕಾರ್ಯಾಚರಣೆಗೆ ಇಳಿಯುವಂತೆ ಪ್ರೇರೇಪಿಸಿದವು. ೧೬೦೭ರ ಪ್ಲವಂಗ ನಾಮ ಸಂವತ್ಸರದಲ್ಲಿ ರಾಜ ಒಡೆಯರನ್ನು ಸಂಹಾರ ಮಾಡುವ ಮತ್ತೊಂದು ವಿಫಲ ಪ್ರಯತ್ನವೊಂದು ನಡೆಯಿತು.[೪೭] ರಾಜ ಒಡೆಯರ ಸಂಹಾರದ ಪೂರ್ವಯೋಜಿತ ಕಾರ್ಯವನ್ನು ನಡೆಸುವಂತೆ ಬೆಳಗೊಳದ ಸಿಂಗಪ್ಪ ಒಡೆಯರ್‌ನನ್ನು ನೇಮಿಸಲಾಯಿತು. ಸಿಂಗಪ್ಪ ಒಡೆಯನು ರಾಜ ಒಡೆಯರ್‌ನನ್ನು ಭೇಟಿ ಮಾಡಿದ ಸಂದರ್ಭವೊಂದರಲ್ಲಿ ಅವರ ಆಸ್ಥಾನದಲ್ಲಿಯೆ ಒರೆಯಿಂದ ಕತ್ತಿ ಹಿರಿದು ಇನ್ನೇನು ರಾಜ ಒಡೆಯರ್ ಮೇಲೆ ಆಕ್ರಮಣ ಮಾಡಬೇಕಿದ್ದ ಸಂದರ್ಭದಲ್ಲಿ ರಾಜ ಒಡೆಯರ್ ಸೋದರ ಸಂಬಂಧಿಯಾದ ಯಳಂದೂರಿನ ದೇವರಾಜ ಒಡೆಯನು ರಾಜ ಒಡೆಯರ್‌ನನ್ನು ರಕ್ಷಿಸಿದನು.[೪೮] ಸಿಂಗಪ್ಪ ಒಡೆಯನನ್ನು

ದೇವರಾಜನು ಅರಮನೆಯಲ್ಲಿಯೇ ಕೊಂದುಹಾಕಿದನು. ಇದಾದ ತರುವಾಯ ೧೬೦೮ರಲ್ಲಿ ರಾಜ ಒಡೆಯರ್ ಕನ್ನಂಬಾಡಿಯನ್ನು ಗೆದ್ದುಕೊಂಡರು.[೨೯] ಅಲ್ಲದೆ ಅದರ ಆಡಳಿತಕ್ಕೆ ಒಳಪಟ್ಟಿದ್ದ ಬೂಕನಕೆರೆಯನ್ನು ದೊಡ್ಡ ಹೆಬ್ಬಾರುವನಿಂದ ಗೆದ್ದುಕೊಂಡರು.[೩೦]

ಕೆಸರೆಯ ಯುದ್ಧದ ತರುವಾಯ ತಿರುಮಲನು ತನ್ನ ರಾಜಪ್ರತಿನಿಧಿಯ ಸ್ಥಾನದಲ್ಲಿ ಸಾಕಷ್ಟು ಅಧೀರನೂ, ಅಶಕ್ತನೂ ಆಗಿ ಮಾರ್ಪಟ್ಟನು. ಹೇಗೆಂದರೆ ತಿರುಮಲನು ತನ್ನ ಸ್ಥಾನಿಕರ ಸಲಹೆಯಂತೆ ರಾಜ ಒಡೆಯರನ್ನೂ ಕೊಲ್ಲುವ ಸಲುವಾಗಿ ಅವರ ಮೇಲೆ ಶ್ರೀರಂಗಪಟ್ಟಣದಲ್ಲಿ ಮತ್ತು ಮೈಸೂರಿನಲ್ಲಿ ಪ್ರಯತ್ನಿಸಿ ಆ ಎರಡೂ ಸಂದರ್ಭಗಳಲ್ಲಿ ತನ್ನ ಅಕೃತ್ಯದಿಂದ ಮೈಸೂರಿನೊಂದಿಗಿನ ಸಂಬಂಧವನ್ನು ಹದಗೆಡಿಸಿಕೊಂಡಿದ್ದನು. ಇದಲ್ಲದೆ ಕೆಸರೆಯ ಯುದ್ಧದ ಪೂರ್ವದ ಯುದ್ಧಗಳಲ್ಲಿ ಸೋತು ತನ್ನ ಸ್ಥಾನಿಕರ ಮುಂದೆಯೇ ಅವಮಾನಿತನಾಗಿದ್ದನು. ಇದೆಲ್ಲಕ್ಕಿಂತ ಕಳಶಪ್ರಾಯವಾಗಿ ರಾಜ ಒಡೆಯರು ಕೆಸರೆಯ ಯುದ್ಧದಲ್ಲಿ ತಿರುಮಲನನ್ನು ಸಶಕ್ತವಾಗಿ ಹಿಮ್ಮೆಟ್ಟಿಸಿ ಆತನ ಮತ್ತು ಆತನ ಅನುಯಾಯಿಗಳ ಸೇನೆಯ ಅಪಾರ ವಸ್ತುಗಳನ್ನು ಲೂಟಿ ಮಾಡಿ ಅವರನ್ನು ಅವರವರ ಸಂಸ್ಥಾನಗಳಿಗೆ ಹಿಂದಟ್ಟಿದರು. ರಾಜ ಒಡೆಯರ ಈ ಎಲ್ಲ ಸೈನಿಕ ಚಟುವಟಿಕೆಗಳು ತಿರುಮಲನನ್ನು ಅಶಕ್ತನೂ ಮತ್ತು ಅದಕ್ಷ ಆಡಳಿತಗಾರ ಎಂದು ರೂಪಿಸಿದವು. ಇದಲ್ಲದೆ ಕೆಸರೆಯ ಯುದ್ಧ ನಂತರ ತಿರುಮಲನು ರಾಜ ಒಡೆಯರೊಂದಿಗೆ ಮಾಡಿಕೊಂಡ ರಾಜತಾಂತ್ರಿಕ ಸಂಬಂಧಗಳು ಅವರಿಗೆ ಬಿಟ್ಟಿಕೊಟ್ಟ ಭೂ ಪ್ರದೇಶಗಳು ತಿರುಮಲನನ್ನು ಅಶಕ್ತನೆಂದು ಬಿಂಬಿಸುವಲ್ಲಿ ಮತ್ತಷ್ಟು ಯಶಸ್ವಿಯಾದವು.

ಈ ಹಿನ್ನೆಲೆಯಲ್ಲಿ ತಿರುಮಲನು ವಿಜಯನಗರ ಸಾಮ್ರಾಟನ ಸಹಾಯವನ್ನು ಪಡೆಯುವ ಹಂತಕ್ಕೆ ಬಂದುನಿಂತನು. ವಿಜಯನಗರ ಸಾಮ್ರಾಜ್ಯದ ರಾಜಪ್ರತಿನಿಧಿ ಕರ್ನಾಟಕ ಪ್ರದೇಶದ ಸರ್ವತಂತ್ರ ಸ್ವತಂತ್ರ ರಾಜ ತಿರುಮಲನು ಕೇವಲ ತನ್ನ ಸ್ಥಾನಿಕನ ವಿರುದ್ಧದ ಸೈನಿಕ ಕಾರ್ಯಾಚರಣೆಗಾಗಿ ಸಾಮ್ರಾಟನ ಸೇನೆಯ ಸಹಾಯವನ್ನು ಬಯಸಿದುದು ಆತನ ಅದಕ್ಷತೆಗೆ ಪ್ರಮುಖ ನಿದರ್ಶನವಾಯಿತು. ತನ್ನ ಚಿಕ್ಕಪ್ಪನಾದ ಒಂದನೆ ವೆಂಕಟನೊಂದಿಗೆ ತಿರುಮಲನು ಈ ಕಾರಣಕ್ಕಾಗಿ ಸಂಧಿಗೆ ಪ್ರಯತ್ನಪಟ್ಟನು.[೩೧] ಈ ಹಂತದಲ್ಲಿ ಹಲವಾರು ಪಾಳೇಗಾರರು ಈತನಿಗೆ ಸಹಕರಿಸಿದಂತೆ ತಿಳಿದುಬರುತ್ತದೆ. ಅವರೆಂದರೆ ಬೇಲೂರಿನ ಕೃಷ್ಣಪ್ಪ ನಾಯಕ, ಗ್ರಾಮದ ವೀರರಾಜಯ್ಯ, ಮೂಗೂರಿನ ಭೂಲೋಚನ ನಾಯಕ, ಯಳಂದೂರಿನ ಎರಡನೆ ರಾಮರಾಜನಾಯಕ ಮತ್ತು ಉಮ್ಮತ್ತೂರಿನ ಮಲ್ಲರಾಜಯ್ಯ. ಇವರುಗಳು ಕುಣಿಗಲ್‌ನ ಸಮೀಪ ಒಕ್ಕೂಟವನ್ನು ರಚಿಸಿಕೊಂಡು ಬೀಡು ಬಿಟ್ಟರು.[೩೨]

ಪ್ರಾಯಶಃ ಈ ಒಕ್ಕೂಟ ತಿರುಮಲನ ಸಹಾಯಕ್ಕೆ ಬಂದಿದೆ ಎಂದು ಗ್ರಹಿಸಿದ ರಾಜ ಒಡೆಯರು ಮೈಸೂರಿನಿಂದ ಸಂಸ್ಥಾನ ರಕ್ಷಣೆಗೆ ಬೇಕಾದ ಎಲ್ಲ ಮಾರ್ಗೋಪಾಯಗಳನ್ನು ಚಿಂತಿಸಿ ತಮ್ಮ ಸಹೋದ್ಯೋಗಿಗಳ ಮತ್ತು ಸ್ಥಾನಿಕರ ಸಲಹೆಯಂತೆ ಅವರನ್ನು ಎದುರಿಸುವ ಎಲ್ಲ ಏರ್ಪಾಟುಗಳನ್ನು ಮಾಡಿಕೊಂಡರು.[೩೩] ಅದರಂತೆ ಮೈಸೂರಿನ ಸೇನೆ ಬೇಲೂರು ಮತ್ತು ಅದರ ಉಪಗ್ರಾಮಗಳನ್ನು ಮುತ್ತಿ ಆ ಪ್ರದೇಶಗಳನ್ನು ವಶಪಡಿಸಿಕೊಂಡಿತು.[೩೪] ಇದೇ ಕಾಲದಲ್ಲಿ ತಿರುಮಲನ ಪ್ರಾರ್ಥನೆಯನ್ನು ವೆಂಕಟನು ತಿರಸ್ಕರಿಸಿದನು. ತಿರುಮಲನು ಶ್ರೀರಂಗಪಟ್ಟಣಕ್ಕೆ ಬರುವ ಮಾರ್ಗದಲ್ಲಿ ಹೊಳೆನರಸೀಪುರದಲ್ಲಿ ತನ್ನ ದಳವಾಯಿ ಭದ್ರಯ್ಯನೊಂದಿಗೆ ಇದ್ದಾಗ ನರಸೀಪುರದ ನಾಯಕ ಲಕ್ಷ್ಮಪ್ಪನಿಂದ ಸೆರೆ ಒಡಿಯಲ್ಪಟ್ಟನು.[೩೫] ಈ ಸಂದರ್ಭದಲ್ಲಿ ತಿರುಮಲನು ಪರಿಸ್ಥಿತಿಯನ್ನು ತಿಳಿಗೊಳಿಸಲು ವೆಂಕಟನ ಸಹಾಯವನ್ನು ಕೇಳದೆ ಆತನ ಸ್ಥಾನೀಕರಾದ ರಾಜ ಒಡೆಯರ ಸಹಾಯವನ್ನು ಅಪೇಕ್ಷಿಸಿದನು.[೩೬] ಇದಕ್ಕೆ ಓಗೊಟ್ಟ ರಾಜ ಒಡೆಯರು ಹೊಳೆನರಸೀಪುರದ ವಿರುದ್ಧ ಸೈನಿಕ ಕಾರ್ಯಾಚರಣೆ ನಡೆಸಿ ಲಕ್ಷ್ಮಪ್ಪ ನಾಯಕನನ್ನು ಯುದ್ಧದಲ್ಲಿ ಸೋಲಿಸಿ ಹೊಳೆನರಸೀಪುರವನ್ನು ಗೆದ್ದುಕೊಂಡರಲ್ಲದೆ ತಿರುಮಲ ಮತ್ತು ಆತನ ದಳವಾಯಿ ಭದ್ರಯ್ಯ ಹಾಗೂ ಇತರರನ್ನು ರಕ್ಷಿಸಿದರು.[೩೭] ರಾಜ ಒಡೆಯರ ಈ ಸೈನಿಕ ಕಾರ್ಯಾಚರಣೆ ಅವರನ್ನು ವಿಜಯನಗರ ಸಾಮ್ರಾಟನಿಗೆ ಅತ್ಯಂತ ಸಮೀಪದ ವ್ಯಕ್ತಿಯನ್ನಾಗಿ ಪರಿವರ್ತಿಸಿತು. ಇದಕ್ಕೆ ಪ್ರತಿಫಲವಾಗಿ ವೆಂಕಟನು ರಾಜ ಒಡೆಯರ್‌ಗೆ ಉಮ್ಮತ್ತೂರು ಸೀಮೆಯ ತಾಯೂರು ನಾಡಿನ ಆಲ್ದೂರು ಮತ್ತು ನವಿಲೂರು ಗ್ರಾಮಗಳನ್ನು ಉಂಬಳಿಯಾಗಿ ಬಿಟ್ಟುಕೊಟ್ಟನು.[೩೮] ಅಲ್ಲದೆ ಬನ್ನೂರಿಗೆ ಸೇರಿದ ಕೊಣಗಹಳ್ಳಿ ಮತ್ತು ಇತರ ಗ್ರಾಮಗಳನ್ನು ಉಮ್ಮತ್ತೂರಿನ ನಂಜರಾಜಯ್ಯನಿಗೆ ಬಿಟ್ಟುಕೊಟ್ಟನು.[೩೯]

ಈ ಎಲ್ಲ ಸೈನಿಕ ಚಟುವಟಿಕೆಗಳು ಶ್ರೀರಂಗಪಟ್ಟಣದಲ್ಲಿ ವಿಜಯನಗರ ಸಾಮ್ರಾಜ್ಯದ ರಾಜ ಪ್ರತಿನಿಧಿಯಾಗಿದ್ದ ತಿರುಮಲನ ಅಸ್ತಿತ್ವವನ್ನು ಅತ್ಯಂತ ಹೀನಾಯ ಸ್ಥಿತಿಗೆ ಕೊಂಡೊಯ್ದವು. ಚಿಕ್ಕದೇವರಾಜ ವಂಶಾವಳಿಯು ಈ ಘಟನೆಯ ನಂತರದ ತಿರುಮಲನ ಆಡಳಿತ ಮತ್ತು ವಾಸದ ವಿವರಗಳನ್ನು ಅತಿ ಸೂಕ್ಷ್ಮವಾಗಿ ವಿವರಿಸುತ್ತದೆ.[೬೦] ರಾಜ ಒಡೆಯರ ವಿರುದ್ಧವಾಗಿ ತಿರುಮಲನು ವೆಂಕಟನ ಸಹಾಯವನ್ನು ಅಪೇಕ್ಷಿಸಿದನು. ಆದರೆ ಅದೇ ಕಾಲಘಟ್ಟದಲ್ಲಿ ತಿರುಮಲನು ರಾಜ ಒಡೆಯರ ಸಹಾಯವನ್ನು ಪಡೆದು ಆತನಿಂದ ಉಪಕೃತನಾಗಿ ರಾಜ ಒಡೆಯರಿಗೆ ಕೇಡು ಬಯಸದಂತಹ ಸಂದಿಗ್ಧ ಸ್ಥಿತಿಯನ್ನು ನಿರ್ಮಾಣ ಮಾಡಿಕೊಂಡನು. ತಿರುಮಲನ ಅಶಕ್ತತೆಯನ್ನು ಮನಗಂಡ ವಿಜಯನಗರದ ಸಾಮ್ರಾಜ್ಯದ ಸಾಮ್ರಾಟ ವೆಂಕಟನು ರಾಜ ಒಡೆಯರಿಗೆ ಅಭಯ ಹಸ್ತ ನಿರೂಪವನ್ನು ನೀಡಿದಂತೆ ಮೈಸೂರು ದೊರೆಗಳ ಪೂರ್ವೋತ್ತರ ಹಸ್ತಪ್ರತಿಯನ್ನು ಆಧರಿಸಿ ವಿಲ್ಕ್ಸ್ ಉಲ್ಲೇಖಿಸುತ್ತಾರೆ.[೬೧] ಈ ನಿರೂಪದ ಪ್ರಸ್ತಾಪವನ್ನು ೧೬೨೨ರ ಒಂದು ಶಾಸನ ಮತ್ತೆ ಉಲ್ಲೇಖಿಸುತ್ತದೆ.[೬೨] ತಿರುಮಲನು ತನ್ನ ರಾಜಧಾನಿ ಶ್ರೀರಂಗಪಟ್ಟಣದಲ್ಲಿ ಅತ್ಯಂತ ಹೀನಾಯ ಬದುಕನ್ನು ಬದುಕುತ್ತಿದ್ದನೆಂದು ತನ್ನ ಸೇನೆಯ ಆನೆ ಕುದುರೆಗಳಿಗೆ ಆಹಾರವಿಲ್ಲದೆ ಸೈನಿಕರ ಭತ್ಯೆಯನ್ನು ಭರಿಸಲಾಗದೆ ತನ್ನ ದಿನನಿತ್ಯದ ನಿರ್ವಹಣೆಗೂ ಬ್ರಹ್ಮಪುರಿಯ ಆದಾಯವನ್ನು ಅವಲಂಬಿಸಿದ್ದನೆಂದು ಚಿಕ್ಕದೇವರಾಜ ವಂಶಾವಳಿ ಹೇಳುತ್ತದೆ.[೬೩] ಇದನ್ನು ಗಮನಿಸಿದಾಗ ಮೈಸೂರು ಸೇನೆ ಪ್ರಾಯಶಃ ಶ್ರೀರಂಗಪಟ್ಟಣವನ್ನು ಅಘೋಷಿತ ಮುತ್ತಿಗೆಗೆ ಒಳಪಡಿಸಿದುದು ಸತ್ಯವೆನಿಸುತ್ತದೆ.[೬೪] ಈ ಹಂತದಲ್ಲಿ ತಿರುಮಲನಿಗೆ ಶ್ರೀರಂಗಪಟ್ಟಣವನ್ನು ತೊರೆದು ಹೋಗುವ ದಾರಿಯ ವಿನಃ ಮತ್ತಾವ ದಾರಿಯೂ ಇಲ್ಲದಂತಾಗಿತ್ತು. ಆದರೂ ಚಿಕ್ಕದೇವರಾಜ ವಂಶಾವಳಿ ಕೃತಿಯನ್ನು ಆಧರಿಸಿ ಹಯವದನರಾಯರು, ತಿರುಮಲನು ಕೆಸರೆಯ ಯುದ್ಧದ ನಂತರ ಶ್ರೀರಂಗಪಟ್ಟಣ ಪ್ರಾಂತ್ಯವನ್ನು ಅತ್ಯಂತ ದರ್ಪದಿಂದ ವಿಚಕ್ಷಣೆಯಿಂದ ಆಳುತ್ತಿದ್ದನೆಂದು ಹೇಳುತ್ತಾ ಈ ಉಲ್ಲೇಖ ಕೇವಲ ಪಾರಂಪರಿಕ ಹೇಳಿಕೆ ಎಂಬ ಅಭಿಪ್ರಾಯದೊಂದಿಗೆ ಈ ಸಂಗತಿಯನ್ನು ತಳ್ಳಿಹಾಕುತ್ತಾರೆ.[೬೫]

**ಶ್ರೀರಂಗಪಟ್ಟಣದ ಸ್ವಾಧೀನದ ಹಿನ್ನೆಲೆ**

ಶ್ರೀರಂಗಪಟ್ಟಣವನ್ನು ರಾಜ ಒಡೆಯರು ಸ್ವಾಧೀನ ಪಡಿಸಿಕೊಳ್ಳಲು ಸಹಾಯಕವಾದ ಅಂದಿನ ರಾಜಕೀಯ ಪರಿಸ್ಥಿತಿಯನ್ನು ಇಲ್ಲಿ ವಿವೇಚಿಸುವುದು ಅವಶ್ಯಕವೆನಿಸುತ್ತದೆ. ವಿಜಯನಗರ ಸಾಮ್ರಾಟ ವೆಂಕಟನು ತನ್ನ ದಾಯಾದಿ ಶ್ರೀರಂಗಪಟ್ಟಣದ ರಾಜಪ್ರತಿನಿಧಿ ತಿರುಮಲನೊಂದಿಗೆ ಸೌಹಾರ್ದ ಸಂಬಂಧವನ್ನು ಹೊಂದಿರಲಿಲ್ಲ.[೬೬] ಇದಕ್ಕೆ ಕಾರಣವನ್ನು ಹುಡುಕುವುದಾದರೆ ತಿರುಮಲನು ಮಧುರೆಯ ದಾಳಿಯ ಕಾಲದಲ್ಲಿ ಸಾಮ್ರಾಟ ವೆಂಕಟನಿಗೆ ಸರಿಯಾಗಿ ಸಹಕರಿಸದೇ ಇದ್ದುದು ಅಥವಾ ಅರೆ ಐತಿಹಾಸಿಕ ಕೃತಿಗಳಲ್ಲಿ ಉಲ್ಲೇಖಿತವಾಗಿರುವಂತೆ ತಿರುಮಲನು ಮಧುರೆಯ ರಾಜನಿಂದ ಹಣ ಪಡೆದು ವೆಂಕಟನ ಅಪೇಕ್ಷೆಗೆ ವಿರುದ್ಧವಾಗಿ ಮಧುರೆಯ ನಾಯಕರೊಂದಿಗೆ ಕೈ ಜೋಡಿಸಿರುವ ಸಾಧ್ಯತೆಗಳು. ಈ ಸಾಧ್ಯಾಸಾಧ್ಯತೆಗಳು ಏನೇ ಇದ್ದರೂ ಸಾಮ್ರಾಟ ವೆಂಕಟ ಮತ್ತು ಶ್ರೀರಂಗಪಟ್ಟಣದ ರಾಜ್ಯಪಾಲ ತಿರುಮಲನ ನಡುವಿನ ಸಂಬಂಧ ಆ ಕಾಲಕ್ಕಾಗಲೇ ಸಾಕಷ್ಟು ಹಳಸಿದ್ದಿತು. ವೆಂಕಟನು, ತಿರುಮಲನ ಸಾಲು ಸಾಲು ಸೋಲುಗಳನ್ನು ಗಮನಿಸಿ ಹೊಳೆನರಸೀಪುರದ ಘಟನೆಯ ನಂತರ ರಾಜ ಒಡೆಯರಿಗೆ ಉಂಬಳಿ ನೀಡಿದುದು ಎಲ್ಲೋ ಒಂದು ಕಡೆ ಇವರಿಬ್ಬರ ಸಂಬಂಧ ಕ್ಷೀಣಿಸಿದುದನ್ನು ಅತ್ಯಂತ ಸೂಕ್ಷ್ಮವಾಗಿ ಪ್ರತಿನಿಧಿಸುತ್ತದೆ. ರಾಜ ಒಡೆಯರು ಮತ್ತು ತಿರುಮಲನ ಸಂಬಂಧ ಕೂಡ ಸಂಪೂರ್ಣವಾಗಿ ಉತ್ತಮವಾಗಿತ್ತೆಂದು ಹೇಳಲಾಗುವುದಿಲ್ಲ. ಕೆಸರೆ ಯುದ್ಧಕ್ಕೆ ಪೂರ್ವದಲ್ಲಿ ಒಂದು ಮಟ್ಟಿನ ಕೊಡುಕೊಳ್ಳುವ ವಾತಾವರಣವಿದ್ದಿತಾದರೂ ಕೆಸರೆಯ ಯುದ್ಧದಲ್ಲಿ ಪರಸ್ಪರ ವಿರೋಧಿಗಳಾಗಿದ್ದರು. ಕೆಸರೆಯ ಯುದ್ಧದ ತರುವಾಯ ಸಹ ರಾಜ ಒಡೆಯರು ತಿರುಮಲ ಸ್ನೇಹವನ್ನು ಬಯಸಿದರಾದರೂ ತಿರುಮಲನ ಕಾರ್ಯ ಚಟುವಟಿಕೆಗಳು ಅದಕ್ಕೆ ಪೂರಕವಾಗಿರಲಿಲ್ಲ. ಆದರೂ ತಿರುಮಲನು ರಾಜ ಒಡೆಯರಿಗೆ ಕೆಲ ಪ್ರದೇಶಗಳನ್ನು ಮಾನ್ಯ ಮಾಡಿಕೊಂಟ್ಟುದುದನ್ನು ಈ ಹಿಂದೆಯೇ ವಿವರಿಸಲಾಗಿದೆ. ಅಂದ ಮೇಲೆ ಸಾಮ್ರಾಟ ವೆಂಕಟನ ಅವಕೃಪೆಗೆ ಒಳಗಾಗಿದ್ದ ತಿರುಮಲನ ವಿರೋಧಿಯಾದ ರಾಜ ಒಡೆಯರು ವಿಜಯನಗರದ ಆಸ್ಥಾನದಲ್ಲಿ ಸಾಕಷ್ಟು ಉತ್ತಮವಾಗಿ ಪ್ರತಿನಿಧಿಸಲ್ಪಟ್ಟಿದ್ದರು. ಇದು ಶ್ರೀರಂಗಪಟ್ಟಣದ ಸಾಧನೆಗೆ ರಂಗಮಂಚವನ್ನು ಅಣಿಗೊಳಿಸಿತು.

**ಶ್ರೀರಂಗಪಟ್ಟಣದ ಸಾಧನೆ**

ರಾಜ ಒಡೆಯರ್ ಶ್ರೀರಂಗಪಟ್ಟಣವನ್ನು ಗೆದ್ದುಕೊಂಡ ಬಗೆಗೆ ಮೂರು ಬಗೆಯ ಅಭಿಪ್ರಾಯಗಳನ್ನು ಮೈಸೂರು ಸಂಸ್ಥಾನದ ಇತಿಹಾಸದ ಬಗೆಗಿನ ಐತಿಹಾಸಿಕ ಕೃತಿಗಳು ದಾಖಲಿಸುತ್ತವೆ. ವಿಶೇಷವಾಗಿ ಕಂಠೀರವ ನರಸರಾಜ ವಿಜಯ,[೬೭] ಚಿಕ್ಕದೇವರಾಜ ವಂಶಾವಳಿ[೬೮] ಮತ್ತು ಚಿಕ್ಕದೇವರಾಜ ವಿಜಯ[೬೯] ಕೃತಿಗಳು ಕೆಸರೆಯ ಯುದ್ಧದನಂತರ ಶ್ರೀರಂಗಪಟ್ಟಣದ ಸ್ವಾಧೀನದವರೆಗಿನ ಯಾವ ಘಟನೆಗಳನ್ನು ಚಿತ್ರಿಸದೆ ಏಕಾಏಕಿ ಶ್ರೀರಂಗಪಟ್ಟಣವನ್ನು ರಾಜ ಒಡೆಯರು ಸಾಧಿಸಿದರೆಂದು ತಿಳಿಸುತ್ತವೆ. ಮುಂದುವರಿದು ಈ ಹಂತದಲ್ಲಿ ರಾಜ ಒಡೆಯರ ಸೈನಿಕ ಕಾರ್ಯಾಚರಣೆ ಯಾವ ಮಟ್ಟವನ್ನು ತಲುಪಿತ್ತೆಂದರೆ, ತಿರುಮಲನು ತನ್ನ ದಿನನಿತ್ಯದ ಖರ್ಚುವೆಚ್ಚಗಳಿಗೆ ಸಹ ಬ್ರಹ್ಮಪುರಿಯ ಆದಾಯದ ಮೇಲೆ ಅವಲಂಬಿಸಿದ್ದನೆಂದು ಹಾಗೂ ಈ ಪರಿಸ್ಥಿತಿಯಲ್ಲಿ ದಾರಿ ಕಾಣದ ತಿರುಮಲನು ಮಾಲಂಗಿಗೆ ಓಡಿ ಹೋದನು.[೭೦] ಆನಂತರ ರಾಜ ಒಡೆಯರು ಶ್ರೀರಂಗಪಟ್ಟಣವನ್ನು ಸ್ವಾಧೀನ ಮಾಡಿಕೊಂಡರೆಂದೂ ದಾಖಲಿಸುತ್ತವೆ.[೭೧]

ಮಹಿಷೂರ ಶ್ರೀ ಮನ್ಮಹಾರಾಜ ಚಾಮರಾಜ ಒಡೆಯರ ವಂಶರತ್ನಾಕರ[೭೨] ಮತ್ತು ಶ್ರೀ ಮನ್ಮಹಾರಾಜರವರ ವಂಶಾವಳಿ[೭೩] ಕೃತಿಗಳು ತಿರುಮಲನು ರಾಜ ಒಡೆಯರ್‌ಗೆ ರಾಜಧಾನಿಯನ್ನೂ ಮತ್ತು ಸಿಂಹಾಸನವನ್ನೂ ತ್ಯಾಗ ಮಾಡಿದನೆಂದೂ ಆ ಸಂದರ್ಭದಲ್ಲಿ ತಿರುಮಲನು ಬೆನ್ನುಫಣಿ ರೋಗದಿಂದ ನರಳುತ್ತಿದ್ದುದರಿಂದ ಭವರೋಗ ವೈದ್ಯನಾದ ತಲಕಾಡಿನ ವೈದ್ಯನಾಥೇಶ್ವರನಿಗೆ ಸೇವೆ ಸಲ್ಲಿಸುವ ಸಲುವಾಗಿ ರಾಜ ಒಡೆಯರಿಗೆ ತನ್ನ ಸಂಪತ್ತು ಧನಕನಕ, ಸಿಂಹಾಸನವನ್ನೂ ನೀಡಿ ತಲಕಾಡಿಗೆ ತೆರಳಿದನೆಂದೂ ದಾಖಲಿಸುತ್ತವೆ. ಮೈಸೂರು ದೊರೆಗಳ ಪೂರ್ವೋತ್ತರ ಕೃತಿಯು ಮೂರನೆ ವಾದವನ್ನು ದಾಖಲಿಸುತ್ತದೆ. ಅದೇನೆಂದರೆ ವಿಜಯನಗರದ ಸಾಮ್ರಾಟ ವೆಂಕಟನು ರಾಜ ಒಡೆಯರಿಗೆ ಅಭಯ ಹಸ್ತ ನಿರೂಪವನ್ನು ಕಳುಹಿಸಿ ಶ್ರೀರಂಗಪಟ್ಟಣದ ಆಡಳಿತವನ್ನು ವಹಿಸಿಕೊಳ್ಳುವಂತೆ ನೆರವಾದನೆಂದೂ ದಾಖಲಿಸುತ್ತದೆ.[೭೪] ಈ ಸಂದರ್ಭದಲ್ಲಿ ಈ ಮೂರು ವಾದಗಳ ಸತ್ಯಾಸತ್ಯತೆಯನ್ನು ತಿಳಿಯಲು ಪ್ರಯತ್ನಿಸುವುದು ಪ್ರಮುಖವಾಗುತ್ತದೆ. ಎರಡನೆ ಮತ್ತು ಮೂರನೆ ಸಿದ್ಧಾಂತವನ್ನು ಹುಟ್ಟುಹಾಕಿದ ಐತಿಹಾಸಿಕ ಕೃತಿಗಳಾವುವೂ ರಾಜ ಒಡೆಯರ ಕಾಲಕ್ಕೆ ಸಮೀಪವಾದವುಗಳಲ್ಲ. ಇವುಗಳೆಲ್ಲವೂ ಶ್ರೀರಂಗಪಟ್ಟಣದ ಸ್ವಾಧೀನದ ಎರಡು ಶತಮಾನಗಳ ತರುವಾಯ ರಚಿಸಲ್ಪಟ್ಟವು. ಅಲ್ಲವೆ ಚಿಕ್ಕದೇವರಾಜ ವಂಶಾವಳಿಯನ್ನು ಬರೆದ ತಿರುಮಲಾರ್ಯನು, ರಾಜ ಒಡೆಯರ ಸಮಕಾಲೀನನು. ಕಂಠೀರವ ನರಸರಾಜ ವಿಜಯ ಕೃತಿಕಾರನಾದ ಗೋವಿಂದ ವೈದ್ಯನು ರಾಜ ಒಡೆಯರ ಸಮಕಾಲೀನನು. ಅಲ್ಲದೆ ಕಂಠೀರವ ನರಸರಾಜ ವಿಜಯದ ಕೃತಿಕಾರನಾದ ಗೋವಿಂದ ವೈದ್ಯನು ರಾಜ ಒಡೆಯರ ಕಾಲದ ಬಗೆಗೆ ಆಳವಾದ ಜ್ಞಾನವನ್ನು ಹೊಂದಿದ್ದ ವ್ಯಕ್ತಿ. ಕೇವಲ ರಾಜ ಒಡೆಯರ ನಿಧನದ ಮೂವತ್ತು ವರ್ಷಗಳಲ್ಲಿ ಕೃತಿ ರಚಿಸಿದವನು. ಅಂದ ಮೇಲೆ ರಾಜ ಒಡೆಯರ್ ಕಾಲದಲ್ಲಿ ಆದ ಆಗು ಹೋಗುಗಳ ಬಗೆಗೆ ತನ್ನ ನೇರವಾದ ಜ್ಞಾನ ಹೊಂದಿದ ಮತ್ತು ಆತನೇ ಅದಕ್ಕೆ ಸಾಕ್ಷಿಯಾಗಿದ್ದಿರಬಹುದು. ಇದಲ್ಲದೆ ಗೋವಿಂದ ವೈದ್ಯನು ಈ ಕೃತಿ ರಚಿಸುವ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿದ್ದ ಅಂದಿನ ವಿಷಯಗಳನ್ನು ಸಂಗ್ರಹಿಸಿಯೇ ರಚಿಸಿರುವನೆಂದು ನಿಖರವಾಗಿ ಹೇಳಲು ಕೃತಿ ಉದ್ದಕ್ಕೂ ಸಾಕಷ್ಟು ಪುರಾವೆಗಳಿವೆ. ಇವುಗಳೆಲ್ಲದರ ಆಧಾರದ ಮೇಲೆ ನಿರ್ಧರಿಸುವುದಾದರೆ ಕೆಸರೆ ಯುದ್ಧದ ನಂತರ ತಿರುಮಲನು ಅನುಭವಿಸಿದ ಸಾಲು ಸಾಲು ಸೈನಿಕ ಸೋಲುಗಳು ಆತನನ್ನು ಅಧೀರನಾಗಿಸಿದವು. ಅಷ್ಟೇ ಅಲ್ಲದೆ ರಾಜ ಒಡೆಯರು ಮತ್ತು ಆತನ ಸೋದರರು ಶ್ರೀರಂಗಪಟ್ಟಣದ ನಾಲ್ಕು ದಿಕ್ಕುಗಳಲ್ಲಿ ತಿರುಮಲನಿಗೆ ಸಹಕರಿಸುತ್ತಿದ್ದ ಮತ್ತು ಸಹಾಯ ಹಸ್ತಚಾಚುತ್ತಿದ್ದ ಎಲ್ಲ ಪಾಳೇಗಾರರನ್ನು ಸೋಲಿಸಿ ರಾಜಧಾನಿಗೆ ರವಾನೆಯಾಗುತ್ತಿದ್ದ ಎಲ್ಲ ಸವಲತ್ತುಗಳನ್ನು ತಡೆಹಿಡಿದರು.

ಹೀಗಾಗಿ ತಿರುಮಲನು ಅಘೋಷಿತ ಶ್ರೀರಂಗಪಟ್ಟಣದ ಮುತ್ತಿಗೆಯಿಂದ ಹೊರಬರಲು ಶ್ರೀರಂಗಪಟ್ಟಣವನ್ನು ತ್ಯಜಿಸಿ ಹೋದನೆಂದೂ, ಆನಂತರ ರಾಜ ಒಡೆಯರು ಶ್ರೀರಂಗಪಟ್ಟಣವನ್ನು ಸಾಧಿಸಿದರೆಂದು ಹೇಳಬಹುದು.

ಅ. ಸತ್ಯನಾರಾಯಣರವರು[೭೫] ೧೬೧೦ರಲ್ಲಿ ರಾಜ ಒಡೆಯರ್ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡ ಸಂದರ್ಭದಲ್ಲಿ ತಿರುಮಲರಿಗೆ ಬೆನ್ನುಫಣಿ ಖಾಯಿಲೆ ಇರಲಿಲ್ಲವೆಂದೂ ಮತ್ತು ಆ ಖಾಯಿಲೆಯಿಂದ ಆತನು ಸಾಯಲಿಲ್ಲವೆಂದೂ ಇದಕ್ಕೆ ಬದಲಾಗಿ ವಿಜಯನಗರ ಸಾಮ್ರಾಟ ಒಂದನೆ ಶ್ರೀರಂಗನು ಬೆನ್ನು ಫಣಿ ಖಾಯಿಲೆಯಿಂದ ಶ್ರೀರಂಗಪಟ್ಟಣದಲ್ಲಿ ಮೃತನಾದನೆಂದು

ದೇವಚಂದ್ರನ ರಾಜಾವಳಿ ಕಥಾಸಾರದ ಆಧಾರದ ಮೇಲೆ ನಿರೂಪಿಸುವ ಪ್ರಯತ್ನ ಮಾಡಿದ್ದಾರೆ. ಮುಂದುವರಿದು ವೆಂಕಟ ಮತ್ತು ತಿರುಮಲರಿಬ್ಬರೂ ಹೊಂದಿದ್ದ ಅಸಮಾಧಾನ ಮತ್ತು ಮನಸ್ತಾಪದ ಆಧಾರದ ಮೇಲೆ ೧೮೦೦ರಲ್ಲಿ ರಚಿತವಾದ ಹಸ್ತಪ್ರತಿ ಆಧಾರದ ಮೇಲೆ ಇವರು ರಾಜ ನಿರೂಪವನ್ನು ಬೆಂಬಲಿಸುತ್ತಾರೆ.[೭೬]

ವಿಲ್ಕ್ಸನು[೭೭] ಮೈಸೂರು ದೊರೆಗಳ ಪೂರ್ವೋತ್ತರ ವಿವರ ಆಧಾರದ ಮೇಲೆ ವೆಂಕಟಪತಿಯು ತಿರುಮಲನಿಗೆ ನಿವೃತ್ತಿಯನ್ನು ಪಡೆಯುವಂತೆ ಒತ್ತಾಯಿಸಿದನೆಂದೂ ದಾಖಲಿಸಿದ್ದಾರೆ. ಇದನ್ನೇ ಅವರು ರಾಜ ನಿರೂಪವೆಂದೂ ಅರ್ಥೈಸಿ ಭಾವಿಸಿರುವಂತೆ ಆತನ ಬರವಣಿಗೆಯಲ್ಲಿ ಕಂಡುಬರುತ್ತದೆ.[೭೮] ಈ ಎರಡೂ ವಾದಗಳು ಅಂದರೆ ತಿರುಮಲರು ಶ್ರೀರಂಗಪಟ್ಟಣವನ್ನು ರಾಜ ಒಡೆಯರಿಗೆ ಬಿಟ್ಟುಕೊಡುವಷ್ಟು ವೆಂಕಟನು ತಿರುಮಲನಿಗೆ ನಿವೃತ್ತಿಯಾಗುವಂತೆ ಆಜ್ಞೆ ನೀಡುವಷ್ಟರ ಮಟ್ಟಿಗೆ ಅವರುಗಳ ಸಂಬಂಧ ಉತ್ತಮವಾಗಿರಲಿಲ್ಲ. ಆದರೆ ತನ್ನ ದಾಯಾದಿಯನ್ನು ರಾಜಭ್ರಷ್ಟನನ್ನಾಗಿ ಮಾಡುವಷ್ಟು ಆತ ನಿಷ್ಕರುಣಿಯಾಗಿದ್ದಿರಲಾರ. ಕಾರಣ ಆತನು ಅಂದಿನ ರಾಜಕೀಯ ಪರಿಸ್ಥಿತಿಯು ಕೈಗೊಂಬೆಯಾಗಿ ಸ್ಥಾನಿಕರ ಸಲಹೆ ಸೂಚನೆಯಂತೆ ಕಾರ್ಯನಿರ್ವಹಿಸಬೇಕಾಗಿದ್ದಿತು. ರಾಜ ಒಡೆಯರು ಮತ್ತು ತಿರುಮಲನ ನಡುವಿನ ಸಂಬಂಧ ಸಹ ಸಿಂಹಾಸನವನ್ನು ದಾನಮಾಡುವಷ್ಟು ಉತ್ತಮವಾಗಿದ್ದಂತೆ ಸಮಕಾಲೀನ ಕೃತಿಗಳು ಹೇಳುವುದಿಲ್ಲ. ಇವುಗಳೆಲ್ಲದರ ಹಿನ್ನೆಲೆಯಲ್ಲಿ ರಾಜ ಒಡೆಯರು ಶ್ರೀರಂಗಪಟ್ಟಣವನ್ನು ಗೆದ್ದುಕೊಂಡುದುದನ್ನು ಅನಂತರದ ದಿನಗಳಲ್ಲಿ ರಾಜ ಒಡೆಯರ ಸಾಧನೆಯನ್ನು ಒಪ್ಪಿಕೊಂಡು ಚಕ್ರವರ್ತಿಯು ಒಪ್ಪಿ ಆತನನ್ನು ಸಾಮಂತನೆಂದು ಭಾವಿಸಿ ಅಭಯಹಸ್ತ ನಿರೂಪವನ್ನು ಕಳುಹಿಸಿರುವ ಸಾಧ್ಯತೆಯನ್ನು ಮಾತ್ರ ಒಪ್ಪಬಹುದು. ಈ ನಿರೂಪವನ್ನು ರಾಜ ಒಡೆಯರ ನಂತರದ ಒಂದು ಶಾಸನ ಉಲ್ಲೇಖಿಸುತ್ತದೆ.[೭೯] ಈ ಶಾಸನದ ಕಾಲವನ್ನು ೧೬೧೨ ಎಂದು ಗುರುತಿಸಿದ್ದರೂ ಈ ಶಾಸನದ ವಿಷಯ ಉಲ್ಲೇಖವಾಗಿರುವುದು ೧೬೨೨ರಲ್ಲಿ. ಹಾಗಾಗಿ ರಾಜ ಒಡೆಯರು ಶ್ರೀರಂಗಪಟ್ಟಣವನ್ನು ಕೆಸರೆಯುದ್ಧದ ತರುವಾಯ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಒಗ್ಗೂಡಿಸಿಕೊಂಡು ವಿಜಯನಗರದ ರಾಜ ಪ್ರತಿನಿಧಿ ತಿರುಮಲನ ವಿರುದ್ಧ ಆತನಿಗೆ ಸಹಕಾರಿಯಾಗಿದ್ದ ಒಂದೊಂದೇ ಪಾಳೆಪಟ್ಟನ್ನು ಜಯಿಸಿ ಆತನನ್ನು ಅಸಹಾಯಕನನ್ನಾಗಿಸಿ ಗತ್ಯಂತರವಿಲ್ಲದೆ ಶ್ರೀರಂಗಪಟ್ಟಣವನ್ನು ತೊರೆಯುವಂತೆ ಮಾಡಿ ಅದನ್ನು ಸಾಧಿಸಿದರೆಂದು ಹೇಳಬಹುದು.

**ಮೂರನೆಯ ಹಂತ**

ಶ್ರೀರಂಗಪಟ್ಟಣ ವಶವಾದುದು ರಾಜ ಒಡೆಯರ್ ಜೀವನದ ಒಂದು ಮಹತ್ವದ ಕಾಲಘಟ್ಟವಾಗಿ ಪರಿವರ್ತಿತವಾಯಿತು. ಮೈಸೂರು ಸಂಸ್ಥಾನವು ವಿಜಯನಗರದ ಸಾಮ್ರಾಟನ ಅಧೀನದಲ್ಲಿ ನೇರವಾಗಿ ಆಳ್ವಿಕೆ ಮಾಡುವ ಅವಕಾಶವನ್ನು ಪಡೆದುಕೊಂಡಿತು. ೧೬೬೮ರ ವರೆಗೆ ಇದೇ ಪರಿಸ್ಥಿತಿ ಮುಂದುವರಿಯಿತು.[೮೦]

ಶ್ರೀರಂಗಪಟ್ಟಣ ಸ್ವಾಧೀನದಿಂದಾಗಿ ಶ್ರೀರಂಗಪಟ್ಟಣವೇ ಮೈಸೂರಿನ ರಾಜಧಾನಿಯಾಗಿ ಪರಿವರ್ತಿತವಾಯಿತಲ್ಲದೆ ದಕ್ಷಿಣ ಭಾರತದ ಇತಿಹಾಸದಲ್ಲಿ ಮಹತ್ವದ ಹೆಸರನ್ನು ದಾಖಲಿಸಿತು. ಅದರಲ್ಲೂ ರಣಧೀರ ಕಂಠೀರವ ನರಸರಾಜ ಮತ್ತು ಚಿಕ್ಕದೇವರಾಜರ ಕಾಲದಲ್ಲಂತೂ ಶ್ರೀರಂಗಪಟ್ಟಣ ಇಡೀ ದಕ್ಷಿಣ ಭಾರತದ ಎಲ್ಲ ರಾಜಮನೆತನಗಳಿಗೂ ಅಪೇಕ್ಷಿತ ಸ್ಪರ್ಶಮಣಿಯಂತೆ ಕಂಡುಬಂದಿತಲ್ಲದೆ ರಾಜಕೀಯ ಮೇಲಾಟಕ್ಕೆ ರಣರಂಗವಾಯಿತು. ಇದೆಲ್ಲವನ್ನೂ ಮೆಟ್ಟನಿಂತು ಶ್ರೀರಂಗಪಟ್ಟಣ ರಕ್ಷಿಸಿ ರಾಜಧಾನಿಯನ್ನಾಗಿ ಮುಂದುವರಿಸಿಕೊಂಡು ಬಂದುದು ಮೈಸೂರು ಮನೆತನದ ಮಹತ್ವದ ಸಾಧನೆ. ಆದರೆ ಆನಂತರದ ಅರಸರುಗಳ ನಿರ್ಲಕ್ಷ್ಯತೆ ಮತ್ತು ಅಶಕ್ತತೆ ಅರಮನೆಯ ಒಳಗಿನ ಪಿತೂರಿಗಳಿಗೆ ದಾರಿ ಮಾಡಿಕೊಟ್ಟು ಅವನತಿಯೆಡೆಗೆ ಸಾಗುವಂತೆ ಮಾಡಿತು.

ಶ್ರೀರಂಗಪಟ್ಟಣದ ಸ್ವಾಧೀನದ ನಂತರ ರಾಜ ಒಡೆಯರು ವಿಜಯನಗರದ ಸ್ಥಾನಿಕ ಆಡಳಿತಗಾರರಾಗಿ ಮಾರ್ಪಟ್ಟರು. ರಾಜ ಒಡೆಯರು ೧೬೧೦, ಮಾರ್ಚ್ ೨೧ರಂದು ಅಂದರೆ ಸಾಧಾರಣ ಸಂವತ್ಸರ ಚೈತ್ರ ಶುದ್ಧ ೭ರಂದು ಸಿಂಹಾಸನಾರೋಹಣ ಮಾಡಿದಂತೆ ತಿಳಿದು ಬರುತ್ತದೆ.[೮೧] ಇದನ್ನು ಗಮನಿಸಿದಾಗ ಶ್ರೀರಂಗಪಟ್ಟಣ ವಶಪಡಿಸಿಕೊಂಡ ನಂತರ ಸುಮಾರು ೪೫ ದಿನಗಳಷ್ಟು ಕಾಲ ಅವರು ಅರಮನೆಯನ್ನು ಪ್ರವೇಶಿಸಿರಲಿಕ್ಕಿಲ್ಲ. ಇದು ಮೈಸೂರು ಮತ್ತು ಶ್ರೀರಂಗಪಟ್ಟಣದ ಸುತ್ತಮುತ್ತ ಪ್ರದೇಶಗಳ ಮೇಲೆ ರಾಜ ಒಡೆಯರ್ ಸಾಧಿಸಿದ ಪ್ರಭುತ್ವವನ್ನು ಸಂಕೇತಿಸುತ್ತದೆ. ಶ್ರೀರಂಗಪಟ್ಟಣದ ಸಾಧನೆಯ ನಂತರದ

ರಾಜ ಒಡೆಯರ ಸೈನಿಕ ಕಾರ್ಯಾಚರಣೆಗಳು ಮುಂದುವರಿದವು. ೧೬೧೨ರಲ್ಲಿ ರಾಜ ಒಡೆಯರು ಶ್ರೀಮನ್ಮಹಾಧಿರಾಜ ಎಂದು ಕರೆಸಿಕೊಂಡರು.[೫೨] ರಾಜ ಒಡೆಯರು ವಿಜಯನಗರದ ಸಾಮ್ರಾಟನಾದ ಒಂದನೆ ವೆಂಕಟನ ಪ್ರಮುಖ ಸಾಮಂತರಾಗಿದ್ದರೆಂಬುದನ್ನು ಇದು ಖಚಿತಪಡಿಸುತ್ತದೆ. ಬಹುಶಃ ಒಂದನೆ ವೆಂಕಟನು ತನ್ನ ದಾಯಾದಿ ತಿರುಮಲನು ಮಧುರೆಯ ಯುದ್ಧದಲ್ಲಿ ತೋರಿದ ಅನ್ಯಮನಸ್ಕತೆಯಿಂದಾಗಿ ಮತ್ತು ರಾಜ ಒಡೆಯರ ವಿರುದ್ಧದ ಸೈನಿಕ ಕಾರ್ಯಾಚರಣೆಗಳಲ್ಲಿ ಅನುಭವಿಸಿದ ಸೋಲುಗಳು ವೆಂಕಟನಿಗೆ ರಾಜ ಒಡೆಯರ ಶಕ್ತಿ ಸಾಮರ್ಥ್ಯಗಳನ್ನು ಪರಿಚಯಿಸಿದ್ದವು. ಇದು ವೆಂಕಟನು ತಿರುಮಲನ ನಿವೃತ್ತಿಯನ್ನು ಅತ್ಯಂತ ಯೋಜಿತವಾಗಿ ಯೋಚಿಸಿ ಕಾರ್ಯಾಚರಣೆಗೆ ತರಲು ಸಹಾಯಕವಾದವು.[೫೩]

ಚಿಕ್ಕದೇವರಾಜ ವಂಶಾವಳಿಯು ರಾಜ ಒಡೆಯರು ಶ್ರೀರಂಗಪಟ್ಟಣದಿಂದ ತಿರುಮಲನನ್ನು ಹೊರಗೋಡಿಸಿದುದನ್ನು ತೆರೆದ ಮನಸ್ಸಿನಿಂದ ಶ್ಲಾಘಿಸಿದನೆಂದು ತಿಳಿಸುತ್ತದೆ.[೫೪] ಚಿಕ್ಕದೇವರಾಜ ವಂಶಾವಳಿ ಆಧರಿಸಿ ಹೇಳುವುದಾದರೆ ರಾಜ ಒಡೆಯರ ಸಾಧನೆಯಿಂದ ಹರ್ಷಿತನಾದನು. ಅದರ ಕುರುಹಾಗಿ ಒಂದನೆ ವೆಂಕಟನು ತನ್ನ ಸೇನಾನಿ ಗಂಭೀರರಾಯ ವಿರೂಪಣ್ಣನೊಂದಿಗೆ ರಾಜ ಒಡೆಯರಿಗೆ ಬಹುಮಾನಗಳನ್ನು ಕಾಣಿಕೆಗಳನ್ನು ಉತ್ತಮವಾದ ಆನೆಗಳು, ಉತ್ತಮ ತಳಿಯ ಕುದುರೆಗಳು ಆಭರಣಗಳು ಮತ್ತು ಶಾಲುಗಳನ್ನು ಕಳುಹಿಸಿಕೊಟ್ಟನೆಂದು ದಾಖಲಾಗಿದೆ.[೫೫] ಇದನ್ನು ಒಪ್ಪಿಕೊಂಡ ರಾಜ ಒಡೆಯರು ಗಂಭೀರರಾಯ ವಿರೂಪಣ್ಣನನ್ನು ಸಂಸ್ಥಾನದ ಪ್ರತಿಷ್ಠೆಗೆ ತಕ್ಕಂತೆ ಆದರದಿಂದ ಬರಮಾಡಿಕೊಂಡು ಗೌರವಿಸಿ ಆತನಿಗೂ ಕಾಣಿಕೆಗಳನ್ನಿತ್ತು ವಿಜಯನಗರದ ಸಾಮ್ರಾಟನಿಗೆ ಆತನ ಮೂಲಕ ಸಕಲ ಮರ್ಯಾದೆಗಳನ್ನು ಯಥೋಚಿತವಾಗಿ ಸಲ್ಲಿಸಿದಂತೆ ತಿಳಿದು ಬರುತ್ತದೆ.[೫೬] ಹೀಗಾಗಿ ರಾಜ ಒಡೆಯರು ಸಾಮ್ರಾಜ್ಯದ ನಂಬಿಕಸ್ಥ ನಾಯಕರಾಗಿ ಮುಂದುವರಿದರು. ಇದನ್ನು ೧೬೨೪ರ ಶಾಸನ ಉಲ್ಲೇಖಿಸುತ್ತದೆ.[೫೭]

೧೬೨೪ರ ದಳವಾಯಿ ಅಗ್ರಹಾರದ ತಾಮ್ರ ಶಾಸನದಂತೆ ರಾಜ ಒಡೆಯರು ಅಭಯಹಸ್ತ ನಿರೂಪವನ್ನು ಪಡೆದುಕೊಂಡರೆಂದೂ ಉಮ್ಮತ್ತೂರು, ಶ್ರೀರಂಗಪಟ್ಟಣ ಸ್ಥಳಗಳ ಕೆಲವು ಪ್ರದೇಶಗಳನ್ನು ರಾಜ ಒಡೆಯರ್‌ಗೆ ಉಂಬಳಿಯಾಗಿ ನೀಡಿದರೆಂದೂ ತಿಳಿದುಬರುತ್ತದೆ.[೫೮] ೧೬೧೫ರ ತಿರುಮಕೂಡಲು ನರಸೀಪುರತಾಲ್ಲೂಕಿನ ಶಾಸನವೊಂದು ರಾಜ ಒಡೆಯರ್‌ಗೆ ಬನ್ನೂರು ಸ್ಥಳ ಸಹ ತೆರಿಗೆ ರಹಿತ ಉಂಬಳಿಯಾಗಿ ಯಂದಿತ್ತೆಂದೂ ತಿಳಿಸುತ್ತದೆ.[೫೯] ಆದರೆ ಬನ್ನೂರನ್ನು ೧೬೦೮ರಲ್ಲಿ ಮತ್ತು ಶ್ರೀರಂಗಪಟ್ಟಣವನ್ನು ೧೬೧೦ರಲ್ಲಿ ರಾಜ ಒಡೆಯರು ಸೈನಿಕ ಕಾರ್ಯಾಚರಣೆಯಿಂದಾಗಿ ಅವನ್ನು ಸ್ವಾಧೀನಕ್ಕೆ ತೆಗೆದುಕೊಂಡಿದ್ದರು.[೬೦] ಪ್ರಾಯಶಃ ವೆಂಕಟನು, ರಾಜ ಒಡೆಯರು ಈ ಪ್ರದೇಶಗಳ ಮೇಲೆ ನಡೆಸಿದ ಸೈನಿಕ ಕಾರ್ಯಾಚರಣೆಯನ್ನು ೧೬೧೨ರಲ್ಲಿ ಕಳುಹಿಸಿದ ನಿಯೋಗದ ಮೂಲಕ ಒಪ್ಪಿಕೊಂಡಿರುವ ಸಾಧ್ಯತೆಗಳಿವೆ. ಹಾಗಾಗಿ ರಾಜ ಒಡೆಯರು ಗೆದ್ದುಕೊಂಡ ಪ್ರದೇಶಗಳನ್ನು ವೆಂಕಟನಿಂದ ತೆರಿಗೆ ರಹಿತ ಉಂಬಳಿಗಳಿಗಾಗಿ ಪಡೆದುಕೊಂಡರೆಂದು ಊಹಿಸಬಹುದು.

### ರಾಜ್ಯ ವಿಸ್ತಾರ

ರಾಜ ಒಡೆಯರ ಸೈನಿಕ ಕಾರ್ಯಾಚರಣೆಗಳು ಒಂದು ಸಣ್ಣ ಪಾಳೆಯ ಪಟ್ಟನ್ನು ವಿಸ್ತಾರವಾದ ರಾಜ್ಯವನ್ನಾಗಿಸಿದವು. ಹಯವದನರಾಯರು ಹೇಳುವಂತೆ ಅವಿಭಜಿತ ಮೈಸೂರು ಜಿಲ್ಲೆಯ ಬಹುತೇಕ ಪ್ರದೇಶಗಳ ಮೇಲೆ ತಮ್ಮ ಪ್ರಭುತ್ವವನ್ನು ಸಾಧಿಸಿದ್ದರೆಂದು ತಿಳಿದುಬರುತ್ತದೆ.[೬೧]

ರಾಜ ಒಡೆಯರ ರಾಜ್ಯದ ಎಲ್ಲೆಗಳು ಈ ರೀತಿಯಾಗಿವೆ. ಶ್ರೀರಂಗಪಟ್ಟಣದಿಂದ ದಕ್ಷಿಣದಲ್ಲಿ ಉಮ್ಮತ್ತೂರು, ಬನ್ನೂರು ಮತ್ತು ತೆರಕಣಾಂಬಿಯವರೆಗೆ, ಪೂರ್ವದಲ್ಲಿ ಮಾವತ್ತೂರು ಮತ್ತು ಅಕ್ಕಿಹೆಬ್ಬಾಳಿನವರೆಗೆ, ಪಶ್ಚಿಮದಲ್ಲಿ ಹೊಳೆ ನರಸೀಪುರದವರೆಗೆ. ಉತ್ತರದಲ್ಲಿ ಪಿರಿಯಾಪಟ್ಟಣದವರೆಗೆ ಹರಡಿದ್ದಿತು.[೬೨]

ಈ ಎಲ್ಲೆಗಳನ್ನು ಗಮನಿಸಿದಾಗ ರಾಜ ಒಡೆಯರ ಕಾಲದ ಮೈಸೂರು ರಾಜ್ಯ ಪೂರ್ವದಲ್ಲಿ ಜಗದೇವರಾಯನ ಎಲ್ಲೆಗೆ ಅಂಟಿಕೊಂಡಿತಲ್ಲದೆ ದಕ್ಷಿಣದಲ್ಲಿ ಮಧುರೆ ನಾಯಕನ ಎಲ್ಲೆಯವರೆಗೆ ವಿಸ್ತರಿಸಿದ್ದಿತು. ಈ ಎಲ್ಲ ಸೈನಿಕ ಕಾರ್ಯಾಚರಣೆಗಳು ರಾಜ ಒಡೆಯರ್‌ನನ್ನು ಒಬ್ಬ ಮಹಾನ್ ರಾಜ್ಯ ನಿರ್ಮಾಪಕನಾಗಿ ನಿರೂಪಿಸಲು ಸಹಾಯಕವಾಗಿವೆ.

೩೩ ಹಳ್ಳಿಗಳನ್ನೊಳಗೊಂಡಿದ್ದ ಕೇವಲ ಮೂರು ಸಾವಿರ ವರಹಗಳ ಆದಾಯವುಳ್ಳ ಹಾಗೂ ೩೦೦ ಮಂದಿ ಸೈನಿಕರನ್ನು ಹೊಂದಿದ್ದ ಸಣ್ಣ ಪಾಳೆಪಟ್ಟನ್ನು ಸುಮಾರು ೫,೫೦೦ ಚದರ ಮೈಲಿಗಳ ವಿಸ್ತಾರವಾದ ರಾಜ್ಯವನ್ನಾಗಿ ಪರಿವರ್ತಿಸಿದ ಕೀರ್ತಿ ಇವರದು.[೯೩]

ಆರ್ಥಿಕ ಸಂಕಷ್ಟದಲ್ಲಿದ್ದ ಮೈಸೂರಿನ ಪಾಳೇಪಟ್ಟು ಮೂರು ಭಾಗವಾಗಿ ವಿಭಜನೆಗೊಂಡಿದ್ದಿತು. ತನ್ನ ದಾಯಾದಿಗಳಿಂದಲೇ ಸ್ಪರ್ಧೆ ಎದುರಿಸಿ ಆರ್ಥಿಕ ಸಂಕಷ್ಟದಲ್ಲಿದ್ದ ಪಾಳೇಪಟ್ಟಿನ ಅಧಿಕಾರವನ್ನು ವಹಿಸಿಕೊಂಡು ಯುದ್ಧ ಮತ್ತು ತಟಸ್ಥ ನೀತಿಯನ್ನು ಬಳಸಿ, ಆನಂತರ ಸಾಮ, ದಾನ, ಭೇದ, ದಂಡಗಳೆಂಬ ಯುಕ್ತಿಗಳನ್ನು ಚತುರತೆಯಿಂದ ಬಳಸಿ ತನ್ನೆಲ್ಲ ವಿರೋಧಿಗಳನ್ನು ಜಯಿಸಿ ವಿಶಾಲವಾದ ರಾಜ್ಯವನ್ನು ಕಟ್ಟಿ ವಿಜಯನಗರ ಸಾಮ್ರಾಜ್ಯದ ಸಾಮಂತರೆನಿಸಿಕೊಂಡು ಸಾಮ್ರಾಟನಿಂದಲೇ ಗೌರವಿಸಲ್ಪಟ್ಟ ವ್ಯಕ್ತಿ ರಾಜ ಒಡೆಯರ್.

**ಪರಾಮರ್ಶನಗಳು**


೧. Hayavadana Rao, C. 1943, History of Mysore, Bengaluru, Vol. I, pp. 44-80.
೨. ಅದೇ.
೩. A. Sathyanarayana, 1996, History of the Wodeyars of Mysore (1610-1748), Mysore, pp. 11-33
೪. ಅದೇ.
೫. ಅದೇ,
೬ ಹಯವದನರಾವ್, ೧೯೪೩, ಪೂರ್ವೋಕ್ತ.
೭. ಅದೇ,
೮. ರಾಮಕೃಷ್ಣರಾವ್ ಬಿ., ೧೯೧೬, ಶ್ರೀ ಮನ್ಮಹರಾಜರ ವಂಶಾವಳಿ, ಸರ್ಕಾರಿ ಮುದ್ರಣಾಲಯ, ಮೈಸೂರು, ಪು. ೧೮-೧೯ (ಮುಂದೆ ವಂಶಾವಳಿ ಎಂದು ನಮೂದಿಸಿದೆ)
ಮಹಿಶೂರ ಶ್ರೀ ಮನ್ಮಹರಾಜ ಚಾಮರಾಜೇಂದ್ರ ಒಡೆಯರವರ ವಂಶರತ್ನಾಕರ, ೧೮೮೭, ಅರಮನೆಯ ಜಗನ್ಮೋಹನ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಲ್ಪಟ್ಟಿತು. ಮೈಸೂರು, ಪು. ೧೨-೪೯ (ಇದಾದ ನಂತರ ವಂಶರತ್ನಾಕರವೆಂದು ನಮೂದಿಸಲಾಗಿದೆ).
೯. ಹಯವದನರಾವ್, ೧೯೪೩, ಪೂರ್ವೋಕ್ತ.
೧೦. ಅದೇ.
೧೧. ಸತ್ಯನಾರಾಯಣ, ೧೯೯೬, ಪೂರ್ವೋಕ್ತ.
೧೨. ಅದೇ,
೧೩. ಹಯವದನರಾವ್. ೧೯೪೩, ಪೂರ್ವೋಕ್ತ.
೧೪. ಅದೇ.
೧೫. ಅದೇ,
೧೬. ಸತ್ಯನಾರಾಯಣ, ೧೯೯೬, ಪೂರ್ವೋಕ್ತ.
೧೭. ಅದೇ.
೧೮. ವಂಶಾವಳಿ, ೧೯೧೬, ಪೂರ್ವೋಕ್ತ.
೧೯. ಅದೇ.
೨೦. ಹಯವದನರಾವ್, ೧೯೪೩, ಪೂರ್ವೋಕ್ತ.
೨೧. ತಿರುಮಲಾರ್ಯ, ೧೯೯೯, ಚಿಕ್ಕದೇವರಾಜ ವಂಶಾವಳಿ, ಮ.ಭಾ. ಭೋಯಿ (ಸಂ.), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧-೩೨.
೨೨. ಹಯವದನರಾವ್, ೧೯೪೩, ಪೂರ್ವೋಕ್ತ.
೨೩. ತಿರುಮಲಾರ್ಯ, ೧೯೯೯, ಪೂರ್ವೋಕ್ತ.
೨೪. ಹಯವದನರಾವ್, ೧೯೪೩, ಪೂರ್ವೋಕ್ತ.
೨೫. ಅದೇ.
೨೬. ಅದೇ.
೨೭. ಅದೇ.
೨೮. ಅದೇ.
೨೯. ತಿರುಮಲಾರ್ಯ, ೧೯೯೯, ಪೂರ್ವೋಕ್ತ ; ಗೋವಿಂದವೈದ್ಯ, ೧೯೭೧, ಕಂಠೀರವ ನರಸರಾಜ ವಿಜಯ; ಆರ್. ಶಾಮಶಾಸ್ತ್ರಿ (ಸಂ.), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಮೂ[illegible] ಸಂಧಿ, ಪು. ೨೭-೪೫.
೩೦. ಗೋವಿಂದವೈದ್ಯ, ೧೯೭೧, ಪೂರ್ವೋಕ್ತ.
೩೧. ಹಯವದನರಾವ್. ೧೯೪೩, ಪೂರ್ವೋಕ್ತ.
೩೨. ತಿರುಮಲಾರ್ಯ, ೧೯೯೯, ಪೂರ್ವೋಕ್ತ ;
೩೩. Colonel Mark Wilks, 1930, Historical Sketches of the South of India, in an attempt to trace the History of Mysore, Govt. Press, Mysore, pp. 38-54.
೩೪. ಸತ್ಯನಾರಾಯಣ, ೧೯೯೬, ಪೂರ್ವೋಕ್ತ.
೩೫. ಹಯವದನರಾವ್. ೧೯೪೩, ಪೂರ್ವೋಕ್ತ.
೩೬. ಅದೇ.
೩೭. ಅದೇ.
೩೮. ಅದೇ.
೩೯. ಅದೇ.
೪೦. ಅದೇ.
೪೧. ಅದೇ.
೪೨. ವಂಶಾವಳಿ, ೧೯೧೬, ಪೂರ್ವೋಕ್ತ.
೪೩. ಹಯವದನರಾವ್, ೧೯೪೩, ಪೂರ್ವೋಕ್ತ.
೪೪. ಅದೇ.
೪೫. ಸತ್ಯನಾರಾಯಣ, ೧೯೯೬, ಪೂರ್ವೋಕ್ತ.
೪೬ ಹಯವದನರಾವ್, ೧೯೪೩, ಪೂರ್ವೋಕ್ತ.
೪೭. ಅದೇ.

೪೮. ಅದೇ.
೪೯. ವಂಶಾವಳಿ, ೧೯೧೬, ವಂಶರತ್ನಾಕರ, ೧೮೮೭, ಪೂರ್ವೋಕ್ತ.
೫೦. ಅದೇ. ೫೧. ಹಯವದನರಾವ್ ಸಿ., ೧೯೪೭, ಪೂರ್ವೋಕ್ತ
೫೨. ಮೈಸೂರು ದೊರೆಗಳ ಪೂರ್ವಾಭ್ಯುದಯ, M.S. No. 15-37, a Kaditam in the Mackanze Collections in the Madras Oriental Library.
೫೩. ವೆಂಕಟರಮಣಯ್ಯ (ಛಿ. ೧೮೦೦) ಮೈಸೂರು ರಾಜ ಚರಿತ್ರೆ, ಔಖಖ, ಮೈಸೂರು
೫೪. ಅದೇ. ೫೫. ಅದೇ.
೫೬. ಪೂರ್ವಾಭ್ಯುದಯ, ಪೂರ್ವೋಕ್ತ. ೫೭. ಅದೇ.
೫೮. ವಂಶಾವಳಿ, ೧೯೧೬, ವಂಶರತ್ನಾಕರ, ೧೮೮೭, ಪೂರ್ವೋಕ್ತ.
೫೯. ಅದೇ. ೬೦. ತಿರುಮಲಾರ್ಯ, ೧೯೯೯, ಪೂವೋಕ್ತ.
೬೧. ವಿಲ್ಕ್ಸ್, ೧೯೩೦, ಪೂರ್ವೋಕ್ತ. ೬೨. ಇಅ, ಗಿ, ಖಿಟ. ೧೫, ೧೬೨೧-೧೬೨೨.
೬೩. ತಿರುಮಲಾರ್ಯ, ೧೯೯೯, ಪೂವೋಕ್ತ. ೬೪. ಅದೇ.
೬೫. ಹಯವದನರಾವ್ ಸಿ., ೧೯೪೩, ಪೂರ್ವೋಕ್ತ. ೬೬ ಅದೇ.
೬೭. ಗೋವಿಂದವೈದ್ಯ, ೧೯೩೧, ಪೂರ್ವೋಕ್ತ. ೬೮. ತಿರುಮಲಾರ್ಯ, ೧೯೮೬, ಪೂರ್ವೋಕ್ತ.
೬೯. ತಿರುಮಲಾರ್ಯ, ೧೮೯೬, ಚಿಕ್ಕದೇವರಾಜ ವಿಜಯಂ, ಮೈಸೂರು
೭೦. ತಿರುಮಲಾರ್ಯ, ೧೯೯೯ ಮತ್ತು ಗೋವಿಂದವೈದ್ಯ, ೧೯೭೧, ಪೂರ್ವೋಕ್ತ
೭೧. ವಂಶಾವಳಿ, ೧೯೧೬, ವಂಶರತ್ನಾಕರ, ೧೮೮೭, ಪೂರ್ವೋಕ್ತ.
೭೨. ಅದೇ. ೭೩. ಅದೇ.
೭೪. EC.,V. Tn. 15, 1622. ತಿರುಮಲಾರ್ಯ, ವಂಶರತ್ನಾಕರ ಮತ್ತು ವಂಶರತ್ನಾವಳಿ, ೧೯೯೯, ಪೂರ್ವೋಕ್ತ.
೭೫. ಸತ್ಯನಾರಾಯಣ, ೧೯೯೬, ಪೂರ್ವೋಕ್ತ. ೭೬ ಅದೇ.
೭೭. ವಿಲ್ಕ್ಸ್, ೧೯೩೦, ಪೂರ್ವೋಕ್ತ ೭೮. ಅದೇ.
೭೯. EC., V. 15, 1622, CE.
೮೦. ವಂಶಾವಳಿ, ೧೯೧೬, ವಂಶರತ್ನಾಕರ, ೧೮೮೭, ಪೂರ್ವೋಕ್ತ.
೮೧. ಅದೇ. ೮೨. ಅದೇ.
೮೩. ತಿರುಮಲಾರ್ಯ, ೧೯೯೯, ಪೂವೋಕ್ತ. ೮೪. ಅದೇ.
೮೫. ವೆಂಕಟರಮಣಯ್ಯ, ಪೂರ್ವೋಕ್ತ.
೮೬. ವಂಶಾವಳಿ, ೧೯೧೬, ವಂಶರತ್ನಾಕರ, ೧೮೮೭, ಪೂರ್ವೋಕ್ತ. ಮತ್ತು ಹಯವದನರಾವ್ ಸಿ., ೧೯೪೩, ಪೂರ್ವೋಕ್ತ.
೮೭. EC, V, Tn. 15, 1623 AD. ೮೮. EC, V, Tn. 50, 1615.
೮೯. ವಂಶಾವಳಿ, ೧೯೧೬, ವಂಶರತ್ನಾಕರ, ೧೮೮೭, ಪೂರ್ವೋಕ್ತ. ಮತ್ತು ಹಯವದನರಾವ್ ಸಿ., ೧೯೪೩, ಪೂರ್ವೋಕ್ತ.
೯೦. ಪೂರ್ವಾಭ್ಯುದಯ ಮತ್ತು ಮೈಸೂರು ರಾಜರ ಚರಿತ್ರೆ, ಪೂರ್ವೋಕ್ತ.
೯೧. ಹಯವದನರಾವ್ ಸಿ., ೧೯೪೩, ಪೂರ್ವೋಕ್ತ ೯೨. ಅದೇ.
೯೩. ಹಯವದನರಾವ್ ಸಿ., ೧೯೪೭, ಮೈಸೂರು ಗೆಜೆಟಿಯರ್, ಸಂ. ೫, ಮೈಸೂರು ಜಿಲ್ಲೆ

****

# ಕೆಸರೆ ಯುದ್ಧ

* ಡಾ|| ಎಂ. ವಿ. ಶ್ರೀನಿವಾಸ್,

ನಮ್ಮ ಇತಿಹಾಸದಲ್ಲಿ ಹಲವಾರು ಯುದ್ಧಗಳು ನಿರ್ಣಾಯಕ ಅಂಶಗಳಾಗಿ ಮಾನವ ಜೀವನದ, ದೇಶದ ರಾಜಕೀಯದ, ದಿಕ್ಕನ್ನೇ ಬದಲಾಯಿಸಿದ ಪ್ರಸಂಗಳನ್ನು ಕಾಣಬಹುದು. ಯುದ್ಧಗಳಿಗೆ ರಾಜಕೀಯ ಕ್ಷೇತ್ರದಲ್ಲಿ ಅತ್ಯಂತ ಹೆಚ್ಚು ಮಹತ್ವವಿರುವುದು ನಿಸ್ಸಂದೇಹವಾದುದು. ರಾಜ್ಯಗಳು ತಮ್ಮ ಇಚ್ಛಾ ಶಕ್ತಿಯನ್ನು ಪೂರೈಸಿಕೊಳ್ಳಲು ತಮಗೆ ಬೇಕಾದ್ದನ್ನು ಪಡೆಯಲು, ಬೇಡವಾದದ್ದನ್ನು ತಡೆಯಲು ಯುದ್ಧವನ್ನು ಪ್ರಮುಖ ಅಸ್ತ್ರವನ್ನಾಗಿ ಬಳಸುತ್ತಾ ಬಂದಿರುವುದು ಸಾಧಾರಣವಾದುದು. ಎಲ್ಲಾ ಕಾಲದಲ್ಲಿಯೂ ಎಲ್ಲಾ ದೇಶಗಳಲ್ಲಿಯೂ ಯುದ್ಧಗಳು ಒಂದು ರಾಜ್ಯದ ಏಳು-ಬೀಳುಗಳನ್ನು ನಿರ್ಧರಿಸುತ್ತಾ ಬಂದಿವೆ.

ಕರ್ನಾಟಕದ ಇತಿಹಾಸವನ್ನು ಪರಿಶೀಲಿಸಿದಾಗ ಹಲವಾರು ಗಮನಾರ್ಹವಾದ ಯುದ್ಧಗಳು ನಮ್ಮ ಕಣ್ಣಿಗೆ ಕಾಣುತ್ತವೆ. ಅವುಗಳಲ್ಲಿ ಕೆಲವು ಭೀಕರ ಯುದ್ಧಗಳಾಗಿದ್ದು ಅಪಾರವಾದ ಆಸ್ತಿ-ಪಾಸ್ತಿಗಳನ್ನು ನಾಶಪಡಿಸಿದವು. ಕೆಲವು ಯುದ್ಧಗಳು ಬಹಳಷ್ಟು ಭೀಕರವಾದ ಸಂಘರ್ಷಗಳಾಗದಿದ್ದರೂ ಚರಿತ್ರೆಯ ದಿಕ್ಕನ್ನೇ ಬದಲಾಯಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿವೆ. ತಾಳಿಕೋಟೆ ಯುದ್ಧದಂತಹ ಭೀಕರ ಸಂಗ್ರಾಮದಿಂದ ಒಂದು ಸಾಮ್ರಾಜ್ಯವೇ ಅಳಿದು ಹೋದರೆ ಕೆಲವೊಮ್ಮೆ ಯುದ್ಧಗಳು ಹೊಸ ರಾಜ್ಯಗಳ ಸೃಷ್ಟಿಗೆ ಕಾರಣವಾದುದನ್ನು ನೋಡಬಹುದುದಾಗಿದೆ. ಇಂತಹ ಮಹತ್ವ ಪೂರ್ಣ ಯುದ್ಧಗಳಲ್ಲಿ ೧೬ನೆ ಶತಮಾನದ ಅಂತ್ಯಭಾಗದಲ್ಲಿ ಇಂದಿನ ಮೈಸೂರು ಬಳಿ ನಡೆದ ಕೆಸರೆ ಯುದ್ಧವು ಅತ್ಯಂತ ಸ್ವಾರಸ್ಯಕರವಾಗಿ ಮತ್ತು ಐತಿಹಾಸಿಕವಾಗಿ ಜರುಗಿದ ಒಂದು ಮಹತ್ವ ಪೂರ್ಣ ಘಟನೆಯಾಗಿದೆ. ಕೆಸರೆ, ಮೈಸೂರು ನಗರಸಭೆಯ ವ್ಯಾಪ್ತಿಯಲ್ಲಿರುವ ಒಂದು ಬಡಾವಣೆ. ಈ ಸ್ಥಳದಲ್ಲಿ ವಿಜಯನಗರದ ಪ್ರತಿನಿಧಿ ಮತ್ತು ಮೈಸೂರು ರಾಜ್ಯವನ್ನು ಆಳುತ್ತಿದ್ದ ರಾಜ ಒಡೆಯರಿಗೂ ನಡೆದ ಒಂದು ಯುದ್ಧವು ಚಾರಿತ್ರಿಕ ದೃಷ್ಟಿಯಿಂದ ಅಧ್ಯಯನಯೋಗ್ಯ ಮಹತ್ವಪೂರ್ಣವಾದ ಒಂದು ಪ್ರಸಂಗವಾಗಿದೆ.

ಮೈಸೂರು ರಾಜ್ಯವು ವಿಜಯನಗರದ ಪತನಾನಂತರ ದಕ್ಷಿಣದಲ್ಲಿ ತಲೆಯೆತ್ತಿದ ಒಂದು ಪುಟ್ಟ ಸಂಸ್ಥಾನವಾಗಿದ್ದಿತು. ತಾಳಿಕೋಟೆ ಯುದ್ಧದನಂತರ ದಕ್ಷಿಣದಲ್ಲಿ ಉಂಟಾದ ಶೂನ್ಯ ಸ್ಥಿತಿಯಲ್ಲಿ ಅನೇಕ ಸಣ್ಣ ಪುಟ್ಟ ರಾಜ್ಯಗಳು ಪ್ರಬಲವಾದವು. ಅಧೀನ ರಾಜ್ಯಗಳು ಸ್ವತಂತ್ರವಾದವು. ಇಂತಹ ಪರಿಸ್ಥಿತಿಯಲ್ಲಿ ಮೈಸೂರು ರಾಜ್ಯ ಅಸ್ತಿತ್ವಕ್ಕೆ ಬಂದುದು ಇತಿಹಾಸದಲ್ಲಿ ದಾಖಲಾಗಿದೆ. ೧೬ನೇ ಶತಮಾನದ ಉತ್ತರಾರ್ಧದಲ್ಲಿ ಇದು ಒಂದು ಪ್ರಮುಖ ರಾಜ್ಯವಾಗಿ ಬೆಳೆಯಿತು. ತಾಳಿಕೋಟೆ ನಂತರ ದಕ್ಷಿಣ ಭಾರತದಲ್ಲಿ ಹಲವಾರು ಪ್ರಮುಖ ರಾಜ್ಯಗಳ ನಡುವೆ ಸಂಘರ್ಷಗಳು ಜರುಗುತ್ತಿದ್ದು ಹಲವಾರು ಪ್ರಮುಖ ರಾಜ್ಯಗಳು ಪೈಪೋಟಿ ನಡೆಸುತ್ತಿದ್ದವು. ಇಂತಹ ಪರಿಸ್ಥಿತಿಯಲ್ಲಿ ೧೫೭೮ ರಿಂದ ೧೬೧೭ ರವರೆಗೆ ರಾಜ್ಯವಾಳಿದ ರಾಜ ಒಡೆಯರನ್ನು ಮೈಸೂರು ರಾಜ್ಯದ ನಿಜವಾದ ನಿರ್ಮಾಪಕರೆಂದು ಕರೆಯಲಾಗಿದೆ. ರಾಜ ಒಡೆಯರು ದಕ್ಷಿಣ ಭಾರತದಲ್ಲಿದ್ದ ಸಂಧಿಗ್ಧ ಸ್ಥಿತಿಯಲ್ಲಿ ತನ್ನ ರಾಜ್ಯವನ್ನು ರಕ್ಷಿಸಿ ಪೋಷಿಸಿ ಅದಕ್ಕೆ ಒಂದು ಪ್ರಮುಖ ಸ್ಥಾನವನ್ನು ಕಟ್ಟಿ ಕೊಟ್ಟ ದೊರೆ. ಕೇವಲ ೨೩ ಹಳ್ಳಿಗಳಿಂದ ಕೂಡಿದ ಒಂದು ಪುಟ್ಟ ಪಾಳೆಯಪಟ್ಟು ಅಥವಾ ಅಧೀನ ಸಂಸ್ಥಾನವನ್ನು ಬಲಿಷ್ಠ ಸ್ವತಂತ್ರ್ಯ ರಾಜ್ಯವನ್ನಾಗಿ ಮಾಡಿದ ಕೀರ್ತಿ ರಾಜ ಒಡೆಯರಿಗೆ ಸಲ್ಲುತ್ತದೆ. ರಾಜ ಒಡೆಯರು ಸಾಹಸಿಗಳು, ಸ್ವಾಭಿಮಾನಿಗಳು, ಪರಾಕ್ರಮಿಗಳು ಆಗಿದ್ದರು. ದೂರ ದೃಷ್ಟಿಯುಳ್ಳ ಆಡಳಿತಗಾರರು, ರಾಜನೀತಿಜ್ಞರು ಆಗಿದ್ದರು. ರಾಜ ಒಡೆಯರು ಮೈಸೂರು ರಾಜ್ಯದ ಇತಿಹಾಸದಲ್ಲಿ ಹಲವಾರು ಸಾಧನೆಗಳನ್ನು ಮಾಡಿ ಪ್ರಸಿದ್ಧ ಪಡೆದರು. ೧೬ನೇ ಶತಮಾನದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಹಲವಾರು ಸಣ್ಣಪುಟ್ಟ ಸಾಮಂತ ಸಂಸ್ಥಾನಗಳಿದ್ದವು. ಇವರೆಲ್ಲಾ ವಿಜಯನಗರ ಸಾಮ್ರಾಜ್ಯಕ್ಕೆ ಅಧೀನರಾಗಿದ್ದವರು. ವಿಜಯನಗರದ ರಾಜ ಪ್ರತಿನಿಧಿಗಳು ಶ್ರೀರಂಗಪಟ್ಟಣವನ್ನು ಕೇಂದ್ರವನ್ನಾಗಿ ಮಾಡಿಕೊಂಡು ಅಲ್ಲಿಂದ ಈ ಪ್ರದೇಶದ ರಾಜ್ಯಗಳ ಆಡಳಿತದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು. ರಾಜ ಒಡೆಯರ ಆಳ್ವಿಕೆಯ ಸಂದರ್ಭದಲ್ಲಿ ಶ್ರೀರಂಗಪಟ್ಟಣದಲ್ಲಿದ್ದ ಇಮ್ಮಡಿ

---

* ೪೩೦, ಎಚ್. ರಸ್ತೆ, ಐಡಿಯಲ್ ಹೋಮ್ಸ್, ರಾಜರಾಜೇಶ್ವರಿ ನಗರ ಬೆಂ. ೯೮, ಮೊ: ೯೮೮೦೫೯೦೩೯೬

ತಿರುಮಲರಾಯನು ವಿಜಯನಗರದ ದೊರೆ ವೆಂಕಟಪತಿರಾಯನ ಸಂಬಂಧಿಯಾಗಿದ್ದನು. ಆದರೆ ಅವನು ಸೈನ್ಯಾಡಳಿತದಲ್ಲಾಗಲೀ, ರಾಜ್ಯಾಡಳಿತದಲ್ಲಾಗಲೀ ಸಾಕಷ್ಟು ಅನುಭವವನ್ನು ಹೊಂದಿದ್ದವನಲ್ಲ.

ಯುವಕನಾಗಿದ್ದ ರಾಜ ಒಡೆಯರು ತನ್ನ ರಾಜ್ಯದ ಸುತ್ತಲಿನ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸಿದ್ದರು. ಆತ್ಮವಿಶ್ವಾಸದಿಂದಲೂ, ಸಾಹಸದಿಂದಲೂ ಹೋರಾಟವನ್ನು ನಡೆಸಿದರೆ. ತನ್ನ ರಾಜ್ಯಕ್ಕೆ ಮಹತ್ವದ ಸ್ಥಾನವನ್ನು ಕಲ್ಪಿಸಬಹುದೆಂದು ಅವರು ಸ್ವಾಭಾವಿಕವಾಗಿಯೇ ಭಾವಿಸಿದ್ದರು. ಆದುದರಿಂದ ಅವರು ತಮ್ಮ ಸುತ್ತಲಿನ ರಾಜರುಗಳನ್ನು ಹಾಗೂ ತಮ್ಮ ಪ್ರಭುವಾಗಿದ್ದ ಶ್ರೀರಂಗಪಟ್ಟಣದ ತಿರುಮಲನನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಹೋದರು. ಶ್ರೀರಂಗಪಟ್ಟಣದಲ್ಲಿ ಕೆಂಬಾಳುವಿನ ದೊರೆ ದೇವರಾಜನು ಪಂಚವಾದ್ಯಗಳೊಡನೆ ಮೆರವಣಿಗೆಯಲ್ಲಿ ಬಂದು ತನ್ನ ಉನ್ನತ ಸ್ಥಾನವನ್ನು ಪ್ರದರ್ಶಿಸಲು ಪ್ರಯತ್ನಿಸಿದನು. ಇದನ್ನು ಪ್ರತಿಭಟಿಸಿ ರಾಜ ಒಡೆಯರು ದೇಪರಾಜನಿಗೆ ಪಂಚವಾದ್ಯಗಳ ಮೆರವಣಿಗೆ ನಿಯಮಬಾಹಿರವಾದುದು. ಅವನು ಈ ರೀತಿಯ ಗೌರವಕ್ಕೆ ಅನರ್ಹನೆಂದು ರಾಜ ಪ್ರತಿನಿಧಿ ತಿರುಮಲನಿಗೆ ದೂರು ನೀಡಿದರು. ಈ ಬಗ್ಗೆ ತಿರುಮಲನು ಯಾವುದೇ ಪ್ರತಿಕ್ರಿಯೆ ನೀಡದಿದ್ದಾಗ ದೇಪರಾಜನನ್ನು ಸೋಲಿಸಿ ಕೆಂಬಾಳುವನ್ನು ವಶಪಡಿಸಿಕೊಂಡರು. ಮೇಲಿನ ಘಟನೆ ಹಾಗೂ ರಾಜ ಒಡೆಯರ ಸಾಹಸಗಳು ತಿರುಮಲನಿಗೆ ಆತಂಕವನ್ನುಂಟು ಮಾಡಿದವು. ಅವನಂತೆಯೇ ನೆರೆಹೊರೆಯ ರಾಜರು ಸಹ ರಾಜ ಒಡೆಯರ ಚಟುವಟಿಕೆಗಳಿಂದ ಅಸಮಾಧಾನಗೊಂಡಿದ್ದರು. ಪರಿಸ್ಥಿತಿ ಹೀಗೆ ಮುಂದುವರಿದರೆ ಮೈಸೂರು ಪ್ರದೇಶದಲ್ಲಿ ರಾಜಕೀಯ ಅಸಮತೋಲನ ಉಂಟಾಗುವುದೆಂದು ಭಾವಿಸಿ ತಿರುಮಲನು ಇದನ್ನು ತಡೆಯಲು ಪ್ರಯತ್ನಗಳನ್ನು ಕೈಗೊಂಡನು. ತಿರುಮಲನು ಮಧುರೈ ಮೇಲೆ ದಂಡಯಾತ್ರೆಯನ್ನು ಕೈಗೊಂಡು ಹಿಂದಿರುಗಿದ ನಂತರ ತಮ್ಮ ಬೆಂಬಲಿಗರ ಒಂದು ಶೃಂಗ ಸಭೆಯನ್ನು ಏರ್ಪಡಿಸಿ ತಮ್ಮ ಬೆಂಬಲಿಗರ ಜೊತೆ ಪ್ರಸ್ತುತ ವಿದ್ಯಮಾನವನ್ನು ಕುರಿತು ಚರ್ಚಿಸಿದನು. ಈ ಸಮಾರಂಭಕ್ಕೆ ಬರಲು ಅವನು ತಾಳೆಗರಿಯ ಮೇಲೆ ಎಲ್ಲಾ ದೊರೆಗಳಿಗೂ ಆಹ್ವಾನ ಪತ್ರಿಕೆಯನ್ನು ಕಳುಹಿಸಿದನು. ರಾಜಒಡೆಯರನ್ನು ಬಗ್ಗು ಬಡಿಯಬೇಕೆಂದು ಸರ್ವಾನುಮತದಿಂದ ತೀರ್ಮಾನವಾಯಿತು. . ಮುಂದಿನ ಮಹಾನವಮಿಗೆ ಎಲ್ಲಾ ದೊರೆಗಳಿಗೂ ನಾಯಕರಿಗೂ ತಾಳೆಗರಿಯ ಮೇಲೆ ಬರೆದ ಆಹ್ವಾನ ಪತ್ರಿಕೆಯು ಕಳುಹಿಸಲ್ಪಟ್ಟಿತು. ರಾಜ ಒಡೆಯರು ಮತ್ತು ದೇವರಾಜ ಶ್ರೀರಂಪಟ್ಟಣದ ಹೊರವಲಯದಲ್ಲಿ ಬೀಡುಬಿಟ್ಟಿದ್ದರು. ತಿರುಮಲನು ರಾಜ ಒಡೆಯರ ಬಳಿಗೆ ಬಂದು ಅವರಲ್ಲಿ ಕ್ಷೇಮ ಸಮಾಚಾರವನ್ನು ವಿಚಾರಿಸಿ ಅವರೊಂದಿಗೆ ತನ್ನ ಗೌರವ ಮೈತ್ರಿಯನ್ನು ಒತ್ತಿ ಹೇಳಿದನು. ಈ ಸಂದರ್ಭದಲ್ಲಿ "ಬಿರುದಂತೆಂಬರ ಗಂಡ" ಎಂಬ ಬಿರುದಾವಳಿಗಳಿಂದ ಮತ್ತೊಮ್ಮೆ ಆಸ್ಥಾನದಲ್ಲಿ ತಮ್ಮ ಉನ್ನತ ಸ್ಥಾನವನ್ನು ರಾಜಒಡೆಯರು ಸ್ಥಾಪಿಸಲು ಯತ್ನಿಸಿದರು. ಇದರಿಂದ ತಿರುಮಲನಿಗೆ ಮತ್ತಷ್ಟು ಬೇಸರವುಂಟಾಯಿತು. ಇದು ವಿಜಯನಗರದ ದೊರೆಗಳ ಬಿರುದು. ಬೇರೆಯವರು ಅದನ್ನು ಬಳಸುವಂತಿಲ್ಲ, ಆದರೆ ರಾಜ ಒಡೆಯರು ಪ್ರತಿನಿತ್ಯವು ತಮ್ಮ ಸಾಮರ್ಥ್ಯ ಸಾಧನೆಯಿಂದ ಉನ್ನತ ಸ್ಥಾನಕ್ಕೆ ಏರಲು ಪ್ರಯತ್ನಿಸುತ್ತಿದ್ದುದು ತಿರುಮಲನಿಗೆ ತಡೆಯಲಾಗಲಿಲ್ಲ. ರಾಜಒಡೆಯರು ಶ್ರೀರಂಗನಾಥ ದೇವಾಲಯಕ್ಕೆ ದರ್ಶನಕ್ಕೆಂದು ಬಂದಾಗ ಅವರನ್ನು ಮುಗಿಸಲು ತನ್ನ ಅಧೀನ ಸಂಸ್ಥಾನಿಕರಿಗೆ ಸೂಚಿಸಿದ್ದನು. ಇದನ್ನು ರಾಜ ಒಡೆಯರ ಕೆಲವು ಆಪ್ತ ಅಧಿಕಾರಿಗಳು ಅವರಿಗೆ ತಿಳಿಸಿದರು. ಮಧ್ಯ ರಾತ್ರಿಯಲ್ಲಿಯೇ ರಾಜ ಒಡೆಯರು ಮೈಸೂರಿಗೆ ಹೊರಟು ಹೋದರು. ತಿರುಮಲ ಮತ್ತು ಅವನ ಮಿತ್ರರು ತಮ್ಮನ್ನು ಕೊಂದು ಹಾಕಲು ಸಂಚು ನಡೆಸುತ್ತಿರುವುದು ತಿಳಿದು ರಾಜಒಡೆಯರು ಯುದ್ಧಕ್ಕೆ ಸಿದ್ಧವಾದರು. ಈ ಹಿನ್ನೆಲೆಯಲ್ಲಿ ನಡೆದ ಮಹಾನ್ ಸಂಘರ್ಷವೇ ಕೆಸರೆಯುದ್ಧ.

ಮೈಸೂರು ಕೋಟೆಯನ್ನು ಮುತ್ತುವುದು ಸುಲಭವಲ್ಲವೆಂದು ಅರಿತು, ಮೊದಲು ಕೆಸರೆ ಕೋಟೆಯ ಮೇಲೆ ದಾಳಿನಡೆಸಿ ಅದನ್ನು ಗೆದ್ದು ನಂತರ ಮೈಸೂರಿನ ಮೇಲೆ ಮುನ್ನುಗ್ಗಬೇಕೆಂದು ರೇಮತಿ ವೆಂಕಟರಮಣಯ್ಯನು ಸಲಹೆ ನೀಡಿದನು. ಈ ಯುದ್ಧ ೧೬೧೬ ರಲ್ಲಿ ಪ್ರಾರಂಭವಾಯಿತು. ರಾಜ ಒಡೆಯರ ಸಹೋದರರಾದ ಬೆಟ್ಟದ ಚಾಮರಾಜ ಮತ್ತು ಚೆನ್ನರಾಜ ಇವರು ಕೆಸರೆಯುದ್ಧದ ಪ್ರಮುಖ ರೂವಾರಿಗಳು. ಈ ಯುದ್ಧದಲ್ಲಿ ಒಂದು ಲಕ್ಷಜನ ಸೈನಿಕರು, ೧೨,೦೦೦ ಅಶ್ವಗಳು, ೩೦೦ ಆನೆಗಳ ಸೈನ್ಯ ಭಾಗವಹಿಸಿತ್ತು. ಸೈನ್ಯದ ಸಂಖ್ಯೆ ಹಾಗೂ ಶತ್ರು ಬಲವನ್ನು ಗಮನಿಸಿದಾಗ ತಿರುಮಲನ ಕೂಟವು ಬಹು ಬಲಿಷ್ಠವಾಗಿ ಕಂಡು ಬರುತ್ತಿದ್ದಿತು. ಉಮ್ಮತ್ತೂರು ಮತ್ತು ಮೂಗೂರು ರಾಜರು ಈ ಸೈನ್ಯದ ದಂಡನಾಯಕರಾಗಿದ್ದರು. ಕೆಸರೆ ಯುದ್ಧವು ಬರಿಯ ರಾಜರ ನಡುವಿನ ಯುದ್ಧವಾಗಿರಲಿಲ್ಲ. ಅದು ವಿಜಯನಗರವನ್ನು

ಪ್ರತಿನಿಧಿಸುವ ತಿರುಮಲ ಮತ್ತು ಅವನ ವಿರುದ್ಧ ಬಂಡಾಯ ಎದ್ದಿದ್ದ ಸಂಸ್ಥಾನಗಳ ನಡುವಿನ ಯುದ್ಧವಾಗಿದ್ದಿತು. ಆದುದರಿಂದ ವಿಜಯನಗರಕ್ಕೆ ನಿಷ್ಠರಾಗಿದ್ದ ಅನೇಕ ಪಾಳೇಯಗಾರರು ತಿರುಮಲನ ಕೂಟವನ್ನು ಸೇರಿ ಈ ಯುದ್ಧದಲ್ಲಿ ಪಾಲ್ಗೊಂಡರು. ಮಲೆನಾಡಿನವರು, ಮೊರಸರು ತಿರುಮಲನ ಪರವಾಗಿ ಹೋರಾಡಿದರೆಂದು ಕಂಠೀರವನರಸರಾಜ ವಿಜಯವು ತಿಳಿಸುತ್ತದೆ. ಮೊರಸರು ಎಂದರೆ ಯಲಹಂಕ ನಾಡಪ್ರಭುಗಳು. ಮಲೆನಾಡಿನ ಬೇಲೂರು ನಾಯಕರು, ವಿಜಯನಗರದ ಪರವಾಗಿ ಹೋರಾಡಲು ಮುಂದೆ ಬಂದಿದ್ದರು. ಹದಿನಾಡ ರಾಮರಾಜೇಂದ್ರ ಪಿರಿಯಾಪಟ್ಟಣದ ರುದ್ರಗಣ, ತಲಕಾಡಿನ ನಂಜೇಂದ್ರ, ಕೆರೆಯೂರು ತಿಮ್ಮನಾಯಕ, ಸಾಲನಾಯಕನ ಭೈರೇಂದ್ರ, ನುಗ್ಗೇಹಳ್ಳಿ ದಾಸನಾಯಕ ಕೆಂಗೇಂದ್ರ, ಇಮ್ಮಡಿ ಚಿಕ್ಕಮನ್ನೇಯ, ಮೊದಲಾದವರು ತಿರುಮಲನ ಕೂಟದಲ್ಲಿದ್ದ ಅರಸರು.

ಈ ಭಾರಿ ಸೈನ್ಯವನ್ನು ಎದುರಿಸಿ ಗೆಲ್ಲುವುದು ಸುಲಭದ ಮಾತಾಗಿರಲಿಲ್ಲ. ಆದುದರಿಂದ ರಾಜ ಒಡೆಯರು ಅವರ ಸಹೋದರರು ಶತ್ರು ಸೈನ್ಯವನ್ನು ಹಿಮ್ಮೆಟ್ಟಿಸಲು ತಂತ್ರವನ್ನು ಬಳಸಬೇಕಾಯಿತು. ಮೈಸೂರಿನ ಸೈನ್ಯ ಸುಪ್ರಸಿದ್ದ ಮೂಗರಿವ ತಂತ್ರವನ್ನು ಯುದ್ಧದಲ್ಲಿ ಅನುಸರಿಸಿತು. ಇದಲ್ಲದೆ ಚಾಮರಾಜ ಸಾಕಿದ್ದ ಹಳೆಪೈಕದವರು ಶತ್ರುಗಳನ್ನು ಸದೆಬಡಿಯಲು ಕಾರಣರಾದರು. ಈ ಮಧ್ಯೆ ಕೆಸರೆಯ ಜನ ತೀವ್ರವಾಗಿ ಪ್ರತಿಭಟಿಸಿದ್ದರಿಂದ (ಜಕ್ಕಮನ್ನೆ ಹಂಚಿ)ಯನ್ನು ಸೂರೆಮಾಡಿದ. ಇದರಿಂದ ಮೈಸೂರು ಅರಸರ ಗಮನ ಅತ್ತ ತಿರುಗಬಹುದು. ಆಗ ಕೆಸರೆಯನ್ನು ಸುಲಭವಾಗಿ ಗೆಲ್ಲಬಹುದೆಂದು ಅವನು ಭಾವಿಸಿದ. ಚಾಮರಾಜ ಮತ್ತು ಆತನ ತಮ್ಮ ಕೂಟದ ರಾಜರನ್ನು ಒಬ್ಬೊಬ್ಬರನ್ನಾಗಿ ಸೋಲಿಸುವ ರಣತಂತ್ರವನ್ನು ಉಪಯೋಗಿಸಿದರು. ಚಾಮರಾಜನು ಮಿಂಚಿನ ದಾಳಿ ನಡೆಸಿ ಹೆಗ್ಗಡದೇವನ ಕೋಟೆ ರಾಜನನ್ನು ಸೋಲಿಸಿದ. ಅನಂತರ ರಾತ್ರಿ (ಕೆರೆ ಎತ್ತಿ) ಸತ್ತೆಗಾಲ ಮತ್ತು ಕರಂಗೂರಿನಲ್ಲಿ ಬೀಡುಬಿಟ್ಟಿದ್ದ ಸೈನಿಕರು ಪರಾಭವಗೊಂಡರು. ರಾಜ ಒಡೆಯರು ಮೊದಲ ಭಾಗದಲ್ಲಿ ರಾಜಧಾನಿಯಲ್ಲಿದ್ದು ಕಾರ್ಯಾಚರಣೆಯನ್ನು ಗಮನಿಸುತ್ತಿದ್ದರು. ಅನಂತರ ಅಡೇಗಾಲದಲ್ಲಿ ಬೀಡು ಬಿಟ್ಟಿದ್ದ ಪ್ರಬಲ ಜಕ್ಕನನ್ನು ಕೊಂದು ಹಾಕಿದರು. ತಿರುಮಲನ ಸೈನ್ಯ ಸೋತು ಓಡಿಹೋಯಿತು. ಹೀಗೆ ಶತ್ರುಗಳು ಛಿದ್ರ ಛಿದ್ರರಾಗಿ ನಾನಾ ದಿಕ್ಕುಗಳಿಗೆ ಪಲಾಯನ ಮಾಡಿದರು. ಕೆಂಪೇಗೌಡನ ಸೈನ್ಯವನ್ನು ಮತ್ತು ಬೇಲೂರು ನಾಯಕನ ಸೈನ್ಯವನ್ನು ಮೂಗು ಕೊಯ್ದು ಓಡಿಸಲಾಯಿತೆಂದು ಹೇಳಲಾಗಿದೆ. ದಳವಾಯಿ ಚನ್ನಮ್ಮನಾಯಕ ಮತ್ತು ಸ್ಥಾನಿ ರಾಮನಂಜಯ್ಯ ತಿರುಮಲನನ್ನು ಬಿಟ್ಟು ಓಡಿಹೋದರು. ಹೀಗೆ ಕೆಸರೆ ಕೋಟೆಯ ಯುದ್ಧ ವಿಜಯನಗರದ ಸೈನ್ಯದ ದಾರುಣ ಪರಿಸ್ಥಿತಿಯನ್ನು ಜಗಜ್ಜಾಹೀರುಗೊಳಿಸಿತು. ಅಂತೆಯೇ ದಕ್ಷಿಣ ಕರ್ನಾಟಕದಲ್ಲಿ ಜಾಜ್ವಲ್ಯಮಾನವಾದ ಒಂದು ನಕ್ಷತ್ರದ ಉದಯವನ್ನು ಸೂಚಿಸಿತು.

ವಿಜಯನಗರದ ಪ್ರತಿನಿಧಿಯೆಂದು, ಸಂಬಂಧಿಯೆಂದೂ ಬೀಗುತ್ತಿದ್ದ ತಿರುಮಲನಿಗೆ ಮತ್ತೆ ಮೇಲೆ ಏಳಲು ಆಗದಂತಹ ಪೆಟ್ಟುಬಿದ್ದಿತು. ರಾಜ ಒಡೆಯರು ಇಷ್ಟಕ್ಕೆ ಸುಮ್ಮನಿರದೇ ತಿರುಮಲನನ್ನು ಪೂರ್ತಿಯಾಗಿ ಮುಗಿಸಲು ಕ್ರಮಕೈಗೊಂಡರು. ಬೃಹತ್ ಸಾಮ್ರಾಜ್ಯದ ಮಾಂಡಲಿಕ, ರಾಜ ಪ್ರತಿನಿಧಿ ತಿರುಮಲ ಒಬ್ಬಂಟಿಗನಾಗಿ ಶ್ರೀರಂಗಪಟ್ಟಣದಲ್ಲಿ ಇದ್ದನು. ಅವನಿಗೆ ಬರುತ್ತಿದ್ದ ಆದಾಯದ ಮೂಲಗಳನ್ನೆಲ್ಲಾ ರಾಜ ಒಡೆಯರು ಕತ್ತರಿಸಿ ಹಾಕಿದರು. ಶ್ರೀರಂಗಪಟ್ಟಣಕ್ಕೆ ಬರುತ್ತಿದ್ದ ದವಸಧಾನ್ಯಗಳನ್ನು ನಿಲ್ಲಿಸಲಾಯಿತು. ಅಷ್ಟು ಮಾತ್ರವಲ್ಲ ತಿರುಮಲನ ಸ್ಥಿತಿಯನ್ನು ನೋಡಿ ಆತನಿಗೆ ಸಹಾಯ ಮಾಡಲು ಬಂದ ನೆರೆಯ ರಾಜರನ್ನು ರಾಜ ಒಡೆಯರ ಹಿರಿಯ ಮಗ ನರಸರಾಜ ಸದೆಬಡಿದನು. ಶ್ರೀರಂಗಪಟ್ಟಣದ ಆಡಳಿತ ವ್ಯವಸ್ಥೆಯ ಅವಸಾನವು ತ್ವರಿತ ಗತಿಯಲ್ಲಿ ಮುಂದುವರೆಯಿತು. ಆಘಾತದ ಮೇಲೆ ಆಘಾತವನ್ನು ಅನುಭವಿಸುತ್ತಿದ್ದ ತಿರುಮಲರಾಯ ಹಾಸಿಗೆ ಹಿಡಿದನು. ತಿರುಮಲನ ದುಸ್ಥಿತಿಯನ್ನು ವೆಂಕಟಪತಿರಾಯನು ಗಮನಿಸುತ್ತಲೇ ಬಂದಿದ್ದನು. ಅಂದಿನ ರಾಜಕೀಯ ಚದುರಂಗದಲ್ಲಿ ತಿರುಮಲ ಬೆಲೆ ಕಳೆದುಕೊಂಡಿದ್ದಾನೆಂದು ವೆಂಕಟಪತಿರಾಯನಿಗೆ ಅರಿವಾಯಿತು. ಕೆಸರೆಯುದ್ಧದ ಪರಾಭವಕ್ಕೆ ತಿರುಮಲನ ಅದಕ್ಷತೆ, ಅವಿವೇಕವೇ ಕಾರಣವೆನ್ನುವ ಭಾವನೆ ಉಂಟಾಗಿದ್ದಿತು. ಹಲವಾರು ಬಾರಿ ತಿರುಮಲನನ್ನು ವಿಜಯನಗರದ ಚಕ್ರವರ್ತಿ ನೇರವಾಗಿ ನಿಂದಿಸಿದ್ದನು. ತನ್ನನ್ನು ರಕ್ಷಿಸಿ ಬೆಂಬಲಿಸಬೇಕಾಗಿದ್ದ ವಿಜಯನಗರದ ದೊರೆ ತನ್ನನ್ನು ಕೈ ಬಿಟ್ಟು ಮೈಸೂರು ಅರಸನನ್ನು ಬೆಂಬಲಿಸುತ್ತಿರುವುದು ತಿರುಮಲನಿಗೆ ಸಹಿಸಲು ಅಸಾಧ್ಯವಾಗಿತ್ತು. ಅಷ್ಟು ಮಾತ್ರವಲ್ಲ ಅವನು ರಾಜಧಾನಿ ಶ್ರೀರಂಗಪಟ್ಟಣವನ್ನು ತ್ಯಜಿಸಬೇಕೆಂಬ ಒತ್ತಾಯ ಹೆಚ್ಚಾಗುತ್ತಾ ಹೋಯಿತು. ಕೂಡಲೇ ಬೇರೆ ದಾರಿ ಕಾಣದೇ ತಿರುಮಲನು ಶ್ರೀರಂಗಪಟ್ಟಣವನ್ನು ತ್ಯಜಿಸಿ ತಲಕಾಡಿನ ಬಳಿ ಮಾಲಂಗಿಗೆ ಹೋಗಿ ನೆಲೆಸಿದನು.

ಇದನ್ನೇ ಕಾಯುತ್ತಿದ್ದ ರಾಜ ಒಡೆಯರು ಕೂಡಲೇ ಧಾವಿಸಿ ಬಂದು ಶ್ರೀರಂಗಪಟ್ಟಣವನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ವಿಜಯನಗರದ ದೊರೆ ರಾಜ ಒಡೆಯರನ್ನು ಸ್ವಾಗತಿಸಿ ಅವರಿಗೆ ಆಡಳಿತವನ್ನು ವಹಿಸಿಕೊಟ್ಟನು. ಅಷ್ಟು ಮಾತ್ರವಲ್ಲದೇ ಮಂತ್ರಿ ವಿರೂಪಣ್ಣನ ಮೂಲಕ ರಾಜ ಒಡೆಯರಿಗೆ ಕಾಣಿಕೆಗಳನ್ನು ಕಳುಹಿಸಿಕೊಟ್ಟನು. ಅನಂತರ ರಾಜ ಒಡೆಯರು ವೆಂಕಟಪತಿರಾಯನಿಗೆ ಮರುಕಾಣಿಕೆಯನ್ನು ಕಳುಹಿಸಿಕೊಟ್ಟರು. ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ರಾಜಒಡೆಯರು ಹೀಗೆ, ಒಬ್ಬ ಸಾಮಾನ್ಯ ಸಂಸ್ಥಾನಿಕನಾಗಿರಲಿಲ್ಲ. ರಾಜ ಒಡೆಯರು ವಿಜಯನಗರದ ಸಾಮಂತ ಸ್ಥಾನದಿಂದ ಹೊರಬಂದು ಸಮಾನ ಸ್ಥಾನಕ್ಕೆ ಬಂದಿದ್ದರು. ವಿಜಯನಗರ ಸಾಮ್ರಾಜ್ಯವು ಮೈಸೂರು ರಾಜ್ಯದ ನವೋದಯವನ್ನು ಆದರದಿಂದ ಸ್ವಾಗತಿಸಿತು. ಇಲ್ಲಿಂದ ಮೈಸೂರು ಕೇವಲ ಒಂದು ರಾಜ್ಯವಾಗಿರದೆ ದಕ್ಷಿಣ ಭಾರತದ ಪ್ರಬಲರಾಜ್ಯವಾಗಿ ಹೊರಹೊಮ್ಮಿತು ಹಳೆಯ ಸಾಮ್ರಾಜ್ಯವು ಅಸ್ತಂಗತವಾಗಿ ಹೊಸರಾಜ್ಯವೊಂದು ತಲೆ ಎತ್ತಿ ನಿಂತಿತು. ಮೈಸೂರಿನವರ ವಿಜಯವನ್ನು ಕಲಿಗೋವಿಂದ ವೈದ್ಯ ಹೀಗೆ ವರ್ಣಿಸುತ್ತಾನೆ. "ತಿರುಮಲ ರಾಜನ ಬಿಟ್ಟು ಸಿರಿವಧು ಜಯಲಕ್ಷ್ಮಿ ಬೆಟ್ಟದ ಚಾಮನ ನೆರೆ ಹರುಷದಲಿ ಸೇರಿದಳು". ಮೈಸೂರು ಅರಸರ ರಾಜ್ಯ ವಿಸ್ತರಣೆಯ ದೃಷ್ಟಿಯಿಂದ ಶ್ರೀರಂಗಪಟ್ಟಣವನ್ನು ಆಕ್ರಮಿಸಿದುದು ದೊಡ್ಡದೆಂದೇ ಇತಿಹಾಸಕಾರರು ಭಾವಿಸುತ್ತಾರೆ. ವಿಜಯನಗರದ ರಾಜ ಪ್ರತಿನಿಧಿಯಿಂದ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡುದರಿಂದ ಮೈಸೂರಿನ ಚರಿತ್ರೆಯಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾಯಿತು.

ಈ ರೀತಿ ಕೆಸರೆ ಯುದ್ಧದನಂತರ ವಿಜಯನಗರದ ಚಕ್ರವರ್ತಿ ಮೈಸೂರು ಅರಸರಿಗೆ ರಾಜಸಿಂಹಾಸನವನ್ನು ನೀಡಿದ್ದು ಕೇವಲ ಸಾಂಕೇತಿಕವಾದ ಕಾಣಿಕೆಯಾಗಿ ಉಳಿಯದೆ ಬಹು ಬೇಗ ವಾಸ್ತವವಾದ ಘಟನೆಯ ರೂಪವನ್ನು ತಾಳಿ ಮಹತ್ವವನ್ನು ಪಡೆಯಿತು. ರಾಜಒಡೆಯರಿಗೆ ವೆಂಕಟಪತಿರಾಯನು ಸಾಮ್ರಾಜ್ಯದ ರತ್ನಸಿಂಹಾಸನವನ್ನು ಕಾಣಿಕೆಯಾಗಿ ನೀಡಿದ ಪ್ರಸಂಗವನ್ನು ಮೈಸೂರು ಅರಸರ ಪಾರಂಪರಿಕ ವಂಶಾವಳಿಗಳು ಪ್ರಸ್ತಾಪಿಸುತ್ತವೆ. ಈ ಸಿಂಹಾಸನದ ಪೌರಾಣಿಕ ಹಿನ್ನೆಲೆಯನ್ನು ಈ ಸಂದರ್ಭದಲ್ಲಿ ವಿವರಿಸಲಾಗಿದೆ. ಮೈಸೂರು ಅರಸರಿಗೆ ವಿಜಯನಗರದ ಅರಸು ನೀಡಿದ ಸಿಂಹಾಸನವು, ಪುರೂರವ, ವಿಕ್ರಮಾದಿತ್ಯ ಮೊದಲಾದ ಪೌರಾಣಿಕ ಐತಿಹಾಸಿಕ ವ್ಯಕ್ತಿಗಳು ಉಪಯೋಗಿಸುತ್ತಿದ್ದ ದೈವೀ ಅನುಗ್ರಹ ಹೊಂದಿದ ಒಂದು ಪವಿತ್ರವಾದ ಸಿಂಹಾಸನವಾಗಿದ್ದ ವಿಷಯವನ್ನು ವೆಂಕಟಪತಿರಾಯನು ರಾಜಒಡೆಯರಿಗೆ ವಿವರಿಸಿ ಹೇಳಿದನೆಂದು ವಂಶಾವಳಿ ಮೂಲಗಳು ತಿಳಿಸುತ್ತವೆ.

ಸಿಂಹಾಸನದ ಐತಿಹಾಸಿಕತೆ ಏನೇ ಇರಲಿ ಮೈಸೂರು ಅರಸರು ಈ ಘಟನೆಯ ನಂತರ ತಾವು ವಿಜಯನಗರದ ಉತ್ತರಾಧಿಕಾರಿಗಳೆಂದು ನಿರೂಪಿಸಲು ಪ್ರಾರಂಭಿಸಿದರು. ಇದಕ್ಕೆ ಪೂರಕವಾಗಿ ಒಂಭತ್ತು ದಿವಸಗಳ ವಿಜಯದಶಮಿ ಉತ್ಸವವನ್ನು ವಿಜೃಂಭಣೆಯಿಂದ ಆಚರಿಸಲಾರಂಭಿಸಿದರು. ಇದಕ್ಕೆ ಮೊದಲೇ ವಿಜಯನಗರದ ದೊರೆಗಳ ಅನೇಕ ಬಿರುದುಗಳನ್ನು ಮೈಸೂರು ಅರಸರು ಉಪಯೋಗಿಸಲು ಪ್ರಾರಂಭಿಸಿದ್ದರೆಂಬುದನ್ನು ಇಲ್ಲಿ ಗಮನಿಸಬೇಕು. ವಿಜಯನಗರದ ಸಾಮ್ರಾಜ್ಯದ ಉತ್ತರಾಧಿಕಾರಿಗಳೆಂದು ಮೈಸೂರು ಒಡೆಯರು ಮುಂದುವರೆದು ತಿರುಮಲ ಮತ್ತು ಕುಟುಂಬದ ಮೇಲೆ ಕ್ರಮ ಕೈಗೊಂಡರು. ತಿರುಮಲವ ರಾಣಿ ಅಲಮೇಲಮ್ಮನ ಪೂರಕ ಸಂಗಕ್ಕೂ ಈ ವಿಷಯ ತಳುಕು ಹಾಕಿಕೊಳ್ಳುತ್ತದೆ. ಅಲಮೇಲಮ್ಮನ ಬಳಿಯಿದ್ದ ಒಡವೆಗಳು ರಾಜ್ಯದ ಆಭರಣಗಳು ವಿಜಯನಗರದ ದೊರೆಗಳು ದೇವಾಲಯಗಳು ನಿಂತಿದ್ದವುಗಳು. ಆದುದರಿಂದ ಅವುಗಳನ್ನು ತೆಗೆದುಕೊಂಡು ಹೋಗುವಂತಿಲ್ಲ. ಅವು ರಾಜ ಭಂಡಾರದಲ್ಲಿರಬೇಕು ರಾಜ ಒಡೆಯರು ಭಾವಿಸಿದ್ದರು. ಹಾಗೆಂದು ಅಲಮೇಲಮ್ಮ ತನ್ನ ಬಳಿಯಿದ್ದ ಒಡವೆಗಳನ್ನು ಹಿಂದಿರುಗಿಸಬೇಕೆಂದು ಒತ್ತಾಯಿಸಲಾಯಿತು ಎಂಬ ವಿವರಣೆಯನ್ನು ನೀಡಲಾಗಿದೆ. ಈ ರೀತಿ ೧೬೧೦ ರಲ್ಲಿ ನಡೆದ ಕೆಸರೆ ಯುದ್ಧ ಪರಿಣಾಮದ ದೃಷ್ಟಿಯಿಂದ ಮೈಸೂರಿನ ಇತಿಹಾಸದಲ್ಲಿ ಒಂದು ನಿರ್ಣಾಯಕವಾದ ಕದನವಾಗಿದೆ. ಇದರ ಪರಿಣಾಮ ಗುಪ್ತಗಾಮಿನಿಯಾಗಿ ದೀರ್ಘಕಾಲ, ಮೈಸೂರಿನ ರಾಜಕೀಯ ಬೆಳವಣಿಗೆಗಳ ಮೇಲೆ ಪ್ರಭಾವ ಬೀರುತ್ತಾ ಹೋಯಿತು. ಇದು ಮೈಸೂರು ಸಂಸ್ಥಾನದ ಮೇಲೆ ಮಹತ್ವದ ಪರಿಣಾಮ ಬೀರಿದ್ದು ಮಾತ್ರವಲ್ಲ ಅದರಲ್ಲಿ ಭಾಗವಹಿಸಿದ್ದ ಎಲ್ಲ ಸಣ್ಣಪುಟ್ಟ ಅರಸೊತ್ತಿಗೆಗಳ ಮೇಲೂ ಗಮನಾರ್ಹವಾದ ಪರಿಣಾಮವನ್ನುಂಟು ಮಾಡಿತು. ವಿಜಯನಗರ ಸಾಮ್ರಾಜ್ಯವು ಅಧಿಕೃತವಾಗಿ ಅಸ್ತಂಗತವಾಯಿತೆಂದು ಘೋಷಿಸಿದ ಘಟನೆ ಮೈಸೂರು ಒಡೆಯರ ವಿದೇಶಾಂಗ ನೀತಿಯನ್ನು ರೂಪಿಸಿದ ಪ್ರಬಲ ಶಕ್ತಿಯಾಗಿ ನಾಡಿನ ಇತಿಹಾಸದಲ್ಲಿ ಗಣ್ಯಸ್ಥಾನವನ್ನು ಪಡೆದುಕೊಂಡಿದೆ.

****

# ಗುಬ್ಬಿಯ ಮಿಷನರಿ ರೆ॥ ವಿಲಿಯಂ ಆರ್ಥರ್ "MISSION TO THE MYSORE" ಪುಸ್ತಕದಲ್ಲಿ ಐತಿಹಾಸಿಕ ಅಂಶಗಳು

* ಡಾ॥ ಜಿ. ನಂಜುಂಡ ಸ್ವಾಮಿ

ಭಾರತದೇಶಕ್ಕೆ ಕ್ರೈಸ್ತ ಧರ್ಮ ಪ್ರಚಾರಕ್ಕೆ ಪ್ರಪಂಚದ ನಾನಾ ಕಡೆಯಿಂದ ಮಿಷನರಿಗಳು ಬಂದರು. ವಿಶೇಷವಾಗಿ ತುಮಕೂರು ಜಿಲ್ಲೆಗೆ ಬಂದು ದುಡಿದ ವೆಸ್ಲಿಯನ್ ಮಿಶನರಿ ಬರೆದ ಪುಸ್ತಕ "A Mission to the Mysore" With Scenes and Facts Illustrative of India its People and its Religion ಎಂದಿದೆ. ಪುಸ್ತಕವನ್ನು ಅಂತರ್ಜಾಲದಿಂದ ಪಡೆದಿದ್ದರಿಂದ ಮೂಲ ಪುಸ್ತಕದಲ್ಲಿ ಇದ್ದ ಚಿತ್ರಗಳು ಈ ಪುಸ್ತಕದಲ್ಲಿ ಇಲ್ಲ. ಭಾರತದೇಶದ ಯಾವುದಾದರೂ ಗ್ರಂಥಾಲಯದಲ್ಲಿ ಮೂಲಗ್ರಂಥ ನೋಡಲು ಅವಕಾಶವಾದರೆ ಅದರಲ್ಲಿ ಪ್ರಕಟವಾದ ಚಿತ್ರಗಳನ್ನು ನೋಡಬಹುದು. ಪುಸ್ತಕದ ಬರಹಗಾರನ ಹೆಸರನ್ನು Rev. William arthur, Wesleyan Minister ಎಂದಿದೆ. ಪುಸ್ತಕ ಲಂಡನ್ ನಗರದ ಪ್ರಕಾಶನ 'Partidge and oakey, Paternoster Row' 1947gÀ°è XI+561 ಪುಟದ ಪುಸ್ತಕ ಪ್ರಕಟವಾಗಿದೆ. ಪುಸ್ತಕದ ಆರಂಭದ ಮುನ್ನುಡಿಯಲ್ಲಿ ಲೇಖಕ ಈ ಮಾತುಗಳನ್ನು ಹೇಳಿದ್ದಾನೆ. The following pages, prepared with hope of contributing, in some humble way, toward circulation information with regard to India and promoting an interest in its welfare, were communicated to the Wesleyan Methodist magazine. Hundreds of Person who read them in that periodical have requested that they should be separately published, and a respectable New york Journal has deemed them worthy of reproduction...

ಗುಬ್ಬಿಯಲ್ಲಿ ಅಪಾರವಾಗಿ ತಮ್ಮ ಪಾಲಿನ ಸೇವೆ ಸಲ್ಲಿಸಿದ ವಿಲಿಯಂ ಆರ್ಥರ್ ಅಂದಿನ ದಿನ ವಿದೇಶದಲ್ಲಿ ಪ್ರಕಟವಾಗುತ್ತಾ ಇದ್ದ "Wesleyan Methodist Magazine" ಬರೆದ ಲೇಖನ ಮಾಲೆಯ ಸಂಗ್ರಹವೆ ಈ ಪುಸ್ತಕ. ಈತನಿಗೆ ಕನ್ನಡ ನಾಡಿನ ಇತಿಹಾಸ, ಚರಿತ್ರೆ, ಕಾವ್ಯ, ಸಿದ್ಧಾಂತ ಮುಂತಾದ ವಿಷಯಗಳ ಬಗ್ಗೆ ಚಿಕಿತ್ಸಕ ಮನೋಭಾವ ಇಲ್ಲ. ಈತನಿಂದ ನಾವು ರೈಸ್, ಕಿಟಲ್, ಫ್ಲೀಟ್ ಮುಂತಾದ ಮಹನೀಯರಿಂದ ಪಡೆದ ವಿದ್ವತ್ ಲಾಭವನ್ನು ಪಡೆಯಲು ಸಾಧ್ಯವಿಲ್ಲ ತಾನು ಕಂಡಿದ್ದು ತನ್ನ ಮಿಶನರಿ ಜೀವನದ ಧ್ಯೇಯ ಉದ್ದೇಶದಂತೆ ಬದುಕಿ ಬಾಳಿದ್ದಾನೆ. ಈತ Thomas Hudson ಬರೆದ Old Daniel or Memory of a converted Hindus with observations on Mission work in the Goobbe circuit and Description of Village Life in India, Illustrated with Thirteen Engravings ಪುಸ್ತಕಕ್ಕೆ ರೆ॥ ವಿಲಿಯಂ ಆರ್ಥರ್ ಮುನ್ನುಡಿ ಬರೆದಿದ್ದಾನೆ. ಲಂಡನ್ ನಗರದ Wesleyan conference office ಪ್ರಕಟವಾಗಿದೆ. ಪುಸ್ತಕ ಸುಮಾರು ೧೮೭೦ರಲ್ಲಿ ಪ್ರಕಟವಾಗಿರಬಹುದು. ಈ ಪುಸ್ತಕದ ಮುನ್ನುಡಿಯಲ್ಲಿ ರೆ॥ ವಿಲಿಯಂ.... I can see the Mud houses of Singonahally, the mud wall of the Village and the Temple of Runga, as if they were all before me. Yet five and thirty years are passed and gone since... ಈ ಪುಸ್ತಕಕ್ಕೆ ಮುನ್ನುಡಿ ಬರೆದಾಗ ರೆ॥ ವಿಲಿಯಂ ಅವರಿಗೆ ಸುಮಾರು ೬೦ ಇರಬಹುದು. "ಗುಬ್ಬಿ ಒಂದು ಸಂಸ್ಕೃತಿ ಅಧ್ಯಯನ" ಕಿರು ಪುಸ್ತಕದಲ್ಲಿ ಡಾ॥ ಸಿ. ನಾಗಭೂಷಣರು ಪುಟ ೬೯ಲ್ಲಿ 'ಉರಿಯುವ ನಾಲಿಗೆ' ಎಂಬ ಕೃತಿಯಲ್ಲಿ ಉಲ್ಲೇಖನೆ ಈ ಕೃತಿಯ ಕರ್ತೃ ವಿಲಿಯಂ ಆರ್ಥರ್ ಇದರಲ್ಲಿ ಕ್ರೈಸ್ತಧರ್ಮ ಪ್ರಚಾರದ ವಿವಿರಗಳಿವೆ ಎಂದಿದ್ದಾರೆ. ಈ ವಿವರವನ್ನು ಎಂ.ಎನ್. ಶಿವಣ್ಣನವರಿಂದ ಪಡೆದಿದ್ದು ಮೂಲ ಪುಸ್ತಕವನ್ನು ಪರಿಶೀಲನೆ ಮಾಡುವ ತನಕ ಅದು ಹೀಗೆ ಎಂದು

---

* ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಹೌಸಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ, ತುಮಕೂರು – ೫೭೨೧೦೨

ಹೇಳಲು ಸಾಧ್ಯವಿಲ್ಲ. ಈ ಕೃತಿ ವಿಲಿಯಂ ಆರ್ತರ್‌ರದೆ. ಆದರೆ ಕನ್ನಡ ಭಾಷೆ ಕಲಿತು ಕನ್ನಡದಲ್ಲಿ ಪುಸ್ತಕ ಬರೆದ ತುಮಕೂರು ಜಿಲ್ಲೆಯ ಪ್ರಥಮ ಮಿಶನರಿ ಎಂದು ನಿರ್ಧರಿಸಬಹುದು. "A Mission to the Mysore" ಪುಸ್ತಕದಲ್ಲಿ ಹತ್ತು ಅಧ್ಯಾಯಗಳು ಇದ್ದು 1. The Voyage 2. Madras 3. The Journey "Up Country" 4. Bangalore 5. My Circuit 6. Our Work 7. India: What is it? 8. India its People 9. India : Its Religion 10. The Return.

ಗುಬ್ಬಿಯಲ್ಲಿ ಮಿಶನರಿಯವರು ನಡೆಸಿದ ಚಟುವಟಿಕೆಗಳ ಬಗ್ಗೆ ನಮಗೆ ಮಾಹಿತಿ ಸಿಕ್ಕುವುದು ಐದನೇ ಅಧ್ಯಾಯದಿಂದ. ರೆ॥ ವಿಲಿಯಂ ತನ್ನ ಪುಸ್ತಕದಲ್ಲಿ ದಾಖಲಿಸಿರುವ ಐತಿಹಾಸಿಕ ಅಂಶಗಳು ಬಹಳ ಮಹತ್ವವಿದ್ದು ಆ ಮಾಹಿತಿ ಈಗ ನಮಗೆ ಬೇರೆ ಎಲ್ಲೂ ಲಭ್ಯವಾಗುವುದಿಲ್ಲ.

The Mysore is never so lovely as in the month of October. The Rain have just Fallen; the Fields are all Green, the Tanks full, and the Emerald of the trees Luxurious. It was on a Cloudless afternoon of this month that Mr. Jenkis and Myself riding along the road from Bangalore to Belagum, approached the hill-pass of Hully-Nidgul (P 180)

ಆ ಕಾಲದಲ್ಲಿ ಈ ರಸ್ತೆಯನ್ನು ಬೆಂಗಳೂರು-ಬೆಳಗಾಂ ರಸ್ತೆ ಎಂದು ಕರೆಯುತ್ತಾ ಇದ್ದರು. ಈಗ ಆ ರಸ್ತೆಯಲ್ಲಿ ಸಿಕ್ಕುವ ನಿಜಗಲ್ಲು ಗ್ರಾಮವನ್ನು ಜನ "ಹುಲಿ ನಿಜಗಲ್ಲು" ಎಂದು ಕರೆಯುತ್ತಾ ಇದ್ದರು. ಅಂದಿನ ದಿನ ಅಂದರೆ ಸುಮಾರು ೧೮೩೦ರಲ್ಲಿ ನಿಜಗಲ್ಲಿನಲ್ಲಿ ಸಾಕಷ್ಟು ಹುಲಿಗಳು ಇದ್ದವು.

As in the case of Shivaganga a high Conical Peak, not less Sacred here than... Numerous tanks sparkled among the bright green rice field water in India is not merely beautiful- it is prescios. (P 180, 181)

ಬೆಂಗಳೂರಿನಿಂದ ಬರುವಾಗ ಶಿವಗಂಗೆ ಬೆಟ್ಟವನ್ನು ಗಮನಿಸಿ ಬೆಟ್ಟದ ತುಟ್ಟತುದಿ ಕುಂಭಿಯನ್ನು ಗಮನಿಸಿ ಭಾರತದೇಶದಲ್ಲಿ ಜಲಸಮೃದ್ಧಿ ಜೊತೆಗೆ ಶಿವಗಂಗೆ ಬೆಟ್ಟವನ್ನು ಜನ ದಕ್ಷಿಣಕಾಶಿ ಎಂದು ಕರೆಯುತ್ತಾ ಇದ್ದುದರಿಂದ ತನ್ನ ಪುಸ್ತಕದಲ್ಲಿ Not less Sacred ಎಂದು ಹೇಳಿದ್ದಾನೆ. ಆ ಸಮಯಕ್ಕೆ Nandydroog and Saverndroog especially, were head to be beyond any possibility of assault; (P 183) ಬ್ರಿಟೀಷರು ಹೆಚ್ಚು ಶ್ರಮಪಡದೆ ಯುದ್ಧವಿಲ್ಲದೆ ನಂದಿದುರ್ಗ ಮತ್ತು ಸಾವನದುರ್ಗವನ್ನು ವಶಪಡಿಸಿಕೊಂಡಿದ್ದನ್ನು ಪ್ರಸ್ತಾಪಿಸಿದ್ದಾರೆ. The Latter very much answered to sallust's description of that Numidian Droog which was lost to Jugurtha by a roman soldier's taste for a dish of Snails. The March against them was deemed an Impudent absurdity and even now the Villagers talk more of some officers employed in these daring exploits than of Lord harries who led the Grand army which took Srirangapatam or of sir David baird who stormed. (P 183)

ಇಲ್ಲಿ Numidian Droog ಅಂದರೆ ಯಾವುದು ಗೊತ್ತಾಗುತ್ತಿಲ್ಲ. ಇದು ಬ್ರಿಟಿಷರಿಗೆ ವಶವಾಗದಿರಲು ರೋಮನ್ ಸೈನಿಕನಿಗೆ ಬಸವನಹುಳು ಹಾಕಿ ಮಾಡಿರುವ ಅಡುಗೆ ಊಟ ಮಾಡುವ ಆಸೆಯಿಂದ ಎಂದಿದ್ದಾರೆ. ಅಲ್ಲದೆ ಹಳ್ಳಿಯವರು ಲಾರ್ಡ್ ಹ್ಯಾರಿ ಮದ್ರಾಸ್‌ನಿಂದ ಶ್ರೀರಂಗಪಟ್ಟಣಕ್ಕೆ ಬಹುದೊಡ್ಡ ಸೈನ್ಯ ವಹಿಸಿಕೊಂಡು ಹೋದದ್ದು ನೆನಪಿನಿಂದ ಹೇಳಿದ್ದನ್ನು ದಾಖಲಿಸಿದ್ದಾರೆ. ೧೭೯೯ರ ಇಂಗ್ಲೀಷರ ಮತ್ತು ಟಿಪ್ಪುವಿನ ಯುದ್ಧದ ಬಗ್ಗೆ ಪ್ರಸ್ತಾಪಿಸಿದ್ದಾರೆ.

We spent that night at Toomcoor, in the house of an Inteligent indo-Briton, in the employment of the government and started the next morning for Goobbee, the place of our destination. Hitherto we had travelled on a good road, Lately formed under the direction of Captain Dobbs, the valuable superintendant of the Chiteldroog division. (P 184)

ಅಂದು ರಾತ್ರಿ ತುಮಕೂರಿನಲ್ಲಿ ಬಹಳ ಬುದ್ಧಿವಂತ ಬ್ರಿಟಿಷ್ ನಾಗರಿಕ ಸರ್ಕಾರಿ ನೌಕರಿ ಮನೆಯಲ್ಲಿ ಉಳಿದುಕೊಂಡು ಬೆಳಿಗ್ಗೆ ಗುಬ್ಬಿಗೆ ಹೊರಟಿದ್ದು ಬಹಳ ಒಳ್ಳೆಯ ರಸ್ತೆ ಈ ರಸ್ತೆಯನ್ನು ಕ್ಯಾಪ್ಟನ್ ಡಾಬಸ್ ಅವರು ಚಿತ್ರದುರ್ಗ ಡಿವಿಜನ್‌ನಲ್ಲಿ ಸೂಪರಿಂಟೆಂಡದ ಆಗಿದ್ದಾಗ ಮಾಡಿಸಿದ್ದು.

The Mission-House is a cottage of one story, covered with red tiles, beautiful neat well furnished and situated on the crest if a considerable hill. About mrs Jenkins has arranged a tasteful Garden...

ಗುಬ್ಬಿಯಲ್ಲಿ ಕ್ರೈಸ್ತ ಮಿಶನರಿಗಳು ವಾಸ ಮಾಡಲು ಮನೆ ಕಟ್ಟಲಾಗಿತ್ತು. ಆ ಮನೆಯನ್ನು ಕಲ್ಲಿನಿಂದ ಎತ್ತರದ ಬಂಡೆ ಮೇಲೆ ಕಟ್ಟಲಾಗಿತ್ತು. ಮನೆಗೆ ವಿದೇಶಗಳಲ್ಲಿ ಉಪಯೋಗಿಸುತ್ತ ಇದ್ದ ಕೆಂಪು ಹೆಂಚನ್ನು ಬಳಸಲಾಗಿತ್ತು. ಇಂದಿಗೂ ಈ ಪ್ರದೇಶವನ್ನು ಬಂಗ್ಲೋಪಾಳ್ಯ ಎಂದು ಗುಬ್ಬಿಯಲ್ಲಿ ಕರೆಯಲಾಗುತ್ತದೆ. ಮಿಶನರಿಗಳ ಬಂಗ್ಲೆ ಇಲ್ಲಿ ಇದ್ದುದರಿಂದ ಜನ ಈ ಪ್ರದೇಶವನ್ನು ಬಂಗ್ಲೋಪಾಳ್ಯ ಎಂದು ಕರೆಯಲು ಪ್ರಾರಂಭಿಸಿದರು.

The hill on which the Mission house stands commands an extensive prospect close round its base spreads a large tank- A sheet of water about two miles long and one broad. At its opposite side lake a smaller tank, where large numbers of wild ducks congregate in the interval between these two, stands a grove through the brances of which you see the roofs of Goobbe, and the tower of the Chief Temple. (P 185)

ಸ್ವಲ್ಪ ಎತ್ತರದ ಬಂಡೆ ಅಂದಿನ ದಿನಕ್ಕೆ ಸಣ್ಣಗುಡ್ಡದಂತೆ ಇರಬಹುದು. ಅಲ್ಲಿ ಇದ್ದ ಮಿಶನರಿ ಮನೆಗೆ ಎದುರು ಭಾಗದಲ್ಲಿ ಇದ್ದ ಗುಬ್ಬಿ ಕೆರೆ ಕಂಡು ಬರುತ್ತಾ ಇತ್ತು. ಅದರ ವಿಸ್ತಾರ ಎರಡು ಮೈಲಿಯಷ್ಟು ಇತ್ತು. ಆ ಕೆರೆ ಹತ್ತಿರ ಅದರ ಎದುರು ಭಾಗಕ್ಕೆ ಇನ್ನೊಂದು ಕಟ್ಟೆ ಇತ್ತು. ಅಲ್ಲಿ ಕಾಡು ಪ್ರಾಣಿಗಳು ನೀರು ಕುಡಿಯಲು ಬರುತ್ತಾ ಇತ್ತು. ಕೆರೆಯ ದಂಡೆಯಿಂದ ಗುಬ್ಬಿಯ ಮನೆಯ ಮೇಲಿನ ಭಾಗಗಳನ್ನು ನೋಡಬಹುದಾಗಿತ್ತು. ಅಲ್ಲಿಂದ ನೋಡಿದರೆ ಗುಬ್ಬಿ ಚನ್ನಬಸವೇಶ್ವರಸ್ವಾಮಿ ದೇವಸ್ಥಾನದ ಗೋಪುರ ಕಾಣುತ್ತಾ ಇತ್ತು. ಅಂದಿನ ದಿನದಲ್ಲಿ ಗೋಪುರವೆಂದರೆ ಗುಬ್ಬಿ ಶ್ರೀ ಚನ್ನಬಸವೇಶ್ವರ ದೇವಾಲಯದ ಮುಖ್ಯಮಂಟಪದ ಗೋಪುರವಿರಬೇಕು.

On the east the view is bonded by the hills already mentioned, the woods of Toomcoor nesting at the base whence the blue outline stretches away to Nidjgul and the Sacred peak of Shivagunga, distant about eighteen miles near which at night you see the blaze the fires lighted to keep Tigers away. (P 185)

ಗುಬ್ಬಿಯ ಪೂರ್ವ ದಿಕ್ಕಿಗೆ ನೋಡಿದರೆ ತುಮಕೂರು ಕಂಡು ಬರುತ್ತದೆ. ಅಲ್ಲದೆ ನಿಜಗಲ್ಲು, ಪವಿತ್ರವಾದ ಶಿವಗಂಗೆ ಬೆಟ್ಟ ಕಂಡು ಬರುತ್ತದೆ. ಗುಬ್ಬಿಯಿಂದ ಸುಮಾರು ಹದಿನೆಂಟು ಮೈಲಿ ದೂರ ಇರುವ ಶಿವಗಂಗೆ ಬೆಟ್ಟ, ಬೆಟ್ಟದ ಮೇಲೆ ಪ್ರತಿದಿನ ರಾತ್ರಿ ಬೆಂಕಿಯನ್ನು ಕಾಣಬಹುದು. ಪ್ರತಿನಿತ್ಯ ಶಿವಗಂಗೆಯ ಕುಂಭಿಯಲ್ಲಿ ಬೆಂಕಿ ಹಾಕುವ ಕಾರಣ ಹುಲಿಗಳು ಶಿವಗಂಗೆ ಬೆಟ್ಟಕ್ಕೆ ಬರದಿರಲಿ ಎಂದು. ಶಿವಗಂಗೆ ಬೆಟ್ಟದಲ್ಲಿ ಕುಂಭಿಯ ಎರಡು ಕಂಬಗಳು ಪ್ರಸಿದ್ಧಿ. ಮೊದಲನೆಯದು

ತೀರ್ಥಕಂಬ. ಎರಡನೆಯದು ಉರಿಕಂಬ. ಕಾರ್ತಿಕ ಮಾಸದಲ್ಲಿ ದೀಪ ಹಚ್ಚಲು ಉರಿಕಂಬ ಬಳಸುತ್ತಾರೆ ಎಂದು ಜನ ತಿಳಿದಿದ್ದು ಈ ಹಿಂದೆ ಸುಮಾರು ೧೮೩೦ರಲ್ಲಿ ಪ್ರತಿನಿತ್ಯ ಹುಲಿಯಿಂದ ರಕ್ಷಣೆ ಪಡೆಯಲು ಬೆಂಕಿ ಹಾಕುತ್ತಾ ಇದ್ದರು ಎಂದು ಸ್ಪಷ್ಟವಾಗಿ ವಿಲಿಯಂ ಅವರು ತಿಳಿಸಿದ್ದಾರೆ.

Just across the larger tank close by the water's egde an old temple is shaded by a groop of dacaying trees.

ಗುಬ್ಬಿಕೆರೆಯ ನೀರು ಗುಬ್ಬಿಜನ ನೇರವಾಗಿ ಉಪಯೋಗಿಸಲು ಗುಬ್ಬಿ ಶ್ರೀ ಚನ್ನಬಸವೇಶ್ವರ ದೇವಾಲಯಕ್ಕೆ ಅನುಕೂಲವಾಗುವಂತೆ ಕೆರೆಯ ನೀರು ಸದಾ ಹರಿಯುವಂತೆ ಒಂದು ಸ್ನಾನ ಘಟ್ಟವನ್ನು ಮಾಡಲಾಗಿದೆ. ಅದನ್ನು ಗುಬ್ಬಿಯ ಜನ ಬಿಡವು ಎಂದು ಕರೆಯುತ್ತಾರೆ. ಅದರ ದಂಡೆಯ ಮೇಲೆ ಹಳೆಯ ದೇವಸ್ಥಾನ ಎಂದು ಹೇಳಿರುವುದು ಗುಬ್ಬಿಯ ಪ್ರಖ್ಯಾತ ತೊರೆಮಠ ಮತ್ತು ಪಕ್ಕದಲ್ಲಿ ಇರುವ ಗಂಗಾಧರೇಶ್ವರನ ದೇವಸ್ಥಾನ.

It is about two miles from the mission house and at that distance, looks as to extent like a small grove; but even there the harmony of outline gives an impression of unity. There are (as well as i remember) upwards of thirty trunks, as large as a middle sized elm, each of them projecting branches from which again pendant roots have struck down into auxiliary stems the combination of buck and vitality is unique and consequently impressive, stately piles vegetative Architecture, of which the foundation pillars, arches all are direct from the head of god. (P 186)

ಇಲ್ಲಿ ಪ್ರಸ್ತಾಪವಾಗಿರುವ ಬೃಹತ್ ಆಲದಮರದ ಅವಶೇಷವು ಈಗ ಉಳಿದಿಲ್ಲ. ಇಲ್ಲಿನ ನಿವಾಸಿಗಳಿಗೆ ಗುಬ್ಬಿಯಲ್ಲಿ ಇಂತಹ ಬೃಹತ್ ಆಲದ ಮರ ಇತ್ತು ಅನ್ನುವ ಮಾಹಿತಿ ಸಹ ಇಲ್ಲ. ಈ ಮರವಿದ್ದ ಜಾಗವನ್ನು 'ಆಲದ ಮರದ ಬಾರೆ' ಎಂದು ಹಿಂದಿನವರು ಕರಯುತ್ತಾ ಇದ್ದರು ಅನ್ನುವ ಮಾಹಿತಿ ಮಾತ್ರ ಇದೆ.

In the year 1836 Mr. Hudson made a tour in the Mysore and Coorg. In order to acquire information as to the general facilities for missionary labours, existing in the country and also to fix upon some station for immediate occupancy. of that journey interesting records were published at the time in the missionarry notices and i have reason to hope that Mr. husdon himself will give the public some further account of his missionary operations. Several reasons led to the selection of Goobbee, it was the centre of a large and accessible population. It was far from english soldiery. by whose example the cause of Christianity might be prejudiced. The number of resident Brahmin was small and their influence unimportant. (P 188)

೧೮೩೬ನೇ ಇಸವಿಯಲ್ಲಿ ಹಡ್ಸನ್‌ರವರು ಮೈಸೂರು ಮತ್ತು ಕೊಡಗು ರಾಜ್ಯಗಳಲ್ಲಿ ಓಡಾಡಿ ಯಾವ ಪ್ರದೇಶದಲ್ಲಿ ಮಿಶನರಿಗಳು ಸಂಚರಿಸಿ ಎಲ್ಲೆಲ್ಲಿ ಕೆಲಸ ಮಾಡಬಹುದು ಎಂಬುದರ ಬಗ್ಗೆ ಚರ್ಚಿಸಿ ನಿರ್ಧರಿಸಿ ಆ ಬಗ್ಗೆ ಪ್ರಕಟಣೆಗಳನ್ನು ಹೊರಡಿಸಿದರು. ಹೀಗೆ ಎಲ್ಲಾ ವಿಧದಲ್ಲು ಸೂಕ್ತವಾದ ಸ್ಥಳ ಗುಬ್ಬಿ ಎಂದು ನಿರ್ಧರಿಸಿದರು. ಗುಬ್ಬಿ ಪಟ್ಟಣ ಒಳ್ಳೆಯ ವ್ಯಾಪಾರ ಕೇಂದ್ರ, ಸಾಕಷ್ಟು ಜನಸಂಖ್ಯೆ ಇದೆ. ಗುಬ್ಬಿ ಪಟ್ಟಣಕ್ಕೆ ಇಂಗ್ಲಿಷ್ ಸೈನಿಕ ಸ್ಥಳ ಬಹಳ ದೂರದಲ್ಲಿ ಇದೆ. ಇಂಗ್ಲಿಷ್ ಸೈನಿಕರ ನಡೆ ನುಡಿ ನೋಡಿದ ಜನ ಖಂಡಿತ ಕ್ರೈಸ್ತ ಧರ್ಮಕ್ಕೆ ಬರಲು ಇಷ್ಟಪಡುವುದಿಲ್ಲ. ಅಂದಿನ ದಿನಮಾನದಲ್ಲಿ ಸೈನಿಕರ ನಡವಳಿಕೆ ಬಗ್ಗೆ ಸ್ಥಳೀಯರಲ್ಲಿ ಒಳ್ಳೆಯ ಅಭಿಪ್ರಾಯ ಇರಲಿಲ್ಲ. ಗುಬ್ಬಿ ಪಟ್ಟಣದಲ್ಲಿ ಬ್ರಾಹ್ಮಣ ಜನಾಂಗದ ಸಂಖ್ಯೆ ಬಹಳ ಕಡಿಮೆ. ಅವರ ಪ್ರಭಾವ ಗುಬ್ಬಿ ನಿವಾಸಿಗಳ ಮೇಲೆ ಇಲ್ಲವೇ ಇಲ್ಲ ಎಂದರೂ ತಪ್ಪಾಗಲಾರದು.

When the selection had been made, mr Hudson obtained a piece of ground and began to contruct a mud house for temporary residence, Captain Dobbs kindly him a tent to live in until its completion. (P 188)

ಹಡ್ಸನ್‌ರವರ ಆಸೆಯಂತೆ ಅವರಿಗೆ ಗುಬ್ಬಿಯಲ್ಲಿ ಸ್ವಲ್ಪ ಜಮೀನು ಸಿಕ್ಕಿತು. ಅದರಲ್ಲಿ ಅವರ ಒಂದು ಮಣ್ಣಿನ ಮನೆಯನ್ನು ಕಟ್ಟಿದರು. ಆ ಮನೆಯನ್ನು ಕಟ್ಟುವವರೆಗೂ ವಾಸ ಮಾಡಲು ಅಧಿಕಾರಿಗಳಾಗಿದ್ದ ಕ್ಯಾಪ್ಟನ್ ಡಾಬ್ಸ್‌ರವರು ವಾಸ ಮಾಡಲು ತಮ್ಮ ಟೆಂಟನ್ನು ಸ್ವಲ್ಪ ಕಾಲ ಕೊಟ್ಟಿದ್ದರಂತೆ. ಈ ಟೆಂಟಿನಲ್ಲಿ ಶ್ರೀಮತಿ ಮತ್ತು ಶ್ರೀ ಹಡ್ಸನ್‌ರವರು ವಾಸವಾಗಿದ್ದರು.

Shortly after the completion of the House Mr. Jankins joined the station. and Mr. Hudson went to form new one at the city of Mysore. Mr. Jankins had been there about a twelve month at the time of my arrival. (P 188, 189)

ಹೊಸ ಮಣ್ಣಿನ ಮನೆ ಕಟ್ಟಿದ ಮೇಲೆ ಹಡ್ಸನ್‌ರವರ ಜೊತೆ ಜಾಕೀನ್‌ರವರು ಬಂದು ಸೇರಿಕೊಂಡರು. ಆ ನಂತರ ಹಡ್ಸನ್‌ರವರು ಮೈಸೂರು ನಗರಕ್ಕೆ ಹೋದರು. ಹಡ್ಸನ್‌ರವರು ಮೈಸೂರಿಗೆ ಹೋದ ಮೇಲೆ ಜಾಕೀನ್‌ರವರು ಹನ್ನೆರಡು ತಿಂಗಳು ಒಬ್ಬರೆ ಮಿಶನರಿಗಳಿಗೆ ಕಟ್ಟಿದ ಮನೆಯಲ್ಲಿ ಇದ್ದರು.

The town of Goobbe situated about sixty miles north-west of Bangalore, has between six and seven thousand inhabitanis. They depend principally on mercantile pursuits; having a weekly market, and carrying on a comsiderable trade, in Betel-Nut Coffee and grain which they purchase from the people of the western province, Nuggur (Formerly called Bednore) and sell in the markets of Bangalore and Wallajahnuggur. The place has long enjoyed the reputation of Great wealth being called Huma or " Golden Gubbee".... (P 189)

ಬೆಂಗಳೂರು ನಗರಕ್ಕೆ ಅರವತ್ತು ಮೈಲಿ ದೂರದಲ್ಲಿ ಇರುವ ಗುಬ್ಬಿ ನಗರದಲ್ಲಿ ಆರುಸಾವಿರದಿಂದ ಏಳುಸಾವಿರದವರೆಗೆ ಜನಸಂಖ್ಯೆ ಇದೆ. ಜನರ ಮುಖ್ಯ ಕಸುಬು ವ್ಯಾಪಾರ. ಇಲ್ಲಿ ಪ್ರತಿವಾರ ಸಂತೆ ನಡೆಯುತ್ತದೆ. ಈ ಗುಬ್ಬಿ ನಗರದಲ್ಲಿ ಅಡಿಕೆ, ಕಾಫಿ ಮತ್ತು ಬೇಳೆಕಾಳುಗಳನ್ನು ಈಗ ನಗರ ಎಂದು ಕರೆಯುವ ಈ ಹಿಂದೆ ಬಿದನೂರು ಎಂದು ಕರೆಯುತ್ತಾ ಇದ್ದ ಜಾಗದಿಂದ ಕೊಂಡು ತರುತ್ತಾರೆ. ತಾವು ತಂದ ಮಾಲುಗಳನ್ನು ಬೆಂಗಳೂರು ಮತ್ತು ವಾಲಾಜಪೇಟೆಯಲ್ಲಿ ಮಾರಾಟ ಮಾಡುತ್ತಾರೆ. ಈ ಎಲ್ಲಾ ಕಾರಣದಿಂದ ಗುಬ್ಬಿಯನ್ನು "ಚಿನ್ನದ ಗುಬ್ಬಿ" ಎಂದು ಕರೆಯಲಾಗುತ್ತದೆ.

The town is like all towns in India. surrounded by a wall. They are always of mud, verying in height and thickness according to the importance of the place it is generally a mere line of wall. capable only of repelling rebbers or wild beasts; but in larger places has at intervals, square projecting towers, intended for military defence. These mud fortifications have often proved formidable obstales to Artillery; the sudden mass permitting the shot to sink into it; without being materially shaken. Even small villages with fifty or a hundred houses, have there wall. As well as I could learn. the term "Town" (Oor) is applied only to a place with both wall and market; "Village" (Hally) to one with a wall, but not a market; and "Hamlet"(Palya) to a group of houses without either. "City" (Patna) is used only of seats of Governament or has one get; a town this at opposite points; a city several. The gates are of wood; and through Punderous.

ಗುಬ್ಬಿ ಊರು ಭಾರತದೇಶದ ಎಲ್ಲಾ ಊರು ಇದ್ದಂತೆ ಇದೆ. ಗುಬ್ಬಿ ಪಟ್ಟಣದ ಸುತ್ತ ಮಣ್ಣಿನಲ್ಲಿ ಕಟ್ಟಿದ ಗೋಡೆ ಇದೆ. ಅರ್ಥಾತ್ ಕೋಟೆ ಗೋಡೆ. ಈ ಗೋಡೆಯ ಎತ್ತರ ಮತ್ತು ದಪ್ಪ ಮುಖ್ಯವಾದ ಪ್ರದೇಶಗಳಲ್ಲಿ ವ್ಯತ್ಯಾಸವಾಗುತ್ತಾ ಹೋಗುತ್ತದೆ. ಈ ಕೋಟೆ ಗೋಡೆ ಕಟ್ಟುವುದು ಕಳ್ಳಕಾಕರ ಭಯದಿಂದ ಮತ್ತು ಕಾಡಿನ ಪ್ರಾಣಿಗಳಿಂದ ರಕ್ಷಣೆ ಪಡೆಯಲು ಕೋಟೆಯನ್ನು ನಿರ್ಮಿಸಲಾಗುತ್ತದೆ. ಕೋಟೆ ಮಹಾದ್ವಾರ ಚಚ್ಚೌಕಾಕಾರದಲ್ಲಿ ನಿರ್ಮಿಸುತ್ತಾ ಇದ್ದರು. ಯೋಧರ ಅನುಕೂಲಕ್ಕೆ ತಕ್ಕಂತೆಯು ಕಟ್ಟಿರುವುದು ಉಂಟು. ವೈರಿಗಳು ಎಸೆಯುವ ಆಯುಧಗಳಿಂದ ಕೋಟೆ ಒಳಗೆ ಇರುವವರಿಗೆ ತೊಂದರೆ ಆಗದಂತೆ ವ್ಯವಸ್ಥೆ ಮಾಡಿರುತ್ತಾ ಇದ್ದರು. ಐವತ್ತರಿಂದ ನೂರು ಮನೆ ಇರುವ ಹಳ್ಳಿಗಳಲ್ಲಿ ಹಳ್ಳಿ ಸುತ್ತಾ ಕೋಟೆ ಗೋಡೆಯನ್ನು ನಿರ್ಮಿಸುತ್ತಾ ಇದ್ದರು. ಜನಸಂಖ್ಯೆ ಹೆಚ್ಚಿಗೆ ಇರುವಲ್ಲಿ ಕೋಟೆಗೋಡೆ ನಿರ್ಮಿಸುತ್ತಾ ಇದ್ದರು. ಇಲ್ಲಿ ವ್ಯಾಪಾರಕ್ಕೆ ಪ್ರತ್ಯೇಕ ಸ್ಥಳ ಮತ್ತು ಬೀದಿ ಇರುತ್ತದೆ. ಹಳ್ಳಿಯಲ್ಲಿ ಕೋಟೆ ಗೋಡೆ ಮಾತ್ರ ಇರುತ್ತಿತ್ತು. ಕೆಲವು ಸಾರಿ ಹೊಲದ ಹತ್ತಿರ ಅಥವಾ ತೋಟದ ಹತ್ತಿರ ಹತ್ತಾರು ಮನೆಗಳು ನಿರ್ಮಾಣವಾದರೆ ಅದನ್ನು ಪಾಳ್ಯ ಎಂದು ಕರೆಯುತ್ತಾ ಇದ್ದರು. ಸರ್ಕಾರದ ಮುಖ್ಯವಾದ ಕಛೇರಿಗಳಿಂದ ಮತ್ತು ಪ್ರಮುಖ ವ್ಯಾಪಾರ ಕೇಂದ್ರವು ಆಗಿರುತ್ತಾ ಇದ್ದದನ್ನು ಪಟ್ಟಣ ಎಂದು ಕರೆಯುತ್ತಾ ಇದ್ದರು. ಹಳ್ಳಿಯ ಕೋಟೆಗೆ ಒಂದು ಬಾಗಿಲು ಇರುತ್ತಾ ಇತ್ತು. ಊರು ಇರುವ ಸ್ಥಳದ ಕೋಟೆಗೆ ಎರಡು ಬಾಗಿಲುಗಳು ಪೂರ್ವ ಪಶ್ಚಿಮ ದಿಕ್ಕಿಗೆ ಪಟ್ಟಣದಲ್ಲಿ ಕೋಟೆಗೆ ಹಲವು ಬಾಗಿಲುಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ನಿರ್ಮಿಸಿರುತ್ತಾ ಇದ್ದರು. ಕೋಟೆ ಬಾಗಿಲುಗಳನ್ನು ಮರದಲ್ಲಿ ಮಾಡಿರುತ್ತಾ ಇದ್ದರು.

The town of Gubbee consists of two main streets interested by several minor ones. At one side stands the Fort, Mud. Ofcourse within which live most of the rich Merchants; Several holdings a private residence here, even though they carry on business in the pettah. (P 191)

ಗುಬ್ಬಿಯಲ್ಲಿ ಎರಡು ಮುಖ್ಯ ಬೀದಿಗಳು ಇದ್ದು ಅವುಗಳಲ್ಲಿ ಸಣ್ಣ ಸಣ್ಣ ಬೀದಿಗಳು ಇವೆ. ಕೋಟೆಯೊಳಗೆ ಶ್ರೀಮಂತ ವರ್ತಕರು ವಾಸಿಸುತ್ತಾ ಇದ್ದಾರೆ. ಈ ಶ್ರೀಮಂತ ವ್ಯಾಪಾರ ಸ್ಥಳ ವ್ಯಾಪಾರ ಮಳಿಗೆಗಳು ಪೇಟೆ ಬೀದಿಯಲ್ಲಿ ಇವೆ. ಈಗ ಕೋಟೆಬೀದಿ ಎಂದು ಕರೆಯುವ ಈ ಪ್ರದೇಶವನ್ನು ಈಗಲೂ ಜನ "ಊರೊಳಗೆ" ಎಂದು ಗುರುತಿಸಲಾಗುತ್ತದೆ. ಎರಡು ಮುಖ್ಯರಸ್ತೆಗಳಲ್ಲಿ ಜವಳಿಪೇಟೆ, ಬೆಲ್ಲದಪೇಟೆ, ದೊಡ್ಡಪೇಟೆ, ಕಾಯಿಪೇಟೆ, ದೇಶಾವರಪೇಟೆ, ಆನೇಪೇಟೆ ಮುಂತಾದವು ಪ್ರಮುಖ ವ್ಯಾಪಾರ ಸ್ಥಳದ ಹೆಸರು.

The streets of Gubbee are much like those of Bangalore, except that instead of the crowd and hurry of a large city, you have a few people moving about with the leisurely air of a country town. Almost every peson you meet bears on his breast a bright silver box of more than two inches in length which he tells you is 'God' that is it holds the Linga, an idol which may not even be described.... Almost every forehead is smeared with the white ashes of cow-dung some in striple, some having the whole surface covered and others with the Bare chest and arms sanctified in the same way. These marks proclaim them worshipers of Shiva, then you are sure to meet with Beggars in some part of the streets. Almost coverted with these ashes; while attached to the rival sect of vishtnuites have forehead chest and arms marked over with huge, ugly triends. Thus adorned bearing a small btrass gong and a conch shell and lustly bellowing the name of Govinda or Eeshwara. These beggars boldly demand arms, which they receive not so much as a human gift as a religious debt. (P 194, 195)

ಗುಬ್ಬಿಯ ಪೇಟೆ ಬೀದಿಗಳು ಬೆಂಗಳೂರಿನ ಪೇಟೆ ಬೀದಿಯಂತೆ ಇವೆ. ಆದರೆ ಬೆಂಗಳೂರಿನ ಪೇಟೆಬೀದಿಗಳಲ್ಲಿ ಇರುವ ಜನಸಂದಣಿ ಗುಬ್ಬಿಯಲ್ಲಿ ಇಲ್ಲ. ಗುಬ್ಬಿ ಪೇಟೆ ಬೀದಿಯಲ್ಲಿ ಓಡಾಡುವ ವ್ಯಾಪಾರಸ್ಥರ ಎದೆಯ ಮೇಲೆ ಬೆಳ್ಳಿಯ

ಕರಡಿಗೆಯನ್ನು ನೋಡಬಹುದು. ಅದು ಏನು ಎಂದು ಕೇಳಿದರೆ ನಮ್ಮ ದೇವರು ಎಂದು ಹೇಳುತ್ತಾರೆ. ಅದರ ರೂಪ ಹೇಗಿದೆ ಎಂದು ಕೇಳಿದರೆ ಅದನ್ನು ವಿವರಿಸಲು ಅವರು ಸಿದ್ಧರಿಲ್ಲ. ಎದೆಯ ಮೇಲೆ ಕರಡಿಗೆ ಧರಿಸಿರುವ ವ್ಯಾಪಾರಿಗಳು ತಮ್ಮ ಹಣೆಯ ಮೇಲೆ ವಿಭೂತಿಯನ್ನು ಮೂರುಬೆಟ್ಟಿನಲ್ಲಿ ಧರಿಸಿದ್ದರೆ ಕೆಲವರು ತಮ್ಮ ಮುಖವನ್ನು ಸಂಪೂರ್ಣವಾಗಿ ವಿಭೂತಿಮಯವನ್ನಾಗಿ ಮಾಡಿಕೊಂಡಿರುತ್ತಾರೆ. ಕೆಲವರು ತಮ್ಮ ಎದೆಯ ಪ್ರದೇಶದಲ್ಲಿ ಯಾವ ವಿಧವಾದ ಬಟ್ಟೆಯನ್ನು ಧರಿಸದೆ ಎದೆಯ ಮೇಲೆ ತೋಳು, ಮಣಿಕಟ್ಟು, ಮುಂಗೈ ಹೀಗೆ ದೇಹದ ಎಲ್ಲಾ ಭಾಗಗಳಲ್ಲೂ ವಿಭೂತಿಯನ್ನು ಧರಿಸಿರುತ್ತಾರೆ. ಇವರೆಲ್ಲಾ ಮಹಾನ್ ಶಿವಭಕ್ತರು. ಪೇಟೆ ಬೀದಿಯಲ್ಲಿ ಭಿಕ್ಷೆ ಬೇಡುತ್ತಾ ಶೀವಭಕ್ತ ಜಂಗಮಮೂರ್ತಿಗಳನ್ನು ನೋಡಬಹುದು. ಇದೇ ಪೇಟೆ ಬೀದಿಯಲ್ಲಿ ದಾಸಯ್ಯಗಳು ಹಣೆಯ ಮೇಲೆ ಎದೆ ತೋಳು ಮೊಣಕೈ ಮುಂತಾದ ಭಾಗಗಳಲ್ಲಿ ತ್ರಿಪುಂಡ್ರವನ್ನು ಧರಿಸಿ ಕೈಯಲ್ಲಿ ಜಾಗಟೆ, ಶಂಖ ಹಿಡಿದು ಭಿಕ್ಷೆ ಬೇಡುವ ದಾಸಯ್ಯಗಳ ವರ್ಣನೆ ಮಾಡಿದ್ದಾರೆ. ಅವರು ಗೋವಿಂದ, ಈಶ್ವರಾ ಎಂದು ಕೂಗುವುದನ್ನು ದಾಖಲಿಸಿದ್ದಾನೆ.

At the door of some wealthy merchant you would occasionally see his wife or daughter in full dress of costly silk, her Glossary black hair graced a round ornament of gold on the crown; long pendants from the ears, the perforation of which and been aritificiall increased to the diameter of half an inch; the edges of ears crowned with a succession of rings up to the very tip. A ring, large enough for a bunch of keys inserted into the nose. Resting on the cheek and strung with pearls a heart shaped piece of gold suspended from the centre membrane of the nose and resting on the upper lip; several chains of gold on neck, sometimes a richely gemmed collar; the arms thronged with bracelets from above the elbow; a ring or more on every finger; massaive silver anklets loading the feet and tinkling with every motion, while each toe rejoiced in a broad ring. In fact the first trinklet graces the crown, the last decks the little toe... (P 195, 196)

ಶ್ರೀಮಂತ ವ್ಯಾಪಾರಿ ಮನೆಯ ಬಾಗಿಲ ಮುಂದೆ ಅಪರೂಪಕ್ಕೆ ಆತನ ಪತ್ನಿ ಅಥವಾ ಮಗಳನ್ನು ನೋಡಬಹುದು. ಅವರುಗಳು ಬಹಳ ಬೆಲೆಬಾಳುವ ರೇಷ್ಮೆ ಪೀತಾಂಬರವನ್ನು ಉಟ್ಟಿರುತ್ತಾರೆ. ಕಪ್ಪಾದ ತಲೆಯ ಕೂದಲನ್ನು ಚೆನ್ನಾಗಿ ಬಾಚಿಕೊಂಡು ತಲೆಗೆ ಧರಿಸುವ ಬೆಲೆಬಾಳುವ 'ರಾಟೆ'ಯನ್ನು ಧರಿಸಿರುತ್ತಾರೆ. ಕಿವಿಗೆ ಬುಗುಡಿ, ಮಾಟಿ, ಅಲ್ಲದೆ ಕೆನ್ನೆಸರಪಳಿ ಇವುಗಳಿಂದ ಅಲಂಕರಿಸಲ್ಪಟ್ಟು, ಮೂಗಿಗೆ ಮೂಗುಬಟ್ಟು ಮುಂತಾದ ಆಭರಣಗಳಿಂದ ಅಲಂಕರಿಸಲ್ಪಟ್ಟು ಕೊರಳಲ್ಲಿ ಅನೇಕ ಬೆಲೆಬಾಳುವ ಹಾರಗಳು, ಕೊರಳಿಗೆ ಕಂಠೀಹಾರ. ಅದು ರತ್ನಖಚಿತವಾದದ್ದು, ತೋಳುಗಳಿಗೆ ತೋಳುಬಂದಿ ಕೈಬಳೆ ಬೆರಳುಗಳಿಗೆ ಉಂಗುರಗಳು ಕಾಲಿಗೆ, ಕಾಲವಿಗೆ, ಕಾಲುಗೆಜ್ಜೆ, ಕಾಲಿನ ಬೆರಳಿಗೆ ಕಾಲುಂಗುರ ಹೀಗೆ ಸರ್ವಾಲಂಕಾರ ಭೂಷಿತರಾಗಿ ಶ್ರೀಮಂತ ವ್ಯಾಪಾರಿಯ ಪತ್ನಿ ಅಥವಾ ಮಗಳು ಧರಿಸಿದ ಆಭರಣಗಳ ವರ್ಣನೆ ಮಾಡಿದ್ದಾರೆ.

I have also seen a little girl of not more than five of six years of age in one of those same house, with every ornament gone her hair shaved off and other sign widowhood. A poor girl of three or five or seven, may be given by her father to a husband of thirty or fifty or seventy, She may never have set her eyes on him. Except on the wedding day; she is since living at her father's house; but if the man who calls her wife die. She is his widow and his widow for life. She is stripped of all her ornaments, her head and a widow's rube put on then begins a life of Bitterness. (P 196, 197)

ಅಂದಿನ ದಿನಮಾನದಲ್ಲಿ ಬಾಲ್ಯವಿವಾಹ ಸಾಮಾನ್ಯ. ೫, ೬, ೭ ವರ್ಷದ ಹೆಣ್ಣುಮಕ್ಕಳನ್ನು ೩೦, ೫೦, ೭೦ ವರ್ಷದವರಿಗೆ ಕೊಟ್ಟು ವಿವಾಹ ಮಾಡಿದ್ದನ್ನು ವಿಲಿಯಂ ಗಮನಿಸಿದ್ದಾರೆ. ಅಂತಹ ಸಣ್ಣ ಮಕ್ಕಳು ಗಂಡನ ಮನೆಗೆ ಹೋಗುವ ಮುಂಚೆ ವಿಧವೆಯರು ಆದರೆ ಅವರ ದೇಹದ ಮೇಲೆ ಇದ್ದ ಎಲ್ಲಾ ಒಡವೆಗಳನ್ನು ತೆಗೆದು ಕೂದಲನ್ನು ಕತ್ತರಿಸಿ ವಿರೂಪಗೊಳಿಸಲಾಗುತ್ತಿತ್ತು. ಅಂದಿನ ದಿನ ಬಾಲವಿಧವೆಯರ ಸಂಕಷ್ಟವನ್ನು ನೋಡಿ ಹೃದಯತುಂಬಿ ಆ ಬಾಲಕಿಯರ ಕಷ್ಟದ ಬಗ್ಗೆ ಬರೆದಿದ್ದಾರೆ.

The town is enriched with two or three schools. There are generally like the shops, open in the front as all reading is done in reciative, your ears are regaled from a considerable distance. By the nasal music of a score small voices chanting the changes of the alphabet, arithmetical tables or the disgusting legends of some Purana. Master and pupils are comfertably sqatted on the earthen floor, which is strewed with fine sand. On this the younger boys are busily tracing letters with the forefinger, singing industriously all the while a long ditty, which with an admirable mastery of Jingle describes the various changes by which each letter or syllabic form is made. This is vestibule of the Hindu temple of knowledge; and happy and clear is that urchin who within the first three months succeeds in mastering all the forms of alphabet. So as to chant currectly the history of their mutations and to trace the example as he chants. This tediousness arises nor from any want of attitude on the of boys:- Indeed I never knew an european to visit a native school without receiving the impression that the children were even more apt then among ourserves:- But wholly from the complexity of the alphabet and the utter clumisiness of the system on which it is taught. The alphabetic forms put fourth by the missionaries and in use in mission schools, reduce the labour for more than half. (P 198)

ಗುಬ್ಬಿಯಲ್ಲಿ ಎರಡು ಅಥವಾ ಮೂರು ಶಾಲೆಗಳಿವೆ. ಅವು ನೋಡಲು ಪೇಟೆಯ ಅಂಗಡಿಗಳಂತೆ ಇವೆ. ಶಾಲೆಯ ಮುಂಭಾಗ ಸಂಪೂರ್ಣ ತೆರೆದಿರುತ್ತದೆ ಅಲ್ಲದೆ ಶಾಲೆಯ ವಿದ್ಯಾರ್ಥಿಗಳು ಓದುತ್ತಾ ಇರುವ ಪಾಠಗಳು ದೂರದಲ್ಲೆ ನಮ್ಮ ಕಿವಿಗೆ ಕೇಳಿಸುವಂತೆ ಗಟ್ಟಿಯಾಗಿ ಅಭ್ಯಾಸ ಮಾಡುತ್ತಾ ಇರುತ್ತಾರೆ. ವಿದ್ಯಾರ್ಥಿಗಳು ಓದುವ ಪಾಠಗಳು ನಮಗೆ ಗಾಳಿಯ ಸಹಾಯದಿಂದ ನುಡಿಸುವ ವಾದ್ಯದ ಧ್ವನಿಯಂತೆ ಕೇಳಿಸುತ್ತಾ ಇರುತ್ತದೆ. ಆ ಮಕ್ಕಳ ಅಕ್ಷರಗಳ ಉಚ್ಚರಣೆ ಕಾಗುಣಿತ, ಮಗ್ಗಿ, ಕನ್ನಡ ಕಾವ್ಯ, ಅಮರಕೋಶದ ಶ್ಲೋಕಗಳ ಬಾಯಿಪಾಠ ಈ ಎಲ್ಲವನ್ನು ಶಾಲೆಯ ಉಪಾಧ್ಯಾಯರಿಂದ ಮಕ್ಕಳು ಕಲಿಯುತ್ತಾ ಇದ್ದರು. ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳು ಮಣ್ಣಿನ ನೆಲದ ಮೇಲೆ ಕುಳಿತು ವಿದ್ಯಾಭ್ಯಾಸ ಮಾಡುತ್ತಾ ಇದ್ದರು. ಅಕ್ಷರಾಭ್ಯಾಸ ಮಾಡುವ ಮಕ್ಕಳು ನುಣುಪಾದ ಮರಳನ್ನು ತಮ್ಮ ಮುಂದೆ ಹರಡಿಕೊಂಡು ಅಕ್ಷರಗಳನ್ನು ತಮ್ಮ ತೋರು ಬೆರಳಿನಿಂದ ತಿದ್ದುತ್ತಾ ಇದ್ದರು. ಅವರು ಅಕ್ಷರಗಳನ್ನು ಬಾಯಲ್ಲಿ ಹೇಳುತ್ತಾ ಇದ್ದರು. ಅವರು ಮುಂದೆ ಕಾಗುಣಿತವನ್ನು ಬಾಯಲ್ಲಿ ಹೇಳುವುದನ್ನು ದಾಖಲಿಸಿದ್ದಾರೆ. ಈ ವಿದ್ಯಾಭ್ಯಾಸ ಹಿಂದೂ ದೇವಸ್ಥಾನದಂತೆ ನಡೆದು ಬರುತ್ತಾ ಇತ್ತು. ಈ ಶಾಲೆಯಲ್ಲಿ ಬಾಲಕರು ಅಕ್ಷರ ಮತ್ತು ಕಾಗುಣಿತವನ್ನು ಮೂರು ತಿಂಗಳಲ್ಲಿ ಕಲಿತು ಬಿಡುತ್ತಾ ಇದ್ದರು. ಇಂಗ್ಲೀಷ್ ದೇಶದ ವಿದ್ಯಾರ್ಥಿಗಳು ಬಹಳ ಬುದ್ಧಿವಂತರು. ಈ ಶಾಲೆಯಲ್ಲಿ ಬಹಳ ಗೊಂದಲ. ಶಿಸ್ತು ಕಡಿಮೆ ಎಂದು ಅನ್ನಿಸಿದರೂ ಮುಂದೆ ಈ ವಿದ್ಯಾರ್ಥಿಗಳು ಮಿಶನರಿ ಶಾಲೆಗೆ ಬಂದಾಗ ಆ ವಿದ್ಯಾರ್ಥಿಗಳಿಗೆ ಅಕ್ಷರಾಭ್ಯಾಸ ಮಾಡಿಸುವ ಶ್ರಮ ಅರ್ಧ ಕಡಿಮೆಯಾಗುತ್ತದೆ ಎಂದಿದ್ದಾರೆ. ಗುಬ್ಬಿಯಲ್ಲಿ ನಡೆಯುತ್ತಾ ಇದ್ದ ಗುರುಕುಲದ ಸಂಪೂರ್ಣ ವಿವರವನ್ನು ವಿಲಿಯಂ ಅವರು ದಾಖಲಿಸಿದ್ದರೆ ಇನ್ನು ಸಾಕಷ್ಟು ವಿಷಯ ನಮಗೆ ತಿಳಿದು ಬರುತ್ತಾ ಇತ್ತು.

Goobbee appa is indisputably the most honoured God of the town and neighbourood; but he is by no means the only one. To worship only one god, is not in the nature of Hinduism. A secrete distruct of the favourite deity is manifested by a search after others. The temple of Goobbee appa stands, as has been said, out side the eastern gate. A few yards within that gate in the main street, an open building attracts your eye to an actar of the god Mileppa. Facing you at the head of the same street, is a small building to the Goddess Yellamma. It is of mud, mean and neglected looking but when the cholera was scooring the town here centred the general hope. They did not take any medicine. They would say; medicine is for diseases. But cholera is not disease; Yellamma just determones to kill a certain number of persons and for that purpose puts a fire in their bellu. To take medicine only emerges her and makes her kill more. Sacrifices are esteemed the only remedy and to these they has restore, I saw the heads of the Buffaloes ranged before this disgusting Idol and the place around slippery with their blood... (P 215)

ಗುಬ್ಬಿ ಮತ್ತು ಸುತ್ತಮುತ್ತಲಿನ ಗ್ರಾಮಸ್ಥರು ಗುಬ್ಬಿಯಪ್ಪನಿಗೆ ತಮ್ಮ ಅತೀವವಾದಭಕ್ತಿ ಶ್ರದ್ಧೆಯನ್ನು ತೋರಿಸುತ್ತಾರೆ. ಅವರೆಲ್ಲರ ಭಕ್ತಿ ಗುಬ್ಬಿಯಪ್ಪನಿಗೆ ಸಲ್ಲುತ್ತದೆ. ಭಾರತೀಯರಿಗೆ ಒಬ್ಬನೇ ದೇವರು ಎಂದು ನಂಬಿ ಬದುಕಲು ಇವರ ಕೈಯಲ್ಲಿ ಸಾಧ್ಯವಿಲ್ಲ. ಗುಬ್ಬಿಯಪ್ಪನ ದೇವಸ್ಥಾನದ ಪೂರ್ವಾಭಿಮುಖದ ಬಾಗಿಲಿನಿಂದ ಹೊರಟು ಸ್ವಲ್ಪ ದೂರದಲ್ಲಿ ಪೇಟೆ ಬೀದಿ ಪ್ರಾರಂಭವಾಗುತ್ತದೆ. ಈಗ ಅದನ್ನು ಜವಳಿಪೇಟೆ ಎಂದು ಕರೆಯುತ್ತಾರೆ. ತೆರೆದ ಮಂಟಪದ ದೇವಾಲಯವಿದ್ದು ಅದರಲ್ಲಿ ಇರುವ ದೇವರನ್ನು ಮಿಲಿಯಪ್ಪ ಎಂದು ಬರೆದಿದ್ದಾರೆ. ಅದು ಓಹಿಲೇಶ್ವರನ ದೇವಸ್ಥಾನ. ಈ ಪುಸ್ತಕ ಬರೆದ ಕಾಲದಲ್ಲಿ ಸಂಪೂರ್ಣ ದೇವಾಲಯ ಸ್ವರೂಪದಲ್ಲಿ ಇಲ್ಲಿದೆ. ಕಲ್ಲು ಮಂಟಪದಲ್ಲಿ ಇತ್ತು. ಭಕ್ತ ಓಹಿಲೇಶ್ವರ ಕೈಲಾಸಕ್ಕೆ ಹೋಗಲಾಗಿ ಅವರ ಗಂಟೆಯ ನಾಲಿಗೆ ಇಲ್ಲಿ ಬಿತ್ತು ಎಂದು ..ನತೆ ಹೇಳುತ್ತಾ ಬರಡಿದ್ದಾರೆ. ಓಹಿಲೇಶ್ವರ ೬೩ ಜನ ಪುರಾತನರಲ್ಲಿ ಒಬ್ಬರು. ಅಂದು ಜನ ಓಹಿಲೇಶ್ವರ ಎಂದು ಹೇಳಿದ್ದು ಬರೆಯುವಾಗ ತಪ್ಪಾಗಿ ಹಿಂದೂಗಳ ಉಚ್ಚಾರಣೆಯನ್ನು ಸರಿಯಾಗಿ ಅರ್ಥವಾಗದೆ ವಿಲಿಯಂರವರು Mileappa ಎಂದು ಬರೆದರು ಎಂದು ಕಾಣುತ್ತದೆ. ಅಲ್ಲಿಂದ ಮುಂದಕ್ಕೆ ಸಣ್ಣ ಮಣ್ಣಿನ ದೇವಾಲಯ 'ಯಲ್ಲಮ್ಮ'ನದು ಇದ್ದು ಅಂದಿನ ದಿನದಲ್ಲಿ ಕಾಲರಾ ಬಂದಾಗ ಗುಬ್ಬಿಯ ಜನತೆ ಔಷಧಿ ತೆಗೆದು ಕೊಳ್ಳದೆ ಯಲ್ಲಮ್ಮ ಎಷ್ಟು ಜನರನ್ನು ಆಹುತಿ ತೆಗೆದುಕೊಳ್ಳಬೇಕು ಅಂದು ಕೊಂಡಿದ್ದಾಳೋ ಅಷ್ಟು ಜನರನ್ನು ತೆಗೆದುಕೊಳ್ಳದೆ ಬಿಡುವುದಿಲ್ಲ, ನಾವು ಔಷಧಿಯನ್ನು ತೆಗೆದು ಕೊಂಡರೆ ಯಲ್ಲಮ್ಮನಿಗೆ ಸಿಟ್ಟು ಬರುತ್ತದೆ ಎಂಬ ನಂಬಿಕೆಯನ್ನು ಅಂದಿನ ಜನತೆ ಇಟ್ಟು ಕೊಂಡಿದ್ದರು. ಯಲ್ಲಮ್ಮನಿಗೆ ಶಾಂತಿ ಮಾಡಲು ಅಂದಿನ ಜನ ಕೋಣಗಳನ್ನು ಬಲಿ ಕೊಡುತ್ತಾ ಇದ್ದರು. ಹತ್ತಾರು ಕೋಣಗಳ ತಲೆಯನ್ನು ನಾನೇ ನೋಡಿದೆ, ಆ ಜಾಗದಲ್ಲಿ ಸಾಕಷ್ಟು ರಕ್ತ ಚೆಲ್ಲಾಡಿ ಓಡಾಡುವಾಗ ಜಾರುತ್ತಾ ಇತ್ತು ಎಂದಿದ್ದಾರೆ.

In the same street with this Temple is a large one, with an immense image of Basawa, the Ox, few idolos are more Hundred than he; his temples are numeous, his worshippers every-where. He is the vachana or "Steed" of Shiva. They say, that to honour the steed, is to honour the riders; and if they not worthy to approach the supreme Shiva. They may yet diraw near to his steed. (P 216)

ಯಲ್ಲಮ್ಮ ದೇವಸ್ಥಾನದ ಸ್ವಲ್ಪ ಮುಂದಕ್ಕೆ. ದೊಡ್ಡ ದೇವಾಲಯವಿದ್ದು ಆ ದೇವಾಲಯದ ಮಹಾದ್ವಾರದಲ್ಲಿ ಬಸವನ ವಿಗ್ರಹ ಇದ್ದಿರಬೇಕು. ದೇವಾಲಯದ ಮುಂಭಾಗ ಧ್ವಜಸ್ತಂಭದ ಹತ್ತಿರ ದೇವಾಲಯದ ಗರ್ಭಗುಡಿಯ ಅಭಿಮುಖವಾಗಿ

ಬಸವನ ವಿಗ್ರಹವಿದ್ದು ಅದಕ್ಕೆ ಲಿಂಗಮುದ್ರೆಯನ್ನು ಹಾಕಲಾಗಿದೆ. ಈ ದೇವಾಲಯದಲ್ಲಿ ಹಲವು ವಿಗ್ರಹಗಳಿವೆ. ಈ ದೇವಾಲಯದಲ್ಲಿ ಬಸವ ವಿಗ್ರಹಕ್ಕೆ ಹೆಚ್ಚಿನ ಪ್ರಧಾನ. ಶಿವನಿಗಿಂತ ಆತನ ವಾಹನವಾದ ಬಸವಣ್ಣನಿಗೆ ಜನ ಬಹಳಷ್ಟು ಭಕ್ತಿಯನ್ನು ತೋರಿಸುತ್ತಾರೆ. ಬಸವ ಅರ್ಥಾತ್ ವೃಷಭನ ದೇವಾಲಯಗಳು ಬಹಳ. ಶಿವನ ವಾಹನವಾದ ನಂದಿಗೆ ನಾವು ನಮ್ಮ ಶ್ರದ್ಧೆ ಭಕ್ತಿಯನ್ನು ತೋರಿಸಿದರೆ ಶಿವನಿಗೆ ಬಹಳ ಪ್ರಿಯವಾದದ್ದು ಎಂದು ಜನ ಸಾಮಾನ್ಯರ ನಂಬಿಕೆ.

ವಿಲಿಯಂ ಅವರು ಪ್ರಸ್ತಾಪಿಸಿರುವ ಈ ದೇವಾಲಯ ಗುಬ್ಬಿಯಲ್ಲಿ ಇಂದಿಗೂ ಪೂಜಾದಿಗಳು ನಡೆಯುತ್ತಿರುವ "ಅಮರಗೊಂಡ ಮಲ್ಲಿಕಾರ್ಜುನ ಸ್ವಾಮಿ" ದೇವಾಲಯ. ಇಲ್ಲಿ ಗರ್ಭಗೃಹದಲ್ಲಿ ಹೊಯ್ಸಳರ ಕಾಲದ ಶಿವಲಿಂಗ, ಅಭಿಮುಖವಾಗಿ ವೃಷಭ ವಿಗ್ರಹ ನವರಂಗದಲ್ಲಿ ಇಷ್ಟಲಿಂಗಾನುಷ್ಠಾನ ಮಾಡುತ್ತಾ ಇರುವ ಸ್ತ್ರೀ ವಿಗ್ರಹ ಬಹಳ ಸುಂದರವಾದದ್ದು ಹೊಯ್ಸಳರ ಕಾಲದ್ದು. ಗಣಪತಿ ಕಾಲಭೈರವನ ವಿಗ್ರಹಗಳನ್ನು ನೋಡಬಹುದು. ಮುಖಮಂಟಪದಲ್ಲಿ ರಾಮೇಶ್ವರ ಲಿಂಗ. ಹೊಯ್ಸಳರ ಕಾಲದ ಹರಿಹರೇಶ್ವರ ವಿಗ್ರಹ, ಗುಬ್ಬಚ್ಚಿ ಬಸವನ ವಿಗ್ರಹಗಳನ್ನು ಇನ್ನು ಈ ಹಿಂದೆ ಬೇರೆ ಕಡೆ ದೇವಾಲಯದಲ್ಲೇ ಇದ್ದ ವೃಷಭ ವಿಗ್ರಹಗಳನ್ನು ಗಮನಿಸಬಹುದು. ಈ ಎಲ್ಲಾ ವಿವರವನ್ನು ವಿಲಿಯಂ ಅವರು ಸಂಗ್ರಹ ಮಾಡಲಿಲ್ಲ. ದೇವಾಲಯದ ಮೂಲ ಹೆಸರನ್ನು ತಮ್ಮ ಪುಸ್ತಕದಲ್ಲಿ ಸರಿಯಾಗಿ ದಾಖಲಿಸಲು ಅವರಿಗೆ ಸಾಧ್ಯವಾಗಿಲ್ಲ.

In the very next street to the temple of Basava is one to Balarama one of the incarnation of Vishnu... Passing from the point through a narrow lane, you find a small mud Temple, kept very clean, with an image of Mariamma the Goddes of Disease, in the same material. She is painted and decked with flowers. In the fort is a temple to Hanumanta, the Monkey generalissim; and another to shiva the destroyer; or as one of the shastras calls him, "The fierce Lord of devils". His images usually represent him adorned with coils of serpents and a necklase of Human skulls. The head of Brahma the creator, which he cut off with his nails is sometimes placed in his hand.

ಬಸವನ ದೇವಾಲಯ ಅರ್ಥಾತ್ ಅಮರಗೊಂಡ ಮಲ್ಲಿಕಾರ್ಜುನ ದೇವಾಲಯದ ಮುಂದಿನ ರಸ್ತೆಯಲ್ಲಿ ಬಲರಾಮನ ದೇವಾಲಯವಿದೆ. ಬಲರಾಮನ ಅವತಾರ ವಿಷ್ಣುವಿನ ದಶಾವತಾರದಲ್ಲಿ ಒಂದು ಎಂದಿದ್ದಾರೆ. ವಿಲಿಯಂ ಅವರು ಹೇಳಿರುವ ಈ ದೇವಸ್ಥಾನ ಇಂದು ಬೆಲ್ಲದಪೇಟೆ ಎಂದು ಕರೆಯುವ ರಸ್ತೆಯಲ್ಲಿ ಇದ್ದು ಈಗ ಈ ದೇವಾಲಯವನ್ನು ಜನಾರ್ಧನ ಸ್ವಾಮಿ ದೇವಾಲಯ ಎಂದು ಗುರುತಿಸಲಾಗುತ್ತದೆ. ಇದೇ ದೇವಾಲಯದ ಮುಂದೆ ನೇರವಾಗಿ ಹೋದಲ್ಲಿ ಊರೊಳಗೆ ಸಂಧಿಯಲ್ಲಿ ಮಾರಮ್ಮನ ದೇವಾಲಯವಿದೆ. ವಿಲಿಯಂರ ಕಾಲದಲ್ಲಿ ಇದು ಮಣ್ಣಿನಿಂದ ಕಟ್ಟಿದ ದೇವಾಲಯವಾಗಿತ್ತು. ಈ ದೇವಾಲಯದಲ್ಲಿರುವ ವಿಗ್ರಹವು ಮಣ್ಣಿನಿಂದ ಮಾಡಿದ್ದು ಅದಕ್ಕೆ ನಾನಾ ವಿಧದ ಬಣ್ಣವನ್ನು ಹಚ್ಚಿದ್ದರು. ಹೂವಿನಿಂದ ಅಲಂಕಾರ ಮಾಡಿದ್ದರು ಎಂದಿದ್ದಾರೆ. ಈಗ ಗುಬ್ಬಿಯಲ್ಲಿ ಈ ದೇವಾಲಯವನ್ನು ಆ ನಂತರ ಕಲ್ಲಿನಿಂದ ಕಟ್ಟಿದ್ದು ದೇವಾಲಯದ ವಿಗ್ರಹವನ್ನು ಮಣ್ಣಿನ ಬದಲು ಮರದ್ದು ಮಾಡಲಾಗಿದೆ. ಈ ಮಾಹಿತಿಯಿಂದ ಮರದ ವಿಗ್ರಹ ನಿರ್ಮಾಣ ಸುಮಾರು ೧೮೫೦ ಎಂದು ಇಟ್ಟುಕೊಳ್ಳಬಹುದು. ಕೋಟೆಯಲ್ಲಿ ಹನುಮಂತ ದೇವಾಲಯದ ಪ್ರಸ್ತಾಪ ಮಾಡಿದ್ದಾರೆ. ಮಾರಮ್ಮ ದೇವಾಲಯದ ಹತ್ತಿರ ಒಂದು ಹನುಮಂತ ದೇವಾಲಯ, ದೊಡ್ಡಪೇಟೆ ಸಂಧಿಯಲ್ಲಿ ಇನ್ನೊಂದು ಹನುಮಂತ ದೇವಾಲಯವಿದೆ. ವಿಲಿಯಂ ಪ್ರಸ್ತಾಪ ಮಾಡಿರುವುದು ದೊಡ್ಡಪೇಟೆ ಸಂಧಿಯಲ್ಲಿ ಇರುವಂತಹುದು ಎಂದು ನನ್ನ ಅನಿಸಿಕೆ. ವಿಲಿಯಂ ಅವರು ಯಾವ ಊರೊಳಗೆ ಮಧ್ಯಭಾಗದಲ್ಲಿರುವ ಗುಬ್ಬಿಯಪ್ಪನ ಉತ್ಸವಮೂರ್ತಿ ದೇವಸ್ಥಾನ ಮತ್ತು ಅಲ್ಲಿಂದ ಇನ್ನು ಸ್ವಲ್ಪ ಮುಂದಕ್ಕೆ ಇದ್ದ ಹೊಯ್ಸಳರ ಕಾಲದ ಬೇಟೆರಾಯಸ್ವಾಮಿ ದೇವಸ್ಥಾನಗಳನ್ನು ಪ್ರಸ್ತಾಪ ಮಾಡಿಲ್ಲ. ಇದೇ ಪುಸ್ತಕದಲ್ಲಿ ಬೇರೆ ಕಡೆ ಈ ದೇವಾಲಯಗಳ ಬಗ್ಗೆ ಬರೆದಿರಬಹುದು ನನ್ನ ಅಧ್ಯಯನಕ್ಕೆ ಸಿಲುಕಿಲ್ಲ.

ವಿಲಿಯಂ ಅವರು ಇನ್ನೊಂದು ಶಿವದೇವಾಲಯವನ್ನು ಪ್ರಸ್ತಾಪ ಮಾಡಿದ್ದಾರೆ. ಆ ಶಿವದೇವಾಲಯ ಯಾವುದು? ಗರ್ಭಗೃಹದಲ್ಲಿ ಅವರೇ ಪ್ರಸ್ತಾಪ ಮಾಡಿದಂತೆ ಅದು ವೀರಭದ್ರ ದೇವಾಲಯಗಳಿರುವ ಸಾಧ್ಯತೆ ಹೆಚ್ಚು. ವೀರಭದ್ರ ಅವತಾರವು ಶಿವನ ಇಪ್ಪತ್ತೈದು ಲೀಲೆಗಳಲ್ಲಿ ಒಂದು. ವೀರಭದ್ರ ವಿಗ್ರಹಕ್ಕೆ ಸರ್ಪಗಳು ಸುತ್ತಿಕೊಂಡಿರುವುದು, ರುಂಡಮಾಲೆ ಧರಿಸಿರುವುದು ನಮಗೆಲ್ಲಾ ತಿಳಿದಿರುವಂತಹದು. ವಿಲಿಯಂರವರು ವೀರಭದ್ರನ ಪಕ್ಕ ಇದ್ದ ತಲೆಯನ್ನು ಬ್ರಹ್ಮನದು ಎಂದು ಕೊಂಡಿದ್ದಾರೆ. ಅದು ದಕ್ಷಬ್ರಹ್ಮನದ್ದು, ಈ ಹಿಂದೆ ಗುಬ್ಬಿಯಲ್ಲಿ ವೀರಭದ್ರ ದೇವಸ್ಥಾನ ಇತ್ತು. ಆ ವೀರಭದ್ರನನ್ನು ಗುಬ್ಬಿಯಲ್ಲಿ ತನ್ನ "ತೋಂಟದ ಸಿದ್ಧಲಿಂಗೇಶ್ವರ ಸಂಗತ್ವ"ದಲ್ಲಿ ಪ್ರಸ್ತಾಪಿಸಿದ್ದಾರೆ. ವಿಲಿಯಂರ ಕಾಲದಲ್ಲಿ ಇದ್ದ ವೀರಭದ್ರ ದೇವಾಲಯ ಕೆಲವೇ ವರ್ಷದಲ್ಲಿ ಶಿಥಿಲವಾಗಿ ಕುಸಿದು ಹೋಗಿರಬೇಕು, ಮುಂದೆ ಇದೇ ದೇವಾಲಯವನ್ನು ಮಧುರೇನಹಳ್ಳಿ ಸಿದ್ಧಲಿಂಗಶೆಟ್ಟರು ಪುನರ್ನಿಮಾಣ ಮಾಡಿದರು. ಗರ್ಭಗೃಹದ ವೀರಭದ್ರ ಭಿನ್ನವಾಗಿ ಹೋಯಿತು. ಅವರು ಆ ನಂತರ ಈಶ್ವರಲಿಂಗ ಪ್ರತಿಷ್ಠೆ ಮಾಡಿಸಿದರು. ಈಗ ಬೆಲ್ಲದಪೇಟೆಯಲ್ಲಿರುವ ರಾಮಲಿಂಗೇಶ್ವರ ದೇವಾಲಯದಲ್ಲಿ ವಿಜಯನಗರ ಕಾಲದ ಕಂಬಗಳನ್ನು ಮಾತ್ರ ನೋಡಬಹುದು. ವಿಲಿಯಂ ಅವರು ಪ್ರಸ್ತಾಪಿಸಿರುವ ಶಿವದೇವಾಲಯ ಬೆಲ್ಲದಪೇಟೆಯ ರಾಮಲಿಂಗೇಶ್ವರ ದೇವಲಾಯವೇ ಇರಬೇಕು. ಈ ಹಿಂದೆ ಗುಬ್ಬಿಯಲ್ಲಿ ವೀರಭದ್ರ ದೇವಾಲಯವಿದ್ದು ೧೮೫೦ರ ನಂತರ ಶಿಥಿಲವಾಗಿ ಹೋಗಿದ್ದು ವಿಲಿಯಂ ಅವರ ಪುಸ್ತಕದಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ.

ಗೋಸಲ ಗುಬ್ಬಿ ಶ್ರೀಚನ್ನಬಸವೇಶ್ವರರೇ ಗುಬ್ಬಿಯಪ್ಪ ಎಂದು ಕರೆಯಲ್ಪಡುವುದು. ಇವರ ಕಾಲ ಕ್ರಿ.ಶ. ೧೪೨೦ ರಿಂದ ೧೫೨೦. ಇವರು ಶತಾಯುಷಿಗಳು. ಇವರ ಗದ್ದುಗೆ ಗುಬ್ಬಿಯಲ್ಲಿ ಆಗಿದೆ. ಇವರ ಇತಿಹಾಸ ಸಂಪೂರ್ಣ ಗ್ರಹಿಸಿದ ವಿಲಿಯಂ ಅವರು 'School Teacher become God' ಎಂದು ಕರೆದಿದ್ದಾರೆ. ಮುಮ್ಮುಡಿ ಕೃಷ್ಣರಾಜ ಒಡೆಯರ್‌ರವರ ಕಾಲದ ಫೌಜುದಾರ್ ಭೋರೇಗೌಡರ ಉಲ್ಲೇಖ ವಿಲಿಯಂ ಪುಸ್ತಕದಲ್ಲಿ ಬಂದಿದೆ. ವಿಘ್ನೇಶ್ವರನ ಬಗ್ಗೆ ಒಂದು ಸಣ್ಣ ಪ್ರಬಂಧ ಇದರಲ್ಲಿ ಇದೆ. ಲಕ್ಷ್ಮೀಶನ ಜೈಮಿನಿಭಾರತದ ಪ್ರಸ್ತಾಪ ಈ ಪುಸ್ತಕದಲ್ಲಿ ಬಂದಿದ್ದು, ಅದರಲ್ಲಿರುವ ವಿಘ್ನೇಶ್ವರನ ಸ್ತೋತ್ರದ ಬಗ್ಗೆ ಪ್ರಸ್ತಾಪಿಸಿದ್ದಾರೆ. ತಿರುಪತಿ ವೆಂಕಟರಮಣ, ಕೃಷ್ಣನ ಬಗ್ಗೆ ಅನೇಕ ಮಾಹಿತಿ ಸಂಗ್ರಹಿಸಿ ನಕಾರಾತ್ಮವಾಗಿ ...ಸರಿಯವರ ಮನೋಭಾವದಂತೆ ಬರೆದಿದ್ದಾರೆ. ಆದಿಶೇಷ, ...ಬ್ರಮಣ್ಯ, ರೈತರು ಹೊಲದ ಕಣದಲ್ಲಿ ಮಾಡುವ ರಾಶಿಪೂಜೆ, ಗಾಯತ್ರಿ ಮಂತ್ರಧ್ಯಾನದ ಬಗ್ಗೆ ಮಾಹಿತಿ ಇದೆ. ಗುಬ್ಬಿ ಪರಿಸರದ ಬಿದರೆ, ಹೊಸಹಳ್ಳಿ (ಇದು ಗುಬ್ಬಿ ಹೊಸಹಳ್ಳಿ), ಚೇಳೂರು, ನೆಟಗುಂಟೆ, ನಾರವಂಗಲ, ಲಕ್ಕೇನಹಳ್ಳಿ, ಕಡಬ, ಗುಬ್ಬಿ ಪಕ್ಕದ ಚೆನ್ನಶೆಟ್ಟಿಹಳ್ಳಿ, ತುಮಕೂರು ಗ್ರಾಮಗಳ ಉಲ್ಲೇಖವಿದೆ. ತುಮಕೂರು ಪಕ್ಕದ ಹಳ್ಳಿ ಎತ್ತೇನಹಳ್ಳಿ ಜಾತ್ರೆಯ ಬಗ್ಗೆ ಈ ಪುಸ್ತಕದಲ್ಲಿ ಮಾಹಿತಿ ಇದೆ.

ಅಂದಿನ ದಿನಮಾನದಲ್ಲಿ ಬಹಳ ಪ್ರಸಿದ್ಧವಾದ ಪುಸ್ತಕ ಭಾರತ ದೇಶದ ಮೇಲೆ WALLACE'S "Memory of Indian" ಈ ಪುಸ್ತಕವನ್ನು ವಿಲಿಯಂ ಅವರು ಅಧ್ಯಯನ ಮಾಡಿದ್ದರು. ಆದ್ದರಿಂದ ಈ ಪುಸ್ತಕವನ್ನು ಅಡಿಟಿಪ್ಪಣಿಯಲ್ಲಿ ನೀಡಿದ್ದಾರೆ. ಅಲ್ಲದೆ ಉಪನಿಷತ್ ಸಂಗ್ರಹದಲ್ಲಿ ಬಹಳ ಮುಖ್ಯವಾದ ಸೂರ್ಯನಾರಾಯೋಣಪನಿಷತ್ ವಿಷಯವನ್ನು ವಿಲ್ಸನ್ ಅವರು ತಮ್ಮ "Exposure of Hisduism"ನಲ್ಲಿ ಉಲ್ಲೇಖಿಸಿರುವುದನ್ನು ವಿಲಿಯಂ ಗಮನಿಸಿದ್ದಾರೆ. ಭಾರತದ ಬಗ್ಗೆ ಅಂದಿನ ದಿನಮಾನದಲ್ಲಿ ಪ್ರಕಟವಾದ ಹತ್ತಾರು ಗ್ರಂಥಗಳನ್ನು ವಿಲಿಯಂ ಅವರು ಅಧ್ಯಯನ ಮಾಡಿ ತಮ್ಮ ಮಿಶನರಿ ಪ್ರಚಾರಕ್ಕೆ ಬೇಕಾದ ರೀತಿ ನಕಾರಾತ್ಮಕವಾಗಿ ಬಳಸಿ ಕೊಂಡಿದ್ದಾರೆ. ಸುಮಾರು ೧೮೪೦ರ ಕಾಲಮಾನಕ್ಕೆ ಭಾರತದೇಶವನ್ನು ಕುರಿತು ಅಪಾರವಾದ ಸಾಹಿತ್ಯ ನಿರ್ಮಾಣವಾಗಿತ್ತು. ಈ ಎಲ್ಲಾ ಪ್ರಕಟಿತ ಪುಸ್ತಕಗಳನ್ನು ಮೇಲಿನ ವಿದ್ವಾಂಸರು ತಲಸ್ಪರ್ಶಿಯಾಗಿ ಅಧ್ಯಯನ ಮಾಡಬೇಕು. ಕಡಬ ಗ್ರಾಮದ ಬಗ್ಗೆ ವಿಲಿಯಂ ಅಭಿಪ್ರಾಯ ನೋಡಿ. "A few miles off was 'Cudaba' a considerable town, much under the influence of Brahmans" (P 231)

It was on the morning of sunday, october 13th 1838, that I first witnessed a canarese servile in my own circtuit. Before six o'clock I accompanied Mr. Jenkins and Mr. Franklin into the town (P 256).

ವಿಲಿಯಂ ಅವರು ಬಂದ ಕೆಲವೇ ತಿಂಗಳಲ್ಲಿ ಕನ್ನಡ ಭಾಷೆಯನ್ನು ಕನ್ನಡದಲ್ಲಿ ಕ್ರೈಸ್ತ ಮತದ ಉಪದೇಶದಲ್ಲಿ ಕೊಡಲು ಪ್ರಾರಂಭಿಸಿದನ್ನು ದಾಖಲಿಸಿದ್ದಾರೆ. Thoumas Hudson ಅವರ "Memoir of a convetied Hindus" ಪುಸ್ತಕದಲ್ಲಿ ವಿಲಿಯಂ ಅವರ ಕನ್ನಡ ಅಧ್ಯಾಪಕರ ಚಿತ್ರವನ್ನು ಮುಖಪುಟದಲ್ಲಿ ಕೊಟ್ಟಿದ್ದಾರೆ. ಅವರ ಹೆಸರು, ವಿವರ ಲಭ್ಯವಿಲ್ಲ. ಚಿತ್ರವನ್ನು ನೋಡಿದರೆ ಅವರು ಶ್ರೀವೈಷ್ಣವ ಅನುಯಾಯಿ ಎಂದು ಹೇಳಬಹುದು.

ತುಮಕೂರಿನಲ್ಲಿ ಕ್ರೈಸ್ತ ಮತ ಪ್ರಚಾರದ ಬಗ್ಗೆ Besides the places close about Goobbee we included on our plan Toomcoor a large market town about twelve miles off. It is the residence of the Chitteldroog Division. (P 232)

ಸುಮಾರು ೧೮೪೦ರ ಕಾಲಮಾನಕ್ಕೆ ತುಮಕೂರು ನಗರ ವ್ಯಾಪಾರೋದ್ಯಮಕ್ಕೆ ಪ್ರಸಿದ್ಧವಾಗಿತ್ತು. ಅಲ್ಲದೆ ಚಿತ್ರದುರ್ಗ ಡಿವಿಜನ್ ಕಮೀಷನರ್ ಆಗಿದ್ದ ಡಾಬ್ಸ್‌ರವರ ಕಾಲದಲ್ಲೆ ತುಮಕೂರಿನಲ್ಲಿ ಜಿಲ್ಲಾಧಿಕಾರಿಗಳ ನಿವಾಸವನ್ನು ಕಟ್ಟಿದ್ದು. ಅಂದಿನ ದಿನಮಾನದಲ್ಲಿ ಪುಸ್ತಕಗಳಿಗೆ "Leather Bind" ಮಾಡಿದರೆ ಅದನ್ನು ಕೈಯಲ್ಲಿ ಸ್ಥಳೀಯರು ಮುಟ್ಟುತ್ತಾ ಇರಲಿಲ್ಲ. ಆ ಕಾರಣಕ್ಕೆ ಬಟ್ಟೆಯ ಬೈಂಡ್ ಮಾಡಿಸಲು ಪ್ರಾರಂಭಿಸಿದ್ದನ್ನು ವಿವರವಾಗಿ ತಮ್ಮ ಪುಸ್ತಕದಲ್ಲಿ (P 289) ದಾಖಲಿಸಿದ್ದಾರೆ.

ಸುಮಾರು ೧೮೦ ವರ್ಷದ ಹಿಂದಿನ ಗುಬ್ಬಿಯ ಇತಿಹಾಸವನ್ನು ತಿಳಿಯಬೇಕಾದರೆ ಮಿಶನರಿಗಳ ಈ ಪುಸ್ತಕ ಬಹಳ ಮುಖ್ಯವಾದದ್ದು. ಇಂತಹ ಮಹತ್ವವಾದ ಗ್ರಂಥದ ಬಗ್ಗೆ ನನಗೆ ಮೊದಲು ಮಾಹಿತಿ ಕೊಟ್ಟವರು ನನ್ನ ಬಾಲ್ಯದ ಹಿರಿಯ ಸ್ನೇಹಿತರಾದ ಹೆಚ್.ಕೆ. ಶ್ರೀನಿವಾಸರವರು ಮತ್ತು ಅವರ ಅಣ್ಣನ ಮಗ ಹೆಚ್.ಎನ್. ಸುಧೀರ್‌ರವರು ಅಂತರಜಾಲದಿಂದ ನನಗೆ ಅಧ್ಯಯನಕ್ಕೆ ಸಹಕರಿಸಿದರು. ಇಷ್ಟು ದೊಡ್ಡ ಪುಸ್ತಕ Print out ತೆಗೆಯಲು ಸಹಾಯಮಾಡಿದ ಡಾ॥ ಜಗದೀಶ್ ಅಗಸಿಬಾಗಲವಾರು ಮತ್ತು ಈ ಲೇಖನ ಬರೆಯಲು ಪ್ರೇರಣೆ ನೀಡಿದ ಡಿ.ವಿ. ಶಿವಾನಂದ್‌ರವರಿಗೆ ಧನ್ಯವಾದಗಳು. William Arthurರವರ ಸ್ಮರಣೆಗಾಗಿ ಗುಬ್ಬಿಯಲ್ಲಿ ೧೯೦೪ರಲ್ಲಿ ಚರ್ಚ್ ಒಂದನ್ನು ಕಟ್ಟಲಾಗಿದೆ.

*****

# ವಾಸ್ತು - ಶಿಲ್ಪ



ನೆಲೆಗಟ್ಟಾ ನಾಗಲೋಕಂ ತಳಮವನಿ ದಿಶಾಭಿತ್ತಿ ಭಿತ್ತಿಬ್ರಜಂ ಸ್ವ
ಸ್ತಲಭಾಗಂ ಮುಚ್ಚಣಂ ಮೇಗಣ ಸುರರ ವಿಮಾನೋತ್ಕರಂ ಕೂಟಜಾಳಂ
ವಿಲಸತ್ತಾರೌಘಮನ್ತರ್ವಿತತಮಣಿವಿತಾನಂ ಸಮಂತಾಗೆ ನಿತ್ಯಂ
ನಿಲಯಂ ಶ್ರೀಗೊಮ್ಮಟೇಶಂಗೆನೆಸಿದುದು ಜಿನೋಕ್ತಾವಳೋಕಂ ತ್ರಿಳೋಕಂ ॥

# ಗಣೇಶನ ಪರಿಕಲ್ಪನೆ ಮತ್ತು ಗಣೇಶ ಶಿಲ್ಪಗಳು

*** ಡಾ॥ ಬೆಂ.ಶಾ. ಶ್ಯಾಮಲಾರತ್ನಕುಮಾರಿ**

ಗಣೇಶ ಎಂದರೆ ಗಣ – ಗುಂಪು, ಸಮುದಾಯ ಈಶ – ಒಡೆಯ, ಸ್ವಾಮಿ ಎಂಬ ಅರ್ಥಗಳಿವೆ ಹೀಗಾಗಿ ಜನಸಮುದಾಯದ ಜನಮನದ ಪ್ರಿಯದೇವತೆ ಎನಿಸಿದ್ದಾನೆ. ಗಣೇಶನನ್ನು ಗಣಪತಿ, ವಿನಾಯಕ ಎಂಬ ಹೆಸರುಗಳಿಂದಲೂ ಕರೆದು ಪೂಜಿಸಲಾಗುತ್ತದೆ. ಭಾರತೀಯ ಸಾಹಿತ್ಯದಲ್ಲಿ ಅತಿಪ್ರಾಚೀನವಾದ ವೇದವಾಙ್ಮಯದಲ್ಲಿಯೇ 'ಗಣಪತಿ' – ಪದದ ಉಲ್ಲೇಖ ನಮಗೆ ಸಿಗುತ್ತದೆ. ಋಗ್ವೇದದ ಎರಡನೇ ಮಂಡಲದ ಗಣಪತಿ ಸೂಕ್ತದಲ್ಲಿ ಗಣಪತಿಯ ಉಲ್ಲೇಖವಿರುವ ಪ್ರಸಿದ್ಧವಾಗಿರುವ ಮಂತ್ರ ಇಂತಿದೆ.

**ಗಣಾನಾಂ ತ್ವಾಂ ಗಣಪತಿಂ ಹವಾಮಹೇ ಕವಿಂ ಕವೀನಾಂ ಉಪಮಶ್ರವಸ್ತಮಂ ।**
**ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂದಿಭಿಃ ಸೀದಸಾದನಂ ॥**

ಯಜ್ಞಾರಂಭದಲ್ಲಿ ಗಣಪತಿಯನ್ನು ಆಹ್ವಾನಿಸಿ ಪೀಠದಲ್ಲಿ ಪ್ರತಿಷ್ಠಾಪನೆ ಮಾಡಲುದ್ದೇಶಿಸಿರುವ ಮಂತ್ರವಿದಾಗಿದೆ. ಈ ಮಂತ್ರವು ದೇವಗಣಗಳಿಗೊಡೆಯನಾದ ಬೃಹಸ್ಪತಿಯನ್ನು ಕುರಿತದ್ದು ಎಂಬ ಅಭಿಪ್ರಾಯವೂ ಇದೆ. ಒಂದೇ ನಿಯಮಕ್ಕೆ ಒಳಪಡುವ ಪದಗಳನ್ನು ಗಣವೆಂದು ವರ್ಗೀಕರಿಸಿ ಆ ಗಣಗಳ ಪತಿಯನ್ನು ಬ್ರಹ್ಮ, ಬ್ರಹ್ಮಣಸ್ಪತಿ ಅಥವಾ ಬೃಹಸ್ಪತಿ ಎಂದು ಕರೆಯಲಾಗುತ್ತದೆ. ಬ್ರಹ್ಮ ಎಂದರೆ ಜ್ಞಾನ ಅಥವಾ ವೇದ ಎಂದರ್ಥ ಆದುದರಿಂದ ಶ್ರುತಿಪ್ರತಿಪಾದ್ಯನಾದ ಬ್ರಹ್ಮಣಸ್ಪತಿಯೇ ಗಣಪತಿ. ಸಮಸ್ತವಾಙ್ಮಯಕ್ಕೂ ಅಧಿಷ್ಠಾತೃವಾದ ಪರಮಾತ್ಮ ಬ್ರಹ್ಮಣಸ್ಪತಿಯೇ ಪುರಾಣಸಾಹಿತ್ಯದಲ್ಲಿ ಗಣೇಶ ಗಣಪತಿ, ವಿಘ್ನೇಶ್ವರ ವಿನಾಯಕ ಮುಂತಾದ ಹೆಸರುಗಳಿಂದ ವರ್ಣಿತನಾಗಿದ್ದಾನೆ. ಮುದ್ಗಲಪುರಾಣದಲ್ಲಿ ಗಣಪತಿಯು ಸಿದ್ಧಿಬುದ್ಧಿಪತಿಯೂ ಬ್ರಹ್ಮಣಸ್ಪತಿ ಎಂಬ ಹೆಸರುಳ್ಳವನೂ ಮಂಗಳವನ್ನುಂಟುಮಾಡುವವನೂ ಸರ್ವರಿಂದಲೂ ಪೂಜಿತನಾದವನೂ ವಿಘ್ನಗಳಿಗೆ ನಾಯಕನೂ ಶ್ರೇಷ್ಠನೂ ಎಂದು ವರ್ಣಿತನಾಗಿದ್ದಾನೆ.

**'ಸಿದ್ಧಿಬುದ್ಧಿಪತಿಂ ವಂದೇ ಬ್ರಹ್ಮಣಸ್ಪತಿಸಂಜ್ಞಿತಮ್ ।**
**ಮಾಂಗಲ್ಯೇಶಂ ಸರ್ವಪೂಜ್ಯಂ ವಿಘ್ನಾನಾಂ ನಾಯಕಂ ಪರಮ್ ॥**

ಋಗ್ವೇದದ ಹತ್ತನೇ ಮಂಡಲದಲ್ಲಿ ಗಣಪತಿಯನ್ನು ಕುರಿತಂತೆ ಇನ್ನೊಂದು ಮಂತ್ರ ಇಂತಿದೆ.

**ನಿ ಷು ಸೀದ ಗಣಪತೇ ಗಣೇಶು ತ್ವಾಮಾಹುರ್ವಿಪ್ರತಮಂ ಕವೀನಾಂ।**
**ನ ಋತೇ ತ್ವತ್ ಕ್ರಿಯತೇ ಕಿಂಚನಾರ ಮಹಾಂ ಅರ್ಕಂ ಮಘವನ್ ಚಿತ್ರಮರ್ಚ ॥**

ಈ ಮಂತ್ರವು ಭಾಷ್ಯಕಾರ ಸಾಯಣಾಚಾರ್ಯರ ಅಭಿಪ್ರಾಯದಲ್ಲಿ ಮಘವನ್ ಎಂದರೆ ಇಂದ್ರನನ್ನು ಕುರಿತದ್ದಾಗಿದೆ.

ಶಿಲ್ಪದಲ್ಲಿ ಗಣಪತಿಯ ಆಕಾರವನ್ನು ಮೂಡಿಸುವಾಗ ಯಕ್ಷ, ಅಗ್ನಿ, ಬೃಹಸ್ಪತಿ. ರುದ್ರ ಈ ಎಲ್ಲ ದೇವತೆಗಳ ಅಂಶಗಳನ್ನು ಅಳವಡಿಸಲಾಗುತ್ತವೆ. ಯಜುರ್ವೇದದಲ್ಲಿಯೂ ಗಣಪತಿಯ ಉಲ್ಲೇಖ ಎರಡು ಬಾರಿ ಸಿಗುತ್ತದೆ.

**ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿರುವ ಮಂತ್ರ ಇದು :**
**ಪ್ರತೂರ್ವನ್ನೇಹ್ಯವಕ್ರಾಮನ್ನಶಸ್ತೀ ರುದ್ರಸ್ಯ ಗಾಣಪತ್ಯಾನ್ ಮಯೋಭೂರೇಹಿ ।**

ಈ ಮಂತ್ರದಲ್ಲಿರುವ 'ಗಾಣಪತ್ಯ' ಶಬ್ದಕ್ಕೆ ಸಾಯಣಾಚಾರ್ಯರು 'ಪಶುಸಮೂಹ ಪತಿತ್ವಂ' ಎಂಬ ವಿವರಣೆ ನೀಡಿ ಪಶುಗಳಿಗೆ ರುದ್ರನನ್ನು ಕುರಿತ ಮಂತ್ರ ಇದು ಎಂದು ಹೇಳಿದ್ದಾರೆ. ಗಾಣಪತ್ಯರನ್ನು ಶೈವದಲ್ಲಿ ಒಂದು ಪ್ರಭೇದವೆಂದೇ ಪರಿಗಣಿಸಲಾಗುತ್ತದೆ. ಶುಕ್ಲಯಜುರ್ವೇದದ ವಾಜಸನೇಯಿ ಸಂಹಿತೆಯಲ್ಲಿ –

---

* ನಂ. ೨೭(೯), ವಿಶಾಲಾಕ್ಷಿ ಕೃಪ, ೨ನೆ ಬ್ಲಾಕ್, ೨ನೆ ಮೈನ್, ಪರಮಹಂಸ ರಸ್ತೆ, ತ್ಯಾಗರಾಜನಗರ, ಬೆಂಗಳೂರು–೫೬೦ ೦೨೮.

ನಮೋ ಗಣೇಭ್ಯೋ ಗಣಪತಿಭ್ಯಶ್ಚ ವೋ ನಮಃ । ಎಂಬ ಮಂತ್ರವಿದೆ ಈ ಮಂತ್ರದ ವಿವರಣೆ ನೀಡುವಾಗ ಭಾಷ್ಯಕಾರರಾದ ಮಹೀಧರರು ಗಣಗಳೆಂದರೆ ದೇವತೆಯ ಅನುಚರರಾದ ಭೂತವಿಶೇಷಗಳೆಂದೂ ಅವುಗಳ ಒಡೆಯರು ಗಣಪತಿಗಳೆಂದೂ ಹೇಳಿದ್ದಾರೆ.

ಗೃಹಸೂತ್ರಗಳಲ್ಲಿ ಗಣಪತಿಯ ಹೆಸರಿನ ಬದಲಿಗೆ ವಿನಾಯಕರು ಎಂಬ ಬಹುವಚನ ಶಬ್ದ ಪ್ರಯೋಗ ಕಂಡುಬರುತ್ತದೆ. ಮಾನವ್ಯ ಗೃಹ್ಯಸೂತ್ರದಲ್ಲಿ ಶಾಲಕಟಂಕಟ, ಕೂಷ್ಮಾಂಡರಾಜಪುತ್ರ, ಉಸ್ಮಿತ ಮತ್ತು ದೇವಯಜನ ಎಂಬ ನಾಲ್ವರು ವಿನಾಯಕರನ್ನು ಹೆಸರಿಸಲಾಗಿದೆ. ವಿನಾಯಕ ಎಂದರೆ ವಿಶಿಷ್ಟ ನಾಯಕ. ವಿನಾಯಕರಿಂದ ಸಾಮಾನ್ಯ ಜನರಿಗೆ ಅಡ್ಡಿ, ಆತಂಕ ಅಡಚಣೆ ಉಪದ್ರವಗಳನ್ನುಂಟು ಮಾಡುತ್ತವೆ. ಜನರು ಹಳ್ಳಿಗಳಲ್ಲಿ ದೆವ್ವ ಹಿಡಿಯಿತು ಪಿಶಾಚಿ ಮೆಟ್ಟಿತು ವಿನಾಯಕರು ಹಿಡಿದಿದ್ದಾರೆನ್ನುತ್ತಿದ್ದರು. ಆದುದರಿಂದ ವಿನಾಯಕರನ್ನು ರಾಕ್ಷಸ, ಭೂತ ಪಿಶಾಚಿಗಳೊಂದಿಗೆ ಸಮೀಕರಿಸಿ ತೊಂದರೆ ವಿಘ್ನ ಆತಂಕ ಅಡಚಣೆಗಳನ್ನು ತಂದೊಡ್ಡುವವರು ಎಂದೇ ಮಹಾಭಾರತ ತಿಳಿಸುತ್ತದೆ. ಈ ವಿನಾಯಕನೇ ಗಣಪತಿಯಾಗಿ ತನ್ನನ್ನು ಪೂಜಿಸಿ ಸ್ತುತಿಸಿ ಒಲಿಸಿಕೊಂಡವರಿಗೆ ವಿಘ್ನಗಳ ತೊಂದರೆಗಳ ನಿವಾರಕನಾಗಿ ವಿಘ್ನೇಶ್ವರನೆನಿಸಿದ್ದಾನೆ. ಈಗಲೂ ಮಹಾಗಣಪತಿಯ ಪೂಜೆಮಾಡುವಾಗ ಗಣಪತಿಯ ಹತ್ತು ಅಂಗಗಳಲ್ಲಿ ವಿನಾಯಕರೆಂಬ ವಿಗ್ನೇಶ್ವರರನ್ನು ನ್ಯಾಸವಿಧಿಯಿಂದ ಸ್ತುತಿಸಲಾಗುತ್ತದೆ.

**ಮೂರ್ಧ್ನಿ ನೇತ್ರೇಚ ಜಹ್ವಾಯಾಂ ಹೃನ್ನಾಭಿಶಿವಜಾನುಷು ।**
**ವಿನಾಯಕಾದಿ ವಿಘ್ನೇಶಾನ್ ಚರಣಾಗ್ರೇಷು ವಿನ್ಯಸೇತ್ ॥**
**ವಿನಾಯಕೋ ವಿರೂಪಾಕ್ಷಃ ಕ್ರೂರಕರ್ಮಾಪರಾಜಿಯಃ ।**
**ಚಂಡವೇಗೋ ಗಜಗ್ರೀವಃ ಕರಾಳಶ್ಚಂಡವಿಕ್ರಮಃ ॥**

ಯಾಜ್ಞವಲ್ಕ್ಯಸ್ಮೃತಿಯು ವಿನಾಯಕನನ್ನು ಜನರಿಗೆ ತೊಂದರೆಯನ್ನುಂಟುಮಾಡಲೂ, ತೊಂದರೆಗಳನ್ನು ನೀಗಿಸಿ ಗೆಲುವನ್ನು ಪಡೆಯುವಂತೆ ಮಾಡಲು ರುದ್ರ ಮತ್ತು ಬ್ರಹ್ಮರು ವಿನಾಯಕನನ್ನು ನೇಮಿಸಿದರು. ವಿಘ್ನಗಣಗಳಿಗೆ ಒಡೆಯನಾದ ಇವನನ್ನು ಗಣಪತಿಯೆಂದು ಕರೆದು ಇವನ ತಾಯಿ ಅಂಬಿಕೆಯೆಂದು ಹೇಳುವುದರ ಮೂಲಕ ವಿಘ್ನರಾಜನು, ವಿಘ್ನನಿವಾರಕನಾಗಿ, ಸಿದ್ಧಿದಾತನೆಂದು ಪ್ರಸಿದ್ಧನಾದುದನ್ನು ಸೂಚಿಸುತ್ತದೆ.

ಬೌಧಾಯನ ಸ್ಮೃತಿಯಲ್ಲಿ ವಿನಾಯಕರನ್ನು ವಿಘ್ನೇಶ್ವರನೆಂದು ಹೇಳಿ ಅವರನ್ನು ಹಸ್ತಿಮುಖರೆಂದೂ ಕರೆಯಲಾಗಿದೆ. ಅಪೂಪವನ್ನೂ ಮೋದಕವನ್ನೂ ನೈವೇದ್ಯವಾಗಿ ಇಡಬೇಕೆಂದು ತಿಳಿಸುತ್ತದೆ. ಅತ್ಯಂತ ಸಂಪ್ರೀತಿಯಿಂದ ಮೋದಕವನ್ನು ಕೈಯಲ್ಲಿ ಹಿಡಿದ ಗಣಪತಿಯು ಭಕ್ತರಿಗೆ ಮುಕ್ತಿಯನ್ನು ನೀಡುತ್ತಾನೆಂದು ಹೇಳಲಾಗುತ್ತದೆ. ಇದನ್ನೇ ಮುದಾಕರಾತ್ತಮೋದಕಂ ಸದಾವಿಮುಕ್ತಿಸಾಧಕಮ್ ಎಂದಿದ್ದಾರೆ ಗಣೇಶಪಂಚರತ್ನ ಸ್ತೋತ್ರದ ಪ್ರಾರಂಭದಲ್ಲಿ ಶಂಕರಾಚಾರ್ಯರು.

ಗೋಭಿಲಸ್ಮೃತಿಯು ಗಣಾಧಿಪ ಪೂಜೆಯನ್ನು ಎಲ್ಲ ಕಾರ್ಯಗಳ ಎಲ್ಲ ಧಾರ್ಮಿಕ ವಿಧಿಗಳ ಆರಂಭದಲ್ಲಿ ನಡೆಸಬೇಕೆಂದು ವಿಧಿಸುತ್ತದೆ. ಸಕಲಶುಭಕರ್ಮಗಳೂ ನಿರ್ವಿಘ್ನವಾಗಿ ನೆರವೇರಲು ಆದಿಯಲ್ಲಿ ಪೂಜೆಗೊಳ್ಳುವವನು ಶ್ರೀ ಗಣೇಶನೇ ಇತರ ದೇವತೆಗಳನ್ನು ಪೂಜಿಸುವಾಗಲೂ ಆದ್ಯವಂದಿತನೂ ಪ್ರಥಮ ಪೂಜ್ಯನೂ ಆದವನು ಪ್ರಮಥ ಪತಿಯಾದ ಗಣಪತಿಯೇ ಈ ದೇವನ ಸ್ವರೂಪಮಹಿಮೆಗಳನ್ನು ತಿಳಿಸುವ ದ್ವಾದಶ (ಹನ್ನೆರಡು) ನಾಮಗಳನ್ನು ಸಮಸ್ತ ಪೂಜೆ, ಕರ್ಮವಿಧಿಗಳಲ್ಲಿ ಸ್ತುತಿಸುವುದು ಇಂದಿಗೂ ಆರ್ಷೆಯ ಸಂಪ್ರದಾಯವಾಗಿ ನಡೆದು ಬರುತ್ತಿದೆ. ಆ ದ್ವಾದಶ ಗಣೇಶ ನಾಮಗಳು ಇಂತಿವೆ.

**೧. ಸುಮುಖಶ್ಚೈಕದಂತಶ್ಚ, ೨. ಏಕದಂತ, ೩. ಕಪಿಲೋ, ೪. ಗಜಕರ್ಣಕಃ ।**
**೫. ಲಂಬೋದರ, ೬. ವಿಕಟೋ, ೭. ವಿಘ್ನರಾಜೋ, ೮. ಗಣಾಧಿಪಃ, ॥**
**೯. ಧೂಮ್ರಕೇತು, ೧೦. ರ್ಗಣಾಧ್ಯಕ್ಷೋ, ೧೧. ಪಠೇಚ್ಛಣುಯಾದಪಿ ।**
**ದ್ವಾದಶೈತಾನಿ ನಾಮಾನಿಯಃ ಪಠೇಚ್ಛಣುಯಾದಪಿ ॥**
**ವಿದ್ಯಾಸಾರಂಭೇ ವಿವಾಹೇಚ ಪ್ರವೇಶೇ ನಿರ್ಗಮೇತಥಾ ।**
**ಸಂಗ್ರಾಮೇ ಸರ್ವಕಾರ್ಯೇಷು ವಿಘ್ನಸ್ತಸ್ಯ ನ ಜಾಯತೇ ॥**

ಬ್ರಹ್ಮವೈವರ್ತ ಪುರಾಣವು ಗಣಪತಿಯ ವಿವಿಧ ಹೆಸರುಗಳ ಅರ್ಥವನ್ನು ವಿವರಿಸುತ್ತದೆ ಗ ಎಂದರೆ ಜ್ಞಾನ,

ಮೋಕ್ಷಗಳೆರಡಕ್ಕೂ ಒಡೆಯ ದಂತವು ಶಕ್ತಿದ್ಯೋತಕ ಏಕದಂತವು ಸರ್ವಶಕ್ತನಾದ ಏಕಮೇವ ಪರಮಾತ್ಮನನ್ನು ಸಂಕೇತಿಸುತ್ತದೆ ಹೇರಂಬ ಹೆಸರಿನ ಹೇ ದುರ್ಬಲರನ್ನು ರಂಬ ರಕ್ಷಣೆ ಮಾಡುವವನು ಎಂದು ಅರ್ಥ ನೀಡುತ್ತದೆ. ಗಜಾನನ ಕಿವಿಗಳು ಮೊರದಂತೆ ಅಗಲವಾಗಿ ಬೀಸಣಿಗೆಯ ರೂಪದಲ್ಲಿದ್ದು ಶೂರ್ಪಕರ್ಣ ಎಂಬ ಹೆಸರನ್ನು ಪ್ರತಿನಿಧಿಸುತ್ತದೆ. ಶೂರ್ಪಕರ್ಣಗಳು ವಿಘ್ನಗಳನ್ನು ದೂರ ಮಾಡಲು ಬೀಸುವ ಬೀಸಣಿಗೆ ಸತ್ಪಥದಲ್ಲಿ ಎಲ್ಲರನ್ನೂ ಮುನ್ನಡೆಸುವ ಕಾರಣದಿಂದ ಗಣಪತಿ ಎಂದೆನಿಸಿದ್ದಾನೆ ಗಣೇಶಪುರಾಣದಲ್ಲಿ ಗಣೇಶನನ್ನು ಗಜಪತಿಯೆಂದೂ ಹಸ್ತಪಿಶಾಚಿಶನೆಂದು ಕರೆಯಲಾಗಿದ್ದು ಆನಿಗೂ ಗಣಪತಿ ಯಕ್ಷನಿಗು ಸಂಬಂಧ ಕಲ್ಪಿಸಲಾಗಿದೆ. ಆನೆಗೆ ಕಬ್ಬು ಅತ್ಯಂತ ಪ್ರಿಯ ತಿನಿಸಾದ್ದರಿಂದ ಗಣಪತಿಯನ್ನು ಇಕ್ಷುಚಾಪಧರ ಕಬ್ಬಿನ ಜಲ್ಲೆ ಹಿಡಿದವನೆಂದು ವರ್ಣಿಸಲಾಗಿದೆ ಗಣಪತಿಗೆ 'ಮತಂಗಧ್ವಜ' ಎಂಬ ಹೆಸರು ಬಂದಿತು. ಅಂತೆಯೇ ಗಣಪತ್ಯುಪನಿಷತ್ತಿನಲ್ಲಿ ಕ್ರೌಂಚನೆಂಬ ಗಂದರ್ವನು ವಾಮದೇವ ಋಷಿಯ ಶಾಪಕ್ಕೊಳಗಾಗಿ ಇಲಿಯಾಗಿ ಮಾರ್ಪಟ್ಟು ಜನರಿಗೆ ತೊಂದರೆ ನೀಡಲು ಪರಾಶರ ಮುನಿಯು ಅಣಕಗೈದಂತೆ ಗಣಪತಿಯು ಈ ಇಲಿಯನ್ನು ನಿಗ್ರಹಿಸಿ ತನ್ನ ವಾಹನವೆಂದು ಮಾಡಿಕೊಂಡು ಮೂಷಕವಾಹನನೆನಿಸಿದನೆಂದು ಹೇಳಿದೆ ಮೂಷಕರೆಂಬ ಜನರು ಪ್ರಾಚೀನ ಕಾಲದಲ್ಲಿ ಗೋದಾವರಿ ಪ್ರದೇಶದಲ್ಲಿ ನೆಲೆಸಿದ್ದು ಗಣಪತಿಯನ್ನು ತಮ್ಮ 'ಟೋಟಿಮ್' ಎಂದು ಸ್ವೀಕರಿಸಿ ಪೂಜಿಸುತ್ತಿದ್ದರೆಂದೂ ಹೇಳಲಾಗುತ್ತದೆ. ಹೀಗೆ ಪ್ರಾರಂಭದಲ್ಲಿ ಅವೈದಿಕ ಜನರ ಟೋಟೆಮ್ ಆಗಿದ್ದ ಗಣಪತಿಯು ವೈದಿಕರಿಂದಲೂ ದೇವತೆಯಾಗಿ ಅಂಗೀಕರಿಸಲ್ಪಟ್ಟಿದ್ದು ಮಾತ್ರವಲ್ಲದೆ ಭಾರತೀಯ ವೈದಿಕ ಧರ್ಮದ ಷಣ್ಮತಗಳಾದ ಸೌರ, ಗಾಣಪತ್ಯ, ಕೌಮಾರ, ಶಾಕ್ತ, ಶೈವ, ವೈಷ್ಣವ ದರ್ಶನಗಳಲ್ಲೂ ಸ್ಥಾನವನ್ನು ಪಡೆದುಕೊಂಡಿತು– ಶ್ರೀ ಶಂಕರಾಚಾರ್ಯರು ಪಂಚಾಯತನರ ಪೂಜೆಯನ್ನು ಪ್ರಚುರಗೊಳಿಸಿದಾಗ ಸೂರ್ಯ (ಆದಿತ್ಯ) ಅಂಬಿಕೆ, ವಿಷ್ಣು, ಶಿವರ ಜೊತೆಯಲ್ಲಿ ಸೇರಿಸಲ್ಪಟ್ಟ ಗಣಪತಿ– ಮಾನವ ದೇಹದಲ್ಲಿ ಮೂಲಾಧಾರ ಚಕ್ರದಲ್ಲಿ ಬೆಳಗುವ ದೇವನು ಶ್ರೀಗಣೇಶನು ಮೂಲಾಧಾರ ಚಕ್ರದಲ್ಲಿ ಬೆಳಗುವ ೨೧ ದಿವ್ಯಶಕ್ತಿಗಳಲ್ಲಿ ಈ ದೇವನು ಶ್ರೀ ಗಣೇಶನಾಗಿಯೋ ಅಥವಾ ವಿಶ್ವಕ್ಸೇನನಾಗಿಯೋ ಪೂಜಿಸಲ್ಪಡುತ್ತಾನೆ. ಗರಿಕೆ ಹುಲ್ಲು (ದೂರ್ವ) ದರ್ಶನ, ಸ್ಪರ್ಶನದಿಂದಲೂ ಸೇವನೆಯಿಂದಲೂ ಮುಲಾಧಾರ ಚಕ್ರದ ಪರಿಶುದ್ಧಿಯು ಪ್ರಾಪ್ತವಾಗಿ ಗಣೇಶೋಪಾಸನೆಯು ಸಿದ್ಧಿಸುತ್ತದೆ.

ದೇವತಾ ಸ್ವರೂಪವನ್ನು ಮಂತ್ರಮಯವಾಗಿ ಯಂತ್ರಮಯವಾಗಿ ತಂತ್ರಮಯವಾಗಿ ವಿಶಿಷ್ಟ ಆಕಾರದಿಂದ ಕೂಡಿದ ಮೂರ್ತಿಮಯವಾಗಿ ಉಪಾಸಿಸುವ ರಹಸ್ಯ ಪೂರ್ಣವಾದ ಸಂಪ್ರದಾಯವಿದೆ.

**ಶ್ರೀ ಮಹಾಗಣಪತಿಯ ಮಂತ್ರ ಇಂತಿದೆ :**

**"ಓಂ ಶ್ರೀ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಿಯೇ ವರ ವರದ ಸರ್ವಜನಂ ಮೇ ವಶಮಾನಯಸ್ವಾಹಾ॥"**

ಈ ಮಂತ್ರದಲ್ಲಿ ಒಟ್ಟು ೨೮ ಅಕ್ಷರಗಳಿವೆ. ಓಂ ಶ್ರೀ ಹ್ರೀಂ ಕ್ಲೀಂ ಗ್ಲೌಂ, ಗಂ ಎಂಬ ಆರು ಬೀಜಾಕ್ಷರಗಳಿವೆ. ಓಂ, ಪ್ರಣವ ಶ್ರೀ–ಶ್ರೀ ಬೀಜ ಹ್ರೀಂ ಮಾಯಾಬೀಜ, ಕ್ಲೀ–ಮನ್ಮಥಬೀಜ, ಗ್ಲೌಂ–ಪೃಥ್ವೀ ಬೀಜ ಗಂ ಗಣೇಶನ ಬೀಜಾಕ್ಷರ ರೂಪ.

**ಮಹಾಗಣಪತಿಯ ಯಂತ್ರ ಸ್ವರೂಪ :**

**ಕಲ್ಲೋಲಾಂಚಲ ಚುಂಬಿತಾಂಬುದತತಾವಿಕ್ಷುದ್ರವಾಂಭೋನಿಧೌ**
**ದ್ವೀಪೇ ರತ್ನಮಯೇ ಸುರದ್ರುಮವನಾಮೋ ದೈಕಮೇದಸ್ವಿನಿ ।**
**ಮೂಲೇ ಕಲ್ಪತರೋರ್ಮಹಾಮಣಿಯಮೇ ಪೀಠೇಕ್ಷರಾಂಭೋರುಹೇ**
**ಷಟ್ಕೋಣಾಕಲಿತ ತ್ರಿಕೋಣರಚನಾಸತ್ಕರ್ಣಿಕೇಮುಂ ಭಜೇ ॥**

ಅಲೆಂಗಳಂಚಿನಿಂದ ಮೋಡದ ಸಾಲಿನವರೆಗೂ ವ್ಯಾಪಿಸಿರುವ ಕಬ್ಬಿನರಸದ ಸಮುದ್ರದಲ್ಲಿ (ಹರಿಚಂದನ ಸಂತಾನ, ಮಂದಾರ, ಕಲ್ಪವಕೃ) ಪಾರಿಜಾತ ಮುಂತಾದ ದೇವವೃಕ್ಷಗಳ ಉದ್ಯಾನದಲ್ಲಿರುವ ರತ್ನಮಯ ದ್ವೀಪದ ಕಲ್ಪವೃಕ್ಷದ ಬುಡದಲ್ಲಿ ರತ್ನಪಿಠವಿದ್ದು ಅದರ ಸುತ್ತಲೂ ಷಟ್ ತ್ರಿಕೋಣಗಳ ಮಧ್ಯದಲ್ಲಿ ಒಂದು ತ್ರಿಕೋಣ ಮತ್ತು ಆರು ತ್ರಿಕೋಣಗಳ ಸುತ್ತಲೂ ಅಷ್ಟದಳಗಳ ಕಮಲವಿದ್ದು ಅದು ಅಕ್ಷರ ಮಾತೃಕೆ (ಬೀಜಾಕ್ಷರ) ಗಳಿಂದ ಕೂಡಿರುತ್ತದೆ. ಇಂತಹ ಯಂತ್ರದ ಮಧ್ಯತ್ರಿಕೋಣದೊಳಗೆ ಮಹಾಗಣಪತಿಯನ್ನು ಆಹ್ವಾನಿಸಿ ಉಪಾಸಿಸಬೇಕು

ಮಹಾಗಣಪತಿಯಂತ್ರ (ಚಿತ್ರ)

೧. ಕಲ್ಪ ವೃಕ್ಷದ ಬುಡದಲ್ಲಿ ಶ್ರೀಮಹಾಗಣಪತಿಯ ಸ್ಥಾನ ಓಂ ಗಂ
ಬಿಲ್ವ ವೃಕ್ಷದ ಕೆಳಗೆ ಲಕ್ಷ್ಮೀನಾರಾಯಣರ ಸ್ಥಾನ ಶ್ರೀಂ
ಆಲದ ವೃಕ್ಷದ ಕೆಳಗೆ ಪಾರ್ವತಿಪರಮೇಶ್ವರರ ಸ್ಥಾನ ಹ್ರೀಂ
ಅರಳೀ ವೃಕ್ಷದ ರತಿಮನ್ಮಥ ಸ್ಥಾನ ಕ್ಲೀಂ
ಪ್ರಯಾಂಗು(ಹೊರಗೆ) ವೃಕ್ಷದ ಭೂಮಾಹರ ಸ್ಥಾನ ಗ್ಲೌಂ
ಸಿದ್ಧಿದೇವಿಸಹಿತ ಆಮೋದ ಗಣಪತಿಯ ಸ್ಥಾನ
ಸಮೃದ್ಧಿ ದೇವಿ ಸಹಿತ ಪ್ರಮೋದ ಗಣಪತಿಯ ಸ್ಥಾನ
ಕಾಂತಿದೇವಿ ವೃಕ್ಷದ ಸುಮುಖ ಗಣಪತಿಯ ಸ್ಥಾನ
ಮದನಾವತೀದೇವಿ ಸಹಿತ ದುರ್ಮುಖ ಗಣಪತಿಯ ಸ್ಥಾನ
ಮದದ್ರವಾದೇವಿ ಸಹಿತ ವಿಘ್ನಗಣಪತಿಯ ಸ್ಥಾನ
ದ್ರಾವಿಣೀದೇವಿ ಸಹಿತ ವಿಘ್ನಕರ್ತೃಗಣಪತಿಯ ಸ್ಥಾನ
ವಸುಧಾ ವೃಕ್ಷದ ಸಹಿತ ಶಂಖನಿಧಿಯ ಸ್ಥಾನ
ವಸುಮತಿ ವೃಕ್ಷದ ಸಹಿತ ಪದ್ಮನಿಧಿಯ ಸ್ಥಾನ
ಓಂ ಗಾಂ ಹೃದಯಾಯ ನಮಃ
ಓಂ ಶ್ರೀಂ ಗೀಂ ಶಿರಸೇ ಸ್ವಾಹಾ
ಓಂ ಹ್ರೀಂ ಗೂಂ ಶಿಖಾಯೈ ವಷಟ್
ಓಂ ಕ್ಲೀಂ ಗೈಂ ಕವಚಾಯ ಹುಮ್
ಓಂ ಗ್ಲೌಂ ಗೌಂ ನೇತ್ರಪ್ರಯಾಯ ವೌಷಟ್
ಓಂ ಗಂ ಗಃ ಅಸ್ತ್ರಾಯ ಪಟ್

೨೦-೨೭ ಸಪ್ತಮಾತೃಕೆಯರಾದ ಬ್ರಾಹ್ಮೀ ಮಾಹೇಶ್ವರಿ ಕೌಮಾರೀ ವೈಷ್ಣವೀ ವಾರಾಹೀ ಇಂದ್ರಾಣೀ ಚಾಮುಂಡಾ ಮತ್ತು ಮಹಾಲಕ್ಷ್ಮೀ ದೇವಿಗಳ ಸ್ಥಾನಗಳು.

೨೮-೩೫ ಕ್ರಮವಾಗಿ ಇಂದ್ರ ಅಗ್ನಿ ಯಮ ನಿರ್‌ಋತಿ, ವರುಣ ವಾಯು ಕುಬೇರ ಈಶಾನ (ದಿಕ್ಪಾಲಕರ) ಸ್ಥಾನಗಳು

೩೬-೪೩ ಕ್ರಮವಾಗಿ ವಜ್ರಾಯುಧ, ಶಕ್ತಿ, ದಂಡ, ಖಡ್ಗ, ಪಾಶ, ಅಂಕುಶ, ಗದೆ, ತ್ರಿಶೂಲ ಎಂಬ ಅಷ್ಟದಿಕ್ಪಾಲಕರ ಆಯುಧ ಶಕ್ತಿಗಳ ಸ್ಥಾನಗಳು.

ಗಣಪತಿಗಾಗಿ ಆಲಯಗಳು ನಿರ್ಮಿತಗೊಂಡಿವೆ. ಶಿವಾಲಯಗಳ ಪ್ರವೇಶದ್ವಾರದ ಬಲಭಾಗದಲ್ಲಿ ಅಥವಾ ಒಳಪ್ರಾಕಾರದ ಪ್ರಾರಂಭದಲ್ಲಿ ಹಾಗೂ ವಿಷ್ಣುದೇವಾಲಯದ ಪ್ರಾಕಾರದಲ್ಲಿ ಪ್ರತ್ಯೇಕ ಗುಡಿ ಅಥವಾ ಮೂರ್ತಿ ಇರುತ್ತದೆ. ಶಿವಾಲಯಗಳಲ್ಲಿ ನೈಋತ್ಯದಲ್ಲಿ ಗಣಪತಿಗಾಗಿ ಪ್ರತ್ಯೇಕ ಗುಡಿ ಇರುವುದು.

ಗಣಪತಿಯ ದೇವಾಲಯದಲ್ಲಿ ಗಣಪತಿಯ ಮೂಲ ವಿಗ್ರಹಕ್ಕೆ ಎಡಭಾಗದಲ್ಲಿ ಗಜಕರ್ಣ, ಬಲಭಾಗದಲ್ಲಿ ಸಿದ್ಧಿ, ಉತ್ತರಕ್ಕೆ ಗೌರಿ, ಪೂರ್ವಕ್ಕೆ ಬುದ್ಧಿ, ಆಗ್ನೇಯಕ್ಕೆ ಭಾಳಚಂದ್ರ ದಕ್ಷಿಣದಿಕ್ಕಿಗೆ ಸರಸ್ವತಿ ಪಶ್ಚಿಮದಿಕ್ಕಿಗೆ ಕುಬೇರ ಹಿಂಭಾಗಕ್ಕೆ ಧೂಮಕ ಮೂರ್ತಿಗಳಿರಬೇಕು. ನಾಲ್ಕು ದಿಕ್ಕುಗಳಿಗೆ ಇರುವ ನಾಲ್ಕು ಬಾಗಿಲುಗಳಲ್ಲೂ ದ್ವಾರಪಾಲಕರ ಮೂರ್ತಿಗಳಿರಬೇಕು.

ಪೂರ್ವ ದಿಕ್ಕಿನ ದ್ವಾರಪಾಲಕರು ಅವಿಘ್ನ ಮತ್ತು ವಿಘ್ನರಾಜ.

ದಕ್ಷಿಣ ದಿಕ್ಕಿನ ದ್ವಾರಪಾಲಕರು ಸುವಕ್ತ್ರ ಮತ್ತು ಬಲವಾನ್.

ಪಶ್ಚಿಮ ದಿಕ್ಕಿನ ದ್ವಾರಪಾಲಕರು ಗಜಕರ್ಣ ಮತ್ತು ಗೋಕರ್ಣ.

ಉತ್ತರ ದಿಕ್ಕಿನ ದ್ವಾರಪಾಲಕರು ಸುಸೌಮ್ಯ ಮತ್ತು ಅಭಯ

ಇವರೆಲ್ಲರೂ ಕುಳ್ಳರಾಗಿದ್ದು ಮನುಷ್ಯ ಮುಖದವರಾಗಿದ್ದು ಕ್ರೂರ ನೋಟ ಬೀರುತ್ತಾ ಭಯಂಕರ ಭಂಗಿಗಳಲ್ಲಿರುತ್ತಾರೆ. ಮೇಲಿನ ಹಸ್ತದಲ್ಲಿ ತರ್ಜನಿ ಮುದ್ರೆಯನ್ನು ಅದೇ ಪಾರ್ಶ್ವದ ಕೆಳಹಸ್ತದಲ್ಲಿ ದಂಡವನ್ನು ಧರಿಸಿರುತ್ತಾರೆ. ಉಳಿದ ಪಾರ್ಶ್ವದಲ್ಲಿ ಪರಸ್ಪರ ವಿರುದ್ಧ ಕ್ರಮದಲ್ಲಿ ಇತರ ಆಯುಧಗಳನ್ನು ಹಿಡಿದಿರುತ್ತಾರೆ. ಈ ಅಷ್ಟದಿಕ್ಪಾಲಕರನ್ನು ಅಷ್ಟ ಪ್ರತೀಹಾರಿಗಳೆಂದೂ ಕರೆಯಲಾಗುತ್ತದೆ.

ಗಣೇಶ ಶಿಲ್ಪದ ಸಾಮಾನ್ಯ ಲಕ್ಷಣವನ್ನು ರೂಪಮಂಡನ ಗ್ರಂಥದಲ್ಲಿ ಈ ರೀತಿ ಹೇಳಿದೆ.

**ದಂತಂ ಚ ಪರಶುಂ ಪದ್ಮಂ ಮೋದಕಾಂಶ್ಚ ಗಜಾನನಃ ।**
**ಗಣೇಶೋ ಮಲಾಷಕಾರೂಢೋ ಬಿಭ್ರಾಣಸ್ಸರ್ವಕಾಯದಃ ॥**

ದಂತ, ಪರಶು (ಕೊಡಲಿ), ಪದ್ಮ (ತಾವರೆ) ಮತ್ತು ಮೋದಕ (ಕಡಬು, ಲಾಡು ಅಪೂಪ ಅಥವಾ ಸಿಹಿಉಂಡೆ)ಗಳನ್ನು ಕೈಗಳಲ್ಲಿ ಹಿಡಿದಿರುವ ಮೂಷಕ (ಇಲಿ)ದ ಮೇಲೆ ಆರೂಢನಾಗಿರುವ ಗಣೇಶನು ಸರ್ವಇಷ್ಟಾರ್ಥಗಳನ್ನು ನೀಡುವನು ಬಾದಾಮಿ ಚಾಳುಕ್ಯರ ಕಾಲದಲ್ಲಿ ಕರ್ನಾಟಕದಲ್ಲಿ ಪ್ರಥಮ ಬಾರಿಗೆ ಶಿವನ ಪರಿವಾರ ದೇವತೆಯಾಗಿ ಶಿಲ್ಪಮಾಧ್ಯಮದಲ್ಲಿ ಗಣೇಶನನ್ನು ಅಳವಡಿಸಲಾಯಿತು. ಆದರೆ ಗಣೇಶನಿಗಾಗಿಯೇ ಸ್ವತಂತ್ರವಾಗಿ ದೇವಾಲಯ ನಿರ್ಮಿಸಿ ಗಣೇಶ ಶಿಲ್ಪವನ್ನು ಪ್ರತಿಷ್ಠಾಪಿಸಿದುದು ಪ್ರಾಯಶಃ ವಿಜಯನಗರದರಸರ ಆಳ್ವಿಕೆಯಲ್ಲಿ ಮುಂದೆ ಮೈಸೂರಿನ ಒಡೆಯರು ಶಿವದೇವಾಲಯಗಳಲ್ಲಿ ಪ್ರಸ್ತರದ ಮೇಲಿನ ಪಂಜರಗಳಲ್ಲಿ ಗಣೇಶನ ಮೂವತ್ತೆರಡು (ದ್ವಾತ್ರಿಶತ್) ವೈವಿಧ್ಯಮಯವಾದ ಆಗ ಮೋಕ್ತ ಶಿಲ್ಪಗಳನ್ನು ಅಳವಡಿಸಿಕೊಂಡರು. ಪ್ರಸ್ತುತ ಈ ಲೇಖನದಲ್ಲಿ ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯದ ಹಾಗೂ ಚಾಮರಾಜನಗರದ ಚಾಮರಾಜೇಶ್ವರ ದೇವಾಲಯದ ಹೊರ ಪ್ರಾಕಾರದ ಪ್ರಸ್ತರ ಪಂಜರಗಳಲ್ಲಿರುವ ಗಣೇಶನ ಮೂವತ್ತೆರಡು ಗಾರೆ ಶಿಲ್ಪಗಳು ನಾಮಫಲಕ ಶಾಸನಗಳನ್ನು ಹೊಂದಿವೆ. ಅದರ ಪ್ರಕಾರವಾಗಿ ನಂಜನಗೂಡಿನ ಶ್ರೀ ಕಂಠೇಶ್ವರ ದೇವಾಲಯದ ಹೊರ ಪ್ರಾಕಾರದ ಪಂಜರ ಗಣೇಶ ಶಿಲ್ಪಗಳ ಶಾಸನದ ಹೆಸರುಗಳು ಇಂತಿವೆ :

೧. ಭಲ್ಲಗಣಪತಿ, ೨. ದುಂಡಿಗಣಪತಿ, ೩. ತರುಣಗಣಪತಿ, ೪. ತಾಂಡವಗಣಪತಿ, ೫. ವೀರಗಣಪತಿ, ೬. ಲಕ್ಷ್ಮೀಗಣಪತಿ, ೭. ಚತುರ್ಮುಖಗಣಪತಿ, ೮. ಶಕ್ತಿಗಣಪತಿ, ೯. ವಿಜಯಗಣಪತಿ, ೧೦. ಋಣಮೋಚನಗಣಪತಿ, ೧೧. ಮಹಾಗಣಪತಿ, ೧೨. ಸೃಷ್ಠಿಗಣಪತಿ, ೧೩. ಪಂಚಮುಖಗಣಪತಿ, ೧೪. ನಿಧಿಗಣಪತಿ, ೧೫. ಏಕದಂತಗಣಪತಿ, ೧೬. ಉಚ್ಚಿಷ್ಟಗಣಪತಿ, ೧೭. ಕ್ಷಿಪ್ರಗಣಪತಿ, ೧೮. ಹೇರಂಬಗಣಪತಿ, ೧೯. ಪೂರ್ವಗಣೇಶಗಣಪತಿ, ೨೦. ಕ್ಷಿಪ್ರಪ್ರಸಾದಗಣಪತಿ, ೨೧. ಮಹಾಗಣಪತಿ, ೨೨. ಬೀಜಪೂರಗಣಪತಿ, ೨೩. ಸರ್ವಾರ್ಥನಿಧಿಗಣಪತಿ, ೨೪. ಸದಾಶಿವಗಣಪತಿ, ೨೫. ವಿಘ್ನರಾಜಗಣಪತಿ, ೨೬. ಪ್ರ್ಯಕ್ಷರ ಗಣಪತಿ, ೨೭. ಯೋಗ ಗಣಪತಿ, ೨೮. ಶೂರಗಣಪತಿ, ೨೯. ಇಭವಕ್ತ್ರಗಣಪತಿ, ೩೦. ಕರೀಂದ್ರಗಣಪತಿ, ೩೧. ರಾಮ ಗಣಪತಿ, ೩೨. ಗೌರೀಪುತ್ರಗಣಪತಿ

ಚಾಮರಾಜೇಶ್ವರ ದೇವಾಲಯದ ಹೊರ ಪ್ರಾಕಾರದ ಪೂರ್ವ ದಿಕ್ಕಿನ ಹಾಗೂ ಉತ್ತರ ದಿಕ್ಕಿನ ಪಂಜರಗಳಲ್ಲಿ ಗಣಪತಿಯ ಇಪ್ಪತ್ತೈದು ಶಾಸನಸ್ಥ ಗಾರೆ ಶಿಲ್ಪಗಳಿವೆ. ಶಾಸನಸ್ಥ ಗಣಪತಿಯ ಹೆಸರುಗಳು ಪೂರ್ವದಿಕ್ಕಿನಲ್ಲಿ ನಾಲ್ಕು ಮತ್ತು ಉತ್ತರ ದಿಕ್ಕಿನಲ್ಲಿ ಇಪ್ಪತ್ತೊಂದು ಗಣಪತಿ ಶಿಲ್ಪಗಳಿವೆ.

೧. ದ್ವಿಬುಜಗಣಪತಿ, ೨. ಉದ್ದಂಡಗಣಪತಿ, ೩. ಉಮಾಗಣಪತಿ, ೪. ಸಿಂಹ ಗಣಪತಿ, ೫. ತ್ರಿಮುಖಗಣಪತಿ, ೬. ಚಿಂತಾಮಣಿಗಣಪತಿ, ೭. ವಿಘ್ನರಾಜ ಗಣಪತಿ, ೮. ಪ್ರಣವ ಗಣಪತಿ, ೯. ಚಂಡಿಗಣಪತಿ, ೧೦. ಹರಿದ್ರಗಣಪತಿ, ೧೧. ಅಭೀಷ್ಟಗಣಪತಿ, ೧೨. ಸಿದ್ಧಿಗಣಪತಿ, ೧೩. ಪಂಚಮುಖಗಣಪತಿ, ೧೪. ಸೃಷ್ಟಿ ಗಣಪತಿ, ೧೫. ಮಹಾಗಣಪತಿ, ೧೬. ಋಣಮೋಚನ ಗಣಪತಿ, ೧೭. ವಿಜಯಗಣಪತಿ, ೧೮. ಲಕ್ಷ್ಮೀ ಗಣಪತಿ, ೧೯. ಚತುರ್ಮುಖ ಗಣಪತಿ, ೨೦. ಶಕ್ತಿಗಣಪತಿ, ೨೧. ವೀರಗಣಪತಿ, ೨೨. ತಾಂಡವಗಣಪತಿ, ೨೩. ತರುಣೀಗಣಪತಿ, ೨೪. ದುಂಡಿಗಣಪತಿ, ೨೫. ಬಲಗಣಪತಿ.

ವರದಹಸ್ತನಂ ಅಂಕುಶ ದಂತಗಳನ್ನು ಬಲ ಹಸ್ತಗಳಲ್ಲೂ ಕೆಳಗಿನ ಹಸ್ತದಲ್ಲಿ ಪರಶುವನ್ನು ಎಡಹಸ್ತಗಳಲ್ಲಿ ಕಪಾಲ, ಬಾಣ, ಜಪಮಾಲೆ, ಪಾಶ, ಕೌಯೋದಕೀ(ಗದೆ)ಗಳನ್ನು ಹಿಡಿದಿರುವ ಪಂಚಮುಖದವನೂ ತ್ರಿನೇತ್ರನೂ ಮೂಷಕದ ಮೇಲೆ ಕುಳಿತ ಹೇರಂಬನು ಸರ್ವಾರ್ಥಕಾಮಗಳನ್ನು ನೀಡಲಿ.

**ನಾರಿಕೇಳಾವ್ರು ಕದಲೀ ಗುಡ ಪಾಯಸ ಧಾರಣಂ ।**
**ಶರಶ್ಚಂದ್ರಾಭವಪುಷಂ ಭಜೇ ಭಕ್ತಗಣಾಧಿಪಂ ॥**

ತೆಂಗಿನಕಾಯಿ, ಮಾವು, ಬಾಳೆಹಣ್ಣು, ಹಾಗೂ ಬೆಲ್ಲದ ಪಾಯಸ (ಪಾತ್ರೆ) ಧರಿಸಿದ ಶರತ್ಕಾಲದ ಚಂದ್ರನಂತೆ ಶೋಭಿಸುವ ಮೈಯುಳ್ಳ ಭಕ್ತಗಣಾಧಿಪನನ್ನು ಭಜಿಸೋಣ.

**ಯಂ ಪುಸ್ತಕಾಕದಪಗುಣ ದಂಡಕಮಂಡಲು ಶ್ರೀ**
**ವಿದ್ಯೋದ್ಧಮಾನ ಕರ ಭೂಷಣ ಇಂದು ವರ್ಣಂ ।**
**ಸ್ತಂಭೇರಮಾನನ ಚತುಷ್ಟಯ ಶೋಭಮಾನಂ**
**ತ್ವಾಂ ಯಃ ಸ್ಮರೇ ದ್ವಿಜಗಣಾಧಿ ಪತಿಂ ಸ ಧನ್ಯಃ ॥**

ಕೈಗಳಲ್ಲಿ ಪುಸ್ತಕ, ಜಪಮಾಲೆ ದಂಡಕಮಾಡಲು ಹಾಗೂ ಸೊಂಡಿಲಲ್ಲಿ ಶ್ರೀ ವಿದ್ಯೆಯನ್ನು ಎತ್ತಿಕೊಂಡಿರುವ ಚಂದ್ರನಂತೆ ಧವಳ ಬಿಳಿ ಬಣ್ಣದವನಾದ ನಾಲ್ಕು ಗಜಮುಖಗಳುಳ್ಳ ಶೋಭಾಯಮಾನನಾದ ಯಾವ ದ್ವಿಜಗಣಾಧಿಪನಾದ ನಿನ್ನನ್ನು ಯಾರು ಸ್ಮರಿಸುತ್ತಾನೋ ಅವನೇ ಧನ್ಯನು.

**ಪಕ್ವಚೂಕಫಲಪುಷ್ಪಮಂಜರಿ ಚೇಕ್ಷುದಂಡ ತಿಲಮೋದಕ ।**
**ಉದ್ವಹನ್ ಪುರುಷಮಸ್ತು ತೇ ನಮಃ**
**ಶ್ರೀಸಂಮೃದ್ಧಿಯುತ ಹೇಮ ಪಿಂಗಳ ॥**

ಮಾಗಿದ ಮಾವಿನಹಣ್ಣು ಪುಷ್ಪಗುಚ್ಛ, ಕಬ್ಬಿನ ಜಲ್ಲೆ, ಎಳ್ಳಿನ ಕಡುಬುಗಳನ್ನು ಹಿಡಿದ ಹೊಂಬಣ್ಣದ ಕಾಂತಿಯುಳ್ಳ ಲಕ್ಷ್ಮೀಸಂಪತ್ಸಮೃದ್ಧನಾದ ಪುರುಷನಾದ ಪಿಂಗಳ ಗಣೇಶನಾದ ನಿನಗೆ ನಮಸ್ಕಾರ.

**ಕಲ್ಹಾರಶಾಲೀಕಮಲೇಕ್ಷುಕ ಚಾಪಬಾಣ ದಂತ ಪ್ರರೋಹಕ**
**ಗದೀ ಕನಕೋಜ್ವಲಾಂಗಃ**
**ಆಲಂಗಿನೋ ಕರೋ ಹರಿತಾಂಗಂ**
**ದೇವ್ಯಾ ಕರೋತು ಶುಭ ಊರ್ಧ್ವ ಗಣಾಧಿಪೋಮೇ ॥**

ಕಲ್ಹಾರ ಪುಷ್ಪಕಾಲೀಭತ್ತದ ತೆನೆ ಕಮಲ, ಕಬ್ಬಿನ ಜಲ್ಲೆ, ಧನುರ್ಬಾಣ ದಂತಗಳನ್ನು ಎತ್ತಿಹಿಡಿದವನು ದೇವಿಯನ್ನು ಕೈಯಿಂದ ಆಲಂಗಿಸಿದವನೂ ಹರಿತವರ್ಣದ ಶರೀರವುಳ್ಳವನೂ ಸ್ವರ್ಣಕಾಂತಿಯುತನಾದ ಗಣಾಧಿಪನು ಶುಭವನ್ನುಂಟುಮಾಡಲಿ.

**ರಕ್ತೋರಕ್ತಾಂಗರಾಗಾಂಶುಕ ಕುಸುಮಯುತ ಸ್ತುಂಡಿಲ ಚಂದ್ರಮೌಳಿ**
**ರೇತ್ರೈಮ್ಯಕ್ತ ಸ್ತ್ರಿಭಿರ್ವಾನುಮನಕರಚರಣೋ ಬೀಜಾಪೂರಂ ದಧಾನಃ**
**ಹಸ್ತಾಗ್ರಾಕ್ಲಪ್ತ ಪಾಶಾಂಕುಶ ಶರದೋವರದೋ ನಾಗವಕ್ತ್ರೋಹಿ**
**ಭೂಷೋ ದೇವಃ ಪದ್ಮಾಸನಾಸ್ತೋ ಭವತು ಸುಖಕರೋ ಭೂತಯೋ ವಿಘ್ನರಾಜಃ**

ಕೆಂಬಣ್ಣದವನೂ, ರಕ್ತಚಂದನವನ್ನು ಅಂಗಾಂಗಗಳಿಗೆ ಲೇಪಿಸಿಕೊಂಡವನೂ ಕೆಂಪು ವಸ್ತ್ರಗಳನ್ನು ಧರಿಸಿದವನೂ ಕೆಂಪು ಹೂಗಳಿಂದ ಕೂಡಿದವನೂ ಸ್ಥೂಲಕಾಯನೂ ತಲೆಯಲ್ಲಿ ಚಂದ್ರನನ್ನು ಧರಿಸಿದವನೂ ತ್ರಿನೇತ್ರಮಂ ಕುಳ್ಳಾದ ಕೈಕಾಲುಗಳುಳ್ಳವನೂ ಕೈಗಳಲ್ಲಿ ಬೀಜಪೂರ (ದಾಳಿಂಬೆ) ದಂತ, ಅಂಕುಶ ವರದಹಸ್ತ ಮತ್ತು ಪಾಶಗಳನ್ನು ಧರಿಸಿರುವವನು ಪದ್ಮಪೀಠದ ಮೇಲೆ ಪದ್ಮಾಸನದಲ್ಲಿ ಮಂಡಿಸಿರುವ ವಿಘ್ನರಾಜನು ಜೀವಿಗಳಿಗೆ ಸುಖವನ್ನುಂಟುಮಾಡುವವನಾಗಲಿ. ಈ ಏಕಾಕ್ಷರ ಗಣಪತಿಯನ್ನು ಬೀಜ ಗಣಪತಿ ಎಂದೂ ಕರೆಯುತ್ತಾರೆ.

**ಸಿಂಧೂರಾಭಮಿಭಾನನಂ ತ್ರಿಣಯನಂ ಹಸ್ತೇ ಚ ಪಾಶಾಂಕುಶೌ**
**ಬಿಭ್ರಾಣಂ ಮಧುವತ್ಕಪಾಲ ಮನಿಶಂ ಸಾಧ್ವಿಂದುಮೌಳಿಂ ಭಜೇ ।**

**ಪುಷ್ಟ್ಯಾಶ್ಲಿಷ್ಟತನುಂ ಧ್ವಜಾಗ್ರಕರಾಯ ಪದ್ಮೋಲ್ಲಸದ್ಧಸ್ತಲೂ**
**ತದ್ಯೋನ್ಯಾಹಿತ ಪಾಣಿ ಮಾತ್ತವ ಸುಮತ್ಪಾತ್ರೋಲ್ಲ ಸತ್ಪುಷ್ಕರಮ್ ॥**

ಸಿಂಧೂರದ ಕಾಂತಿಯುಳ್ಳವನೂ ಆನೆ ಮೊಗದವನೂ ಮುಕ್ಕಣ್ಣನೂ ಮೇಲಿನ ಹಸ್ತಗಳಲ್ಲಿ ಪಾಶಾಂಕುಶ ಹಿಡಿದಿರುವವನೂ ಕೆಳಗಿನ ಬಲಕೈಯಲ್ಲಿ ಮಡಿಕೆಯ ಕಪಾಲಪಾತ್ರೆಯನ್ನು ಹಾಗೂ ಎಡಕೈಯಲ್ಲಿ ಪುಷ್ಟದೇವಿಯನ್ನು ಬಳಸಿ ಭಗವನ್ನು ಸ್ಪರ್ಶಿಸಿರುವವನೂ ಪುಷ್ಟಾದೇವಿಯೂ ತನ್ನೆರಡು ಹಸ್ತಗಳಲ್ಲಿ ಧ್ವಜವನ್ನು ಪದ್ಮಪುಷ್ಪವನ್ನು ಹಿಡಿದಿರುವ ತನ್ನ ಸೊಂಡಿಲಲ್ಲಿ ಧನದ ಪಾತ್ರೆಯನ್ನೂ ಹಿಡಿದಿರುವ ಇಂದು ಮೌಳಿಯಾಗಿ ವರಗಣಪತಿಯನ್ನು ಸದಾ ಭಜಿಸೋಣ.

**ಗಜೇಂದ್ರವದನಂ ಸಾಕ್ಷಾಚ್ಚಲತ್ಕರ್ಣಸುಚಾಮರಮ್**
**ಹೇಮವರ್ಣಾಂ ಚತುರ್ಬಾಹುಂ ಪಾಶಾಂಕುಶಧರಂ ವರಮ್ ॥**
**ಸ್ವದಂತಂ ದಕ್ಷಿಣೇ ಹಸ್ತೇ ಸವ್ಯೇ ತ್ವಾಮ್ರಫಲಂ ತಥಾ**
**ಪುಷ್ಕರೇ ಮೋದಕೇ ಚೈವ ಧಾರಯಂತಮನುಸ್ಮರೇತ್ ॥**

ಗಜೇಂದ್ರ ಮುಖವುಳ್ಳವನು ಬೀಸಣಿಗೆಯಂತೆ ಬೀಸುತ್ತಿರುವ ಚಾಮರದಂತಹ ಕಿವಿಗಳುಳ್ಳವನೂ ಸುವರ್ಣಕಾಂತಿಯಿಂದ ಕೂಡಿದವನು. ತನ್ನ ಚತುರ್ಬಾಹುಗಳಲ್ಲಿ ಮೇಲಿನ ಹಸ್ತಗಳಲ್ಲಿ ಪಾಶಾಂಕುಶಗಳನ್ನೂ ಕೆಳಗಿನ ಬಲಗೈಯಲ್ಲಿ ತನ್ನದೇ ದಂತವನ್ನೂ ಎಡಗೈಯಲ್ಲಿ ಮಾವಿನಹಣ್ಣನ್ನು ಹಿಡಿದಿರುವವನೂ ಹಾಗೂ ಸೊಂಡಿಲಿನಲ್ಲಿ ಮೋದಕ(ಲಾಡು)ವನ್ನು ಹಿಡಿದಿರುವವನೂ ಆದ ತ್ರ್ಯಕ್ಷರ ಗಣಪತಿಯನ್ನು ಸದಾ ಸ್ಮರಿಸಬೇಕು.

**ಕ್ಷಿಪ್ರಪ್ರಸಾದ ಗಣಪತಿ**

**ಧೃತ ಪಾಶಾಂಕುಶ ಕಲ್ಪಲತಾ ಸ್ವದಂತಶ್ಚ ಬೀಜಪೂರಯುತಃ**
**ಶಶಿಕಲಕಲಿತಮೌಳಿಸ್ತ್ರಿಲೋಚನೋರುಣಶ್ಚ ಗಜವದನಃ ॥**
**ಭೂಸುರ ಭೂಷಣದೀಪ್ತೋ ಬೃಹದುದರಃ ಪದ್ಮವಿಷ್ಟರೋಲ್ಲಸಿತಃ**
**ವಿಘ್ನಪಯೋಧರ ಪವನಃ ಕರಧೃತ ಕಮಲಃ ಸದಾಸ್ತು ಮೇ ಭೂತ್ಯೈ ॥**

ಪಾಶಾಂಕುಶ ಕಲ್ಪಲತೆ ದಂತ ಬೀಜಪೂರ ಪದಪುಷ್ಪಗಳನ್ನು ಕೈಗಳಲ್ಲಿ ಧರಿಸಿದ ಶಿರಗಳಲ್ಲಿ ಬಿದಿಗೆಯ ರೇಖಾಚಂದ್ರನನ್ನು ಧರಿಸಿದ ತ್ರಿಲೋಚನನಾದ ಅರುಣಕಾಂತಿಯಿಂದ ಕೂಡಿದ ದೊಡ್ಡ ಹೊಟ್ಟೆಯವನಾದ ಸರ್ವಾಂಗ ಭೂಷಿತನಾದ ಅರಳಿದ ಪದ್ಮಪೀಠದ ಮೇಲೆ ಆಸೀನನಾದ ವಿಘ್ನವೆಂಬ ಮೋಡಗಳನ್ನು ಚದುರಿಸುವ ಗಾಳಿಯಂತಿರುವ ಗಜವದನನು ಸದಾ ನನಗೆ ಸಂಪದವನ್ನೀಯಲಿ.

**ಹರಿದ್ರಾಗಣಪತಿ**

**ಹರಿದ್ರಾಭಂ ಚತುರ್ಬಾಹುಂ ಹರಿದ್ರಾವದನಂ ಪ್ರಭುಮ್**
**ಪಾಶಾಂಕುಶೌ ಧರಂ ದೇವಂ ಮೋದಕದಂತಮೇವ ಚ ॥**
**ಭಕ್ತಾಭಯಪ್ರದಾತಾರಂ ವಂದೇ ವಿಘ್ನ ವಿನಾಶವಮ್ ॥**

ಅರಸಿನ ವರ್ಣದ ಮೈಕಾಂತಿ ಮತ್ತು ಮುಖವುಳ್ಳವನು ತನ್ನ ಚತುರ್ಬಾಹುಗಳಲ್ಲಿ ಪಾಶಾಂಕುಶ ಮೋದಕ ಮತ್ತು ದಂತವನ್ನು ಹಿಡಿದಿರುವ ಭಕ್ತರಿಗೆ ಅಭಯ ನೀಡುವ ವಿಘ್ನನಾಶನನಿಗೆ ನಮಸ್ಕಾರವು.

**ಏಕದಂತಗಣಪತಿ**

**ಲಂಬೋದರಂ ಶ್ಯಾಮತನುಂ ಗಣೇಶಂ**
**ಕುಠಾರಮಕ್ಷಸ್ರಜಮೂರ್ಧ್ವಗಾತ್ರಮ್ ।**
**ಸಲಡ್ಡುಕಂ ದಂತ ಮರ್ದರಾಭ್ಯಾಂ**
**ವಾಮೇತರಾಭ್ಯಾಂಚ ದಧಾನ ಮೀಢೇ ॥**

ಶ್ಯಾಮ(ಕಪ್ಪು)ವರ್ಣನೂ ದೊಡ್ಡ ಹೊಟ್ಟೆಯವನೂ ಮೇಲಿನ ಕೈಗಳಲ್ಲಿ ಕೊಡಲಿ, ಜಪಮಾಲೆ ಕೆಳಗಿನ ಕೈಗಳಲ್ಲಿ ಲಡ್ಡು, ದಂತಗಳನ್ನು ಹಿಡಿದ ಗಣೇಶನನ್ನು ಸ್ತುತಿಸುತ್ತೇನೆ.

**ಸೃಷ್ಟಿಗಣಪತಿ**

**ಪಾಶಾಂಕುಶಸ್ವದಂತಾಮ್ರಫಲವಾನಾಖುವಾಹನಃ**
**ವಿಘ್ನಂ ನಿಹಂತು ನಃ ಶೋಣಃ ಸೃಷ್ಟಿದಕ್ಷೋ ವಿನಾಯಕಃ ॥**

ಪಾಶಾಂಕುಶದಂತ ಮಾವಿನಹಣ್ಣನ್ನು ಕೈಗಳಲ್ಲಿ ಹಿಡಿದ ಕೆಂಬಣ್ಣದವನೂ ಇಲಿ ವಾಹನನೂ ಸೃಷ್ಟಿಗೈಯಲು ಸಮರ್ಥನಾತ ವಿನಾಯಕನು ನಮ್ಮ ವಿಘ್ನಗಳನ್ನು ಪರಿಹರಿಸಲಿ.

**ಉದ್ದಂಡಗಣಪತಿ**

**ಕಲ್ಹಾರಾಂಬುಜ ಬೀಜಪೂರಕ ಗದಾ ದಂತೇಕ್ಷುಚಾಪಂ ಸುಮಂ**
**ಬಿಭ್ರಾಣೋಮಣಿಕುಂಭಶಾಲಿಕಲಶಂ ಪಾಶಂ ಸೃಣಿಂ ಚಾಬ್ಜಕಮ್ ।**
**ಗೌರಾಂಗ್ಯಾರುಚಿರಾರವಿಂದಕರಯಾ ದೇವ್ಯಾಸಮಾಲಿಂಗತಃ**
**ಶೋಣಾಂಗಃ ಶುಭಮಾತನೋತು ಭಜೌಮುದ್ದಂಡ ವಿಘ್ನೇಶ್ವರಃ ॥**

ಕೆಂಪು ಬಣ್ಣದ ಕಾಂತಿಯಿಂದ ಕೂಡಿದವನೂ ತನ್ನ ಹನ್ನೆರಡು ಕೈಗಳಲ್ಲಿ ಕಲ್ಹಾರ (ಬಿಳೀ ನೈದಿಲೆ) ಕಮಲ ಪುಷ್ಪ ಬೀಜಪೂರಕ (ದಾಳಿಂಬೆ) ಗದೆ, ದಂತ ಇಕ್ಷುಚಾಪಂ (ಕಬ್ಬಿನ ಜಲ್ಲೆ), ರತ್ನಕಲಶ ಭತ್ತದ ತೆನೆ, ಪಾಶಾಂಕುಶ, ಗೌರಾಂಗ (ಬಿಳಿ) ಕಾಂತಿಯುತಳಾದ ದೇವಿಯನ್ನು ಹಿಡಿದು ಆಲಂಗಿಸುತ್ತಿರುವ ಉದ್ದಂಡ ವಿಘ್ನೇಶ್ವರರನ್ನು ಶುಭ ನೀಡಲೆಂದು ಭಜಿಸುತ್ತೇನೆ.

**ಋಣವಿಮೋಚಕ ಗಣಪತಿ**

**ಪಾಶಾಂಕುಶೌ ದಂತ ಜಂಬು ದಧಾನಃ ಸ್ಫಟಿಕಂ ಪ್ರಭಃ**
**ರಕ್ತಾಂಶುಕೋ ಗಣಪತಿರ್ಮುದೇಸ್ಯಾದೃಣ ಮೋಚಕಃ ॥**

ಸ್ಫಟಿಕದಂತೆ ಶ್ವೇತಪ್ರಭೆಯಿಂದ ಕೂಡಿದ ಪಾಶಾಂಕುಶ ದಂತ ನೇರಳೆ ಫಲಗಳನ್ನು ಕೈಗಳಲ್ಲಿ ಹಿಡಿದ ಕೆಂಪು ವಸ್ತ್ರಧಾರಣೆ ಮಾಡಿದ ಋಣವಿಮೋಚನ ಗಣಪತಿಯು ಪ್ರಸನ್ನನಾಗಲಿ.

**ದುಂಢಿ ಗಣಪತಿ**

**ಅಕ್ಷಮಾಲಾಂ ಕುಠಾಹ ಚ ರತ್ನಪಾತ್ರಂ ಸ್ವದಂತಮ್**
**ಧತ್ತೇಕರೈರ್ವಿಘ್ನರಾಜೋ ದುಂಡಿನಾಮಾಮುದೇಸ್ತುನಃ ॥**

ತನ್ನ ಕರಗಳಲ್ಲಿ ಜಪಮಾಲೆ, ಕೊಡಲಿ, ರತ್ನಪಾತ್ರೆ, ದಂತಗಳನ್ನು ಹಿಡಿದ ದುಂಢಿ ವಿಘ್ನರಾಜನು ನಮಗೆ ಸಂತೋಷವನ್ನುಂಟು ಮಾಡಲಿ.

**ದ್ವಿಮುಖ ಗಣಪತಿ**

**ಸ್ವದಂತ ಪಾಶಾಂಕುಶ ರತ್ನಪಾತ್ರಂ ಕರೈರ್ದದಾನೋ ಹರಿನೀಲಗಾತ್ರಂ**
**ರಕ್ತಾಂಶುಕೋ ರತ್ನಕಿರೀಟಮಾಲೀ ಭೂತ್ಯೈಸದಾ ಮೇ ದ್ವಿಮುಖೋ ಗಣೇಶಃ ॥**

ಇಂದ್ರನೀಲಮಣಿಯಂತೆ ಶೋಭಾಯಮಾನ ಮೈಕಾಂತಿಯಿಂದ ಕೂಡಿದ ರತ್ನ ಕಿರೀಟವನ್ನು ಕೆಂಪು ವಸ್ತ್ರಗಳನ್ನು ಧರಿಸಿದ ದಂತ ಪಾಶಾಂಕುಶ ರತ್ನ ಪಾತ್ರೆಗಳನ್ನು ಕೈಗಳಲ್ಲಿ ಹಿಡಿದ ದ್ವಿಮುಖ ಗಣೇಶನು ನನಗೆ ಸದಾ ಸಂಪತ್ತನೀಯಲಿ.

**ತ್ರಿಮುಖ ಗಣಪತಿ**

**ಶ್ರೀಮತ್ತೀಕ್ಷ್ಣಶಿಖಾಂಕುಶಾಕ್ಷ ವರದಾನ್ ದಕ್ಷೇ ದಧಾನಃ ಕರೈಃ**
**ಪಾಶಂಚಾಮೃತಪೂರ್ಣಕುಂಭಮಭಯಂ ವಾಮೇ ದಧಾನೋಮುಧಾ**

**ಪೀಠೇ ಸ್ವರ್ಣಮಯಾರವಿಂದವಿಲಾಸತ್ಸತ್ಕರ್ಣಿಕಾಭಾಸುರೇ**
**ಸ್ವಾಸೀನ ಸ್ತ್ರಿಮುಖಃ ಪಲಾಶರುಚಿರೋ ನಾಗಾನನಃ ಪಾತುನಃ ॥**

ಮುತ್ತುಗದ ಹೂವಿನಂತೆ ಕೆಂಪು ಮೈಕಾಂತಿಯಿಂದ ಕೂಡಿದ ಹೊಂದಾವರೆಯಲ್ಲಿ ಕರ್ಣಿಕಾಪೀಠದ ಮೇಲೆ ಕುಳಿತು ತನ್ನ ಆರು ಕೈಗಳಲ್ಲಿ ಅಭಯಹಸ್ತ ಅಮೃತಕಲಶ ವರದಹಸ್ತ, ಜಪಮಾಲೆ, ಪಾಶಾಂಕುಶಗಳನ್ನು ಧರಿಸಿದ ತ್ರಿಗಜಮುಖನು ನಮ್ಮನ್ನು ಕಾಪಾಡಲಿ.

**ಸಿಂಹಗಣಪತಿ**

**ವೀಣಾಂ ಕಲ್ಪಲತಾ ಮರಿಂ ಚ ವರದಂ ದಕ್ಷೇ ವಿಧತ್ತೇ ಕರೈ**
**ರ್ವಾಮೇ ತಾಮರಸಂ ಚ ರತ್ನಕಲಶಂ ಸನ್ಮಂಜರೀಂ ಚಾಭಯಮ್ ।**
**ಶುಂಡಾದಂಡಲಸನ್ಮೃಗೇಂದ್ರ ವದನಃ ಶಂಖೇಂದುಗೌರಃ ಶುಭೋ**
**ದೀವ್ಯದ್ರತ್ನ ನಿಭಾಂಶುನೋ ಗಣಪತಿಃ ಪಾಯಾದಪಾಯಾತ್ಸ ನಃ ॥**

ಶಂಖ ಮತ್ತು ಚಂದ್ರವರ್ಣನಂತೆ ಧವಳ(ಶ್ವೇತ) ವರ್ಣದವನಾದ ಕೆಂಪು ವಸ್ತ್ರಾವೃತನಾದ ತನ್ನ ಎಡಗಡೆಯ ನಾಲ್ಕು ಕೈಗಳಲ್ಲಿ ತಾವರೆಹೂ, ವೀಣೆ, ಕಲ್ಪಲತೆ ಹಾಗೂ ವರದ ಮುದ್ರೆಯನ್ನು ಬಲಗಡೆಯ ನಾಲ್ಕು ಕೈಗಳಲ್ಲಿ ಚಕ್ರ, ರತ್ನಕಲಶ, ಹೂಗೊಂಚಲು ಹಾಗೂ ಅಭಯಮುದ್ರೆಯನ್ನು ಧರಿಸಿದ ಆನೆಯ ಸೊಂಡಿಲನ್ನುಳ್ಳವನೂ ಸಿಂಹಮುಖನೂ ಆದ ಸಿಂಹಗಣಪತಿಯು ನಮ್ಮನ್ನು ಅಪಾಯಗಳಿಂದ ರಕ್ಷಿಸಲಿ.

**ಯೋಗಗಣಪತಿ**

**ಯೋಗಾರೂಢೋ ಯೋಗಪಟ್ಟಾಭಿರಾಮೋ**
**ಬಾಲಾರ್ಕಾಭಶ್ಚೇಂದ್ರ ನೀಲಾಂಶುಕಾಢ್ಯ ।**
**ಪಾಶೇಕ್ಷ್ವಾನ್ ಯೋಗದಂಡಂ ದಧಾನೋ**
**ಪಾಯಾನ್ನಿತ್ಯಂ ಯೋಗವಿಘ್ನೇಶ್ವರೋ ನಃ ॥**

ಯೋಗಪಟ್ಟಿಕೆಯೊಂದಿಗೆ ಯೋಗದಲ್ಲಿ ನಿರತನಾದ ಬಾಲರವಿಯಂತೆ ಕಾಂತಿಯುಳ್ಳ ಚಂದ್ರನೀಲಮಣಿಯಂತಹ ನೀಲವರ್ಣದ ವಸ್ತ್ರ ಧರಿಸಿದ ತನ್ನ ನಾಲ್ಕು ಕೈಗಳಲ್ಲಿ ಕ್ರಮವಾಗಿ ಪಾಶ, ಜಪಮಾಲೆ, ಕಬ್ಬಿನಜಲ್ಲೆ ಮತ್ತು ಯೋಗದಂಡವನ್ನು ಹಿಡಿದ ಯೋಗಗಣಪತಿಯು ನಮ್ಮನ್ನು ಸದಾ ಕಾಪಾಡಲಿ.

**ದುರ್ಗಾಗಣಪತಿ**

**ತಪ್ತಕಾಂಚನ ಸಂಕಾಶಶ್ಚಾಷ್ಟಹಸ್ತೋ ಮಹಾತನುಃ ।**
**ದೀಪ್ತಾಂಕುಶಂ ಶರಂ ಚಾಕ್ಷಂ ದಂತಂ ದಕ್ಷೇ ವಹಸ್ಕರೈಃ ॥**
**ವಾಮೇ ಪಾಶಾಂ ಕಾರ್ಮುಕಂ ಚಲಕಾಂ ಜಂಬು ದಧತ್ಕರೈಃ**
**ರಕ್ತಾಂಶುಕಃ ಸದಾ ಭೂಯಾದ್ದುರ್ಗಾಗಣಪತಿರ್ಮುದೇ ॥**

ಕಾದ ಚಿನ್ನದಂತೆ ಕೆಂಪುವರ್ಣದ ಕಾಂತಿಯುಳ್ಳ ದೊಡ್ಡ ಶರೀರವನ್ನುಳ್ಳ ಕೆಂಪು ವಸ್ತ್ರವನ್ನು ಧರಿಸಿದ ಅಷ್ಟಬಾಹು ತನ್ನ ಬಲಗಡೆಯ ಹಸ್ತಗಳಲ್ಲಿ ಹೊಳೆಯುವ ಅಂಕುಶ, ಬಾಣ ಜಪಮಾಲೆ ಮತ್ತು ದಂತಗಳನ್ನು ಎಡಗಡೆಯ ಹಸ್ತಗಳಲ್ಲಿ ಪಾಶ, ಬಿಲ್ಲು, ಲತೆ ಮತ್ತು ನೇರಳೆಹಣ್ಣುಗಳನ್ನು ಹಿಡಿದಿರುವ ದುರ್ಗಾಗಣಪತಿಯು ಸದಾ ಪ್ರಸನ್ನನಾಗಲಿ.

**ಸಂಕಟಹರ ಗಣಪತಿ**

**ಬಾಲಾರ್ಕಾರುಣಕಾಂತಿರ್ವಾಮೇ ಬಾಲಾಂ ವಹನ್ನಂತೇ**
**ಲಸದಿಂದೀವರಹಸ್ತಾಂ ಗೌರಾಂಗೀಂ ರತ್ನಶೋಭಾತ್ಯಾಮ್ ॥**
**ದಕ್ಷೇಂಕುಶವರದಾನಂ ವಾಮೇ ಪಾಶಂ ಚಪಾಯಸಪಾತ್ರಮ್**
**ನೀಲಾಂಶುಕಲಮಾನಃ ಪೀಠೇ ಪದ್ಮಾರುಣೆ ತಿಷ್ಠನ್**
**ಸಂಕಟಹರಣಃ ಪಾಯಾತ್ ಸಂಕಟಪೂಗಾದ್ಗಜಾನನೋನಿತ್ಯಮ್ ॥**

ಬಾಲರವಿಯಂತೆ ಕೆಂಪಾದ ಮೈಕಾಂತಿಯುಳ್ಳ ತನ್ನ ಎಡಪಾರ್ಶ್ವದಲ್ಲಿ ಶ್ವೇತ ಮೈಕಾಂತಿಯಿಂದ ರತ್ನಾಭರಣ ಶೋಭಿತಳಾಗಿ ಎಡಕೈಯಲ್ಲಿ ನೈದಿಲೆ ಹೂವನ್ನು ಮತ್ತು ಬಲಗೈಯಲ್ಲಿ ಗಣಪತಿಯ ತೊಡೆಯ ಮೇಲಿರಿಸಿರುವ ಬಾಲಾದೇವಿಯನ್ನು ಕೂರಿಸಿಕೊಂಡಿರುವ ಪಾಶಾಂಕುಶ, ಪಾಯಸಪಾತ್ರೆ ವರದಹಸ್ತನಾಗಿ ಕೆಂದಾವರೆಯ ಪೀಠದ ಮೇಲೆ ಕುಳಿತಿರುವ ಸಂಕಟಹರ ಗಣಪತಿಯು ಸದಾ ಸಂಕಟಗಳಿಂದ ಪಾರು ಮಾಡಲಿ.

ಈ ಮೂವತ್ತೆರಡು ಗಣೇಶನ ಮೂರ್ತಿಗಳಲ್ಲದೆ ಪಾಠಾಂತರಗಳಲ್ಲಿ ವಲ್ಲಭ ಗಣಪತಿ, ಭುವನೇಶ ಗಣಪತಿ, ಸಿದ್ಧಿ ಬುದ್ಧಿಯರೆಂಬ ಪತ್ನಿಯರ ಸಹಿತ ಗಣಪತಿ, ವೈಷ್ಣವ ಗಣಪತಿ ಎಂಬ ಪ್ರಭೇದಗಳನ್ನೂ ಪರಿಗಣಿಸಲಾಗುತ್ತದೆ. ಗಣಪತಿಯಂತೆ ನನ್ನ ಗುರುಗಳಾದ ಡಾ. ಕೆ.ಆರ್. ಗಣೇಶ ಕೂಡ ವಿದ್ಯಾರ್ಥಿ ವೃಂದದಲ್ಲಿ, ಮಿತ್ರವೃಂದದಲ್ಲಿಯೂ ಅತ್ಯಂತ ಪ್ರೀತ್ಯಾದರಗಳನ್ನು ಗಳಿಸಿದ್ದಾರೆ, ಪ್ರತಿಭಾವಂತರೂ ಬುದ್ಧಿವಂತರೂ ಆಗಿ ಕೀರ್ತಿಯನ್ನು ಸಾಧಿಸಿಕೊಂಡಿದ್ದಾರೆ, ಸಜ್ಜನರೂ ಆಗಿದ್ದು ಸಾಮಾಜಿಕ ಹಿತವನ್ನೂ ಚಿಂತಿಸುತ್ತಾರೆ. ವಿದ್ಯಾರ್ಜನೆಗೆ ಸದಾ ಪ್ರೋತ್ಸಾಹ, ನೆರವುಗಳನ್ನು ನೀಡುತ್ತಾ ವಿದ್ಯಾರ್ಥಿಗಳ ತೊಂದರೆಗಳನ್ನು ಸಾಧ್ಯವಾಗುವ ಮಟ್ಟಿಗೆ ನಿವಾರಿಸುತ್ತಿದ್ದಾರೆ. ಇಂತಹ ಗುರುಗಳಿಗೆ ಅಭಿನಂದನೆ ಸಲ್ಲಿಸುವುದು ನಮ್ಮಂತಹ ಶಿಷ್ಯರೆಲ್ಲರ ಕರ್ತವ್ಯವೂ ಆಗಿರುತ್ತದೆ. ಅವರ ಅಭಿನಂದನಾ ಗ್ರಂಥ 'ಕೈದಾಳ'ಕ್ಕೆ ಗಣಪತಿಯ ಬಗ್ಗೆ ಲೇಖನ ಬರೆಯಲು ನನಗೆ ಅನುವು ಮಾಡಿಕೊಟ್ಟ ಅಭಿನಂದನಾ ಸಮಿತಿಯವರಿಗೆ ಅನಂತ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಈ ಲೇಖನದ ಸಿದ್ಧಪಡಿಸುವ ಕಾರ್ಯದಲ್ಲಿ ನೆರವು ನೀಡಿದ ಗೆಳತಿ ಸುಗುಣಾಬಾಯಿ, ಊಟ, ವಸತಿ ಒದಗಿಸಿದ ನಂಜನಗೂಡಿನ ಶ್ರೀಕಂಠ ಮನೆಯವರು ಹಾಗೂ ಚಾಮರಾಜನಗರದ ಚಾಮರಾಜೇಶ್ವರ ದೇವಾಲಯದ ಅರ್ಚಕರಾದ ಶ್ರೀ ಕುಮಾರಸ್ವಾಮಿ ದೀಕ್ಷಿತ ಮನೆಯವರು ಇವರೆಲ್ಲರಿಗೂ ನಾನು ಕೃತಜ್ಞಳಾಗಿದ್ದೇನೆ.

**ಗ್ರಂಥಋಣ**


೧. ಎಪಿಗ್ರಾಫಿಯಾ ಕರ್ನಾಟಿಕಾ, ಸಂಪುಟ III, ಋಗಿ. ಸಂ. ಮೈ.ವಿ.ವಿ.
೨. ಟಿ.ಎ. ಗೋಪಿನಾಥರಾವ್, ಎಲಿಮೆಂಟ್ಸ್ ಆಫ್ ಹಿಂದೂ ಐಕನೋಗ್ರಫಿ, ಸಂಪುಟ ೫
೩. ಮೂರ್ತಿಶಿಲ್ಪ – ನೆಲೆ, ಹಿನ್ನೆಲೆ – ಪ್ರೊ. ಎಸ್.ಕೆ. ರಾಮಚಂದ್ರರಾವ್
೪. ಕಾಶ್ಯಪ ಶಿಲ್ಪಶಾಸ್ತ್ರ – ಉತ್ತರಾರ್ಧ – ಸಂ. ಅನು. ಶ್ರೀ ಜ್ಞಾನಾನಂದ
೫. ರೂಪ ಲಕ್ಷಣ ಸಂಗ್ರಹ – ಸಂ. ಅನು. ಶ್ರೀ ಜ್ಞಾನಾನಂದ
೬ ರೂಪ ಧ್ಯಾನ ರತ್ನಾವಳಿ


*****

# ಪ್ರತಿಮಾಲಕ್ಷಣಗಳು ಹಾಗೂ ವರ್ಗೀಕರಣ

* ಎಂ.ಎನ್. ಪ್ರಭಾಕರ್

ವೇದ ಹಾಗೂ ಉಪನಿಷತ್ ವಾಕ್ಯಗಳಿಗೆ ಯಾವಾಗಲೂ ಪಾರಮಾರ್ಥಿಕ ಅರ್ಥವನ್ನೆಣಿಸದೆ ಸರಳ ರೀತಿಯಲ್ಲಿಯೂ ಅರ್ಥೈಸಲು ಸಾಧ್ಯವಿದೆ. ಕೆಲವು ವಿವರಣೆಗಳು ವಿಗ್ರಹಾರಾಧನೆಯೆಡೆಗೆ ಕೊಂಡೊಯ್ಯುತ್ತವೆ.

'ದ್ವೇವಾವ ಬ್ರಾಹ್ಮಣೋ ರೂಪೇ ಮೂರ್ತಂ ಚೈನಾಮೂರ್ತಂಚ'[1] ಬ್ರಹ್ಮನಿಗೆ ಎರಡು ರೂಪಗಳು; ಒಂದು ಮೂರ್ತ, ಮತ್ತೊಂದು ಅಮೂರ್ತ. ಅಮೂರ್ತ ಚಿಂತನೆ, ವಿಧಿ ವಿಧಾನಗಳು ಸರಳ ಹಾದಿ ಎನಿಸಿಲ್ಲ. ಅಮೂರ್ತವನ್ನು ಪರಬ್ರಹ್ಮ ಎನ್ನೋಣ; ಮೂರ್ತವನ್ನು ಪರಮಾತ್ಮ ಎನ್ನೋಣ. ಪರಬ್ರಹ್ಮನನ್ನು ಕುರಿತ ವಿವರಗಳು ನಿಗಮ ಶಾಖೆಯಲ್ಲಿ. ಪರಮಾತ್ಮನನ್ನು ಕುರಿತ ವ್ಯಾಖ್ಯಾನ ಆಗಮ ಶಾಖೆಯಲ್ಲಿ ದೊರೆಯುತ್ತವೆ. ಅವ್ಯಕ್ತ ಚೇತನಕ್ಕೆ ಸಾಕಾರ ರೂಪನೀಡಿದಾಗ ಅರಳಿದ ಮೂರ್ತಸ್ವರೂಪವು ಶ್ರೀ ಸಾಮಾನ್ಯನ ಅವಶ್ಯಕತೆಗೆ ಅನುಗುಣವಾದದ್ದು. " ನ ಚ ರೂಪಂ ವಿನಾ ದೇವೋ ಕೇನಾಪಿನ ಶಕ್ಯತೇ"[2] – ಇದು ವಿಷ್ಣು ಸಂಹಿತೆಯ ಉಕ್ತಿ. ಎಲ್ಲರೂ ತತ್ವಜ್ಞಾನಿಗಳಾಗಲು ಸಾಧ್ಯವೇ ? ಸಾಮಾನ್ಯನ ಅವಶ್ಯಕತೆಯನ್ನು ಗಮನಿಸಬೇಕು. ಪ್ರತಿಮಾರೂಪದ ಅವಶ್ಯಕತೆಯನ್ನು ಇಲ್ಲಿ ಒತ್ತಿ ಹೇಳಿದೆ. ಆರಾಧನೆಗೊಂದು ಅವಲಂಬನೆಬೇಕು. ಈ ಅವಲಂಬನೆ ವಿಗ್ರಹರೂಪದಲ್ಲಿದೆ. ಇಲ್ಲಿ ವಿಗ್ರಹ ಪದವನ್ನು ಗಮನಿಸಬೇಕು. "ವಿ+ಗೃ" = ವಿಷೇಶೇಣ ಗೃಹ್ಯತೇ ಇತಿ; ಗಟ್ಟಿಯಾಗಿ ಹಿಡಿದುಕೊಳ್ಳುವುದು ಎಂದರ್ಥ. ಈ ರೀತಿ ವಿಗ್ರಹಾರಾಧನೆ ಬೆಳಕಿಗೆ ಬಂತು.

**ರೂಪಂ ರೂಪಂ ಪ್ರತಿರೂಪೋಬಭೂವ**
**ತದಸ್ಯ ರೂಪಂ ಪ್ರತಿಚಕ್ಷಣಾಯ**
**ಇಂದ್ರೋ ಮಾಯಾಭಿಃ ಪುರುರೂಪ ಈಯತೇ**[3]

ಋಗ್ವೇದದ ಕೆಲವು ಸಾಲುಗಳು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಪುನರುಕ್ತಿಯಾಗಿದೆ. ಇಂದ್ರನು ತನ್ನ ಸ್ವರೂಪವನ್ನು ಪ್ರಕಟಿಸುವ ಸಲುವಾಗಿ ಹಲವು ಹತ್ತು ರೂಪಗಳನ್ನು ಧರಿಸಿದನು. ಇಂದ್ರನೂ ದೇವತೆಗಳ ಪ್ರತಿನಿಧಿ. ಇವನೂ ಪುರುಷ ರೂಪದಲ್ಲಿ ಪ್ರಕಟಗೊಳ್ಳುತ್ತಾನೆ. ಅವನು ಪುರುಷರೂಪದಲ್ಲಿ ಪ್ರಕಟಗೊಳ್ಳುವುದರಿಂದ ದೇವರು ಇಲ್ಲಿ ಪುರುಷವಾಚಿ. 'ಪೂರ್ವಂ ಏವ ಇಹ ಆಸನ್ ಇತಿ' – ಇದು ತೈತ್ತರೀಯ ಅರಣ್ಯಕದ ಸಾಲುಗಳು.

**ಸವಾ ಅಯಂ ಪುರುಷಃ ಸರ್ವಾಸು ಪೂರ್ಷುಪುರಿಶಯಃ**
**ನೈನೇನ ಕಿಂಚನಾನಾವೃತಂ ನೈನೇನ ಕಿಂಚನಾ ಸಂವೃತಂ**[4]

ಎಲ್ಲಪುರ (ದೇಹ)ಗಳಲ್ಲಿ ವಾಸಿಸುವುದರಿಂದ ಪುರುಷನೆನಿಸಿದವನು. ಇವನಿಂದ ಅನಾವೃತವಾದದ್ದು ಯಾವುದೂ ಇಲ್ಲ; ಸಂವೃತವಾಗದಿರುವುದೂ ಇಲ್ಲ. ಎಲ್ಲೆಡೆ ಹರಡಿರುವವನು 'ವಿಷ್ಣು'. ವಿಶ್ ಧಾತುವಿನಿಂದ ವಿಶತಿ; ವಿಷ್ಣಾತೇರ್ವಿಶತೇರ್ವಾ – ವಿಷ್ಣು ಪದದಲ್ಲಿ ಈ ಅರ್ಥ ಮೇಳೈಸಿದೆ.

ವೈಖಾನಸರಲ್ಲಿ ವಿಷ್ಣು ವೈದಿಕ ದೇವತೆ. ಭಾಗವತರಲ್ಲಿ ವಾಸುದೇವ ಕೃಷ್ಣನಾಗಿ, ಪಾಂಚರಾತ್ರರಲ್ಲಿ ವಾಸುದೇವನಾಗಿ ಕಾಣಿಸಿಕೊಳ್ಳುತ್ತಾನೆ. ಪಾಂಚರಾತ್ರ ಆಗಮಗಳಲ್ಲಿ ತನ್ನ ಪರಿಧಿಯನ್ನು ವಿಸ್ತರಿಸಿಕೊಳ್ಳುವ ಸಲುವಾಗಿ ಮಹಾಭಾರತದ ಶಾಂತಿ ಪರ್ವದ ಉಲ್ಲೇಖಗಳನ್ನಾಧರಿಸಿ ತಾತ್ವಿಕ ಹಿನ್ನೆಲೆಯನ್ನು ಅಳವಡಿಸಿಕೊಂಡು ಶಿಷ್ಟಸಂಪ್ರದಾಯದ ಮೊದಲ ಹೆಜ್ಜೆ ಇರಿಸಿದ್ದಾನೆ. ಇದೇ ಚತುರ್ವ್ಯೂಹಗಳ ಸೃಷ್ಟಿಗೆ ನಾಂದಿ ಎನಿಸಿದೆ. ಇದಕ್ಕೊಂದು ಶಾಸ್ತ್ರೀಯ ಚೌಕಟ್ಟು ಲಭ್ಯವಾಗುವುದು ಸಾಂಖ್ಯ ಹಾಗೂ ಯೋಗ ದರ್ಶನಗಳ ಮೂಲಕ.

---

* ನಂ. ೪೨, ಪದ್ಮಪ್ರಭಾ, ಬ್ಲಾಕ್-೧೭, ಬ್ಯಾಂಕ್ ಕಾಲೋನಿ, ಶ್ರೀರಾಮಪುರ, ೨ನೇ ಹಂತ, ಮೈಸೂರು-೫೭೦ ೦೨೩.

**ಕಿರೀಟಿನಂ ಗದಿನಂ ಚಕ್ರಹಸ್ತಂ**
**ಇಚ್ಛಾಮಿತ್ವಾ ದ್ರಷ್ಟುಮಹಂ ತಥೈವ**
**ತೇನೈವರೂಪೇಣ ಚತುರ್ಭುಜೇನ**
**ಸಹಸ್ರಬಾಹೋಭವ ವಿಶ್ವಮೂರ್ತೇ[೫]**

ವೇದಗಳ ಕಾಲದ ಸಹಸ್ರಶೀರ್ಷಾಪುರುಷ, ದ್ವಾಪರಯುಗದ ಅಂತ್ಯದಲ್ಲಿ ಚತುರ್ಭುಜ ಮೂರ್ತಿಯಾಗಿ ಚಕ್ರ ಹಾಗೂ ಗದಾಧಾರಿಯಾಗಿ ಭಗವದ್ಗೀತೆಯಲ್ಲಿ ಅರ್ಜುನನ ಬೇಡಿಕೆಯ ರೂಪದಲ್ಲಿ ಕಾಣಿಸಿಕೊಂಡಿದ್ದನ್ನು ಈ ಶ್ಲೋಕವು ದಾಖಲಿಸಿದೆ. ಇದು ಪ್ರತಿಮಾಶಾಸ್ತ್ರದ ಆರಂಭವೂ ಹೌದು; ದಿಕ್ಸೂಚಿಯೂ ಹೌದು. ಉಪಾಸನೆಗಾಗಿ ಹಲವು ರೂಪಗಳನ್ನು ಪಡೆದದ್ದನ್ನು ಈಗಾಗಲೇ ಗಮನಿಸಲಾಗಿದೆ. ಆತ್ಮವನ್ನು ಶ್ವೇತಾಶ್ವತರ ಉಪನಿಷತ್ತು, ಸ್ಥೂಲ, ಸೂಕ್ಷ್ಮ ಮತ್ತು ಪರಾ ಎನ್ನುತ್ತದೆ.

ಪುನಃ ಸಕಲ, ಸಕಲ-ನಿಷ್ಕಲ ಮತ್ತು ನಿಷ್ಕಲ ಎಂದು ವರ್ಗೀಕರಿಸಲ್ಪಡುತ್ತದೆ.

**ಸ್ಥೂಲಂ ಸೂಕ್ಷ್ಮಂ ಪರಂ ತ್ರಿವಿಧರೂಪಮೀರಿತಂ**
**ಸ್ಥೂಲಂ ಸಕಲಂ ಜ್ಞೇಯಂ ಸೂಕ್ಷ್ಮಂ ಸಕಲನಿಷ್ಕಲಂ**
**ಪರಂ ನಿಷ್ಕಲಂಮೇವ ಸ್ಯಾದ್ರೂಪಂ ಕಮಲಸಂಭವ[೬]**

ಶರೀರ ರೂಪಿ ವಿಗ್ರಹ ಅಥವಾ ಮೂರ್ತಿಗೆ ಸಕಲ ಎನ್ನುವ ಹೆಸರು. ಇದೇ ಮೂರ್ತ ಸ್ವರೂಪದ ಪ್ರತಿನಿಧಿ. ತೇಜಃಪುಂಜವನ್ನೋ ಅಥವಾ ಜ್ಯೋತಿಯನ್ನೋ ಧ್ಯಾನ ಅಥವಾ ಯೋಗ ಸಾಧನೆಯಲ್ಲಿ ಕೇಂದ್ರೀಕರಿಸಿ, ತೊಡಗಿಸಿಕೊಂಡಾಗ, ಅದು ಸಕಲ-ನಿಷ್ಕಲ ವೆಂಬ ಭಾವ, ಯಾವ ರೂಪವೂ ಇಲ್ಲದ ಅವಸ್ಥೆ ನಿಷ್ಕಲ. ನಿಷ್ಕಲ ರೂಪದ ಭಗವಂತನ ಆರಾಧನೆ ಕೊಂಚ ಕಠಿಣ ಪ್ರಕ್ರಿಯೆ.

**ರೂಪಂ ಸಹಸ್ರಶೀರ್ಷಾದಿ ಸಕಲಂ ಪರಮಾತ್ಮನಃ**
**ತೇಜಃಪುಂಜ ಮಿವಾಭಾತಿ ರೂಪಂ ಸಕಲವಿಷ್ಕಲಂ**
**ಸಚ್ಚಿದಾನಂದರೂಪಂ ನಿಷ್ಕಲಂ ಸಂಜ್ಞಿತಂ[೭]**

ದೇವ ದೇವತೆಯರಲ್ಲಿ ಮೊಟ್ಟ ಮೊದಲು ಉಲ್ಲೇಖಗೊಂಡವನು ಹಾಗೂ ಮೊದಲ ಸಾಲಿನಲ್ಲಿ ನಿಲ್ಲುವವನು ಸಹಸ್ರಶೀರ್ಷಾಪುರುಷ. ಋಗ್ವೇದದ ಪುರುಷ ಸೂಕ್ತದಲ್ಲಿ ಇವನ ಉಲ್ಲೇಖ. ಈ ಸೂಕ್ತವೂ ಅತ್ಯಂತ ಜನಪ್ರಿಯವಾದುದು; ಅತಿಮುಖ್ಯವೂ ಹೌದು. ಪುರುಷ ಸೂಕ್ತದ ಹಲವು ಸಾಲುಗಳು ಉಪನಿಷತ್ತುಗಳಲ್ಲಿ ಪುನರುಕ್ತಿಯಾಗಿದೆ. ಮಹಾಭಾರತದಲ್ಲಿಯೂ ಇದರ ಛಾಯೆಯಿದೆ. ಸಹಸ್ರಶೀರ್ಷಾಪುರುಷ ಜಗತ್ತಿನೆಲ್ಲಡೆ ವ್ಯಾಪಿಸಿರುವ ಚೈತನ್ಯಕ್ಕೆ ಪ್ರತಿನಿಧಿ. ಆದ್ದರಿಂದಲೇ ಅವನಿಗೆ ಸಹಸ್ರಶಿರಗಳು, ಸಹಸ್ರ ಕಣ್ಣುಗಳು, ಸಹಸ್ರಬಾಹುಗಳು, ಸಹಸ್ರಪಾದಗಳು.

**ಪರ್ವತಃ ಪಾಣಿಪಾದಶ್ಚ ಸರ್ವತೋಕ್ಷಿ ಶಿರೋಮುಖಃ**
**ಪರ್ವತಃ ಶ್ರುತಿಮಾಲ್ಲೋಕೇ ಸರ್ವಂ ವ್ಯಾಪ್ಯ ಸ ತಿಷ್ಠತಿ[೮]**

ಈಶಾನ ಶಿವಗುರು ದೇವ ಪದಸ್ಮೃತಿ ಗ್ರಂಥದಲ್ಲಿ ಸಕಲ ನಿಷ್ಕಲಗಳ ಜೊತೆಗೆ ಮೂರನೆಯದಾಗಿ ಮಿಶ್ರ ಎಂಬ ಪ್ರಭೇದವಿದೆ. ಈ ಪ್ರಭೇದಗಳು ಪ್ರತಿಮಾ ರಚನೆಗೆ ಸಂಬಂಧಿಸಿದೆಯೆಂದು ಖಚಿತವಾಗಿ ಹೇಳಬಹುದು.

ಅಥಾಲಿಂಗಂ ತ್ರಿಧಾಜ್ಞೇಯಂ ನಿಷ್ಕಲಂ ಸಕಲಂ ತಥಾ
ಮಿಶ್ರಂ ಚೇತಿ ತಲ್ಲಿಂಗಂ ಅಚಲಂ ಚ ಚಲಂ ತಥಾ
ನಿಷ್ಕಲಂ ಕೇವಲಂ ಲಿಂಗಂ ಸಕಲಂ ಪ್ರತಿಮಾ ಸ್ಮೃತಾ
ಮಿಶ್ರಾಖ್ಯಂ ಮುಖಲಿಂಗಂ ಸ್ಯಾನ್ ಮಿಶ್ರಂ ಲಕ್ಷಣಲಕ್ಷಿತಂ[೯]

ನಿಷ್ಕಲವೆಂದಲ್ಲಿ ಕೇವಲ ಸಾಂಕೇತಿಕ. ಸ್ಥಾಣು ಅಥವಾ ಸ್ತಂಭರೂಪದ ಲಿಂಗವನ್ನು ನಿಷ್ಕಲವೆಂದಿದ್ದಾರೆ. ಮುಖಲಿಂಗ ಅಥವಾ ಲಿಂಗೋದ್ಭವ ಮೂರ್ತಿಯನ್ನು ಮಿಶ್ರ ಎನ್ನುವಲ್ಲಿ ಚಲ ಮತ್ತು ಅಚಲ ಪ್ರಭೇದಗಳನ್ನು ಇದರ ಅಡಿಯಲ್ಲಿ ಗುರುತಿಸಲಾಗಿದೆ. ಸಕಲ ಎಂದಲ್ಲಿ ಪೂರ್ಣ ಪ್ರಮಾಣದ ಸಂಪೂರ್ಣ ಅವಯವಗಳನ್ನು ಪ್ರದರ್ಶಿಸುವ ಮೂರ್ತಿ ರಚನೆಗಳು.

ಲಿಂಗ ಪದದ ಅರ್ಥವನ್ನು ಗಮನಿಸಬೇಕು. ಲಿಂಗಂ ಚಿತ್ರೀಕರಣೇ ಎಂಬ ಉತ್ಪತ್ತಿ ಇದೆ. ಲಿಂಗವನ್ನು ಗುರುತು, ಸಂಕೇತ, ಪ್ರತಿನಿಧಿತ್ವ ಎಂದು ಅರ್ಥೈಸಲಾಗಿದೆ. ಸನತ್ಕುಮಾರ ಸಂಹಿತೆಯ ಕೆಳಕಂಡ ಶ್ಲೋಕವನ್ನು ಗಮನಿಸಬೇಕು.

**ಲಿಂಗಂತು ವಿವಿಧಂ ಪ್ರೋಕ್ತಂ ಬ್ರಾಹ್ಮ ಶಂಕರ ಮೇವವ**
**ವೈಷ್ಣವಂ ಚ ನಿರ್ದೈವಂ ಚ ಚತುರ್ಥಂ ಪರಿಕೀರ್ತಿತಂ**[೧೦]

ಲಿಂಗಗಳಲ್ಲಿ ಹಲವು ವಿಧ. ಬ್ರಹ್ಮ, ಶಂಕರ, ವಿಷ್ಣು ಹಾಗೂ ನಿರ್ದೈವವನ್ನು ಗುರುತಿಸುವ ನಾಲ್ಕು ವಿಧಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಲಿಂಗೇ ಶಿವಂ ಸಮಾವಾಹ್ಯ ಮೂಲೇನ ಪದ್ಯ ಮಂತ್ರತಃ – ಇದು ರೌರವಾಗಮದ ಉಕ್ತಿ. ಲಿಂಗವನ್ನು ರಚಿಸಿ ಸದ್ಯೋಜಾತಾದಿ ಮಂತ್ರದಿಂದ ಶಿವನನ್ನು ಆವಾಹಿಸಬೇಕು. ಆಗ ಈ ಲಿಂಗ ಶಿವಸ್ವರೂಪಿ.

ಲಿಂಗವನ್ನು ರಚಿಸಿ ಯಾವ ದೇವರನ್ನಾದರೂ ಆವಾಹಿಸಲು ಸಾಧ್ಯವಿದೆ. ಲಿಂಗವು ಪರಮಾತ್ಮ ಸ್ವರೂಪ. ಕರ್ನಾಟಕದ ತ್ರೈಪುರುಷರ ದೇವಾಲಯದಲ್ಲಿ ಹಲವೆಡೆ ಮೂರು ಲಿಂಗಗಳಿವೆ. ಇವು ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಪ್ರತಿನಿಧಿಸುತ್ತವೆ. ಈ ಉದಾಹರಣೆಗಳು ಲಿಂಗವು ಕೇವಲ ಸಾಂಕೇತಿಕ, ದೈವದ ಪ್ರತಿನಿಧಿ ಎನ್ನುವುದನ್ನು ಸ್ಪಷ್ಟಪಡಿಸುತ್ತದೆ.

ಲಿಂಗದಲ್ಲಿ ಸಾಮಾನ್ಯವಾಗಿ ಮೂರು ಭಾಗಗಳು. ಕೆಳಗಿನ ಪೀಠವು ಚತುರಶ್ರ, ಮಧ್ಯಭಾಗ ಅಷ್ಟಾಶ್ರ; ಶಿರೋಭಾಗ ವೃತ್ತಾಕಾರ. ಇವು ಕ್ರಮವಾಗಿ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಪ್ರತಿನಿಧಿಸುತ್ತದೆ. ಇದು ತ್ರಿಮೂರ್ತಿಗಳ ಪ್ರತಿನಿಧಿ – ಒಟ್ಟಾರೆ ಪರಮಾತ್ಮನ ಸ್ವರೂಪ.

ಆರಂಭದಲ್ಲಿ ಲಿಂಗವು ಪರಮಾತ್ಮನ ಸಂಕೇತವೇ ಹೊರತು ಯಾವ ದೇವರಿಗೂ ಮೀಸಲಾಗಿರಲಿಲ್ಲ. ಶೈವಾಗಮಗಳ ಬೆಳವಣಿಗೆಯೊಂದಿಗೆ ಲಿಂಗವೆಂದರೆ ಲಯಕರ್ತನಾದ ಶಿವನ ಸ್ವರೂಪವೆಂಬ ಭಾವನೆ ಬೇರೂರಿತು. ಈಶ್ವರನೆಂಬ ಪದದ ಅರ್ಥವೂ ಇದೇ ರೀತಿಯದು. ಈ ಹಿನ್ನೆಲೆಯಲ್ಲಿ ಆರಂಭದ ಲಿಂಗ ರಚನೆಗಳನ್ನು ಮತ್ತೊಮ್ಮೆ ಎಚ್ಚರಿಕೆಯಿಂದ ಪರೀಕ್ಷಿಸಬೇಕು. ಮಾರ್ಕಂಡೇಯ ಸಂಹಿತೆಯ ಕೆಳಗಿನ ಉಲ್ಲೇಖವನ್ನು ಗಮನಿಸಬೇಕು.

**ಲಿಂಗಂ ಬೇರಂಚ ಬಿಂಬ ಚ ಪ್ರತಿಮಾ ಚತುರ್ವಿಧಂ**
**ಬೇರಂ ಸ್ಥಾಪಿತಂ ಮೂರ್ತಿಂ ಸ್ಯಾದರೂಪಂ ಲಿಂಗಮುಚ್ಯತೇ**
**ಬಿಂಬಂ ಚ ಲೋಹರೂಪಂ ಸ್ಯಾತ್ ಪ್ರತಿಮಾ ಕೃತಕಂ ಭವೇತ್**[೧೧]

ಲಿಂಗ, ಬೇರ, ಬಿಂಬ, ಪ್ರತಿಮಾ ಎಂದು ನಾಲ್ಕು ವಿಧ. ಬೇರ ಎಂದಲ್ಲಿ ಪ್ರತಿಷ್ಠಾಪನೆಗೊಂಡದ್ದು; ಎಲ್ಲಾ ವಿಗ್ರಹಗಳಿಗೂ ಪ್ರತಿಷ್ಠಾಪನಾದಿ ಕಾರ್ಯಗಳು ಸಾಧ್ಯ. ಆದರೆ ಈ ವಾಕ್ಯ ಗರ್ಭಗೃಹದಲ್ಲಿ ಪ್ರತಿಷ್ಠೆಗೊಳ್ಳುವ ಮೂಲ ಬೇರವನ್ನು ಕುರಿತದ್ದು, ಇದು ಬಹುಪಾಲು ಶಿಲಾ ರಚನೆ. ಕಲ್ಲಿನಲ್ಲಿ ಕಡೆದದ್ದು. ರೂಪವಿಲ್ಲದ್ದು ಲಿಂಗ ಎಂದು ಗುರುತಿಸಲಾಗಿದೆ.

ಲಿಂಗದ ಪೀಠದ ಮೇಲಿರುವ ರುದ್ರಭಾಗ ಅರೂಪವೇ ಆಗಿದೆ. ಸ್ತಂಭದ ಕಲ್ಪನೆ ಇಲ್ಲಿ ಸಮಂಜಸ. ಆದಿ ಅಂತ್ಯಗಳನ್ನು ಕಾಣದ ಸ್ತಂಭದ ಕಲ್ಪನೆಯೂ ಲಿಂಗರೂಪವೇ. ಲಿಂಗದ ರುದ್ರಭಾಗ ಶಿಲೆಯೇ ಆಗಿದೆ.

ಬಿಂಬ ಎಂದಲ್ಲಿ ಎರಕಹೊಯ್ದು ತೆಗೆದದ್ದು. ಶ್ವೇತಾಶ್ವತರ ಉಪನಿಷತ್ತು ಬಿಂಬ ಪದವನ್ನು ಪರೋಕ್ಷವಾಗಿ ಗುರುತಿಸಿದೆ.

**ಯಥೈವ ಬಿಂಬಂ ಮೃದುಯೋ ಪಲಿಪ್ತಂ**
**ತೇಜೋಮಯಂ ಭ್ರಾಜತೇ ತತ್ ಸುಧಾಂತಂ**[೧೨]

ವಿಗ್ರಹ ರಚನೆಯ ಸೂಕ್ಷ್ಮ ವಿವರ ಇಲ್ಲಿದೆ. ಲೋಹವನ್ನು ಕರಗಿಸಿ, ಮಣ್ಣಿನ ಅಚ್ಚಿನಲ್ಲಿ ಎರಕ ಹೊಯ್ದು ನಂತರ ಮಣ್ಣಿನಿಂದ ಹೊರತೆಗೆದಾಗ ಹೊಳೆಯುವುದನ್ನು ಬಣ್ಣಿಸಿದೆ. ಬಿಂಬ ಎಂದಲ್ಲಿ ಲೋಹ ರಚನೆ. ಪ್ರತಿಮಾ ಎಂದಲ್ಲಿ ಪ್ರತಿಕೃತಿ. ಮೂಲದಂತೆ ಮತ್ತೊಂದರ ಸೃಷ್ಟಿ. ಆದ್ದರಿಂದ ಕೃತಕವಾದದ್ದು. ಮೇಲ್ಕಂಡ ಸನತ್ಕುಮಾರ ಮತ್ತು ಮಾರ್ಕಂಡೇಯ ಸಂಹಿತೆಗಳು ವೈಷ್ಣವ ಸಂಪ್ರದಾಯದ ಸಂಹಿತೆಗಳು. ಇವುಗಳಲ್ಲಿ ಲಿಂಗ ಎನ್ನುವ ಪದ ಪ್ರಯೋಗದ ಅರ್ಥ ಸಂಕೇತ ಎನ್ನುವುದು ಸ್ಪಷ್ಟ.

ಈಶಾನ ಶಿವಗುರು ದೇವ ಪದ್ಧತಿಯಂತೆ ಮಯಮತ ಗ್ರಂಥವೂ ಲಿಂಗ ಲಕ್ಷಣಗಳನ್ನು ಗುರುತಿಸುವಾಗ ಸಕಲ ನಿಷ್ಕಲಗಳ ವರ್ಗೀಕರಣವನ್ನು ಅನುಸರಿಸಿದೆ.

**ನಿಷ್ಕಲಂ ಸಕಲಂ ಮಿಶ್ರಂ ಲಿಂಗಂ ಚೇತಿ ತ್ರಿಧಾಸ್ಮೃತಂ**
**ನಿಷ್ಕಲಂ ಲಿಂಗ ಮಿತ್ಯುಕ್ತಂ ಸಕಲಂ ಬೇರ ಮುಚ್ಯತೇ**
**ಮುಖಲಿಂಗಂ ತಯೋರ್ಮಿಶ್ರಂ ಲಿಂಗೋಜ್ಞಾಕೃತಿ ಸನ್ನಿಭಂ**[೧೩]

ರೂಪವಿಲ್ಲದ್ದು ಅಥವಾ ಸಾಂಕೇತಿಕ ಅನಿಸಿದ್ದು ನಿಷ್ಕಲ, ಸಕಲ ಅವಯವಗಳುಳ್ಳ ಪೂರ್ಣ ಪ್ರಮಾಣದ ವಿಗ್ರಹ ಸಕಲ; ಮುಖಲಿಂಗವನ್ನು ಪ್ರದರ್ಶಿಸಿದ್ದು ಮಿಶ್ರ ಎಂದು ಗುರುತಿಸಲಾಗಿದೆ.

'ಸಕಲಾಧಿಕಾರ' ವೆಂಬ ಗ್ರಂಥವಿದೆ. ಇದರ ಉದ್ದೇಶ ಶಿವನ ಪೂರ್ಣ ಪ್ರಮಾಣದ ಷೋಡಶ ಲೀಲಾ ಮೂರ್ತಿಗಳನ್ನು ತಾಳ ಮಾನದೊಂದಿಗೆ ಗುರುತಿಸುವುದು. ಆದ್ದರಿಂದಲೇ ಸಕಲಾಧಿಕಾರ ಎಂಬ ಹೆಸರು.

**ಸಕಲ ನಿಷ್ಕಲ ಮಿಶ್ರ ವಿಭಾಗತಃ ತ್ರಿವಿಧಮೇವ ವಪುಃ ಪರಮೇಷ್ಠಿನಃ**
**ವಿಧಿಮಿಮಂ ಸಕಲಸ್ಯ ಯಥೋದಿತಂ ಶಶಿಧರೇಣ ತಥಾ ಕಥಯಾಮ್ಯಹಂ**[೧೪]

ಕಾಮಿಕಾಗಮ ಗ್ರಂಥವು ಸಕಲ ನಿಷ್ಕಲಗಳನ್ನು ವ್ಯಕ್ತ ಅವ್ಯಕ್ತ ಎಂದೂ, ಮಿಶ್ರವನ್ನು ಉಭಯಾತ್ಮಕ ಎಂದೂ ವರ್ಗೀಕರಿಸುತ್ತದೆ.

**ಲಿಂಗಂ ತ್ರಿವಿಧಮಾಖ್ಯಾತಂ ವ್ಯಕ್ತಾವಕ್ತೋಭಯಾತ್ಮಕಂ**[೧೫]

ಟಿಬೆಟ್ಟಿನಲ್ಲಿ "ಚಿತ್ರಲಕ್ಷಣ" ಎಂಬ ಗ್ರಂಥವಿದೆ. ಇದು ಪ್ರತಿಮಾ ರಚನೆಗೆ ಸಂಬಂಧಿಸಿದ ಗ್ರಂಥ. 'ಚಿತ್ರ' ಎಂದಲ್ಲಿ ಪೂರ್ಣ ಪ್ರಮಾಣದ ಪ್ರತಿಮೆ. ಪ್ರತಿಮಾಶಾಸ್ತ್ರಕ್ಕೆ ಸಂಬಂಧಿಸಿದ ಎಲ್ಲಾ ಗ್ರಂಥಗಳಲ್ಲಿ ಚಿತ್ರ– ಅರ್ಧಚಿತ್ರ–ಚಿತ್ರಾಭಾಸ ಎಂಬ ವರ್ಗೀಕರಣವಿದೆ. ಚಿತ್ರ ಹಾಗೂ ಶಿಲ್ಪ ಶಬ್ದಗಳನ್ನು ಮೂಲಾರ್ಥ ತಿಳಿಯದೆ ಬಳಕೆಯಾಗುತ್ತಿವೆ. ಇವುಗಳ ಖಚಿತಾರ್ಥವನ್ನು ತಿಳಿದು ಬಳಸುವುದು ಒಳಿತು.

ಮೊದಲಿಗೆ 'ಶಿಲ್ಪ' ಶಬ್ದವನ್ನು ಗಮನಿಸೋಣ. ಮನಸ್ಸನ್ನು ಮುದಗೊಳಿಸುವ ತಂತ್ರಗಾರಿಕೆಗೆ ಅಥವಾ ಕ್ರಿಯಾತ್ಮಕ ಕಾರ್ಯಕ್ಕೆ ಶಿಲ್ಪ ಎನ್ನುವ ಹೆಸರು; ಶಿಲ್ಪಂ ಕರ್ಮ ಕಲಾಧಿಕಂ. ಆದರೆ ಒಂದು ಸುಂದರವಾದ ಪ್ರತಿಮೆಯನ್ನು ಶಿಲ್ಪ ಎನ್ನುತ್ತೇವೆ. ಶಿಲ್ಪ ಎಂದಲ್ಲಿ ಸರಳವಾಗಿ ನಮ್ಮ ಮನಸ್ಸಿಗೆ ಮೂಡುವ ಅಂಶ ಕಲ್ಲಿನಲ್ಲಿ ಕಡೆದ ವಿಗ್ರಹ ಎಂದು; ಆದರೆ ಶಾಸ್ತ್ರೀಯ ದೃಷ್ಟಿಯಿಂದ ಇದು ಚಿತ್ರ. ಚಿತ್ರ ಎಂದಲ್ಲಿ ಪೂರ್ಣ ಪ್ರಮಾಣದ ಪ್ರತಿಮೆ. ಲೇಖನಿಯಿಂದ ಅಥವಾ ಕುಂಚದಿಂದ ಪಟದ ಮೇಲೆ ರಚಿಸಿದ್ದನ್ನು ಸಾಮಾನ್ಯವಾಗಿ ಚಿತ್ರ ಎನ್ನುತ್ತೇವೆ. ಶಾಸ್ತ್ರೀಯ ದೃಷ್ಟಿಯಿಂದ ಇದು ಚಿತ್ರಾಭಾಸ. ಖಚಿತವಾದ ಅರ್ಥಕ್ಕೆ ಶಾಸ್ತ್ರಗ್ರಂಥಗಳಲ್ಲಿರುವ ಉಲ್ಲೇಖಗಳನ್ನು ಗಮನಿಸಬೇಕು.

**ಚಿತ್ರಂ ಚಾಪ್ಯರ್ಧ ಚಿತ್ರಂ ಚ ಚಿತ್ರಾಭಾಸಮಿತಿ ತ್ರಿಧಾ**
**ಕೌತುಕಂ ತತ್ರ ದೃಶ್ಯಂತೇ ಯಸ್ಮಿನ್ ಅವಯವಾ ಸ್ಫುಟಂ**
**ಸರ್ವೇ ಸಮಸ್ತಾಃ ಚಿತ್ರಂ ತು ತದ್ವಿಜ್ಞೇಯಂ ಚತುರ್ಮುಖಿ**[೧೬]

ಚಿತ್ರ, ಅರ್ಧಚಿತ್ರ ಮತ್ತು ಚಿತ್ರಾಭಾಸ ಎಂದು ಮೂರು ವಿಧ. ಚಿತ್ರ ಎಂದಲ್ಲಿ ಸರಿಯಾದ ಪ್ರಮಾಣವುಳ್ಳ, ಎಲ್ಲಾ ಅವಯವಗಳನ್ನೂ ಸ್ಫುಟವಾಗಿ ಹೊಂದಿರುವ ಮೂರ್ತಿ ಅಥವಾ ಪ್ರತಿಮೆ. ಇದು ತ್ರಿಮಾನಗಳುಳ್ಳದ್ದು. ದುಂಡು ಶಿಲ್ಪ ಎಂದು ಗುರುತಿಸುವುದುಂಟು. ಸರ್ವಾವಯವ ಸಂದೃಷ್ಟಂ ಯತ್ರ ಚಿತ್ರಮಿಷ್ಯತೇ – ಇದು ಕಾಶ್ಯಪ ಶಿಲ್ಪದ ಉಲ್ಲೇಖ.

**ಹಸ್ತಾದಿ ಅವಯವ ಯಸ್ಮಿನ್ ಪುರೋಭಾಗೇ ಸಮೀಕ್ಷಿತುಂ**
**ಶಕ್ಯಂ ನ ಅಪರಭಾಗೇ ತು ತದರ್ಧ ಚಿತ್ರ ಮಿಷ್ಯತೇ**[೧೭]

ಅರ್ಧಚಿತ್ರವೆಂದರೆ ಉಬ್ಬು ಶಿಲ್ಪ ಎಂದೇ ಗುರುತಿಸಲಾಗುತ್ತದೆ. ಇದು ಮುಂದಿನಿಂದ ನೋಡುವುದಕ್ಕೆ ಚೆಂದ. ಅವಯವಗಳ ಅರ್ಧ ಬಿಂಬ ಎಂದು ಕಾಶ್ಯಪ ಶಿಲ್ಪ ಗ್ರಂಥವು ಉಲ್ಲೇಖಿಸಿದೆ. ಅರ್ಧಚಿತ್ರಂ ಸುಧಯಾ – ಇದೂ ಶಾಸ್ತ್ರೋಕ್ತಿ.

ಅರ್ಧ ಚಿತ್ರವನ್ನು ಗಾರೆಯಿಂದಲೂ ರಚಿಸಬಹುದು. ವಿಜಯನಗರೋತ್ತರ ಕಾಲದಲ್ಲಿ ಗಾರೆಯಿಂದ ಮಾಡಿದ ಅರ್ಧ ಶಿಲ್ಪಗಳು ಸಾಮಾನ್ಯ. ನಮ್ಮಲ್ಲಿರುವ ಅಸಂಖ್ಯಾತ ವೀರಗಲ್ಲು ಮೊದಲಾದ ಸ್ಮಾರಕ ಶಿಲ್ಪಗಳು ಅರ್ಧಚಿತ್ರಗಳೇ ಆಗಿವೆ. ಕಲಾವಿದ ವೆಂಕಟಪ್ಪನವರು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ರಚಿಸಿದ ಉಬ್ಬು ಶಿಲ್ಪಗಳು ಹೆಚ್ಚು ಜನಪ್ರಿಯವಾದವು.

**ರೂಪಿತಾಪ್ರತಿಮಾಯಾತು ವರ್ಣೇರೇವಸಿತಾದಿಭಿಃ**
**ಕುಡ್ಯಾದೌ ಚಿತ್ರಮಾಭಾಸಂ ತತ್ಕೌತುಕಂ ಉದಾಹೃತಂ**[೧೮]

ಬಣ್ಣಗಳಿಂದ ಭಿತ್ತಿ ಅಥವಾ ಪಟದ ಮೇಲೆ ರಚಿಸಲ್ಪಟ್ಟದ್ದು ಚಿತ್ರಾಭಾಸ. ಇದು ಎರಡು ಮಾನಗಳನ್ನು ಆಧರಿಸಿದ್ದು. ಉದ್ದ ಅಗಲಗಳ ರಚನೆ. ಈ ರಚನೆಗಳಲ್ಲಿ ಆಳವಿಲ್ಲ. ನೋಟಕ್ಕೆ ಪೂರ್ಣಚಿತ್ರದಂತೆ ಭಾಸವಾಗುತ್ತದೆ. ಅದಕ್ಕೇ ಚಿತ್ರಾಭಾಸವೆಂದು ಹೆಸರು. ಪಟೇ ಭಿತ್ತೌ ಚ ಯೋ ಲಿಖ್ಯಾನ್ ಚಿತ್ರಾಭಾಸಮಿಹೋಚ್ಯತೇ – ಇದು ಸುಪ್ರಭೇದಾಗಮದ ಉಲ್ಲೇಖ. ಈವರೆಗೆ ವಿದ್ವಾಂಸರು ಪಾಶ್ಚಿಮಾತ್ಯರ ಬರಹಗಳನ್ನಾಧರಿಸಿ, ದುಂಡುಶಿಲ್ಪ, ಉಬ್ಬುಶಿಲ್ಪ, ಚಿತ್ರ ಎಂದು ವರ್ಗೀಕರಿಸುತ್ತಿದ್ದರು. ಇವನ್ನು ಕ್ರಮವಾಗಿ ಶಾಸ್ತ್ರೀಯವಾಗಿ ಚಿತ್ರ – ಅರ್ಧಚಿತ್ರ – ಚಿತ್ರಾಭಾಸ ಎಂದು ಗುರುತಿಸಬಹುದು. ಈ ಪ್ರಭೇದಗಳನ್ನು ಮತ್ತಷ್ಟು ಸರಳವಾಗಿ ಸಕಲಾಧಿಕಾರ ಗ್ರಂಥ ಗುರುತಿಸಿದೆ.

**ಚಿತ್ರಂ ಸರ್ವಾಂಗ ದೃಷ್ಟಂ ಸ್ಯಾದರ್ಧಂ ಅರ್ಧಾಂಗ ದರ್ಶನಂ**
**ನಿಮ್ನೋನ್ನತ ವಿಹೀನೇನ ಪಟಭಿತ್ಯಾದಿ ಕಲ್ಪನಂ**
**ಚಿತ್ರಾಭಾಸಮಿದಂ ಪ್ರೋಕ್ತಂ ಶ್ರೇಷ್ಠಾಂತರಾಧಮಂ**[೧೯]

ಚಿತ್ರ ಎಂದಲ್ಲಿ ಸರ್ವಾಂಗಳನ್ನು ನೋಡಲು ಸಾಧ್ಯ. ಅರ್ಧಚಿತ್ರ ಎಂದಲ್ಲಿ ಮುಂದಿನ ಅರ್ಧಭಾಗಗಳನ್ನು ನೋಡಲು ಸಾಧ್ಯ. ಚಿತ್ರಾಭಾಸ ಎಂದಲ್ಲಿ ಉಬ್ಬುತಗ್ಗುಗಳಿಲ್ಲದ್ದು. ಇವನ್ನು ಕ್ರಮವಾಗಿ ಉತ್ತಮ, ಮಧ್ಯಮ, ಅಧಮ ಎಂದೂ ಗುರುತಿಸಲಾಗಿದೆ.

ಭೂಲೋಕದಲ್ಲಾಗಲಿ, ದೇವಲೋಕದಲ್ಲಾಗಲಿ, ಮಾನವರಾಗಲಿ, ದೇವತೆಗಳಾಗಲಿ ಪರಕೃತಿಯಿಂದ ಉತ್ಪತ್ತಿಯಾದ ಸತ್ವಾದಿಗುಣಗಳಿಗೆ ಹೊರತಾದರು ಯಾರೂ ಇಲ್ಲ – ಇದು ಭಗವದ್ಗೀತೆಯಲ್ಲಿನ ವಾಕ್ಯ.

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾಪುನಃ**
**ಸತ್ತ್ವಂ ಪ್ರಕೃತಿಜೂರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ**[೨೦]

ಪ್ರತಿಮಾ ರಚನೆಯಲ್ಲಿಯೂ ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಗುಣಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸುವ ಪ್ರಯತ್ನವಿದೆ. ಸಾತ್ವಿಕೀ ರಾಜಸೀ ದೇವಪ್ರತಿಮಾ ತಾಮಸೀ ತ್ರಿಧಾ[೨೧] ದೇವ ದೇವತೆಗಳಿಗೆ ಮೂಲತಃ ಸಾತ್ವಿಕಾದಿ ಭಾವಗಳು ಆರೋಪಿಸಲ್ಪಟ್ಟಿದ್ದರೂ ಪ್ರತಿಮಾ ಲಕ್ಷಣಗಳನ್ನು ಅನುಸರಿಸಿ ಸಾತ್ವಿಕ ರಾಜಸ ತಾಮಸ ಪ್ರತಿಮೆಗಳೆಂದು ಶುಕ್ರನೀತಿ ಗ್ರಂಥದಲ್ಲಿ ಹೆಸರಿಸಲಾಗಿದೆ.

**ಯೋಗ ಮುದ್ರಾನ್ವಿತಾಸ್ವಸ್ಥಾ ವರಾಭಯಕರಾನ್ವತಾ**
**ದೇವೇಂದ್ರಾದಿ ಸ್ತುತನುತಾ ಸಾತ್ವಿಕೀ ಸಾ ಪರಿಕೀರ್ತಿತಾ**
**ತಿಷ್ಠಂತಿ ಬಾಹನಸ್ಥಾವಾ ನಾನಾಭರಣ ಭೂಷಿತಾ**
**ಯಾ ಶಸ್ತ್ರಾಸ್ತ್ರೈ ಭಯ ವರಕರಾ ಸಾ ರಾಜಸೀ ಸ್ಮೃತಾ**
**ಶಸ್ತ್ರಾಸ್ತ್ರೈ ದೈತ್ಯ ಹಂತ್ರೀ ಯಾ ಹ್ಯುಗ್ರ ರೂಪಧರಾಸದಾ**
**ಯುದ್ಧಾಭಿನಂದಿನೀ ಪಾ ತು ತಾಮಸೀ ಪ್ರತಿಮೋಚ್ಚತೇ**[೨೨]

ಯೋಗ ಮುದ್ರೆಯುಳ್ಳ, ವರದ–ಅಭಯ ಹಸ್ತಗಳನ್ನು ಪ್ರದರ್ಶಿಸುವ ಇಂದ್ರಾದಿ ದೇವತೆಗಳಿಂದ ಸ್ತುತಿಸಲ್ಪಡುವ ಸೌಮ್ಯ ರೂಪದ ದೇವತೆಗಳಿಗೆ ಸಾತ್ವಿಕ ದೇವತೆಗಳೆಂದು ಹೆಸರು.

ಸರ್ವಾಭರಣಗಳಿಂದ ಅಲಂಕೃತವಾದ ವಾಹನಗಳೊಂದಿಗೆ ಕಾಣಿಸಿಕೊಳ್ಳುವ ಅಭಯ ಮತ್ತು ವರದ ಹಸ್ತಗಳನ್ನು ಹೊಂದಿರುವ, ಶಸ್ತ್ರಾಸ್ತ್ರಗಳನ್ನು ಪ್ರದರ್ಶಿಸುವ ದೇವತೆಗಳಿಗೆ ರಾಜಸ ದೇವತೆಗಳೆಂದು ಹೆಸರು.

ಶಸ್ತ್ರಾಸ್ತ್ರಗಳನ್ನು ಹಿಡಿದ, ದೈತ್ಯರನ್ನು ದಮನ ಮಾಡಲು ಸಿದ್ಧಗೊಂಡ, ಉಗ್ರರೂಪವನ್ನು ಧರಿಸಿದ, ಯುದ್ಧೋತ್ಸುಕತೆಯನ್ನು ಪ್ರದರ್ಶಿಸುವ ದೇವತಾ ಮೂರ್ತಿಗಳಿಗೆ ತಾಮಸ ದೇವತೆಗಳೆಂದು ಹೆಸರು.

ಅಭಯ-ವರದ ಹಸ್ತಗಳಲ್ಲದೆ ಕೆಲವು ನಿರ್ದಿಷ್ಟ ಆಯುಧಗಳನ್ನು ಹಿಡಿದ ಹಲವು ಸೌಮ್ಯರೂಪಿ ದೇವತೆಗಳಿದ್ದಾರೆ. ಅವರನ್ನೂ ಸಾತ್ವಿಕ ದೇವತೆಗಳೆಂದು ಪರಿಗಣಿಸಬೇಕು.

**ವರಾಭಯಾಬ್ಜ ಶಂಖಾಡ್ಯಾ ಹಸ್ತಾ ವಿಷ್ಣೋಶ್ಚ ಸಾತ್ವಿಕೀ**
**ಮೃಗ ವಾದ್ಯಾಭಯ ವರಹಸ್ತಾ ಸೋಮಶ್ಚ ಸಾತ್ವಿಕೀ**
**ವರಾಭಯಾಬ್ಜ ಲಡ್ಡೂಕ ಹಸ್ತೇಭಾಸ್ಯಸ್ಯ ಸಾತ್ವಕೀ**
**ಪದ್ಮಮಾಲಾಽಭಯ ವರಕರಾ ಸತ್ವಾಧಿಕಾ ರವೇಃ**[೨೩]

ವರದ-ಅಭಯ ಹಸ್ತಗಳೊಂದಿಗೆ ಪದ್ಮ ಶಂಖಗಳನ್ನು ಹಿಡಿದವನು ಸಾತ್ವಿಕ ವಿಷ್ಣು. ಮೃಗ, ವಾದ್ಯಗಳೊಂದಿಗೆ ಅಭಯ-ವರದ ಹಸ್ತಗಳನ್ನು ಪ್ರದರ್ಶಿಸಿದವನು ಸಾತ್ವಿಕನಾದ ಸೋಮ(ಚಂದ್ರ); ವರದ-ಅಭಯ ಹಸ್ತಗಳೊಂದಿಗೆ, ಪದ್ಮ ಲಡ್ಡುಗಳನ್ನು ಹಿಡಿದವನು ಸಾತ್ವಿಕನಾದ ಗಜಮುಖ. ಪದ್ಮ ಮಾಲೆಗಳೊಂದಿಗೆ ಅಭಯ-ವರದ ಹಸ್ತವುಳ್ಳವನು ರವಿ. ಇವರೆಲ್ಲರೂ ಸಾತ್ವಿಕ ದೇವತೆಗಳು ಎಂದು ಪರಿಗಣಿಸಲ್ಪಡುತ್ತಾರೆ. ಶಂಖ-ಚಕ್ರ-ಗದಾ-ಪದ್ಮಗಳು ನಿಶ್ಚಿತ ಕ್ರಮವನ್ನು ಅನುಸರಿಸಿ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳಲ್ಲಿ ಗುರುತಿಸಲಾಗಿದೆ. ವಿಷ್ಣುವಿನ ಈ ರೂಪಗಳನ್ನು ಸಾತ್ವಿಕವೆಂದೇ ಗುರುತಿಸಲಾಗಿದೆ. ಈ ವಿವರಗಳು ಪದ್ಮಸಂಹಿತೆ, ರೂಪಮಂಡನ, ಮಾನಸೋಲ್ಲಾಸ ಗ್ರಂಥಗಳಲ್ಲಿವೆ. ವೈಷ್ಣವಾಗಮಗಳು ಷಡ್ಗುಣಗಳನ್ನಾಧರಿಸಿ ವಾಸುದೇವ - ಸಂಕರ್ಷಣ - ಪ್ರದ್ಯುಮ್ನ - ಅನಿರುದ್ಧ ಹಾಗೂ ಇತರ ದೇವತೆಗಳನ್ನೂ, ಉತ್ಪತ್ತಿ ಕ್ರಮವನ್ನು ವಿವರಿಸಿವೆ. ಈ ವಿವರಗಳು ಪಾಂಚರಾತ್ರಾಗಮಗಳಲ್ಲಿ ವಿಗ್ರಹಾರಾಧನೆಗೆ ತಾತ್ವಿಕ ಚೌಕಟ್ಟನ್ನು ಒದಗಿಸಿದೆ.

**ಶಂಖಚಕ್ರ ಗದಾಪದ್ಮೈರಾಯುಧೈಧಿತಃ ಪೃಥಕ್**
**ಷಟ್ ಷಟ್ ಭೋದಾಶ್ಚ ಮೂರ್ತೀನಾಂ ವಿಷ್ಣವಾದೀನಾಂ ಭವಂತಿ ಹಿ**[೨೪]

ಶೈವಾಗಮಗಳಲ್ಲಿ ಶಿವತತ್ವ, ಸದಾಶಿವತತ್ವ, ಮಹೇಶತತ್ತ್ವ ಎಂಬ ವರ್ಗೀಕರಣವಿದೆ. ಈ ತತ್ವಗಳನ್ನು ಕ್ರಮವಾಗಿ ನಿಷ್ಕಳ, ಸಕಳ-ನಿಷ್ಕಳ ಮತ್ತು ಸಕಳ ಎಂದೂ ಗುರುತಿಸಲಾಗುತ್ತದೆ. ಮಹೇಶತತ್ವವು ಸಾಕಾರರೂಪಿ ಹದಿನಾರು ಅಥವಾ ಇಪ್ಪತ್ತೈದು ಶಿವಲೀಲಾ ಮೂರ್ತಿಗಳನ್ನು ಬಣ್ಣಿಸುತ್ತದೆ. ಈ ಮೂರ್ತಿಗಳು, ಸೌಮ್ಯ, ರೌದ್ರ, ಸಾತ್ವಿಕ, ರಾಜಸ, ತಾಮಸ ರೂಪಗಳನ್ನು ಪ್ರದರ್ಶಿಸುತ್ತವೆ. ಈ ವಿವರಗಳೂ ಶೈವಾಗಮಗಳಲ್ಲಿ ವಿಗ್ರಹಾರಾಧನೆಗೆ ತಾತ್ವಿಕ ಚೌಕಟ್ಟನ್ನು ಒದಗಿಸಿವೆ.

ದೇವತಾ ಮೂರ್ತಿಗಳನ್ನು ಸ್ಥಾನಕ-ಆಸೀನ-ಶಯನ ಎಂದು ವಿಂಗಡಿಸುವುದು ಒಂದು ವಿಧ. ಒಂದೇ ದೇವರ ಮೂರ್ತಿಗಳನ್ನು ಸ್ಥಾನಕ-ಆಸೀನ-ಶಯನ ಎಂದು ವಿಂಗಡಿಸುವುದು ಮತ್ತೊಂದು ವಿಧ. ಈ ರೀತಿಯ ವಿಂಗಡಣೆ ಸಾಧ್ಯವಾದುದು ವೈಷ್ಣವಾಗಮಗಳಿಂದ ವಿಷ್ಣುವಿನ ಬಹುವಿಧದ ರೂಪಗಳನ್ನು ಪ್ರಸ್ತುತಪಡಿಸುವಾಗ ಪದ್ಮಸಂಹಿತೆಯು ಈ ವಿವರಗಳನ್ನು ಕಟ್ಟಿಕೊಟ್ಟಿದೆ.

"ಆಸೀನಂ ರಾಜಸಂಭಾವಂ" - ಎಂಬ ಉಕ್ತಿ ಇದೆ. ಈ ವಿವರಣೆಯನ್ನು ಅನುಸರಿಸಿ, ಸ್ಥಾನಕವನ್ನು ಸಾತ್ವಿಕವೆಂದೂ, ಆಲೀಢ-ಪ್ರತ್ಯಾಲೀಡಗಳನ್ನು ತಾಮಸವೆಂದು ನಿರ್ಧರಿಸಬಹುದು.

**ಯೋಗಿನಂ ಭೋಗಿನಂ ವಾಪಿ ಕಾರಯೇದಚ್ಯುತಂ ಪ್ರಭುಂ**
**ಆಸೀನಂ ವಾ ಶಯಾನಂ ವಾ ತಿಷ್ಠಂತಂ ವಾ ಸಮರ್ಚಯೇತ್**
**ಸೃಷ್ಟಿಕೃದ್ಭೋಗ ಶಯನಂ ದೇವ ದೇವಸ್ಯಕೀರ್ತ್ಯತೇ**
**ಸಂಹಾರ ಯೋಗ ಶಯನಂ ತಥಾ ನರಹರೇರ್ವಪುಃ**[೨೫]

ಸ್ಥಾನಕ-ಆಸೀನ-ಶಯನ ಎಂಬ ವಿಂಗಡಣೆಯೊಂದಿಗೆ ಮತ್ತೊಂದು ರೀತಿಯ ವರ್ಗೀಕರಣವಿದೆ; ಅದು ಯೋಗ-ಭೋಗ-ಸಂಹಾರ. ಸೃಷ್ಟಿಗಾಗಿ ಭೋಗ ಅಥವಾ ಶಯನ ರೂಪ.

ಇದೇ ಗ್ರಂಥದಲ್ಲಿ ಸ್ಥಿತ–ಆಸೀನ–ಯಾನರೂಢ ಭಂಗಿಗಳನ್ನು ವಿವರಿಸುತ್ತಾ, ಇವುಗಳಲ್ಲಿ ಪುನಃ ಯೋಗ–ಭೋಗಗಳೆಂದು ಪ್ರತಿಯೊಂದರಲ್ಲಿಯೂ ವರ್ಗೀಕರಿಸಿಕೊಳ್ಳಲಾಗಿದೆ. ಈ ಆರುವಿಧಗಳಲ್ಲಿ ಉತ್ತಮ, ಮಧ್ಯಮ, ಅಧಮ ಎಂದು ಪ್ರತಿಯೊಂದರಲ್ಲಿ ಪುನಃ ಪ್ರಭೇದಗಳು. ಇದು ಪದ್ಮಸಂಹಿತೆಗೆ ಮಾತ್ರ ಸೀಮಿತ. ಇದು ಸಾರ್ವತ್ರಿಕ ಎನಿಸುವ ಸರಳ ವರ್ಗೀಕರಣ ಎಂದೆನಿಸಿಲ್ಲ. ಈ ವಿವರಗಳನ್ನು ಇಲ್ಲಿ ಮಾತ್ರ ಕಾಣಬಹುದು.

**ಭೇದಾನ್ ಅಥೋ ಪ್ರವಕ್ಷ್ಯಾಮಿ ಪ್ರತಿಮಾಸು ಸ್ಥಿತಾದಿಷು**
**ಸ್ಥಿತಾ ಮೂರ್ತಿಸ್ತಥಾಸೀನಾ ಯಾನಾರೂಢಾ ತಥೈವ ಚ**
**ತಾನ್ತಿಸ್ರೋ ದ್ವಿವಿಧಾಃ ಪ್ರೋಕ್ತಾ ಭೋಗ ಯೋಗ ಪ್ರಭೇದತಃ**
**ಶಯಾನಸ್ತು ಪೂರ್ವೋಕ್ತೌ ಸರ್ಗ ಸಂಹಾರಕಾರಿಣೌ**
**ದ್ವೌಚ ಪರೌ ಚತುರ್ಭೇದ ಶ್ಶಯಾನಃ ಕಮಲಾಸನಃ**
**ಏಕೈಕಾ ದ್ವಿ ತ್ರಿಧಾ ಭೇದಾ ಉತ್ತಮಾಧಮ ಮಧ್ಯಮಾಃ**[೨೬]

ಇತ್ಯಾದಿಗಳಲ್ಲಿ ಸ್ಥಾನಕ ಪ್ರತಿಮೆಗಳನ್ನು ಬಳಸಬೇಕು; ಇದು ನಿಯಮ. ನಿತ್ಯೋತ್ಸವ ಪ್ರತಿಕೃತಿಃ ಸರ್ವತ್ರೈವ ಸ್ಥಿತಾ ಭವೇತ್[೨೭] ಅರ್ಚನೆಯಲ್ಲಿ ಸ್ವಾರ್ಥ, ಪರಾರ್ಥ ಎಂದು ಎರಡು ವಿಧ. ಮನೆಯಲ್ಲಿ ಆಚರಿಸುವುದು ಸ್ವಾರ್ಥಕ್ಕಾಗಿ. ದೇವಾಲಯದಲ್ಲಿ ಆಚರಣೆ ಪರರಿಗಾಗಿ. ಗೃಹಾರ್ಚನೆಯಲ್ಲಿ ಸಂಹಾರ ಮತ್ತು ಶಯನ ಮೂರ್ತಿಗಳಿಗೆ ಪೂಜೆ ನಿಷಿದ್ಧ.

ಗೃಹೇ ಸಂಹಾರ ಶಯನಂ ಅರ್ಚಯೇತ್ ನಕದಾಚನ[೨೮] ಸ್ಥಾನಕ ಭಂಗಿಯಲ್ಲಿ ಪ್ರಮುಖವಾಗಿ ಅಭಂಗ, ಸಮಭಂಗ ಮತ್ತು ಅತಿಭಂಗ ಎಂದು ಮೂರು ಭಂಗಿಗಳಿವೆ.

**ಭಿದ್ಯತೇ ಪ್ರತಿಮಾ ಭಂಗೈಃ ತ್ರಿಭಿರೇತೈಶ್ಚ ಚತುರ್ಮುಖ**
**ಅಭಂಗ ಸಮಭಂಗಾಭ್ಯಾಮತಿಭಂಗೇನ ಚೈವ ಹಿ.**[೨೯]

ಈ ಭಂಗಿಗಳ ಹೆಚ್ಚಿನ ವಿವರಗಳನ್ನು ಪ್ರತಿಮಾ ಲಕ್ಷಣಗಳಲ್ಲಿ ಮಾತ್ರ ಗುರುತಿಸಲು ಸಾಧ್ಯ. ಕಾಶ್ಯಪ ಶಿಲ್ಪ ಗ್ರಂಥವು ಪ್ರತಿಮಾಲಕ್ಷಣಗಳನ್ನು ವಿವರಿಸುವಾಗ ಮೊದಲಿಗೆ ’ಚಲ–ಅಚಲ–ಚಲಾಚಲಗಳೆಂಬ ಪ್ರಭೇದಗಳನ್ನು ವಿವರಿಸಿದೆ. ಈ ವರ್ಗೀಕರಣವು ವಿಗ್ರಹಗಳನ್ನು ಮಾಡುವ ದ್ರವ್ಯ ಮೂಲವನ್ನು ಆಧರಿಸಿದೆ.

**ಅಚಲಂ ಚ ಚಲಂ ಚಲಾಚಲಮಿತಿ ತ್ರಯಂ**[೩೦]

ಸಕಲಾಧಿಕಾರ ಗ್ರಂಥವು ಮರ, ಮಣಿ, ಧಾತು, ಶಿಲೆ, ಲೋಹ, ಮೃತ್ತಿಕೆ, ಸುಣ್ಣ(ಗಾರೆ), ಹರಳುಗಲ್ಲು ಎಂದು ಎಂಟು ವಿಧಗಳನ್ನು ಗುರುತಿಸಿದೆ.

**ಸುತರು ಸನ್ಮಣಿ ಧಾತು ಶಿಲಾ ಸುಧಾ**
**ವಿವಿಧಲೋಹ, ಮೃದುತ್ತಮ, ಶರ್ಕರಾ**
**ವಿರಚಿತಂ ಸ್ವಯಮಷ್ಟವಿಧಂ ಭವೇತ್**[೩೧]–

ಪದ್ಮಸಂಹಿತೆಯು ಆರು ದ್ರವ್ಯಗಳನ್ನು ಗುರುತಿಸಿದೆ.

**ರತ್ನಂ ಲೋಹಂ ಶಿಲಾ ಮೃಚ್ಛದಾರು ಸ್ಫಟಿಕ ಏವಚ**
**ಷಡ್ದ್ರವ್ಯಾಣಿ ಪ್ರಕೃತಯೋಽಯನ್ಮಯಾಃ ಪ್ರತುಮಾಃ ಸ್ಮೃತಾಃ**[೩೨]

ಮೃದುವಾದ ಮಣ್ಣು, ಕಲ್ಲಿನ ಸಣ್ಣ ಹರಳುಗಳು, ಗಾರೆ, ಸುಣ್ಣ ಇವುಗಳಿಂದ ರಚನೆಗೊಂಡದ್ದು ಸ್ಥಾವರ ಅಥವಾ ಅಚಲ ಎನಿಸಿದೆ.

**ಪಾರ್ಥಿವಂ ಶಾರ್ಕರಂ ಸೌಧಂ ಬೇರಂ ಸ್ಥಾವರ ಮುಚ್ಯತೇ**[೩೩]

ಮೂಲ ಬೇರ ಅಥವಾ ಮೂಲ ವಿಗ್ರಹಗಳು ಬಹುಪಾಲು ಶಿಲಾ ರಚನೆ. ಇದು ಸ್ಥಾವರವೇ. ಆದರೆ ಶಿಲೆ, ಧಾತು, ಮರ, ರತ್ನದಿಂದ ರಚಿತವಾದದ್ದನ್ನು ಚಲಾಚಲ ಎಂದು ಗುರುತಿಸಲಾಗಿದೆ.

**ಶೈಲಜಂ ದಾರುಜಂ ಚೈವ ಧಾತುಜಂ ರತ್ನಜಂ ತಥಾ**
**ಚಲಾಚಲಮಿತಿ ವಿಖ್ಯಾತಂ ಚಲಮೇವತು ಲೋಹಜಂ**[೬೪]

ಉತ್ಸವಕ್ಕೆ ಲೋಹ ಮೂರ್ತಿಯನ್ನು ಸರ್ವತ್ರ ಬಳಕೆಯಲ್ಲಿದೆ. ಪುರಿ ಜಗನ್ನಾಥನ ಮೂಲ ವಿಗ್ರಹ ಹಾಗೂ ಉತ್ಸವ ಮೂರ್ತಿಗಳು ಮರದಲ್ಲಿ ಮಾಡಿದ್ದು. ಇದೊಂದು ಅಪರೂಪದ ಉದಾಹರಣೆ.

ಶಿಲೆಯಲ್ಲಿ ಪೂರ್ಣ ಪ್ರಮಾಣದ ಮೂಲ ಬೇರವನ್ನು ರಚಿಸುವಂತೆ ಗಾರೆಯಲ್ಲಿ ರಚನೆಗೊಂಡ ಸಪ್ತಮಾತೃಕೆಯರನ್ನು ಕೋಲಾರದಲ್ಲಿ ಕಾಣಬಹುದು.

ವಿಜಯನಗರ ಅರಸರ ಕಾಲದಲ್ಲಿ ದೇವಾಲಯದ ಮೇಲ್ಕಟ್ಟಡ ರಚನೆ ಇಟ್ಟಿಗೆ ಗಾರೆಗಳಿಂದಾಗಿದ್ದು, ಗೂಡುಗಳಲ್ಲಿ ಗಾರೆಯಿಂದ ರಚಿಸಿದ ಪ್ರತಿಮೆಗಳಿವೆ. ನಂಜನಗೂಡಿನ ದೇವಾಲಯದ ಪ್ರಾಕಾರಭಿತ್ತಿಯ ಮೇಲೆ ಕಾಣಲಾಗುವ ಗಾರೆ ಪ್ರತಿಮೆಗಳು ಗಮನಾರ್ಹವಾದವು. ಮೈಸೂರು ಅರಸರ ಕಾಲದಲ್ಲಿ ದೇವಾಲಯಗಳಲ್ಲಿ ಭಿತ್ತಿಚಿತ್ರಗಳನ್ನು ಬರೆಸುವ ವಾಡಿಕೆ ಇತ್ತು. ಇದಕ್ಕಾಗಿ ಚಿತ್ರ ಮಂಟಪಗಳನ್ನು ನಿರ್ಮಿಸುತ್ತಿದ್ದರು. ಮೈಸೂರಿನ ಪ್ರಸನ್ನ ವೆಂಕಟೇಶ್ವರ ದೇವಾಲಯದಲ್ಲಿ ಚಿತ್ರ ಮಂಟಪದ ಉಲ್ಲೇಖವಿದೆ. ಈ ಅರಸರ ಕಾಲದ ದೇವಾಲಯಗಳಲ್ಲಿ ತೈಲವರ್ಣದ ರಚನೆಗಳನ್ನು ಇಂದಿಗೂ ಕಾಣಬಹುದು. ಇಲ್ಲಿ ಚಿತ್ರ ರಚನೆ ಎಂದಲ್ಲ ಚಿತ್ರಾಭಾಸವೇ ಆಗಿದೆ.

ಅರಸರ ಕಾಲದ "ಶ್ರೀತತ್ವನಿಧಿ" ಪ್ರತಿಮಾಲಕ್ಷಣಗಳನ್ನು ವಿವರಿಸುವ ವರ್ಣಚಿತ್ರಗಳುಳ್ಳ-ಅಪರೂಪವಾದ ಚಿತ್ರಗ್ರಂಥ. ಲೋಹ ರಚನೆಗಳಲ್ಲಿ ಬಂಗಾರ, ಬೆಳ್ಳಿ ಮತ್ತು ತಾಮ್ರದಲ್ಲಿ ವಿಗ್ರಹ ರಚನೆಗೆ ಗ್ರಂಥಗಳು ಆದ್ಯತೆ ನೀಡಿವೆ.

'ಸುವರ್ಣಂ ರಜತಂ ತಾಮ್ರಂ ತ್ರಿವಿಧಂ ಲೋಹಮಿಷ್ಯತೇ'[೬೫] – ಆದರೆ ಇವುಗಳೊಂದಿಗೆ ಕಾಂಸ್ಯ ಮತ್ತು ಮಿಶ್ರಲೋಹದ ಪ್ರತಿಮೆಗಳೂ ಬಳಕೆಯಲ್ಲಿವೆ. ಪ್ರತಿಮಾ ರಚನೆಗೆ ಹಲವು ದ್ರವ್ಯಗಳನ್ನು ಸೂಚಿಸಿ ಅವುಗಳನ್ನು ಉತ್ತಮ, ಮಧ್ಯಮ, ಅಧಮ ಎಂದು ವರ್ಗೀಕರಿಸಲಾಗಿದೆ. ಬಂಗಾರ, ಬೆಳ್ಳಿಯ ರಚನೆಗಳು ಕರ್ತೃವಿನ ಶ್ರೀಮಂತಿಕೆಯನ್ನು ಅವಲಂಬಿಸಿವೆ. ಕೆಲವು ಗ್ರಂಥಗಳು ಎಲ್ಲವನ್ನು ಸಮಾನವಾಗಿ ಸ್ವೀಕರಿಸಿವೆ.

'ಸರ್ವದ್ರವ್ಯೇಷು ದೇವತ್ವಂ ಸಮಮೇವಂ ತು ವಿದ್ಯತೇ'[೬೬]– ಪ್ರಸ್ತುತ ಆರಾಧನೆಗೊಳ್ಳುವ ದೇವತಾ ಮೂರ್ತಿಗಳನ್ನು ವೈದಿಕ-ಪೌರಾಣಿಕ/ಆಗಮೋಕ್ತ – ಗ್ರಾಮೀಣ ದೇವತೆಗಳೆಂದೂ ವರ್ಗೀಕರಿಸಿಕೊಳ್ಳಲು ಸಾಧ್ಯವಿದೆ. ಅಗ್ನಿ, ಇಂದ್ರ, ವರುಣ, ಅಶ್ವಿನೀ ದೇವತೆಗಳು ದಿಕ್ಪಾಲಕರು, ಅದಿತಿ, ಸರಸ್ವತಿ, ಉಷೆ ಹೀಗೆ ಹಲವು ವೈದಿಕ ದೇವತೆಗಳಿದ್ದಾರೆ. ವೈದಿಕ ಗ್ರಂಥಗಳಲ್ಲಿ ದೇವತೆಗಳ ಮೂರ್ತಸ್ವರೂಪದ ವಿವರಣೆ ಅಪರೂಪವೇ. ಸಂದರ್ಭಾನುಸಾರ ಕೆಲವೆಡೆ ಹಲವು ಸೂಕ್ತಗಳಲ್ಲಿ ಕ್ವಚಿತ್ತಾಗಿ ಕಾಣಿಸಿಕೊಂಡಿವೆ.

"ಚತ್ವಾರಿಶೃಂಗಾ ತ್ರಯೋ ಅಸ್ಯಪಾದಾದ್ವೇಶೀರ್ಷೇ ಸಪ್ತಹಸ್ತಾಸೋ ಅಸ್ಯ"– ಇದು ಅಗ್ನಿಯ ವಿವರಣೆ. ನಾಲ್ಕು ಕೊಂಬುಗಳು, ಮೂರು ಪಾದಗಳು, ಎರಡು ತಲೆಗಳು, ಏಳು ಹಸ್ತಗಳು; ಇದನ್ನು ಪ್ರತಿಮಾ ರೂಪದಲ್ಲಿ ಕಾಣುವುದೆಂತು? ಸಹಸ್ರಶೀರ್ಷಾ ಪುರುಷನ ಕಲ್ಪನೆಯೂ ಅಸಾಧ್ಯವೇ ಸರಿ. ಈದೇವತೆಗಳು ಖಚಿತರೂಪ ಪಡೆದದ್ದು ಪುರಾಣಗಳ ಕಾಲದಲ್ಲಿ "ಸೂರ್ಯ ಆತ್ಮಾ ಜಗತಃ ಚಕ್ಷುಃ" ಎಂಬ ಅದ್ಭುತ ವಿವರಣೆಗೆ ಸವಾಲಾಗಿ, ಸೂರ್ಯನನ್ನು ನೆನೆದಾಗ (ಸಪ್ತಾಶ್ವಗಳ) ರಥದಲ್ಲಿ ಚಲಿಸುತ್ತಿರುವ ಸೂರ್ಯನ ಚಿತ್ರಣ ಕಣ್ಣಮುಂದೆ ನಿಲ್ಲುತ್ತದೆ. ಕಾಲಾನಂತರದಲ್ಲಿ ವೈದಿಕ ದೇವತೆಗಳೂ ಪುರಾಣೋಕ್ತ, ಆಗಮೋಕ್ತ ದೇವತೆಗಳಾಗಿ ಬೆಳೆದಿದ್ದಾರೆ. ಪುರಾಣಗಳ ಕಾಲದಲ್ಲಿ ಜನರ ಇಚ್ಛೆಯನ್ನು ಪೂರೈಸುವ ಸಲುವಾಗಿ ಹಲವಾರು ದೇವತೆಗಳು ರೂಪುಗೊಂಡವು. ದೇವಾಲಯದ ರೂಪ ದೊರೆಯಿತು. ಈ ರೀತಿ ಬೆಳದದ್ದು ಪೌರಾಣಿಕ/ಆಗಮೋಕ್ತ ಮೂರ್ತಿಗಳು. ಜನಪದದ ನಡುವೆ ಊರಿಗೊಂದು ದೇವತೆಯ ಕಲ್ಪನೆ, ಆರಾಧನೆಯಂತೂ ಇದೆ. ಗ್ರಾಮೀಣರಲ್ಲಿ ಹೆಣ್ಣು ದೇವತೆಗೆ ಮೊದಲ ಸ್ಥಾನ. ಈ ದೇವತೆಗಳಿಗೆ ವಿಶಿಷ್ಟ ಆಚರಣೆಗಳೂ ಉಂಟು. ಶಿಷ್ಟ ದೇವತೆಗಳೂ ವಿಶಿಷ್ಟ ರೀತಿಯಲ್ಲಿ ಗ್ರಾಮೀಣ ಸಂಸ್ಕೃತಿಯಲ್ಲಿ ಅರಳಿರುವುದನ್ನು ಕಾಣಬಹುದು. ಈ ದೃಷ್ಟಿಯಿಂದ ವೈದಿಕ-ಪೌರಾಣಿಕ-ಗ್ರಾಮೀಣ ಎಂಬ ವರ್ಗೀಕರಣ ಅನಿವಾರ್ಯ; ಇದು ಹೆಚ್ಚು ಮಹತ್ವವನ್ನೂ ಪಡೆಯುತ್ತದೆ.

ಮೇಲ್ಕಂಡ ವಿವರಗಳಿಂದ ಪ್ರತಿಮಾಲಕ್ಷಣಗಳ ಹಾಗೂ ಅವುಗಳ ವರ್ಗೀಕರಣದ ಸ್ಥೂಲ ಚಿತ್ರಣ ದೊರಕುವುದರಲ್ಲಿ ಸಂದೇಹವಿಲ್ಲವೆಂದು ಭಾವಿಸಲಾಗಿದೆ.

**ಅಡಿಟಿಪ್ಪಣಿಗಳು**

೧ ಸ್ವಾಮಿ ಆದಿದೇವಾನಂದ(ಸಂ) ಬೃಹದಾರಣ್ಯಕೋಪನಿಷತ್, (ಶ್ರೀರಾಮಕೃಷ್ಣಾಶ್ರಮ, ಮೈಸೂರು, ೨೦೦೮, ೨.೩.೧ ಪು: ೧೨೫.
೨ ಎಂ.ಎಂ. ಗಣಪತಿಶಾಸ್ತ್ರಿ(ಸಂ) ವಿಷ್ಣುಸಂಹಿತಾ, ನಾಗ್ ಪಬ್ಲಿಷರ್ಸ್, ದೆಹಲಿ, ೧೯೯೧, ಅ.೨೯, ಶ್ಲೋ; ೫೫, ಪು:೨೩೬.
೩ ಬೃಹದಾರಣ್ಯಕೋಪನಿಷತ್, ೨.೫.೧೯, ಪು: ೧೬೨ (ಋಗ್ವೇದ : ೬.೪೭.೧೮)
೪ ಅದೇ., ೨. ೮. ೧೮, ಪು; ೧೬೧.
೫ ಭಗವದ್ಗೀತೆ. ಅ. ೧೧, ಶ್ಲೋ: ೪೬.
೬ ಜಿ.ಆರ್. ಜೋಷ್ಯರ್(ಸಂ) ಪಾದ್ಮಸಂಹಿತಾಯಾಂ. . ಮೈಸೂರು, ೧೯೭೪, ಜ್ಞಾನಪಾದ : ಅ.೬. ಶ್ಲೋ: ೩೭–೩೮, ಪುಟ:೩೨
೭ ಅದೇ., ಶ್ಲೋ: ೩೮–೩೯
೮ ಹೆಚ್.ಎಸ್. ರಂಗಸ್ವಾಮೀ ಇತರರು(ಸಂ) ಶ್ರೀಮನ್ಮಹಾಭಾರತ, ಭಾರತದರ್ಶನ ಪ್ರಕಾಶನ, ಬೆಂಗಳೂರು, ೧೯೮೫, ಅಶ್ವಮೇಧಿಕಾಪರ್ವ (ಅನುಗೀತಾ) ಅ;೪೦, ಶ್ಲೋ; ೪, (ಭಾಗ; ೩೦. ಪುಟ; ೫೮೪೭)
೯ ಟಿ. ಗಣಪತಿಶಾಸ್ತ್ರಿ(ಸಂ), ಈಶಾನ ಶಿವಗುರು ದೇವ ಪದ್ಧತಿ; ಭಾರತೀಯ ವಿದ್ಯಾ ಪ್ರಕಾಶನ, ದೆಹಲಿ. ೧೯೯೦. ಭಾಗ: ೪, ಕ್ರಿಯಾಪಾದ, ಅ:೩೬, ಶ್ಲೋ: ೧–೨, ಪು:೩೫೮.
೧೦ ಡಾ. ವಿ. ವರದಾಚಾರಿ, ಪಾಂಚರಾತ್ರಾಗಮ, ತಿರುಮಲ ತಿರುಪತಿ ದೇವಸ್ಥಾನಂ, ತಿರುಪತಿ, ೨೦೦೧, ಪು:೭೦ (ಅಡಿಟಿಪ್ಪಣಿ), ಸನತ್ಕುಮಾರಸಂಹಿತೆ, ಬ್ರಹ್ಮ–ಅ. ೬. ಶ್ಲೋ: ೫೦–೫೧
೧೧ ಮಾರ್ಕಂಡೇಯ ಸಂಹಿತೆ, ತಿರುಮಲ ತಿರುಪತಿ ದೇವಸ್ಥಾನಂ, ತಿರುಪತಿ, ೧೯೮೪, ಅ.೯, ಶ್ಲೋ: ೨೧–೨೨, ಪು: ೭೬
೧೨ ಸ್ವಾಮಿ ಆದಿದೇವಾನಂದ(ಸಂ), ಶ್ವೇತಾಶ್ವತರ ಉಪನಿಷತ್ತು, ಶ್ರೀರಾಮಕೃಷ್ಣಾಶ್ರಮ, ಮೈಸೂರು, ೨೦೦೩, ಶ್ಲೋ: ೧೪, ಪು: ೨೭
೧೩ ಬ್ರೂನೋಡಗೆನ್ಸ್(ಸಂ), ಮಯಮತ, ಫ್ರೆಂಚ್ ಇನ್‌ಸ್ಟಿಟ್ಯೂಟ್ ಆಫ್ ಇಂಡಾಲಜಿ, ಪಾಂಡಿಚೇರಿ, ೧೯೭೬, ಭಾಗ:೨, ಅ: ೩೩, ಶ್ಲೋ: ೧–೨, ಪು: ೧೨೭.
೧೪ ವಿ. ಗೋಪಾಲ ಐಯ್ಯಂಗಾರ್(ಸಂ), ಸಕಲಾಧಿಕಾರ, ಸರಸ್ವತೀ ಮಹಲ್ ಲೈಬ್ರರಿ, ತಂಜಾವೂರು, ೧೯೭೩, ಅ: ೧, ಶ್ಲೋ: ೧, ಪು: ೨
೧೫ ಸ್ವಾಮಿನಾಥ ಶಿವಾಚಾರ್ಯ(ಸಂ), ಕಾಮಿಕಾಗಮ (ಪೂರ್ವಭಾಗ), ದಕ್ಷಿಣಭಾರತ ಅರ್ಚಕ ಸಂಘ, ಮದ್ರಾಸ್, ೧೯೭೬, ಪಟಲ : ೪, ಶ್ಲೋ: ೨೭೯, ಪು: ೩೫
೧೬ ಪಾದ್ಮಸಂಹಿತಾಯಾಂ ಕ್ರಿಯಾಪಾದ, ಅ:೧೯, ಶ್ಲೋ: ೪೬–೪೭, ಪು: ೧೬೪
೧೭ ಅದೇ., ಶ್ಲೋ: ೪೮
೧೮ ಅದೇ., ಶ್ಲೋ: ೪೯
೧೯ ಸಕಲಾಧಿಕಾರ, ಅ. ೧, ಶ್ಲೋ: ೫, ಪು: ೪
೨೦ ಭಗವದ್ಗೀತೆ, ಅ. ೧೮, ಶ್ಲೋ: ೪೦
೨೧ ಪಂ. ಬ್ರಹ್ಮ ಶಂಕರ ಮಿಶ್ರಾ(ಸಂ), ಶುಕ್ರನೀತಿಃ, ಚೌಕಾಂಬಾ ಸಂಸ್ಕೃತಮಾಲೆ, ವಾರಣಾಸಿ, ೧೯೬೮, ಅ. ೪, ಶ್ಲೋ: ೮೦, ಪು: ೨೪೯
೨೨ ಅದೇ., ಶ್ಲೋ: ೮೧–೮೩
೨೩ ಅದೇ., ಶ್ಲೋ: ೧೪೮–೧೫೦, ಪು: ೧೬೦
೨೪ ಅದೇ., ಶ್ಲೋ: ೧೫೧
೨೫ ಪಾದ್ಮಸಂಹಿತಾಯಾಂ . . ಕ್ರಿಯಾಪಾದ, ಅ: ೨, ಶ್ಲೋ: ೩೧–೩೨, ಪು: ೧೦
೨೬ ಅದೇ., ಅ: ೧೫, ಶ್ಲೋ: ೧–೩, ಪು: ೧೨೩–೧೨೪
೨೭ ಅದೇ., ಅ: ೧೯, ಶ್ಲೋ: ೧೬, ಪು: ೧೬೧
೨೮ ಅದೇ., ಅ: ೩೨, ಶ್ಲೋ: ೩೬, ಪು: ೨೯೫
೨೯ ಅದೇ., ಆ: ೨೦, ಶ್ಲೋ: ೯೪, ಪು: ೧೭೫
೩೦ ಡಿ. ಕೃಷ್ಣರಾಯ ಮತ್ತು ವಿ.ಜಿ. ಆಪ್ಟೆ (ಸಂ), ಕಾಶ್ಯಪಶಿಲ್ಪಂ, ಆನಂದಾಶ್ರಮ, ಪೂನಾ, ೧೯೨೬, ಅಧ್ಯಾಯ: ೫೦, ಶ್ಲೋ: ೧, ಪು: ೧೬೭
೩೧ ಸಕಲಾಧಿಕಾರ, ಅ: ೧, ಶ್ಲೋ: ೨, ಪು: ೨
೩೨ ಪಾದ್ಮಸಂಹಿತಾಯಾಂ.. ಕ್ರಿಯಾಪಾದ, ಅ: ೧೧, ಶ್ಲೋ: ೨, ಪು: ೮೩
೩೩ ಸಕಲಾಧಿಕಾರ, ಅ: ೧, ಶ್ಲೋ: ೩, ಪು: ೩
೩೪ ಕಾಶ್ಯಪಶಿಲ್ಪಂ, ಅ: ೫೦, ಶ್ಲೋ: ೨–೩, ಪು: ೧೬೭
೩೫ ಪಾದ್ಮಸಂಹಿತಾಯಾಂ.. ಅ: ೧೧, ಶ್ಲೋ: ೪, ಪು: ೮೩
೩೬ ಕಾಶ್ಯಪಶಿಲ್ಪಂ, ಅ: ೫೦, ಶ್ಲೋ: ೧೦, ಪು: ೧೬೮

****

# ಮೂರ್ತಿಪೂಜೆ ಮತ್ತು ಬಸದಿಗಳು

* ಡಾ. ಕೆ. ಶಾರದಾ

ಪ್ರಕೃತಿ ಶಕ್ತಿಗೆ ನಿಬ್ಬೆರಗಾದ ಆದಿಮಾನವ ಅದನ್ನು ತನ್ನ ಕಲ್ಪನಾ ಸಾಮರ್ಥ್ಯಕ್ಕನುಸಾರ ಅಮೂರ್ತ ಶಕ್ತಿಗೆ ಮೂರ್ತ ಸ್ವರೂಪವನ್ನು ಕೊಡಲು ಪ್ರಯತ್ನಿಸಿದ. ಅಮೂರ್ತ ಶಕ್ತಿಗೆ ಮೂರ್ತ ಸ್ವರೂಪವನ್ನು ಕೊಟ್ಟ ಆದಿಮಾನವ ಪ್ರಕೃತಿಯನ್ನೇ ಆರಾಧನಾ ಕೇಂದ್ರವಾಗಿಸಿಕೊಂಡ. ಎರಡನೆಯ ಹಂತದಲ್ಲಿ ಬಯಲಿನಿಂದ ಆಲಯಕ್ಕೆ ಬಂದ ಈ ಮೂರ್ತ ಸ್ವರೂಪದ ಆರಾಧನೆ ಮೂರ್ತಿ ಪೂಜೆಗೆ ಇಂಬುಗೊಟ್ಟು ಸ್ಥಾವರತ್ವಕ್ಕೆ ಎಡೆಗೊಟ್ಟಿತು. ಸ್ಥಾವರ ಸ್ವರೂಪದ ಈ ಆರಾಧನೆ ಕಾಲಾಂತರದಲ್ಲಿ ಒಂದು ಸಾಮಾಜಿಕ, ಧಾರ್ಮಿಕ ವ್ಯವಸ್ಥೆಯನ್ನು ಪಡೆದುಕೊಂಡು ಒಂದು ಸಮುದಾಯದ ಸ್ವತ್ತಾಗಿ ಮಾರ್ಪಟ್ಟಿತು. ವ್ಯಕ್ತಿಯ, ಸಂಸ್ಕೃತಿಯ ಅಳತೆಗೋಲಾಗಿಯೂ ಮಾರ್ಪಟ್ಟಿತು. ಈ ದೈವೀ ಆರಾಧನೆ, ಮೂರ್ತಿಪೂಜೆಯ ಸುತ್ತಲೂ ಒಂದು ಧಾರ್ಮಿಕ, ಸಾಂಸ್ಕೃತಿಕ ವಲಯವನ್ನು ನಿರ್ಮಿಸಿ ಸಮುದಾಯಗಳನ್ನು ನಿರ್ದೇಶಿಸುವ ಸೂತ್ರಗಳ ಕೇಂದ್ರವಾಗಿಯೂ ಆಗಿ ಅವುಗಳನ್ನು ತನ್ನ ಹತೋಟಿಗೆ ತಂದುಕೊಂಡಿತು. ಮಾನಸಿಕ ಸ್ವಾಸ್ಥ್ಯ, ಸಾಮಾಜಿಕ ಕಲ್ಪನೆ. ಆರಾಧನಾ ಸ್ವರೂಪಗಳು, ಮೂರ್ತಿಪೂಜೆಯ ಸ್ವರೂಪಗಳು ಶೋಷಣೆಯ ಕೇಂದ್ರವಾಗಿ ತನ್ನ ಬೇರುಗಳನ್ನು ಬಿಟ್ಟುಕೊಳ್ಳುತ್ತದೆ. ಅವು ಯಾವಾಗಲೂ ಉನ್ನತ ವರ್ಗದ ಸ್ವಲಾಭಾಪೇಕ್ಷೆಯಿಂದ ಪೋಷಣೆಗೊಳ್ಳುತ್ತದೆ. ಆರಂಭದಲ್ಲಿ ವ್ಯಷ್ಟಿ, ಸಮಷ್ಟಿ ಪ್ರಜ್ಞೆಗಳನ್ನು ಹೊತ್ತು ಹುಟ್ಟಿಕೊಳ್ಳುವ ಯಾವುದೇ ಧಾರ್ಮಿಕ, ಸಾಮಾಜಿಕ ವ್ಯವಸ್ಥೆಯು ಒಂದು ವರ್ಗವನ್ನು ಪ್ರತಿನಿಧಿಸುತ್ತಾ ಹೋದಂತೆ ಶೋಷಣೆಯ ನೆಲೆಯಾಗುತ್ತದೆ. ಭಾರತೀಯ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ವಲಯಗಳಲ್ಲಿಯೂ ಪರಂಪರಾಗತವಾಗಿ ಇದೇ ನಡೆದು ಬಂದಿರಬಹುದು.

ಬ್ರಾಹ್ಮಣ್ಯವನ್ನು ಪೋಷಿಸುವ ವೈದಿಕ ವರ್ಗ, ಪುರೋಹಿತಶಾಹಿವರ್ಗ ಹಿಂದುತ್ವದ ಸಂದರ್ಭದಲ್ಲಿ ವಿಗ್ರಹಾರಾಧನೆಯ ಸ್ವರೂಪಗಳಲ್ಲಿ ತೋರಿದ ಆಸಕ್ತಿಗಳು ಸಾಂಸ್ಥಿಕ ಶ್ರದ್ಧೆಗಳನ್ನು ಪೋಷಿಸುವಂತಹವಾಗಿದ್ದವು. ಅವು ಒಂದು ವರ್ಗವನ್ನು ಪ್ರತಿನಿಧಿಸುತ್ತಾ ಅವುಗಳ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುತ್ತಾ ಇತರ ವರ್ಗಗಳ ನೆಲೆಯಲ್ಲಿ ಶೋಷಿತ ಕೇಂದ್ರಗಳಾಗಿಯೂ ತಮ್ಮ ಪಾತ್ರವನ್ನು ಪೋಷಿಸಿದವು. ಇಂತಹ ವೈದಿಕ, ಪುರೋಹಿತಶಾಹಿವರ್ಗ ರೂಪಿಸಿದ ಮೂರ್ತಿಪೂಜೆಯ ನೆಲೆಗಳನ್ನು ಧಿಕ್ಕರಿಸುವ ನಿಟ್ಟಿನಲ್ಲಿ ಹುಟ್ಟಿಕೊಂಡು ಬಂದದ್ದು ಶ್ರವಣ ಪರಂಪರೆ. ಶ್ರವಣ ಪರಂಪರೆಯ ಇತರ ಶಾಖೆಗಳೆಲ್ಲ ಪ್ರತ್ಯೇಕ ಧರ್ಮಗಳ ಲಾಂಛನಗಳನ್ನು ಹೊಂದಿ ತಾತ್ವಿಕವಾದ ಭೇದಗಳನ್ನು ತೋರಿದಾಗಲೂ ಇವೆಲ್ಲವೂ ಮೂಲ ನೆಲೆಯಲ್ಲಿ ವೈದಿಕತ್ವವನ್ನು ವಿರೋಧಿಸುವಂತಹವುಗಳೇ ಆಗಿವೆ.

ಧರ್ಮದ ಸ್ವರೂಪ, ದಾರ್ಶನಿಕ ಕಾಣ್ಕೆಗಳಲ್ಲಿ, ತಾತ್ವಿಕ ವೈಚಾರಿಕತೆಗಳಲ್ಲಿ ಶ್ರವಣ ಸಂಸ್ಕೃತಿಯ ಮುಖ್ಯವಾಹಕವಾಗಿ ಭಾರತೀಯ ಸಂಸ್ಕೃತಿಗೆ ಪರ್ಯಾಯ ಸಂಸ್ಕೃತಿಯೊಂದನ್ನು ಹುಟ್ಟು ಹಾಕಿದ ಜೈನಧರ್ಮವು ವೈದಿಕತ್ವ ಪೋಷಿಸುತ್ತಾ ಬಂದ ಸ್ಥಾವರವನ್ನು ತಿರಸ್ಕರಿಸಿ ಜಂಗಮತ್ವವನ್ನು ಪೋಷಿಸಿತು. ಆ ನೆಲೆಯಲ್ಲಿ ಜೈನಧರ್ಮ ಮೂರ್ತಿಪೂಜೆಯನ್ನು, ಕೇಂದ್ರ ನೆಲೆಯಾಗಿ ರೂಪಿಸಿಕೊಂಡ ಆಲಯ ಸಂಸ್ಕೃತಿಯನ್ನು ತಿರಸ್ಕರಿಸಿತು. ಮಾನವನ ಸಾಧನೆ ಸಿದ್ಧಿಗಳೇ ಮನುಷ್ಯನನ್ನು ಅಮರತ್ವಕ್ಕೇರಿಸುತ್ತವೆಯೆಂದು ನಂಬಿದ ಜೈನಧರ್ಮ ಆತ್ಮ-ಪರಮಾತ್ಮ-ಸೃಷ್ಟಿ ಮತ್ತು ಅವತಾರಗಳನ್ನು ಕುರಿತಂತೆ ಭಿನ್ನ ನಿಲುವುಗಳನ್ನು ತಾಳುತ್ತದೆ. ವ್ಯಕ್ತಿ ಪೂಜೆಯನ್ನು ವ್ಯಕ್ತಿಯ ಆದರ್ಶಗಳ ಹಿನ್ನೆಲೆಯಲ್ಲಿ ಆದರಿಸಿದ ಜೈನಧರ್ಮ ತನ್ನ ಧರ್ಮದ ಹರಿಕಾರರಾದ ತೀರ್ಥಂಕರರನ್ನೇ ಪೂಜ್ಯನೀಯರೆಂಬುದಾಗಿ ಭಾವಿಸುತ್ತದೆ. ಅವರ ಆದರ್ಶಗಳನ್ನು ದೈವತ್ವದ ನೆಲೆಯಲ್ಲಿ ನೋಡುತ್ತದೆ. ಹಾಗಾಗಿ ಜೈನಧರ್ಮದಲ್ಲಿ ಜಿನಪೂಜೆಗಿಂತ ಭಾವಪೂಜೆಗೇ ಹೆಚ್ಚು ಒತ್ತನ್ನು ಕೊಡಲಾಗಿದೆ. ಆದರೆ

---

* ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು, ಕನ್ನಡ ಭಾಷೆ ಮತ್ತು ಅನುವಾದ ಅಧ್ಯಯನ ವಿಭಾಗ, ದ್ರಾವಿಡ ವಿಶ್ವವಿದ್ಯಾಲಯ ಶ್ರೀನಿವಾಸವನಂ-ಕುಪ್ಪಂ

ಕಾಲಾಂತರದಲ್ಲಿ ವೈದಿಕ ಸಂಸ್ಕೃತಿಯಲ್ಲಿ ಕಲ್ಪಿತ ಶಕ್ತಿಗಳು, ಪೌರಾಣಿಕ ಪುರುಷರು, ಪೌರಾಣಿಕ ವಿಷಯಗಳು ಆರಾಧನಾ ನೆಲೆಗೇರಿದಂತೆಯೇ ಜೈನಧರ್ಮದಲ್ಲಿಯೂ ತೀರ್ಥಂಕರರು ಆರಾಧ್ಯರಾಗಿ ದೈವತ್ವದ ನೆಲೆಗೇರಿ ಮೂರ್ತಿಪೂಜೆಗೆ ಕೇಂದ್ರ ಬಿಂದುಗಳಾಗಿ, ಅವರಿಗಾಗಿ ದೇವಾಲಯಗಳ ಸ್ವರೂಪವನ್ನೇ ಹೋಲುವ ಬಸದಿಗಳನ್ನು ಕಟ್ಟಲಾಯಿತು.

"ಆಪ್ತನು ಸಮೀಪದಲ್ಲಿರದಿದ್ದರೂ ಕೂಡ ಅವನ ಆಕಾರದ ಪ್ರತಿಬಿಂಬಪೂಜೆಯು ಪುಣ್ಯವನ್ನುಂಟುಮಾಡುವುದು. ಗರುಡ ಮುದ್ರೆಯು ವಿಷದ ಶಕ್ತಿಯನ್ನು ನಾಶಮಾಡುವುದಿಲ್ಲವೇ?"[೧] ಎನ್ನುವ ಮೂಲಕ ಮೂರ್ತಿಪೂಜೆಯನ್ನು, ಆಲಯ ಸಂಸ್ಕೃತಿಯನ್ನು, ಸಮರ್ಥಿಸಿಕೊಳ್ಳಲಾಯಿತು. ಹರಿಷೇಣ ತನ್ನ ಪದ್ಮಪುರಾಣದಲ್ಲಿ ಹೇಳಿದಂತೆ "ಯಾರ ಮನೆಯಲ್ಲಿ ಜಿನಮೂರ್ತಿ (ಬಿಂಬ) ಇರುತ್ತದೆಯೋ ಆ ಮನೆಯು ದುಷ್ಟ ಶಕ್ತಿಗಳಿಂದ ರಕ್ಷಿಸಲ್ಪಡುತ್ತದೆ" ಎನ್ನುವ ನೆಲೆಗೆ ಮುಟ್ಟಿತು.

ಪ್ರಾಚೀನ ಜೈನಾಗಮಗಳು ಜಿನಬಿಂಬ, ಜಿನಾಲಯಗಳ ಕುರಿತು ಏನನ್ನೂ ಹೇಳಿಲ್ಲ. ಆಗಮೋತ್ತರ ಕಾಲದಲ್ಲಿಯೇ ಜಿನಮೂರ್ತಿಗಳನ್ನು ಮಾಡಿಸುವ, ಪ್ರತಿಷ್ಠಾಪಿಸುವ, ಬಸದಿಗಳನ್ನು ಕಟ್ಟಿಸುವ ಪರಂಪರೆ ಬೆಳೆದು ಬಂದಿರಬೇಕು. ಹರಪ್ಪ-ಮೊಹೆಂಜೋದಾರೋ ಉತ್ಖನನಗಳಲ್ಲಿ ಸಿಕ್ಕಂತಹ ವೃಷಭನ ಮೂರ್ತಿಗಳು ಮತ್ತು ಕಲಿಂಗ ಸಾಮ್ರಾಟನಾದ ಖಾರವೇಲನು(ಕ್ರಿ.ಶ.ಪೂ.೧೫೦) ನಂದವಂಶದವರಿಂದ ಯುದ್ಧದ ಮೂಲಕ ತಿರುಗಿ ಪಡೆದ ಅನಂತನಾಥ ಜಿನನ (೧೪ನೇ ತೀರ್ಥಂಕರ) ಮೂರ್ತಿಯ ಉಲ್ಲೇಖಗಳು ಜೈನರ ವಿಗ್ರಹಾರಾಧನೆಯನ್ನು ಕ್ರಿಪೂರ್ವಕ್ಕೆ ಒಯ್ಯುತ್ತವೆ. ಮಥುರೆಯ ಸ್ತೂಪಗಳ ಅಧ್ಯಯನ ಮಾಡಿದ ಡಾ. ಪುಹರ್‌ರು ಅತಿ ಪ್ರಾಚೀನ ಕಾಲದಿಂದಲೂ ಜನರು ವೃಷಭನನ್ನು ಪೂಜಿಸುತ್ತಿದ್ದರೆಂದು ಅಭಿಪ್ರಾಯ ಪಟ್ಟಿದ್ದಾರೆ.

ಮುನಿವರ್ಯ ವಿದ್ಯಾನಂದರು ಹೇಳಿದಂತೆ ವಿಗ್ರಹಾರಾಧನೆ ಜೈನರಿಗೆ ಸಾಧನೆಯ ಅವಲಂಬನವಾಗಿರುತ್ತದೆ. ಅದು ಸಾಧನೆಯ ಮಾಧ್ಯಮವೇ ಹೊರತು ಸಾಧ್ಯವಲ್ಲ. ಆದರೆ ಕಾಲಾಂತರದಲ್ಲಿ ಬಹುಶಃ ಸಮಂತಭದ್ರರ ಕಾಲದಿಂದ ಶ್ರಾವಕನ ಶಿಕ್ಷಾವ್ರತಗಳಲ್ಲಿ ಸಾಮಾಜಿಕ ಶಿಕ್ಷಾವ್ರತವೂ ಸೇರಿಕೊಂಡು ಸೋಮದೇವ ಸೂರಿಯ ಕಾಲಕ್ಕೆ ಅದು ಕಡ್ಡಾಯವೂ ಆಯಿತು. ಅಷ್ಟವಿಧದ ಅರ್ಚನೆಯಿಂದ[೨] ಪಂಚಪರಮೇಷ್ಠಿಗಳನ್ನು ತೀರ್ಥಂಕರರನ್ನು ಪೂಜಿಸುವುದರಿಂದ ಕರ್ಮಕ್ಷಯವಾಗಿ ಪುಣ್ಯ ಲಭಿಸುತ್ತದೆಯೆಂದು, ಮೋಕ್ಷ ಪ್ರಾಪ್ತಿಯಾಗುತ್ತದೆಯೆಂದು ಸಾರಲಾಯಿತು.

" In early medieval times literary amd ephigraphic sources indicate the new out look of jaina teachers, who frequently recommended image worship. They tought the construction of new temples and rebuilding of old and dilapi®ated ones as meritorious acts. They glorified temple worship and engraved the jaina laity to errect basadis"[3]

ಜೈನಾಚಾರ್ಯರು ಏಕಾಂತವಾಸಿಗಳಾಗಿದ್ದು ಹೆಚ್ಚಾಗಿ ಪ್ರಕೃತಿ ಸಹಜ ಗುಹೆಗಳಲ್ಲಿ ತಪಸ್ಸಿಗೆ, ಆರಾಧನೆಗೆ ತೊಡಗುತ್ತಿದ್ದರು. ಈ ಗುಹೆಗಳೇ ಕಾಲಾಂತರದಲ್ಲಿ ಗುಹಾಂತರ ದೇವಾಲಯಗಳ ರೂಪವನ್ನು ಪಡೆದವು. ತಪಸ್ವಿಗಳ ಆರಾಧನಾ ಕೇಂದ್ರಗಳಾದವು. 'ಆಕೃತಿಮಾಚೈತ್ಯಾಲಯ'ಗಳೆಂದು ಕರೆಯಲ್ಪಟ್ಟವು.[೪] ಶಿಕಾರಿಪುರ, ಶಿವಮೊಗ್ಗ, ಎಲ್ಲೋರ, ಕಟ್ಟಿಪ್ಪು, ಐಹೊಳೆ, ಬಾದಾಮಿ ಮೊದಲಾದೆಡೆ ಇಂತಹ ಗವಿ ಬಸದಿಗಳನ್ನು ಕಾಣಬಹುದು. ಮುಂದೆ ಈ ಗುಹಾಂತರ ದೇವಾಲಯಗಳು ಬಸದಿಗಳ ನಿರ್ಮಾಣಕ್ಕೆ ಎಡೆ ಮಾಡಿಕೊಟ್ಟವು.

ತೀರ್ಥಂಕರರ ಆರಾಧನೆಗೆ ನಿರ್ಮಿಸಿಕೊಂಡ ಈ ಸ್ಥಳಗಳು ಸಂಚಾರಿ ಮುನಿಗಳ ವಾಸಸ್ಥಾನವಾಗಿ ಬಳಕೆಯಾದಂತೆ 'ವಸತಿ'ಗಳೆನಿಸಿಕೊಂಡವು. ಸಂಸ್ಕೃತದಲ್ಲಿ 'ವಸತಿ'ಯು 'ವಸದಿ'ಯಾಗಿ 'ಬಸದಿ'ಯೆಂಬ ರೂಪವನ್ನು ಪಡೆಯಿತು. ಬಸದಿಯನ್ನು ಪರ್ಯಾಯವಾಗಿ ಜಿನಗೇಹ, ಜಿನನಿಳಯ, ಜಿನಭವನ, ಅರ್ಹಗೇಹ, ಅರ್ಹತ್ ದೇವಾಲಯತನ, ಚೈತ್ಯಾಲಯ ಎಂದು ಮುಂತಾಗಿ ಕರೆದುದನ್ನು ಶಾಸನಗಳಲ್ಲಿ ಕಾವ್ಯಗಳಲ್ಲಿ ಕಾಣಬಹುದು. ಜಿನ ಬಸದಿಗಳ ನಿರ್ಮಾಣದಲ್ಲಿ ಜಿನಭಕ್ತಿ ಮುಖ್ಯವಾದುದರ ಜೊತೆಗೆ, ಜಿನಬಿಂಬಗಳನ್ನು ಭಕ್ತಿಯಿಂದ ವಂದಿಸುವುದರಿಂದ ಅಕ್ಷಯಸುಖ, ಅಜರಾಮರ ಸುಖ, ಅಷ್ಟೈಶ್ವರ್ಯ ಸಿದ್ಧಿ

ಪ್ರಾಪ್ತಿ, ಕೊನೆಗೆ ಮುಕ್ತಿ ದೊರೆಯುತ್ತದೆ. ಲೌಕಿಕ ಸಂಕಷ್ಟಗಳಿಂದ ಪಾರಾಗಬಹುದೆಂಬ, ಭವ್ಯರ ಪಾಪಗಳೆಲ್ಲವೂ ಶೀಘ್ರವಾಗಿ ನಾಶವಾಗುತ್ತವೆಂಬ ಲೌಕಿಕ ಸ್ತರದ ವೈಯಕ್ತಿಕ ಅಭಿಲಾಷೆಯ ಜೊತೆಗೆ ದೇಶದ, ಸಮಾಜದ, ರಾಜನ ಕ್ಷೇಮಾಭಿವೃದ್ಧಿಯು ಸಾಧ್ಯವೆಂಬ ಸಮಷ್ಟಿಪರ ಪ್ರಜ್ಞೆಯೂ ಸಮಾಜದಲ್ಲಿ ಬಲಿಯಿತು. ಹಲಸಿಯ ಒಂದು ತಾಮ್ರ ಶಾಸನದಲ್ಲಿ ಹೇಳಿದಂತೆ

**ಯಸ್ಮಿನ್ ಜಿನೇನ್ದ್ರ ಪೂಜಾ ಪ್ರವರ್ತ್ತತೆ**
**ತತ್ರತತ್ರ ದೇಶ ಪರಿವೃದ್ಧಿಃ**
**ನಗರಾಣಂ ನಿರ್ಭಯತಾ ತದ್ದೇಶ**
**ಸ್ವಾಮಿನಾಂಚೋರ್ಜ್ಜಾ ನಮೋ ನಮಃ ॥**[೫]

"ಎಲ್ಲಿ ಜಿನೇಂದ್ರ ಪೂಜೆ ನಡೆಯುವುದೋ ಆ ದೇಶವು ವೃದ್ಧಿಸುವುದು. ನಗರಗಳು ನಿರ್ಭಯದಿಂದ ಇರುವವು. ರಾಜನು ಊರ್ಜಿತನಾಗುವನು" ಎನ್ನುವಂಥಹ ಸಮೂಹ ಹಿತ ಪ್ರಜ್ಞೆಯೂ ಬಸದಿಗಳ ನಿರ್ಮಾಣಕ್ಕೆ ಕಾರಣವಾಯಿತು. (ನಗರಗಳು ನಿರ್ಭಯವಾಗಿರುತ್ತವೆ–ಅಹಿಂಸೆ, ಅಭಯ ಪರಿಕಲ್ಪನೆ ಗಳಿಂದಾಗಿ) ಶ್ರಾವಕ ಧರ್ಮದಲ್ಲಿ ದಾನ ಮತ್ತು ಪೂಜೆ ಮುಖ್ಯ. ಇವುಗಳ ಹೊರತಾಗಿ ಯಾರು ಶ್ರಾವಕರಾಗಲಾರರು ಎಂಬ ಬಲವಾದ ನಂಬಿಕೆಯೊಂದು ಕಾಲಾಂತರದಲ್ಲಿ ಪ್ರಚಲಿತಕ್ಕೆ ಬಂದಿತು. ಅಲ್ಲದೆ ವೈಯಾವೃತ್ಯದಲ್ಲಿ ಜಿನಪೂಜೆಯೂ ಸಮಾವೇಶಗೊಂಡಿತು. ಹಾಗಾಗಿ.....

**ದೇವಾದಿದೇವ ಚರಣೇ ಪರಿಚರಣಂ ಸರ್ವದುಃಖ ನಿರ್ಹರಣಂ।**
**ಕಾಮದ ಕಾಮದಾಹಿನಿ ಪರಿಚಿನುಯಾದಾದೃತೋ ನಿತ್ಯಮ್॥**[೬]

ಇಚ್ಛೆಯನ್ನು ಪೂರ್ಣಗೊಳಿಸುವಂತಹ, ಕಾಮವನ್ನು ಸುಡುವಂತಹ, ದೇವಾಧಿದೇವರೆನಿಸಿದಂತಹ ಅರಹಂತ ದೇವನ ಪಾದಗಳನ್ನು ಸರ್ವ ದುಃಖ ನಿವಾರಣೆಗಾಗಿ ನಿತ್ಯವೂ ಪೂಜಿಸಬೇಕು. ಅಲ್ಲದೆ ಜಿನಚೈತ್ಯಾಲಯಗಳ ಜೀರ್ಣೋದ್ಧಾರ, ಜಿನಬಿಂಬ ಸ್ಥಾಪನೆ, ಶಾಸ್ತ್ರಗ್ರಂಥಗಳ ಪ್ರಕಟಣೆ, ಮುನಿ, ಆರ್ಯಿಕಾ, ಶ್ರಾವಕ, ಶ್ರಾವಕಿ ಮುಂತಾಗಿ ಚತುಸ್ಸಂಘಕ್ಕೆ ಆಹಾರ ದಾನ–ಈ ಏಳು ಕ್ಷೇತ್ರಗಳಿಗೆ ಶ್ರಾವಕನಾದವನು ತನ್ನ ನ್ಯಾಯಾರ್ಜಿತ ಸಂಪತ್ತನ್ನು ವ್ಯಯ ಮಾಡುತ್ತಾ ಆತ್ಮ ಕಲ್ಯಾಣದ ಹಾದಿಯಲ್ಲಿ ನಡೆಯಬೇಕು[೭] ಎನ್ನುವ ಜೈನ ನೀತಿ ಸಂಹಿತೆಯ ಆಶಯಗಳು ಬಸದಿಗಳ ನಿರ್ಮಾಣಕ್ಕೆ ಪ್ರೇರೇಪಿಸಿದವು. ಉತ್ತರ ಭಾರತದ ಆಚಾರ್ಯರಾದ ನರೇಂದ್ರಸೇನರು (೧೧ನೆಯ ಶತಮಾನ) ತಮ್ಮ 'ಸಿದ್ಧಾಂತ ಸಾರಸಂಗ್ರಹ' ದಲ್ಲಿ ಜಿನಮಂದಿರಗಳನ್ನು ಕಟ್ಟಿಸುವುದು ಹಿಂಸೆಗೆ ಕಾರಣವಾಗುವುದೇ ಎಂಬ ಪ್ರಶ್ನೆಗೆ ಈ ರೀತಿ ಉತ್ತರ ನೀಡಿದ್ದಾರೆ.

**ಯದ್ಯ ಪ್ರಾರಂಭತೋ ಹಿಂಸಾಯಾಃ ಪಾಪ ಸಂಭವಃ**
**ತಥಾಪ್ಯತ್ಯ ಕೃತಾರಂಭೋ ಮಹತ್ಪುಣ್ಯಂ ಸಮಶ್ನುತೇ**
**ನಿರಾಲಂಬನ ಧರ್ಮಸ್ಯ ಸ್ಥಿತಿರ್ಯಸ್ಮಾತ್ತತಃ ಸತಾಮ್।**
**ಮುಕ್ತಿ ಪ್ರಸಾದ ಸೋಪಾನ ಮಾಪ್ತೈರು ಕ್ತೋ ಜಿನಾಲಯಃ ॥**[೮]

"ಆರಂಭ ಒಂದರಿಂದ ಪ್ರಾಣಿಗಳಿಗೆ ಹಿಂಸೆಯಾಗುತ್ತದೆ. ಹಿಂಸೆಯಿಂದ ಪಾಪ ಬರುತ್ತದೆ. ಆದರೂ ಕೂಡ ಜಿನಮಂದಿರಗಳನ್ನು ಕಟ್ಟಿಸುವಲ್ಲಿ ಆರಂಭದಿಂದ ಮಹಾಪುಣ್ಯವು ಪ್ರಾಪ್ತಿಯಾಗುತ್ತದೆ. ಇಲ್ಲಿ ಯಾವುದೇ ಜೀವಿಗಳನ್ನು ಹಿಂಸೆ ಮಾಡಬೇಕೆಂಬ ಸಂಕಲ್ಪವಿರುವುದಿಲ್ಲ. ಜಿನಧರ್ಮದ ಸ್ಥಿತಿಯು ಜಿನ ಮಂದಿರವಿರದೆ ಇರಲಾರದು. ಅಲ್ಲದೆ ಜಿನ ಮಂದಿರಗಳು ಮುಕ್ತಿ ಸೌಧಕ್ಕೆ ಹತ್ತು ಮೆಟ್ಟಿಲುಗಳಂತಿವೆ. ಆದ್ದರಿಂದ ಜಿನಮಂದಿರವನ್ನು ಕಟ್ಟಿಸಬೇಕು." ನೇಮಿಚಂದ್ರಚಾರ್ಯರು 'ಗೊಮ್ಮಟ ಸಾರ'ದಲ್ಲಿ ಹೇಳಿದಂತೆ

**ಅರಹಂತ ಸಿದ್ಧ ಸಾಹುತಿದಯಂ ಜಿಣಧಮ್ಮವಯಣ ಪಡಿಮಾ ಹೂ।**
**ಜಿಣಣಿಲಯಾ ಇದಿ ಏದೇ ಣವದೇವಾ ದಿಂದು ಮೇ ಬೋಹಿಂ॥**

ಅರಿಹಂತ, ಸಿದ್ಧ, ಆಚಾರ್ಯ ಉಪಾಧ್ಯಾಯ, ಸರ್ವಸಾಧು, ಜಿನಧರ್ಮ, ಜಿನವಚನ, ಜಿನಪ್ರತಿಮೆ ಮತ್ತು ಜಿನಮಂದಿರ ಈ ಒಂಬತ್ತು ದೇವತೆಗಳು ಜಿನಧರ್ಮದಲ್ಲಿ ಪೂಜಾರ್ಹವಾದವು. ಅರಿಹಂತನ ಪ್ರತಿಮೆಯಲ್ಲಿಯೇ ಇವೆಲ್ಲವೂ ಇವೆಯೆಂದು ಗ್ರಹಿಸಿ ಅರಿಹಂತನ ಮೂರ್ತಿಯನ್ನು ಮತ್ತು ಆ ಅರಿಹಂತನು ವಿರಾಜಮಾನವಾಗಿರುವ ಬಸದಿಗಳನ್ನು ಪೂಜ್ಯನೀಯ ಸ್ಥಾನಗಳೆಂದು, ಪುಣ್ಯ ಸ್ಥಾವರಗಳೆಂದು ಗ್ರಹಿಸುವುದು ಜೈನ ಸಮುದಾಯದಲ್ಲಿ ಪರಿಪಾಠ.

ಬಸದಿಗಳಲ್ಲಿ ತೀರ್ಥಂಕರರು ಮುಖ್ಯ ಆರಾಧ್ಯ ದೈವವಾಗಿದ್ದರೂ ಕಾಲಾಂತರದಲ್ಲಿ ಅನ್ಯಮತಗಳ ಪ್ರಭಾವದಿಂದಾಗಿ ಉಕ್ಷ ಮತ್ತು ನಾಗರ ಮುಖ್ಯಸ್ಥರನ್ನು ತೀರ್ಥಂಕರರ ಶಾಸನ ದೇವತೆಗಳ ಮುಖ್ಯಸ್ಥರನ್ನಾಗಿ ಮಾಡಿ ಅವರಿಗೆ ಜೈನ ಮಂದಿರ ಮತ್ತು ಬಸದಿಗಳಲ್ಲಿ ಸ್ಥಾನವನ್ನು ಕಲ್ಪಿಸಲಾಯಿತು. ವ್ಯಂತರದೇವ ದೇವಿಯರು, ಕ್ಷೇತ್ರಪಾಲಕರು ಜೈನ ನಿಯಮಗಳಿನುಸಾರ ಪೂಜನೀಯರಲ್ಲ. ಕ್ಷೇತ್ರಪಾಲ ಮತ್ತು ಅರಿಹಂತರನ್ನು ಸಮಾನರೆಂದು ಭಾವಿಸಿದರೆ ಅದು ಕೆಲವು ಮೂಢ ಜನರ ಅಜ್ಞಾನವೆಂದು ಜೈನಶಾಸ್ತ್ರಗಳು ಸಾರಿದಾಗಲೂ

**ವರೋಪಲಿಪ್ಸಯಾಶಾವಾನ್ ರಾಗದ್ವೇಷ ಮಲೀಮಸಾಃ।**
**ದೇವತಾ ಯದು ಪಾಸೀತ ದೇವತಾ ಮೂಢ ಮುಚ್ಯತೆ ॥**[8]

ಐಹಿಕ ಸುಖದ ಅಪೇಕ್ಷೆಯನ್ನು ಹೊತ್ತು ರಾಗದ್ವೇಷಗಳಿಂದ ಕೂಡಿದ ದೇವತೆಯ ಉಪಾಸನೆಯನ್ನು ಮಾಡುವುದು ದೇವತಾ ಮೂಢತೆಯೆಂದು ಜೈನಶಾಸ್ತ್ರಗಳು ಪ್ರತಿಭಟಿಸಿದಾಗಲೂ ಲೌಕಿಕ ಸಹಾಯಕ್ಕಾಗಿ ಜಿನನನ್ನು ಆರಾಧಿಸುವುದು ಜೈನತತ್ವಕ್ಕೆ ವಿರೋಧವೆಂದಾಗಲೂ, ಅನ್ಯಧರ್ಮಗಳ ಸೆಳೆತ ಮತ್ತು ಅನುಕರಣೆಗಳಿಂದಾಗಿ ಲೌಕಿಕ ಆಸಕ್ತಿ, ಅಭಿಲಾಷೆಗಳನ್ನು ಪೂರೈಸುವ ಶಕ್ತಿಯುಳ್ಳವೆಂದು ನಂಬಲಾದ ಪದ್ಮಾವತಿ, ಜ್ವಾಲಾಮಾಲಿನಿ, ಕೂಷ್ಮಾಂಡಿನಿ ಮೊದಲಾದ ಪರಿವಾರ ದೇವತೆಗಳನ್ನು ಶಾಸನ ದೇವತೆಗಳ ಮಟ್ಟಕ್ಕೆ ಏರಿಸಲಾಯಿತು. ಅಲ್ಲದೆ ಹಿಂದೂ ಧರ್ಮದ ಪ್ರಭಾವದಿಂದ ಬಸದಿಗಳಲ್ಲಿ ಅಷ್ಟವಿಧಾರ್ಚನೆ, ಹೋಮಗಳು, ನೃತ್ಯಗಳು ಮುಂತಾದ ಆಡಂಬರದ ಆಚರಣೆಗಳು ಮುಂದುವರಿದವು.

**ಜಿಹೋಬ್ಬಿನ ಸೋಡರಿಂ ಚರುವಿಂ।**
**ಚಿಬ್ಬುಂ ಬೊಯ್ದೆಲೆಯಿನರಿ ನಕ್ಷತೆಯಿಂ ಮ॥**
**ಚ್ಚುಬ್ಬರಿಸಿ ಗಿನನರನರ್ಚಿಸಿ**
**ನಿಬ್ಬರ ಮಾಗಿರ್ದ ನರಕ ಗತಿಯೊಳ್ ಬೀಟಿ**[10]

ಜೈನರಲ್ಲಿ ಮೂರ್ತಿಪೂಜೆ ನಿಷಿದ್ಧವೆಂದು, ದೀಪ, ಧೂಪ, ನೈವೇದ್ಯ, ಪತ್ರ ಪುಷ್ಪಾಕ್ಷತೆಗಳಿಂದ ಪೂಜಿಸಿದರೆ ನರಕಪ್ರಾಪ್ತಿ ಎಂದು ಹೇಳಲಾಗಿದೆಯಾದರೂ "ಎಲ್ಲಿಯವರೆಗೆ ಅನ್ನಮತಾಚಾರಗಳು ಜೈನಧರ್ಮದ ಮೂಲ ತತ್ತ್ವಗಳಿಗೆ ಅಡ್ಡಿಬರುವುದಿಲ್ಲವೋ ಅಲ್ಲಿಯವರೆಗೆ ಅವುಗಳ ಆಚರಣೆಯಲ್ಲಿ ಅಭ್ಯಂತರವಿಲ್ಲ" ಎಂಬುದಾಗಿ ಸೋಮದೇವಸೂರಿ ಇಂತಹ ಆಚರಣೆಗಳಿಗೆ ಒಪ್ಪಿಗೆಯನ್ನು ಸೂಚಿಸುತ್ತಾನೆ.[11] ಅಲ್ಲದೆ ಜೈನ ಗೃಹಸ್ಥರು ಬೇಕಾದರೆ ವೈದಿಕಪರವಾದ ಪಂಚಯಜ್ಞಗಳನ್ನು ಮಾಡಬಹುದೆಂಬುದಾಗಿ[12] ಸಮ್ಮತಿಸುವಲ್ಲಿ ಎರಡು ಕಾರಣಗಳು ಮುಖ್ಯವೆನಿಸುತ್ತವೆ. ವೈದಿಕ ಸಂಸ್ಕೃತಿಯೊಂದಿಗೆ ರಾಜಿಯಾಗುವ ಮನಸ್ತತ್ವದೊಂದಿಗೆ ತಾನು ಅದರಂತೆ ಉಚ್ಚ ದರ್ಜೆಯಲ್ಲಿ ಗೌರವಿಸಲ್ಪಡಬೇಕೆಂಬ ಇತ್ತೀಚಿನ ಧೋರಣೆ ಒಂದು ಕಾರಣವಾದರೆ, ಎರಡನೆಯದಾಗಿ ಅನ್ಯ ಸಂಪ್ರದಾಯಿಕ ಆಚರಣೆಗಳನ್ನು ಮತ್ತು ಆ ಆಚರಣೆಗಳಲ್ಲಿಯ ವಿಜೃಂಭಣೆ ಸೆಳೆತಕ್ಕೆ ಒಳಗಾಗಿ ಅಂತಹ ಆಚರಣೆಗಳಿಂದ ಒದಗಬಹುದೆಂದುಕೊಂಡ ಮಾನಸಿಕ ನೆಮ್ಮದಿಗಾಗಿ ತುಡಿತ ಮತ್ತು ಲೌಕಿಕ ಫಲಾಪೇಕ್ಷೆಗಳು ಆ ಮೂಲಕ ಈಡೇರಬಲ್ಲವೆಂಬ ನಂಬಿಕೆಯಿಂದ ಅದರತ್ತ ವಾಲುತ್ತಿರುವ ತನ್ನವರನ್ನು ತನ್ನಲ್ಲಿಯೆ ಅಂತಹಾಚರಣೆಗಳನ್ನು ಅಳವಡಿಸುವ ಮೂಲಕ ಹಿಡಿದಿಡುವ ಪ್ರಯತ್ನ ಇನ್ನೊಂದು ಕಾರಣ. ಇದು ಎಲ್ಲಿಯವರೆಗೆ ಹೋಯಿತೆಂದರೆ ಪಾಯಣವರ್ಣಿಯ ಕಾಲಕ್ಕಾಗಲೇ "ಯಜ್ಞದಿಂದ ದೇವೇಂದ್ರ ಪದವಹುದು" ಎಂದು ಸಾರಲಾಯಿತು.

ಹೀಗೆ ಕಾಲಾಂತರದಲ್ಲಿ ಬದಲಾದ ಧೊರಣೆಗಳಿಗನುಗುಣವಾಗಿ ಜೈನಾಚಾರ್ಯರು ಬಸದಿಗಳ ನಿರ್ಮಾಣಕ್ಕೆ ಮತ್ತು ಕಾರ್ಯ ಚಟುವಟಿಕೆಗಳಿಗೆ ಶಾಸ್ತ್ರಬದ್ಧ ಚೌಕಟ್ಟನ್ನು, ಧಾರ್ಮಿಕ ಹಿನ್ನೆಲೆಯನ್ನು ಒದಗಿಸಿಕೊಟ್ಟರು ಆ ಮೂಲಕ ಕರ್ನಾಟಕದ ಬಸದಿಗಳ ನಿರ್ಮಾಣಕ್ಕೆ ಪ್ರೇರಕರಾದರು.

ಜೈನಾಚಾರ್ಯರು ಮತ್ತು ಬಸದಿಗಳು ಒಂದೇ ನಾಣ್ಯದ ಎರಡು ಮುಖಗಳು. ಪ್ರತಿಯೊಂದು ಬಸದಿಯ ಚರಿತ್ರೆಯಲ್ಲಿಯೂ ಒಬ್ಬ ಜೈನಾಚಾರ್ಯನು ಇದ್ದೇ ಇರುತ್ತಾನೆ. ಬಸದಿಗಳಲ್ಲಿ ವಾಸಿಸುವ ಜೈನಾಚಾರ್ಯರು ಅದರ ಒಟ್ಟಾರೆ ಪ್ರಗತಿಗೆ ಪೋಷಣೆಗೆ ಕಾರಣರಾದರು. ಬಸದಿಯಲ್ಲಿಯ ಸಾಂಘಿಕ ಚಟುಚಟಿಕೆಗಳ ಮೂಲಕ ಆಚಾರ್ಯರು ತಾವೂ ಬೆಳೆದರು. ಬಸದಿಗಳನ್ನು ಬೆಳೆಸಿದರು. "ಬಸದಿಗಳು ಜೈನಧರ್ಮದ ಸಂಘಟನೆಯಲ್ಲಿ ಗಣನೀಯ ಪಾತ್ರವಹಿಸಿವೆ. ಜೈನ ಸಮಾಜಕ್ಕೆ

ಸಾಂಸ್ಥಿಕ, ಸಾಂಘಿಕ ಸ್ವರೂಪ ಕೊಡುವುದಕ್ಕೂ ಈ ಚೈತ್ಯಾಲಯಗಳು ಕಾರಣವಾದವು. ಧಾರ್ಮಿಕ, ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಬಸದಿಗಳು ಕೇಂದ್ರ ಬಿಂದುಗಳು. ಬಸದಿಗಳು ಮತ್ತು ಜೈನಾಚಾರ್ಯರು ಪರಸ್ಪರಾವಲಂಬಿಗಳಾಗಿ ಪೂರಕ, ಪ್ರೇರಕ, ಪೋಷಕರಾಗಿದ್ದುದನ್ನು ಗಂಗರ ಪ್ರಾಚೀನ ಶಾಸನಗಳು ಪ್ರುತಪಡಿಸಿವೆ. ಅವಿನಾಭಾವ ಸಂಬಂಧ ಇರುವ ಕಾರಣಕ್ಕಾಗಿ ಬಸದಿ ಮತ್ತು ಜೈನಾಚಾರ್ಯರನ್ನು ಒಟ್ಟಿಗೆ ಪರಿಗಣಿಸುವ ಪದ್ಧತಿ ರೂಢಿಗೆ ಬಂದಿದೆ. ಪ್ರಸಿದ್ಧ ಆಚಾರ್ಯಸಂಘ ಚಾತುರ್ಮಾಸಕ್ಕಾಗಿ ನಾನಾ ಬಸದಿಗಳಲ್ಲಿ ನೆಲೆ ನಿಂತಾಗಲಂತೂ ಜಿನಾಲಯಗಳು ಚಟುವಟಿಕೆಯ ಜನಾಲಯಗಳಾಗುತ್ತಿದ್ದವು".[೧೩] ಹೊಯ್ಸಳರ ಕಾಲವೊಂದರಲ್ಲಿಯೇ ನೂರಕ್ಕೂ ಹೆಚ್ಚು ಬಸದಿಗಳ ವಿವರ ದೊರೆಯುವುದನ್ನು ನೋಡಿದರೆ ಆ ಕಾಲಕ್ಕೆ ಹೊಸ ಬಸದಿಗಳ ನಿರಂತರ ನಿರ್ಮಾಣ ಮತ್ತು ಬಸದಿಗಳ ಯಶಸ್ಸಿನ ಕ್ರಿಯಾಶೀಲ ಕಾರ್ಯಚಟುವಟಿಕೆಗಳನ್ನು ಊಹಿಸಬಹುದು.

ಬಸದಿಗಳ ನಿರ್ಮಾಣ ಕಾರ್ಯದಲ್ಲಿ ಆಚಾರ್ಯರು ಪ್ರಮುಖ ಪಾತ್ರ ವಹಿಸುತ್ತಿದ್ದರು. ಬಸದಿಗಳನ್ನು ಕಟ್ಟಿಸಲಾರಂಭಿಸುವ ಮುನ್ನ ಆಚಾರ್ಯರ ಕೈಯಲ್ಲಿ ಕಲ್ಲನಿಕ್ಕಿಸಿದ್ದಕ್ಕೆ ನೂರಾರು ಶಾಸನಗಳು ಸಾಕ್ಷಿಯಾಗಿವೆ. ಚಟ್ಟಲದೇವಿ ಪೊಂಬುಚ್ಚದಲ್ಲಿ ಪಂಚಕೂಟ ಬಸದಿಯನ್ನು ಮಾಡಿಸಲು ಆರಂಭಿಸಿದಾಗ ಶ್ರೇಯಾಂಸ ಪಂಡಿತರು ಶ್ರೀ ವಿಜಯದೇವರ ನಾಮೋಚ್ಚಾರಣೆಯನ್ನು ಮಾಡಿ "ಉರ್ವಿ ತಿಳಕಮೆನಿಸಿದ ಪಂಚವಸದಿಗೆ ಸುಭ ಮುಹೂರ್ತದೊಳಾ ಚಂದ್ರಾರ್ಕ ಸ್ಥಾಯಿಯಪ್ಪಂ ತುಸ್ನತಮಪ್ಪೆದೆಯೊಳ್ ಕೆಸರ್ಕಲ್ಲಿಕ್ಕಿಸಿದರ್" ಎಂದು ನಿರೆಯ(೩೬) ಕ್ರಿ.ಶ. ೧೦೭೭ ರ ಶಾಸನವೊಂದು ತಿಳಿಸುತ್ತದೆ.

ನಿಜ ವಿಭವೊದಯಂ ಸಫಪಮಾಯ್ತೆನೆ ಜಿನೇಂದ್ರ ಗೇಹಗಳನ್ನು ಒಂದಕ್ಕೊಂದು ಮಿಗಿಲೆನಿಸಿ ವರ್ಗಭೇದ, ಲಿಂಗಭೇದವಿಲ್ಲದೆ ಜೈನ ಸಮಾಜದ ಎಲ್ಲ ವರ್ಗವೂ ಬಸದಿಗಳ ನಿರ್ಮಾಣಕ್ಕೆ ಕೈಹಾಕಿದೆ. ಕ್ರಿ.ಶ. ೧೦-೧೧ ನೆಯ ಶತಮಾನದಲ್ಲಿ ಬಸದಿಗಳ ನಿರ್ಮಾಣ ಕಾರ್ಯ ಎಷ್ಟು ಭರದಿಂದ ನಡೆದಿತ್ತೆಂಬುದಕ್ಕೆ ಕ್ರಿ.ಶ. ೧೧೩೧ರ ಶಾಸನವೊಂದು ಹೊಯ್ಸಳ ವಿನಯಾದಿತ್ಯನಿಂದ ನಡೆದ ಬಸದಿಗಳ ನಿರ್ಮಾಣದ ಕಾರ್ಯ ಚಟುವಟಿಕೆಗಳ ಕುರಿತು ಈ ರೀತಿ ಹೇಳಿದೆ.

**ಇಟ್ಟಿಗೆಗೆಮದದಲ್ದ ಕುಳಿಗಳ್ಕೆರೆಯಾದವು ಕಲ್ಲುಗೊಣ್ಡಪೆ**
**ರ್ವ್ವೆಟ್ಟು ಧರಾತಳಕ್ಕೆ ಸರಿಯಾದವು ಸುಣ್ಣದ ಬಂಡಿ ಬಂದಪೆ**
**ರ್ವ್ವಟ್ಟೆಯ ಪಳ್ಳ ಮಾದುವೆನೆ ಮಾಡಿಸಿದಂ ಜಿನಾರಾಗೇಹಮಂ**
**ನೆಟ್ಟನೆ ಪೊಯ್ಸಳೇಸನೆನೆ ಬಣ್ಣಿಪ ರಾರ್ಮ್ಮತಿ ರಾಜ ರಾಜನಂ[೧೪]**

ಹೀಗೆ ರಾಜರು, ಸಾಮಂತರು, ಚಕ್ರವರ್ತಿಗಳು, ವ್ಯಾಪಾರಿಗಳು, ರಾಣಿಯರು, ಶ್ರೀಮಂತ ಮಹಿಳೆಯರು ಮುಂತಾದವರು ಕಟ್ಟಿಸಿದ ನೂರಾರು ಬಸದಿಗಳನ್ನು ಕುರಿತ ಶಾಸನಗಳು, ಉಳಿದು ಬಂದಿರುವ ಬಸದಿಗಳು ಪುರಾವೆಗಳನ್ನು ಒದಗಿಸುತ್ತವೆ. ಅದರಲ್ಲಿ ಪ್ರಮುಖವಾಗಿ ಜೈನಾಚಾರ್ಯರು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಹೇಗೆ ಪ್ರೇರಕರಾದರೆಂಬುದು ಇಲ್ಲಿ ಗಮನಿಸಬೇಕಾದ ಅಂಶ. ಒಂದು ಬಸದಿಯ ನಿರ್ಮಾಣದ ಹಂತದಿಂದ ಹಿಡಿದು ಪ್ರತಿಷ್ಠಾಮಹೋತ್ಸವದ ನಂತರ ಅದರಲ್ಲಿ ನೆಲೆನಿಂತು ಅದಕ್ಕೆ ಒಂದು ಸಾಂಸ್ಥಿಕ ಸ್ವರೂಪವನ್ನು ಕೊಡುವ ನಿಟ್ಟಿನಲ್ಲಿ ಜೈನಾಚಾರ್ಯರ ಪರಿಶ್ರಮದೊಡ್ಡದು.

ಪ್ರಾಚೀನ ಮುನಿಗಳು ಜಂಗಮ ತೀರ್ಥರು ಜೈನಶಾಸ್ತ್ರಗಳ ನಿಯಮದಂತೆ "ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಂ ಎಂಬಿ ನ್ಯಾಯದಿಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣ ಮುಖಗಳಲ್ಲಿ"[೧೫] ಸಂಚರಿಸುತ್ತಾ ಸಾಧನೆಯಲ್ಲಿ ತೊಡಗಿರುತ್ತಿದ್ದರು. ಉದ್ಯಾನಗಳು, ಗವಿಗಳು, ಅಡವಿಗಳೇ ಅವರ ವಾಸಸ್ಥಾನವಾಗಿದ್ದವು. ಆಹಾರಕ್ಕಾಗಿ ಮಾತ್ರ ಊರಲ್ಲಿ ಬರುತ್ತಿದ್ದರು. ಕಾಲಾಂತರದಲ್ಲಿ ನಿರ್ಜನ ಪ್ರದೇಶಗಳನ್ನು ಬಿಟ್ಟು ಊರಲ್ಲಿ ವಾಸಿಸಲು ಪ್ರಾರಂಭಿಸಿದರು. ಮುನಿಗಳು ಊರಲ್ಲಿ ಸೇರಿಕೊಳ್ಳುತ್ತಿರುವುದನ್ನು ಕಂಡು ಗುಣಭದ್ರನು ಆತ್ಮಾನುಶಾಸನದಲ್ಲಿ "ರಾತ್ರಿಯಲ್ಲಿ ಎಲ್ಲ ಕಡೆಯ ಮೃಗಗಳೂ ಹೆದರಿ ಊರ ನೆಲೆಯಲ್ಲಿ ಬಂದು ವಾಸಿಸುತ್ತವೆ. ಅವುಗಳಂತೆ ಈ ಕಾಲದ ತಪಸ್ವಿಗಳು ಕೂಡ ಕಾಡನ್ನು ಬಿಟ್ಟು ಊರಲ್ಲಿ ವಾಸಿಸುತ್ತಾರೆ. ಇದು ದುಃಖದ ಸಂಗತಿಯಾಗಿದೆ." ಎಂದು ಖೇದವನ್ನು ವ್ಯಕ್ತಪಡಿಸುತ್ತಾನೆ. ಶಿವಕೋಟಿಯ ಕಾಲಕ್ಕೆ ಜಿನಮಂದಿರಗಳಲ್ಲಿ ವಾಸಿಸುವ ನಿಯಮವನ್ನು ಮಾಡಲಾಯಿತು.[೧೬] ಈ ನಿಯಮ ಕಾಲಾಂತರದಲ್ಲಿ ಶ್ವೇತಾಂಬರ ಪಂಥದ ಚೈತ್ಯವಾಸಿ ಪಂಥಕ್ಕೆ ಕಾರಣವಾಯಿತು. ದಿಗಂಬರ ಸಂಪ್ರದಾಯದಲ್ಲಿ ಇದು ಕಾಣದೇ ಹೋದರೂ

ಚಾತುರ್ಮಾಸ ಕಾಲದಲ್ಲಿ ಒಂದೆಡೆ ತಂಗುವ ನಿಯಮವಂತು ಇದ್ದಿತು. ಇದು ಮುಂದೆ ಬಸದಿಗಳ ಬೆಳವಣಿಗೆಗೆ ಮತ್ತು ಇತರ ಕಾರ್ಯ ಚಟುವಟಿಕೆಗಳಿಗೆ ನಾಂದಿ ಹಾಡಿತು.

ಕುಂದಕುಂದರ ಪೂರ್ವ ಮತ್ತು ಉತ್ತರ ಕಾಲೀನ ಅಂದರೆ ಅಕಲಂಕನವರೆಗಿನ ಆಚಾರ್ಯರು ಬಸದಿಗಳ ಬಗ್ಗೆ ಅಷ್ಟು ಗಂಭೀರವಾಗಿ ಪರಿಗಣಿಸಿದಂತೆ ಕಾಣುವುದಿಲ್ಲ. ಆದರೆ ತೀರ್ಥಸ್ವರೂಪಿ ತೀರ್ಥಂಕರ ಮೂರ್ತಿಗಳು, ಆರಾಧ್ಯ ದೈವಗಳು ಶಾಸ್ತ್ರ ಸಮ್ಮತಿಯೊಂದಿಗೆ ಆಕಾರ ಪಡೆದುಕೊಳ್ಳುತ್ತಿದ್ದಂತೆ ಮೂರ್ತಿಪೂಜೆ ಮತ್ತು ಸಾರ್ವಜನಿಕ ಮೂರ್ತಿಪೂಜೆಗಾಗಿ ಬಸದಿಗಳು ನೂರಾರು ಸಂಖ್ಯೆಯಲ್ಲಿ ನಿರ್ಮಾಣಗೊಂಡವು. ಮತ್ತು ಅವು ಜೈನ ಸಾಂಘಿಕ ಬದುಕಿನ ಅನಿವಾರ್ಯ ಘಟಕಗಳಾದವು. ತೀರ್ಥಂಕರ ಮೂರ್ತಿದರ್ಶನ, ಬಸದಿಯ ಪ್ರದಕ್ಷಿಣೆ ಇಲ್ಲದೆ ಊಟ ಮಾಡಲಾಗದೆನ್ನುವಷ್ಟು ಧಾರ್ಮಿಕ ಪ್ರವೃತ್ತಿ ಜೈನ ಸಮುದಾಯದಲ್ಲಿ ಬೆಳೆಯಿತು.

ಬಸದಿಗಳಲ್ಲಿ ಬಹುತೇಕ ತೀರ್ಥಂಕರ ಮೂರ್ತಿಗಳು ಮೂಲ ಸ್ಥಾನದಲ್ಲಿರುತ್ತವೆ, ಪೂಜೆಗೊಳ್ಳುತ್ತವೆ. ಆದಿನಾಥ, ಚಂದ್ರಪ್ರಭ, ಶಾಂತಿನಾಥ, ಪಾರ್ಶ್ವನಾಥ, ಸುಪಾರ್ಶ್ವನಾಥ, ವರ್ಧಮಾನರ ಹೆಸರಿನಲ್ಲಿ ಕಟ್ಟಿಸಿದ ಬಸದಿಗಳೇ ಕರ್ನಾಟಕದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಮತ್ತು ಈ ತೀರ್ಥಂಕರರ ಚರಿತ್ರೆಗಳೇ ಜನಮನದಲ್ಲಿ, ಸಾಹಿತ್ಯದಲ್ಲಿ ಹೆಚ್ಚು ಪ್ರಚಾರದಲ್ಲಿವೆ. ಅದಕ್ಕೆ ಚಾರಿತ್ರಾತ್ಮಕ ಕಾರಣಗಳು ಅನೇಕ.

ಚೈತ್ಯದರ್ಶನವಿಲ್ಲದ ಸ್ಥಳಗಳಲ್ಲಿ ಉತ್ತಮ ಶ್ರಾವಕರು ಇರಕೂಡದೆಂಬ ವಿಚಾರಗಳು[೭] ಜೈನ ಸಮುದಾಯದಲ್ಲಿ ಗಾಢವಾಗುತ್ತಾ ನಡೆದಂತೆ ಬಸದಿಗಳ ನಿರ್ಮಾಣವೂ ಅದಕ್ಕೆ ಪ್ರಾಮುಖ್ಯತೆಯೂ ಹೆಚ್ಚಿತು. ಬಸದಿಗಳ ಹೆಸರುಗಳನ್ನು ಗಮನಿಸಿದಲ್ಲಿ ಅವು ವ್ಯಕ್ತಿಸೂಚಕ, ಗಣಗಚ್ಛ ಸೂಚಕಗಳ ರೂಪದಲ್ಲಿ ಚಲಾವಣೆಯಲ್ಲಿದ್ದುದರ ಜೊತೆಗೆ ಬಸದಿಗಳ ಹಿನ್ನೆಲೆಯನ್ನು ನಿರ್ದೇಶಿಸುತ್ತಾ ನಾಮಾಂಕಿತಗೊಂಡಿದ್ದು ಅಂತಹ ಹೆಸರಿನಲ್ಲಿಯೇ ಬಸದಿಗಳು ಪ್ರಚಲಿತಗೊಂಡಿರುವುದನ್ನು ಗಮನಿಸಬಹುದು.

ಹೀಗೆ ರೂಪುಗೊಂಡ ಬಸದಿಗಳಿಗೆ ಜೈನಾಚಾರ್ಯರೇ ಮೇಲ್ವಿಚಾರಕರಾಗಿರುತ್ತಿದ್ದರು. ಬಸದಿಗಳ ನಿರ್ವಹಣೆಯೊಂದಿಗೆ ಹುಟ್ಟಿಕೊಂಡ ಪಾಠಶಾಲೆಗಳು, ಮಠಗಳು, ದಾನಶಾಲೆಗಳು, ನೃತ್ಯಶಾಲೆಗಳು, ಗ್ರಂಥಭಂಡಾರಗಳು, ವಿದ್ಯಾರ್ಥಿ ನಿವೇಶನಗಳು, ಉಪಾಶಯಗಳು, ಆರ್ಯಆರ್ಯಿಕಾ ನಿವೇಶನಗಳು, ಪರಿವಾರಿಕಾ ನಿವೇಶನಗಳು ಮುಂತಾದವುಗಳೆಲ್ಲವೂ ಜೈನಾಚಾರ್ಯರ ಒಡೆತನಕ್ಕೆ ಸೇರಿರುತ್ತಿತ್ತು. ಈ ಬಸದಿ ಕ್ಷೇತ್ರಗಳ ನಿರ್ವಹಣೆಯನ್ನು ನೋಡಿಕೊಳ್ಳುತ್ತಿದ್ದ ಆಚಾರ್ಯರನ್ನು ಮಂಡಲಾಚಾರ್ಯ, ಮಹಾಮಂಡಲಾಚಾರ್ಯ, ಸ್ಥಾಪಾನಾಚಾರ್ಯ, ಪ್ರಧಾನಾಚಾರ್ಯ ಎಂದು ಕರೆಯುತ್ತಿದ್ದರು.

ಚಾತುರ್ಮಾಸ ಸಂದರ್ಭದ ಪೂಜೆಗಳಿಗೆ, ಧಾರ್ಮಿಕ ಕಾರ್ಯಗಳಿಗೆ ಜಿನಾಲಯಗಳೇ ಕೇಂದ್ರಗಳು. ಕಾರ್ತೀಕ ಪೂಜೆ, ಶಿವರಾತ್ರಿ, ಜೀವದಯಾಷ್ಟಮಿ, ಯುಗಾದಿ, ಶ್ರುತಪಂಚಮಿ, ಶ್ರಾವಣಮಾಸದ ಕ್ಷೀರಾಭಿಷೇಕ, ಅಷ್ಟಾನಿಕ ದಶಲಕ್ಷಣ ಪೂಜೆ ಮುಂತಾದುವೆಲ್ಲಾ ಬಸದಿಗಳಲ್ಲಿಯೇ ನಡೆಯುತ್ತಿದ್ದು ಈ ಪರ್ವದಿನಗಳಿಗಾಗಿ ದಾನ ಬಿಟ್ಟದ್ದಕ್ಕೆ ಶಾಸನಗಳಲ್ಲಿ ಅನೇಕ ಉದಾಹರಣೆಗಳು ದೊರೆಯುತ್ತವೆ. ಹಾಗೆ ನೋಡಿದರೆ ಸಾಮಾಜಿಕ ಸ್ವರೂಪದ ಎಲ್ಲ ಆಶಯಗಳಿಗನುಗುಣವಾಗಿ ಬಸದಿಗಳು ಕಾರ್ಯನಿರ್ವಹಿಸುತ್ತಿದ್ದವು. ಆಚಾರ್ಯರ ಕೃತಿಗಳೆಲ್ಲವೂ ಬಸದಿಗಳಲ್ಲಿಯೇ ಹುಟ್ಟಿಕೊಂಡಿವೆ. ಶ್ರಾವಕರೂ ಸಹ ಕಾವ್ಯಗಳನ್ನು, ಶಾಸ್ತ್ರಗ್ರಂಥಗಳನ್ನು ಬಸದಿಗಳಲ್ಲಿಯೇ ಕುಳಿತು ಬರೆದುದಕ್ಕೆ ಹೇರಳ ಉದಾಹರಣೆಗಳು ದೊರೆಯುತ್ತವೆ. ಧವಳತ್ರಯದಂತಹ ಮಹಾನ್ ಗ್ರಂಥಗಳು ಒಂದು ಕಾಲಕ್ಕೆ ಬಸದಿಗಳಲ್ಲಿಯೇ ಸಂರಕ್ಷಿಸಲ್ಪಟ್ಟವೆಂಬುದನ್ನು ಮರೆಯುವಂತಿಲ್ಲ.

ಅದೇ ರೀತಿಯಲ್ಲಿ ಸಮುದಾಯ ಸಂಘಟನೆಯಲ್ಲಿ, ಧರ್ಮಪ್ರಚಾರದಲ್ಲಿ ಪ್ರತ್ಯೇಕ ಸಾಂಸ್ಕೃತಿಕ ವಲಯವೊಂದನ್ನು ಕಟ್ಟಿಕೊಳ್ಳುವ ನಿಟ್ಟಿನಲ್ಲಿ ಮಹತ್ವಪೂರ್ಣ ಪಾತ್ರವನ್ನು ವಹಿಸಿದ ಬಸದಿಗಳು ಪ್ರಾಚೀನ ಕಾಲದಲ್ಲಿ ಜೈನ ಸಮಾಜಕ್ಕೊಂದು ಸಾಂಘಿಕ, ಸಾಂಸ್ಥಿಕ ಸ್ವರೂಪವನ್ನು ಕೊಡುವಲ್ಲಿ ಯಶಸ್ವಿಯಾದವು.

**ಅಡಿಟಿಪ್ಪಣಿಗಳು**

೧ ಆಪ್ತ ಸ್ಯಾಸನ್ನಿಧಾನೇಪಿ ಪುಣ್ಯಯಾಕೃತಿ ಪೂಜನಾಮ್ ।
ತಾರ್ಕ್ಷಮುದ್ರಾ ನ ಕಿಂ ಕುರ್ಯಾದ್ವಿಷ ಸಾಮರ್ಥ್ಯ ಸೂದನಮ್ ॥ (ಪೂಜ್ಯಪಾದರ ಉಪಾಸಕಾಚಾರ-೭೮)

೨ ಆಲ, ಗಂಧ, ಪುಷ್ಪ, ಧೂಪ, ದೀಪ, ಅಕ್ಷತೆ, ನೈವೇದ್ಯ ಮತ್ತು ತಾಂಬೂಲಾದಿಗಳಿಂದ

೩ Jainism In Early Medieval Karnataka:Ram Bhushan Prasad Singh, P:17

೪ 'ತ್ರಿಲೋಕ ಸಾರ' ಗ್ರಂಥವು ಅಕೃತಿಮಾ ಚೈತ್ಯಾಲಯಗಳ ಸ್ವಾರಸ್ಯಕರ ಅಂಕಿ ಸಂಖ್ಯೆಗಳನ್ನು ನೀಡುತ್ತದೆ. ಕಾಲ್ಪನಿಕವಾದ ಈ ವಿವರಗಳು ವಾಸ್ತವದಲ್ಲಿ ಜಿನಮಂದಿರಗಳ ಬಾಹುಳ್ಯವನ್ನು ಮತ್ತು ಜಿನಪೂಜೆಯ ಅಗತ್ಯವನ್ನು, ಮಹತ್ತ್ವವನ್ನು ವಿಶದಪಡಿಸುತ್ತವೆ. ಈ ಗ್ರಂಥದನುಸಾರ ಅಧೋಲೋಕದಲ್ಲಿ ಏಳುಕೋಟಿ ಎಪ್ಪತ್ತೆರಡು ಲಕ್ಷ(೭,೭೨,೦೦,೦೦೦) ಭವನವಾಸಿ ದೇವರ ಮನೆಗಳಿವೆ. ಅವುಗಳಲ್ಲಿ ಅನೇಕ ಗೃಹಗಳು ಅಸಂಖ್ಯಾತ ಯೋಜನಾ ವಿಸ್ತಾರವಾಗಿವೆ. ಕೆಲವು ಸಂಖ್ಯಾತ ಯೋಜನಾ ವಿಸ್ತಾರವುಳ್ಳವಾಗಿವೆ. ಆ ಒಂದೊಂದು ಮನೆಯಲ್ಲಿಯೂ ಅಸಂಖ್ಯಾತ ಭವನವಾಸೀ ದೇವರಿಂದ ವಂದನೀಯವೆನಿಸುವಂಥ ಒಂದೊಂದು ಜಿನಮಂದಿರ ರೂಪುಗೊಂಡಿವೆ. ಈ ಪ್ರಕಾರ ೭,೭೨,೦೦,೦೦೦ ಜಿನಮಂದಿರಗಳಿವೆ, ಮಧ್ಯಲೋಕದಲ್ಲಿ ಪಂಚಮೇರುವಿನ ಮೇಲೆ ೮೦ ಜಿನಮಂದಿರ, ಗಜದಂತದ ಮೇಲೆ ೨೦, ತುಲಾಚಲದ ಮೇಲೆ ೩೦, ವಿಜಯಾರ್ಧ ಪರ್ವತದ ಮೇಲೆ ೧೭೯, ದೇಕುರು, ಉತ್ತರ ಕುರುಗಳಲ್ಲಿ ೧೦, ವಕ್ಷಾರ ಗಿರಿಯ ಮೇಲೆ ೮೦, ಮಾನುಷೋತ್ತರ ಪರ್ವತದ ಮೇಲೆ ೪, ಇಕ್ಷ್ವಾಕಾರ ಪರ್ವತದ ಮೇಲೆ ೪, ಕುಂಡಲಗಿರಿಯ ಮೇಲೆ ೪, ರುಚಗಿರಿಯ ಮೇಲೆ ೪, ನಂದೀಶ್ವರ ದ್ವೀಪದಲ್ಲಿ ೫೨, ಈ ಪ್ರಕಾರ ಮಧ್ಯಲೋಕದಲ್ಲಿ ೪೫೮ ಮಂದಿರಗಳಿರುತ್ತವೆ. ಊರ್ಧ್ವಲೋಕ, ಸ್ವರ್ಗ, ಅಹಮಿಂದ್ರ ಲೋಕಗಳಲ್ಲಿ ಸೇರಿ ಎಂಬತ್ನಾಲ್ಕು ಲಕ್ಷ ತೊಂಭತ್ತೇಳು ಸಾವಿರದ ಇಪ್ಪತ್ಮೂರು(೮೪,೯೭,೦೨೩) ಚೈತ್ಯಾಲಯಗಳಿವೆ. ವ್ಯಂತರದೇವ ಮತ್ತು ಜ್ಯೋತಿರ್ಲೋಕಗಳಲ್ಲಿ ಅಸಂಖ್ಯಾತ ಜಿನಮಂದಿರಗಳಿರುತ್ತವೆ. ಕೆಲವುಗಳ ಸಂಖ್ಯೆಯನ್ನು ಗಣಿಸಬಹುದು. ಇಂಥವುಗಳೇ ಎಂಟು ಕೋಟಿ ಐವತ್ತಾರು ಲಕ್ಷ ತೊಂಭತ್ತೇಳು ಸಾವಿರದ ನಾಲ್ಕು ನೂರ ಎಂಭತ್ತೊಂದು(೮,೫೬,೯೭,೪೮೧) ಜಿನಮಂದಿರಗಳು ಎಂಬುದಾಗಿ ಅಂಕಿ ಸಂಖ್ಯೆಗಳನ್ನು ನೀಡಲಾಗಿದೆ. [ಉದದೃತ:ಸಮಂತಭದ್ರ ವಿರಚಿತ ರತ್ನಕರಂಡಕ-ಶ್ರಾವಕಾಚಾರ, ಅನು:ಮಿರ್ಜಿ ಅಣ್ಣಾರಾಯ, ಪು.೯೨] ಇದೇ ಗ್ರಂಥದಲ್ಲಿಯೇ ಜಿನಮಂದಿರದ ಸ್ವರೂಪ, ಜಿನಮಂದಿರದ ಬಾಹ್ಯ ಪರಿಕರಗಳು, ಗರ್ಭಗೃಹದ ರಚನೆ, ಮಂದಿರದ ಚಿಕ್ಕ ದ್ವಾರಗಳ ಸ್ವರೂಪ, ಮುಖಮಂಟಪದ ಸ್ವರೂಪ, ಸ್ತೂಪ ಮತ್ತು ಚೈತನ್ಯ ವೃಕ್ಷದ ವರ್ಣನೆ, ತೋರಣದ ವರ್ಣನೆ, ಧ್ವಜದ ವರ್ಣನೆ.... ಮುಂತಾಗಿ ಒಟ್ಟಾರೆ ಬಸದಿಯ ಶಾಸ್ತ್ರಬದ್ಧ ವಾಸ್ತು ಸ್ವರೂಪವನ್ನು ನಿರ್ದೇಶಿಸುತದೆ.

೫ Corpus Of Kadamba Inscriptions, No-24, ಕ್ರಿ.ಶ.೫ನೇ ಶತಮಾನ, ಹಲಸಿ, ಪುಟ:೯೫

೬ ರತ್ನಕರಂಡಕ ಶ್ರಾವಕಾಚಾರ, ಚಾರಿತ್ರಾಧಿಕಾರ ಸೂತ್ರ:೧೧೯,

೭ ಜಿನೇಂದ್ರ ಭವನೋದ್ಧಾರಂ ಪುಸ್ತಕಂ ತಥಾ ।
ಸಂಘಶ್ಚತುರ್ವಿಧಶ್ಚೇತಿ ಸಂಪ್ರೋಕ್ತಂ ಕ್ಷೇತ್ರ ಸಪ್ತಕಂ॥]
ಜೀರ್ಣಂ ಜಿನಗೃಹ ಬಿಂಬ ಪುಸ್ತಕಂ ಶ್ರಾದ್ಧಮೇವವಾ ।
ಉದ್ಧಾರ್ಯ ಸ್ಥಾಪನಂ ಪೂರ್ವ । ಪುಣ್ಯತೋಧಿಕ ಮುಚ್ಯತೇ ॥
(ನೀತಿಸಾರ ಸಮುಚ್ಚಯ)

೮ ಆಚಾರ್ಯ ನರೇಂದ್ರಸೇನ ವಿರಚಿತ ಸಿದ್ಧಾಂತಸಾರ ಸಂಗ್ರಹ: ಡಿ. ಪದ್ಮನಾಭ ಶರ್ಮ, ಭುವನಹಳ್ಳಿ, ಪುಟ:೩೯

೯ ಸಮಂತಭದ್ರ ವಿರಚಿತ ರತ್ನಕರಂಡಕಶ್ರಾವಕಾಚಾರ: ದರ್ಶನಾಚಾರ ಸೂತ್ರ-೨೩.

೧೦ ಜಿನಾಕ್ಷರ ಮಾಲೆ, ೩೭

೧೧ Yashastilaka and Indian culture: K.K. Handiqui, p:332

೧೨ ಅದೇ ಪುಟ: ೩೩೩

೧೩ ಶಾಸನಗಳಲ್ಲಿ ಗಂಗರ ಪ್ರಾಚೀನ ಬಸದಿಗಳು, ಚಂದ್ರಕೊಡೆ, ಹಂಪನಾ, ಪುಟ:೮೮

೧೪ E.C.II,143

೧೫ ವಡ್ಡಾರಾಧನೆ, ಪುಟ:೧೪೪

೧೬ ಕಲೌ ಕಾಲೇ ವನೇ ವಾಸೋ ವರ್ಜ್ಯೇ ಮುನಿಸತ್ತಮ್ಯೈಃ
ಸ್ಥೀಯತೇ ಚ ಜಿನಾಗಾರೇ ಗ್ರಾಮಾದಿಷು ವಿಶೇಷತಃ ॥ [ರತ್ನಮಾಲ-೨೨]

೧೭ ಈನ ಚೈತ್ಯವ್ರಾತಮಂಬಂದಿಸು ಜಿನಪದಪದ್ಮಂಗಳಂ ದಿವ್ಯಮಪ್ಪ
ರ್ಚನೆಯಿಂದಂ ಭಕ್ತಿಯಿಂದರ್ಚಿಸು ನಮಸ್ಕಾರಮಂತ್ರಗಳೊಳ್ ಭಾ।
ವನೆಯಂ ತಾಳಟ್ಟೆಯಿಂದಂ ಜಿನಮಹಿಮೆಗಳಂ ಮಾಡು ನೀಂಭವ್ಯನೈ ಮ
ತ್ತಿನ ನಿಥ್ಯಾಜ್ಞಾನಿವೊಲ್ ನೀಂ ಕರತತೆವೆರಸಿಂತೇಕ ವಿಭ್ರಾಂತನಪ್ಪೈ ॥ (ಪಂಪ, ಆ.ಪು. ೩-೭)

*****

# ಸಂಗಮ ಅರಸರ ಕಾಲದ ಸಾಹಿತ್ಯದಲ್ಲಿ 'ದೇವಾಲಯ ವಾಸ್ತು'

* ಡಾ॥ ಕೂ. ಸ. ಅಪರ್ಣ

ದೇವಾಲಯದ ಪರ್ಯಾಯ ಪದಗಳಾಗಿ ಸಾಹಿತ್ಯ ಕೃತಿಗಳಲ್ಲಿ ಆಲಯ, ಆಯತನ, ನಿವಾಸ, ನಿಲಯ, ಭವನ, ಮಂದಿರ, ಪ್ರಾಸಾದ, ಸೌಧ, ಗೇಹ, ಗೃಹ, ದೇವಾಗಾರ, ದೇಹಾರ, ಗುಡಿ, ದೇಗುಲ – ಮುಂತಾದ ಶಬ್ದಗಳನ್ನು ಬಳಸಿದೆ. ಜೈನಧರ್ಮದ ದೇವಾಲಯಗಳಿಗೆ ಬಸದಿ, ವಸತಿ, ಜೈನಾಲಯ, ಚೈತ್ಯಾಲಯ – ಈ ಪದಗಳಿವೆ. ಇವುಗಳಿಗೆ ವಾಸಸ್ಥಳ/ ದೇವರು ಇರುವ ಸ್ಥಳ (ದೇವಾಲಯ) ಎಂಬ ಅರ್ಥವೇ ಇದ್ದರೂ, ಕೆಲವೆಡೆ ಅವು ಪ್ರತ್ಯೇಕ ಪಾರಿಭಾಷಿಕ ಪದಗಳೂ ಆಗಿವೆ. ಉದಾ: ಭವನ, ಮಂದಿರ ಇವುಗಳು ಒಂದು ಪ್ರಕಾರದ ಆಯತಾಕಾರದ ರಚನೆ ಎಂದು ಅಗ್ನಿಪುರಾಣವು ಹೇಳಿದೆ. 'ಆಯತನ' ಎಂಬುದಕ್ಕೆ ಪಿ.ಕೆ. ಆಚಾರ್ಯ ಅವರು, `An enclosure, earlier an abode, ahouse, later an enclosed settlement' ಎಂದಿದ್ದಾರೆ. ಶಬ್ದಗಳ ಅರ್ಥಗಳು ಬದಲಾಗುವಿಕೆಯನ್ನು ಇಲ್ಲಿ ಕಾಣಬಹುದು. 'ಗುಡಿ' ಎಂಬುದಕ್ಕೆ ಮನೆ, ಕುಟೀರ, ಧ್ವಜ ಎಂಬ ಅರ್ಥಗಳೊಂದಿಗೆ, ಸಾಮಾನ್ಯವಾಗಿ, 'ದೇವಾಲಯ' ಎಂಬ ಅರ್ಥವೂ ಇದೆ.

ಗ್ರಾಮದಲ್ಲಿ ಮನೆಗಳನ್ನು ಕಟ್ಟುವ ಮೊದಲು ದೇವತೆಗಳ ಆಲಯಗಳನ್ನು ನಿರ್ಮಿಸಬೇಕು. ಆಗಮಗಳ ನಿಯಮದಂತೆ, ಮೂರ್ತಿಗೊಂದು ಆಲಯವನ್ನು ನಿರ್ಮಿಸಬೇಕೇ ಹೊರತು ಆಲಯಕ್ಕೊಂದು ಮೂರ್ತಿಯನ್ನು ಸಿದ್ಧಪಡಿಸಬಾರದು. ಪೊಳಲುಪುರದಲ್ಲಿ ಮೊದಲು ಗೋವಿಂದನ ಪ್ರತಿಮೆಯನ್ನು ಮಾಡಿಸಿ, ಬಳಿಕ ಒಂದು ದೇವಾಲಯ ಕಟ್ಟಿಸಿದರಲ್ಲದೆ, ಶುಭದಿನ ಶುಭ ಮುಹೂರ್ತದಂದು ಅಲ್ಲಿ ಅದನ್ನು ಅರಸನೋಲಗ, ಸಕಳ ನಿಯೋಗದೊಂದಿಗೆ ಪ್ರತಿಷ್ಠಾಪಿಸಿದರು. ಪೊಳಲುಪುರದ ಈ ದೇವಾಲಯ ನಿರ್ಮಾಣವು ನಿಯಮಕ್ಕನುಗುಣವಾಗಿಯೇ ಇದೆ. ಎಂಬುದನ್ನು ಕಾವ್ಯ ಸೂಚಿಸುತ್ತಿದೆ.

ದೇವಾಲಯ/ಬಸದಿಗಳಿರುವ ಸ್ಥಳದ ಬಗ್ಗೆ ಸಾಹಿತ್ಯ ಕೃತಿಗಳ ಉಲ್ಲೇಖಗಳನ್ನಿಲ್ಲಿ ಪರಿಶೀಲಿಸಬಹುದು: ಬಸದಿಗಳು ಅರಮನೆಯ ಆವರಣದಲ್ಲಿ, ಪರ್ವತದಲ್ಲಿ, ವನದ ನಾಲ್ಕು ದಿಕ್ಕುಗಳಲ್ಲಿ, ವನದೊಳಗೆ, ಊರ ಹೊರಗೆ, ಊರ ಈಶಾನ್ಯ ಭಾಗದಲ್ಲಿ, ಪುರದ ನಡುವೆ – ಇದ್ದವು. ಅಲ್ಲದೆ, ಪುರದ ಹೊರಗೆ ಕಾಮದೇವನ ದೇವಾಲಯವಿತ್ತು. ಬೆಟ್ಟದ ಮೇಲೆ, ನದಿಗಳ ಸಂಗಮ ಸ್ಥಳ ಅರಣ್ಯ ಹಾಗೂ ಉದ್ಯಾನವನಗಳಲ್ಲಿ ದೇವಾಲಯಗಳನ್ನು ನಿರ್ಮಿಸಬೇಕು. ವನ, ನದೀ, ಪರ್ವತ ಮುಂತಾದ ಸ್ಥಳಗಳಲ್ಲಿ ದೇವತೆಗಳು ನಿತ್ಯವೂ ವಿಹರಿಸುವುದರಿಂದ, ಆ ಸ್ಥಳಗಳಲ್ಲಿ ದೇವಾಲಯ ನಿರ್ಮಿಸಿದರೆ ಒಳಿತೆಂಬ ಅಭಿಪ್ರಾಯ ಶಾಸ್ತ್ರಗ್ರಂಥಗಳಲ್ಲಿದೆ. ಮೇಲಿನ ಉಲ್ಲೇಖಗಳನ್ನು ಗಮನಿಸಿದರೆ, ಇಂತಹ ಪವಿತ್ರ ಕ್ಷೇತ್ರಗಳಲ್ಲಿ ಬಸದಿಗಳನ್ನು ನಿರ್ಮಿಸಿರುವುದನ್ನು ಗಮನಿಸಬಹುದು. ಇದರೊಂದಿಗೆ, ಅರಮನೆ ಆವರಣದಲ್ಲಿ ಕಾಮನ ದೇವಾಲಯವಿದ್ದುದನ್ನು ಗುಡ್ನಾಪುರದ ಶಾಸನವೂ ಹೇಳಿದೆ. ಜೈನ ದೇವಾಲಯ / ಬಸದಿಗಳನ್ನು ನೈಋತ್ಯಭಾಗದಲ್ಲಿ ನಿರ್ಮಿಸಬೇಕೆಂದು ಮಾನಸಾರವು ಹೇಳಿದೆ. ಬಸದಿಗಳು ಊರ ಹೊರಗಿರಬೇಕೆಂದೂ ಇದರಲ್ಲಿದೆ. ಮೇಲಿನ ಉಲ್ಲೇಖಗಳಲ್ಲಿ, ಊರ ಹೊರಗೆ ಮತ್ತು (ನೈಋತ್ಯದ ಬದಲು) ಈಶಾನ್ಯ ಭಾಗದಲ್ಲಿ ಬಸದಿ ಕಟ್ಟಿರುವುದು ಕಂಡುಬರುತ್ತದೆ ಅಂತೆಯೇ ಈಶಾನ್ಯ ಶಿವ ದೇವಾಲಯಗಳ ಸ್ಥಾನ ಎಂಬುದೂ ಇಲ್ಲಿ ಗಮನಾರ್ಹ. ವಾಯವ್ಯ ದಿಕ್ಕಿನಲ್ಲಿ ದೇವೀ ದೇವಾಲಯ ಇರಬೇಕು ಉಗ್ರದೇವತೆಯಾದ ಕಾಳಿ ದೇವಾಲಯವು ಊರ ಹೊರಕ್ಕೆ ಮುಖ ಮಾಡಿರಬೇಕೆಂದು ಹೇಳಲಾಗಿದೆ. ಗ್ರಾಮ ದೇವತೆಯ ದೇವಾಲಯವನ್ನು ಬೀದಿಯ ತಲೆ, ಪಾದ ಅಥವಾ ಎರಡು ಬೀದಿಯು ಸೇರುವಲ್ಲಿ ನಿರ್ಮಿಸಬಹುದು. ಕಾವ್ಯವೊಂದರಲ್ಲಿ ಪುರದ ತೆಂಕಣ ದಿಕ್ಕಿನಲ್ಲಿ ಮಾರೀ ದೇವಾಲಯವಿತ್ತು ಎಂದು ಉಲ್ಲೇಖವಿದ್ದು, ಇದು ನಿಯಮಕ್ಕಿಂತ ಭಿನ್ನ ಸ್ಥಳದಲ್ಲಿ ನಿರ್ಮಾಣವಾಗಿದ್ದನ್ನು ಸೂಚಿಸುತ್ತದೆ. ಇನ್ನೊಂದೆಡೆ, ಸಸಿವೊಳಲಲ್ಲಿ ರವಿಶಶಿ ಬೀದಿಯಲ್ಲಿ ಶಿವ–ಹರಿಗಳ ದೇಗುಲಗಳಿದ್ದವು ಎನ್ನಲಾಗಿದೆ.

* ೧೬೭೬, ೫ನೆ ಅಡ್ಡರಸ್ತೆ, ೧೧ನೆ ಮುಖ್ಯರಸ್ತೆ, ಬನಶಂಕರಿ ಮೊದಲನೆಯ ಹಂತ, ಎರಡನೆ ಬ್ಲಾಕ್, ಬೆಂಗಳೂರು–೫೬೦ ೦೫೦.

ಕಾಡಿನಲ್ಲಿ, ಗಿರಿಯಲ್ಲಿ, ವನದಲ್ಲಿ, ದೇವಾಲಯಗಳಿದ್ದ ಪರೋಕ್ಷ ಉಲ್ಲೇಖಗಳಿವೆ. ಅಬ್ಬಲೂರಿನಲ್ಲಿ ಕೆರೆ ಏರಿ ಮೇಲೆ ಬ್ರಹ್ಮೇಶಲಿಂಗವಿದ್ದ ಉಲ್ಲೇಖವಿದೆ; ಈ ಬಗ್ಗೆ ಶಾಸನವೂ ಇದೆ. ಒಂದೆಡೆ ಶಿವನು ತಾನು ಪುಣ್ಯಸ್ಥಳವಾದ ಕಾಶಿಯಲ್ಲಿರುವೆನೆಂದು ಹೇಳುತ್ತಾನೆ. ಆದರೆ, ಒಂದು ಪಾಳು ದೇವಾಲಯ ನೋಡಿ, 'ಘನತರಾಟವಿಯಾಳು ಮಾಹೇಶ್ವರನೊಬ್ಬನಿರಬಹುದೆ' ಎಂಬ ಮಾತು ಬರುತ್ತದೆ. ದೀಪದ ಕಲಿಯಾರು ಕಾನನದಲ್ಲಿ ದೇವಾಲಯ ಕಟ್ಟಿಸಿದಾಗ ಶಿವನು, 'ಕೈಲಾಸದಂತಹ ಮೇಲುದುರ್ಗಮದೆಮಗಿರಲ್ಕಿಕೀಳು ಮನ್ನೆಯರಂತೆ ವನದುರ್ಗದೊಳಗಿರಲೇಕೆ' ಎಂದು ಕೇಳುತ್ತಾನೆ. ಅಂತೇ, ಶಿವನ ಬಗ್ಗೆ ಚಿಂತಿಸುತ್ತಿದ್ದ ಕಣ್ಣಪ್ಪನು ಅವನು ಗಿರಿಯಲ್ಲಿರದೆ ಇಲ್ಲಿಗೇಕೆ ಬಂದನೆಂದು ಚಿಂತಿಸುತ್ತಾನೆ. ಇವೆಲ್ಲವೂ, ದೇವಾಲಯಗಳಿರುವ ಸ್ಥಳದ ಬಗ್ಗೆ, ದೇವರು ಇರುವ ಸ್ಥಳದ ಬಗ್ಗೆ ಭಕ್ತರಿಗಿರುವ ನಂಬಿಕೆಯ ಬಗ್ಗೆ ತಿಳಿಸುತ್ತಿದೆ. ಲಕ್ಕಣ ದಂಡೇಶನ ಶಿವತತ್ವಚಿಂತಾ ಮಣಿಯಲ್ಲಿ ಈ ಬಗ್ಗೆ ಒಂದು ಪದ್ಯವಿದೆ. ಶಿವನು ಪಾರ್ವತಿಯನ್ನು ವಿವಾಹವಾದ ನಂತರ, 'ಮೇರುಮಂದರಶೈಲ ಕೈಲಾಸಗಿರಿಗಳುಳಕೆ । ಸರಸಿಜಾಕರದ ತೀರದ ವೃಕ್ಷತಂಪಿನೊಳು । ಮರುತ ಮಾಂದ್ಯದಿ ಸುಳಿವ ನಂದನವನಂಗಳು । ಸುರಲುಜದ ಮಾತ್ತದೊಳು ವಿಹರಿ' । ಉದ್ಯಾನವನ, ರಮ್ಯಸ್ಥಾನ, ಪಲ್ಲವಗೃಹ, ಶೈತ್ಯಾಗಾರ, ಗಿರಿಕಂದರ ವಿಹಾರಸ್ಥಳ, ಭದ್ರಮಣಿಮಾಡ ಭವನ ಈ ಎಲ್ಲ ಸ್ಥಳಗಳಲ್ಲಿ ಶಿವನು ಉಮೆಯೊಂದಿಗೆ ಉಲ್ಲಸಿತನಾಗಿ ಕ್ರೀಡಿಸುತ್ತಿದ್ದನು. ಪರ್ವತ, ನದೀ ತಟ ಇತ್ಯಾದಿ ಸುಂದರ ಪವಿತ್ರ ಸ್ಥಳಗಳಲ್ಲಿ ದೇವರು ನೆಲೆಸಿರುತ್ತಾನೆ ಎಂಬ ಬೃಹತ್ಸಂಹಿತಾದ ಅಭಿಪ್ರಾಯವನ್ನು ಇದು ಸ್ಪಷ್ಟಪಡಿಸುತ್ತದೆ.

ದೇವಾಲಯಗಳನ್ನು ಯಾವ ವಸ್ತು ಸಾಮಗ್ರಿಯಿಂದ ಮಾಡಿದ್ದರೆಂಬುದರ ಬಗ್ಗೆಯೂ ಉಲ್ಲೇಖಗಳು ದೊರೆಯುತ್ತವೆ. ಕನಕಜಿನಾಲಯ, ಸುವರ್ಣ ಚೈತ್ಯಾಲಯ, ಮಣಿಕನಕರಜತಮಯ ಬಸದಿ ಎಂಬುವುಗಳೊಂದಿಗೆ, ದೊರೆಯೊಬ್ಬನು ಬಸದಿ ನಿರ್ಮಾಣಕ್ಕಾಗಿ ಚಿನ್ನದ ಇಟ್ಟಿಗೆಗಳನ್ನು ಕಳುಹಿಸಿಸುವ ವಿಷಯವೂ ಒಂದೆಡೆ ಇದೆ. ಬಿಂಬಗಳ ಬಗ್ಗೆ, ರತ್ನಮಯ ಪಿತುಮೆ(–ಪ್ರತಿಮೆ), ಚಂದ್ರಕಾಂತಲಿಂಗ, ಮಳಲಲಿಂಗ, ರಜತ ಸುವರ್ಣ ಮಣಿಮಯ ಲಿಂಗಗಳು. ಎಂಬುವ ಉಲ್ಲೇಖಗಳಿವೆ. ಪುಷ್ಪಾಂಕಲೀ ವ್ರತಾಚರಣೆಯಲ್ಲಿ ಚಿನ್ನ ಬೆಳ್ಳಿ ಕಂಚು ಅಥವಾ ಕಲ್ಲುಗಳಿಂದ ೨೪ ತೀರ್ಥಂಕರರ ಪ್ರತಿಮೆ ಮಾಡಿಸಿಕೊಡಬೇಕೆಂಬ ನಿಯಮವೂ ಒಂದೆಡೆ ಇದೆ. ಬಸವ ಪುರಾಣದಲ್ಲಿ, ಕಣಜಗಳನು ಹಿರಿದುಕೊಂಡು ಉದ್ಭವವಾದ ದೇವಾಲಯ ಮತ್ತು ಅಳತೆಯನ್ನು ಮಾಡಲು ಬಳಸುವ ಬಳ್ಳವೇ ಶಿವಲಿಂಗವಾದ ಪ್ರಸಂಗ ಇವುಗಳ ಬಗ್ಗೆ ಹೇಳಿದ್ದರೂ ದೇವಾಲಯವು ಯಾವ ಸಾಮಗ್ರಿಯದೆಂಬುದು ಸ್ಪಷ್ಟವಾಗಿಲ್ಲ. ಇವುಗಳು ಮಾತ್ರವಲ್ಲದೆ, ಮಣಿಕುಟ್ಟಿಮ, ಪಚ್ಚೆಯ ಕಂಬಗಳು, ಹೈರಣ್ಯಕುಂಭ ಸ್ಫಟಿಕಕಳಶ, ಮರಕತಮಯ ದ್ವಾರಬಂಧ, ರತ್ನಭಿತ್ತಿ, ಮರಕತಭಿತ್ತಿಗಳು ಹರಿನೀಲದ ಕರಡೆಗೆಗಳು, ಪೊಂಗಳಸ, ಹರಿನೀಲ ಶಿಲಾವಲಭಿಗವಾಕ್ಷ, ಮಣಿಮಯ ಭೂಮಿ, ಅರುಣಮಣಿಮಯ ಕಳಶ, ರತ್ನಮಂಟಪ, ಸ್ಫಟಿಕ ಮಣಿಯ ಪ್ರಾಕಾರ ಎಂದು ದೇವಾಲಯದ ಬೇರೆ ಬೇರೆ ಭಾಗಗಳ ಸಾಮಗ್ರಿಗಳನ್ನು ಪ್ರತ್ಯೇಕವಾಗಿ ಹೇಳಲಾಗಿದೆ.

ಕುಟ್ಟಿಮ, ಮಣಿಕುಟ್ಟಿಮ – ಈ ಶಬ್ದಗಳು ಕಾವ್ಯಗಳಲ್ಲಿ ದೇವಾಲಯೇತರ ಸಂದರ್ಭಗಳಲ್ಲಿದ್ದು ಇದು 'ಅಧಿಷ್ಠಾನ'ದ ಪರ್ಯಾಯ ಶಬ್ದ. ದೇವಾಲಯ ರಚನೆಯಲ್ಲಿ ಮೊದಲ ಭಾಗ – ಅಧಿಷ್ಠಾನ (Base) ಆ ಅಧಿಷ್ಠಾನದ ಮೇಲಿರುವ ಭಿತ್ತಿ (wall)ಯ ಬಗ್ಗೆ ವರ್ಣನಾತ್ಮಕ ವಿವರಗಳಿವೆ. ಒಂದು ಪದ್ಯದಲ್ಲಿ, ಚಂದ್ರನ ಕಿರಣಗಳು ಹರಿನೀಲಶಿಲಾವಲಭಿಗವಾಕ್ಷದೊಳು ಬಂದು ಹೊಕ್ಕು ಭಿತ್ತಿಗಳ ಮೇಲೆ ನಿಲ್ಲಲು, ಮುಗ್ಧ ಕಾಮಿನಿಯರು ಅದನ್ನು ನಿರ್ಮಲ ಮುತ್ತಿನ ಹಾರವೆಂದು ತಿಳಿದು ಕೈ ನೀಡಲು, ಅಲ್ಲಿ ಹಾರವಿಲ್ಲದೆ, ಮೇಳದವರ ಹಾಸ್ಯಕ್ಕೆ ಗುರಿಯಾದರೆಂದಿದೆ. ಇಂತಹ ಗವಾಕ್ಷ (ಜಾಲಂದ್ರ)ಗಳಲ್ಲಿ ಬಿಂಬಗಳಿರುವುದನ್ನು ಮೃತ್ತಿಕೆಯ ಮಾಡಕದ ರೂಹಿನ ಪುತ್ತಳಿಗಳನು ದೇಗುಲಕೆ ನೆರೆ ತೆತ್ತಿಸಿದರೆಂಬಂತೆ ಎಂಬ ಪದ್ಯವು ಸೂಚಿಸಿದೆ; ಅಂತೇ, ಮಾಯಾಪುರದ ಕಾಂಚೀಪುರದ ಜಾಳಂಧರದ ವಿವಿಧಸ್ಥಾನ ದೇವರಿಗೆ ಎಂಬ ಮಾತೂ ಕೂಡಾ ಜಾಳಂಧರದಲ್ಲಿ ದೇವರ ಬಿಂಬಗಳಿರುವುದನ್ನು ಹೇಳುತ್ತಿದೆ. ನಂದಿ, ಹೇಮಾವತಿ – ಮುಂತಾದ ಸ್ಥಳಗಳ ದೇವಾಲಯಗಳ ಜಾಲಂದ್ರದಲ್ಲಿ ನಡುವೆ ಬಿಂಬವಿರುವುದನ್ನಿಲ್ಲಿ ನೆನೆಯಬಹುದು. ಭಿತ್ತಿಯಲ್ಲಿ ಜಾಲಂದ್ರ ಮಾತ್ರವಲ್ಲದೆ, ತೋರಣಗಳ ಅಲಂಕಾರವೂ ಇರುತ್ತದೆ. ಜಿನಾಲಯಗಳ ಮುಂದೆ ಮಕರ ತೋರಣವಿರುತ್ತಿತ್ತು, ಮಣಿತೋರಣಗಳೂ ಇರುತ್ತಿದ್ದವು. ಒಂದೆಡೆ, ಚಂದ್ರಗುಪ್ತರು ಗುರು ಭದ್ರಬಾಹು ಮುನಿಗಳ ಪಾದಗಳನ್ನು ಗುಹೆಯ ಭಿತ್ತಿಯಲ್ಲಿ ಬರೆದು ಆರಾಧಿಸುತ್ತಿದ್ದರು ಎಂದಿದೆ. ಶ್ರವಣಬೆಳಗೊಳದಲ್ಲಿ

ಭದ್ರಬಾಹು ಮುನಿಗಳ ಗುಹೆ ಮತ್ತು ಅಲ್ಲಿ ಕೆತ್ತಿದ ಪಾದಗಳಿವೆಯಾದರೂ, ಅದರ ಭಿತ್ತಿಯಲ್ಲಿ ಚಿತ್ರ ಬರೆದದ್ದಿಲ್ಲ. ಹೀಗಾಗಿ, ಇದು ಭಿತ್ತಿಯ ಮೇಲೆ ಚಿತ್ರ ಬರೆವ ಪದ್ಧತಿಯನ್ನಷ್ಟೇ ಸೂಚಿಸುತ್ತಿದೆ.

ದೇವಾಲಯಗಳ ಮೇಲಿರುವ ಮೇಲ್ಕಟ್ಟಡ (superstructure) ಅಥವಾ ಶಿಖರವನ್ನು ಕಾವ್ಯಗಳಲ್ಲಿ 'ಕೂಟ' ಎಂಬ ಶಬ್ದದ ಮೂಲಕ ನಿರ್ದೇಶಿಸಲಾಗಿದೆ. ಶಾಸನಗಳಲ್ಲೂ ಕೆಲವೆಡೆ ಹೀಗೆ ಹೇಳಿದೆ (ವಾಸ್ತುರೀತ್ಯಾ, ಕೂಟವೆಂಬುದು ಮೇಲ್ಕಟ್ಟಡದಲ್ಲಿ ಮೂಲೆಗಳಲ್ಲಿರುವ ಚೌಕಾಕಾರದ ರಚನೆ ; ಶಿಖರವಲ್ಲ) ರತ್ನಕೂಟ, ಧವಳಕೂಟ, ಉತ್ತುಂಗಕೂಟ, ಮಣಿಕೂಟ ಮುಂತಾದ ಶಬ್ದಗಳನ್ನಿಲ್ಲಿ ಉದಾಹರಿಸಬಹುದು. ವಾಸ್ತುಶಾಸ್ತ್ರದ ಪ್ರಕಾರ ದಾಕ್ಷಿಣಾತ್ಯ ಸಂಪ್ರದಾಯದ ದೇವಾಲಯಗಳಲ್ಲಿ 'ಶಿಖರ' ಎಂಬುದು 'ಗ್ರೀವ'ದ ಮೇಲಿರುವ ಕಲಶದ ಕೆಳಗಿನ ಒಂದು ಭಾಗ ಮಾತ್ರ. ಆದರೆ ಉತ್ತರ ಭಾರತದ ದೇವಾಲಯಗಳಲ್ಲಿ ಶಿಖರವೆಂದರೆ, ಗರ್ಭಗೃಹದ ಮೇಲಿನ ಪೂರ್ಣಕಟ್ಟಡ ಮೇಲ್ಕಟ್ಟಡ (superstructure). ಈ ಸಾಹಿತ್ಯ ಕೃತಿಗಳಲ್ಲಿ ಶಿಖರ ಎಂಬ ಶಬ್ದವನ್ನು ಎರಡನೇ ಅರ್ಥದಲ್ಲಿ ಬಳಸಲಾಗಿದೆ. 'ಬಸದಿಗಳೆಯ್ದೆ ತಮ್ಮ ಶಖತಂಗಳ ಚೂಳಿಕೆಯಲ್ಲಿ' ಎಂಬೆಡೆಯಲ್ಲಿ ಇದನ್ನು ಕಾಣಬಹುದು. 'ಉತ್ತುಂಗವಾದ ಕೋಟಿಕೂಟಗಳಿಂದ ಬಸದಿಯು ಕೂಡಿತ್ತೆಂಬ' ವರ್ಣನೆಯೂ ಒಂದೆಡೆ ಇದೆ. ಶಿಖರವನ್ನು ಎರಡುಭಾಗ ಮಾಡಿ ಕೈಲಾಸಕ್ಕೆ ಹೋಗುತ್ತೇವೆ ಎಂದು ವೀರಯ್ಯನೆಂಬ ಭಕ್ತನು ಸವಾಲು ಹಾಕುತ್ತಾನೆ. ಇಲ್ಲಿ ಶಿಖರವು ಕೈಲಾಸಕ್ಕೆ ಮಾರ್ಗ ಎಂಬ ಅಭಿಪ್ರಾಯವಿದೆ. ಈ ಪವಿತ್ರ ಭಾವವು ಇರುವುದರಿಂದಲೇ ಶಿಖರದ ರಚನೆಯು, ಮಾನವನಿರ್ಮಿತ ದೇವಾಲಯಕ್ಕೆ ಒಂದು ವಿಶೇಷಸಂಸ್ಕಾರ (ಶಿಖರ) ವಿಮಾನದ ನೆರಳು ಎಷ್ಟು ಪ್ರದೇಶದ ಮೇಲೆ ಬೀಳುವುದೋ ಅಷ್ಟು ಪ್ರದೇಶ ಪ್ರಭಾವಶಾಲಿಯೆಂಬ ಕಲ್ಪನೆ ಇದೆ. ಇದು ಮೂಲಮೂರ್ತಿಯ ಪ್ರತೀಕವೆಂಬ ನಂಬಿಕೆಯೂ ಇದೆ. ತೇಕಲ್ಲಿನ ಒಂದು ಶಾಸನದಲ್ಲಿನ ವರದರಾಜ ದೇವರ ಶಿಖರಸಂದರುಶನವ ಮಾಡಿ ಎಂಬ ಉಕ್ತಿಯು ಈ ನಂಬಿಕೆಯನ್ನು ಮತ್ತು ಶಿಖರದ ಪಾವಿತ್ರ್ಯವನ್ನು ಎತ್ತಿಹಿಡಿಯುತ್ತದೆ. ಇದರ ಸ್ಥಾನದ ಬಗ್ಗೆ ಸಾಮಗ್ರಿಯ ಬಗ್ಗೆ ಹಾಗೂ ಹೊಳಪಿನ ಬಗ್ಗೆ 'ಬಸದಿಗಳ ಶಿಖರಂಗಳ ಚೂಳಿಕೆಯಲ್ಲಿ ನಾಡೆ ಶೋಭಿಸುವುದು ಪದ್ಮರಾಗಕಳಶ ಪ್ರಭೆಯಿಂ' ಎಂದು ಒಂದೆಡೆ ಹೇಳಿದೆ. ಆ ಕಲಶದ ಪ್ರಭೆ ಎಷ್ಟಿತ್ತೆಂದರೆ, ಕಲಶದ ಹೊಳಪು ನಾಡೆನ್ನೆಲ್ಲ ಪಸರಿಸಿ, ಆ ನಾಡ ಜನರು ಹಗಲು-ಇರುಳು ಎಂಬ ಭೇದವನ್ನು ಅರಿಯದಾಗಿದ್ದರು. ದೇವಾಲಯದ ಪವಿತ್ರ ಭಾಗವಾದ 'ಕಲಾ'ದ ಬಗ್ಗೆ, ಭೂಮಿಯಲ್ಲಿ ಹುದುಗಿದ್ದ ದೇವಾಲಯವನ್ನು, ಗೊಗ್ಗಯ್ಯನು ಉಳುವಾಗ ಹೊರಕ್ಕೆ ತೆಗೆಯುತ್ತಾನೆ. ಆಗ ಅವನಿಗೆ ಮೊದಲಿಗೆ ಸಿಕ್ಕ ಭಾಗ ಕಲಶ ಎಂದು ಪ್ರಭುಲಿಂಗಲೀಲೆಯಲ್ಲಿದೆ. 'ಪದ್ಮರಾಗಕಳಶ', ರತ್ನಕಳಶ ಎಂಬ ಉಲ್ಲೇಖಗಳು ಮಾತ್ರವಲ್ಲದೆ, ಜೈನಗೇಹದ ಪೊಂಗಳಶಗಳು ಗಗನಮಂಡಳವನ್ನು ಮುಟ್ಟುತ್ತಿತ್ತು' ಎಂಬ ಉಲ್ಲೇಖವೂ ಇದ್ದು, ಆ ಜೈನಗೇಹದ ಎತ್ತರವನ್ನು ಪರಿಚಯಿಸಿವೆ. ಒಂದು ಹಯಮಂದಿರದ ಬಗ್ಗೆ ಹೇಳುವಾಗ, ಅದರಲ್ಲಿದ್ದ ರತ್ನ ಕಳಶದ ಕಿರಣಗಳಲ್ಲಿ ಹಯಮಂದಿರವು ತೇಲಾಡುತ್ತಿರುವಂತೆ ತೋರುತ್ತಿತ್ತು. ಎಂಬ ವರ್ಣನೆ ಇದೆ. ಒಂದು ಗೃಹದ ಮೇಲೆ ಮತ್ತೊಂದು ಗೃಹವನ್ನು ನಿರ್ಮಿಸುವ ವಿಷಯವು 'ಪುಣ್ಯಾಸ್ರವಚಂಪೂ'ನಲ್ಲಿದೆ. ಇಲ್ಲೇ 'ಅಂತಸ್ತು' ಎಂಬ ಶಬ್ದವನ್ನು ಬಳಸಿದೆ. ಇದು ಗರ್ಭಗೃಹದ ಮೇಲೆ ಮತ್ತೊಂದು ಗರ್ಭಗೃಹವನ್ನು ನಿರ್ಮಿಸಿರುವ ಚಾವುಂಡರಾಯಬಸದಿ (ಶ್ರವಣಬೆಳಗೊಳ) ಲಾಡ್‌ಖಾನ್ ದೇವಾಲಯ(ಐಹೊಳೆ) ಇವುಗಳನ್ನು ನೆನಪಿಸುತ್ತದೆ.

ದೇವಾಲಯದ ಮುಖ್ಯ ಗರ್ಭಗುಡಿಯ ಬಗ್ಗೆ ವಿಶೇಷವಾದುದೇನೂ ದೊರೆತಿಲ್ಲ. 'ಲಿಂಗಾಂಗಣದರಜಮಂ ಗುಡಿಸುವನಿಲ' ಎಂಬ ಒಂದು ಉಲ್ಲೇಖವಿದ್ದು, ಗರ್ಭಗುಡಿಯನ್ನು ಇಲ್ಲಿ 'ಲಿಂಗಾಂಗಣ' ಎಂದಿರುವುದು ಮುಖ್ಯ. ಒಂದು ಪದ್ಯದಲ್ಲಿ 'ಶಿವನ ಸಮಯವಾಗದೆ ಗುಡಿಯೊಳಗೆ ಹೋಗುವ ಸಲಿಗೆ ಬಾರದೆಂದು' ಓಹಿಳಯ್ಯನು ದೇವಾಲಯದ ಸುಖನಾಸಿಯಲ್ಲಿ ನಿಂತಿರುತ್ತಿದ್ದನು ಎಂದಿದೆ. ಅದೇ ಮುಂದಿನ ಪದ್ಯದಲ್ಲಿ, 'ಜಡಜಭವನ ಭವನ ಸಮಯಮಂ ಪಡೆವನಕ ದೇಗುಲದ ಹೊರಗೆಯೆರಡು ಕರವ ಮುಗಿದಿಹನು ನುತಿಸುತ' ಎಂದಿದೆ. ಎರಡನೇ ಪದ್ಯದ ದೇಗುಲದ ಹೊರಗಿನ ಭಾಗವನ್ನು ಮೊದಲನೇ ಪದ್ಯದಲ್ಲಿ 'ಸುಖನಾಸಿ' ಎಂದು ಹೇಳಲಾಗಿದೆ. ಈ ಸುಖನಾಸಿಯು ಗುಡಿಯ ಹೊರಗೆ, ದೇಗುಲದ ಹೊರಗೆ ಇತ್ತು ಎಂಬುದು ಇಲ್ಲಿ ಸ್ಪಷ್ಟವಾಗಿದೆ. ಒಂದು ಪದ್ಯದಲ್ಲಿ ಜಿನನ ಜನ್ಮಾಭಿಷೇಕದ ಪೂಜಾ ಸಂದರ್ಭದಲ್ಲಿ ಹಚ್ಚಿದ್ದ ಬಹುವಿಧವಾದ ನೂತನ ರತ್ನಮಯ ದೀಪಸಮೂಹವು ಅತೀ ಕಾಂತಿಯಿಂದ ಆ ಅಂತರಾಳವನ್ನು ಬೆಳಗಿತ್ತು ಎಂದು ಹೇಳುತ್ತಾನೆ ಕವಿ.

ಅಂತರಾಳದ ನಂತರ ಇರುವ ಭಾಗವೇ ನವರಂಗ. ಸುಖನಾಸಿಯ ಮುಂಭಾಗದ ೯ ಅಂಕಣದ ಮಂಟಪ, 'ರಂಗಮಂಟಪ' ಎಂದೂ ಹೇಳುವುದುಂಟು. ಪದ್ಯವೊಂದರಲ್ಲಿ 'ಅಸಿನಡುವಿಂದೆಸೆವ ಶಂಕರಿ ವಸತಿಯೊಳಗಣ ರಂಗಮಂಟಪರೆಸೆಯೊಳೊಪ್ಪುವ ಪಂಚವರ್ಣದ ರಂಗವಲ್ಲಿಯಿಕ್ಕಿ' ಎಂಬ ಮಾತು ಬರುತ್ತದೆ. ಬಸದಿಗಳಲ್ಲಿ ವಾರವಿಲಾಸಿನೀ ವಿರಚಿತ ನೃತ್ಯಗೀತ ವಾದ್ಯ ನಡೆಯುತ್ತಿದ್ದುದರ ಸೂಚನೆ ಶಾಸನದಲ್ಲಿದೆ. ಜಿನಾಲಯಗಳ ಮುಂದಣ ರಂಗಾವಳೀ ಮಕರ ತೋರಣ ರಮಣಿಯಂಗಳಪ್ಪ ಭೋಗರಂಗಸ್ಥಾನಂಗಳೊಳ್' ಎಂದೂ ಒಂದೆಡೆ ಇದೆ. ಕಲಾವಿದರ ಕಲಾಸೇವೆಯನ್ನು ಸಾರ್ವಜನಿಕರು ದರ್ಶಿಸಲು ಅನುವಾಗುವಂತೆ ಭೋಗಮಂಟಪವಿದ್ದು ಅದು ದೇವಾಲಯ / ಬಸದಿಯ ಹೊರಗಿರುತ್ತಿದ್ದವು. ಅದನ್ನೇ ಈ ಪದ್ಯ ಸೂಚಿಸಿದೆ. ಅರಸೀಕೆರೆಯ ಶಿವಾಲಯದಲ್ಲಿ ಈ ರೀತಿಯ ಭೋಗಮಂಟಪವಿದೆ.

ನವರಂಗದ ಮುಂದಿನ ಮಂಟಪ ಅಥವಾ ದೇವಾಲಯದ ಕೊನೆಯ ಮಂಟಪವೇ ಮುಖಮಂಟಪ. ಒಂದೆಡೆ, ಬಹಿ ಪ್ರದೇಶಮಂಟಪದ ಮತ್ತವಾರಣಮಂ ನೆಮ್ಮಿಕುಳ್ಳಿರ್ದು ಎಂದಿರುವುದು, ಹೊರಗಿನ ಮಂಟಪವನ್ನೇ ಸೂಚಿಸುತ್ತದೆ; 'ಮತ್ತವಾರಣ' ವೆಂಬುದು ಮುಖಮಂಟಪದಲ್ಲಿರುವ 'ಕಕ್ಷಾಸನ' ಕ್ಕೆ ಸಂಬಂಧಿಸಿದ್ದಾಗಿದೆ. ಇನ್ನೊಂದೆಡೆ, ಇದಕ್ಕೆ ಮೊಗಸಾಲೆ ಎಂದು ಹೇಳಿದೆ. ಮಗನಿಗೆ ಪಟ್ಟ ಕಟ್ಟುವ ಸಂದರ್ಭದಲ್ಲಿ ಬಸದಿಗೆ ಬಂದ ಮಹಾಸೇನರಾಜನು, ಪೂಜಾನಂತರ ಬಸದಿಯ ಮೊಗಸಾಲೆಯಲಿಕ್ಕಿದ ಮುತ್ತಿನ ಗದ್ದಿಗೆ ಮೇಲೆ ಮಗನೊಂದಿಕೆ ಕುಳಿತು ಬಂಧುಬಳಗಕ್ಕೆ ದಾನಮಾಡಿದನೆಂದಿದೆ. ಇನ್ನೊಂದೆಡೆ, 'ಬಸದಿಯಿಂದ ಹೊರಗೆ ಒಂದು ಸಭಾಭವನ ಭದ್ರವೇದೀ ಮದ್ಯದೊಳ್' ಎಂದಿದೆ. ಸಭಾಭವನವು ಬಸದಿಯಿಂದ ಹೊರಗಿತ್ತೆಂದೂ ಅದಕ್ಕೆ ಮುಂಚಾಚಿದ ಭಾಗದಲ್ಲಿ ಅಥವಾ ಮಧ್ಯದಲ್ಲಿ (=ಭದ್ರ) ವೇದಿಕೆಯು ಇತ್ತೆಂದು ಹೇಳಬಹುದಾಗಿದೆ. ಸಭಾಭವನವೂ ಕೂಡಾ ಅನೇಕ ಜನರು ಸೇರುವ ಸ್ಥಳವೇ ಆಗಿದ್ದು, ನವರಂಗಕ್ಕಿಂತ ವಿಸ್ತೃತವಾಗಿರುತ್ತದೆ. ಇದು ದೇವಾಲಯದಿಂದ ಪ್ರತ್ಯೇಕವಾಗಿ ರಚನೆಯಾಗಿರಬಹುದು.

ಯಾವುದೇ ಕಟ್ಟಡಕ್ಕೆ ಆಧಾರವಾಗಿರುವುದು ಕಂಬ. 'ಹದಿನಾರು ನೆಲೆಯಿಂದ ಎಂಬಂತಿರುವ ಮಂದರ ಪರ್ವತಕ್ಕೆ ಆಧಾರವಾಗಿರಲೆಂದು ಕಂಬವನ್ನು ನೀಡಿದನು ಎಂಬುವಲ್ಲಿ ಕಂಬದ ಉಪಯೋಗ ಸ್ಪಷ್ಟವಾಗುತ್ತದೆ'. ಕಂಬದ ಆಸರೆ ಇಲ್ಲದೆ ಆಕಾಶವು ನಿರಾಲಂಬವಾಗಿ ಭೂಮಿಯ ಮೇಲೆ ಬೀಳುತ್ತದೆಂದು ಬ್ರಹ್ಮನು ನೆಟ್ಟಿರಿಸಿದಕಂಬದಂತೆ ಆಕಂಬವು ರಾರಾಜಿಸುತ್ತಿತ್ತು ಎಂದು ಹೇಳುತ್ತಾ ವಾಸ್ತುರಚನೆಯಲ್ಲಿ ಕಂಬದ ಪಾತ್ರವನ್ನು ಸ್ಪಷ್ಟಪಡಿಸಲಾಗಿದೆ. 'ಸಹಸ್ರಸ್ತಂಭ ಜಿನಾಲಯ'ದ ಉಲ್ಲೇಖವೂ ಒಂದೆಡೆ ಇದ್ದು, ಸ್ತಂಭಗಳ ಸಂಖ್ಯೆಯ ಹೆಸರಿನಲ್ಲಿ ಜಿನಾಲಯ ವಿರುವುದು ಹಾಗೂ ಆ ಜಿನಾಲಯದಲ್ಲಿ ಸ್ತಂಭಕ್ಕಿರುವ ಮಹತ್ವ ವಿಶೇಷವಾದುದಾಗಿದೆ. ಒಂದು ವಿವಾಹ ಮಂಟಪದ ಬಗ್ಗೆ ಹೇಳುವಾಗ, 'ಚಂದ್ರಕಾಂತೋಜ್ವಳೀಭೂತಾನೂನ ಸ್ತಂಭಸಂದೋಹ ಕಪರಿಕಳಿತಂ ಪದ್ಮರಾಗೋರುಕೀಲಂ' ಎಂದಿದೆ. ಅಂದರೆ, ಆ ಮಂಟಪವು ಚಂದ್ರಕಾಂತ ಶಿಲೆಯಿಂದ ಮಾಡಲ್ಪಟ್ಟ ಕಂಬಗಳ ಸಮೂಹದಿಂದ ಸುತ್ತುವರಿದಿತ್ತು ಎಂದು ಹೇಳಬಹುದು ಇದು ವಾಸ್ತುಶಿಲ್ಪಶಾಸ್ತ್ರದ 'ಸಂಯೋಗಸ್ತಂಭ' ಎಂಬ ಒಂದು ಸ್ತಂಭ ಪ್ರಕಾರವನ್ನು ಸೂಚಿಸುತ್ತಿರುವಂತಿದೆ. ಈ ರೀತಿಯ ಕಂಬಗಳನ್ನು ಈ ಕೃತಿಯ ನಂತರ ಕಾಲಕ್ಕೆ ಸೇರುವ ಹಂಪೆಯ ವಿಠಲ ದೇವಾಲಯ ಮುಂತಾದ ವಿಜಯನಗರ ಕಾಲದ ಕೆಲವು ದೇವಾಲಯಗಳಲ್ಲಿ ಇದನ್ನು ಕಾಣುತ್ತೇವೆ. ಅಂತೇ, ಮುಂದಿನ ಒಂದು ಪದ್ಯದಲ್ಲಿ, 'ಪಳಿಕಿನ ಕಂಬದೊಳಂ ಮಾರ್ಪೊಳೆದಚ್ಚೊತ್ತಿದಪೊಲಿರ್ಪ ಜಗರಮೆಸೆಗುಂ' ಎಂದೂ ಕವಿ ವರ್ಣಿಸಿದ್ದಾನೆ. ಇಲ್ಲಿರುವ, ಬಿಂಬವು ಪ್ರತಿಫಲಿಸುತಿರುವ ಹೊಳೆವ. ಕಂಬದ ವಿವರವು ಹೊಯ್ಸಳರ ಕಾಲದ ತಿರುಗಣಿ ಯಂತ್ರದಿಂದ ಮಾಡಿದ ಹೊಳೆವ ಕಂಬಗಳನ್ನು ನೆನಪಿಸುತ್ತದೆ. ಇನ್ನೂ ಒಂದೆಡೆ, ಈ ಹೊಳಪಿನ ಬಗ್ಗೆ ಹೇಳಲಾಗಿದೆ. 'ಹರಿನೀಳಸ್ತಂಭ'ದಲ್ಲಿ ರತ್ನದೀಪ ಪ್ರಭೆಯು ಮಾರ್ಪೊಳೆಯುತ್ತಿತ್ತು ಎಂದು ಹೇಳಿ, 'ಅರುಣಮಣಿ ದೀಪದಿಂದ ಪರಭಾಗಂ ಒಡೆದ' ಸೂರ್ಯಕಾಂತಸ್ತಂಭವು, ಶಿವನು ತನ್ನು ಹಣೆಗಣ್ಣನ್ನು, ಉರಿಗಣ್ಣನ್ನು ತೋರಿದಂತೆ ಭಾಸವಾಗುತ್ತಿತ್ತು ಎಂದು ವರ್ಣಿಸಿದ್ದಾನೆ. ಇದೂ ಕೂಡಾ ಹೊಯ್ಸಳರ ಹೊಳೆವ ಕಂಬ ರಚನೆಯನ್ನು ಸೂಚಿಸುತ್ತದೆ. ಇಲ್ಲಿ ಹೇಳಿದ ಎರಡು ಕಂಬಗಳ ವಿವರಗಳು ಒಂದೇ ಕೃತಿಯಲ್ಲಿರುವ ಬೇರೆ ಬೇರೆ ಪ್ರಕಾರದ, ಬೇರೆ ಬೇರೆ ಕಾಲದ ಕಂಬಗಳೆಂಬುದನ್ನು ಗಮನಿಸಬೇಕು.

ಮಂಟಪದ ಒಳಭಾವಣಿಗೆ 'ವಿತಾನ' (ceiling) ಎಂದು ಹೆಸರು. ಸಾಹಿತ್ಯದಲ್ಲಿ ಅನೇಕ ಕಡೆ 'ಮೇಲ್ಕಟ್ಟು' ಎಂಬ ಶಬ್ದವನ್ನು ಬಳಸಿದೆ. ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿ ಆರತಿಯ ಬಿಸಿಗೆ ವಿತಾನವು ಉರಿದದ್ದನ್ನು ಹೇಳುವಾಗ

'ಮೇಲ್ಕಟ್ಟಿನಾ ಪರಮಾಂಬರ', ವಿತಾನಾಂಬರ – ಎಂಬ ಶಬ್ದಗಳನ್ನು ಬಳಸಿದೆ. ವಿತಾನವನ್ನು ಬಟ್ಟೆಯಿಂದ ಅಲಂಕರಿಸುವುದು ಇಲ್ಲಿ ಸ್ಪಷ್ಟವಾಗಿದೆ. ಇತರ ಸಂದರ್ಭಗಳಲ್ಲೂ 'ಚಿತ್ರದ ಮೇಲ್ಕಟ್ಟು' ಎಂಬ ಶಬ್ದವಿದೆ. ವಿತಾನ ಎಂಬ ಶಬ್ದವನ್ನು ಬೇರೆ ಅರ್ಥದಲ್ಲೂ ಬಳಸಲಾಗಿದೆ. ಉದಾ: ಜಂಗಮವಿತಾನ, ಮೃಗವಿತಾನ, ರಾಜಮಾರ್ಗಂಗಳೆಂಬ ಲತಾವಿತಾನ – ಮುಂತಾದುವು.

ದ್ವಾರಕ್ಕೆ ಸಂಬಧಿಸಿದಂತೆ ದೇವಾಲಯ ಮತ್ತಿತರ ಸಂದರ್ಭಗಳಲ್ಲಿ ಅನೇಕ ಉಲ್ಲೇಖಗಳು ದೊರೆಯುತ್ತವೆ. ಇನ್ನು ಬಾಗಿಲುವಾಡದ ಬಗ್ಗೆ ದ್ವಾರಬಂಧ, ದ್ವಾ(ದಾ)ರವ(ಪ)ಟ್ಟ – ಎಂಬ ಶಬ್ದಗಳಿವೆ. ಬಾಗಿಲಿನ ಕದ ಎಂಬುದಕ್ಕೆ ಪರ್ಯಾಯವಾಗಿ ಬಾಗಿಲ ತೆರೆ, ಬಾಗಿಲಿನ ಪರದೆ, ಬಾಗಿಲ ಕವಾಟ ಎಂದೂ ವಿವಿಧವಾಗಿ ಹೇಳಿದೆ. 'ಬಾಗಿಲಲಾಳವಿಂಡಿಗೆ' ಎಂದೂ ಒಂದೆಡೆ ಇದ್ದು, ಬಾಗಿಲನ್ನು ಮುಚ್ಚಿ. ಭದ್ರಪಡಿಸಲು ಅಡ್ಡಲಾಗಿ ಹಾಕುವ ಪಟ್ಟಿಯನ್ನಿದು ಹೇಳುತ್ತದೆ; ಅಗಳಿ ಎಂದೂ ಹೇಳಬಹುದು. ಒಂದೇ ಪದ್ಯದಲ್ಲಿ ಅಗಳು, ದ್ವಾರವಂದ, ಬಾಗಿಲು ಕವಾಟ – ಹೀಗೆ ಎಲ್ಲ ಶಬ್ದಗಳೂ ಇವೆ. ಬಾಗಿಲ ಹೊಸ್ತಿಲನ್ನು ಪೊಸತಿಲು, ದೇಹಳಿ(=ದೇಹಲಿ) ಎಂದೂ ಹೇಳಿದೆ. ದೇಹಲಿ/ಳಿ – ಎಂಬುದು ವಾಸ್ತುಶಾಸ್ತ್ರದ ಪ್ರಕಾರ ಪಾರಿಭಾಷಿಕ ಪದ. ಕಾವ್ಯವೊಂದರಲ್ಲಿ, ದೇವಾಲಯೇತರ ಸಂದರ್ಭದಲ್ಲಿ 'ವಿಲಸದ್ವಾರ ಶಾಲಾಭಿಶೋಭಾಸ್ಥಾನಂ' ಎಂದಿದೆ. ದೇವಾಲಯಗಳ ದ್ವಾರದ ಮೇಲ್ಭಾಗದಲ್ಲಿ ಸಾಮಾನ್ಯವಾಗಿ, ಶಿಖರದಲ್ಲಿರುವಂತಹ ಶಾಲಾ (ಮತ್ತು ಕೂಟಗಳ) ಗಳ ಅಲಂಕರಣವಿರುತ್ತದೆ. ಈ ರೀತಿಯ ಅಲಂಕರಣವನ್ನೇ ಇಲ್ಲಿ ಸೂಚಿಸಿರಬಹುದು. ಇಷ್ಟೇ ಅಲ್ಲದೇ, ಮುಂಬಾಗಿಲು / ಪ್ರಥಮದ್ವಾರ, ಕ್ಷುಲ್ಲಕದ್ವಾರ – ಇವು ಬಾಗಿಲಿನ ಸ್ಥಾನವನ್ನು ಹೇಳಿದರೆ, ಮರತಕಮಯ ದ್ವಾರ, ವೈಢೂರ್ಯದ ಕವಾಟ – ಇವು ದ್ವಾರಸಾಮಗ್ರಿಯಬಗ್ಗೆ ಕಲ್ಪನಾತ್ಮಕವಾಗಿ ಹೇಳಿದೆ. ಹೀಗೆ ದ್ವಾರದ ವಿವಿಧ ಭಾಗಗಳನ್ನು ಸ್ಪಷ್ಟವಾಗಿ ಹೇಳಿರುವುದನ್ನು ಕಾವ್ಯಗಳಲ್ಲಿ ಕಾಣಬಹುದು.

ದ್ವಾರದ ಮುಂದಿರುವ ಮೆಟ್ಟಲಿನ ಬಗ್ಗೆ 'ಸೋಪಾನಪಂಕ್ತಿ' ಎಂಬ ಉಲ್ಲೇಖವಿದೆ. ಆ ಸೋಪಾನವು ಎಟ್ಟರಮಟ್ಟಿಗೆ ಹೊಳೆಯುತ್ತಿತ್ತೆಂದರೆ ಅದನ್ನು ಬಾವಿ ಎಂದು ತಿಳಿದು ನೀರು ಕುಡಿಯಲು ಹೋದರಂತೆ. ದಕ್ಷಿಣ ಭಾರತದ ದೇವಾಲಯಗಳಲ್ಲಿ ಧ್ವಜಸ್ತಂಭವು ದೇವಾಲಯದ ಮುಂದಿದ್ದರೆ, ಉತ್ತರಭಾರತದ ದೇವಾಲಯಗಳಲ್ಲಿ ಇದು ಶಿಖರದ ತುದಿಯಲ್ಲಿರುತ್ತದೆ. ಅದನ್ನೆ, 'ಸಿದ್ಧಾಲಯಮಂ ನೆರೆಪೊತ್ತುದ್ಧರಿಪುದು ತನ್ನ ರತ್ನಕಳಶಾವಳಿಯ ಒಂದುಧ್ವಜ ಸಂದರ್ಭದಲ್ಲಿ ಇದನ್ನು 'ಗುಡಿ' ಎಂದೂ ಹೇಳಲಾಗಿದೆ. ದೇವಾಲಯೇತರ ಸಂದರ್ಭದಲ್ಲಿ ಒಂದೆಡೆ 'ಈ ಭೂಮಿಯಲ್ಲಿ ನಮ್ಮ ಅರಸನನ್ನು ಕೈಬೀಸಿ ಎದುರಿಸಿ ಕಾದುವ ಕಲಿಗಳಿಲ್ಲೆಂದು ಸ್ವರ್ಗದವರನ್ನು ಕಲಹಕ್ಕೆ ಕೈಬೀಸಿ ಕರೆವಂತೆ ಡೆಂಕಣಿಗೆಗಳ ಪಳಿವಿಗೆಗಳೆಸೆದವು' ಎಂದರೆ, ದೇವಾಲಯಗಳಲ್ಲಿ ಉತ್ಸವಾರಂಭದ ಸಂಕೇತವಾಗಿ ಹಾರಾಡುವ ಧ್ವಜಕ್ಕೆ, ದೇವಾಲಯದ ಶಿಖರದ ತುದಿಯಲ್ಲಿನ ಪವಿತ್ರಧ್ವಜಕ್ಕೆ ರಾಜನ ಹೆಗ್ಗಳಿಕೆಯ ಕಲ್ಪನೆ ನೀಡಿರುವುದು ವಿಶೇಷವಾಗಿದೆ. ಇನ್ನೂ ಕೆಲವು ರಚನೆಗಳನ್ನು ಕಾವ್ಯಗಳಲ್ಲಿ ಹೇಳಿವೆ. ಇವುಗಳಿಗೆ ಬಸದಿಯ ಮುಂದೆ / ಬಸದಿಯ ಹೊರಗೆ ರತ್ನಮಂಟಪದ ಸಸಿಕಾಂತದ ವೇದಿಕೆ, ವೇದಿಕಾಗ್ರ, ಚಂದ್ರಕಾಂತ ಶಿಲೆ ಇದ್ದವು. ಒಂದೆಡೆ, 'ಬಸದಿಯ ಮುಂದಣ ಮಂದರರದ ಮುಂದೆ ನಿಂದು' ಎಂದಿದೆ. ಇದು ಶ್ರವಣಬೆಳಗೊಳದ ತೇರಿನ ಬಸದಿಯ ಮುಂದಿರುವ ತೇರನ್ನು ನೆನಪಿಸುತ್ತದೆ. 'ಮಂದರ' ಎಂಬುದು ಒಂದು ಪರ್ವತದ ಹೆಸರು; 'ಜೈನ ದೇವತೆಗಳು ತೀರ್ಥಂಕರರಿಗೆ ಪಂಚಕಲ್ಯಾಣಗಳನ್ನು ನೆರವೇರಿಸುವ ಸ್ಥಳವೆಂದು ಭಾವಿಸಲಾದ ಪರ್ವತ' ಎಂದೂ ಹೇಳಲಾಗಿದೆ. ಅದರ ಪ್ರತೀಕವಾಗಿ ಬಸದಿಯ ಮುಂದೆ ಮಂದರವಿದ್ದಿರಬಹುದು.

ದೇವಾಲಯಕ್ಕೆ ಸಂಬಂಧಿಸಿದಂತೆ ಪ್ರಾಕಾರದ ಉಲ್ಲೇಖವು ಸಾಹಿತ್ಯದಲ್ಲಿ ಅಷ್ಟಾಗಿ ಕಂಡು ಬಂದಿಲ್ಲ. ಬಾಚರಸನ ಕಥೆಯಲ್ಲಿರುವಂತೆ, ಕಣಜದ ನಡುವಿನಿಂದ ಪ್ರತ್ಯಕ್ಷವಾದ ದೇವಾಲಯದ ಸುತ್ತ ಗೋಪುರಯುಕ್ತ ಪ್ರಾಕಾರವಿತ್ತು ಎಂದು ಮಾತ್ರ ವಿವರಿಸಿದೆ. ಮಹಾದ್ವಾರದ ಬಳಿ ' ಪ್ರವೇಶ' ಭಾಗದಲ್ಲಿರುವ ಪ್ರತೋಲಿಯ ಎತ್ತರದ ಪ್ರದೇಶದಲ್ಲಿತ್ತು ಎಂದು ಸೂಚಿಸಿರುವುದು ವಿಶೇಷವಾಗಿದೆಯಾದರೂ ಉದು ಬೇರೆಯದೇ ಭಾಗವನ್ನು ಸೂಚಿಸುವಂತಿದೆ. ಪ್ರಾಕಾರದ ಮೇಲಿನ ಗೋಪುರ ಬಗ್ಗೆಯೂ ಹೀಗೆ ಬೇರೆ ಬೇರೆ ರೀತಿಯ ವಿವರಗಳಿವೆ. ಪಶ್ಚಿಮದ ಗೋಪುರ, ಗೋಪುರದೊಳಗೆ ಕುಳ್ಳಿರ್ದ, ಗೋಪುರದೆರಡು ಪಡಿಗಳ ತೆಗೆಸುತ, ಪುರಗೋಪುರದಜಿನಮಂದಿರ, ಗೋಪುರದ್ವಾರ, ಗೋಪುರದಂತರಾಳಮಂ – ಮುತಾದ ಉಲ್ಲೇಖಗಳನ್ನಿಲ್ಲಿ ಗಮನಿಸಬಹುದು. ಇವು ಗೋಪುರದ ಭಾಗಗಳನ್ನು ಸೂಚಿಸುವುದರೊಂದಿಗೆ, ಗೋಪುರದೊಳಗೆ ಓಡಾಡಲು ಸ್ಥಳವಿರುವುದನ್ನು ಸೂಚಿಸುತ್ತದೆ. ಗುಡಿ, ತೋರಣ, ಪತಾಕೆ, ಹೊಂಗಳಸಗಳಿಂದ ಕೂಡಿದ ಮಧುಕೇಶ್ವರ

ದೇವಾಲಯವು. ಇದು ಕೈಲಾಸ ಪರ್ವತವೋ, ಚಂದ್ರನ ತಗಡನಿಲ್ಲಿ ಹೊದಿಸಿದ ವಿನೂತವಾದ ಪುಷ್ಪಕವೋ ಎನ್ನುವಂತೆ ಪ್ರಕಾಶಿಸುತ್ತಿತ್ತು.

ಹೀಗೆ, ದೇವಾಲಯದ ಒಂದೊಂದೇ ಭಾಗದ ಬಗ್ಗೆ ಅಲ್ಲಲ್ಲಿ ಉಲ್ಲೇಖಗಳು ಬಂದಿದ್ದರೆ, ಕೆಲವೆಡೆ ಪೂರ್ಣ ದೇವಾಲಯದ ವಿವರಗಳು ಒಂದೆಡೆಯೇ ಉಲ್ಲೇಖಗೊಂಡಿರುವುದೂ ಇದೆ. ಮಲ್ಲಿನಾಥನೆಂಬ ವರ್ತಕನು ಅಳತೆಯ ಬಳ್ಳವನ್ನೇ ಶಿವಲಿಂಗವೆಂದು ಬಗೆದು ಪೂಜಿಸಿ, ನಂತರ ಅದನ್ನೇ ಸಾಧಿಸ ಹೊರಟಾಗ ಅಲ್ಲಿ ಒಂದು ದೇವಾಲಯ ಪ್ರಕಟವಾಗಿ ಬಳ್ಳವೇ ಶಿವಲಿಂಗವಾಗಿತ್ತು. ಆಗ ಉದಿಸಿದ ದೇವಾಲಯವು ಹಿಗಿತ್ತು : 'ಪ್ರಾಕಟ ಪ್ರಾಕಾರಮುಖಭದ್ರಾಕಲಿತ ಮಂಟಪ ಕನಕ ಶೋಭಾಕಳಶ ಶಿವನಿಳಯದಿದಿರೊಳು ನಂದಿಕೇಶ್ವರನು ಶ್ರೀಕರಂಮಿಗೆ ಬಳ್ಳವದು ಲಿಂಗಾಕಥರಿಯೊಳೆಸೆದಿರ್ದುದೆಲ್ಲಾ ಲೋಕದೊಳು. ಅಂದರೆ ಪ್ರಾಕಾರದಿಂದ ಕೂಡಿದ ಈ ದೇವಾಲಯದಲ್ಲಿ, ಮುಖಭದ್ರ (=ಮುಖ ಮಂಟಪ)ದಿಂದ ಕೂಡಿದ ಮಂಟಪ ಇತ್ತಲ್ಲದೆ ಅದರ ಮೇಲೆ ಚಿನ್ನದ ಕಲಶವಿತ್ತು; ಎದುರಲ್ಲಿ ನಂದಿಯೂ ಕುಳಿತಿರುವುದಲ್ಲದೆ, ಅದರ ಮುಂದಿನ ಮಂಟಪವನ್ನು 'ಮುಖಭದ್ರ' ಎಂದಿದೆ. ಈ ಸಂದರ್ಭದಲ್ಲಿ ಮುಖಭದ್ರವು ಮುಖಮಂಟಪವನ್ನು ಸೂಚಿಸುತ್ತಿದ್ದು, ಇದು ಗರ್ಭಗೃಹ ಮತ್ತು ಮುಂದೆ ಒಂದು ಮಂಟಪ ಮಾತ್ರ ಇರುತ್ತಿದ್ದ ಪ್ರಾಚೀನ ದೇವಾಲಯಗಳ ಸ್ವರೂಪವನ್ನು ಹೇಳುತ್ತಿದೆ ಎನ್ನಬಹುದು. ಇನ್ನೊಂದೆಡೆ ವರ್ಣಿಸಿರುವಂತೆ, ಶಿವನು ಬಿಸಿಲಲ್ಲಿ ಒಣಗುತ್ತಿದ್ದಾನೆಂದು ಜೇಡವೊಂದು ಅವನ ಸುತ್ತ ದೇವಾಲಯವನ್ನು ಕಟ್ಟುತ್ತದೆ. ಆ ದೇವಾಲಯದ ಪೂರ್ಣ ವಿವರ ಇಲ್ಲಿದೆ: ಪರಿವಿಡಿಗಳಿಂದ....... ತನ್ನ ನೂಲಿನಿಂದ ತೆರೆಯ ಮೇಲ್ಕಟ್ಟನಂತೆ ಸುತ್ತಲೂ ವೃಕ್ಷಗುಲ್ಮಲತಾತೃಣಗಳಲ್ಲಿ ರಚಿಸಿತು........ ಅದರ(?) ಮೇಲೆ ಕಪೋತವನ್ನು ರಚಿಸಿತು...... ಕರುವಿಟ್ಟದರೊಳಂಕುರಿಸಿ ಘಂಟೆ ಜಯಭೇರಿಯೆಸೆಯಲು........ ಶಿಖರವನು ನಿಲಿಸಿತು. ದ್ವಾರಬಂಧ, ಕವಾಟ ಕಲಿ(ಲ್ಲಿ)ನ ದ್ವಾರ, ಗರ್ಭಾಗಾರ ಇವುಗಳನ್ನು ರಚಿಸಿತು. ರಾಜಪುರಿಯ ಭವನಗಳ ಬಗ್ಗೆ ಹೇಳುವಾಗ, ನಿಳಯದೊಳೆಸೆವ ಹೊಂಗಳಸಗಳು, ಚೈತನ್ಯಯುತ ಚಿತ್ರಾವಳಿಯನ್ನು ಬೆಸೆವ ಭಿತ್ತಿಗಳು ಮಣಿಖಚಿತ ಲೋವೆಗಳು, ಹೊಳೆವ ಮೆಲ್ಕಟ್ಟುಗಳು ನಭವುಚ್ಚಳಿಪ ಹೆರ್ಮ್ಯಾಳಿಗಳು ಎಂದು ಸಂಕ್ಷಿಪ್ತವಾಗಿ ಭಾಗಗಳನ್ನು ಹೇಳಿದೆ.

ದೀಪದ ಕಲಿಯರು ನಿರ್ಮಾಣ ಮಾಡಿದ ದೇವಾಲಯದ ಸ್ವರೂಪವನ್ನು ಹೀಗೆ ವರ್ಣಿಸಿದೆ; "ಶಿವಭವನಮಂ ಮಂಟಪವನಭಿನವಮೆಸೆಯೆ ಮಾಡಿಸಿಯದಱಸುತ್ತುವರೆ ಕೋಂಟೆಯನಿಕ್ಕಿಸಿದನಗಳು ಗಳನ್ನಗಿಸಿದನು ಜವಳಿಗದವಂ ದ್ವಾರವಂದನ ಹವಣಿಗಾ ಬಾಗಿಲೊಳಮರ್ಚಿಸಿ ನವಕವಾಟದೆಸೆಯೆ ನಿಲಿಸಿದ ದ್ವಾರದ್ವಾರದಲಿ", ಇಲ್ಲಿ ಶಿವಭವನದ ಸುತ್ತ ಕೋಟೆ ಕಟ್ಟಿಸಿದನೆಂದು ಹೇಳಿರುವುದು ಗಮನಾರ್ಹವಾಗಿದೆ. ಸುತ್ತಲಿರುವ ಪ್ರಾಕಾರವನ್ನೇ ಇಲ್ಲಿ ಕೋಟೆ ಎಂದಿರಬಹುದು.

ಬಸದಿ/ದೇವಾಲಯದ ಪೂರ್ಣ ರಚನಾ ವಿನ್ಯಾಸದ ಆಧಾರದ ಮೇಲೆ ಅವುಗಳನ್ನು ಬೇರೆ ಬೇರೆ ಪ್ರಕಾರ(type)ಗಳಾಗಿ ಗುರುತಿಸಲಾಗುತ್ತದೆ. ಸಂಗಮರ ಕಾಲದ ಸಾಹಿತ್ಯದಲ್ಲೂ ಕೆಲವೆಡೆ ಈ ರೀತಿಯ ವಿಶೇಷಣಗಳಿವೆ. ಒಂದೆಡೆ, 'ಸರ್ವಾರ್ಥ ಸಿದ್ಧಾಖ್ಯಮಂದಿರ ಎಂದಿದ್ದಾರೆ. ಇನ್ನೊಂದೆಡೆ ರಾಜಗೇಹವನ್ನು ವರ್ಣಿಸುವಾಗ' ಭೂಮಿಜಮನೆ ಆ ರಾಜಗೇಹವು ನಿರಂತರವಾಗಿ ಶೋಭಿಸುತ್ತಿತ್ತು ಎಂದು ಹೇಳಿದೆ; ಅಂದರೆ ಭೂಮಿಯಲ್ಲೇ ಹುಟ್ಟಿದ್ದೆಂಬಷ್ಟು ಶೋಭಾಯಮಾನವಾಗಿತ್ತೆಂಬ ಅರ್ಥವನ್ನು ಸ್ಫುರಿಸುತ್ತಿದೆ. ಹೊಯ್ಸಳರ ಕಾಲದಲ್ಲಿ 'ಭೂಮಿಜ' ಎಂಬ ಒಂದು ಪ್ರಕಾರದ ದೇವಾಲಯ ನಿರ್ಮಾಣವಾಗಿದೆ. ಅದನ್ನೇ ಇಲ್ಲಿ ರಾಜಗೇಹಕ್ಕೆ ಅನ್ವಯಿಸಿ ಹೇಳಿರಬೇಕು. ವಾಸ್ತುರೀತ್ಯಾ ರಚನಾತ್ಮಕವಾಗಿ ಇದಕ್ಕೆ ಹೋಲಿಕೆ ಇದೆಯೇ ಎಂಬುದು ಪ್ರಶ್ನಾರ್ಹವೇ ಇದರೊಂದಿಗೆ 'ಸರ್ವತೋಭದ್ರ ಪ್ರಾಸಾದ' ಎಂಬ ಉಲ್ಲೇಖವೂ ದೊರೆತಿದ್ದು, ಇದು ಆ ಭವನದ ಮಾದರಿಯನ್ನು ಹೇಳುತ್ತಿರುವಂತಿದೆ; ಅಂತೇ 'ದಿಶಾವಲೋಕನ ಪ್ರಾಸಾದವಾದ ಸರ್ವತೋಭದ್ರವೆಂಬ ಏಳನೆಯ ನೆಲೆಯ ಮಣಿಗಳಿಂದ ಲಂಕೃತವಾದ' ಎಂದಿದ್ದು, ಇಲ್ಲಿ ಸರ್ವತೋಭದ್ರವೆಂಬುದು ಒಂದು ನೆಲೆಯ ಹೆಸರಿನಂತಿದೆ. ಹಾಗೆ ನೋಡಿದರೆ 'ಸರ್ವತೋಭದ್ರ'ವೆಂಬುದು ದೇವಾಲಯದ ಒಂದು ಪ್ರಕಾರವಾಗಿದ್ದು, ಈ ಮೇಲಿನ ದೇವಾಲಯೇತರ ಉಲ್ಲೇಖಗಳಿಗೆ ಅನ್ವಯಿಸಲಾಗುವುದಿಲ್ಲ. ಬಹುಶಃ ಇವು ಅರಮನೆಯ ರಚನೆಗೆ ಸಂಬಂಧಿಸಿದ್ದಾಗಿರಬೇಕು.

ಬಸದಿಗೆ ಸಂಬಂಧಿಸಿದಂತೆ, 'ಸುರವಿಮಾನಾಕಾರ' ಎಂಬ ಉಲ್ಲೇಖವಿದೆ. ವಾಸ್ತುರೀತ್ಯಾ 'ಸುರವಿಮಾನಾಕಾರ' ಎಂಬ ಉಲ್ಲೇಖವಿಲ್ಲದಿದ್ದರೂ, 'ವಿಮಾನಚ್ಛಂದಕ' ಎಂಬ ಒಂದು ರೀತಿಯ ಭವನದ ಬಗ್ಗೆ ಉಲ್ಲೇಖವಿರುವುದಾಗಿ ತಿಳಿದುಬರುತ್ತದೆ. ಪಿ.ಕೆ. ಆಚಾರ್ಯ ಅವರು, ಏಳು ಅಂತಸ್ತಿನ ಭವನವಾಗಿದ್ದು, ಅದು ೨೧ ಹಸ್ತ ವಿಸ್ತಾರವಾಗಿದ್ದು, ಜಾಲಂದ್ರಗಳಿಂದ ಕೂಡಿದ್ದರೆ ಅದು 'ವಿಮಾನಚ್ಛಂದಕ' ರೀತಿ ಎಂದು, ಮತ್ಸ್ಯಪುರಾಣ ಮತ್ತು ಬೃಹತ್ಸಂಹಿತಾ ಗ್ರಂಥಗಳ ಆಧಾರದಿಂದ ಹೇಳಿದ್ದಾರೆ. ಇದನ್ನು ಅನ್ವಯಿಸಿ ವ್ಯಾಖ್ಯಾನಿಸುವಷ್ಟು ವಿವರ ಕಾವ್ಯದಲ್ಲಿಲ್ಲ.

ಈ ಎಲ್ಲ ವಿವರಗಳನ್ನು ಅವಲೋಕಿಸಿದರೆ ಕೆಲವು ಅಂಶಗಳು ನಮ್ಮ ಗಮನಕ್ಕೆ ಬರುತ್ತದೆ. ದೇವಾಲಯವನ್ನು ವಿವರಿಸುವಾಗ ಪೂರ್ತಿ ಮೇಲ್ಕಟ್ಟಡವನ್ನು 'ಶಿಖರ' ಎಂದು ಹೇಳಿರುವುದಲ್ಲದೆ, ಶಿಖರದಲ್ಲಿ ಧ್ವಜವಿರುವುದೆಂದು ಹೇಳಿದೆ. ಇದು ಉತ್ತರ ಭಾರತ ರೀತಿಯ ದೇವಾಲಯಗಳಿಗೆ ಅನ್ವಯವಾಗುತ್ತದೆ. ಕೆಲವು ವಿವರಗಳು ಈಗಿರುವ ದೇವಾಲಯಗಳಿಗೂ ಅನ್ವಯವಾಗುವಂತಿವೆ. ಜನಬಳಕೆಯ ಪದಗಳನ್ನೂ ವಾಸ್ತು ವಿವರದಲ್ಲಿ ಬಳಸಿರುವುದರಿಂದ ವಿಷಯವು ಸುಲಭವಾಗಿ ಅರ್ಥವಾಗುತ್ತದೆ. ಪಾರಿಭಾಷಿಕ ಪದಗಳಿದ್ದರೂ ಕೆಲವೆಡೆ ಅವು ವಾಸ್ತುಶಾಸ್ತ್ರಕ್ಕಿಂತ ಭಿನ್ನ ಅರ್ಥವನ್ನು ನೀಡುತ್ತಿವೆ ಹಾಗೂ ಕೆಲವೆಡೆ ಹಲವು 'ಪ್ರಕಾರ' (Temple type)ಗಳ ಹೆಸರನ್ನು ಬಳಸಿದ್ದರೂ, ಅದು ಪಾರಿಭಾಷಿಕವಾಗಿ ಸರಿಯಾಗಿ ಬಳಸಿರುವ ಶಬ್ದವೇ ಎಂಬುದನ್ನು ಹೆಚ್ಚಿನ ಅಧ್ಯಯನದಿಂದ ತಿಳಿಯಬೇಕಾಗಿದೆ. ಹೀಗೆ ವಿವಿಧ ದೃಷ್ಟಿಕೋನಗಳಿಂದ ಈ ವಿಷಯವು ಅಧ್ಯಯನಾರ್ಹವಾಗಿದೆ. ಸಾಹಿತ್ಯಕೃತಿಗಳಿಂದ ಸಾಮಾನ್ಯವಾಗಿ ಸಾಂಸ್ಕೃತಿಕ ಅಂಶಗಳನ್ನು, ದೇವಾಲಯಗಳಿಗೆ ಸಂಬಂಧಿಸಿದಂತೆ ಪೂಜೆ, ಆಚರಣೆಗಳಿಗೆ ಸಂಬಂಧಿಸಿದ ವಿವಿರಗಳನ್ನು ಹೆಕ್ಕಿ ತೆಗೆಯುವುದುಂಟು. ಆದರೆ, ದೇವಾಲಯ ರಚನಾ ಸಂಬಂಧೀ ವಿವರಗಳನ್ನು ವಾಸ್ತುಶಿಲ್ಪಶಾಸ್ತ್ರದ ದೃಷ್ಟಿಯಿಂದ ಅದ್ಯಯನ ಮಾಡಬಹುದೆಂಬುದನ್ನು ಈ ಮೇಲಿನ ಅಂಶಗಳು ಸ್ಪಷ್ಟಪಡಿಸುತ್ತಿದೆ.

*****

# ನೊಳಂಬರ ದೇವಾಲಯಗಳಲ್ಲಿ ವಾಸ್ತು ಶಿಲ್ಪ

* ಡಾ|| ಎಚ್. ಜಯಮ್ಮ ಕರಿಯಣ್ಣ

ಭಾರತದಲ್ಲಿ ರಚಿತವಾಗಿರುವ ದೇವಾಲಯಗಳನ್ನು ವಾಸ್ತು ರಚನಾ ರೀತಿಯಿಂದ ವಿದ್ವಾಂಸರು ಸ್ಥೂಲವಾಗಿ ನಾಗರ, ವೇಸರ ಮತ್ತು ದ್ರಾವಿಡ ಶೈಲಿಯವೆಂದು ವಿಂಗಡಿಸಿದ್ದಾರೆ. ನಾಗರ ಶೈಲಿಯ ದೇವಾಲಯಗಳು ಉತ್ತರ ಭಾರತದಲ್ಲಿಯೂ, ದ್ರಾವಿಡ ಶೈಲಿಯ ದೇವಾಲಯಗಳು ದಕ್ಷಿಣ ಭಾರತದಲ್ಲಿ ಹೆಚ್ಚು ಪ್ರಚಾರದಲ್ಲಿವೆ. ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ವೇಸರ ಶೈಲಿಯ ದೇವಾಲಯಗಳು, ನಾಗರ ಮತ್ತು ದ್ರಾವಿಡ ಶೈಲಿಗಳ ಮಿಶ್ರಣದ ದೇವಾಲಯಗಳು ಕಾಣಬರುತ್ತವೆ. ಕೆಲವು ಬಾರಿ ರಾಜಕೀಯ ವಂಶಗಳ ಅಂದರೆ ಬಾದಾಮಿ ಚಲುಕ್ಯ, ರಾಷ್ಟ್ರಕೂಟ, ಕಲ್ಯಾಣ, ಪಲ್ಲವ, ಚೋಳ ವಾಸ್ತು ಶಿಲ್ಪಶೈಲಿ ಎಂದೂ ವಿಂಗಡಿಸಲಾಗಿದೆ. ಇದಕ್ಕೆ ಆಯಾ ರಾಜವಂಶಗಳ ಕಾಲದಲ್ಲಿ ಬಳಸಿರುವ ಶಿಲೆ, ಕಂಡರಿಸಿರುವ ಕ್ರಮ, ಮೂರ್ತಿಗಳ ಲಕ್ಷಣಗಳ ಆಧಾರವಾಗಿವೆ.

ನೊಳಂಬರು ಅಥವಾ ನೊಳಂಬ ಪಲ್ಲವ ರಾಜಧಾನಿ ಈಗಿನ ಆಂಧ್ರಪ್ರದೇಶದ ಮಡಕಶಿರ ತಾಲೂಕಿನ ಹೆಂಜೇರು ಅಥವಾ ಹೇಮಾವತಿಯಾಗಿತ್ತು. ಪ್ರಾರಂಭದಲ್ಲಿ ನೊಳಂಬಳಿಗೆ ಸಾಸಿರವೆಂಬ ಸಣ್ಣ ಪ್ರಾಂತ್ಯದ ಮೇಲೆ ಆಧಿಪತ್ಯ ನಡೆಸಿ ಕ್ರಮೇಣ ನೊಳಂಬವಾಡಿಯ ೩೨೦೦೦ ಎಂಬ ವಿಸ್ತಾರವಾದ ಪ್ರದೇಶವನ್ನು ಆಳಿದರು. ಈ ಪ್ರಾಂತ್ಯವು ಈಗಿನ ಕರ್ನಾಟಕದ ಕೋಲಾರ, ತುಮಕೂರು, ಬೆಂಗಳೂರು, ಬಳ್ಳಾರಿ, ಚಿತ್ರದುರ್ಗ ಮತ್ತು ಅದಕ್ಕೆ ಸೇರಿದ ಸುತ್ತಮುತ್ತಲಿನ ಪ್ರದೇಶಗಳು, ತಮಿಳುನಾಡಿನ ಧರ್ಮಪುರಿ, ಈಗಿನ ಆಂಧ್ರಪ್ರದೇಶಕ್ಕೆ ಸೇರಿದ ಅನಂತಪುರ ಜಿಲ್ಲೆಗಳನ್ನೊಳಗೊಂಡಿತ್ತು. ಸುಮಾರು ಮೂರು ಶತಮಾನಗಳ ಕಾಲ ಕರ್ನಾಟಕವನ್ನು ಆಳಿದ ನೊಳಂಬರು ಕರ್ನಾಟಕದ ಭವ್ಯ ಇತಿಹಾಸ ಪರಂಪರೆಗೆ ಭದ್ರಬುನಾದಿ ಹಾಕಿದರು. ನೊಳಂಬರು ರಾಜಕೀಯ ಇತಿಹಾಸದಲ್ಲಿ ಹೇಗೆ ಪ್ರಮುಖ ಪಾತ್ರ ವಹಿಸಿದರೋ ಹಾಗೆಯೇ ಕರ್ನಾಟಕದ ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಬೆಳಗಿಸುವುದರಲ್ಲಿಯೂ ಸಹ ಆಸಕ್ತಿವಹಿಸಿದರು. ಇವರ ಕಾಲದ ವಾಸ್ತುಶಿಲ್ಪ ಶೈಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿತು. ಇವರ ರಾಜಧಾನಿ ಹೆಂಜೇರು ಅಥವಾ ಹೇಮಾವತಿಯಲ್ಲಿ ಮತ್ತು ಅವರ ಆಳ್ವಿಕೆಗೆ ಸೇರಿದ ಪ್ರದೇಶಗಳಲ್ಲಿ ಅನೇಕ ದೇವಾಲಯಗಳನ್ನು ಕಟ್ಟಿಸಿದರು. ಕೋಲಾರ ಜಿಲ್ಲೆಯ ಆವನಿ, ನಂದಿ ಮತ್ತು ತಮಿಳುನಾಡಿನ ಧರ್ಮಪುರಿ, ಅರಳಗುಪ್ಪೆ, ನೊಣವಿನಕೆರೆ, ಬರಗೂರು, ಹೆಬ್ಬಟ, ಕಂಬದೂರು, ಬೇತಮಂಗಲ ಮುಂತಾದ ಸ್ಥಳಗಳಲ್ಲಿಯೂ ಇವರ ಶಿಲ್ಪಶೈಲಿಯ ದೇವಾಲಯಗಳನ್ನು ಇಂದೂ ಸಹ ನೋಡಬಹುದು. ನೊಳಂಬರು ರಚಿಸಿದ ಮೂಲಸ್ಥಿತಿಯಲ್ಲಿರುವ ದೇವಾಲಯಗಳು ಹೆಚ್ಚು ಕಾಣಬರುವುದಿಲ್ಲ. ಚೆನ್ನೈನಲ್ಲಿರುವ ವಸ್ತುಸಂಗ್ರಹಾಲಯದಲ್ಲಿ ನೊಳಂಬರ ಶಿಲ್ಪಗಳನ್ನು ಸಂಗ್ರಹಿಸಿಡಲಾಗಿದೆ.

ಹೇಮಾವತಿಯಲ್ಲಿರುವ ದೇವಾಲಯಗಳಲ್ಲಿ ಅತ್ಯಂತ ವಿಶಾಲವಾದ ದೇವಾಲಯವೆಂದರೆ ದೊಡ್ಡೇಶ್ವರ (ನೊಳಂಬೇಶ್ವರ) ದೇವಾಲಯ. ಪಶ್ಚಿಮಾಭಿಮುಖವಾಗಿ ನಿಂತಿರುವ ಈ ದೇವಾಲಯದ ಮುಂಭಾಗದಲ್ಲಿ ಕಲ್ಲಿನ ಒಂದು ನಂದಿ ಮಂಟಪವಿದೆ, ದೇವಾಲಯದ ಒಳಭಾಗದಲ್ಲಿ ಅರ್ಧಮಂಟಪ ಮತ್ತು ಚಿಕ್ಕದಾದ ಗರ್ಭಗೃಹವಿದೆ. ದೇವಾಲಯವನ್ನು ವಿವಿಧ ರೀತಿಯ ಅಚ್ಚುಪಟ್ಟಿಗಳುಳ್ಳ ಅಧಿಷ್ಠಾನದ ಮೇಲೆ ಕಟ್ಟಲಾಗಿದೆ. ಒಳಭಾಗದ ಎಲ್ಲ ಕಂಭಗಳೂ ಸುಂದರ ಕೆತ್ತನೆಗಳಿಂದ ಕೂಡಿವೆ. ದೇವಾಲಯದ ಒಳಭಾಗದಲ್ಲಿ ಜಾಲಂಧ್ರಗಳನ್ನು ನವರಂಗದ ಪಕ್ಕಗಳಲ್ಲಿ ಮುಂಭಾಗದಲ್ಲಿ ಹಾಗೂ ಅರ್ಧಮಂಟಪದ ಪಕ್ಕದಲ್ಲಿಡಲಾಗಿದೆ. ಈ ಜಾಲಂಧ್ರಗಳು ನೊಳಂಬರ ಕಾಲದ ಕೆತ್ತನೆಗೆ ಉತ್ತಮ ಉದಾಹರಣೆಗಳು. ಇವುಗಳಲ್ಲಿ ಬ್ರಹ್ಮ, ವಿಷ್ಣು, ಕಾರ್ತಿಕೇಯ, ಮಿಥುನಶಿಲ್ಪಗಳು, ಗಂಗಾ ಮತ್ತು ಲತಾಪಟ್ಟಿಕೆಗಳ ಅಲಂಕರಣಗಳಿವೆ. ನವರಂಗದ ಮತ್ತು ಗರ್ಭಗೃಹದ ಬಾಗಿಲುವಾಡಗಳು ಆಕರ್ಷಕವಾಗಿದ್ದು ದ್ವಾರಪಾಲಕರು, ನಿಧಿ, ಗಂಗಾ, ಯಮುನಾ ಇತ್ಯಾದಿ ಶಿಲ್ಪಗಳನ್ನು ಹೊಂದಿವೆ. ನವರಂಗದ ಮೇಲ್ಭಾಗದಲ್ಲಿ ಅಷ್ಟದಿಕ್ಪಾಲಕರೊಡನೆ ಜೊತೆಗೂಡಿ ನರ್ತನ ಮಾಡುತ್ತಿರುವ ಶಿವನ ಸಾಲು ಚಿತ್ರವಿದೆ.

---

* 'ಆಶೀರ್ವಾದ', ೨೯೩೩, ೧೩ನೆ ಮುಖ್ಯರಸ್ತೆ, ವಿಜಯನಗರ ೨ನೆ ಹಂತ, ಬೆಂಗಳೂರು-೫೬೦ ೦೪೦.

ಹೇಮಾವತಿಯ ಸಿದ್ಧೇಶ್ವರ, ವಿರೂಪಾಕ್ಷ ಮತ್ತು ಮಲ್ಲೇಶ್ವರ ದೇವಾಲಯಗಳನ್ನು ನವೀಕರಿಸಲಾಗಿ ಇರುವುದರಿಂದ ಮೂಲ ಸ್ವರೂಪ ತಿಳಿಯುವುದಿಲ್ಲ. ಇಲ್ಲಿಯ ದೇವಾಲಯಗಳ ನಿರ್ಮಾಣಕ್ಕೆ ಶಾಸನಾಧಾರ ಇಲ್ಲವಾದರೂ ದೊಡ್ಡೇಶ್ವರ (ನೊಳಂಬೇಶ್ವರ) ದೇವಾಲಯದ ದಕ್ಷಿಣ ಭಾಗದ ಗೋಡೆಯ ಮೇಲೆ ವರುಣಶಿವ ಭಟ್ಟಾರರ ಹೆಸರುಳ್ಳ ಶಾಸನವಿದೆ. ವರುಣಶಿವ ಭಟ್ಟಾರರು ಅಣ್ಣಿಗೆ ಬೀರನೊಳಂಬನ ಮಹಾಸಾಮಂತಾಧಿಪತಿಯಾಗಿ ನೊಳಂಬೇಶ್ವರ ಸ್ಥಾನವನ್ನು ಆಳ್ವಿಕೆ ಮಾಡುತ್ತಿದ್ದೇನೆಂದು ಕ್ರಿ.ಶ. ೯೬೨ರ ಮಡಕಶಿರಾ ಶಾಸನ ಉಲ್ಲೇಖಿಸಿದೆ. ಬಹುಶಃ ಈ ದೇವಾಲಯಗಳು ವರುಣಶಿವ ಭಟ್ಟಾರರ ಕಾಲಕ್ಕೆ ಮೊದಲೇ ನಿರ್ಮಾಣವಾಗಿದ್ದಿರಬೇಕು. ಹೇಮಾವತಿಯ ದೊಡ್ಡೇಶ್ವರ ದೇವಾಲಯದಲ್ಲಿ ಚಂದ್ರಶೇಖರ ಮೂರ್ತಿ, ಸೂರ್ಯ, ವಿಷ್ಣು, ಭೈರವ, ಸಪ್ತಮಾತೃಕೆಯರ ಸಾಲು ಹಾಗೂ ಬಿಡಿಶಿಲ್ಪಗಳು ಹಾಗೂ ಸೂರ್ಯನ ಶಿಲ್ಪಗಳು ಇದ್ದು ಇವರ ಕಾಲದಲ್ಲಿ ಸೂರ್ಯಾರಾಧನೆ ಇತ್ತೆಂದು ತಿಳಿದು ಬರುತ್ತದೆ. ಅಲ್ಲದೆ ನೊಳಂಬರು ಶೈವರಾಗಿದ್ದರೂ ಸಮಭಂಗಿಯಲ್ಲಿ ನಿಂತಿರುವ, ಶಂಖ, ಚಕ್ರ, ಪದ್ಮ, ಗದಾಧಾರಿ, ವಿಷ್ಣುವಿನ ಪ್ರತಿಮೆಗಳು ಇವೆ.

ಹೇಮಾವತಿಯ ದೊಡ್ಡೇಶ್ವರ ದೇವಾಲಯದಲ್ಲಿ ಸಾಲಾಗಿರುವ ಸಹಜಾಕಾರದ ಬ್ರಾಹ್ಮೀ, ಮಾಹೇಶ್ವರಿ ಮತ್ತು ಕೌಮಾರಿಯರು ಪೀಠದ ಮೇಲೆ ಕುಳಿತು ಪ್ರತಿ ವಿಗ್ರಹವೂ ನಾಲ್ಕು ಕೈಗಳನ್ನು ಹೊಂದಿದ್ದು ಶಂಕುವಿನಾಕಾರದ ಕಿರೀಟ, ಹಲವು ಪ್ರಕಾರದ ಕಂಠಾಭರಣ, ಕೇಯೂರ, ಬಳೆಗಳು, ಕಾಲಿನಲ್ಲಿ ಧರಿಸುವ ಸರಗಳು, ಯಜ್ಞೋಪವೀತ ಮುಂತಾದವುಗಳನ್ನು ಹೊಂದಿವೆ. ಬ್ರಾಹ್ಮಿಯು ಚತುರ್ಮುಖಗಳನ್ನು, ಮಹೇಶ್ವರಿಯು ಒಂದು ಕೈಯ್ಯಲ್ಲಿ ತ್ರಿಶೂಲ, ಮತ್ತೊಂದು ಕೈಲಿ ಡಮರುಗವನ್ನು, ಕೌಮಾರಿಯು ಒಂದು ಕೈಯ್ಯಲ್ಲಿ ಅಂಕುಶವನ್ನು ಹಿಡಿದಿದ್ದಾಳೆ. ಪೀಠದ ಮೇಲೆ ಅವರವರ ವಾಹನವಾದ ಹಂಸ, ನಂದಿ ಮತ್ತು ಮಯೂರವನ್ನು ಸಣ್ಣದಾಗಿ ಕೆತ್ತಲಾಗಿದೆ. ಇದಲ್ಲದೆ ದೇವಾಲಯದಲ್ಲಿ ಸಾಲಾಗಿರುವ ಸಪ್ತಮಾತೃಕೆಯರ ಹಲವಾರು ಬಿಡಿ ಶಿಲ್ಪಗಳು ಗಮನಾರ್ಹವಾಗಿದೆ. ಈ ಶಿಲ್ಪಗಳು ಸಹ ನೊಳಂಬರ ಇತರ ಶಿಲ್ಪಗಳಂತೆ ಸಹಜ ಸೌಂದರ್ಯದಿಂದ ಕೂಡಿವೆ. ಅಂಗ ವಿನ್ಯಾಸ, ಕೃಶವಾದ ಕಟಿಪ್ರದೇಶ, ಮುಗ್ಧ ಹಾಗೂ ಗಾಂಭೀರ್ಯದಿಂದ ಕೂಡಿರುವ ಮುಖಮುದ್ರೆ, ವಿವಿಧ ರೀತಿಯ ಹಸ್ತ ಮುದ್ರೆಗಳು, ಎಡಗಾಲನ್ನು ಪೀಠದಿಂದ ಕೆಳಕ್ಕೆ ಇಳಿಬಿಟ್ಟು ಕುಳಿತಿರುವ ಈ ಮಾತೃಕೆಯರ ಶಿಲ್ಪಗಳು ಶ್ರೇಷ್ಠವಾಗಿವೆ. ಇದೇ ದೇವಾಲಯದಲ್ಲಿರುವ, ಚಿಕ್ಕದಾಗಿರುವ ಬ್ರಾಹ್ಮಿಯ ಉಬ್ಬು ಶಿಲ್ಪದ ಮೂರು ಮುಖಗಳನ್ನು ಮಾತ್ರ ಬಿಡಿಸಲಾಗಿದೆ. ಆಭರಣಗಳಿಂದ ಅಲಂಕೃತಳಾದ ಬ್ರಾಹ್ಮೀ ಜಟಾಮುಕುಟಧಾರಿಯಾಗಿ ಮೇಲಿನ ಎರಡು ಕೈಗಳಲ್ಲಿ ಕಮಲ ಮತ್ತು ಥಾಲಿಯನ್ನು, ಕೆಳಗಿನ ಎರಡು ಕೈಗಳಲ್ಲಿ ಅಭಯಮುದ್ರೆ ಮತ್ತು ಫಲವನ್ನು ಹಿಡಿದಿರುವಂತೆ ಬಿಡಿಸಲಾಗಿದೆ. ಪೀಠದ ಮೇಲೆ ಸುಂದರವಾದ ಹಂಸದ ಚಿತ್ರವೂ ಇದೆ.

ನೊಳಂಬರ ಹಲವು ಶಿಲ್ಪಗಳು ಚೆನ್ನೈ ವಸ್ತುಸಂಗ್ರಹಾಲಯದಲ್ಲಿವೆ. ಪೆನುಗೊಂಡೆಯಲ್ಲಿ ದೊರೆತ ಉಮಾಮಹೇಶ್ವರ ವಿಗ್ರಹ, ಸುಖಾಸೀನನಾದ ಶಿವ, ಶಿವನ ಎಡ ತೊಡೆಯ ಮೇಲೆ ಬಲ ಮೊಳಕೈ ಊರಿ ಕುಳಿತಿರುವ ಉಮೆಯ ಶಿಲ್ಪ ಸುಂದರವಾಗಿದೆ. ಉಮೆ ತನ್ನ ಎಡಗೈಯಲ್ಲಿ ಕುಮುದವನ್ನು ಹಿಡಿದಿದ್ದಾಳೆ. ಉಮೆಯು ಧರಿಸಿರುವ ಸೀರೆಯಲ್ಲಿ ನೆರಿಗೆಗಳನ್ನು ವಿವರವಾಗಿ ಬಿಡಿಸಿದೆ. ಆಕೆಯು ಧರಿಸಿರುವ ಹಲವು ಆಭರಣಗಳು, ಕೇಶಾಲಂಕಾರಗಳು ಸೂಕ್ಷ್ಮ ಮತ್ತು ಸುಂದರವಾಗಿವೆ. ಶಿವನಿಗೆ ನಾಲ್ಕು ಕೈಗಳಿದ್ದು ಕ್ರಮವಾಗಿ ತ್ರಿಶೂಲ, ಆಗಮ ಶಾಸ್ತ್ರದ ಪುಸ್ತಕ, ಫಲಗಳಿದ್ದು, ತನ್ನ ಕೆಳಗಿನ ಎಡದ ಕೈಯಿಂದ ಉಮೆಯ ಸೊಂಟವನ್ನು ಬಳಸಿದ್ದಾನೆ. ಶಿವನು ಜಟಾ ಮುಕುಟ, ಕುಂಡಲಗಳು, ಕಂಠಾಭರಣಗಳು, ಯಜ್ಞೋಪವೀತ, ಕೈಬಳೆ, ಕಾಲಂದಿಗೆಗಳನ್ನು ಧರಿಸಿದ್ದಾನೆ. ಶಿಲ್ಪದ ಹಿಂಭಾಗದಲ್ಲಿ ದೊಡ್ಡದಾದ ಪ್ರಭಾವಳಿ ಹಾಗೂ ಪೀಠದ ಮುಂಭಾಗದಲ್ಲಿ ಕುಳಿತ ನಂದಿಯ ಸಣ್ಣ ಚಿತ್ರವಿದೆ. ಈ ಶಿಲ್ಪ ಶಿಲ್ಪಿಯ ಕಲಾಕೌಶಲ್ಯಕ್ಕೆ ಉತ್ತಮ ನಿದರ್ಶನವಾಗಿದೆ.

ಇದೇ ಭಂಗಿಯಲ್ಲಿರುವ ಶಿವಪಾರ್ವತಿಯರ ಮತ್ತೊಂದು ಶಿಲ್ಪವು ಕುಳಿತಿರುವ ವೀಣಾಧರ ದಕ್ಷಿಣಾಮೂರ್ತಿ ವಿಗ್ರಹ. ನೊಳಂಬರ ದುಂಡು ಶಿಲ್ಪಕ್ಕೆ ಉತ್ತಮ ಉದಾಹರಣೆಯಾಗಿದೆ. ಶಿಲ್ಪದ ಗಂಭೀರ ಮುಖಭಾವ, ಸೂಕ್ತ ಅಲಂಕರಣ ಮತ್ತು ವಿಗ್ರಹದ ಅಂಗ ವಿನ್ಯಾಸ ಶಿಲ್ಪಿಯ ಕಲಾಚಾತುರ್ಯಕ್ಕೆ ಉತ್ತಮ ಉದಾಹರಣೆಯಾಗಿದೆ. ಮತ್ತೊಂದು ಶಿಲ್ಪ ಸಮಭಾವದಲ್ಲಿ ನಿಂತಿರುವ ಸೂರ್ಯನದು. ಉತ್ತಮ ಅಲಂಕರಣದಿಂದ ಕೂಡಿದ, ಸುಂದರವಾದ ಕಂಠಾಭರಣ, ಕುಂಡಲಗಳು, ಕಟಿಬಂಧ, ವಸ್ತ್ರಾಲಂಕರಣ ಮತ್ತು ಸೂಕ್ಷ್ಮ ಕೆತ್ತನೆಗಳಿಂದ ಕೂಡಿದ ಕಿರೀಟ, ಮೊಣಕಾಲಿನರಗೂ ಇಳಿಬಿದ್ದಿರುವ ಯಜ್ಞೋಪವೀತ ಇವು

ಶಿಲ್ಪದ ವಿಶಿಷ್ಟತೆಯನ್ನು ತೋರಿಸುತ್ತವೆ. ನೊಳಂಬರ ಶಿಲ್ಪಗಳಲ್ಲಿ ಸೂರ್ಯನ ಶಿಲ್ಪಗಳು ಹಲವಾರಿದ್ದು, ಹೇಮಾವತಿಯ ದೊಡ್ಡೇಶ್ವರ ದೇವಾಲಯದಲ್ಲಿರುವ ಸೂರ್ಯ ಶಿಲ್ಪಗಳು ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಿವೆ. ಇವಲ್ಲದೆ ಚೆನ್ನೈ ವಸ್ತುಸಂಗ್ರಹಾಲದಲ್ಲಿ ರಾಮ, ಸೀತೆ, ನಟರಾಜ, ಕಾಳಿ, ಅಷ್ಟದಿಕ್ಪಾಲಕರ ಶಿಲ್ಪಗಳೂ ಇವೆ. ಐದು ಅಡಿ ಎತ್ತರವಿರುವ ಕಾಳಿಯು ಸಹಜಾಕಾರದಲ್ಲಿ ಸುಖಾಸೀನಳಾಗಿ ಪೀಠದಮೇಲೆ ಕುಳಿತು ಎಡಗಾಲನ್ನು ಕೆಳಗೆ ಇಳಿಬಿಟ್ಟಿರುವಂತೆ ಕೆತ್ತಲಾಗಿದೆ. ಹರಡಿದ ಜ್ವಾಲೆಯಂತಿರುವ ಕೇಶಾಲಂಕಾರ, ಹಣೆಯ ಮೇಲೆ ಅಲಂಕೃತ ಪಟ್ಟಿ ಅದರ ಮೇಲೆ ತಲೆಬುರುಡೆ ಮತ್ತು ಕಾಳಿಯ ವಿಗ್ರಹದಿಂದ ಹೊರಬಂದು ಹೆಡೆಬಿಚ್ಚಿ ನಿಂತಿರುವ ನಾಗಗಳು, ಕಾಳಿದೇವತೆಯ ರೌದ್ರತೆಯ ದರ್ಶನ ಮಾಡಿಸುತ್ತವೆ. ಕಿವಿಗಳಲ್ಲಿ ಕರ್ಣಕುಂಡಲಗಳಿಗೆ ಬದಲಾಗಿ ಬಲಗಿವಿಯಲ್ಲಿ ನೇತಾಡುತ್ತಿರುವ ಮನುಷ್ಯನ ಶೂಲ, ಎಡಗಿವಿಯಲ್ಲಿ ಗೂಬೆಯ ಚಿತ್ರ, ನಾಗಕುಚಬಂಧ, ಕೊರಳಲ್ಲಿ ರುಂಡಮಾಲೆಯನ್ನು ಧರಿಸಿರುವಂತೆ ಶಿಲ್ಪವಿದೆ. ಎರಡೂ ಕೈಗಳು ಭಿನ್ನವಾಗಿರುವುದರಿಂದ ಹಿಡಿದಿರುವ ಆಯುಧಗಳು ತಿಳಿಯುವುದಿಲ್ಲ. ಕೊರಳಲ್ಲಿ ಕೇಯೂರ ಮತ್ತು ಕಂಠಾಭರಣ ಧರಿಸಿದ್ದಾಳೆ.

ನೊಳಂಬರ ದೇವಾಲಯಗಳಲ್ಲಿನ ವೈಶಿಷ್ಟ್ಯವೆಂದರೆ ನವರಂಗದ ಮೇಲ್ಛಾವಣಿಯ ನಡುವೆ ಕೆತ್ತಲಾಗಿರುವ ಅಷ್ಟದಿಕ್ಪಾಲಕರಿಂದ ಸುತ್ತುವರಿದಿರುವ ಶಿವನ ಶಿಲ್ಪಗಳು. ಇದನ್ನು ನೊಳಂಬರ ಎಲ್ಲಾ ದೇವಾಲಯಗಳಲ್ಲೂ ಅಲಂಕಾರಿಕ ಛಾವಣಿಯಲ್ಲಿ ನೋಡಬಹುದು. ಬಹುಶಃ ನೊಳಂಬರ ಅತ್ಯುತ್ತಮ ಅಷ್ಟದಿಕ್ಪಾಲಕರ ಶಿಲ್ಪ ತಿಮಕೂರು ಜಿಲ್ಲೆಯ ಅರಳುಗುಪ್ಪೆ ಕಲ್ಲೇಶ್ವರ ದೇವಾಲಯಲ್ಲಿದೆ. ಚೆನ್ನೈವಸ್ತುಸಂಗ್ರಹಾಲಯದಲ್ಲಿರುವ ಅಗ್ನಿ, ಯಮ, ನಿಯತಿಯರಿರುವ ಅಷ್ಟದಿಕ್ಪಾಲಕರ ಶಿಲ್ಪದ ಒಂದು ಭಾಗದಲ್ಲಿ ಅಗ್ನಿಯು ಟಗರಿನ ಮೇಲೆ, ಯಮನು ಕೋಣನ ಮೇಲೆ ತಮ್ಮ ಪತ್ನಿಯರೊಡನೆ ಕುಳಿತಿದ್ದಾರೆ. ವಿವಿಧ ಆಯುಧಗಳನ್ನು ಹಿಡಿದಿರುವ ಸಹಚರರ ಶಿಲ್ಪಗಳಿವೆ.

ಹೇಮಾವತಿಯ ದೊಡ್ಡೇಶ್ವರ ದೇವಾಲಯದಲ್ಲಿ ದೇವಕೋಷ್ಠಗಳಿಲ್ಲ. ನವರಂಗದ ಮತ್ತು ಅಂತರಾಳದ ಭಾಗದ ವಾತಾಯನದಲ್ಲಿ ಮಾತ್ರ ದೇವತಾ ವಿಗ್ರಹಳು ಮತ್ತು ಬಳ್ಳಿಯ ಅಲಂಕಾರಗಳಿವೆ. ಬಾಗಿಲುವಾಡ, ಕಮಲದಳ ಶಾಖೆ, ರಜ್ಜುಶಾಖೆ, ಸಿಂಹಶಾಖೆ, ಸ್ತಂಭಶಾಖೆ ಮತ್ತು ವಲೀಶಾಖೆಗಳನ್ನು ಹೊಂದಿವೆ. ಮೇಲೆ ಕಪೋತವಿಲ್ಲ. ಕಪೋತಕ್ಕೆ ಬದಲಾಗಿ ನಟರಾಜ ಮತ್ತು ಶಿವಗಣಗಳ ಶಿಲ್ಪವನ್ನು ಬಿಡಿಸಲಾಗಿದೆ. ದೇವಾಲಯದ ಬಾಗಿಲ ಬಳಿಯ ವಾತಾಯಣ ಜಾಲಂಧ್ರದಲ್ಲಿ ಪುಟ್ಟ ಗಂಗಾ, ದೊಡ್ಡಗಂಗಾ ಪ್ರತಿಮೆಗಳಿವೆ. ಅರಳುಗುಪ್ಪೆಯ ಬಾಗಿಲವಾಡದ ಸ್ತಂಭ ಶಾಖೆಯಲ್ಲಿ ಗಂಗಾ ಯಮುನಾ ಚಿಕಣಿ ಶಿಲ್ಪಗಳಿವೆ. ಶಂಖನಿಧಿ ಮತ್ತು ಪದ್ಮನಿಧಿಗಳ ಶಿಲ್ಪಗಳನ್ನು ಬಾಗಿಲಿನ ಎರಡೂ ಕಡೆ ಕಂಡರಿಸಲಾಗಿದೆ. ಅರಳುಗುಪ್ಪೆ, ಹೇಮಾವತಿಯ ಮಲ್ಲೇಶ್ವರ ದೇವಾಲಯಗಳಲ್ಲಿ ಮೇಲೆ ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವನ್ನು ಮತ್ತು ಬಾಗಿಲವಾಡದಲ್ಲಿ ಆನೆಯ ಮೇಲೆ ಕುಳಿತಿರುವ ಶಂಖನಿಧಿಯನ್ನು ಮತ್ತು ಜಾಲಂಧ್ರಗಳ ಬಳಿ ಎರಡೂ ಕಡೆ ಶಂಖನಿಧಿ ಮತ್ತು ಪದ್ಮನಿಧಿಗಳು ಮೂರ್ತರೂಪದಲ್ಲಿವೆ. ಅಗಳಿಯ ಕ್ರಿ.ಶ. ೭೭೮ರ ಶಾಸನದಲ್ಲಿ ಶಂಖನಿಧಿ ಮತ್ತು ಪದ್ಮನಿಧಿ ವಿಗ್ರಹಗಳನ್ನು ಮುಕುನೋವಜ ಮತ್ತು ಬೂಮೋವಜನು ಮಾಡಿಸಿದಂತೆ ಉಲ್ಲೇಖಿಸಿದೆ. ಈ ಶಂಖನಿಧಿ ಮತ್ತು ಪದ್ಮನಿಧಿಗಳು ನೊಳಂಬರ ದೇವಾಲಯಗಳಲ್ಲಿ ಪ್ರಮುಖವಾಗಿ ಕಂಡು ಬರುತ್ತವೆ.

ಅಧಿಷ್ಠಾನ ಸಂಕೀರ್ಣವಾಗಿವೆ. ಶಿಖರದಲ್ಲಿ ಬಂದಿರುವ ಕೂಟ, ಶಾಲ, ಪಂಜರಗಳಿಗನುಗುಣವಾಗಿ ಅಧಿಷ್ಠಾನವೂ ಸಹ ಹಿಂದೆ ಮುಂದೆ ಸರಿದಿವೆ. ಭೋಗನಂದಿ ದೇವಾಲಯದ ಅಧಿಷ್ಠಾನದಲ್ಲಿ ಜಗತಿ, ತ್ರಿಪಟ್ಟಕುಮುದ, ಕಂಪಗಳ, ಪಟ್ಟಿಕೆಗಳ, ಕಂಪ, ಊರ್ಧ್ವಕಮಲ ಪಟ್ಟಿಕೆಗಳಿವೆ. ಆವನಿಯ ಲಕ್ಷ್ಮಣೇಶ್ವರದಲ್ಲಿ ಜಗತಿ, ಕಂಪ, ಗಳ, ಕಂಪ, ತ್ರಿಪಟ್ಟಕುಮುದ, ಗಳ, ಕಪೋತ, ಪ್ರತಿ, ಗಳ, ಊರ್ಧ್ವಕಮಲ ಪಟ್ಟಿಕೆಯನ್ನು ಹೊಂದಿದೆ. ಅಧಿಷ್ಠಾನ ಎತ್ತರವಾದಂತೆಲ್ಲಾ ಸೇರ್ಪಡೆಯಾಗುವ ಭಾಗಗಳೂ ಜಾಸ್ತಿಯಾಗಿರುತ್ತವೆ. ದೇವಾಲಯದ ಭಿತ್ತಿಗಳಲ್ಲಿ ಅಧಿಷ್ಠಾನದ ರಚನೆಯನ್ನು ಅನುಸರಿಸಿ ಪಂಜರ, ಕೂಟ ಮತ್ತು ಶಾಲಾ ಭಾಗಗಳನ್ನು ಬಿಡಿಸಲಾಗಿದೆ. ಲಕ್ಷ್ಮಣೇಶ್ವರ, ಅರುಣಾಚಲೇಶ್ವರ ದೇವಾಲಯಗಳಲ್ಲಿ ಎರಡು ಉಬ್ಬು ಕಂಬಗಳ ನಡುವೆ ಚಿಕ್ಕ ಕೋಷ್ಠಗಳನ್ನು ಬಿಡಿಸಿ ಅವುಗಳ ಮೇಲೆ ದೇವಾಲಯದ ಶಿಖರದ ಮಾದರಿಗಳನ್ನು ಬಿಡಿಸಲಾಗಿದೆ. ಕೆಲವು ದೇವಾಲಯಗಳಲ್ಲಿ ವಾತಾಯನವನ್ನು ಕಲ್ಪಿಸಿ ಬಳ್ಳಿ ಅಲಂಕಾರಗಳನ್ನು ರಚಿಸಲಾಗಿದೆ.

ಬಾಗಿಲವಾಡಗಳು ನೊಳಂಬರ ಕಲಾವಂತಿಕೆಗೆ ಸಾಕ್ಷಿಯಾಗಿವೆ. ತಿಳಿಹಸಿರು ಕಲ್ಲಿನಿಂದ ಮಾಡಲಾದ ಬಾಗಿಲುವಾಡಗಳು ಸುಂದರವಾದ ವಿಶೇಷ ಕೆತ್ತನೆ ಕೆಲಸಗಳಿಂದ ಕೂಡಿದೆ. ಬಾಗಿಲುವಾಡದ ಎರಡು ಕಡೆಯ ಭಾಗಗಳನ್ನು ಹಲವು ಶಾಖೆಗಳಾಗಿ ವಿಂಗಡಿಸಿ, ಪ್ರತಿಯೊಂದು ಶಾಖೆಯೂ ವಿವಿಧ ನಮೂನೆಯ ಅಲಂಕಾರಗಳನ್ನು ಹೊಂದಿವೆ. ಬಳ್ಳಿಸುರುಳಿಯ ಸಾಲು, ಕಮಲದಳಗಳ ಸಾಲು, ಮಣಿಹಾರಗಳು, ಅರೆಗಂಭಗಳು ಮುಂತಾದ ಅಲಂಕಾರಗಳಿಂದ ಕೂಡಿವೆ. ದ್ವಾರದ ಮೇಲ್ಭಾಗದ ಮಧ್ಯದಲ್ಲಿ ಗಜಲಕ್ಷ್ಮಿಯ ಕೆತ್ತನೆ ಮತ್ತು ಅದರ ಅಕ್ಕಪಕ್ಕಗಳಲ್ಲಿ ಛತ್ರ, ಚಾಮರ, ನಂದಿ ಇತ್ಯಾದಿ ಮಂಗಳ ಚಿಹ್ನೆಗಳನ್ನು ಬಿಡಿಸಲಾಗಿದೆ. ಇದರ ಮೇಲ್ಭಾಗದಲ್ಲಿ ಸುಂದರವಾದ ಕಪೋತವಿದ್ದು ಅದರ ಇಕ್ಕೆಲಗಳಲ್ಲಿ ಅರೆಗಂಭಗಳ ಆಸರೆ ಇದೆ. ಈ ಅರೆಗಂಭಗಳ ಬುಡದಲ್ಲಿ ಆನೆಗಳ ಮೇಲೆ ಆಸೀನರಾದ ಶಂಖನಿಧಿ ಮತ್ತು ಪದ್ಮನಿಧಿಗಳು, ದ್ವಾರಪಾಲಕರು, ಗಂಗೆ ಯಮುನೆಯರ ವಿಗ್ರಹಗಳ ಕೆತ್ತನೆಗಳನ್ನು ಕಾಣಬಹುದು. ನೊಳಂಬರ ದೇವಾಲಯಗಳ ಗರ್ಭಗೃಹ ಮತ್ತು ನವರಂಗದ ಬಾಗಿಲುವಾಡಗಳನ್ನು ವಿವಿಧ ರೀತಿಯ ಸೂಕ್ಷ್ಮ ಕೆತ್ತನೆ ಕೆಲಸಗಳಿಂದ ಅಲಂಕರಿಸಿರುವುದನ್ನು ಕಾಣಬಹುದು. ಹೇಮಾವತಿಯ ಸಿದ್ಧೇಶ್ವರ ದೇವಾಲಯದ ನವರಂಗದ ಪ್ರವೇಶದ್ವಾರದ ಬಾಗಿಲವಾಡದ ದ್ವಾರಶಾಖೆಯನ್ನು ದ್ವಾರಪಾಲಕರು, ಗಂಧರ್ವರು, ಸಿಂಹಶಾಖೆ, ಸ್ತಂಭಶಾಖೆ, ರತ್ನಪಟ್ಟಿಶಾಖೆ, ಬಳ್ಳಿಶಾಖೆಗಳಿಂದ ಅಲಂಕರಿಸಿ ನಾನಾ ಶಾಖೆಗಳನ್ನು ಕಡೆದಿದ್ದು, ಮೇಲೆ ಕಪೋತ ಬಂದಿದೆ. ವಿರೂಪಾಕ್ಷ ದೇವಾಲಯದ ಬಳಿಯ ದುರ್ಗಾದೇವಾಲಯದ ಬಾಗಿಲುವಾಡದಲ್ಲಿ ಕಮಲದಳ ಶಾಖೆ, ಶಲಾಕ, ಬಳ್ಳಿಶಾಖೆ, ಸ್ತಂಭಶಾಖೆಯನ್ನು ಹೊಂದಿ ವೃತ್ತಗಳ ನಡುವೆ ನೃತ್ಯ ಮಾಡುತ್ತಿರುವ, ವಾದ್ಯಗಳನ್ನು ನುಡಿಸುತ್ತಿರುವ ಪುರುಷರ ಚಿಕಣಿಶಿಲ್ಪಗಳನ್ನು ಬಿಡಿಸಲಾಗಿದೆ. ಮಲ್ಲೇಶ್ವರ ದೇವಾಲಯದ ಬಾಗಿಲ ಲಲಾಟದಲ್ಲಿ ಶಂಖನಿಧಿ, ಪದ್ಮನಿಧಿ ಮಧ್ಯೆ ಮೀನು, ಕಲಶ ಮುಂತಾದ ಮಂಗಳಚಿಹ್ನೆಗಳನ್ನು ಬಿಡಿಸಿದೆ. ಹೇಮಾವತಿ, ಅರಳುಗುಪ್ಪೆ, ಬೇತೂರು ಮೊದಲಾದ ಕಡೆ ಅಷ್ಟದಿಕ್ಪಾಲಕರ ಮಧ್ಯೆ ನಟರಾಜ ಶಿಲ್ಪವನ್ನು ಬಿಡಿಸಿದ್ದಾರೆ. ಶಿಲ್ಪಗಳು ಸುಂದರವಾಗಿವೆ. ಅರಳುಗುಪ್ಪೆ ಶಿಲ್ಪದಲ್ಲಿ ನಟರಾಜನಿಗೆ ನಾಲ್ಕು ಕೈಗಳಿದ್ದರೆ ಬೇತೂರು ನಟರಾಜ ಶಿಲ್ಪದಲ್ಲಿ ಹದಿನಾರು ಕೈಗಳಿವೆ ಹಾಗೂ ಇದು ಗಜಾಸುರ ಮೂರ್ತಿಯಾಗಿದೆ.

ನೊಳಂಬರ ದೇವಾಲಯಗಳಲ್ಲಿ ಮೂರ್ತಿ ಶಿಲ್ಪಗಳಷ್ಟೇ ಸುಂದರವಾದ ಜಾಲಂಧ್ರಗಳನ್ನು ಕಾಣಬಹುದು. ಜಾಲಂಧ್ರಗಳು ಶ್ರೇಷ್ಠಮಟ್ಟದ ದುಂಡು ಶಿಲ್ಪಗಳನ್ನು ಹೊಂದಿವೆ. ದೇವಾಲಯದ ಅರ್ಧಮಂಟಪ ಮತ್ತು ನವರಂಗಗಳ ಗೋಡೆಗೆ ಸೇರಿಸಿ ಕಟ್ಟಲಾಗಿದ್ದು ಒಳಭಾಗಕ್ಕೆ ಬೆಳಕು ಬರಲು ಸಹಕಾರಿಯಾಗಿವೆ. ದೇವಾಲಯದ ಭಿತ್ತಿಯ ಭಾಗವಾಗಿ ರಚಿತವಾಗುತ್ತಿದ್ದ ಜಾಲಂಧ್ರಗಳ ಸುತ್ತಲ ಅರೆಗಂಬಗಳು, ಅವುಗಳ ಬುಡದಲ್ಲಿ ಶಂಖನಿಧಿ, ಪದ್ಮನಿಧಿಗಳ ಚಿತ್ರಣ ಮತ್ತು ಮೇಲಿನ ತೊಲೆ, ಕಪೋತ ಮುಂತಾದುವುಗಳನ್ನು ಜಾಲಂಧ್ರಗಳನ್ನು ನಿರ್ಮಿಸಿದ ಕಲ್ಲಿನಲ್ಲಿಯೇ ಬಿಡಿಸಲಾಗಿದೆ. ಈ ರೀತಿಯ ಭಿತ್ತಿ ಮತ್ತು ಜಾಲಂಧ್ರವನ್ನು ಹೇಮಾವತಿಯಲ್ಲಿ ಮಾತ್ರ ಕಾಣುತ್ತೇವೆ. ಉಳಿದಂತೆ ನಂದಿ, ಆವನಿ ಮೊದಲಾದ ಕಡೆಗಳಲ್ಲಿ ವಾಸ್ತುಶಿಲ್ಪದ ಅಲಂಕಾರಗಳಿಂದ ಕೂಡಿದ ಜಾಲಂಧ್ರಗಳನ್ನು ರಚಿಸಿರುವುದಿಲ್ಲ. ಭಿತ್ತಿಯ ಭಾಗದಲ್ಲಿ ವಾಸ್ತುಶಿಲ್ಪದ ಅಲಂಕಾರಗಳ ರಚನೆಯನ್ನು ಕಾಣುತ್ತೇವೆ. ಹೇಮಾವತಿಯ ದೊಡ್ಡೇಶ್ವರ ದೇವಾಲಯದಲ್ಲಿರುವ ಜಾಲಂಧ್ರಗಳು ನೊಳಂಬರ ಜಾಲಂಧ್ರಗಳಿಗೆ ಉತ್ತಮ ಉದಾಹರಣೆಗಳು. ಇಲ್ಲಿರುವ ಗಂಗಾ, ಮಿಥುನ, ವಿಷ್ಣು, ಬ್ರಹ್ಮ ಮತ್ತು ಕಾರ್ತಿಕೇಯ ಶಿಲ್ಪಗಳನ್ನು ಹೊಂದಿರುವ ಜಾಲಂಧ್ರಗಳು ತಮ್ಮ ಸೌಂದರ್ಯಕ್ಕೆ ಹೆಸರುವಾಸಿಯಾಗಿವೆ. ಮತ್ತೊಂದು ಜಾಲಂಧ್ರದಲ್ಲಿ ದೃಢಕಾಯನಾದ ಬ್ರಹ್ಮನ ಶಿಲ್ಪವಿದೆ.

ಮೂರ್ತಿಶಿಲ್ಪಗಳಲ್ಲದೆ ಈ ಜಾಲಂಧ್ರಗಳಲ್ಲಿ ಸುಂದರ ಮತ್ತು ಸೊಗಸಾದ ಲತಾಲಂಕರಣ, ಬಳಕುತ್ತಿರುವ ಬಳ್ಳಿಯ ಸುರುಳಿಗಳು, ಸುರುಳಿಗಳ ನಡುವೆ ಇರುವ ಜಾಗದಲ್ಲಿ ವಿವಿಧ ಭಂಗಿಯಲ್ಲಿ ನರ್ತಿಸುವ ಸ್ತ್ರೀ ಪುರುಷರು ಮತ್ತು ನೃತ್ಯಕ್ಕೆ ತಕ್ಕಂತೆ ಹಲವು ವಾದ್ಯಗಳನ್ನು ನುಡಿಸುತ್ತಿರುವ ವಾದ್ಯಗಾರರ ಶಿಲ್ಪಗಳು ವಿಶಿಷ್ಟತೆಯಿಂದ ಕೂಡಿ ಆ ಕಾಲದ ಜನ ಜೀವನದ ಕಲ್ಪನೆ ಮೂಡಿಸುತ್ತದೆ. ರಾಜೇಂದ್ರ ಚೋಳನು ನೊಳಂಬವಾಡಿಯ ಮೇಲಿನ ತನ್ನ ವಿಜಯದ ಸಂಕೇತವಾಗಿ ಬಳ್ಳಿ ಚಿತ್ರಣವಿರುವ ಹಸಿರು ಕಲ್ಲಿನ ಜಾಲಂದ್ರವನ್ನು ತಂಜಾವೂರಿನ ಬೃಹದೇಶ್ವರ ದೇವಾಲಯದ ನವರಂಗದ ಭಿತ್ತಿಯಲ್ಲಿ ಸ್ಥಾಪಿಸಿದ್ದಾನೆ.

ನೊಳಂಬರ ದೇವಾಲಯದ ಕಂಭಗಳು ಬ್ರಹ್ಮಕಾಂತ, ವಿಷ್ಣುಕಾಂತ ಹಾಗೂ ರುದ್ರಕಾಂತ ಮಾದರಿಯಲ್ಲಿವೆ. ಬರಗೂರು, ಆವನಿ, ಅರಳುಗುಪ್ಪೆ ಮುಂತಾದ ದೇವಾಲಯಗಳಲ್ಲಿರುವ ರುದ್ರಕಾಂತ ಕಂಬಗಳಲ್ಲಿ ಕೆಳಗಡೆ ಚೌಕಾಕಾರದ ಪಿಂಡಿ

ಬಂದಿರುತ್ತದೆ. ಅದರ ಮೇಲೆ ವೃತ್ತಾಕಾರದ ಶಲಾಕೆ ಇದ್ದು ನಡುವೆ ಎಡಕಟ್ಟುಗಳಲ್ಲದೆ ಮೇಲೆ ಕುಂಭ ಇರುತ್ತದೆ. ನಂದಿಯ ಭೋಗನಂದಿ, ಹೇಮಾವತಿಯ ಸಿದ್ಧೇಶ್ವರ, ದೊಡ್ಡೇಶ್ವರ, ಆವನಿಯ ಲಕ್ಷ್ಮಣೇಶ್ವರ ದೇವಾಲಯಗಳಲ್ಲಿ ಬ್ರಹ್ಮಕಾಂತ ಕಂಬಗಳನ್ನು ಕಾಣಬಹುದು. ಈ ಕಂಬಗಳು ಪೀಠದ ಮೇಲಿದ್ದು ಪಿಂಡಿಯಿಂದ ಕಂಬದ ಭಾಗದವರೆಗೆ ಚೌಕಾಕಾರದಲ್ಲಿದ್ದು, ಪಿಂಡಿಯ ಮೇಲೆ ಬಳ್ಳಿ ಅದರ ಮೇಲೆ ಮಾಲಾಲಂಕಾರ ಬಂದಿದ್ದು, ಮಾಲೆಯ ಒಳಗೆ ಮಾನವ ಹಾಗೂ ದೇವತೆಗಳ ಚಿಕಣಿಶಿಲ್ಪಗಳ ಕೆತ್ತನೆ, ಅನಂತರ ಕುಂಭ, ಅದರ ಮೇಲೆ ಕಂಠ, ಅದರ ಮೇಲೆ ಮುಚ್ಚಳದ ರಚನೆಯ ನಂತರ ಬೋಧಿಗೆಗಳಿರುತ್ತವೆ. ವಿಷ್ಣುಕಾಂತ ಕಂಬಗಳು ಎಂಟು ಮತ್ತು ಹದಿನಾರು ಮೂಲೆಗಳನ್ನು ಹೊಂದಿದ್ದು, ಇಂತಹ ಕಂಭಗಳು ಹೇಮಾವತಿಯ ದೊಡ್ಡೇಶ್ವರ, ಧರ್ಮಪುರಿಯ ಕಾಮಾಕ್ಷಿ ದೇವಾಲಯಗಳಲ್ಲಿ ಕಂಡುಬಂದಿವೆ. ಈ ಕಂಬಗಳು ಕೆಳಗಡೆ ಚೌಕಾಕಾರದ ಪಿಂಡಿಯನ್ನು ಹೊಂದಿದ್ದು, ಎಂಡು ಮೂಲೆ ಭಾಗದಲ್ಲಿ ಬಳ್ಳಿಗಳ ಅಲಂಕಾರದಲ್ಲಿ ಮನುಷ್ಯರ ಶಿಲ್ಪಗಳಿದ್ದರೆ, ಮಧ್ಯೆ ಚೌಕಕಾರದ ಭಾಗದಲ್ಲಿ ಪುರಾಣ ಕಥೆಗಳನ್ನು ಅಥವಾ ದೇವತಾಶಿಲ್ಪಗಳನ್ನು ಅಥವಾ ಮಾಲಾಲಂಕಾರವನ್ನು ಕೆತ್ತಿರುತ್ತಾರೆ. ಅನಂತರ ಕುಂಭಾಕಾರವಾಗಿರುತ್ತದೆ.

ಮೂರ್ತಿ ಶಿಲ್ಪಗಳಷ್ಟೇ ಸುಂದರವಾದ ನೊಳಂಬರ ನಂದಿ ವಿಗ್ರಹಗಳು ಪ್ರಸಿದ್ಧವಾಗಿವೆ. ನಂದಿ ವಿಗ್ರಹಗಳು ದೇವಾಲಯದ ಮುಂಭಾಗದಲ್ಲಿನ ಪ್ರತ್ಯೇಕ ನಂದಿ ಮಂಟಪದಲ್ಲಿರುತ್ತವೆ. ನಂದಿಯು ಕೊರಳಲ್ಲಿ ಘಂಟಾಹಾರ, ಗೆಜ್ಜೆಯಸರ, ಸರಪಳಿ, ಹಣೆಪಟ್ಟಿ, ಕಿವಿಯ ಪಕ್ಕದಲ್ಲಿ ಕುಚ್ಚುಗಳಿಂದ ಅಲಂಕೃತಗೊಂಡಿರುತ್ತದೆ. ನಂದಿ ಶಿಲ್ಪಗಳು ಕಾಂತಿ ಮತ್ತು ದೈಹಿಕ ಸೌಂದರ್ಯದಿಂದ ಕೂಡಿದ್ದು ನೈಜತೆಗೆ ಹೆಸರಾಗಿವೆ. ನಂದಿ ಶಿಲ್ಪದ ಕೊರಳಿನಲ್ಲಿ ಉದ್ದವಾಗಿರುವ ಘಂಟಾಹಾರ ಮುಂಭಾಗದಲ್ಲಿ ನೆಲದ ಮೇಲೆ ಹರಡಿಕೊಂಡಿರುತ್ತದೆ. ಅದರ ಗಂಗೆದೊಗಲು ಅಲೆಅಲೆಯಾಗಿ ಬಳಕುತ್ತಿರುವಂತೆ ಬಿಡಿಸಲಾಗಿರುತ್ತದೆ. ನೊಳಂಬರ ನಂದಿ ಶಿಲ್ಪಗಳು ಗಾತ್ರದಲ್ಲಿ ಸುಮಾರು ೫–೬ ಅಡಿ ಎತ್ತರದ ತುಂಬು ಮೈಕಟ್ಟಿನಿಂದ ಕೂಡಿರುತ್ತವೆ. ಇವಲ್ಲದೆ ಸಣ್ಣ ಗಾತ್ರದ ಶಿಲ್ಪಗಳೂ ಸಿಗುತ್ತವೆ. ಸುಸ್ಥಿತಿಯಲ್ಲಿರುವ ನಂದಿಗಳು ಹೇಮಾವತಿಯ ದೊಡ್ಡೇಶ್ವರ, ಮ್ಲಲಿಕಾರ್ಜುನ ಮತ್ತು ಮಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿವೆ. ಇವಲ್ಲದೆ ಮಲ್ಲಯ್ಯನ ಗುಡ್ಡದಲ್ಲಿರುವ ಮೈಲಾರನ ದೇವಾಲಯದಲ್ಲಿರುವ ಬೃಹದಾಕಾರದ ನಂದಿ ಶಿಲ್ಪವೂ ಮೇಲಿನ ಎಲ್ಲಾ ಅಲಂಕಾಗಗಳಿಂದ ಕೂಡಿರುತ್ತವೆ.

**ನೊಳಂಬ ಶೈಲಿಯ ಇತರ ಪ್ರಮುಖ ದೇವಾಲಯಗಳು**

ನೊಳಂಬರ ರಚನೆಗಳು ಕಂಪಿಲಿಯ ಸೋಮೇಶ್ವರ ದೇವಾಲಯ, ಮಲ್ಲಯ್ಯನ ಗುಡ್ಡದ ಮೈಲಾರನ ದೇವಾಲಯ, ಹಂಪಿಯ ದುರ್ಗಾ ಮತ್ತು ನಾಗನಾಥ ದೇವಾಲಯಗಳು, ಬಾಗಳಿಯ ಕಲ್ಲೇಶ್ವರ ದೇವಾಲಯ, ದೇವಘಾತದ ಈಶ್ವರದೇವಾಲಯ, ಬಲ್ಲಕುಂದೆಯ ಪ್ರವೇಶದ್ವಾರ ಮತ್ತು ಇತರ ಜೈನ ಅವಶೇಷಗಳಲ್ಲಿ ಕಾಣಬರುತ್ತವೆ. ಈ ದೇವಾಲಯಗಳಲ್ಲಿ ಕೆಲವನ್ನು ಬಿಟ್ಟರೆ ಉಳಿದವು ಶಿಖರಗಳನ್ನು ಹೊಂದಿವೆ. ಕಂಪಿಲೆಯ ಸೋಮೇಶ್ವರ ದೇವಾಲಯವು ಇವರ ಆರಂಭಿಕ ದೇವಾಲಯವಾಗಿರಬೇಕು. ತಮ್ಮ ಕುಲದೈವ ಅಥವಾ ಇಷ್ಟದೈವ ಸಿದ್ಧೇಶ್ವರನಿಗಾಗಿ (ಭೈರವ) ಈ ದೇವಾಲಯವನ್ನು ರಚಿಸಿರಬೇಕು. ಗರ್ಭಗೃಹದಲ್ಲಿ ಭೈರವ ಶಿಲ್ಪವಿದ್ದು ಇದನ್ನು ಈಗ ಸೋಮೇಶ್ವರ ಶಿಲ್ಪವೆಂದು ಕರೆಯುತ್ತಿದ್ದಾರೆ. ಮಲ್ಲಯ್ಯನ ಗುಡ್ಡದ ಮೈಲಾರನ ದೇವಾಲಯವು ಕ್ರಿ.ಶ. ೧೦೧೭ ರಲ್ಲಿ ರಚಿತವಾಗಿದ್ದು ನೊಳಂಬರ ಕಾಲದ ಇನ್ನೊಂದು ಮೈಲಾರನ (ಭೈರವನ) ದೇವಾಲಯವಾಗಿದೆ. ಹಂಪಿಯ ದುರ್ಗಾದೇವಿ, ನಾಗನಾಥ ದೇವಾಲಯಗಳು ಮತ್ತು ಬಾಗಳಿಯ ಕಲ್ಲೇಶ್ವರ ದೇವಾಲಯಗಳು ಇಂದಿಗೂ ಹೆಚ್ಚಿನ ಬದಲಾವಣೆ ಇಲ್ಲದೆ ಉಳಿದಿದೆ. ದೇವಘಾತದ ಈಶ್ವರ ದೇವಾಲಯದ ಹೊರ ಗೋಡೆಗಳು ಹಾಳಾಗಿದ್ದರೂ, ಇಂದಿಗೂ ಸಹ ತನ್ನ ಮೂಲರೂಪವನ್ನು ಉಳಿಸಿಕೊಂಡಿದೆ.

ಈ ದೇವಾಲಯಗಳ ರಚನೆಯಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗಗಳಿವೆ. ಕಂಪಿಲೆಯ ಸೋಮೇಶ್ವರ ದೇವಾಲಯದ ಒಳಭಾಗವು ಬಹುಮಟ್ಟಿಗೆ ಬದಲಾಗಿದೆ. ಮಲ್ಲಯ್ಯನ ಗುಡ್ಡ, ಬಾಗಳಿ, ಈ ಸ್ಥಳಗಳಲ್ಲಿ ಗರ್ಭಗೃಹದ ಮುಂದೆ ತೆರೆದ ಅಂಕಣವಿದ್ದು ಇದು ನಡುವೆ ಸಮನಾಗಿದ್ದು ಸುತ್ತಲೂ ಇಳಿಜಾರಾದ ಮಾಡು ಇದೆ. ಮಲ್ಲಯ್ಯನ ಗುಡ್ಡ ಮತ್ತು ಬಾಗಳಿಯಲ್ಲಿ ನವರಂಗದ ಭಾಗವು ಮೂಲರೂಪದಲ್ಲಿವೆ. ಆದರೆ ಹೇಮಾವತಿಯಲ್ಲಿದ್ದಂತೆ ಚಂದ್ರಕಾಂತ ಸ್ತಂಭಗಳಿಲ್ಲ.

ಬಾಗಳಿಯಲ್ಲಿ ಅಂತರಾಳದ ಗೋಡೆಗೆ ಸೇರಿಸಿರುವ ಎರಡು ಕಂಬಗಳು ಮಾತ್ರ ಮಾಲಾಲಂಕಾರ ಹಾಗೂ ತಳಭಾಗಗಳಲ್ಲಿ ದ್ವಾರಪಾಲಕ ಶಿಲ್ಪಗಳನ್ನು ಕಾಣುವ ಸುಂದರ ಬಾಗಿಲುವಾಡಗಳು ಕಂಪಿಲಿಯ ನೊಳಂಬರ ದೇವಾಲಯಗಳಲ್ಲಿ ಕಾಣುವುದಿಲ್ಲ. ಹಂಪಿಯ ದುರ್ಗಾ ದೇವಾಲಯದಲ್ಲಿ ಮಾತ್ರ ವಿಶೇಷವಾದ ಬಾಗಿಲುವಾಡದ ಲಲಾಟದಲ್ಲಿ ಗರ್ಭಗೃಹದಲ್ಲಿನ ದೇವಿಯ ಪ್ರತಿ ರೂಪವನ್ನು ಕೆತ್ತಲಾಗಿದೆ.

ಚಿಕ್ಕಬಳ್ಳಾಪುರ ಜಿಲ್ಲೆ ಹಾಗೂ ತಾಲೂಕಿನ ನಂದಿಗ್ರಾಮದಲ್ಲಿ ಭೋಗನಂದೀಶ್ವರ ದೇವಾಲಯ ಸಂಕೀರ್ಣದಲ್ಲಿ ನೊಳಂಬರ ರಚನೆಗಳಿರುವ ವಿಶಿಷ್ಟ ಅರುಣಾಚಲೇಶ್ವರ ದೇವಾಲಯವಿದೆ. ಇದು ಇಮ್ಮಡಿ ಪೊಳಲ್ಚೋರನ ಕಾಲದಲ್ಲಿ ನಿರ್ಮಾಣವಾಗಿರಬೇಕು. ಇದರಲ್ಲಿ ಮುಚ್ಚಿದ ಅಂತರಾಳವಿದೆ. ಗರ್ಭಗೃಹದಲ್ಲಿ ಎತ್ತರವಾದ ಚೌಕಾಕಾರದ ಲಿಂಗಪೀಠದ ಮೇಲೆ ಶಿವಲಿಂಗವಿದೆ. ನವರಂಗದ ಕಂಬಗಳು ರುದ್ರಕಾಂತ ರೀತಿಯಲ್ಲಿದ್ದು, ಮುಚ್ಚಿಗೆಯಲ್ಲಿ ಅಷ್ಟದಿಕ್ಪಾಲಕರ ಸಹಿತ ಉಮಾಮಹೇಶ್ವರ ಶಿಲ್ಪವಿದೆ. ಹೊರ ಬಾಗಿಲಲ್ಲಿ ಶಂಖನಿಧಿ, ಪದ್ಮನಿಧಿ ಶಿಲ್ಪಗಳಿವೆ.

ಹೇಮಾವತಿಯ ದೊಡ್ಡಪ್ಪ ದೇವಾಲಯದ ಆವರಣದಲ್ಲಿ ದೊಡ್ಡೇಶ್ವರ, ಸಿದ್ಧೇಶ್ವರ, ಮಲ್ಲೇಶ್ವರ, ವಿರೂಪಾಕ್ಷ, ಅಕ್ಕತಂಗಿ ದೇವಾಲಯಗಳು ಮುಖ್ಯವಾದವು.

ಚಿಕ್ಕ ಗರ್ಭಗೃಹವನ್ನು ಹೊಂದಿರುವ ದೊಡ್ಡಪ್ಪ ಶಿವ ದೇವಾಲಯವು ತೆರದ ಅಂತರಾಳ ಮತ್ತು ವಿಶಾಲವಾದ ನವರಂಗ ಮಂಟಪಗಳನ್ನು ಹೊಂದಿದೆ. ದೇವಾಲಯ ವಿಶಾಲವಾಗಿದ್ದು ಮೇಲಿನ ಭಾರವನ್ನು ಹೊರಲು ಅನುಕೂಲವಾಗುವಂತೆ ಅಂತರಾಳದಲ್ಲಿ ನಾಲ್ಕು ಕಂಬಗಳಿವೆ. ವಿಶಾಲವಾದ ನವರಂಗದಲ್ಲಿ ಹದಿನಾರು ಚಂದ್ರಕಾಂತ ಕಂಬಗಳಿವೆ. ಅಂತರಾಳದಲ್ಲಿ, ನವರಂಗದಲ್ಲಿ ಹಾಗೂ ಮುಂಭಾಗದಲ್ಲಿ ಎರಡು ಚಿಕ್ಕ ಜಾಲಂಧ್ರಗಳಿವೆ. ಈ ಜಾಲಂಧ್ರಗಳು ಗಂಗಾ, ಬ್ರಹ್ಮ, ಕಾರ್ತಿಕೇಯ, ವಿಷ್ಣು, ಮಿಥುನ ಮತ್ತು ಬಳ್ಳಿಯ ಸುರುಳಿಗಳನ್ನು ಹೊಂದಿವೆ. ಗರ್ಭಗೃಹ ಮತ್ತು ನವರಂಗ ಮಂಟಪವು ಸುಂದರವಾದ ಪಂಚಶಾಖಾ ಬಾಗಿಲುವಾಡಗಳನ್ನು ಮತ್ತು ಲಲಾಟದಲ್ಲಿ ಅಷ್ಟದಿಕ್ಪಾಲಕರಿಂದ ಕೂಡಿದ ನಟರಾಜನ ಶಿಲ್ಪವನ್ನು ಕೆತ್ತಲಾಗಿದೆ. ಅಲ್ಲಿ ದೊರೆತಿರುವ ಕ್ರಿಶ. ೯೩೬ರ ಶಾಸನದ ಆಧಾರದಿಂದ ಈ ದೇವಾಲಯ ಬೀರ ಅಣ್ಣಿಗ ನೊಳಂಬನ ಕಾಲದ್ದೆಂದು ನಿರ್ಣಯಿಸಿರುತ್ತಾರೆ.

ಶಿಥಿಲಾವಸ್ಥೆಯಲ್ಲಿರುವ ಅಕ್ಕತಂಗಿ ದೇವಾಲಯ ಜೋಡಿ ಗುಡಿಗಳಾಗಿದ್ದು, ಬೇರೆ ಬೇರೆ ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗಗಳನ್ನು ಹೊಂದಿದೆ. ದೇವಾಲಯದ ಕಪೋತದಲ್ಲಿ ಆಳವಾದ ಗೂಡುಗಳಿದ್ದು ಸಿಂಹಲಲಾಟಗಳಿಂದ ಶೋಭಿಸುತ್ತಿವೆ. ಗರ್ಭಗೃಹದ ಬಾಗಿಲುವಾಡವನ್ನು ಕಪ್ಪು ಕಲ್ಲಿನಲ್ಲಿ ಆಲಂಕಾರಿಕವಾಗಿ ಕೆತ್ತಲಾಗಿದೆ.

ಚೌಕಾಕಾರದ ಗರ್ಭಗೃಹವನ್ನು ಹೊಂದಿರುವ ಸಿದ್ಧೇಶ್ವರ ದೇವಾಲಯ ಅರ್ಧ ಮಂಟಪ ಮತ್ತು ನವರಂಗ ಮಂಟಪವನ್ನು ಹೊಂದಿದೆ. ಈ ದೇವಾಲಯ ಭಾಗಶಃ ಜೀರ್ಣೋದ್ಧಾರವಾಗಿದೆ. ಗರ್ಭಗೃಹ, ತೆರದ ಅಂತರಾಳ, ನವರಂಗ ಮಂಟಪವನ್ನು ಹೊಂದಿರುವ ಮಲ್ಲೇಶ್ವರ ದೇವಾಲಯದ ನವರಂಗ ಮಂಟಪದಲ್ಲಿ ನಾಲ್ಕು ಕಂಬಗಳಿವೆ. ಬಾಗಿಲವಾಡವು ಹೆಚ್ಚಿನ ಕುಸುರಿ ಕೆಲಸದಿಂದ ಕೂಡಿದ ಶಾಖೆಗಳನ್ನು, ಹೊಂದಿ ಕೆಳಗೆ ಆನೆಯ ಮೇಲೆ ಕುಳಿತ ಶಂಖನಿಧಿ, ಪದ್ಮನಿಧಿಗಳನ್ನು ಸೇರಿಸಿದ ದ್ವಾರಬಂಧದಲ್ಲಿ ಕಪೋತದ ಭಾಗವಿದ್ದು, ಅದರ ಮೇಲೆ ಪಂಚಮಂಗಲಗಳಿಂದ ಅಲಂಕೃತವಾದ ಗಜಲಕ್ಷ್ಮಿ ಶಿಲ್ಪವನ್ನು ಬಿಡಿಸಲಾಗಿದೆ. ಕಪೋತ ಭಾಗವು ಸಿಂಹಲಲಾಟದ ಗೂಡುಗಳಿಂದ ಅಲಂಕರಣಗೊಂಡಿದೆ.

ಬರಗೂರಿನ ಈಶ್ವರ ದೇವಾಲಯವನ್ನು ಕಟ್ಟಿಸಿದವನು ನೊಳಂಬ ಅರಸ ಮಹೇಂದ್ರ. ಇವನ ಶಾಸನವೊಂದು ಇದನ್ನು ಮಹೇಂದ್ರೇಶ್ವರ ದೇವಾಲಯವೆಂದು ಹೆಸರಿಸಿದೆ. ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ಅರ್ಧಮಂಟಪದಲ್ಲಿ ಎರಡು ಕಂಬಗಳನ್ನು, ನವರಂಗದಲ್ಲಿ ಬ್ರಹ್ಮಕಾಂತ ರೀತಿಯ ನಾಲ್ಕು ಕಂಬಗಳನ್ನು, ಮುಂದಿನ ನಂದಿ ಮಂಟಪದಲ್ಲಿ ಹದಿನಾರು ಕಂಬಗಳನ್ನು ಬಳಸಲಾಗಿದೆ. ನವರಂಗದ ಮುಚ್ಚಿಗೆಯಲ್ಲಿ ಪದ್ಮವಿದೆ. ಗರ್ಭಗೃಹ ಮತ್ತು ನವರಂಗದ ಪ್ರವೇಶದಲ್ಲಿ ಸುಂದರವಾದ ಎರಡು ಬಾಗಿಲುವಾಡಗಳಿವೆ.

ಆವನಿಯಲ್ಲಿ ನೊಳಂಬ ಇಮ್ಮಡಿ ಪೊಳಲ್ಚೋರ ಮತ್ತು ಅವನ ಮಗ ಇಮ್ಮಡಿ ಮಹೇಂದ್ರನ ಕಾಲದಲ್ಲಿ ಮತ್ತು ಪೊಳಲ್ಚೋರನ ಹೆಂಡತಿ ಕದಂಬ ವಂಶದ ದೀವಬ್ಬರಸಿ ಕಾಲದಲ್ಲಿ ತ್ರಿಭುವನಕರ್ತಾರದೇವ ಕಟ್ಟಿಸಿದ ಹಲವು ದೇವಾಲಯಗಳಿವೆ. ಹಾಗೆಯೇ ನೊಣವಿನಕೆರೆಯ ದೇವಾಲಯ, ಅರಳಗುಪ್ಪೆಯ ದೇವಾಲಯ, ಧರ್ಮಪುರಿಯ ದೇವಾಲಯಗಳು, ಕಂಪಿಲಿಯಲ್ಲಿನ ನೊಳಂಬರ ರಚನೆಗಳು, ಮಲ್ಲಯ್ಯನ ಗುಡ್ಡದ ಮೈಲಾರನ ದೇವಾಲಯ, ಹಂಪೆಯ ದೇವಾಲಯಗಳು, ಬಾಗಳಿಯ ಕಲ್ಲೇಶ್ವರ ದೇವಾಲಯ, ವಿಪ್ರದ ಗುಡಿಗಳು ಮುಂತಾದುವುಗಳನ್ನು ಹೆಸರಿಸಬಹುದು.

**ಆಧಾರ ಗ್ರಂಥಗಳು:**

೧. ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ
೨. ನೊಳಂಬ ಇತಿಹಾಸ ದರ್ಶನ
೩. The Temple Architecture and Sculpture of the Nolambas - Andrew L Cohen

****

# ಸಂಪದ – ಸಂಕೀರ್ಣ





ಜಯತಿ ಶ್ರೀಪರಷ್ವಜ್ಗ ಶ್ಯಾಜ್ಗಮ್ಯಾನತಿರಚ್ಯುತಃ
ದಾನವಾಕ್ಷೋೀಯರ್ುಗಾನ್ತಾಗ್ನೀಃ ಶಿಷ್ಟಾನಾನ್ತು ಸುದರ್ಶನಃ

# ಗಕಾರಗಣಪತಿಸಹಸ್ರನಾಮಃ

## (ವಿದ್ಯಾವಂತ ನಾಗರಿಕರಿಗೆ ಸಹೃದಯನೋರ್ವ ನೀಡಿದ ಸಲಹೆಗಳ ಸರಮಾಲೆ)

* ಎಸ್. ಜಗನ್ನಾಥ

ಓರ್ವ ಆದರ್ಶ ವಿದ್ಯಾವಂತ ನಾಗರಿಕನ ಚಿತ್ರಣವನ್ನು ಗಕಾರಗಣಪತಿಸಹಸ್ರನಾಮವೆಂಬ ಹೆಸರಿನ ಅನ್ಯತ್ರ ದುರ್ಲಭವಾದ ಸ್ವರೂಪವುಳ್ಳ ಸಹಸ್ರನಾಮದ ಆಧಾರದಿಂದ ನೀಡುವುದು ಲೇಖನದ ಉದ್ದೇಶ. ಈ ಸಹಸ್ರನಾಮದಲ್ಲಿ ಸಂಗೀತಕ್ಕೆ ಸಂಬಂಧಿಸಿದ ಪರಾಮರ್ಶನೆಗಳಿಗೆ ಕೊಟ್ಟಿರುವ ಪ್ರಾಧಾನ್ಯವನ್ನು ಲೇಖನದುದ್ದಕ್ಕೂ ಸ್ಪಷ್ಟ ಪಡಿಸಲಾಗಿದೆ. ಪ್ರಕೃತಲೇಖನಕ್ಕೆ ಆಧಾರವಾಗಿರುವ ಗಕಾರಗಣಪತಿಸಹಸ್ರನಾಮವು ಮೈಸೂರು ಸೀತಾರಾಮ ಶಾಸ್ತ್ರಿಗಳಿಂದ ಸಂಪಾದಿತವಾಗಿ ೧೯೩೦ರಲ್ಲಿ ಬೆಂಗಳೂರು ಪ್ರೆಸ್‌ನಲ್ಲಿ ಕನ್ನಡ ಲಿಪಿಯಲ್ಲಿ ಅಚ್ಚಾಗಿದ್ದ **ಸಹಸ್ರನಾಮಾವಲೀ ಸಂಪುಟ** ೧ ಹಾಗೂ ೨ ಇದರಲ್ಲಿನ ಭಾಗವಾಗಿದೆ. ಇದನ್ನು ತಂತ್ರಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವ **ರುದ್ರಯಾಮಿಳ** ದಿಂದ ತೆಗೆದುಕೊಳ್ಳಲಾಗಿದೆಯೆಂದು ಸಂಪಾದಕರು ತಿಳಿಸಿದ್ದಾರೆ.

ನಮ್ಮ ರಾಷ್ಟ್ರದಲ್ಲಿ ಭಕ್ತಿವಾಙ್ಮಯವು ವಿವಿಧ ದೇವತಾಸ್ತೋತ್ರಗಳಿಂದ ನಿಬಿಡವಾಗಿರುವ ಸಂಗತಿ ಸುವಿದಿತವಾಗಿರುವಂಥದ್ದೇ. ಈ ಸ್ತೋತ್ರಗಳು ಶಾಸ್ತ್ರಬದ್ಧ ಸಂಗೀತದಲ್ಲೂ, ನಾಮಾವಳಿಗಳಲ್ಲೂ, ಪದ್ಯಗಳಲ್ಲೂ ಹಾಸುಹೊಕ್ಕಾಗಿರುವುದಲ್ಲದೆ ವಿರಳವಾಗಿ ಗದ್ಯದಲ್ಲಿಯೂ ಸಹ ಸೃಷ್ಟಿಯಾಗಿರುವುದೂ ಉಂಟು. ನಾಮಾವಳೀ ಸಾಹಿತ್ಯದಲ್ಲಿ ಅಷ್ಟೋತ್ತರಗಳೇ(೧೦೮) ಆಗಲೀ ತ್ರಿಶತಿಗಳೇ(೩೦೦) ಆಗಲೀ ಸಹಸ್ರನಾಮಗಳೇ (೧೦೦೦) ಆಗಲೀ ವಿಪುಲವಾಗಿವೆ. ೧೦೮, ೩೦೦, ೧೦೦೦ ಈ ಸಂಖ್ಯೆಗಳನ್ನು ಬಿಟ್ಟರೆ ಬೇರೆ ಸಂಖ್ಯೆಗಳಲ್ಲಿ ನಾಮಾವಳಿಗಳು ಕಣ್ಣಿಗೆ ಬೀಳುವುದು ಕಡಿಮೆ.

ಇಂತಹ ನಾಮಾವಳಿಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು. ಮೊದಲನೆ ವರ್ಗದ ನಾಮಾವಳಿಗಳಲ್ಲಿನ ಸಾಮ್ರಾಜ್ಯ, ಸರಳವಾದ ಏಕಪದಗಳ ವಿಶೇಷಣಗಳ ಆಕಾರದ್ದು. ವಿಶೇಷಣಗಳೆಲ್ಲ ಇಲ್ಲಿ ನಾಮರೂಪವನ್ನು ತಾಳಿ ವಿಶೇಷ್ಯವಾಗುವುದುಂಟು. ಪ್ರಸಿದ್ಧವಾದ ವಿಷ್ಣುಸಹಸ್ರನಾಮ ಈ ವರ್ಗದ್ದೇ ಆಗಿದೆ. ಎರಡನೇ ವರ್ಗದಲ್ಲಿನ ನಾಮಾವಳಿಗಳಲ್ಲಿನ ವಿಜೃಂಭಣೆ, ಎರಡು ಅಥವಾ ಅದಕ್ಕಿಂತ ಹೆಚ್ಚು ಸಂಖ್ಯೆಯಲ್ಲಿನ ಪದಗಳು ಸೇರಿ ಬಹುವ್ರೀಹಿಸಮಾಸವಾಗಿ ರೂಪುಗೊಂಡ ವಿಶೇಷಣಗಳದ್ದು. ಎರಡನೇ ವರ್ಗದಲ್ಲಿ ಬಹುವ್ರೀಹಿಸಮಾಸವಿಲ್ಲದ ಏಕಪದರೂಪದ ವಿಶೇಷಣಗಳು ಬರುವುದೇ ಇಲ್ಲವೆಂದಲ್ಲ. ಆದರೆ ಅವು ಗೌಣ. ಬಹುವ್ರೀಹಿಸಮಾಸವು ವಾಸ್ತವಿಕವಾಗಿ ವಿಶೇಷಣ ಸಮಾಸವೆಂಬುದನ್ನು ಇಲ್ಲಿ ಮರೆಯಬಾರದು.

ಶ್ರದ್ಧಾಹೀನರೂ, ಪೂಜಾದಿ ಸಾಂಪ್ರದಾಯಿಕ ಅನುಷ್ಠಾನಗಳಲ್ಲಿ ಅನಾಸಕ್ತರೂ, ಕೇವಲ ಸಂಶೋಧನೆಯ ಉದ್ದೇಶಕ್ಕಾಗಿ ಅಥವಾ ಕುತೂಹಲಕ್ಕಾಗಿ ಅಧ್ಯಯನ ಮಾಡುವವರೂ ಆದವರಿಗೆ ಮೊದಲನೆಯ ವರ್ಗದ ಸಹಸ್ರನಾಮಗಳು ಮೇಲ್ನೋಟಕ್ಕೆ ಮಹಾನೀರಸವಾದ ಪದಗಳ ಪಟ್ಟಿಯೆಂದು ಭಾಸವಾದಲ್ಲಿ ಆಶ್ಚರ್ಯವೇನೂ ಇಲ್ಲ. ಅವರ ದೂರವಾಗಬೇಕಾದಲ್ಲಿ ಅವರ ದೃಷ್ಟಿ ಆ ನಾಮಾವಳಿಗಳಿಗೆ ವಿದ್ವಾಂಸರು ರಚಿಸಿರುವ ಉತ್ಕೃಷ್ಟ ಸ್ತರದ ವ್ಯಾಖ್ಯಾನಗಳೆಡೆಗೆ ಹೊರಳುತ್ತ ಅವುಗಳಲ್ಲಿ ಪ್ರತಿಪಾದಿತವಾದ ಕುತೂಹಲಪ್ರದವಾದ ಅರ್ಥಗಳು ಅಷ್ಟಾಧ್ಯಾಯೀ, ಗುಣಾದಿಸೂತ್ರ, ಧಾತುಪಾಠಗಳೇ ಅಲ್ಲದೇ ವೇದಸಂಹಿತೆಗಳು, ಉಪನಿಷತ್ತುಗಳು, ರಾಮಾಯಣ, ಮಹಾಭಾರತ, ಭಾಗವತಾದಿ ಪುರಾಣಗಳು, ತಂತ್ರಗಳು, ಆಗಮಗಳು ಈ ಮುಂತಾದವುಗಳ ಆಧಾರಗಳಿಂದ ಸಮರ್ಥಿತವಾಗಿರುವುದರ ಕಡೆ ಹರಿಯಬೇಕಾಗುತ್ತದೆ.

ಆದರೆ ಎರಡನೇ ವರ್ಗಕ್ಕೆ ಸೇರುವ ಲಲಿತಾಸಹಸ್ರನಾಮಾದಿಗಳು ಹಾಗಲ್ಲ. ಅವು ಮೇಲ್ನೋಟಕ್ಕೇ ಅನುಪ್ರಾಸದ ಧಾರೆಯ ಕಾರಣದಿಂದ ಭಾವುಕರನ್ನು ಓದುಗಾರಿಕೆಯ ಆರಂಭದಲ್ಲಿಯೇ ಸೆಳೆದುಕೊಂಡು ಬಿಡುತ್ತದೆ. ಪ್ರಬಲವಾದ ಶಾಬ್ದಿಕ ಆಕರ್ಷಣೆ ಅವುಗಳಲ್ಲಿ ಇದ್ದಾಗ್ಯೂ ತಾಂತ್ರಿಕಪರಿಭಾಷೆಯ ಬಿಗಿಯಿಂದಾಗಿ ಸಾಧಾರಣ ಓದುಗರಿಗೆ ಅಂಥವುಗಳ ಅರ್ಥವು ದುರವಗಾಹವೆಂಬುದು ಬೇರೆ ವಿಷಯ.

ಗಕಾರಗಣಪತಿ ಸಹಸ್ರನಾಮ(ಇನ್ನು ಮುಂದೆ ಗಗಸ)ವು ಈ ಎರಡೂ ವರ್ಗದ ಧರ್ಮಗಳನ್ನು ಅಲ್ಲೊಂದಷ್ಟು ಇಲ್ಲೊಂದಷ್ಟು ಹೊಂದಿರುವಂಥದ್ದು. ಅರ್ಥಾತ್ ಸರಳವಾದ ಏಕಪದ ವಿಶೇಷಣಗಳು ಹಾಗೂ ಬಹುವ್ರೀಹಿ ಸಮಾಸಘಟಿತವಾದ ನಾಮಗಳು ಎರಡೂ ಇದರಲ್ಲಿವೆ. ಇದರ ಭಾಷೆ ಸುಲಭವಾಗಿಯೂ ಆಕರ್ಷಕವಾಗಿಯೂ ಇದೆ. ಎಲ್ಲಾ ನಾಮಗಳೂ ಗಕಾರದಿಂದಲೇ ಆರಂಭವಾಗುವುದು ಇದರ ವೈಶಿಷ್ಟ್ಯ. ಕೇವಲ ರ ವರ್ಣದಿಂದಲೇ ಪ್ರಾರಂಭವಾಗುವ ರಕಾರರಾಮಸಹಸ್ರನಾಮ ಸ್ತೋತ್ರಗಳೆಂಬುವೇನೋ ಎರಡು ಇವೆ. ಅವುಗಳಲ್ಲಿ ಹೇಳಿಕೊಳ್ಳುವಂತಹ ವಿಶೇಷವೇನೂ ಕಾಣಿಸುವುದಿಲ್ಲ.

ಗಗಸ ಪ್ರತಿಪಾದ್ಯ ದೇವತೆ ಗಣಪತಿಯಾದ್ದರಿಂದ ಗಣಪತಿ ಉತ್ಸವಗಳಲ್ಲಿ ಕೆಲವೆಡೆ ಕಣ್ಣಿಗೆ ಹೊಡೆದು ಕಾಣುವ (ದುಃ)ಸ್ಥಿತಿಯ ಬಗೆಗೆ ಪ್ರಾಸಂಗಿಕವಾಗಿ ಒಂದು ಮಾತು ಹೇಳಬೇಕಾಗಿದೆ. ಗಣಪತಿಯ ಆಕಾರವನ್ನು ಭಕ್ತರು ಮನಸ್ಸಿಗೆ ಬಂದಂತೆಲ್ಲಾ ರೂಪಿಸುವುದು ಇತ್ತೀಚೆಗೆ ಪರಿಪಾಠವಾಗಿಹೋಗಿದೆ. ಅದರಲ್ಲಿ ಗಾಂಭೀರ್ಯವೂ ಇಲ್ಲ, ಶಾಸ್ತ್ರಸಂಪ್ರದಾಯವಂತೂ ಇಲ್ಲವೇ ಇಲ್ಲ. ಗಣಪತಿಯ ಹಬ್ಬದಂದು ಭಕ್ತರ ನಾನಾ ಭಕ್ತಿವಿಲಾಸಗಳ ಅವಾಂತರದಿಂದ ಅವನಿಗೆ ಬರುತ್ತಿರುವ ಆಕಾರ, ಪ್ರಕಾರ ಹಾಗೂ ವಿಕಾರಗಳನ್ನು ನೋಡಿದರೆ ತಬ್ಬಿಬ್ಬಾಗುತ್ತದೆ. ದೇವರ ಬಗೆಗೆ ಸಲಿಗೆ ತೋರಿಸುವುದು ಭಕ್ತಿಸಾಮ್ರಾಜ್ಯದಲ್ಲಿ ಸಹಜವಾದರೂ ಈ ಸಲಿಗೆಯೆನ್ನುವುದು ವಿಪರೀತದ ಮಟ್ಟಕ್ಕೆ ಇಳಿದಿರುವುದು ದೇವತೆಗಳ ಪೈಕಿ ಬಡಪಾಯಿ ಗಣಪತಿಯ ಬಗೆಗೆ ಮಾತ್ರವೆಂದು ತೋರುತ್ತದೆ. ಹೀಗಾಗಿಯೇ ಕ್ರಿಕೆಟ್‌ಗಣಪತಿ, ಪರಿಸರ ಪ್ರೇಮಿ ಗಣಪತಿ, ಗಿಟಾರ್‌ಗಣಪತಿ, ತಬಲಾಗಣಪತಿ, ಸೈಕಲ್‌ಗಣಪತಿ, ಸ್ಕೂಟರ್ ಗಣಪತಿ ಇತ್ಯಾದೀತ್ಯಾದಿ ಅಸಂಬದ್ಧಗಳು ರೂಪಿತವಾಗುತ್ತಿವೆ. ಗಣಪತಿಯನ್ನು ಮನೋರುಚಿಗೆ ಅನುಗುಣವಾಗಿ ರೂಪಿಸುತ್ತಿರುವವರು ಅವನ ದಿವ್ಯತ್ವಕ್ಕೆ ಭಂಗ ತರುತ್ತಾ ತಮ್ಮ ಬೌದ್ಧಿಕ ಮಟ್ಟಕ್ಕೆ ತಾವೇ ಮಸಿ ಬಳಿದುಕೊಳ್ಳುತ್ತಿದ್ದಾರೆ. ಇದರಲ್ಲಿ ತಪ್ಪೇನೂ ಇಲ್ಲವೆಂದು ಸಮರ್ಥಿಸಲು **ನ ಕದಾ ಚಿದ್ ಅನೀದೃಶಂ ಜಗತ್** (ಈ ಜಗತ್ತು ಈಗ ಕಾಣುವುದಕ್ಕಿಂತ ಪೂರಾ ಭಿನ್ನವಾಗಿ ಎಂದಿಗೂ ಇರಲಿಲ್ಲ.)ಎಂಬ ಗಾದೆಯನ್ನು ಉದ್ಧರಿಸುವುದಾಗಲೀ, ತಮ್ಮ ಜನತೆಯ ಮಾನಸಿಕಸ್ತರಕ್ಕೆ ಅನುಗುಣವಾಗಿ ದೇವತೆಗಳ ಸ್ವರೂಪಸೃಷ್ಟಿಗೆ ಪ್ರಾಚೀನರೂ ಕೈಹಾಕಲು ಯತ್ನಿಸಿದ್ದನ್ನು ಉಲ್ಲೇಖಿಸುವುದಾಗಲೀ ಸಲ್ಲದು. ಏಕೆಂದರೆ ಆ ಪ್ರಾಚೀನ ಸೃಷ್ಟಿಗಳ ಪೂರ್ವಭೂಮಿಕೆಗಳ ರೂಪದಲ್ಲಿ ಆಗಮ ಸಂಪ್ರದಾಯಗಳೂ, ಅವುಗಳಿಗನುಗುಣವಾದ ಮಂತ್ರ ಸ್ತೋತ್ರಗಳ ಮಹಾಶ್ರೇಣಿಗಳೂ ನುತ್ತು ಧ್ಯಾನಪರಂಪರೆಗಳೂ ಇರುತ್ತವೆ.

ಅದಂತಿರಲಿ, ಪ್ರಾಯೋಗಿಕ ಸಲಹೆಗಳನ್ನು ನೀಡುತ್ತಾ ಬಾಳಿನ ಗುಣಾತ್ಮಕತೆಗೆ ದಾರಿ ತೋರಿಸುವವನನ್ನಾಗಿ ಗಣಪತಿಯನ್ನು ರೂಪಿಸಿದರೆ ಹೇಗಿರಬಹುದು? ಗಗಸ ದ ರಚಯಿತೃ ಚಿಂತನೆ ಮಾಡಿದ್ದು ಈ ದಿಕ್ಕಿನಲ್ಲೇ. ಬೇರೆ ದೇವತೆಗಳಿಗೆ ಹೋಲಿಸಿದರೆ ಗಣಪತಿಯು ಹೆಚ್ಚು ಭಕ್ತಪರಾಧೀನನೆಂದು ಕಾಣುತ್ತದೆ. ವಿದ್ಯಾವಂತ ನಾಗರಿಕರಿಗಾಗಿ ಪೂರ್ಣಪ್ರಮಾಣದ ಸಂದೇಶಗಳನ್ನು ಗಗಸವು ಹೊರಹೊಮ್ಮಿಸುವಂತೆ ಮಾಡಲು ಇಂಥ ಪರಾಧೀನತೆಯ ಅವಕಾಶವನ್ನು ಅದರ ರಚಯಿತೃ ಬಳಸಿಕೊಂಡಿದ್ದಾನೆ. ಜೀವನವನ್ನು ವಿಶಿಷ್ಟವಾದ ಸಾಧನೆ ಹಾಗೂ ಸಿದ್ಧಿಗಳೊಡನೆ ಪೂರ್ಣಪ್ರಮಾಣದಲ್ಲಿ ಅನುಭವಿಸುತ್ತಾ ಗೌರವಪೂರ್ಣವಾಗಿ ಬದುಕಬೇಕೆಂಬುದೇ ಈ ಸಂದೇಶಗಳ ಒಟ್ಟು ತಿರುಳಾಗಿದೆ. ಸುಶಿಕ್ಷಿತರಿಗೆ ಜೀವನದ ಸಂದೇಶವನ್ನು ಇಷ್ಟೊಂದು ಸ್ಪಷ್ಟವಾಗಿ ನೀಡುವ ಮತ್ತಾವ ಸಹಸ್ರನಾಮವೂ ಇದ್ದಂತಿಲ್ಲ.

ಗಣಪತಿಯ ಮನೋಭಾವವನ್ನು ಕೊರೆದು ಕೆತ್ತಿ ಕಣ್ಣೆದುರಿಗಿಡುವ ಗಗಸದ ಸುಮಾರು ೧೫೦ ಪದಗಳನ್ನು ಪ್ರಸ್ತುತಲೇಖನದಲ್ಲಿ ಆಯ್ಕೆ ಮಾಡಿ ಪರಾಮರ್ಶಿಸಲಾಗಿದೆ. ನಾಮಾವಳಿಗಳಲ್ಲಿ ನಮಃ ಎಂಬುದು ಬಂದೇ ಬರುತ್ತದೆ. ನಮಃ ಎಂಬ ಪದವು ಪ್ರಯೋಗವಾಗುವುದು ಚತುರ್ಥೀವಿಭಕ್ತಿಯ ಪದದೊಡನೆ ಮಾತ್ರ. ಹೀಗಾಗಿ ಚತುರ್ಥೀವಿಭಕ್ತಿಯ ರೂಪಗಳು ನಾಮಗಳಿಗೆ ಸೇರಿರುತ್ತವೆ. ಪ್ರಕೃತಲೇಖನದಲ್ಲಿ ಚತುರ್ಥೀವಿಭಕ್ತಿಯ ರೂಪಗಳನ್ನು ಅವು ಇರುವ ಹಾಗೆಯೇ ನೀಡಲಾಗಿದೆ. ನಾಮಗಳ ಕ್ರಮಾಂಕಗಳನ್ನೂ ತೋರಿಸಲಾಗಿದೆ.

ಗಗಸದಲ್ಲಿನ ಕುತೂಹಲಕಾರಿ ಅಂಶವೆಂದರೆ, ಇಲ್ಲಿನ ನಾಮಗಳಲ್ಲಿ ನೂರ ಇಪ್ಪತ್ತಮೂರು (೧೨೩) ನಾಮಗಳು ಕೇವಲ ಸಂಗೀತವನ್ನು ಕುರಿತಾಗಿಯೇ ಇವೆ. ಹೀಗೆ ಗಣಪತಿಯ ಆಕಾರವನ್ನು ಸಂಗೀತದ ಹಿನ್ನೆಲೆಯಲ್ಲಿ ಕಟ್ಟಿಕೊಡುವಾಗ, ಗಗಸ ದ ರಚಯಿತೃ ಗೀತಗಾನಗಳಲ್ಲಿ ವ್ಯತ್ಯಾಸವನ್ನೇನೂ ಮಾಡಿಕೊಂಡಿಲ್ಲ. 'ಗೀತಂ ಗಾನಮಿಮೇ ಸಮೇ' ಎಂಬ

ನಾಮಲಿಂಗಾನುಶಾಸನವನ್ನು ಅವನು ಮನಸ್ಸಿನಲ್ಲಿ ಇಟ್ಟುಕೊಂಡಿರುವುದು ಸ್ಪಷ್ಟ. ಹೇಮಚಂದ್ರನ ಸುಪ್ರಸಿದ್ಧ ಕೋಶ ಅಭಿಧಾನ ಚಿಂತಾಮಣಿಯಲ್ಲಿ (೨.೨೮೦) 'ಗೀತಂ ಗಾನಂ ಗೇಯಂ ಗೀತಿರ್ಗಾಂಧರ್ವಂ'ಎಂದು ಐದು ಪದಗಳನ್ನು ಪರ್ಯಾಯವಾಗಿ ಹೇಳಿದೆ. ದೇವಸಾಗರಗಣಿಯು ಈ ಕೋಶಕ್ಕೆ ರಚಿಸಿರುವ ವ್ಯುತ್ಪತ್ತಿರತ್ನಾಕರ ವ್ಯಾಖ್ಯಾನದಲ್ಲಿ "ರಾಗ ಗೀತಿ ಮುಂತಾದುವುಗಳು ಗೀತವೆಂದೂ, ಪ್ರವೇಶಿಕೀ ಮುಂತಾದ ಧ್ರುವಾರೂಪಗಳು ಗಾನವೆಂದೂ, ಪದ ಸ್ವರ ತಾಲ ಅವಧಾನ ಮುಂತಾದುವು ಗಾಂಧರ್ವ ಎಂದೂ ನಾಟ್ಯಶಾಸ್ತ್ರಾದಿಗಳಲ್ಲಿರುವ ಪ್ರಭೇದವನ್ನು ಕೋಶಕಾರನು ಗಮನಕ್ಕೆ ತಂದುಕೊಂಡಂತಿಲ್ಲ" ಎಂದಿದ್ದಾನೆ.

ಅದು ಹೇಗಾದರೂ ಇರಲಿ. ಗೀತಕ್ಕೂ ಸಂಗೀತಕ್ಕೂ ಏನೋ ಭೇದವಿದೆಯೆಂಬಷ್ಟು ವಿಚಾರವನ್ನು ಗಗಸ ರಚಯಿತೃ ಗಮನಿಸಿರುವ ಹಾಗಿದೆ. ಹೀಗಾಗಿಯೇ ಗಣಪತಿಯನ್ನು ಅವನು 'ಗೀತಸಂಗೀತಶಾಸನ (೬೨೭)'ನಾಗಿ ಕಂಡಿರುವುದು. ಗಾಯನನೆಂದರೆ ಪ್ರಾಚೀನ ಸಂಗೀತಪರಿ ಭಾಷೆಯಲ್ಲಿ ಗಾಯಕ ನೆಂದರ್ಥ. ಗಾಯನನೆಂಬ ಪುಲ್ಲಿಂಗದ ಶಬ್ದ ಸಂಸ್ಕೃತ ವಾಙ್ಮಯದಲ್ಲಿ ಆಧುನಿಕವಾದ 'ಗಾಯಕ' ಎಂಬ ಅರ್ಥದಲ್ಲಿ ಅತಿಸಾಧಾರಣ. ಸಂಸ್ಕೃತದ ಪ್ರಾಚೀನವಾಙ್ಮಯದಲ್ಲಿ ಗಾಯಕವೆಂಬ ಶಬ್ದವೂ ಇದೆ, ಅದೇ ಅರ್ಥದಲ್ಲಿ 'ಗಾಯನ' ಎಂಬ ಶಬ್ದವೂ ಇದೆ. ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಸಾಧಾರಣವಾಗಿ, ಹಾಡುಗಾರ ಎಂಬರ್ಥದಲ್ಲಿ ಗಾಯಕ ಎಂಬ ಶಬ್ದವನ್ನು ಬಳಸುವುದು ವಾಡಿಕೆ. ಹಾಡುಗಾರ ಎಂಬ ಅರ್ಥಕ್ಕೆ ಗಾಯಕ ಎಂಬ ಶಬ್ದವನ್ನು ಮಾತ್ರ ಗಗಸ ರಚಯಿತೃ ಇಟ್ಟುಕೊಂಡಿದ್ದಾನೆ. ಸಂಸ್ಕೃತೇತರ ಭಾಷೆಗಳ ಪ್ರಭಾವದಿಂದಾಗಿ ಗೀತ ಗಾನ ಗಾಂಧರ್ವ ಇತ್ಯಾದಿಗಳಿಗಿದ್ದ ಸೂಕ್ಷ್ಮಭೇದಗಳು ಸಂಸ್ಕೃತವನ್ನು ಆಡುತ್ತಿದ್ದ ಜನರಿಗೆ ಮರೆತುಹೋದ ಕಾಲವನ್ನು ಈ ಸಹಸ್ರನಾಮದ ರಚನೆಗೆ ನಿರ್ಧರಿಸಬೇಕಾಗುತ್ತದೆ. ಇಲ್ಲಿ ಗೀತ, ಸಂಗೀತ, ಗಾನ ಹಾಗೂ ಗಾಯನ ಇವುಗಳನ್ನು ಸಂಗೀತ ಎಂಬ ಸಾಮಾನ್ಯಾರ್ಥದಲ್ಲಿಯೂ ಗಾಯಕ ಎಂಬ ಶಬ್ದವನ್ನು ಸಂಗೀತಗಾರ ಎಂಬ ಅರ್ಥದಲ್ಲಿಯೂ, ಹಾಗೆಯೇ ಗಾಂಧರ್ವ ಎಂಬ ಶಬ್ದವನ್ನು ದಿವ್ಯವಾದ ಸಂಗೀತ ಎಂಬ ಜನಪ್ರಿಯಾರ್ಥದಲ್ಲಿಯೂ ಬಳಸಲಾಗಿದೆ.

**ಗಣಪತಿ : ಸಂಗೀತಗಾರ**

ಗಣಪತಿ ಸಂಗೀತ ಹಾಡುತ್ತಾನೆ(ಗಾನಕೃತೇ ೨೯೧). ಅವನು ಕೇವಲ ಗಾಯಕ ಮಾತ್ರವಲ್ಲ ಗಾಯಕಶ್ರೇಷ್ಠನೂ ಹೌದು.(ಗಾಯಕಾಯ ೬೯೯, ಗಾಯಕವರಾಯ ೭೦೦). ಇದು ಹೇಗೆ ಸಾಧ್ಯವೆಂಬ ಸರಳವಾದ ಪ್ರಶ್ನೆಗೆ ಅಷ್ಟೇ ಸರಳವಾದ ನೇರವಾದ ಉತ್ತರ ನೀಡುವುದು ಸಾಧ್ಯ : ಅವನಿಗೆ ಸಂಗೀತ ಹಾಡುವುದು ಹೇಗೆಂದು ಗೊತ್ತು(ಗಾನಜ್ಞಾಯ ೨೭೯). ಅವನೇ ಗಾಯಕರಲ್ಲಿ ಮೊಟ್ಟಮೊದಲನೆ ಯವನು(ಗಾಯಕಪ್ರಥಮಾಯ ೭೦೬). ಅವನು ಗಾಯಕರ ಮಧ್ಯದಲ್ಲಿ ಸೂರ್ಯನಂತೆ ಉಜ್ಜ್ವಲವಾಗಿ ಪ್ರಕಾಶಿಸತಕ್ಕವನು(ಗಾಯಕೇನಾಯ ೨೯೧). ಹೀಗಾಗಿ ಸ್ವಾಭಾವಿಕವಾಗಿಯೇ ಅವನು ಗಾಯಕರಿಗೆಲ್ಲ ಒಡೆಯ(ಗಾಯಕೇಶಾಯ ೭೧೦).

**ಗಣಪತಿ : ಸಂಗೀತಕಲಾಕುಶಲ**

ಗಣಪತಿಯು ಸಂಗೀತಕುಶಲ(ಗಾನಕುಶಲಾಯ ೨೮೦, ಗಾನಚತುರಾಯ ೨೯೨). ಅವನು ಸಂಗೀತದಲ್ಲಿ ಸಿದ್ಧಹಸ್ತ (ಗೀತವಿಶಾರದ ೬೧೫, ಗಾನವಿದ್ಯಾವಿಶಾರದಾಯ). ಅವನ ಹವ್ಯಾಸ, ಪ್ರವೃತ್ತಿಗಳೆಲ್ಲಾ ಗಾನವಿದ್ಯೆಯ ಕಡೆಗೆ ವಾಲುವಂಥವು(ಗಾನಶೀಲಾಯ ೨೯೫, ಗಾನಶಾಲಿನೇ ೨೯೬). ಅವನ ಸಂಗೀತವು ಶ್ರಮವಿಲ್ಲದೇ ಧಾರೆಯಾಗಿ ಹೊರಹೊಮ್ಮುತ್ತದೆ(ಗತಶ್ರಮಾಯ ೨೯೭). ಅವನು ಸಂಗೀತದಲ್ಲಿ ಉತ್ತುಂಗ ಶಿಖರಕ್ಕೇರಿದವನು (ಗಾನಚಂಚುರಾಯ ೬೧೮). ಅವನು ಚುರುಕಾಗಿ ಯಾವ ಆಲಸ್ಯವೂ ಇಲ್ಲದೇ ಸಂಗೀತಾಭ್ಯಾಸ ಮಾಡತಕ್ಕವನು(ಗಾನಪಟವೇ ೭೪೨, ಗತಾಲಸಾಯ ೬೪೧). ಅವನಗೆ ಕೇವಲ ಹಾಡುಗಾರಿಕೆಯಲ್ಲಿ ಮಾತ್ರವಲ್ಲದೆ, ವಾದ್ಯಗಳಲ್ಲೂ ಹಿಡಿತ ಉಂಟು (ಗೀತವಾದಯ ಪಟವೇ ೬೪೨).

**ಗಣಪತಿ : ಸಂಗೀತಶಾಸ್ತ್ರಜ್ಞ**

ಗಣಪತಿಯು ಸಂಗೀತತತ್ತ್ವಗಳ ವಿಶ್ಲೇಷಣೆ ಮಾಡಬಲ್ಲ ಸಾಮರ್ಥ್ಯವುಳ್ಳವನು (ಗಾನತತ್ತ್ವ ವಿವೇಚಕಾಯ ೨೮೧).

ಅವನು ಸಂಗೀತಶಾಸ್ತ್ರಗ್ರಂಥಗಳನ್ನೆಲ್ಲಾ ಚೆನ್ನಾಗಿ ಅರಿತಿದ್ದಾನೆ (ಗಾನಾಗಮಜ್ಞಾಯ ೨೮೫). ಅವನು ಯಾವಾಗಲೂ ಸಂಗೀತವಿಚಾರದ ಜ್ಞಾನದಲ್ಲಿಯೇ ತೊಡಗಿರುತ್ತಾನೆ (ಗಾನಜ್ಞಾನ ಪರಾಯಣಾಯ ೨೮೪). ಅವನ ಶ್ರೀಮಂತಿಕೆಯೆನ್ನುವುದು ಮುಖ್ಯವಾಗಿ ಸಂಗೀತದ ತಿಳಿವು(ಗಾನವಿಜ್ಞಾನ ಸಂಪನ್ನಾಯ ೨೯೮). ಅವನು ಸಂಗೀತದ ಎಲ್ಲಾ ಅಂಗಗಳನ್ನು ಅರಿತಂಥವನು(ಗಾನಾಂಗಜ್ಞಾನವತೇ ೩೧೦). ಅವನು ಸಂಗೀತಶಾಸ್ತ್ರದ ವಿಶ್ಲೇಷಣೆ ಮಾಡಬಲ್ಲ ಸಮರ್ಥ (ಗಾನವಿದ್ಯಾವಿಶೋಶಕಾಯ ೩೩೩). ಸಂಗೀತದ ತಾತ್ತ್ವಿಕವಿವೇಚನೆಯಲ್ಲೂ ಅವನು ಎತ್ತಿದ ಕೈ(ಗೀತತತ್ತ್ವಾರ್ಥಕೋವಿದಾಯ). ಇದರಲ್ಲಿ ಅವನ ಮಟ್ಟ ಎಂಥದ್ದೆಂದರೆ ಸಂಗೀತದ ಬಗೆಗೆ ಯಾರಾದರೂ ಸಂಶಯಗಳನ್ನು ವ್ಯಕ್ತ ಪಡಿಸಿದಲ್ಲಿ ಅವುಗಳನ್ನು ಪರಿಹರಿಸುವಷ್ಟು (ಗೀತಸಂಶಯಸಂಭೇತ್ರೆ ೬೩೬). ಸಂಗೀತದ ಅರ್ಥ, ಅದರ ತಾತ್ತ್ವಿಕ ಹಿನ್ನೆಲೆ, ಅದರ ಪ್ರಯೋಜನ, ಇವೆಲ್ಲ ಅವನಿಗೆ ಸರಿಯಾಗಿ ಗೊತ್ತು(ಗೀತಾರ್ಥತತ್ತ್ವವಿದೇ ೬೪೪, ಗೀತಾರ್ಥಜ್ಞಾಯ ೬೨೮). ಸಂಗೀತ ಯಾವುದೆಂದೂ ಅವನಿಗೆ ಗೊತ್ತು, ಸಂಗೀತ ಯಾವುದಲ್ಲವೆಂದೂ ಅವನಿಗೆ ಗೊತ್ತು(ಗೀತಾಗೀತವಿವೇಕಜ್ಞಾಯ ೬೪೫). ಹಾಡಲು ಯೋಗ್ಯವಾದ ಪದಗಳ ಒಳಮರ್ಮವನ್ನು ಅವನು ಬಲ್ಲ (ಗೇಯತತ್ತ್ವವಿದೇ). ಅವನು ದಿಟವಾಗಿಯೂ ದಿವ್ಯವಾದ ಸಂಗೀತವಿದ್ಯಾತತ್ತ್ವದ ಜ್ಞಾನಿ (ಗಂಧರ್ವವಿದ್ಯಾ ತತ್ತ್ವಜ್ಞಾಯ ೭೫೪). ಸಂಗೀತಕ್ಕೆ ಸಂಬಂಧಿಸಿದಂತೆ ಇರುವ ಜ್ಞಾನಪರಿಧಿಗೆ ಅವನೇ ಕೊಟ್ಟಕೊನೆಯ ಎಲ್ಲೆ(ಗಾನಸೀಮ್ನೇ ೩೦೮).

**ಗಣಪತಿ : ಸಂಗೀತಕಲಾಜ್ಞಾನಿ**

ಗಣಪತಿಯು ಸಂಗೀತಕ್ಕೆ ಸಂಬಂಧಸಿದ ಚಿಂತನೆಗಳಲ್ಲಿ ಯಾವಾಗಲೂ ಮುಳುಗಿಹೋಗಿರುತ್ತಾನೆ (ಗಾನಧ್ಯಾನಪರಾಯಣಾಯ ೨೯೦). ಅವನ ಅಭಿರುಚಿ ಎಂದರೆ ಅದು ಸಂಗೀತವೇ (ಗಾನರಸಾಯ ೨೮೩). ಅವನಿಗೆ ಸಂಗೀತವೆಂದರೆ ಪರಮಪ್ರೀತಿ (ಗಾನತತ್ತ್ವವಿವೇಚಕಾಯ ೨೮೧). ಅವನ ಹೃದಯ ಯಾವಾಗಲೂ ಸಂಗೀತದಲ್ಲಿ ಕರಗಿಹೋಗಿರುತ್ತದೆ. ಇದು ಎಷ್ಟರ ಮಟ್ಟಿಗೆ ಎಂದರೆ ಸ್ವಯಂ ಅವನೇ ಗಾನದಲ್ಲಿ ಸಮರಸವಾಗಿ ಬೆರೆತುಹೋಗಿದ್ದಾನೆಯೋ ಎಂಬಷ್ಟು (ಗಾನಲೀನಾಯ ೩೩೬, ಗೀತಲೀನಾಯ ೬೩೬, ಗಾನಪ್ರವಣಚೇತನಾಯ ೨೮೭, ಗೀತಪ್ರವಣ ಚೇತನಾಯ ೬೪೬). ಇದಕ್ಕಾಗಿಯೇ ಅವನು ಗಾನಮಯನೆಂದೆನಿಸುವನು (ಗಾನಮಯಾಯ ೩೩೧). ಸಂಗೀತಕ್ಕೆ ಅವನುಪರವಶನಾಗಿರುತ್ತಾನೆ. (ಗಾನಮತ್ತಾಯ ೩೦೦). ಅವನ ದೃಷ್ಟಿಯೆಂದರೆ ಒಂದೇ, ಅದು ಸಂಗೀತ(ಗೀತೈಕದೃಶೇ ೬೩೮). ಇಷ್ಟಾದಮೇಲೆ ಅವನ ಶ್ರೀಮಂತಿಕೆಯೆನ್ನುವುದು ಸಂಗೀತವಲ್ಲದೆ ಬೇರೇನೂ ಅಲ್ಲವೆಂದು ಬಾಯಿಬಿಟ್ಟು ಬೇರೆ ಹೇಳಬೇಕೆ(ಗೀತಭೂತಯೇ ೬೫೯). ಅಂದಮೇಲೆ ಅವನು ಗಾನಪ್ರಪಂಚದಲ್ಲಿ ರಾಜನಾಗಿರುವುದೇ ಆಗಲೀ (ಗಾನೇಂದ್ರಾಯ ೩೩೫, ಗೀತಪ್ರಭವೇ ೬೪೩) ಸಂಗೀತದಿಂದಾಗಿಯೇ ನ್ಯಾಯೋಚಿತವಾದ ಹೆಮ್ಮೆ ಪಟ್ಟುಕೊಂಡಿರುವುದಾಗಲೀ (ಗಾನಮಾನವತೇ ೩೧೧) ಅವನ ಪ್ರಾಣಗಳೆಲ್ಲ ಸಂಗೀತದ ಆಕಾರದಲ್ಲಿ ಇರುವುದೇ ಆಗಲೀ(ಗಾನಪ್ರಾಣಾಯ ೩೧೮) ಸರಳವಾಗಿ ಹೇಳುವುದಾದಲ್ಲಿ ಅವನ ಆಸಕ್ತಿಯೆಲ್ಲಾ ಸಂಗೀತದಕಡೆಗೆ(ಗೀತಾಸಕ್ತಾಯ ೬೩೫) ಆಗಿರುವುದಾಗಲೀ ಆಶ್ಚರ್ಯದ ಮಾತೇನೂ ಅಲ್ಲ ತಾನೆ.

ಇಂಥವನನ್ನು ಕುರಿತು ಮಾತಾಡುವಾಗ ಅವನಿಗೆ ಸಂಗೀತ ಇಷ್ಟ ಎನ್ನುವುದು(ಗೀತಪ್ರಣಯಿನೇ ೬೧೭) ತೀರಾ ಸಾಧಾರಣ ಮಾತಾಗುತ್ತದೆ. ಅವನು ಸಂಗೀತದ ಕಡಲು (ಗಾನಸಮುದ್ರಾಯ ೩೧೪, ಗಾನಸಿಂಧವೇ ೩೧೬). ಅವನ ಆಭೃವೆಂದರೆ ಅದು ಸಂಗೀತ(ಗಾನಭೂಷಣಾಯ ೩೧೫). ಅವನು ಸಂಗೀತದ ಜಗತ್ತಿಗೇ ಒಡೆಯ (ಗಾನಾಧೀಶಾಯ ೩೩೮). ಅವನು ಪ್ರಭುವಾಗಿರುವುದೂ ಸಂಗೀತವಿದ್ಯೆಗೇ(ಗೀತಪ್ರಭವೇ ೬೪೩). ತಾಲಗತಿಯೆಂದರೆ ಅವನಿಗೆ ತುಂಬಾ ಇಷ್ಟ(ಗತಿಪ್ರಿಯಾಯ ೩೩೭). ತಾಳಕ್ಕು ಅವನು ಒಡೆಯನೇ (ಗತೀಶ್ವರಾಯ ೩೪೧). ಅವನ ಸ್ವಭಾವ ಸಂಗೀತಕ್ಕೆ ಚೆನ್ನಾಗಿ ಹೊಂದಿಕೊಳ್ಳುವಂಥದ್ದು (ಗಾನಲಯಾಯ ೩೫೯). ಅವನ ಅಂತರಾತ್ಮರೂಪುಗೊಂಡಿರುವುದೇ ಸಂಗೀತದಿಂದ (ಗಾನಾಂತರಾತ್ಮನೇ ೩೨೮). ಅವನ ಐಸಿರಿ ಸಂಗೀತದ್ದೇ (ಗಾನಾಢ್ಯಾಯ ೩೨೯, ಗಾನಭೂತಯೇ ೩೪೩, ಗಾನೈಕಭೂತಿಮತೇ ೩೪೪). ಅವನ ಉಜ್ಜ್ವಲವಾದ ಮನೋಭಾವ ಹೊಳೆಯುತ್ತಿರುವುದು ಸಂಗೀತದಿಂದಾಗಿಯೇ (ಗಾನಭ್ರಾಜತ್ಸ್ವಭಾವಕಾಯ ೩೩೦), ಸಂಗೀತಕ್ಕೆ ಅವನೇ ಆಧಾರ ಅಥವಾ ಸಂಗೀತವೇ ಅವನಿಗೆ ಆಧಾರ (ಗಾನಾಧಾರಾಯ ೩೪೦). ಸಂಗೀತದ

ತಾನವೆಂದರೆ ಅವನಿಗೆ ಬೇರೆ ಇನ್ನೇನೂ ಬೇಡ (ಗಾನತಾನರತಾಯ ೩೪೫). ತನ್ನ ಸಂಗೀತದ ತಾನಕ್ಕೆ ತಾನೇ ಮಾರುಹೋಗುತ್ತಾನೆ (ಗಾನತಾನವಿಮೋಹಿತಾಯ ೩೪೬).[೧]

ಅವನ ಮತವೆಂದರೆ ಅದು ಸಂಗೀತಮತ (ಗಾನಪರಾಯ ೩೧೭). ಅವನ ಪ್ರೀತಿಯೆಂದರೆ ಅದು ಗಾನಪ್ರೀತಿಯೇ. (ಗಾನಪ್ರಣಯವತೇ ೩೦೨). ಅವನ ಧ್ಯಾನಕ್ಕೆ ಧ್ಯೇಯ ವಸ್ತು ಸಂಗೀತವೇ (ಗಾನಧ್ಯಾತ್ರೇ ೩೦೩). ಅವನ ಜ್ಞಾನ ಸುತ್ತಿಸುಳಿದಾಡುವುದು ಸಂಗೀತದ ಸುತ್ತವೇ (ಗಾನಬುದ್ಧಯೇ ೩೦೪). ಸಂಗೀತದ ಬಗೆಗೆ ಅವನ ಮನಸ್ಸು ಯಾವಾಗಲೂ ಉತ್ಸುಕವಾಗುತ್ತಲೇ ಇರುತ್ತದೆ. (ಗಾನೋತ್ಸುಕಮನಸೇ ೩೦೫, ಗಾನೋತ್ಸುಕಾಯ ೩೦೬). ಸಂಗೀತವೆಂದರೆ ಅವನ ಮನಸ್ಸು ಅರಳುತ್ತದೆ (ಗಾನಹೃಷ್ಟಾಯ ೩೨೧). ಜಗತ್ತನ್ನು ಅವನು ನೋಡುವುದು ಸಂಗೀತದಿಂದ (ಗಾನಚಕ್ಷುಷೇ ೩೨೨). ಸಂಗೀತವೆಂದರೆ ಅವನಿಗೆ ಒಂದು ರೀತಿಯ ಮತ್ತೇರುತ್ತದೆ (ಗಾನಮತ್ತಾಯ ೩೨೪). ಅಂದಮೇಲೆ, ಅವನ ಸಂಗೀತಾಭಿರುಚಿಯನ್ನೇ (ಗಾನರುಚಯೇ ೩೨೫) ಆಗಲೀ, ಅವನು ಸಂಗೀತವನ್ನು ಬಿಗಿಯಾಗಿ ಹಿಡಿದುಕೊಂಡಿರುವುದನ್ನಾಗಲೀ (ಗಾನಧರಾಯ ೩೩೨), ಅವನಿಗೆ ಸಂಗೀತದಲ್ಲಿ ಚಾತುರ್ಯವಿರುವುದನ್ನಾಗಲೀ (ಗಾನಪೇಶಲಾಯ ೩೧೨), ಸಂಗೀತವೆಂದರೆ ಅವನ ಮನಸ್ಸು ಅರಳುವುದನ್ನಾಗಲೀ (ಗೀತಪ್ರಸನ್ನಾಯ ೬೧೯), ಸಂಗೀತವೇ ಅವನ ಜೀವನಾಡಿಯಾಗಿರುವುದನ್ನಾಗಲೀ (ಗೀತಾತ್ಮನೇ ೬೨೦), ಸಂಗೀತದಲ್ಲಿಯೇ ಅವನ ಮನಸ್ಸು ಯಾವಾಗಲೂ ಚಂಚಲವಾಗಿರುವುದನ್ನಾಗಲೀ (ಗೀತಲೋಲಾಯ ೬೨೧), ಅವನೇ ಸಂಗೀತಕಲೆಗೆ ತವರು ಮನೆಯಾಗಿರುವುದನ್ನಾಗಲೀ (ಗೀತಾಶ್ರಯಾಯ ೬೨೩) ಅಥವಾ ಸಂಗೀತದಿಂದಲೇ ಅವನು ತುಂಬಿ ಹೋಗಿರುವುದನ್ನಾಗಲೀ (ಗೀತಮಯಾಯ ೬೨೪) ಒತ್ತಿ ಹೇಳಬೇಕಾಗಿಲ್ಲವಷ್ಟೆ.

**ಗಣಪತಿ : ಉತ್ಕೃಷ್ಟ ಸಂಗೀತಶ್ರೋತೃ**

ಗಣಪತಿಯು ಬೇರೆಯವರ ಸಂಗೀತವನ್ನೂ ಸಹ ಕೇಳುವ ಸಹೃದಯಿ. ಅವನು ಬೇರೆಯವರ ಉನ್ನತ ಮಟ್ಟದ ಸಂಗೀತವನ್ನು ಹೊಗಳುವವನೇ (ಗಾನಶ್ಲಾಘಿನೇ ೨೮೨).[೨] ಸಂಗೀತ ಕೇಳುವುದೆಂದರೆ ಅವನಿಗೆ ಪರಮಪ್ರೀತಿ (ಗಾನಶ್ರವಣಲಾಲಸಾಯ ೨೯೯). ಸಂಗೀತ ಗಾರರನ್ನು ಅವನು ಪ್ರೀತಿಯಿಂದ ನೋಡುತ್ತಾನೆ. (ಗಾನವತ್ಪ್ರಣಯಾಯ ೩೧೩). ಸಂಗೀತಶಾಸ್ತ್ರಜ್ಞರೆಂದರೂ ಅವನಿಗೆ ಪ್ರೀತಿ (ಗಾನವಿತ್ಪ್ರಿಯಾಯ ೩೨೭), ಸಂಗೀತಗಾರರೆಂದರೂ ಪ್ರಾಣ (ಗಾನಕಪ್ರಾಣಯಿನೇ ೭೦೨). ಹೀಗಾಗಿ, ಅವನು ಗಾಯಕರಿಗೇ ಅಧೀನನೆಂದು ಬಾಯಿಬಿಟ್ಟು ಬೇರೆ ಹೇಳಬೇಕೆ (ಗಾಯಕಾಧೀನವಿಗ್ರಹಾಯ ೭೧೩)? ತನ್ನ ವರದಾನಶಕ್ತಿಯನ್ನು ಅವನು ಸಂಗೀತಗಾರರಿಗೆ ಇಷ್ಟವಾದದ್ದನ್ನು ನೆರವೇರಿಸಲು ಬಳಸಿಕೊಳ್ಳುತ್ತಾನೆ. (ಗಾಯಕಪ್ರಿಯಾದಾಯ ೭೧೨). ಅವನು ಗಾಯಕರ ಇಷ್ಟಾರ್ಥಗಳನ್ನು ಈಡೇರಿಸುತ್ತಾನೆ (ಗಾಯಕೇಷ್ಟಫಲಪ್ರದಾಯ ೭೦೧). ಗಾಯಕರಿಗೆ ಗೌರವ ನೀಡುವುದು ಅವನ ಸ್ವಭಾವ (ಗಾನವನ್ಮಾನದಾಯ ೩೪೨). ಗಾಯಕರಿಗೆ ತೊಂದರೆಯಾಗುವುದನ್ನು ಅವನು ಸ್ವಲ್ಪವೂ ಸಹಿಸುವುದಿಲ್ಲ. ಆ ತೊಂದರೆಗಳನ್ನು ಅವನು ಕೂಡಲೇ ನಾಶಮಾಡಿಬಿಡುತ್ತಾನೆ (ಗಾನಾಹಿತಘ್ನಾಯ ೩೩೪). ಗಾಯಕರಿಗೆ ಯಾವ ತೊಂದರೆಯೇ ಆಗಲೀ ವಿಘ್ನ ಬರುವುದೇ ಆಗಲೀ ಅವನು ತಡೆದುಕೊಳ್ಳಲಾರ. ಆದ್ದರಿಂದ ಕೂಡಲೇ ಅವನು ಅದರ ನಿವಾರಣೆ ಮಾಡಿಯೇ ತೀರುತ್ತಾನೆ. (ಗಾಯಕತ್ರಾಸಘ್ನೇ ೭೧೮, ಗೀರವಿಘ್ನವಿನಾಶನಾಯ ೬೩೪). ಅವನು ಗಾಯಕರ ಅಂತರಂಗದಲ್ಲಿಯೇ ಓಡಾಡುತ್ತಿರುತ್ತಾನೆ. (ಗಾಯಕಾನ್ತರಸಂಚರಾಯ ೭೧೧). ಅವನು ಗಜಾನನನಾಗಿರುವುದರಿಂದ ಸಂಗೀತ ಸೌರಭದ ಮದೋದಕ ಅವನ ಕಪೋಲಗಳಿಂದ ಒಸರುತ್ತದೆ. ಅವನ್ನು ಸವಿಯಲು ಗಾಯಕರೆಲ್ಲ ಅವನ ಸುತ್ತಲೂ ದುಂಬಿಗಳಂತೆ ಮುತ್ತಿಕೊಂಡಿರುತ್ತಾರೆ (ಗಾಯನ್ಮಧುವ್ರತಲಸತ್ಕಟಾಯ ೬೯೮). ಅವನು ಗಾಯಕರ ಇಷ್ಟಾರ್ಥಗಳನ್ನು ಈಡೇರಿಸುತ್ತಾನೆ (ಗಾಯಕೇಷ್ಟಫಲಪ್ರದಾಯ ೭೦೧). ಗಾಯಕರು ತಾವು ಸುರಕ್ಷಿತರಾಗಿದ್ದೇವೆಂಬ ನಂಬಿಕೆ ಗಾಯಕರಿಗೆ ಬರುವುದು ಅವನಿಂದಲೇ (ಗಾಯಕಾಭಯದಾಯಕಾಯ ೭೦೪). ಅವನ ಮನೋಭಾವ ಬೇರೆ ಗಾಯಕರೊಂದಿಗೆ ತುಂಬಾ ಚೆನ್ನಾಗಿ ಹೊಂದಿಕೊಳ್ಳುತ್ತದೆ (ಗಾಯಕಪ್ರವಣಸ್ವಾನ್ತಾಯ ೭೦೫). ಗಾಯಕರು ಹೊಗಳಿದರಂತೂ ಅವನಿಗೆ ಪರಮಸಂತೋಷ (ಗಾಯಕೋದ್ಗೀತಸಂಪ್ರೀತಾಯ ೭೦೭). ಹೀಗಾಗಿ ಗಾಯಕರು ಹೊಗಳಿ ಕೊಂಡಾಡುವುದಕ್ಕೆ ವಿಘ್ನ ಬರುವಂಥ ಪ್ರಸಂಗವನ್ನು ಕೂಡಲೇ ನಿವಾರಣೆ ಮಾಡಿಬಿಡುತ್ತಾನೆ (ಗಾಯಕೋದ್ಗೀತವಿಘ್ನಘ್ನೇ ೭೦೮).

**ಗಣಪತಿ : ಸಂಗೀತದಲ್ಲಿ ಪರಮೋತ್ತುಂಗ**

ಗಣಪತಿ ಸಂಗೀತದಲ್ಲಿ ಮುಟ್ಟಿದ ಮಟ್ಟ ಯಾವುದೆಂದರೆ ಜನರು ಅವನೇ ಸಂಗೀತದ ನೆಲೆ ಎಂದು ಕರೆಯಲಾರಂಭಿಸಿದರು (ಗಾನಭುವೇ ೨೯೪, ಗಾನಭೂಮಯೇ ೩೦೭, ಗಾನೈಕಭುವೇ ೩೨೦). ಸಾಧಾರಣ ಗಾನಕ್ಕೆಲ್ಲ ಅವನು ಮನ ಸೋಲುವವನಲ್ಲ, ಅವನ ಮೆಚ್ಚಿಗೆಗೆ ಅರ್ಹವಾದದ್ದು ದಿವ್ಯವಾದ ಗಾನವೇ ಆಗಬೇಕು (ಗನ್ಧರ್ವಗಾನಶ್ರವಣಪ್ರಣಯಿನೇ ೭೭೪). ಸಂಗೀತಶಾಸ್ತ್ರದ ಆಕೃತಿಯೇ ಅವನು ಎಂಬಷ್ಟರ ಮಟ್ಟಿಗೆ ಅವನ ಸಂಗೀತಸಾಧನೆ ಇದೆ. (ಗೀತಸಂಗೀತಶಾಸನಾಯ ೬೨೭). ಹೆಚ್ಚೂ ಕಡಿಮೆ ಅವನು ಸಂಗೀತದ ಅವಿಭಾಜ್ಯ ಅಂಗವಾಗಿಯೇ ಹೋಗಿದ್ದಾನೆ. (ಗಾನಾಂಗಾಯ ೨೮೬). ಅವನೇ ಸಂಗೀತ, ಅವನೇ ಸಂಗೀತದ ದರ್ಶನ (ಗಾನಾಯ ೭೭೯, ಗೀತತತ್ತ್ವಾಯ ೬೨೯). ಬೇರೆ ರೀತಿ ಹೇಳುವುದಾದಲ್ಲಿ ಸಂಗೀತವೇ ಅವನು ಅಥವಾ ಸಂಗೀತದ ಅಧಿದೇವತೆಯೇ ಅವನು (ಗೀತಾಯ ೬೧೨).

**ಗಣಪತಿ : ಗಾನದ ಮೂಲಕ ಧ್ಯಾನಯೋಗ್ಯ**

ಗಣಪತಿಯನ್ನು ಸಂಗೀತದ ಮೂಲಕ ಧ್ಯಾನಿಸಬೇಕು (ಗಾನಧ್ಯೇಯಾಯ ೨೮೮). ಅವನನ್ನು ಸಾಕ್ಷಾತ್ಕರಿಕೊಳ್ಳಬೇಕಾದರೆ ಸಂಗೀತವೇ ಸಾಧನ (ಗಾನಗಮ್ಯಾಯ ೨೮೯).

**ಗಣಪತಿ : ವಿದ್ಯಾಪ್ರೇಮಿ**

ಗಣಪತಿ ಗ್ರಂಥಗಳನ್ನು ಚೆನ್ನಾಗಿ ಅರಿತವನು(ಗ್ರನ್ಥಜ್ಞಾಯ ೫೫೪). ಅವನ ವಿದ್ಯೆ ಸಾಕಷ್ಟು ಮೇಲ್ಮಟ್ಟದ್ದೇ (ಗುರುವಿದ್ಯಾಯ ೩೬೦). ಅವನಲ್ಲಿ ಆಚಾರ್ಯಲಕ್ಷಣಗಳ ಸಂಪತ್ತೆಲ್ಲಾ ಉಂಟು (ಗುರುಲಕ್ಷಣಸಂಪನ್ನಾಯ ೩೫೮). ಗ್ರಂಥಗಳಲ್ಲಿ ಬರುವ ಗಡುಚಾದ ಸಂಶಯಗಳನ್ನು ಅಥವಾ ಗಂಟುಗಳನ್ನು ನಿವಾರಣೆ ಮಾಡುವುದು ಅವನಿಗೇನೂ ಅಂಥಾ ಕಷ್ಟದ ವಿಷಯವಲ್ಲ (ಗ್ರನ್ಥಭ್ರಮ ನಿವಾರಕಾಯ ೬೦೯, ಗ್ರನ್ಥಭಿದೇ ೫೫೭). ಅವನಿಗೆ ತತ್ತ್ವಾರ್ಥಗಳಲ್ಲಿ ಯಾವುದೇ ಸಂಶಯವೂ ಉಳಿದುಕೊಂಡಿಲ್ಲ (ಗತತತ್ತ್ವಾರ್ಥಸಂಶಯಾಯ ೬೮೬). ಅವನು ನಿಗೂಢವಾದ ಶಾಸ್ತ್ರಾರ್ಥಗಳನ್ನು ಬಲ್ಲವನು (ಗುರುಶಾಸ್ತ್ರವಿಚಾರಜ್ಞಾಯ ೩೯೯) ಅವನು ಗ್ರಂಥಗಳ ಅಂತರಂಗದ ಪಾರನೋಡಿ ದಂಥವನು (ಗ್ರನ್ಥಾರ್ಥಪಾರದೃಶೇ ೫೭೩). ಅವನು ಸ್ವಯಂ ಸಾಹಿತಿ (ಗ್ರನ್ಥಕಾರಾಯ ೬೦೪). ಗ್ರಂಥ ರಚಿಸುವವರಿಗೆ ಅವನು ಗೌರವಾರ್ಹ (ಗ್ರನ್ಥಕಾರಮಾನ್ಯಾಯ ೬೦೫). ಅವನು ತನ್ನ ಸ್ವಂತ ಗುರುವಿನ ಸಂಶಯಗಳನ್ನೇ ಕತ್ತರಿಸಿ ಹಾಕಬಲ್ಲ (ಅಥವಾ, ಗಡುಚಾದ ಸಂಶಯಗಳನ್ನು ಕತ್ತರಿಸಬಲ್ಲ) (ಗುರುಸಂಶಯಸಂಭೇತ್ತ್ರೇ ೩೮೪). ಈ ಕಾರಣಕ್ಕಾಗಿಯೇ ಅವನು ತನ್ನ ಸ್ವಂತ ಗುರುವಿಗೇ ಪೂಜ್ಯನಾಗಿದ್ದಾನೆ (ಗುರುಪೂಜಿತಾಯ ೩೯೫)[3]

**ಗಣಪತಿ : ಆದರ್ಶ ನಾಗರಿಕ**

ಗಣಪತಿಯ ಪ್ರಾಣಸಖರೆಂದರೆ ಜನತೆಯೇ (ಗಣಪ್ರಾಣಾಯ ೭೦). ಜನತೆಯ ಯೋಗಕ್ಷೇಮದಲ್ಲಿ ಅವನು ಯಾವಾಗಲೂ ತೊಡಗಿರುತ್ತಾನೆ (ಗಣಪಾಲನತತ್ಪರಾಯ ೫೧). ಅವನು ಜನತೆಯನ್ನು ಗೌರವಿಸುತ್ತಾನೆ (ಗಣಗೌರವದಾಯಕಾಯ ೫೪). ಅವನು ಗುಣಗಳ ಆಕರ (ಗುಣಿನೇ ೧೫). ಬೇರೆಯವರ ಸದ್ಗುಣಗಳನ್ನು ನೋಡಿ ಸಂತೋಷಿಸುವ ಸಹೃದಯತ್ವವೂ ಅವನಲ್ಲಿದೆ (ಗುಣಾನನ್ದಿತ ಮಾನಸಾಯ ೧೩೫).

ಎಲ್ಲ ಸಂದರ್ಭದಲ್ಲಿಯೂ ಮೃದುತ್ವ ಪ್ರಯೋಜನಕ್ಕೆ ಬಾರದೆಂದೂ ಪ್ರಸಂಗ ಬಂದಾಗ ಕೂಗಾಡಲೇ ಬೇಕಾಗುತ್ತದೆಂದು ಅವನಿಗೆ ಗೊತ್ತು (ಗರ್ಜತೇ ೨೩೩). ತನ್ನ ಸಾಧನೆ ಸಿದ್ಧಿಗಳಲ್ಲಿ ನ್ಯಾಯೋಚಿತವಾಗಿ ಅವನಿಗೆ ಹೆಮ್ಮೆ ಇರುವುದಲ್ಲದೆ, ಅಂಥ ಸ್ವಭಾವವಿರುವ ಜನರಿಗೆ ಅವನು ನಾಯಕಮಣಿಯೂ ಹೌದು (ಗರ್ವಿಣೇ ೮೫೮, ಗರ್ವೀಶ್ವರಾಯ ೮೫೯). ಹಾಗೆ ನೋಡಿದರೆ ಅವನು ಕೆಲವೊಮ್ಮೆ ಮೂರ್ತಿವೆತ್ತಂಥ ಹೆಮ್ಮೆಯೇ (ಗರ್ವಾಯ ೮೬೦). ಅವನ ದೃಷ್ಟಿ ಯಾವಾಗಲೂ ಗಂಭೀರ(ಗಮ್ಭೀರಲೋಚನಾಯ ೯೭೫). ಅತ್ಯುನ್ನತ ಗುಣಗಳ ಸಂಪತ್ತೇ ಅವನಲ್ಲಿದೆ. (ಗಮ್ಭೀರ ಗುಣಸಂಪನ್ನಾಯ

೯೭೬). ಅವನ ನಡವಳಿಕೆ ಉತ್ತುಂಗ ಸ್ತರದ್ದು (ಗಮ್ಭೀರಾಯ ೯೫೬). ಜನರಿಗೆ ಆಕರ್ಷಕವಾಗಿ ಕಾಣಿಸಿಕೊಳ್ಳುವ ಬಯಕೆ ಅವನದ್ದು. ಹೀಗಾಗಿ ಸುಗಂಧದ್ರವ್ಯಗಳನ್ನು ಅವನು ಲೇಪಿಸಿಕೊಂಡಿರುತ್ತಾನೆ. (ಗನ್ಧಾನುಲಿಪ್ತಸರ್ವಾಙ್ಗಾಯ ೭೪೯).

**ಗಣಪತಿ : ಜನಪ್ರಿಯ**

ಗಣಪತಿಯನ್ನು ಕೊಂಡಾಡಬೇಕು (ಗೇಯಾಯ ೭೧೪). ಅವನ ಗುಣಗಳನ್ನು ಹಾಡಿ ಹೊಗಳಬೇಕು (ಗೇಯಗುಣಾಯ ೭೧೫). ಅವನ ಚರಿತ್ರೆಗಳು ಸ್ತುತ್ಯವಾಗಿವೆ(ಗೇಯಚರಿತಾಯ ೭೧೬). ಅವನನ್ನು ಹೊಗಳುವಾಗ ಅವನ ಸದ್ಗುಣಗಳಿಗೆ ಪ್ರಾಧಾನ್ಯ ನೀಡಬೇಕು(ಗುಣಗೀತಾಯ ೧೩೬). ಜನತೆ ಅವನನ್ನು ಹೊಗಳಿದೆ (ಗಣಗೀಥಾಯ ೩೭). ಅವನು ಜನತೆಯಲ್ಲಿ ಬೆರೆಯುತ್ತಾ ಮನ ಬಂದಂತೆ ಹಾಡುತ್ತಾನೆ (ಗಣಸ್ವಚ್ಛನ್ದಗಾಯನಾಯ ೯೬). ಸದ್ಗುಣಿಗಳು ಅವನ ಗುಣಗಳನ್ನು ಮಾತ್ರವಲ್ಲದೆ ಕೀರ್ತಿಯನ್ನೂ ಹೊಗಳುತ್ತಾರೆ (ಗುಣವದ್ಗೀತಕೀರ್ತಯೇ ೨೦೪, ಗೀತಗುಣಾಯ ೬೧೩, ಗೀತಕೀರ್ತಯೇ ೬೧೪). ಅವನ ಯಶಸ್ಸು ಉಜ್ಜ್ವಲವಾಗಿಯೂ ಹಾಗೂ ಅಧಿಕವಾಗಿಯೂ ಇದೆ ಎಂದು ಎಲ್ಲರಿಗೂ ಗೊತ್ತು (ಗೀತಸ್ಫೀತಯಶಸೇ ೬೧೬).

**ಗಗಸ ರಚಯಿತೃ : ಮುಗ್ಧ, ಸಂಗೀತಪ್ರಿಯ ಹಾಗೂ ಶ್ರೀಸಾಮಾನ್ಯ**

ಗಗಸದ ರಚಯಿತೃವು ಸಂಗಿತದ ಶಾಸ್ತ್ರಭಾಗದಲ್ಲಿ ವಿದ್ವಾಂಸನಾಗಿದ್ದುದಕ್ಕೇನೂ ಪ್ರಮಾಣವಿಲ್ಲ. ಸಂಗೀತ ಕೇಳುತ್ತ ನೆಮ್ಮದಿಯ ಭಾವನೆಯಿಂದ ತಾಳ ಹಾಕುವ, ಜೀವನದ ಸೊಗಸನ್ನು ನಗರಜೀವನದಲ್ಲಿಯೂ ಸವಿಯಲಿಷ್ಟಪಡುವ ಮುಗ್ಧ ಮಾತ್ರನಾಗಿದ್ದನು ಎಂಬುದಕ್ಕೆ ಇದುವರೆಗೆ ಮಾಡಿಕೊಟ್ಟಿರುವ ಗಗಸದ ಪರಿಚಯವೇ ಸಾಕ್ಷಿಯಾಗಿದೆ. ಉಪಾದೇಯವಾದ ಸಾಹಿತ್ಯಕೃತಿಗಳನ್ನು ನೀಡಿರುವವರೆಷ್ಟೋ ಜನ ಶ್ರೀಸಾಮಾನ್ಯರಾಗಿರುವುದು ಲೋಕಪ್ರಸಿದ್ಧವಾಗಿರುವುದರಿಂದ ಇದೇನೂ ದೋಷವಲ್ಲ. ಗಗಸದಲ್ಲಿನ ಪುನರುಕ್ತಿಗಳನ್ನು ನೋಡಬೇಕಾದದ್ದು ಈ ದೃಷ್ಟಿಯಲ್ಲಿ ಮಾತ್ರ.

ಉಪಸಂಹಾರ

ಗಗಸ ನೀಡುವ ಪ್ರಾಯೋಗಿಕ ತತ್ತ್ವ ಸುಲಭ, ಸ್ಪಷ್ಟ ಹಾಗೂ ಋಜುಮಾರ್ಗದ್ದು. ಇದನ್ನು ಕೆಳಕಂಡಂತೆ ಸೂತ್ರೀಕರಿಸಬಹುದು.

ಜೀವನವನ್ನು ಪೂರ್ಣ ಪ್ರಮಾಣದಲ್ಲಿ ಸವಿಯಿರಿ. ಎಷ್ಟು ಸಾಧ್ಯವೋ ಅಷ್ಟು ಕಲಾರಸಿಕರಾಗಿರಿ. ಸಾಹಿತಿಗಳೂ ವಿಮರ್ಶಕರೂ ಆಗಿರಿ. ಸಂಗೀತಪ್ರೇಮಿಗಳೂ, ಸಂಗೀತಾಭ್ಯಾಸಿಗಳೂ, ಸಂಗೀತ ವಿಶ್ಲೇಷಕರೂ ಆಗಿರಿ. ಶಾಸ್ತ್ರಾಚಾರ್ಯರಾಗುವ ಹಂತ ತಲುಪಿರಿ. ಏನನ್ನಾದರೂ ಜೀವನದಲ್ಲಿ ಸಾಧಿಸಿರಿ. ನಿಮ್ಮ ಸಾಧನೆಯ ಬಗೆಗೆ ಹೆಮ್ಮೆ ತಾಳಿರಿ. ಅದೇ ವೇಳೆಯಲ್ಲಿ ಬೇರೆಯವರ ಸಾಧನೆಗೂ ಸಹ ಗೌರವ ತೋರಿಸಿರಿ. ಜನತೆಯ ಮಧ್ಯದಲ್ಲಿ ಗೌರವಾರ್ಹರಾಗಿರಿ.

**ರನ್ನವೋ ಬ್ರಹ್ಮ ನೋಡುವನು ನಿಜಪಿಂಛ**
**ವರ್ಣದೆಣಿಕೆಯಲಿ ತನ್ನನೆ ಮರೆತ ನವಿಲವೊಲು**
**ತನ್ಮಯನೊ ಸೃಷ್ಟಿಯಲಿ ಮಂಕುತಿಮ್ಮ'**

ಎಂಬ ಪದ್ಯ ಇದೇ ಧಾಟಿಯದ್ದಲ್ಲವೆ?

**ಅಡಿಟಿಪ್ಪಣಿಗಳು**

೧ ಡಿವಿಜಿಯವರ ಮಂಕುತಿಮ್ಮನ ಕಗ್ಗದ (೭೭) 'ತನ್ನ ಹೊಳಹೊಳಪುಗಳ ನೆನೆನೆನೆದು ಮೈಮರೆತ ಆದರೆ ಗಗಸದ'ಮೋಹಿತ' ಎಂಬ ಪ್ರಯೋಗ ಚಿಂತ್ಯವಾಗಿದೆ.

೨ ಇಲ್ಲಿ 'ಬೋದ್ಧಾರೋ ಮತ್ಸರಗ್ರಸ್ತಾಃ' (ಅರಿತವರಿಗೆ ಅಸೂಯೆ) ಎಂಬುದನ್ನೇ ಆಗಲೀ, 'ವಿದ್ವಾಂಸೋ ವಸುಧಾತಲೇ ಪರವಚಃಶ್ಲಾಘಾಸು ವಾಚಂಯಮಾಃ' (ಬುವಿಯೊಳಗೆ ಹೆರವರ ಹೊಗಳಿಕೆಯಲಿ ಬುಧಜನರು ಮೌನಿಗಳು) ಎಂಬುದನ್ನೇ ಆಗಲೀ ನೆನಪಿಸಿಕೊಳ್ಳಬಹುದು.

೩ ಪ್ರಸಿದ್ಧ ಮೀಮಾಂಸಕ ಪ್ರಭಾಕರನ ಬಗೆಗೆ ಜನಜನಿತವಾದ ಕಥೆಯೊಂದಿದೆ. ಅದರ ಪ್ರಕಾರ, ಒಮ್ಮೆ ತನ್ನ ಗುರುವಿಗೆ ಹೊಳೆಯದಿದ್ದ ವಾಕ್ಯಾರ್ಥವನ್ನು ಪ್ರಭಾಕರನು ತಾನೇ ಹೇಳಿದಾಗ ಅವನ ಗುರುವು ಸಂತೋಷದಿಂದ 'ಇನ್ನು ಮೇಲೆ ನೀನೇ ಗುರು' ಎನ್ನುತ್ತಾ ಶಿಷ್ಯನಿಗೆ ಪ್ರಣಾಮ ಮಾಡಿದನಂತೆ. ಅಲ್ಲಿಂದ ಮುಂದಕ್ಕೆ ಪ್ರಭಾಕರನಿಗೆ 'ಗುರು'ವೆಂದೂ ಅವನ ಸಂಪ್ರದಾಯಕ್ಕೆ 'ಗುರುಮತ'ವೆಂದೂ ಹೆಸರಾಯಿತು.

*****

# ಅನುವಾದ ಪರಿಕಲ್ಪನೆಯ ಬೆಳವಣಿಗೆ

* ಡಾ. ಆರ್. ಶೇಷಶಾಸ್ತ್ರಿ

ಇಂದು ನಾವು ಯಾವುದನ್ನು ಅನುವಾದ ಸಾಹಿತ್ಯ, ಎಂಬುದಾಗಿ ಕರೆಯುತ್ತೇವೆಯೋ ಅದು ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದಲೇ ರೂಪುಗೊಂಡದ್ದು. ಪಾಶ್ಚಾತ್ಯರಲ್ಲಿ ಪ್ರಚಲಿತವಿದ್ದ ಅನುವಾದದ ಎಲ್ಲ ಲಕ್ಷಣ ಮತ್ತು ಅರ್ಥವ್ಯಾಪ್ತಿಯನ್ನು ಸ್ವೀಕರಿಸಿದ್ದು, ಇಂದಿಗೂ ಅದೇ ಮಾರ್ಗದಲ್ಲಿ ಮುಂದುವರಿಯುತ್ತಿದ್ದೇವೆ. ಯಾವುದೇ ಒಂದು ಭಾಷೆಯಲ್ಲಿನ ಗ್ರಂಥ ಬೇಕೆಂದು ಭಾಷಗೆ ಯಾವುದೇ ರೀತಿಯಲ್ಲಿ ಮೂಲ 'ಪಾಠ್ಯ'ದಲ್ಲಿ ವ್ಯತ್ಯಾಸ ತರದೆ ಮೂಲಕ್ಕೆ ಬದ್ಧವಾಗಿದ್ದು, ಅನುವಾದಿತ ಭಾಷೆಯ ಜಾಯಮಾನ ಮತ್ತು ಸಂಪ್ರದಾಯಗಳಿಗೆ ಅನುಗುಣವಾಗಿ, ಸ್ವತಂತ್ರ ಕೃತಿಯೇನೋ ಎಂದು ಅನಿಸುವಂತೆ ಭಾಷಾಂತರವಾದರೆ ಅದನ್ನು ಉತ್ತಮ ಅನುವಾದ ಕೃತಿ ಎಂಬುದಾಗಿ ಕರೆಯುತ್ತೇವೆ. ಮೂಲದಲ್ಲಿನ ಕೃತಿ ಯಾವ ಪ್ರಕಾರದಲ್ಲಿರುತ್ತದೆಯೋ ಅದೇ ಪ್ರಕಾರದಲ್ಲಿ ಅನುವಾದಿತ ಭಾಷೆಯಲ್ಲಿರುತ್ತದೆ. ಒಂದು ವೇಳೆ ಮೂಲ ಕೃತಿಯ ಛಂದೋರೂಪ ಅಥವಾ ಸಾಹಿತ್ಯ ಪ್ರಕಾರ ಅನುವಾದಗೊಳ್ಳುವ ಭಾಷೆಯಲ್ಲಿಲ್ಲದೆ ಹೋದರೆ, ಅದಕ್ಕೆ ಸಮೀಪವಾದ, ಅದನ್ನು ಹೋಲುವ ದೇಶೀಯ ಛಂದೋರೂಪವನ್ನೋ ಅಥವಾ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಬೇರೊಂದು ರೂಪದಲ್ಲಿಯೋ ಅನುವಾದ ಮಾಡಿರುವುದನ್ನು ಗಮನಿಸಬಹುದು. ಈ ಸಂದರ್ಭದಲ್ಲಿ ಆಧುನಿಕ ಕಾಲದಲ್ಲಿ ರೂಪುಗೊಂಡ ಸರಳ ರಗಳೆಯನ್ನು ಸ್ಮರಿಸಬಹುದು. ಕೆಲವೊಮ್ಮೆ ಮೂಲ ಛಂದೋರೂಪಕ್ಕೆ ಅನುಗುಣವಾಗಿ ಅದರ ಸಂಪೂರ್ಣ ಲಕ್ಷಣಗಳೊಂದಿಗೆ ಹೊಸ ಛಂದೋರೂಪಗಳನ್ನು ಸಾಧಿಸಿರುವುದೂ ಉಂಟು. ಈ ಸಂದರ್ಭದಲ್ಲಿ ನಾವು ಇಂಗ್ಲೀಷ್ 'ಸಾನೆಟ್'ಗೆ ಸಮವಾದ ಕನ್ನಡದ 'ಸುನೀತ'(ಅಷ್ಟಪದಿ)ಛಂದೋರೂಪವನ್ನು ಸ್ಮರಿಸಬಹುದು.

ಕೆಲವೊಮ್ಮೆ ಸುದೀರ್ಘ ಪದ್ಯ ಕಾವ್ಯಗಳು ಗದ್ಯರೂಪದಲ್ಲಿ ಅನುವಾದಗೊಂಡಿರುವ ನಿದರ್ಶನವೂ ಉಂಟು. ಆಧುನಿಕ ಕಾಲದಲ್ಲಿ ಸುದೀರ್ಘ ಕಾವ್ಯಗಳನ್ನು ಓದುವ 'ತಾಳ್ಮೆ' ಇಲ್ಲದ ಕಾರಣ, ಗದ್ಯಕ್ಕೆ ಜನ ಮನಸೋತಿರುವ ಕಾರಣ ಪದ್ಯರೂಪದ 'ಕಾವ್ಯ' ಗದ್ಯಕ್ಕೆ ಬಂದಿರುವುದೂ ಉಂಟು. ಪ್ರಾಚೀನ ಗ್ರೀಕ್ ಕಾವ್ಯಗಳಿಂದ ಈಲಿಯಡ್ ಮತ್ತು ಒಡಿಸ್ಸಿ ಮಹಾಕಾವ್ಯಗಳು ಕನ್ನಡದಲ್ಲಿ ಗದ್ಯ ರೂಪದಲ್ಲಿ ಬಂದಿರುವುದನ್ನು ಗಮನಿಸಬಹುದು. ಹಳಗನ್ನಡ, ನಡುಗನ್ನಡ ಕಾವ್ಯಗಳು ಜನಸಾಮಾನ್ಯರನ್ನು ತಲುಪಬೇಕೆಂಬ ಉದ್ದೇಶದಿಂದ ಹೊಸಗನ್ನಡ ಗದ್ಯರೂಪದಲ್ಲಿ ತಂದಿರುವುದುಂಟು. ಇಲ್ಲಿ ವ್ಯಾಖ್ಯಾನವಿರುವುದಿಲ್ಲ. ಮೂಲಕವಿ ಕಥೆಯನ್ನು ಹೇಗೆ ನಿರೂಪಿಸುತ್ತಾನೆಯೋ ಅದರಂತೆಯೇ ಗದ್ಯದಲ್ಲಿ ಕಥೆ ಹರಿಯುತ್ತದೆ. ಈ ರೀತಿಯ ಗದ್ಯಾನುವಾದಗಳು ಬರುವುದಕ್ಕಿಂತ ಮೊದಲು ಜಟಿಲವಾದ ಕಾವ್ಯಗಳಿಗೆ ಪದ್ಯದ ಅನ್ವಯ, ಪ್ರತಿಪದಾರ್ಥ, ತಾತ್ಪರ್ಯಗಳೊಂದಿಗೆ ವ್ಯಾಖ್ಯಾನ ಕೃತಿಗಳು ಬಂದಿವೆ.

ಪ್ರಾಚೀನ ತೆಲುಗು-ಕನ್ನಡ ಸಾಹಿತ್ಯಗಳನ್ನು ಪರಿಶೀಲಿಸಿದಾಗ ನಮಗೆ ಅನುವಾದ, ಭಾಷಾಂತರ, ತರ್ಜುಮೆ ಮುಂತಾದ ಪದಗಳು ಅವುಗಳಿಗೆ ಈಗಿರುವ ಅರ್ಥದಲ್ಲಿ ದೊರೆಯುವುದೇ ಇಲ್ಲ. ಬದಲಾಗಿ ಕವಿಗಳು ಮೂಲಕವಿಗಳನ್ನು ಸ್ಮರಿಸಿ ಆ ಕತೆಯನ್ನು ತಮ್ಮ ಭಾಷೆಯಲ್ಲಿ ನಿರೂಪಿಸಿರುವುದಾಗಿ ಹೇಳಿಕೊಳ್ಳುತ್ತಾರೆ. ಈ ಹಿನ್ನೆಲೆಯಲ್ಲಿಯೇ 'ಕುಮಾರವ್ಯಾಸ', 'ಕುಮಾರ ವಾಲ್ಮೀಕಿ' ಎಂಬ ಹೆಸರುಗಳನ್ನು ನಾವು ವಿಶ್ಲೇಷಿಸಬೇಕು. ಪ್ರಾಚೀನ ಗ್ರೀಕ್ ಕಾವ್ಯಗಳಿಂದ ಈಲಿಯಡ್ ಮತ್ತು ಒಡಿಸ್ಸಿ ಮಾಹಾಕಾವ್ಯಗಳನ್ನು ಕನ್ನಡದಲ್ಲಿ ಗದ್ಯ ರೂಪದಲ್ಲಿ ಬಂದಿರುವುದನ್ನು ಗಮನಿಸಬಹುದು. ಭಾರತೀಯರ ದೃಷ್ಟಿಯಲ್ಲಿ ಅನುವಾದಗೊಳ್ಳಬೇಕಾದುದು ಕೇವಲ ಅದರ 'ಪಾಠ'ವಲ್ಲ. ಮೂಲ ಕೃತಿಯಲ್ಲಿ ಕವಿ ಕಂಡ ಕಾಣ್ಕೆ. ಈ ರೀತಿ ಅನುವಾದ ಮಾಡುವಾಗ ಅನುವಾದಕ ತನ್ನ ರಚನೆಯ ಉದ್ದೇಶ, ಆ ಕಾಲದ ಜನರ ಅಭಿರುಚಿ ಮತ್ತು ತನ್ನ ಓದುಗರ ಗ್ರಹಣ ಶಕ್ತಿ ಮುಂತಾದ ಹಲವಾರು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಅನುವಾದಿಸುತ್ತಾನೆ. ಒಂದು ಭಾಷಾ ಸಾಹಿತ್ಯದಲ್ಲಿ ಯಾವಾಗ

* ೧೩-೨-೬೪೯, ಶ್ರೀನಿವಾಸನಗರ, ಅನಂತಪುರ- ೫೧೫೦೦೧

ಈ ಅನುವಾದಗಳು ಪ್ರಾರಂಭವಾಗುತ್ತದೆ, ಅದು ಪ್ರಾರಂಭವಾಗುವ ಮುನ್ನ ನಡೆಯುವ ಪ್ರಯತ್ನಗಳು ಯಾವ ರೀತಿಯವು ಎಂಬುದರ ಬಗ್ಗೆ ಸ್ವಲ್ಪಮಟ್ಟಿಗೆ ಚರ್ಚೆ ಮಾಡುವುದು ಸೂಕ್ತ.

ಪ್ರಾಚೀನ ಭಾರತ ಆಡಳಿತದ ದೃಷ್ಟಿಯಿಂದ ಹತ್ತು ಹಲವಾರು ರಾಜ್ಯಗಳಾಗಿದ್ದಾಗ್ಯೂ, ವಿಭಿನ್ನ ಭಾಷೆಗಳಿಂದ ಕೂಡಿದ್ದರೂ ಅವುಗಳ ನಡುವೆ ಒಂದು ಏಕಸೂತ್ರತೆ ಕಂಡುಬರುತ್ತದೆ. ವಿದ್ಯಾವಂತರ ವಲಯದಲ್ಲಿ ಒಂದು ಸಾಮರಸ್ಯತೆಯನ್ನು, ಸಂವಹನವನ್ನು ಏರ್ಪಡಿಸಿದ್ದು ಸಂಸ್ಕೃತ ಮತ್ತು ಪ್ರಾಕೃತ ಭಾಷಾ ಸಾಹಿತ್ಯಗಳೆನ್ನಬಹುದು. ಈ ಭಾಷೆಗಳಲ್ಲಿ ಮತ, ಧರ್ಮ, ಸ್ಮೃತಿ, ಕಾವ್ಯಮೀಮಾಂಸೆ, ಛಂದಸ್ಸು, ಜ್ಯೋತಿಷ್ಯ ಮೊದಲಾದ ಜ್ಞಾನ ಶಾಖೆಗಳು ರೂಪುಗೊಂಡದ್ದು. ಇವುಗಳ ಆಧಾರದ ಮೇಲೆ ಭಾರತೀಯ ವಿವಿಧ ಭಾಷಾ ಪ್ರಾಂತ್ಯದ ಮೇಧಾವಿಗಳು, ಕವಿಗಳು ತಮ್ಮ ಭಾಷೆಯಲ್ಲಿ, ದೇಶೀಯ ಆಲೋಚನೆಗಳೊಂದಿಗೆ ಸಾಹಿತ್ಯ ಸೃಷ್ಟಿಮಾಡಿದರು. ಸಂಸ್ಕೃತ ಮಾತೃಭಾಷೆಯಲ್ಲದವರೂ ಸಂಸ್ಕೃತದಲ್ಲಿ ಬರೆದರು. ಈ ಹಿನ್ನೆಲೆಯಲ್ಲಿ ದಕ್ಷಿಣ ಭಾಷಾ 'ಸಾಹಿತ್ಯ'ಗಳ ಬೆಳವಣಿಗೆಯನ್ನು ಗುರುತಿಸುವುದು ಅಗತ್ಯ.

ದಕ್ಷಿಣ ಭಾರತದಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸಿ, ಆಡಳಿತ ವ್ಯವಸ್ಥೆಯನ್ನು ಇತಿಹಾಸದ ಆರಂಭ ಕಾಲದಲ್ಲಿ ರೂಪಿಸಿದವರು ಪ್ರಾಕೃತ, ಸಂಸ್ಕೃತಗಳಿಗೆ ವಿಶೇಷ ಪ್ರಾಶಸ್ತ್ಯ ನೀಡಿದ್ದ ಅರಸು ಮನೆತನಗಳಂತೆ. ಆದ್ದರಿಂದಲೇ ನಮಗೆ ದಕ್ಷಿಣ ಭಾರತದಲ್ಲಿ ಪ್ರಾರಂಭಕ್ಕೆ ಪ್ರಾಕೃತ ಶಾಸನಗಳು, ಅನಂತರದ ಕಾಲದಲ್ಲಿ ಸಂಸ್ಕೃತ ಶಾಸನಗಳು ಆನಂತರದಲ್ಲಿ ತಮಿಳು, ಕನ್ನಡ, ತೆಲುಗು ಭಾಷೆಯ ಶಾಸನಗಳು ದೊರೆಯುತ್ತವೆ.

ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳ ಸಂಪರ್ಕಕ್ಕೆ ಬಂದ ದಾಕ್ಷಿಣಾತ್ಯರು, ಮೆಚ್ಚಿಕೊಂಡೋ, ಒತ್ತಾಯದಿಂದಲೋ, ಅಗತ್ಯಕಂಡು ಬಂದುದರಿಂದಲೋ ಆ ಭಾಷೆಯ ಪದಗಳನ್ನು ತದ್ಭವ, ತತ್ಸಮಗಳ ರೂಪದಲ್ಲಿ ಆ ಪದಗಳ ಅರ್ಥ ಮತ್ತು ಭಾವದೊಂದಿಗೆ ಸ್ವೀಕರಿಸಿ ಕ್ರಮೇಣ ಅವನ್ನು ತಮ್ಮ ಭಾಷೆಯಲ್ಲಿ ಬಳಕೆಗೆ ತಂದರು. ಹಳ್ಳಕ್ಕೆ ನೀರು ಹರಿಯುವಂತೆ, ಆಳುವವರ ಭಾಷೆ, ಆಳಿಸಿಕೊಳ್ಳುವವರ ಭಾಷೆಯಲ್ಲಿ ನುಗ್ಗಿಬಿಡುತ್ತವೆ. ಅದೊಂದೇ ಅಲ್ಲ ಅವರ ಆಶ್ರಯದಲ್ಲಿ ಬೆಳೆದ ಧರ್ಮಗ್ರಂಥಗಳು, ಶಾಸ್ತ್ರಗ್ರಂಥಗಳು, ಕಾವ್ಯಗಳು ಅನುವಾದಗೊಳ್ಳುವ ಮುನ್ನ ಮೌಖಿಕವಾಗಿ ಅನುವಾದಿತ ಭಾಷೆಗೆ ಕಾಲಿಡುತ್ತವೆ. ಆ ರೀತಿ ಮೌಖಿಕವಾಗಿ ಬಂದ ಸಾಹಿತ್ಯವನ್ನೇ ಎರಡೂ ಭಾಷೆಗಳನ್ನು ಬಲ್ಲವರು ದಾಖಲಿಸುವ ಪ್ರಯತ್ನ ಮಾಡುತ್ತಾರೆ.

ಕವಿಯು ತನ್ನ ಸಾಹಿತ್ಯ ಪರಿಕರಗಳು, ಪದಸಂಪತ್ತು ಸಾಲದೆಂದಾಗ ಪ್ರಚಲಿತಗೊಂಡ ಅನ್ಯದೇಶದ ಪದಗಳೊಂದಿಗೆ ಇನ್ನಷ್ಟು ಅನ್ಯದೇಶ್ಯಗಳನ್ನೇ ತನ್ನ ಕೃತಿಯಲ್ಲಿ ತಂದು ಅದನ್ನು ಉಳಿಸಿ ಬೆಳಸುತ್ತಾನೆ. ಒಂದು ಭಾಷೆಯ ಪದಗಳು ಹೇಗೆ ತದ್ಭವಗೊಂಡು, ತತ್ಸಮ ರೂಪದಲ್ಲಿ ಸ್ವೀಕರಿಸಿದರೋ ಹಾಗೆಯೇ ಅನ್ಯಭಾಷಾ ಛಂದೋರೂಪಗಳನ್ನು ಸ್ವೀಕರಿಸಿದರು, ಅವುಗಳನ್ನು ಕಸಿ ಮಾಡುವುದರ ಮೂಲಕ ಹೊಸ ಛಂದೋ ರೂಪಗಳನ್ನು ಸಿದ್ಧಪಡಿಸಿ, ಬಳಕೆಗೆ ತಂದರು. ಕನ್ನಡಿಗರು ಮತ್ತು ತೆಲುಗರು ಸಂಸ್ಕೃತ ಛಂದೋ ರೂಪಗಳನ್ನು ಸ್ವೀಕರಿಸಿದರು. ಈ ರೀತಿ ಛಂದೋರೂಪಗಳನ್ನು ಅವರು ಸ್ವೀಕರಿಸುವಾಗ ತೋರಿದ ವಿವೇಕ, ಔಚಿತ್ಯಗಳನ್ನು ಗಮನಿಸಬೇಕು. ಸಂಸ್ಕೃತದ ಲೌಕಿಕ ಛಂದೋ ರೂಪಗಳನ್ನು ಸ್ವೀಕರಿಸಿದರೆ ಹೊರತು ವೈದಿಕ ಛಂದೋ ರೂಪಗಳನ್ನಲ್ಲ. ಈ ಲೌಕಿಕ ಛಂದೋ ರೂಪಗಳಲ್ಲಿಯೂ ಕೆಲವು ವೃತ್ತಗಳನ್ನು ಮಾತ್ರ ಸ್ವೀಕರಿಸಿದರು. ಉತ್ಪಲಮಾಲ, ಚಂಪಕಮಾಲ, ಶಾರ್ದೂಲ, ಮತ್ತೇಭ, ಸ್ರಗ್ಧರಾ ಮತ್ತು ಮಹಾಸ್ರಗ್ಧರಾಗಳನ್ನು ಅದರಲ್ಲಿಯೂ ಉತ್ಪಲಮಾಲ, ಚಂಪಕಮಾಲಗಳನ್ನೇ ವಿಶೇಷವಾಗಿ ಬಳಸಿದರು. ಹಾಗೆಯೇ ಪ್ರಾಕೃತ ಛಂದೋ ರೂಪಗಳಿಂದ 'ಕಂದ'ವನ್ನು, 'ರಗಳೆ' ಛಂದಸ್ಸನ್ನು ರೂಪಿಸಿಕೊಂಡರು.

ಈ ಛಂದೋ ರೂಪಗಳನ್ನು ದೇಶೀಯವಾದ ಛಂದೋ ರೂಪಗಳೊಂದಿಗೆ ಬಳಸುತ್ತಾ ಅವುಗಳನ್ನು ಪ್ರಚಾರಕ್ಕೆ ತಂದರು. ಈ ರೀತಿ ಸಂಸ್ಕೃತ ಛಂದೋ ರೂಪಗಳನ್ನು ಸ್ವೀಕರಿಸುವಾಗ ಮೂಲದಲ್ಲಿ ಇಲ್ಲದ ದ್ವಿತೀಯಾಕ್ಷರ ಪ್ರಾಸವನ್ನು ತಂದರು. ಸಂಸ್ಕೃತಕ್ಕೆ ಸಹಜವಾದ ಯತಿ 'ಉಸಿರಿನತಾಣ'ವನ್ನು ಪಾಲಿಸಬೇಕೆಂಬ ನಿಯಮವನ್ನು ಪಾಲಿಸದೆ ಹೋದರು. ಕನ್ನಡ ಮಾತೃ ಭಾಷೆಯಾದವನಿಗೆ ಅರ್ಥಭಂಗವಾಗದಂತೆ ಎಲ್ಲಿ ನಿಲ್ಲಿಸಬೇಕು ಎಂಬುದು ತಿಳಿದಿರುವುದರಿಂದ ಓದುಗನು ತನ್ನ ಅನುಕೂಲಕ್ಕೆ, ಅರ್ಥಕ್ಕೆ ಭಂಗಬರದಂತೆ ವಾಚನ ಮಾಡಲು ಸಾಧ್ಯವಾಯಿತು.

ಮುಂದಿನ ಹಂತದಲ್ಲಿ ಸಂಸ್ಕೃತದಿಂದ ಸ್ವೀಕರಿಸಿದ ಛಂದೋ ರೂಪಗಳನ್ನು ದೇಶೀಯ ಛಂದೋರೂಪಗಳನ್ನೂ, ವಿದ್ಯಾಶರಧಿಯಾದ ವಚನವೆಂಬ ಗದ್ಯವನ್ನೂ ಉಪಯೋಗಿಸಿ ನಿರೂಪಣಾ ಶೈಲಿಯೊಂದನ್ನು ನಿರ್ಮಿಸಿಕೊಂಡರು. ಇದನ್ನು 'ಚಂಪೂ' ಎಂಬುದಾಗಿ ಕರೆದರು. ಇದೇ ಸಂದರ್ಭದಲ್ಲಿ ಅರ್ಥಾಲಂಕಾರ ಮತ್ತು ಶಬ್ದಾಲಂಕಾರಗಳನ್ನು ಕೂಡಾ ಸ್ವೀಕರಿಸಿದರು ಎನ್ನುದಕ್ಕಿಂತಲೂ ಅನುಕರಿಸಿದರು ಎಂಬುದಾಗಿ ಹೇಳುವುದು ಸೂಕ್ತ.

ಈ ಪ್ರಯತ್ನಗಳು ನಡೆಯುತ್ತಿರುವಾಗಲೇ ದೇಶೀಯ ಕವಿಗಳಿಗೆ ಕಾವ್ಯರಚನೆಗೆ ಅನುಕೂಲವಾಗುವಂತೆ, ಸಹೃದಯರಿಗೆ ಕಾವ್ಯವನ್ನು ಆಸ್ವಾದಿಸುವ ರೀತಿಯನ್ನು ತಿಳಿಸುವ ಲಕ್ಷಣ ಗ್ರಂಥಗಳನ್ನು ಅಂದರೆ ಕಾವ್ಯ ಮೀಮಾಂಸೆಗೆ ಸಂಬಂಧಪಟ್ಟ ಲಕ್ಷಣಗ್ರಂಥಗಳನ್ನ ಸಂಸ್ಕೃತ ಗ್ರಂಥಗಳ ನೆರವಿನಿಂದ ನಿರ್ಮಿಸತೊಡಗಿದರು. ಈದಿಸೆಯಲ್ಲಿ ಶ್ರೀವಿಜಯನ 'ಕವಿರಾಜ ಮಾರ್ಗ', ದಂಡಿಯ ಕಾವ್ಯದರ್ಶನದ 'ಅನುವಾದ' ಎಂದೆನಿಸುವಷ್ಟರ ಮಟ್ಟಿಗೆ ಅದನ್ನು ಅನುಸರಿಸಿದ್ದರೂ, ಅದರಲ್ಲಿಲ್ಲದ ಕನ್ನಡ, ಕರ್ನಾಟಕ, ಕನ್ನಡಿಗರು, ಕವಿಗಳ ವರ್ಗೀಕರಣ, ಧ್ವನಿ ಮುಂತಾದ ಹತ್ತು ಹಲವಾರು ವಿಷಯಗಳನ್ನು ತನ್ನ ಸ್ವಂತ ವಿವೇಚನೆಯಿಂದ ನಿರೂಪಿಸಿದ್ದಾನೆ. ನಂತರದ ಕನ್ನಡ ಲಾಕ್ಷಣಿಕರು ಕವಿರಾಜಮಾರ್ಗಕಾರನ ಈ ವಿಧಾನವನ್ನೇ ಅನುಸರಿಸಿದರೆಂದು ಹೇಳಬಹುದು.

ತೆಲುಗಿನ ಮೊಟ್ಟಮೊದಲ ಕವಿ ನನ್ನಯನೇ ಆದರೂ, ಭೀಮನ ಎಂಬುವ ತಾನು ಮಲ್ಲಿರೇಚನನ ಹೆಸರಲ್ಲಿ ಬರೆದ 'ಕವಿಜನಾಶ್ರಯ'ವೆಂಬ ಛಂದೋಗ್ರಂಥವೇ ಮೊಟ್ಟಮೊದಲ ತೆಲುಗುಗ್ರಂಥ, ಈ ಗ್ರಂಥವನ್ನು ರಚಿಸುವಲ್ಲಿ ಭೀಮನನಿಗೆ ಪಂಪನ ತಮ್ಮನಾದ ವಾಚಕಾಭರಣನೆಂಬ ಬಿರುದಿದ್ದ ಜಿನವಲ್ಲಭನ ನೆರವಿದ್ದಿತೆಂದು ಅವನೇ ಹೇಳಿಕೊಂಡಿದ್ದಾನೆ. ಹಾಗೆಯೇ 'ಭೀಮನಾಗ್ರಸುತ' (ಪಂಪ) (ಭೀಮಪಯ್ಯನ ಹಿರಿಯಮಗ)ನ ಆಶೀರ್ವಾದ ವಿದ್ದಂತೆಯೂ ಅವನು ಹೇಳಿಕೊಂಡಿದ್ದಾನೆ. ಈ ಛಂದೋ ಗ್ರಂಥದಲ್ಲಿ ತೆಲುಗಿಗೆ ಸಂಬಂಧಪಟ್ಟಂತೆ ಛಂದೋ ವಿಷಯಗಳನ್ನು ಹೇಳಲಾಗಿದೆ. ಕನ್ನಡಿಗರು ಸಂಸ್ಕೃತ ವೃತ್ತಗಳನ್ನು ಸ್ವೀಕರಿಸಿದಾಗ ಅದರಲ್ಲಿ ಯತಿಯನ್ನು ಪಾಲಿಸಲಿಲ್ಲ ಎಂಬುದಾಗಿ ಈ ಹಿಂದೆಯೇ ಹೇಳಿದೆ. ತೆಲುಗರೂ ಸಂಸ್ಕೃತ ಯತಿನಿಯಮವನ್ನು ಮೀರಿದರು. ಪಾದದ ನಡುವೆ ಬರುವ ಯತಿ ಸ್ಥಾನದಲ್ಲಿ 'ವಡಿ'ಯನ್ನು ತಂದರು. ವಡಿ ಅಂದರೆ 'ವಿದ್ಯಪಾದ'. ಮೊದಲನೆಯ ಅಕ್ಷರ ಯಾವುದಿರುತ್ತದೆಯೋ ಅದೇ ಅಕ್ಷರ ಅಥವಾ ಅದಕ್ಕೆ ಸಮೀಪವಾದ ಅಕ್ಷರವನ್ನು ಯತಿ (ವಿರಾಮ) ಸ್ಥಾನದ ನಂತರ ಅಕ್ಷರವಾಗಿ ಬರುವುದು. ಕವಿಜನಾಶ್ರಯಕಾರ ನಾಲ್ಕು ರೀತಿಯ ವಡಿಗಳನ್ನು ಕುರಿತು ಹೇಳುತ್ತಾನೆ. ಅನಂತರದಿಂದ ತೆಲುಗು ಛಂದೋಕಾರರು 'ಯತಿ' ವಡಿಯ ಬಗೆಗಳನ್ನು ಬೆಳೆಸುತ್ತಾ ಹೋದರು. ಹಾಗೆಯೇ ಇವನು ಪ್ರಾಸದ ಬಗ್ಗೆ, ದೇಶೀಯ ಛಂದೋ ರೂಪಗಳ ಬಗ್ಗೆ ಹೇಳುತ್ತಾನೆ. ಅಂದಿನ ರಾಜಕೀಯ ಮತ್ತು ಸಾಮಾಜಿಕ ಕಾರಣಗಳಿಂದಾಗಿ ತೆಲುಗು ಮತ್ತು ಕನ್ನಡ ಭಾಷಾ ಸಾಹಿತ್ಯಗಳು ಇಂದಿಗಿಂತಲೂ ತುಂಬಾ ನಿಕಟ ಸಂಬಂಧವನ್ನು ಹೊಂದಿದ್ದವು. ಕವಿರಾಜಮಾರ್ಗ ತೆಲುಗರಿಗೂ ರಾಜಮಾರ್ಗವಾಗಿದ್ದರಿಂದಲೇ ಏನೋ ಕವಿ ಜನಾಶ್ರಯಕಾರ ಕಾವ್ಯ ಮೀಮಾಂಸೆಯ ಬಗ್ಗೆ ವಿವರಿಸದೆ ಕೇವಲ ಛಂದಸ್ಸಿಗೆ ಹೆಚ್ಚಿನ ಗಮನವನ್ನು ನೀಡಿದನೆಂದು ತೋರುತ್ತದೆ.

ಶ್ಲೋಕ ಸ್ವರೂಪದಲ್ಲಿರುವ ರಾಮಾಯಣ, ಮಹಾಭಾರತಗಳನ್ನು, ಪುರಾಣಗಳನ್ನು ತಮ್ಮ ಭಾಷೆಗೆ ಅನುವಾದ ಮಾಡುವಾಗ ತೆಲುಗು, ಕನ್ನಡ ಕವಿಗಳು ಚಂಪೂ ರೂಪವನ್ನು ಆಯ್ಕೆ ಮಾಡಿಕೊಂಡರು. ಗದ್ಯರೂಪದಲ್ಲಿರುವ ಬಾಣನ ಕಾದಂಬರಿಯನ್ನು ಮೊದಲನೆಯ ನಾಗವರ್ಮನು ಕನ್ನಡದಲ್ಲಿ ನಿರೂಪಿಸುವಾಗ ಚಂಪೂ ರೂಪದಲ್ಲಿಯೇ ನಿರೂಪಿಸಿದ. ಪಾಲ್ಕುರಿಕೆ ಸೋಮನಾಥನು ದ್ವಿಪದದಲ್ಲಿ ಹೇಳಿದ 'ಪಂಡಿತಾರಾಧ್ಯ ಚರಿತ್ರೆ'ಯನ್ನು ಶ್ರೀನಾಥ ಚಂಪೂ ರೂಪದಲ್ಲಿ ತಂದ ಎಂಬುದು ಗಮನಾರ್ಹವಾದುದು. ಕೇವಲ ಕವಿಗಳು ಮಾತ್ರವಲ್ಲ, ಲಕ್ಷಣ ಗ್ರಂಥಗಳನ್ನು, ಶಾಸ್ತ್ರಗಳನ್ನು ಬರೆದ ತೆಲುಗು ಕನ್ನಡ ಕವಿಗಳು ಈ ಚಂಪೂ ರೂಪವನ್ನೇ ಆಯ್ಕೆ ಮಾಡಿಕೊಂಡರು.

ಬಸವಣ್ಣನವರ ನೇತೃತ್ವದಲ್ಲಿ ಬಂದ ವಚನ ಸಾಹಿತ್ಯ ಕನ್ನಡ ಸಾಹಿತ್ಯದ ದಿಕ್ಕನ್ನೇ ಬದಲಾಯಿಸಿತು. ವಚನಕಾರರು ತಮ್ಮ ವಚನಗಳನ್ನು ವಾಚಕರು, ಕೇಳುಗರನ್ನು ಮನದಲ್ಲಿಟ್ಟುಕೊಂಡು, ಅವರಿಗೆ ಹತ್ತಿರವಾದ ಭಾಷೆಯಲ್ಲಿ ಪದ್ಯಗಂಧಿ ವಚನಗಳನ್ನು ಬರೆದರು. ಇದಕ್ಕೆ ಕಾರಣ ಜನ ಸಾಮಾನ್ಯರನ್ನು ಜಾಗೃತಗೊಳಿಸುವುದು ಮತ್ತು ಅವರನ್ನು ತಮ್ಮ ಧರ್ಮದತ್ತ

ಸೆಳೆಯುವುದೇ ಆಗಿತ್ತು. ಈ ಮಾರ್ಗದಲ್ಲಿ ಬಂದ ಹರಿಹರ ತಮಿಳಿನ ಶಿವಭಕ್ತರನ್ನೂ, ಕರ್ಣಾಟಿಕರ ಶರಣರನ್ನ ಕುರಿತು ಬರೆಯುವಾಗ ರಗಳೆ ಛಂದಸ್ಸನ್ನೇ ಆಯ್ಕೆ ಮಾಡಿಕೊಂಡ. ಅದೇ ರೀತಿ ತೆಲುಗಿನಲ್ಲಿ ಪಾಲ್ಕುರಿಕೆ ಸೋಮನಾಥ ಬಸವ ಪುರಾಣವನ್ನು, ಪಂಡಿತಾರಾಧ್ಯ ಚರಿತ್ರಯನ್ನು ಬರೆಯಲು ತೆಲುಗಿನ ದೇಶೀಯ ಛಂದೋ ರೂಪವಾದ ದ್ವಿಪದವನ್ನು ಬಳಸಿದ. ಮುಂದೆ ಬಂದ ಎಲ್ಲಾ ತೆಲಗು ವೀರ ಶೈವ ಕವಿಗಳು ಸೋಮನಾಥನ ಮಾರ್ಗವನ್ನು ಅನುಸರಿಸಿದರು.

ಹರಿಹರನ ನಂತರ ಬಂದ ರಾಘವಾಂಕ ರಗಳೆಯ ಬದಲಾಗಿ ದೇಶೀಯ ಛಂದೋ ರೂಪವಾದ ಷಟ್ಪದಿಯನ್ನು ಬಳಸಿ ಕಾವ್ಯ ರಚನೆ ಮಾಡಿದ. ಇವನು ಹರಿಹರನಿಗಿಂತ ಹೆಚ್ಚಾಗಿ ಜನರನ್ನು ತಲುಪಿದ. ಇದಕ್ಕೆ ಕಾರಣ ಅವನು ಬಳಸಿದ ಭಾಷೆ. ಭಾಷೆಗೆ ಅನುಗುಣವಾಗಿ ಛಂದಸ್ಸಿನ ಬದಲಾವಣೆಯೂ ಅಗತ್ಯವೆಂದೆನ್ನಿಸಿತು. ರಾಘವಾಂಕನಿಗೆ.

ಈ ಪ್ರಕಾರ ಕಾವ್ಯಗಳಲ್ಲಿ ಚಂಪೂ ರೂಪದಲ್ಲಿರುವಂಥ ವಿವಿಧ ಛಂದೋ ರೂಪಗಳಾಗಲೀ, ಪದ್ಯಗಂಧಿಯಾದ ವಚನವಾಗಲಿ ಇರದೆ ಒಂದೇ ಛಂದೋ ರೂಪದಲ್ಲಿ ಕಾವ್ಯ ನಡೆಯುತ್ತದೆ. ಆನಂತರದ ಕಾಲದಲ್ಲಿ ಷಟ್ಪದಿ ಮತ್ತು ಸಾಂಗತ್ಯ ಛಂದೋರೂಪಗಳೇ ಕನ್ನಡ ಸಾಹಿತ್ಯದಲ್ಲಿ ಮೆರೆದವು. ಈ ರೀತಿ ದೇಶೀಯ ಛಂದೋ ರೂಪಗಳು ಪ್ರಬಲವಾಗುವುದಕ್ಕೆ ಇನ್ನೊಂದು ಕಾರಣವೂ ಉಂಟು. ಹರಿಹರನ ನಂತರ ಕನ್ನಡ ಕವಿಗಳು ರಾಜಾಶ್ರಯವನ್ನು ಧಿಕ್ಕರಿಸಿ, ಧರ್ಮವನ್ನು, ಅದನ್ನು ಆಶ್ರಯಿಸಿರುವ ಜನರನ್ನು ಗಮನದಲ್ಲಿಟ್ಟುಕೊಂಡು ಕಾವ್ಯ ರಚನೆ ಮಾಡಿದರು. ಅವರಿಗೆ ತಮ್ಮ ಪಾಂಡಿತ್ಯ ತೋರಿಸಬೇಕು ಎಂಬುದಕ್ಕಿಂತಲೂ ಜನ ಸಾಮಾನ್ಯರಿಗೆ ವಿಷಯವನ್ನು ತಲುಪಿಸಬೇಕು ಎಂಬ ಉದ್ದೇಶವೇ ಪ್ರಧಾನವಾಗಿತ್ತು. ರಾಘವಾಂಕನಿಂದ ಆರಂಭವಾದ (ಜನ ಬದುಕಬೇಕೆಂದು ಕಾವ್ಯ ಮುಖದಿಂ ಪೇಳ್ದನ್. ೧೪-೩೩) ಈ ದೇಶಿ ಛಂದೋ ರೂಪದ ಬಳಕೆ ಜನಪ್ರಿಯವಾದಾಗ ಮುಂದೆ ಬಂದ ಜೈನ, ಬ್ರಾಹ್ಮಣ ಕವಿಗಳು ಅದನ್ನೇ ಅನುಸರಿಸಿದರು. ತೆಲುಗಿನಲ್ಲಿಯೂ ಇದೇ ರೀತಿ ಆಗಬೇಕಿತ್ತು. ಪಾಲ್ಕುರಿಕೆ ಸೋಮನಾಥ ತೆಲುಗು ಸಾಹಿತ್ಯವನ್ನು ಚಂಪೂ ಶೈಲಿಯಿಂದ ಬಿಡಿಸಿ ದೇಶೀಯ ಛಂದೋ ಶೈಲಿಯಲ್ಲೇ ನಡೆಸಿದ, ಆದರೆ ಆತನ ನಂತರ ಬಂದ ಕವಿಗಳು ರಾಜಾಶ್ರಯವನ್ನು ಆಶ್ರಯಿಸಿದರು. ಆಗ ಮತ್ತೆ ಚಂಪೂ ಶೈಲಿಯ ಪುನರುಜ್ಜೀವನವಾಯಿತು. ಪಾಲ್ಕುರಿಕೆ ಸೋಮನಾಥನು ದ್ವಿಪದದಲ್ಲಿ ಹೇಳಿದ ಪಂಡಿತಾರಾಧ್ಯ ಚರಿತೆಯನ್ನು ಶ್ರೀನಾಥ ಚಂಪೂ ರೂಪದಲ್ಲಿ ತಂದ ಎಂಬುದು ಗಮನಾರ್ಹವಾದುದು. ಆದರೆ ಶಿವ ಕವಿಗಳು, ಅಂದರೆ ವೀರಶೈವ ಸಾಹಿತ್ಯವನ್ನು ತೆಲುಗಿನಲ್ಲಿ ರಚಿಸಿದವರೆಲ್ಲರೂ ಪಾಲ್ಕುರಿಕೆಯ ಸೋಮನಾಥನ ಮಾರ್ಗವನ್ನೇ ಅನುಸರಿಸಿ ದ್ವಿಪದ ಛಂದದಲ್ಲಿ ಕಾವ್ಯ ರಚನೆ ಮಾಡಿದರು.

ವೀರಶೈವ ಧರ್ಮದ ಪ್ರಭಾವ ಆಂಧ್ರದಲ್ಲಿದ್ದ ಕಾರಣ ಅಲ್ಲಿನ ವೀರಶೈವ ಕವಿಗಳು ಕನ್ನಡ ವೀರಶೈವ ಕೃತಿಗಳನ್ನು ತಮ್ಮ ಭಾಷೆಗೆ ಅನುವಾದ ಮಾಡಿಕೊಂಡರು. ಈ ರೀತಿ ಅನುವಾದ ಮಾಡಿಕೊಳ್ಳುವಾಗ ಕನ್ನಡ ಷಟ್ಪದಿ ರೂಪದ ಕಾವ್ಯಗಳು ತೆಲುಗಿಗೆ ದ್ವಿಪದ ರೂಪದಲ್ಲಿಯೇ ಹೋದವು. ಈ ರೀತಿಯಲ್ಲಿ ಅನುವಾದಕ್ಕೆ ಶ್ರೀಕಾರವನ್ನು ಹಾಕಿದವರು ಕನ್ನಡಿಗರೆ. ಪಾಲ್ಕುರಿಕೆ ಸೋಮನಾಥನ ಬಸವಪುರಾಣವನ್ನು ಭೀಮಕವಿ ಷಟ್ಪದಿಯ ರೂಪದಲ್ಲಿ ಕನ್ನಡಕ್ಕೆ ತಂದ.

ಈ ಎಲ್ಲ ವಿವರಗಳನ್ನೂ ಸೂಕ್ಷ್ಮವಾಗಿ ಗಮನಿಸಿದಾಗ ದಾಕ್ಷಿಣಾತ್ಯರು, ಯಾವುದೇ ಬಾಷೆಯಿಂದ ಒಂದು ಕೃತಿಯನ್ನು ತಮ್ಮ ಭಾಷೆಯಲ್ಲಿ ನಿರೂಪಿಸುವಾಗ ಅದನ್ನು ಅದರ ಮೂಲ ಛಂದೋ ರೂಪದಲ್ಲಿಯೇ ತರದೆ ತಮ್ಮ ಭಾಷಾ ಸಾಹಿತ್ಯಗಳ ಜಾಯಮಾನಕ್ಕೆ ಹೊಂದುವ ಛಂದೋ ರೂಪದಲ್ಲಿ ಅನುವಾದ ಮಾಡಿರುವುದು ಕಂಡು ಬರುತ್ತದೆ.

ಪ್ರಾಚೀನ ಗ್ರೀಕ್ ದುರಂತ ನಾಟಕಗಳನ್ನು ಪ್ರಥಮ ಬಾರಿಗೆ ಕನ್ನಡಕ್ಕೆ ಅನುವಾದಿಸಿದ ಬಿ.ಎಂ.ಶ್ರೀ, ಕವೆಂ ರಾಘವಾಚಾರ್ಯರು, ಆ ದುರಂತ ನಾಟಕಗಳನ್ನು ಹಳಗನ್ನಡದಲ್ಲಿ ಅನುವಾದಿಸಿ ಮೂಲ ಕೃತಿಯ ಪ್ರಾಚೀನತೆಯನ್ನು ಗಾಂಭೀರ್ಯವನ್ನು ಉಳಿಸಬೇಕೆಂದುಕೊಂಡರು. ಆ ಕಾಲಕ್ಕೆ ಅದು ಯಶಸ್ವಿ ಅನುವಾದವೂ ಆಯಿತು. ಅದೇ ಮಾರ್ಗವನ್ನು ಅನುಸರಿಸಿ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿಯವರು ಮತ್ತು ಶ್ರೀ ಸುಜನಾ ಅವರು 'ಏಜಾಕ್ಸ್' 'ಬುದ್ಧ ಪ್ರಮುತ್ಯೂಸ್' ನಾಟಕಗಳನ್ನು ಹಳಗನ್ನಡದಲ್ಲಿಯೇ ಅನುವಾದಿಸಿದರು. ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ ಲಂಕೇಶರು ರಂಗಪ್ರಯೋಗವನ್ನು ಗಮನದಲ್ಲಿಟ್ಟುಕೊಂಡು ಈಡಿಪಸ್ ನಾಟಕವನ್ನು ಆಧುನಿಕ ಕನ್ನಡದಲ್ಲಿ ಅನುವಾದ ಮಾಡಿದರು.

ಒಬ್ಬನ ಮೇಲೆ ಹೇಳುವುದಾದರೆ ಒಂದು ಕಾವ್ಯದ ಭಾಷೆ, ಛಂದೋ ರೂಪ, ಅದರ ವಾಚಕರನ್ನು ಅನುಸರಿಸಿರುತ್ತದೆ. ಆದ್ದರಿಂದ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಬಂದಾಗ ಅದು ಆ ಭಾಷೆಯ ಜಾಯಮಾನಕ್ಕೆ ಹೊಂದಿಕೊಂಡಂತೆ, ಆ ಕಾಲದ ಓದುಗರನ್ನು ಅನುಸರಿಸಿ ಬಂದಿದೆಯೇ ಹೊರತು ಮೂಲ ಭಾಷೆಯ ರೂಪವನ್ನೇ ತಳೆದು ಬರುತ್ತಿರಲಿಲ್ಲ. ಸಂತೇಕಲ್ಲಹಳ್ಳಿ ಶ್ರೀಲಕ್ಷ್ಮೀನರಸಿಂಹಶಾಸ್ತ್ರಿಗಳು ತೆಲುಗಿನ ನರಸಿಂಹ ಶತಕವನ್ನು ಮೂಲದ 'ಸೀಸ' ಛಂದೋರೂಪದಲ್ಲಿಯೇ ಕನ್ನಡ 'ಸೀಸ' ಪದ್ಯರೂಪದಲ್ಲಿ ಅನುವಾದಿಸಿದರು. ಪೋತನಾಮಾತ್ಯನ ಶ್ರೀಮದಾಂಧ್ರಭಾಗವತವನ್ನು ಗದ್ಯದಲ್ಲಿ ಅನುವಾದಿಸಿದರು. ಅವರು ಅನುವಾದಕ ಎಂಬುದಕ್ಕೆ 'ಅನುವಕ್ತ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಶತಕವನ್ನು ಗದ್ಯಾನುವಾದ ಮಾಡುವುದು ಸೂಕ್ತವೆನ್ನಿಸಲಿಲ್ಲವೇನೋ ಏಕೆಂದರೆ ಶತಕದಲ್ಲಿ ನಿರೂಪಿತವಾಗಿರುವ ವಿಷಯಗಳಾದ ನೀತಿ, ಧರ್ಮ, ಲೋಕಾಚಾರ ಇವುಗಳನ್ನು ಮತ್ತೆ ಮತ್ತೆ ಮನನ ಮಾಡಬೇಕಾದರೆ ಅವು ಬಾಯಿ ಪಾಠವಾಗಬೇಕು. ಆದ್ದರಿಂದ ಅದು ಪದ್ಯರೂಪದಲ್ಲಿಯೇ ಇರುವುದು ಔಚಿತ್ಯಪೂರ್ಣ ಎಂದು ಅವರಿಗನ್ನಿಸಿರಬೇಕು.

ಪುರಂದರ, ಕನಕದಾಸರ ಕೀರ್ತನೆಗಳನ್ನು ಡಾ॥ ಜೆ ಸದಾನಂದಶಾಸ್ತ್ರಿಗಳು ಮೂಲ ರಾಗ, ತಾಳ, ಛಂದಸ್ಸು, ಪ್ರಾಸ ಬರುವಂತೆ ತೆಲಗಿಗೆ ಅನುವಾದಿಸಿದ್ದಾರೆ. ಈ ರೀತಿಯ ಅನುವಾದ ಸೋದರ ಭಾಷೆಗಳ ನಡುವೆ ಮಾತ್ರ ಸಾಧ್ಯ. ಆ ರೀತಿ ಮೂಲದ ರೂಪವನ್ನು ಹೊತ್ತು ಬರುವ ಸಂಪ್ರದಾಯ ಆಧುನಿಕ ಕಾಲದಲ್ಲಿ ಬಂದದ್ದು ಎಂಬುದು ಸುಸ್ಪಷ್ಟ. ಈ ರೀತಿಯ ಪ್ರಯತ್ನಗಳು ಒಂದು ಭಾಷೆಯಲ್ಲಿನ ಸಾಹಿತ್ಯ ರೂಪಗಳನ್ನು ಅನುವಾದಿತ ಭಾಷಾ ಸಾಹಿತ್ಯದಲ್ಲಿ ತಂದು ಆ ಸಾಹಿತ್ಯವನ್ನು ಶ್ರೀಮಂತಗೊಳಿಸಿತು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಇನ್ನು ಕಾವ್ಯದ ವಸ್ತುವಿನ ಅನುವಾದ ಹೇಗೆ ಆಗಿದೆ ಎಂಬುದರತ್ತ ಗಮನಹರಿಸೋಣ. ಇಲ್ಲಿ ನಾಲ್ಕು ಬಗೆಗಳನ್ನು ಗುರುತಿಸಬಹುದು.

೧.ಮೂಲ ಕವಿಯ ಕಥೆಯನ್ನು ಆತನ ಕಥಾನಿರೂಪಣೆಯ ಉದ್ದೇಶಕ್ಕೆ ಯಾವುದೇ ರೀತಿಯಲ್ಲಿ ಧಕ್ಕೆ ಬಾರದಂತೆ, ತನ್ನ ಸಮಕಾಲೀನ ಅವಶ್ಯಕತೆಗೆ ಅನುಗುಣವಾಗಿ ಅನುವಾದ ಮಾಡುವುದು. ಇಲ್ಲಿ ಕವಿಯಾದವನು ಮೂಲ ಕವಿಯ ಪದ್ಧತಿಯನ್ನಾಗಲೀ ವರ್ಣನೆಗಳನ್ನಾಗಲೀ ಅನುಸರಿಸಬೇಕೆಂದೇನೂ ಇಲ್ಲ. ಅಗತ್ಯವೆನಿಸಿದರೆ ಸಂಕ್ಷೇಪಿಸಬಹುದು ಅಥವಾ ವಿಸ್ತರಿಸಲೂಬಹುದು.

೨.ಮೂಲ ಕೃತಿಯ ಕಥಾಸರಣಿಯನ್ನಷ್ಟೇ ಅಲ್ಲ, ಅಲ್ಲಲ್ಲಿ ಮೂಲ ಕೃತಿಯ ವಿವರಗಳನ್ನು ವರ್ಣನೆಗಳನ್ನು ಬಳಸಿಕೊಂಡು ಅನುವಾದ ಮಾಡುವುದು. ಇದು ಮೊದಲನೆಯ ರೀತಿಗಿಂತಲೂ ಸ್ವಲ್ಪ ವಿಭಿನ್ನವಾದ ಮಾರ್ಗ.

೩.ಮೂಲದಿಂದ ಕಥೆಯನ್ನು ಸ್ವೀಕರಿಸಿ, ಅದರೊಳಗಿನ ಪಾತ್ರಗಳನ್ನು, ಪ್ರಸಂಗಗಳನ್ನು ತನ್ನ ಕಥಾ ನಿರೂಪಣೆಯ ಉದ್ದೇಶಕ್ಕೆ ಅನುಗುಣವಾಗಿ ಬದಲಾಯಿಸಿಕೊಂಡು, ಅಷ್ಟಾಂಶ ವರ್ಣನೆಗಳೊಂದಿಗೆ ಮೂಲ ಕಥೆಯನ್ನು ವಿಭಿನ್ನ ರೀತಿಯಲ್ಲಿ ನಿರೂಪಿಸುವುದು. ಇಲ್ಲಿ ಕವಿಗೆ ಧಾರ್ಮಿಕ ಉದ್ದೇಶವಿರದೆ ಕೇವಲ ಸಾ? ತ್ರ ಸೃಷ್ಟಿಯ ಉದ್ದೇಶವಿರುತ್ತದೆ.

೪.ಶಾಸ್ತ್ರಗ್ರಂಥಗಳ ಅನುವಾದ. ಇಲ್ಲಿ ಬಹುಮಟ್ಟಿಗೆ ಅನುವಾದ ಮಾಡುವ ಕವಿ ಮೂಲ ಕೃತಿಗೆ ಬದ್ಧನಾಗಿರುತ್ತಾನೆ. ಹೇಳುವಲ್ಲಿ ಸ್ವಲ್ಪ ಹೆಚ್ಚಿನ ವಿವರಗಳನ್ನು ನೀಡಬಹುದು. ಆದರೆ ಶಾಸ್ತ್ರ ವಿಷಯವಾಗಿ ಯಾವುದೇ ರೀತಿಯ ಬದಲಾವಣೆಗಳನ್ನು ಮಾಡುವಂತಿಲ್ಲ. ಕೆಲವೊಮ್ಮೆ ಮೂಲಕ್ಕೆ ಪೋಷಕವಾಗುವಂತಹ, ಪ್ರಾಂತೀಯ ವೈಶಿಷ್ಟ್ಯಗಳನ್ನು ಬೇಕಾದರೆ ಅವನು ಸೇರಿಸಬಹುದು.

ಮೇಲೆ ಹೇಳಿದ ನಾಲ್ಕು ರೀತಿಗಳಲ್ಲಿಯೇ ದಾಕ್ಷಿಣಾತ್ಯ ಭಾಷಾ ಸಾಹಿತ್ಯಗಳು ಅನುವಾದಗೊಂಡಿರುವುದು. ಈ ಅಂಶಗಳನ್ನು ಪಂಪ, ರನ್ನರ ಕಾವ್ಯಗಳ ಹಿನ್ನೆಲೆಯಲ್ಲಿ ಪರಿಶೀಲಿಸೋಣ.

'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ' ಇವೆರಡೂ ವಿಭಿನ್ನ ರೀತಿಯ ಅನುವಾದ ಮಾರ್ಗಗಳನ್ನು ಅನುಸರಿಸಿ ಮಾಡಿದಂಥವೇ ಆಗಿದೆ.

ಅಜಿತ ಸೇನಾಚಾರ್ಯರು ಬರೆದ ಪೂರ್ವ ಪುರಾಣದ ಕಥೆಯನ್ನು ಕನ್ನಡದಲ್ಲಿ ಹೇಳುವುದಕ್ಕೆ ತೊಡಗುವುದಕ್ಕೆ ಮುನ್ನ, ಪಂಪ ಅದನ್ನು ಹಲವು ಬಾರಿ ಓದಿದ್ದ; ಜೀರ್ಣಿಸಿಕೊಂಡಿದ್ದ, ಅದರ ಆಳ ವಿಸ್ತಾರಗಳನ್ನು ಅರಿತಿದ್ದ, ಪುರುದೇವನಿಂದ ಪ್ರಾರಂಭವಾಗಿ ಜಿನೇಂದ್ರ ಗಣಧರ ಪರಂಪರೆಯಿಂದ ವೀರಸೇನ ಮತ್ತು ಜಿನಸೇನಾಚಾರ್ಯರವರೆಗೆ ಬಂದ ಕಥೆ ಅಗಾಧವಾದದ್ದು, ಅದನ್ನೇ ರಚಿಸಿದವರು. ಜ್ಞಾನ ಸಂಪನ್ನರು ಎಂಬುದನ್ನು ನೆನೆಸಿಕೊಂಡಾಗ ಅಂತಹ ಕಥೆಯನ್ನು ಹೇಳಲು ತಾನು ಪ್ರಯತ್ನಪಟ್ಟಿದ್ದು ಧಾರ್ಷ್ಟಿಕವೆಂಬ ಅಳುಕು ಪಂಪನಿಗೆ ಇದೆ. ಆದ್ದರಿಂದಲೇ ಅವನು " ಈ ಕಥಾಬ್ಧಿಯಮನೇನೀಸಲ್ ಮನ ದಂದೆಯೋ" (ಆದಿ.ಪು. ೧-೩೫) ಎಂದು ಅನುಮಾನದಿಂದ ಉದ್ಗರಿಸಿದ್ದಾನೆ. ಅದು ಅವನ ವಿನಯವೂ ಹೌದು, ತನ್ನ ಪ್ರಯತ್ನದ ಬಗೆಗಿನ ಕಿಂಚಿತ್ ಸಂದೇಹವೂ ಇದ್ದಿರಬಹುದು.

ಮುಂದಿನ ಪದ್ಯದಲ್ಲಿ ತನ್ನ ಕೃತಿಯ ಬಗ್ಗೆ ತುಂಬಾ ನಂಬಿಕೆಯಿಂದ

**"ಇದುವೆ ಸುಕವಿ ಪ್ರಮೋದ ।**
**ಪ್ರದಮಿದುವೆ ಸಮಸ್ತ ಭವ್ಯಾಲೋಕ ಪ್ರಮದ ॥**
**ಪ್ರದಮೆನೆ ನೆಗೆಟಿದಿ ಪುರಾ ।**
**ಣದೊಳಱಿವುದು ಕಾವ್ಯಧರ್ಮಮುಂ ಧರ್ಮಮುಮಂ**

ಎಂಬುದಾಗಿ ಹೇಳಿದ್ದಾನೆ.

ಕಾವ್ಯಕ್ಕೆ ತನ್ನದೇ ಆದ ಧರ್ಮವಿದೆ, ಅದು ಮತಧರ್ಮಕ್ಕಿಂತಲೂ ಭಿನ್ನವಾದುದು, ಮತಧರ್ಮ ಜನಕ್ಕೆ ತಲುಪಿಸುವಲ್ಲಿ ಕಾವ್ಯಧರ್ಮ ನೆರವಾಗುತ್ತದೆ. ಈ ಕಾವ್ಯ ಧರ್ಮವೆಂಬುದು ಧರ್ಮ ನಿರಪೇಕ್ಷವಾದುದು; ಭಾವ ಸಂಪತ್ತಿನಿಂದ ಕೂಡಿದುದು. ಧರ್ಮ ಮತ್ತು ಕಾವ್ಯಧರ್ಮಗಳೆರಡು ಜೊತೆಜೊತೆಯಾಗಿ ಹೋಗುವುದು ಅಪರೂಪ. ಅವೆರಡರ ಸಂಗಮ ತನ್ನ ಕೃತಿಯಲ್ಲಿದೆ. ಸಹೃದಯರು ಯಾವುದಾದರೊಂದನ್ನು ಸ್ವೀಕರಿಸಬಹುದು. ಅಥವಾ ಎರಡೂ ಸ್ವೀಕರಿಸಬಹುದು. ಅಂದರೆ ತನ್ನ ಆದಿಪುರಾಣ ಕೇವಲ ಜೈನಧರ್ಮೀಯರಿಗೆ ಮಾತ್ರವಲ್ಲ, ಬೇರೆಯವರೂ ಓದಬೇಕಾದ ಕಾವ್ಯ ಎಂಬ ಅಭಿಪ್ರಾಯ ಈ ಪದ್ಯದಿಂದ ಧ್ವನಿತವಾಗುತ್ತದೆ.

ಆದಿಪುರಾಣದ ಕೊನೆಯಲ್ಲಿ ತನ್ನ ನಿರೂಪಣೆಯ ಬಗ್ಗೆ ಪಂಪ ಹೇಳಿದ ಈ ಪದ್ಯ ಇನ್ನಷ್ಟು ಅಂಶಗಳನ್ನು ತಿಳಿಸುತ್ತದೆ.

**ತ್ರಿದಶಸ್ತುತ್ಯ ಮಿಂದಾದಿದೇವ ಚರಿತಂ ಕರ್ಣಾಮೃತಸ್ಯಂದಿಯ**
**ಕ್ಕಿದು ಭವ್ಯಾವಳಿಗೆಂದು ಪೇಟಿಸೆಬುಧರ್ ಸ್ವರ್ಗಾಪವರ್ಗಕ್ಕಮಾ**
**ಸ್ಪದಮಪ್ಪಾದಿ ಪುರಾಣ ವಸ್ತುಕೃತಿಯಂ ಪೇಟ್ದಿ ಬೆಡಂಗಪ್ಪಮಾ**
**ರ್ಗದೊಳಂ ದೇಸೆಯೊಳಂ ಪೊದೆ ಪೈ ಸೆವಿನಂ ಸಂಸಾರ ಸಾರೋದಯಂ ೧೬-೭೫**

ಈ ಆದಿತೀರ್ಥಂಕರನ ಕಥೆಯು ತ್ರಿದಶಸ್ತುತ್ಯವಾದುದು, ಭವ್ಯ ಜನರಿಗೆ ಇದು ಕರ್ಣಾಮೃತ, ಸ್ವರ್ಗ ಮೋಕ್ಷಗಳನ್ನು ನೀಡುವಂಥದ್ದು. ಅದನ್ನು ನೀನು ಹೇಳು ಎಂದು ಬುಧರು ಹೇಳಿಸಲಾಗಿ ಸಂಸಾರ ಸಾರೋದಯನಾದ ಪಂಪನು ಮಾರ್ಗ ಮತ್ತು ದೇಶಿ ರೀತಿ ಶೈಲಿಗಳು ವಿರಾಜಿಸುವಂತೆ ಆದಿಪುರಾಣವೆಂಬ ವಸ್ತು ಕೃತಿಯನ್ನು ಹೇಳಿದೆ – ಎಂಬುದು ಪಂಪನ ಅಭಿಪ್ರಾಯ. ಈ ಪದ್ಯದಲ್ಲಿ 'ಮಾರ್ಗ ದೇಶಿ' ಮತ್ತು 'ವಸ್ತುಕೃತಿ' ಎಂಬ ಪಾರಿಭಾಷಿಕ ಪದಗಳು ಹಲವಾರು ರೀತಿಗಳಲ್ಲಿ ವ್ಯಾಖ್ಯಾನಗೊಂಡಿವೆ. ಈ ಬಗ್ಗೆ ಸುದೀರ್ಘವಾದ ಸಂಪ್ರಬಂಧವನ್ನು ಸಿದ್ಧಪಡಿಸತ್ತಿದ್ದೇನೆ. 'ವಸ್ತುಕ' 'ವರ್ಣಕ'ದ ಕಲ್ಪನೆ ಕೇವಲ ಕನ್ನಡದಲ್ಲಿ ಮಾತ್ರವಲ್ಲ ತೆಲುಗು ಸಾಹಿತ್ಯದಲ್ಲಿಯೂ ಇದೆ. ಇಲ್ಲಿ 'ಮಾರ್ಗ' ಎಂದರೆ ಇದಕ್ಕೆ ಮುನ್ನವೇ ಪ್ರಖ್ಯಾತವಾಗಿರುವ ಕಥೆಯನ್ನು ತೆಗೆದುಕೊಂಡು ಮೂಲದ ಆಶಯಕ್ಕೆ, ಕಥೆಗೆ ಯಾವ ರೀತಿಯಲ್ಲಿಯೂ ಭಂಗ ಬಾರದಂತೆ, ಯಾವುದೇ ಮಾರ್ಪಾಡುಮಾಡದಂತೆ, ದೇಶ ಭಾಷೆಯಲ್ಲಿ ಸಂಸ್ಕೃತ ವೃತ್ತ, ಛಂದೋ ರೂಪಗಳು ಮತ್ತು ಪದ್ಯಸಂಧಿಯಾದ ವಚನಗಳನ್ನೊಳಗೊಂಡ ಚಂಪೂ ರೂಪದಲ್ಲಿ ನಿರೂಪಿಸುವುದು. ಆದಿಪುರಾಣ 'ವಸ್ತುಕೃತಿ' ಅಂದರೆ ಅದರಲ್ಲಿ ಕಾವ್ಯ ಲಕ್ಷಣಗಳಿಗಿಂತಲೂ ಪುರಾಣ ಲಕ್ಷಣಗಳಿಗೇ ಪ್ರಾಧಾನ್ಯ. ಇಲ್ಲಿ ಅಷ್ಟಾದಶವರ್ಣನೆ ಬಂದೇ ತೀರಬೇಕೆಂಬ ನಿಯಮವಿಲ್ಲ. ಒಬ್ಬನೇ ಕಥಾ ನಾಯಕನೆಂಬುದೂ ಇಲ್ಲ. ಅಂದರೆ ಕಾವ್ಯಕ್ಕೆ ಒಬ್ಬ ಕಥಾ ನಾಯಕನಿದ್ದು ಅವನ ಹುಟ್ಟಿನಿಂದ ಹಿಡಿದು ಅವನ

ಕಲ್ಯಾಣ ಅಥವಾ ವಿಜಯೋತ್ಸವದವರೆಗಿನ ಕಥೆಯಿರುವುದಿಲ್ಲ. ಹಾಗೆಯೇ ಇಡೀ ಕೃತಿಯ ಕಥಾವಸ್ತು ಕಥಾನಾಯಕನ ಸುತ್ತಲೂ ಹಬ್ಬಿಕೊಂಡಿರುತ್ತದೆ. ವಸ್ತುಕದಲ್ಲಿ ಹಾಗಿರದೆ ಕೃತಿಯಾವೊಂದು ಉದ್ದೇಶಕ್ಕಾಗಿ ನಿರ್ಮಾಣ ಗೊಂಡಿರುತ್ತದೆಯೋ ಅದಕ್ಕೆ ಸಂಬಂಧಿಸಿದ ಕಥೆಗಳು ಉಪಕಥೆಗಳು ನಿರೂಪಿತವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಆದಿಪುರಾಣದಲ್ಲಿ ಅಷ್ಟಾದಶ ವರ್ಣನೆಗಳನ್ನು ಪಂಪ ತಂದಿಲ್ಲ. ಮೂಲ ಕಥೆಯನ್ನು ಎಲ್ಲೂ ಮಾರ್ಪಾಟು ಮಾಡಿಲ್ಲ. ನಿರೂಪಣೆಯಲ್ಲಿ ಕಾವ್ಯಕ್ಕೆ ತನ್ನದೇ ಆದ ಮೆರುಗು ನೀಡಿದ್ದಾನೆ. ಕಥೆಯಲ್ಲಿ ಏಕಸೂತ್ರತೆಯನ್ನು ತರುವ ಸಲುವಾಗಿ "ಗುರು ದೇವೇಂದ್ರ ಮುನೀಂದ್ರ ನಿಂದ್ರ ನಮಿತಂ ದೇವಂ ಕಥಾನಾಯಕಂ ಪುರುದೇವಂ" ಎಂಬುದಾಗಿ ಪುರುದೇವನನ್ನು ಕಥಾ ನಾಯಕನನ್ನಾಗಿ ಮಾಡಿಕೊಂಡಿದ್ದಾನೆ. ಆದ್ದರಿಂದಲೇ ಪ್ರತಿಯೊಂದು ಆಶ್ವಾಸವನ್ನೂ ತನ್ನ ಕಥಾನಾಯಕನಾದ ಪುರುದೇವನನ್ನು 'ಸರಸ್ವತಿಮಣಿಹಾರಂ' ಎಂಬುದಾಗಿ ಪ್ರಸ್ತಾಪಿಸಿ ಪ್ರಾರಂಭಿಸುತ್ತಾನೆ. ಹಾಗೆಯೇ ಪ್ರತಿಯೊಂದು ಆಶ್ವಾಸದಲ್ಲಿಯೂ ಪುರುದೇವನನ್ನು 'ಸುಕವಿ ಜನ ಮನೋ ಮಾನಸೋತ್ತಂಸ ಹಂಸ' ಮತ್ತು 'ಸಂಸಾರಸಾರೋದಯಂ' ಎಂದು ಪ್ರಸ್ತಾಪಿಸಿ ಅವನಿಗೆ ಸಂಬಂಧಿಸಿದಂತೆ ಮುಕ್ತಾಯಗೊಳಿಸುತ್ತಾನೆ. ಪಂಪ ಇದೇ ರೀತಿ ನಿರ್ದಿಷ್ಟವಾದ ಪದಪುಂಜ ಬರುವಂತೆ ಅಂದರೆ 'ಸರಸ್ವತಿಮಣಿಹಾರಂ' ಎಂದು ಪ್ರಾರಂಭದಲ್ಲಿ 'ಸುಕವಿಜನಮನಸೋತ್ತಂಸಹಂಸ, ಸಂಸಾರ ಸಾರೋದಯಂ' ಎಂಬ ಬಿರುದುಗಳು ಕೊನೆಯಲ್ಲಿ ಬರುವಂತೆ ವಿಕ್ರಮಾರ್ಜುನನ ವಿಜಯದಲ್ಲಿ ಅನುಸರಿಸಿಲ್ಲ. ಆದರೆ ಅಲ್ಲಿಯೂ ಕೂಡಾ ಪ್ರಾರಂಭ ಮತ್ತು ಆಶ್ವಾಸದ ಕೊನೆಯಲ್ಲಿ ಅರಿಕೇಸರಿ ಗುಣಾರ್ಣವನ ಪ್ರಸ್ತಾಪ ಬರುತ್ತದೆ. ಪಂಪನ ಈ ಒಂದು ಕ್ರಮವನ್ನು ಅಂದರೆ ನಿರ್ದಿಷ್ಟ ಬಿರುದಿನ ರೂಪದ ಪ್ರಯೋಗವನ್ನು ಆಶ್ವಾಸದ ಕೊನೆಯಲ್ಲಿ ಪೊನ್ನ ತನ್ನ ಶಾಂತಿನಾಥ ಪುರಾಣದಲ್ಲಿ ತಂದಿದ್ದಾನೆ. ಹಾಗೆಯೇ ನಯಸೇನ 'ಸುಕವಿನಿಕರಪಿಕಮಾಕಂದಂ' ಎಂಬುದನ್ನು ಪ್ರತಿ ಅಶ್ವಾಸದ ಕೊನೆಯಲ್ಲಿಯೂ ತರುತ್ತಾನೆ. ಇಲ್ಲಿ ಒಂದು ಸಂಶಯ ಬರುತ್ತದೆ ಇವು ಆ ಕಾವ್ಯದ ಕಥಾ ನಾಯಕನ ಬಿರುದುಗಳೇ ಅಥವಾ ಕವಿಯವೇ? ಅಥವಾ ಅವು ಎಲ್ಲರಿಗೂ ಅನ್ವಯವಾಗುವಂತಹುವೆ? ಹಾಗೆಂದು ಕೇವಲ ಪುರುದೇವನ ಕಥೆಯನ್ನು ಮಾತ್ರಹೇಳಿಲ್ಲ ಈ ಕಾವ್ಯ ಪುರು ದೇವಾದಿ ಪುರುಷ ಸ್ತುತ್ಯ ಜನ್ಮಾಳಿ ಬಂಧುರವಾದುದು ಎಂಬುದನ್ನು ಹೇಳುತ್ತಾನೆ. ಇದು ಪಂಪನು ರೂಪಿಸಿಕೊಂಡ ಶೈಲಿ. ಇದು ನಮಗೆ ಹೆಚ್ಚು ಸ್ಪಷ್ಟವಾಗಬೇಕಾದರೆ ಪಂಪ ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಆ ಕಾವ್ಯದ ಬಗ್ಗೆ ಹೇಳಿರುವ ಅಂಶಗಳನ್ನು ಪರಿಶೀಲಿಸಬೇಕು.

ತುಂಬಾ ವಿಸ್ತಾರವಾದ ಭಾರತದ ಕಥೆಯನ್ನು ತಾನು ಯಾವ ಕ್ರಮದಲ್ಲಿ ಹೇಳಿದ್ದೇನೆ ಎಂಬುದನ್ನು ಪಂಪ ಈ ರೀತಿ ತಿಳಿಸಿದ್ದಾನೆ.

**ಕತೆಪಿರಿದಾದೊಡಂ ಕತೆಯಮೆಯ್ಗೆಡಲೀಯದೆ ಮುಂ ಸಮಸ್ತ ಭಾ**
**ರತಮನಪೂರ್ವಮಾಗೆ ಸಲೆ ಪೇಟ್ದ ಕವೀಶ್ವರರಿಲ್ಲ ವರ್ಣಕಂ**
**ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೇ ಪೇೞ್ಗುಮೆಂದು ಪಂ**
**ಡಿತರೆ ತಗುಳ್ದು ಬಿಚ್ಚಟಿಸೆ ಪೇೞಲೆರ್ಚಿದೆನೀ ಪ್ರಬಂಧಮಂ ॥ ೧೧ ॥**

ಈ ಪದ್ಯದೊಳಗಿನ 'ವರ್ಣಕ' 'ಪ್ರಬಂಧ' ಎರಡು ಪದಗಳನ್ನು ಪಂಪನು ತನ್ನ ಕಾವ್ಯದ ಸ್ವರೂಪವನ್ನು ತಿಳಿಸಲು ಹೇಳಿದ್ದಾನೆ. ಮೂಲ ಮಹಾಭಾರತದ ಕಥೆ ತುಂಬಾ ಹಿರಿದಾಗಿದ್ದರೂ ಪ್ರಧಾನವಾದ ಕತೆಗೆ ಕುಂದು ಬಾರದಂತೆ, ಇಡೀ ಮಹಾಭಾರತದ ಕತೆಯನ್ನು ಅಪೂರ್ವವಾದ ರೀತಿಯಲ್ಲಿ, ಹಿಂದೆ ಯಾರೂ ಹೇಳಿರದ ರೀತಿಯಲ್ಲಿ, ಕಥೆಯನ್ನು ವರ್ಣಕ ಶೈಲಿಯಲ್ಲಿ ಹೇಳುವ ಕಲೆಗಾರಿಕೆಯಿರುವುದು ಪಂಪನಿಗೆ ಮಾತ್ರ ಎಂದು ಪಂಡಿತರು ಒತ್ತಾಯ ಮಾಡಲು ಪಂಪನು ಈ ಪ್ರಬಂಧವನ್ನು ಹೇಳಲು ತೊಡಗಿದನು. 'ವರ್ಣಕ' ಎಂದರೇನು ಎಂಬುದನ್ನು ಪಂಪನ ವಿಕ್ರಮಾರ್ಜುನ ವಿಜಯದ ಕಥಾ ನಿರೂಪಣೆಯ ಹಿನ್ನೆಲೆಯಲ್ಲಿಯೇ ವ್ಯಾಖ್ಯಾನಿಸಬೇಕು. ಪ್ರಸಿದ್ಧವಾದ ಮೂಲ ಕಥೆಯನ್ನು ಸ್ವೀಕರಿಸಿ ಆ ಕಥೆಯಲ್ಲಿ ಮುಖ್ಯ ಪಾತ್ರವೊಂದನ್ನು ಕಥಾನಾಯಕನನ್ನಾಗಿ ಸ್ವೀಕರಿಸಿ ಆತನ ಸುತ್ತಲೂ ಆತನಿಗೆ ಸಂಬಂಧಿಸಿದಂತೆ ಇರುವ ಪ್ರಸಂಗಗಳನ್ನು ಒಂದನ್ನೂ ಬಿಡದಂತೆ ಬರುವಂತೆ ನಿರೂಪಿಸುವುದು. ವಿಕ್ರಮಾರ್ಜುನ ವಿಜಯದ ಕಥಾನಾಯಕ 'ಅರ್ಜುನ'. ಪ್ರತಿಯೊಂದು ಆಶ್ವಾಸವೂ ಅವನ ಪ್ರಸ್ತಾವನೆಯಿಂದಲೇ ಪ್ರಾರಂಭವಾಗಿ ಅವನಿಗೆ ಸಂಬಂಧಿಸಿದ ಯಾವುದಾದರೂ ಒಂದು ಘಟ್ಟದಿಂದಲೇ ಮುಗಿಯುತ್ತದೆ. ಕೊನೆಗೆ ಕಥೆ ಮುಗಿಯುವುದು ಅರ್ಜುನನ ಪಟ್ಟಾಭಿಷೇಕದಿಂದ. ಇಲ್ಲಿ ಕಥೆಯನಾಯಕ ಮುಖ್ಯ, ಕಥೆಯ ಪ್ರಾರಂಭದಿಂದಲೇ ಪಂಪ ಮೂಲದಲ್ಲಿಲ್ಲದ ರೀತಿಯಲ್ಲಿ ಪ್ರಸಂಗಗಳನ್ನು, ನಿರೂಪಿಸುತ್ತಾನೆ. ಯುದ್ಧದಲ್ಲಿ ಭೀಷ್ಮರು ಮನಃ

ಪೂರ್ವಕವಾಗಿ ಹೋರಾಡುತ್ತಿಲ್ಲವೆಂದು ದುರ್ಯೋಧನನು ಹಂಗಿಸಿದಾಗ, ಭೀಷ್ಮರು ನಂತರದ ಯುದ್ಧದಲ್ಲಿ ವಿಜೃಂಭಿಸುತ್ತಾರೆ. ಶ್ರೀಕೃಷ್ಣನು ಪ್ರಯೋಗ ಮಾಡಿದ ಚಕ್ರ ತನ್ನ ಕೆಲಸ ಮಾಡದೆ, ಭೀಷ್ಮನು ಪ್ರಯೋಗಿಸಿದ, ವೈಷ್ಣವಾಸ್ತ್ರ ಶ್ರೀಕೃಷ್ಣನನ್ನೇ ಘಾಸಿಗೊಳಿಸುತ್ತದೆ. ಇದರಿಂದ ಅರ್ಜುನ ಪಾಶುಪತಾಸ್ತ್ರ ಪ್ರಯೋಗಿಸುತ್ತಾನೆ. ಆದರೆ ದೇವತೆಗಳು ಅವನನ್ನು ತಡೆಯುತ್ತಾರೆ. ಆದಿನ ರಾತ್ರಿ ಧರ್ಮರಾಯ ಶ್ರೀಕೃಷ್ಣನೊಂದಿಗೆ ಮಾತಾಡುತ್ತಾನೆ. ಆಗ ಕೃಷ್ಣ ಭೀಷ್ಮನನ್ನು ಭೇದೋಪಾಯದಿಂದಲ್ಲದೆ ಗೆಲ್ಲಲು ಸಾಧ್ಯವಿಲ್ಲವೆಂದು ಹೇಳಿ ಅದೇ ದಿನ ರಾತ್ರಿ ಭೀಷ್ಮನನ್ನ ಭೇಟಿಮಾಡಲು ಧರ್ಮರಾಯನನ್ನು ಕಳಿಸುತ್ತಾನೆ. ಆಗ ಭೀಷ್ಮ ತನ್ನನ್ನ ಯಾವ ರೀತಿ ಗೆಲ್ಲಬೇಕೆಂಬ ಉಪಾಯವನ್ನು ಹೇಳಿ ಕಳುಹಿಸುತ್ತಾ ಧರ್ಮರಾಯನೊಂದಿಗೆ "ಇದಂ, ನರಂಗಟಿಪದೀ ತೆಜದಿಂ ನೆಗಟಿಯ್ದೆ ವೀರಲಕ್ಷ್ಮಿಗೆ ನೆಲೆಯಾಗುಪೋಗು" ಎನ್ನುತ್ತಾನೆ.

ಮೂಲ ಭಾರತದಲ್ಲಿ ಪಾಂಡವರೈವರೂ ಹೋಗಿ ಭೀಷ್ಮರನ್ನು ಕಂಡು ತಮ್ಮ ಅಸಹಾಯಕತೆಯನ್ನು ತೋಡಿಕೊಂಡಾಗ ಭೀಷ್ಮ ತನ್ನನ್ನು ಕೊಲ್ಲುವ ಉಪಾಯ ತಿಳಿಸುತ್ತಾನೆ. ಆಗ ಅಲ್ಲಿ ಅರ್ಜುನನೂ ಇರುತ್ತಾನೆ.

ಅರ್ಜುನನು ತನ್ನ ಕಥಾ ನಾಯಕ ವಿಕ್ರಮನೆಂದು ಚಿತ್ರಿಸುವುದಕ್ಕೆ ಹೊರಟಿರುವಾಗ, ಅವನೇ ಅವನ ಶತ್ರುವನ್ನು ಕಂಡು ಅವನನ್ನು ಕೊಲ್ಲುವ ಉಪಾಯ ತಿಳಿದು ಕೊಂಡನೆಂದರೆ ಆತನ ವ್ಯಕ್ತಿತ್ವಕ್ಕೆ ಕುಂದಲ್ಲವೇ । ಆದರಿಂದ ಈ ರೀತಿಯ ಬದಲಾವಣೆ ಮಾಡಿದ್ದಾನೆ. ಮೇಲಾಗಿ ಭೀಷ್ಮರಿಂದಲೇ "ಈ ವಿಷಯ ಅರ್ಜುನನಿಗೆ ಹೇಳಬೇಡಿ" ಎಂದು ಹೇಳಿಸಿರುವದರಿಂದ, ಅರ್ಜುನನಿಗೆ ಆ ಬಗ್ಗೆ ತಿಳಿದೇ ಇರಲಿಲ್ಲವೆಂಬುದನ್ನು ಧ್ವನಿಸುತ್ತಾನೆ. ತಿಳಿದಿದ್ದರೆ ಭೀಷ್ಮನನ್ನು ಆ ರೀತಿ ಜಯಿಸಲು ಅರ್ಜುನ ಬಯಸುತ್ತಿರಲಿಲ್ಲ ಎಂಬುದು ಪಂಪನಭಾವ. (ವಿಕ್ರಮಾರ್ಜುನ ವಿಜಯ. ೧೧-೩೨). ಪಂಪ ಅನೇಕ ಪಾತ್ರಗಳ ಚಿತ್ರಣವನ್ನೂ ಬದಲಾಯಿಸಿ ನಿರೂಪಿಸಿದ್ದಾನೆ. ಪ್ರತಿನಾಯಕನನ್ನಾಗಿ ಕರ್ಣನನ್ನು ರೂಪಿಸಿದ್ದಾನೆ. ಮಹಾಭಾರತದಲ್ಲಿ ಬರುವ ಅನೇಕ ಉಪಾಖ್ಯಾನಗಳನ್ನು ಪಂಪ ಕೈ ಬಿಟ್ಟಿದ್ದಾನೆ. ಹಾಗೆಯೇ ಕಥೆಯನ್ನು ಯಾರು ಯಾವಾಗ ಹೇಳಿದರು ಎಂಬ ವಿವಿರಗಳಿರುವ ಮೂಲದ ಕಥಾ ನಿರೂಪಣಾ ಪ್ರಸಂಗವನ್ನು ಕೈಬಿಟ್ಟು ನೇರವಾಗಿ ಕುರುಜಂಗಣದ ವರ್ಣನೆಯಿಂದ ಪ್ರಾರಂಭಿಸಿ, ಹಸ್ತಿನಾಪುರ ನಗರ ವರ್ಣನೆಯಿಂದ ನೇರವಾಗಿ ಕಥೆ ನಿರೂಪಣೆಗೆ ತೊಡಗುತ್ತಾನೆ. ತನ್ನ ಕಥಾನಾಯಕ ಅರ್ಜುನನ ಹುಟ್ಟು ಮತ್ತು ಯೌವನವನ್ನೇ ವಿಶೇಷವಾಗಿ ವರ್ಣಿಸಿದ್ದಾನೆ. ಪಂಪ ತನ್ನ ಈ ಕೃತಿಯಲ್ಲಿ ದಂಡಿಯು ಹೇಳಿದ ಹದಿನೆಂಟು ವರ್ಣನೆಗಳನ್ನು ತಂದಿದ್ದಾನೆ. ಅದರ ಔನ್ನತ್ಯ ಅನೌಚಿತ್ಯದ ಪ್ರಶ್ನೆ ಬೇರೆ. ವರ್ಣನೆಗೆಗಳಿಗೆ ಪ್ರಾಶಸ್ತ್ಯನೀಡಿ ಕಥಾನಾಯಕನ ಪರಾಕ್ರಮವನ್ನು ನಿರೂಪಿಸುವ ಕಾವ್ಯ 'ವರ್ಣಕ' - ಇದನ್ನು ತೆಲುಗರು 'ಪ್ರಬಂಧ'ವೆಂದೂ ಕರೆಯುತ್ತಾರೆ. ಆದಿಪುರಾಣವನ್ನು 'ವಸ್ತುಕ' ಎಂದು ಕರೆದಿರುವಂತೆ, ಆದಿಪುರಾಣವನ್ನು ತನ್ನ 'ಸಮಸ್ತ ಭಾರತ'ಕ್ಕಿಂತ ವಿಭಿನ್ನವಾದುದು ಎಂದು ತನ್ನ ವಿಕ್ರಮಾರ್ಜುನ ವಿಜಯದ ಕೊನೆಯಲ್ಲಿ 'ಆದಿಪುರಾಣ ಮಹಾಪ್ರಬಂಧ' (೧೪-೫೯) ಎಂಬುದಾಗಿ ನಿರ್ದೇಶಿಸಿದ್ದಾನೆ.

ಕಾಳಿದಾಸ, ಭಾಸ, ಭಟ್ಟನಾರಾಯಣ ಮೊದಲಾದ ಸಂಸ್ಕೃತ ಕವಿಗಳು ಮಹಾಭಾರತ ಮತ್ತು ರಾಮಾಯಣದಿಂದ ಕೆಲವು ಪ್ರಸಂಗಗಳನ್ನು ಆಯ್ಕೆಮಾಡಿಕೊಂಡು, ಮೂಲಕಥೆಯನ್ನು ತಮ್ಮದೇ ಆದ ರೀತಿಯಲ್ಲಿ ನೋಡಿ, ಬದಲಾವಣೆಯೊಂದಿಗೆ ನಾಟಕಗಳನ್ನು ಬರೆದಿರುವುದನ್ನು ಇಲ್ಲಿ ಸ್ಮರಿಸಬೇಕು. ಸಂಸ್ಕೃತದಲ್ಲಿ ವ್ಯಾಸ, ವಾಲ್ಮೀಕಿಗಳಲ್ಲದೇ ಅನಂತರ ಬಂದ ಕವಿಗಳೆಲ್ಲಾ ದೇಶಿಯಿಂದ ವಸ್ತುವನ್ನು ಸ್ವೀಕರಿಸಿ ಅದನ್ನು ಬದಲಾವಣೆಗಳೊಂದಿಗೆ ತಮ್ಮದೇ ಆದ ಕೃತಿಯೆಂಬಂತೆ ರಚಿಸಿದರು. ಇಂದು ಗಿರೀಶ ಕಾರ್ನಾಡರು ಅನುಸರಿಸುತ್ತಿರುವುದು ಇದೇ ರೀತಿಯನ್ನು, ಡಾ॥ ಚಂದ್ರಶೇಖರ ಕಂಬಾರರು ಜಾನಪದದಿಂದ ವಸ್ತು, ಭಾಷೆ, ಗೇಯತೆಯನ್ನು ಸ್ವೀಕರಿಸಿ ತಮ್ಮದೇ ಆದ ಮಾರ್ಗದಲ್ಲಿ ಅವುಗಳನ್ನು ಬಳಸಿಕೊಂಡು ತಮ್ಮ ಜೀವನ ದರ್ಶನಗಳನ್ನು ಅಭಿವ್ಯಕ್ತಿಗೊಳಿಸಿದ್ದಾರೆ.

ಪಂಪನ ಈ 'ವರ್ಣಕ' ನಿರೂಪಣಾ ವಿಧಾನ ಅದೆಷ್ಟರ ಮಟ್ಟಿಗೆ ಕವಿಗಳ ಮೇಲೆ ಪ್ರಭಾವ ತೋರಿದೆ ಎಂದರೆ, ಪೊನ್ನ ತನ್ನ ಶಾಂತಿಪುರಾಣವನ್ನು ಬರೆಯುವಲ್ಲಿ ಆದಿಪುರಾಣದ ವಸ್ತುಕ ಶೈಲಿಯನ್ನು ಹಾಗೂ ವಿಕ್ರಮಾರ್ಜುನ ವಿಜಯದ ವರ್ಣಕ ಶೈಲಿಯನ್ನು ಅನುಸರಿಸಿದ್ದಾನೆ. ಅನಂತರ ಬಂದ ಬಹುಪಾಲು ಎಲ್ಲ ಕಾವ್ಯಗಳೂ ಈ ವರ್ಣಕ ಮೂಸೆಯಲ್ಲಿಯೇ ಬಂದಿದೆ. ರಾಘವಾಂಕನ ನಂತರ ಷಟ್ಪದಿ ಮೊದಲಾದ ದೇಸಿ ಛಂದೋರೂಪಗಳಲ್ಲಿ ಕಾವ್ಯಗಳು ಬಂದರೂ ಅವು ಅಷ್ಟಾದಶ

ವರ್ಣನೆಗಳೊಂದಿಗೆ ಬಂದಿದೆ ಎಂಬುದನ್ನು ಗಮನಿಸಬೇಕು. ತೊರವೆ ರಾಮಾಯಣವನ್ನು ಬರೆದ ಕುಮಾರ ವಾಲ್ಮೀಕಿ ತನ್ನ ರಾಮಾಯಣವನ್ನು ಇದೇ ವರ್ಣಕದಲ್ಲಿ ತಂದ. ಹರಿಹರ ಗಿರಿಜಾಕಲ್ಯಾಣವನ್ನು ವರ್ಣಕ ಶೈಲಿಯಲ್ಲಿ ಬರೆದು, ಅನಂತರ ಆ ಮಾರ್ಗ ಅನುಸರಿಸದೆ. ರಗಳೆಯ ಛಂದೋ ರೂಪದಲ್ಲಿ ಬರೆದು ತನ್ನ ಎಲ್ಲ ಕೃತಿಗಳನ್ನು ವಸ್ತು ಶೈಲಿಯ ರಚಿಸಿದ್ದಾನೆ.

ನಂಜುಂಡ ಕವಿಯ ಕುಮಾರ ರಾಮನ ಸಾಂಗತ್ಯವೂ, ವರ್ಣಕ ಶೈಲಿಯಲ್ಲೇ ಇದೆ. ರತ್ನಾಕರನು ಆದಿಪುರಾಣದಿಂದ ಭರತನ ಕಥೆಯನ್ನು ಮಾತ್ರ ಸ್ವೀಕರಿಸಿ ಅದನ್ನು ವರ್ಣಕ ಶೈಲಿಯಲ್ಲಿ ನಿರೂಪಿಸಿದ. ತನ್ನ ಕಾವ್ಯದನಾಯಕ ಭರತನಾದುದರಿಂದ ಆ ಪಾತ್ರವನ್ನು ಆದಿಪುರಾಣಕ್ಕಿಂತ ಸ್ವಲ್ಪ ಭಿನ್ನವಾಗಿ, ಉದಾತ್ತವಾಗಿ ಚಿತ್ರಿಸಿದ್ದಾನೆಂಬುದನ್ನು ಗಮನಿಸಬೇಕು. ಪಂಪನ ಆದಿಪುರಾಣ ಮಾರ್ಗದಲ್ಲಿ ವಸ್ತು ಕೃತಿಯನ್ನು ರಚಿಸಿದವನೆಂದರೆ ಕುಮಾರವ್ಯಾಸ. ಭಾರತದ ಕಥೆಯನ್ನು 'ಶ್ರೀಕೃಷ್ಣ ಚರಿತೆ' ಯಾಗಿ ಗ್ರಹಿಸಿ, ಕೃಷ್ಣನ ಮಹಿಮೆಯನ್ನು ಮಾತ್ರ ಗಮನದಲ್ಲಿರಿಸಿಕೊಂಡು, ಅಷ್ಟಾದಶ ವರ್ಣನೆಗಳ ಗೊಡವೆಗೆ ಹೋಗದೆ ಕಥಾ ಪ್ರಧಾನವಾಗಿ ಕಾವ್ಯ ಬರೆದಿದ್ದಾನೆ ಕುಮಾರವ್ಯಾಸ ಎಂಬುದನ್ನು ಗಮನಿಸಬೇಕು.

ಪಂಪನಿಗೆ ಮೂಲ ಕವಿಯಾದ ವ್ಯಾಸನ ಬಗ್ಗೆ ಅಪಾರ ಗೌರವ. ತಾನು ಈ ಕಥೆಯನ್ನು ಬೇರೊಂದು ರೀತಿಯಲ್ಲಿ ಬರೆದು ವ್ಯಾಸನೆಂದು ಬೀಗುವ ಗರ್ವವಿಲ್ಲ. "ಗುಣಾರ್ಣವನ ಒಳ್ಪು ತನ್ನ ಮನೋಮಂದಿರದಲ್ಲಿ ನೆಲೆಗೊಂಡಿರುವುದರಿಂದ ಹೇಳಿರುವೆನಲ್ಲದೆ ಬೇರಾವ ಉದ್ದೇಶದಿಂದಲೂ ಅಲ್ಲ; ಪ್ರೀತಿಯನ್ನು ತೋರುವುದು ದೋಷವಾಗುವುದಿಲ್ಲ; ನನ್ನ ಅರಿವಿಗೆ ಸಿಕ್ಕ ರೀತಿಯಲ್ಲಿ ಹೇಳುತ್ತೇನೆ, ಅದರಲ್ಲಿ ದೋಷವೇನಿದೆ"? ಎಂಬುದಾಗಿ ಹೇಳುವ ಪಂಪನ ಮಾತುಗಳಿವು.

**ವ್ಯಾಸ ಮುನೀಂದ್ರ ರುಂದ್ರ ವಚನಾಮೃತವಾರ್ಧಿಯನೀಸುವೆಂ ಕವಿ**
**ವ್ಯಾಸನೆನೆಂಬ ಗರ್ವಮೆನಗಿಲ್ಲ ಗುಣಾರ್ಣವನೊಳ್ಪು ಮನ್ಮನೋ**
**ವಾಸಮನೆಯ್ದೆ ಪೇೞ್ವೆಪೆನದಲ್ಲದೆ ಗರ್ವಮೆ ದೋಷ ಮಱಗಂ**
**ದೋಷಮೆ ಕಾಣೆನೆನ್ನಱವ ಮಾೞ್ಕೆಯೆ ಪೇೞ್ವನಿದಾವ ದೋಷಮೋ ॥ ವಿ.ವಿ. I . ೧೩.**

ಮೇಲಿನ ಪದ್ಯವನ್ನು ಇಡಿಯಾಗಿ ನೋಡಿದರೆ ಮಾತ್ರ ಪಂಪನ ಮಾತುಗಳು ಅರ್ಥವಾಗುತ್ತವೆ. ಕೇವಲ "ವ್ಯಾಸಮುನೀಂದ್ರ . . . . ಗರ್ವ ಮೆನಗಿಲ್ಲ" ಎಂಬವುವವರೆಗೆ ಮಾತ್ರ ತೆಗೆದುಕೊಂಡು ಪಂಪನ ವಿನಯದ ಬಗ್ಗೆ ವಿಶ್ಲೇಷಿಸಿದರೆ ಸಾಲದು. ಇಡೀ ಪದ್ಯವನ್ನು ನೋಡಬೇಕು. ಪಂಪ ಮುಂದಿನ ಪದ್ಯದಲ್ಲಿ ತಾನು ಮಹಾಭಾರತ ಕತೆಯನ್ನು ವರ್ಣಕವಾಗಿ ಹೇಳುವುದರೊಂದಿಗೆ ಕಿರೀಟಿಯೊಂದಿಗೆ ಗುಣಾರ್ಣವನನ್ನು ಹೋಲಿಸಿ ಕೀರ್ತಿಸಿದ್ದೇನೆ ಎಂಬುದಾಗಿ ಹೇಳಿಕೊಂಡಿದ್ದಾನೆ. (ವಿ.ವಿ.I. ೧೪). ಆತನ ಖ್ಯಾತಿಯನ್ನು ಇಳೆಯಲ್ಲಿ ಸ್ಥಾಪಿಸುವ ಸಲುವಾಗಿ ಈ ತೆರದ ಇತಿಹಾಸ ಕಥೆಯನ್ನು ಅರಿಕೇಸರಿಗೆ ಒಪ್ಪಿಸಿದ್ದೇನೆ. ಎಂಬುದಾಗಿ ಕಾವ್ಯದ ಕೊನೆಯ ಭಾಗದಲ್ಲಿ (೧೪-೫೨) ಹೇಳಿಕೊಂಡಿದ್ದಾನೆ.

"ಬೆಳುಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ" ಎಂಬ ಮಾತಿನಲ್ಲಿ ಆದಿಪುರಾಣದಲ್ಲಿ ತನ್ನ ಜೈನ ಧರ್ಮ ಕುರಿತು ಹೇಳಿದ್ದೇನೆ ಇಲ್ಲಿ ಲೌಕಿಕದ ಕಥೆ ಹೇಳಿದ್ದೇನೆ ಎಂಬ ಸರಳವಾದ ಭಾವವಿರದೆ ಮೇಲೆ ವಿವರಿಸಿದ ಎಲ್ಲಾ ಅಂಶಗಳೂ ಒಳಗೊಂಡಿವೆ. ಮುಂದಿನ ಪದ್ಯವನ್ನು ಗಮನಿಸಬೇಕು.

**ವ್ಯಾಸ ಮುನಿಪ್ರಣೂತ ಕೃತಿಯಂ ಸಲೆ ಪೇೞ್ದು, ಪೊದಟ್ದಸತ್ಕವಿ.**
**ವ್ಯಾಸ ಸಮಾಗಮಾನ್ವಿತಮನಾದಿ ಪುರಾಣಮೆನೆಯ್ದೆ ಪೇೞ್ದು ವಾ**
**ಕ್ಶ್ರೀ ಸುಭಗಂ ಪುರಾಣ ಕವಿಯುಂ ಧರೆಗಾಗಿರೆ ಯುಣ್ನೆ ಪೊಣ್ಮುವೀ**
**ದೇಸಿಗಳುಂತೆ ನಾಡೋವಜನಾದನೊ ಪೇೞ್ ಕವಿತಾಗುಣಾರ್ಣವಂ ॥ ೧೪-೬೨ ॥**

ಪಂಪನು ವ್ಯಾಸಮುನಿಯ, ಹೊಗಳಲ್ಪಟ್ಟ ಕೃತಿಯಾದ ಭಾರತವನ್ನು ಬರೆದು ಸತ್ಕವಿಯಾದ ವ್ಯಾಸನಂತೆ 'ಆಗಮ' ಕೃತಿಗಳನ್ನು ರಚಿಸಿ, ವ್ಯಾಸರಿಗೆ ಸಮಾನರಾದ ಜಿನಸೇನಾಚಾರ್ಯರ ಕೃತಿ ಆದಿಪುರಾಣವನ್ನು ತನ್ನ ವಾಕ್ ಸಂಪತ್ತಿನಿಂದ ಹೇಳಿದ ಪಂಪ 'ಪುರಾಣ ಕವಿ'ಯೂ ಆದ. ಈ ರೀತಿ ದೇಸಿಗುಣಗಳು ಉನ್ನತವಾಗಿ ಅಭಿವೃದ್ಧಿಯಾಗುತ್ತಿರಲು ಕವಿತಾ ಗುಣಾರ್ಣವನು ನಾಡಿಗೆ ಓಜನಾದ. ಈ ಪದ್ಯದಲ್ಲಿ ಪಂಪ ತನ್ನನ್ನು ಸತ್ಕವಿ ಎಂದೂ ಪುರಾಣಕವಿ ಎಂದೂ

ಕರೆದುಕೊಂಡಿದ್ದಾನೆಂಬುದು ಗಮನಾರ್ಹ. ಅಂದರೆ ತನ್ನೆರಡು ಕಾವ್ಯಗಳು ಎರಡು ವಿಭಿನ್ನ ಸಂಪ್ರದಾಯಕ್ಕೆ ಸೇರಿದವು ಎಂಬುದನ್ನು ಮತ್ತೊಮ್ಮೆ ಖಚಿತಪಡಿಸಿದ್ದಾನೆ.

ನಮ್ಮ ಪ್ರಾಚೀನ ಕವಿಗಳು ಯಾವುದೇ ಒಂದು ಕೃತಿಯನ್ನೂ ಯಥಾವತ್ತಾಗಿ ಭಾಷಾಂತರ ಮಾಡಿದವರಲ್ಲ. ತಮ್ಮ ಕಾವ್ಯರಚನೆಯ ಉದ್ದೇಶಕ್ಕೆ ಅನುಗುಣವಾಗಿ ಮೂಲ ಕತೆಯನ್ನು ಅಂದಿನ 'ಕಾವ್ಯ ಪದ್ಧತಿ' ಗೆ ಅನುಗುಣವಾಗಿ ಸೃಜನಶೀಲತೆಯಿಂದ ಪುನರ್ ನಿರ್ಮಿಸುತ್ತಿದ್ದರು.

ಪಂಪನ ನಂತರ ಸುಮಾರು ನೂರುವರ್ಷಗಳ ನಂತರ ರಾಜರಾಜನರೇಂದ್ರನ ಅಪೇಕ್ಷೆಯಂತೆ ನನ್ನಯ ತೆಲುಗಿನಲ್ಲಿ, ಮಹಾಭಾರತವನ್ನು ರಚಿಸಿದ. ಆದರೆ ಆತನು ಅದನ್ನು ಪೂರ್ಣಗೊಳಿಸಲಾರದೆ ಹೋದ. ಅಪೂರ್ಣವಾದ ಮಹಾಭಾರತವನ್ನು ನನ್ನಯನನಂತರ ಸುಮಾರು ಇನ್ನೂರು ವರ್ಷಗಳ ಮೇಲೆ ತಿಕ್ಕನ ಪೂರ್ಣಗೊಳಿಸಿದ. ತಿಕ್ಕನ ಮಹಾಭಾರತವನ್ನು ನನ್ನಯ ಎಲ್ಲಿಯವರೆಗೆ ಬರೆದಿದ್ದನೋ ಅಲ್ಲಿಂದ ಪ್ರಾರಂಭಿಸಿ ಮುಗಿಸಿದ. ಆನಂತರ ಬಂದ ಎರ್ರನನು ಅನುವಾದವಾಗದೆ ಉಳಿದಿದ್ದ ಅರಣ್ಯ ಪರ್ವವನ್ನು ಅನುಸರಿಸಿ ಸಂಪೂರ್ಣ ಆಂಧ್ರ ಮಹಾಭಾರತವನ್ನಾಗಿ ಮಾಡಿದ.

ನನ್ನಯ ತನ್ನ ಕೃತಿಯ ಪ್ರಾರಂಭದಲ್ಲಿ ತಾನೇಕೆ ಮಹಾಭಾರತದ ರಚನೆಯನ್ನು ಪ್ರಾರಂಭಿಸಿದೆ ಎಂಬುದನ್ನು ವಿವರಿಸಿದ್ದಾನೆ. ರಾಜರಾಜನರೇಂದ್ರನು ತನ್ನನ್ನು "ನಿರ್ಮಲವಾದ ಮನಸ್ಸಿನಿಂದ ಅನೇಕ ಪುರಾಣಗಳನ್ನು ಕೇಳಿದೆ, ಧರ್ಮ ಅರ್ಥಶಾಸ್ತ್ರ ಪದ್ಧತಿಗಳನ್ನು ತಿಳಿದುಕೊಂಡೆ. ಉದಾತ್ತ ರಸಭರಿತವಾದ ಕಾವ್ಯ ನಾಟಕಗಳನ್ನು ಆಸ್ವಾದಿಸಿದೆ, ಲೋಕ ಪೂಜ್ಯವಾದ ಶೈವಾಗಮಗಳಲ್ಲಿ ನನ್ನ ಮನಸ್ಸನ್ನು ನೆಲೆಗೊಳಿಸಿದೆ. ಆದರೂ ಸದಾ ಕಾಲ ನನ್ನ ಮನದಲ್ಲಿ ಮಹಾಭಾರತದ 'ಭಾವ' 'ಅಭಿಪ್ರಾಯ'ಗಳೇ ಹಿರಿದಾಗಿ ತೋರುತ್ತಿವೆ. ನನಗೆ ಪ್ರಿಯವಾದ ಐದು ವಿಷಯಗಳಿವೆ ಅವು ಬ್ರಾಹ್ಮಣರನ್ನು ತೃಪ್ತಿಗೊಳಿಸುವುದು, ಮಹಾಭಾರತವನ್ನು ಪ್ರೀತಿಯಿಂದ ಕೇಳುವುದು, ಶಿವನನ್ನು ಧ್ಯಾನಿಸುವುದು, ಹಾಗೂ ಆರಾಧಿಸುವುದು, ನಿರಂತರವಾಗಿ ಸತ್ಪುರುಷರೊಂದಿಗೆ ಇರುವುದು ಮತ್ತು ಸದಾ ದಾನ ಮಾಡುತ್ತಿರುವುದು. ಆದ್ದರಿಂದ ನನ್ನ ವಂಶದಲ್ಲಿ (ಚಾಳುಕ್ಯ ರಾಜರು ಚಂದ್ರ ವಂಶದವರು) ತಮ್ಮ ವಿಮಲ ಸದ್ಗುಣಗಳಿಂದ ಶೋಭಿತರಾಗಿ ಪ್ರಸಿದ್ಧರಾಗಿರುವ ಪಾಂಡವೋತ್ತಮರ ಚರಿತ್ರೆಯನ್ನು, ಯಾವಾಗಲೂ ಕೇಳುತ್ತಿರಬೇಕೆಂಬುದು ನನ್ನ ಅಭೀಷ್ಟೆಯಾಗಿದೆ. ವೇದ ಪಾರಂಗತರಾದ ಬ್ರಾಹ್ಮಣ ಶ್ರೇಷ್ಠರಿಗೆ ನೂರು ಹಸುಗಳನ್ನು ದಾನ ಮಾಡಿದ ಫಲ ಮಹಾಭಾರತವನ್ನು ಕೇಳುವುದರಿಂದ ಪ್ರಾಪ್ತವಾಗುತ್ತದೆ. ನನ್ನ ಮನಸ್ಸು ಭಾರತವನ್ನು ಕೇಳಲು ತವಕಿಸುತ್ತಿದೆ ಆದ್ದರಿಂದ ನನ್ನಯನೇ, ನೀನು ಕೃಷ್ಣದ್ವೈಪಾಯನ ಮುನಿ ವೃಷಭನಿಂದ ಹೇಳಲ್ಪಟ್ಟ ಮಹಾಭಾರತದ ಮೂಲಾರ್ಥ ಸ್ಪಷ್ಟವಾಗುವಂತೆ (ಮಹಾಭಾರತ ಬದ್ಧ ನಿರೂಪಿತಾರ್ಥಮೇರ್ಪಡಂ) ತೆಲುಗಿನಲ್ಲಿ ರಚಿಸು (ತೆಲುಗುನ ರಚಿಯಿಂಪು) ಬಹು ಭಾಷೆಗಳಲ್ಲಿನ, ಬಹು ವಿಧಗಳ ವಿವಿಧ (ಪ್ರಕ್ರಿಯೆಗಳಲ್ಲಿ ಬಂದ) ಮಹಾಭಾರತಗಳನ್ನು ಓದುತ್ತಾ ಮಹಾಭಾರತದ ರಚನೆಯ ಹಿಂದೆ ಇರುವ ವ್ಯಾಸನ ಉದ್ದೇಶವನ್ನು ಅರಿತವರಿಗೆ ಬಹುಯಾಗ ಫಲ ದೊರೆಯುತ್ತದೆ" (ಶ್ರೀ ಮದಾಂಧ್ರ ಮಹಾಭಾರತಮು : ಆದಿ; ೧೦-೧೮ ವಚನ) ಎಂಬುದಾಗಿ ಆಜ್ಞಾಪಿಸಿದನು.

ರಾಜರಾಜ ನರೇಂದ್ರನ ಮೇಲಿನ ಮಾತುಗಳಲ್ಲಿ ತಾನೇಕೆ ಮಹಾಭಾರತವನ್ನೇ ಕೇಳಬೇಕು ಎಂಬುದಕ್ಕೆ ಕಾರಣಗಳಿವೆ. ಅವು ಎರಡು. ಮೊದಲನೆಯದು ಅದು ತನ್ನ ಚಂದ್ರ ವಂಶದವರ ಕಥೆ. ಎರಡನೆಯದು, ಅದರಲ್ಲಿ ವ್ಯಾಸನು ಹೇಳಿರುವ ಧರ್ಮವನ್ನು ತಿಳಿಯುವುದರ ಮೂಲಕ ಸದ್ಗತಿ ಪ್ರಾಪ್ತಿಯಾಗುತ್ತದೆ ಎಂಬುದು. ಆತನಿಗೆ ಕೇವಲ ತನ್ನ ವಂಶದವರ ಚರಿತ್ರೆಯಷ್ಟೇ ಬೇಕಾಗಿಲ್ಲ; ಅನೇಕ ಭಾಷೆಗಳಲ್ಲಿನ, ಹಲವಾರು ಪ್ರಕಾರಗಳಲ್ಲಿನ ಭಾರತಗಳನ್ನು ಓದಿ ಆ ಮೂಲಕ ಅವನ ರಸಗ್ರಹಣ ಮಾಡಿದ್ದಾನೆ. ಅದು ಅವನಿಗೆ ತೃಪ್ತಿನೀಡಿಲ್ಲ. ಅವನು ತನಗೆ ಪ್ರಿಯವಾದ ಐದು ವಿಷಯಗಳನ್ನು ತಿಳಿಸಿದ್ದಾನೆ. ಅವನ್ನು ಮತ್ತು ವ್ಯಾಸ ಮಹಾಭಾರತದ ಮೂಲಕ ಹೇಳಿದ ಧರ್ಮವನ್ನು ಪಾಂಡವರ ಕಥೆಯೊಂದಿಗೆ ಕೇಳಬೇಕಿದೆ. – ಈ ಅಂಶಗಳು ನನ್ನಯನಿಗೆ ತನ್ನ ಅನುವಾದ ಹೇಗಿರಬೇಕೆಂಬುದನ್ನು ನಿರ್ದೇಶಿಸಿದೆ.

ನನ್ನಯನಿಗೆ ಮಹಾಭಾರತದ ವಿರಾಟ್ ಸ್ವರೂಪದ ಅರಿವಿದೆ. ಅದನ್ನು ಹಾಗೆಯೇ ತೆಲುಗಿಗೆ ತರುವುದು ಅಸಾಧ್ಯವೆಂಬುದನ್ನು ರಾಜರಾಜನರೇಂದ್ರನಿಗೆ ಹೀಗೆ ತಿಳಿಸುತ್ತಾನೆ. "ನಕ್ಷತ್ರಗಳನ್ನು ಎಣಿಕೆಮಾಡುವುದು, ಸಕಲ ವೇದಶಾಸ್ತ್ರ

ಸಾರಗಳನ್ನು ಅರಿತು ಮನದಟ್ಟು ಮಾಡಿಕೊಳ್ಳುವುದು, ಕೇವಲ ಬೌದ್ಧಿಕ ದೈಹಿಕಬಲದಿಂದ ದುರ್ಗಮವಾದ ಆಳ ಜಲವಿರುವ ಭಾರತ ಭಾರತೀ ಸಮುದ್ರವನ್ನು ಈಜುವುದು ಆ ಬ್ರಹ್ಮನಿಂದಾದರೂ ಸಾಧ್ಯವೇ" ಎಂಬುದಾಗಿ ಅಸಹಾಯಕತೆಯನ್ನು ತಿಳಿಸಿ " ಆದರೂ ನಿನ್ನ ಆಜ್ಞೆಯ ಮೇರೆಗೆ, ವಿದ್ವಜ್ಜನ ಅನುಗ್ರಹದಿಂದ ನನಗೆ ತಿಳಿದ ರೀತಿಯಲ್ಲಿ ಈ ಕಾವ್ಯವನ್ನು ರಚಿಸುತ್ತೇನೆ" ಎಂಬುದಾಗಿ ಹೇಳಿ ಕಾವ್ಯ ರಚನೆಗೆ ತೊಡಗುತ್ತಾನೆ.

ಪಂಪನು ಜಿನಸೇನಾಚಾರ್ಯರ ಮಹಾಪುರಾಣವನ್ನು ಈಜಲು ನಾನೇಕೆ ತೊಡಗಿದೆನೋ ಎಂದು ಆದಿಪುರಾಣದಲ್ಲಿ ಹೇಳುವ ಮಾತನ್ನು, ವ್ಯಾಸ ಭಾರತವನ್ನು ನಾನು "ಎನ್ನ ಅಜವಮಾಟ್ಕೆ" ಯಿಂದ ಹೇಳುತ್ತೇನೆ ಎಂಬುದಾಗಿ ವಿಕ್ರಮಾರ್ಜುನ ವಿಜಯದಲ್ಲಿ ಹೇಳುವ ಮಾತುಗಳನ್ನು ಇಲ್ಲಿ ಸ್ಮರಿಸಬೇಕು.

[ಮೂಲಕವಿಯ ಕೃತಿಯನ್ನು ಉದ್ದೇಶವನ್ನು ಸಂಪೂರ್ಣವಾಗಿ ಅನುವಾದದಲ್ಲಿ ತರುವುದು ಅಸಾಧ್ಯ. ಆದ್ದರಿಂದ ಮೂಲ ಕಥೆಯನ್ನು ತನ್ನ ಸಮಕಾಲೀನ ಪರಿಸ್ಥಿತಿಗೆ, ಅನುವಾದದ ಉದ್ದೇಶಕ್ಕೆ ಅನುಗುಣವಾಗಿ ಸಂಕ್ಷಿಪ್ತಗೊಳಿಸಿ, ವಿಸ್ತಾರಗೊಳಿಸಿ ಕೆಲವು ಭಾಗಗಳನ್ನು ಬಿಟ್ಟು ಅನುಸೃಷ್ಟಿ ಮಾಡುತ್ತಿದ್ದರು.]

ನನ್ನಯನು ಮಹಾಭಾರತವನ್ನು ತೆಲುಗಿನಲ್ಲಿ ಹೇಳುವುದಕ್ಕೆ ಇದ್ದ ಕಾರಣ ಪಾಂಡವರ ಕಥೆಯನ್ನು ವ್ಯಾಸನು ಮಹಾಭಾರತದ ಮೂಲಕ ಹೇಳಿದ ಧರ್ಮವನ್ನು, ಧರ್ಮಸೂಕ್ಷ್ಮಗಳನ್ನು ನಿರೂಪಿಸುವುದಾಗಿದೆ. ಆದ್ದರಿಂದಲೇ ಅವನು ವ್ಯಾಸರು ನಿರೂಪಿಸಿದ ಎಲ್ಲಾ ಉಪಾಖ್ಯಾನಗಳನ್ನು ಧರ್ಮಾಧರ್ಮವಿಚಾರಗಳನ್ನು ತೆಲುಗು ಭಾಷೆಯಲ್ಲಿ ಹೇಳಿದ್ದಾನೆ. ಅವನು ಈ ರೀತಿಯ ನಿರೂಪಣಾ ಶಕ್ತಿ ತನಗೆ ದೊರಕಬೇಕೆಂದು ವಾಲ್ಮೀಕಿಯ ಕವಿತಾಂಶ, ವ್ಯಾಸರ ಜ್ಞಾನಾಂಶವು ತನ್ನಲ್ಲಿ ನೆಲೆಗೊಳ್ಳಬೇಕೆಂದು, ಬೇಡುತ್ತಾನೆ.

ನನ್ನಯ ಕಥಾ ನಿರೂಪಣೆಯಲ್ಲಿ ಮೂಲ ವ್ಯಾಸನನ್ನೇ ಅನುಸರಿಸಿದ್ದಾನೆ. ಮೂಲ ಭಾರತದಲ್ಲಿರುವಂತೆಯೇ ತಾನು ಮುಂದೆ ನಿರೂಪಿಸಲಿರುವ ಮಹಾಭಾರತದ ಕಥೆಯ ಪರ್ವಾನುಕ್ರಮಣಿಕೆಯನ್ನು ಹೇಳಿದ್ದಾನೆ. ಈ ರೀತಿ ಪರ್ವಾನುಕ್ರಮಣಿಕೆಯನ್ನು ನನ್ನಯನು ಹೇಳಿರುವುದರಿಂದ, ಆತನಿಂದ ಪೂರ್ಣವಾದ ಭಾರತವನ್ನು ಅನುವಾದಿಸಲು ತಿಕ್ಕನ ಮತ್ತು ಎರ್ರನನಿಗೆ ನೆರವಾಯಿತು. ನನ್ನಯನ ಈ ಅನುವಾದಯೋಜನೆ ಮೂಲಕ್ಕೆ ಅದೆಷ್ಟು ಹತ್ತಿರವಾಗಿದೆ ಎಂದರೆ ಸುಕ್ತಂಕರರು ವ್ಯಾಸ ಭಾರತವನ್ನು ಸಂಪಾದಿಸುವಾಗ, ದಾಕ್ಷಿಣಾತ್ಯ ಪಾಠಕ್ಕೆ ತೆಲುಗಿನ ನನ್ನಯನ ಪಾಠವನ್ನು ಪ್ರಮಾಣವಾಗಿ ಸ್ವೀಕರಿಸಿದರು.

ನನ್ನಯ ತನ್ನ ಭಾರತವನ್ನು ಪರ್ವಗಳಾಗಿ ವಿಂಗಡಿಸಿಕೊಂಡು, ಅವನ್ನು ಆಶ್ವಾಸಗಳಾಗಿ ವಿಭಜಿಸಿ ಕೊಂಡಿದ್ದಾನೆ. ಪ್ರತಿಯೊಂದು ಅಶ್ವಾಸವನ್ನೂ ರಾಜರಾಜನರೇಂದ್ರನಿಗೆ ಸಂಬಂಧಿಸಿ ಕಥೆ ಪ್ರಾರಂಭಿಸಿ, ಆತನ ಸಂಭೋದನೆಯೊಂದಿಗೆ ಆಶ್ವಾಸವನ್ನು ಮುಗಿಸುತ್ತಾನೆ. ವಿರಾಟ ಪರ್ವದಿಂದ ಅನುವಾದವನ್ನು ಮುಂದುವರಿಸಿದ ತಿಕ್ಕನ ನನ್ನಯನು ಪದ್ಧತಿಯನ್ನೇ ಅನುಸರಿಸಿ, ಪ್ರತಿ ಅಶ್ವಾಸದ ಪ್ರಾರಂಭ ಮತ್ತು ಕೊನೆಯಲ್ಲಿ ತನ್ನ ಪ್ರಿಯ ದೈವವಾದ ಹರಿಹರನಾಥನನ್ನು ಸಂಭೋಧಿಸಿದ್ದಾನೆ. ಅರಣ್ಯ ಪರ್ವದ ಉಳಿದಭಾಗಗಳನ್ನು ಅನುವಾದಿಸಿದ ಎಜಿಜನ ಮಾತ ಆಶ್ವಾಸದಲ್ಲಿ ಏಕ ಸೂತ್ರತೆಯನ್ನು ತರಲು ರಾಜರಾಜನನ್ನೇ ಸಂಬೋಧಿಸಿದ್ದಾನೆ.

ಈ ಮೂವರ ಅನುವಾದದಲ್ಲಿ ಅವರವರ ಪ್ರತ್ಯೇಕ ಶೈಲಿಯ ಛಾಪು ಕಂಡು ಬಂದರೂ ನನ್ನಯನು ರೂಪಿಸಿದ ಯೋಜನೆಗೆ ಅನುಗುಣವಾಗಿಯೇ ಅವರು ಮಹಾಭಾರತವನ್ನು ಮುಂದುವರಿಸಿದ್ದಾರೆ. ಆಂಧ್ರಮಹಾಭಾರತದಲ್ಲಿ ವರ್ಣನೆಗಳು ಇವೆ. ಆದರೆ ಅವು ಯಾವುವೂ ವರ್ಣನೆಗಾಗಿ, ವರ್ಣನೆಯಾಗಿ ಬಂದಿಲ್ಲ. ಅದರಲ್ಲಿ ನಾವು ಅಷ್ಟಾದಶ ವರ್ಣನೆಗಳನ್ನು ಕಾಣುವುದೇ ಇಲ್ಲ ಹೀಗಾಗಿ ಪಂಪನ ಆದಿಪುರಾಣದಂತೆಯೇ ಆಂಧ್ರಮಹಾಭಾರತವೂ ವಸ್ತು ಕಾವ್ಯವೇ ಆಗಿದೆ.

ರನ್ನ ಮಹಾಭಾರತದ ಗದಾಯುದ್ಧವನ್ನು ಕಥಾವಸ್ತುವನ್ನಾಗಿ ಸ್ವೀಕರಿಸಿ ಸಿಂಹಾವಲೋಕನ ಕ್ರಮದಲ್ಲಿ ಭಾರತದ ಕಥೆಯನ್ನು ಹೇಳಿದ್ದಾನೆ. ಇಡೀ ಕಥಾ ವಸ್ತುವಿನ ನಿರೂಪಣೆಯೂ ರನ್ನನದೇ ಆಗಿದ್ದು ಸ್ವತಂತ್ರಕೃತಿಯಾಗಿದೆ. ರನ್ನ ಅದನ್ನು ವಸ್ತು ಕಾವ್ಯವನ್ನಾಗಿ ರಚಿಸಿದ್ದಾನೆ. ಮಲ್ಲ ಕವಿ ಸಂಯೋಜಿತ ಕಾವ್ಯ ಸಾರವನ್ನು ಸಂಪಾದಿಸಿದ ಶ್ರೀ ಎನ್. ಅನಂತರಂಗಾಚಾರ್

ಅವರು ತಮ್ಮ ಸಂಪಾದಕರ ಮಾತಿನಲ್ಲಿ 'ಸೂಕ್ತ ಸುಧಾರ್ಣವ'ದಂತೆ ಇದರಲ್ಲಿ ರನ್ನನ 'ಗದಾಯುದ್ಧ' ಅಥವಾ 'ಸಾಹಸಭೀಮವಿಜಯ' ದಿಂದ ಪದ್ಯಗಳ ಉದಾಹರಣೆಗಳು ಇಲ್ಲದೆ ಇರುವುದು ಆಶ್ಚರ್ಯಕರವಾಗಿದೆ. ಮೊದಲು ಆತನ ಹೆಸರಿದೆ. ಅವನ 'ಅಜಿತಪುರಾಣ' ದಿಂದ ಪದ್ಯಗಳು ಉದ್ಧೃತವಾಗಿದೆ. 'ಕಾವ್ಯಸಾರ' ದ ಸಂಕಲನದ ಕಾಲಕ್ಕೆ 'ಗದಾಯುದ್ಧ' ಪರಿಚಯವಾಗಿರಲಿಲ್ಲವೆ? ಅಥವಾ ಅದರ ಪ್ರತಿಗಳು ಉಪಲಬ್ಧವಾಗಿರಲಿಲ್ಲವೇ? ಗ್ರಂಥವು ಸಂಯೋಜಕರ ಮೆಚ್ಚಿಗೆಯನ್ನು ಪಡೆದಿರಲಾರದೆಂಬುದು ಮಾತ್ರ ಅಸಂಭವ ! (ಮಲ್ಲಕವಿ ಸಂಯೋಜಿತ ಕಾವ್ಯಸಾರಂ ಸಂ : ಎನ್. ಅನಂತರಂಗಾಚಾರ್. ಪು XI ಕನ್ನಡ ಸಾಹಿತ್ಯ ಪರಿಷತ್ತು. ೧೯೭೩) ಮಲ್ಲ ಕವಿ ತಾನು ಪರಿಶೀಲಿಸಿದ ಪ್ರಾಚೀನ ವರ್ಣಕ ಗ್ರಂಥಗಳಿಂದ ಉತ್ತಮವಾದ ಅಷ್ಟಾದಶ ವರ್ಣನೆಗಳನ್ನು ಆಯ್ದು ಸಂಕಲಿಸಿದ್ದಾನೆ. ಮಲ್ಲಿಕಾರ್ಜುನ ತನ್ನ ಸೂಕ್ತಿ ಸುಧಾರ್ಣವದಲ್ಲಿಯೂ ಇದೇ ರೀತಿಯಲ್ಲಿ ಸಂಕಲಿಸಿದ್ದಾನೆ. ಈ ಎರಡೂ ಕಾವ್ಯ ಸಂಗ್ರಹಗಳಲ್ಲಿನ ಪದ್ಯಗಳು ವರ್ಣಕ ಕಾವ್ಯಗಳಿಂದಲೇ ಆಯ್ಕೆ ಮಾಡಿರುವಂಥವು. ರನ್ನನ ಗದಾಯುದ್ಧ ವರ್ಣಕ ಕಾವ್ಯವಲ್ಲ. ಅದರಿಂದಾಗಿ ಅದರಲ್ಲಿ ಯಾವುದೇ ರೀತಿಯ ಅಷ್ಟಾದಶ ವರ್ಣನೆಗಳಿಲ್ಲ. ಆದ್ದರಿಂದ ಸಂಕಲನಕಾರರಿಗೆ ಅದಕ್ಕೆ ಸಂಬಂಧಿ ಪದ್ಯಗಳು ದೊರೆತಿಲ್ಲ. ಅಜಿತಪುರಾಣದಲ್ಲಿ ಅಷ್ಟಾದಶ ವರ್ಣನೆಗಳಿರುವುದರಿಂದ ಅಂಥ ಪದ್ಯಗಳನ್ನು ಆಯ್ದು ಕೊಂಡಿದ್ದಾರೆ. ಇದು ಕಾರಣವೇ ಹೊರತು ಗದಾಯುದ್ಧ ಸಂಕಲನಕಾರರಿಗೆ ದೊರೆಯಲಿಲ್ಲವೆಂದಲ್ಲ. ಆದಿಪುರಾಣದಿಂದಲೂ ಕೆಲವು ಪದ್ಯಗಳನ್ನು ಆಯ್ಕೆ ಮಾಡಲಾಗಿದೆ. ಆದಿಪುರಾಣದಲ್ಲಿನ ತನ್ನ ಉದ್ದೇಶಕ್ಕೆ ಅನುಕೂಲವಾಗುವಂಥ ಪದ್ಯಗಳನ್ನು ಸಂಕಲನಕಾರ ಆಯ್ಕೆಮಾಡಿಕೊಂಡಿದ್ದಾನೆ.

ನನ್ನಯನ ಹಾಗೆ ಕನ್ನಡದ ಬ್ರಾಹ್ಮಣ ಕವಿಗಳು ಯಾರೂ ವ್ಯಾಸನ ಭಾರತವನ್ನು ಅನುವಾದ ಮಾಡಲಿಲ್ಲ. ಬ್ರಾಹ್ಮಣ ಕವಿಗಳು ರಚಿಸಿದ ಕಾವ್ಯಗಳನ್ನು ಪರಿಶೀಲಿಸಿದರೆ ಧರ್ಮ ನಿರಪೇಕ್ಷವಾದ ವಸ್ತುಗಳನ್ನು ಆಶ್ರಯಿಸಿ ಕಾವ್ಯ ರಚನೆ ಮಾಡಿರುವುದು ಕಂಡು ಬರುತ್ತದೆ. ರುದ್ರಭಟ್ಟನ ಜಗನ್ನಾಥ ವಿಜಯವೊಂದೇ ಇದಕ್ಕೆ ಅಪವಾದ. ಅವರು ಕಾವ್ಯಗಳನ್ನು ಹೇಗೆ ರಚಿಸಿದ್ದಾರೆಂಬುದನ್ನು ಪರಿಶೀಲಿಸೋಣ.

ಬಾಣನ ಕಾದಂಬರಿ ಸಂಸ್ಕೃತ ಭಾಷೆಯಲ್ಲಿ ಪ್ರೌಢವಾದ ಕಾವ್ಯ, ವಿವಿಧ ಅಲಂಕಾರಗಳಿಂದ, ಸಮಾಸ ಪದಗಳಿಂದ, ವಾಗರ್ಥಗಳಿಂದ ಕೂಡಿದ, ಗದ್ಯ ಪ್ರಧಾನವಾದ ಕಾವ್ಯವದು. ನಿಜಕ್ಕೂ ಅದು ಕಬ್ಬಿಣದ ಕಡಲೆ! ಅಂಥಾ ಕಾವ್ಯವನ್ನು ಮೊದಲನೆಯ ನಾಗವರ್ಮ ಕನ್ನಡಿಸಿದ್ದಾನೆ. ಮೂಲ ಗದ್ಯರೂಪದಲ್ಲಿದ್ದರೆ ನಾಗವರ್ಮ ಅದನ್ನು ಕನ್ನಡ ಕಾವ್ಯ ಸಂಪ್ರದಾಯಕ್ಕನುಗುಣವಾಗಿ ಚಂಪೂ ಶೈಲಿಯಲ್ಲಿ ನಿರೂಪಿಸಿದ್ದಾನೆ. ನಾಗವರ್ಮನ ಪದ್ಯಗಳು ಮೂಲ ಶೈಲಿಯ ಪ್ರಭಾವದಿಂದಲೋ ಏನೋ ಗದ್ಯದಂತೆಯೇ ನಡೆಯುತ್ತವೆ. ಕೆಲವು ಕಡೆಯಂತೂ ಪದ್ಯವನ್ನು ಅನ್ವಯಮಾಡಿಕೊಂಡು ಅರ್ಥ ಮಾಡಿಕೊಳ್ಳುವ ಶ್ರಮವನ್ನುಂಟುಮಾಡದೆ ಸುಲಭವಾಗಿ ಗ್ರಾಹ್ಯವಾಗಿವೆ. ಹಲವಾರು ಕಡೆಗಳಲ್ಲಿ ನಾಗವರ್ಮ ಬಾಣನು ಪ್ರಯೋಗಿಸಿರುವ ಸಮಾಸಗಳನ್ನು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ, ಕೆಲವು ಕಡೆ ಯಥಾವತ್ತಾಗಿ ಸ್ವೀಕರಿಸಿ ಕಥೆಯನ್ನು ಮುನ್ನಡೆಸುತ್ತಾನೆ. ಮೂಲದಲ್ಲಿರುವ ವರ್ಣನೆಗಳನ್ನು ಕೈಬಿಟ್ಟಿದ್ದಾನೆ; ಸಂಕ್ಷೇಪಿಸಿದ್ದಾನೆ. ಈ ರೀತಿ ಸಂಗ್ರಹವಾಗಿ ಸಂಕ್ಷಿಪ್ತವಾಗಿ ತನ್ನ ಕಾಲದ ಓದುಗರನ್ನ ಗಮನದಲ್ಲಿಟ್ಟುಕೊಂಡು ಅವನು ಕಾವ್ಯ ರಚನೆ ಮಾಡಿದ್ದಾನೆಂದು ಹೇಳಬಹುದು. ಇದೇ ಕಾವ್ಯಗಳನ್ನು ನಾವು ಇಂದು ಸಂಗ್ರಹ ರೂಪವಾಗಿ ಓದುತ್ತಿಲ್ಲವೆ? ಹಾಗೆ.

ನಾಗವರ್ಮ ತನ್ನ ಕಾವ್ಯವನ್ನು ಇತರ ಚಂಪೂ ಕಾವ್ಯಗಳ ಹಾಗೆ ಆಶ್ವಾಸಗಳಾಗಿ ವಿಂಗಡಿಸಿ ಹೇಳದೆ ಎರಡು ಭಾಗಗಳಾಗಿ ವಿಂಗಡಿಸಿ ಹೇಳಿದ್ದಾನೆ. ಮೂಲದಲ್ಲಿರುವಂತೆಯೇ ಪೂರ್ವಭಾಗ ಕಾದಂಬರಿ, ಉತ್ತರ ಭಾಗ ಕಾದಂಬರಿ ಎಂದು ಎರಡು ಭಾಗಮಾಡಿದ್ದಾನೆ. ಆದರೆ ಈ ವಿಭಾಗವು ಸಂಸ್ಕೃತ ಕಾದಂಬರಿಯಂತಿಲ್ಲ. ಮೂಲ ಕಾದಂಬರಿಯಲ್ಲಿ ಬಾಣಭಟ್ಟನು ಪಾತ್ರರೇಖೆ ಬಂದು ಚಂದ್ರಾಪೀಡನಿಗೆ ಕಾದಂಬರಿಯ ವಿರಹಾವ್ಯವಸ್ಥೆಯನ್ನು ವರ್ಣಿಸುವವರೆಗಿನ ಭಾಗವನ್ನು ಪೂರ್ವ ಕಾದಂಬರಿ ಎಂದೂ, ಬಾಣಭಟ್ಟನ ಮಗ ಭೂಷಣಭಟ್ಟನು ಕಥೆಯನ್ನು ಮುಂದುವರಿಸಿ ಬರೆದ ಕಥೆಯ ಭಾಗವನ್ನು ಉತ್ತರ ಕಾದಂಬರಿಯಾಗಿ ಅದನ್ನು ಬರೆದವರನ್ನು ಗಮನದಲ್ಲಿಟ್ಟುಕೊಂಡು ಮಾಡಿದರೆ ನಾಗವರ್ಮ ಹಾಗೆ ಮಾಡದೆ ಇಡೀ ಕಥೆಯನ್ನು ಏಕ ಕವಿ ಕೃತವೆಂದೇ ಸ್ವೀಕರಿಸಿ ಚಂದ್ರಾಪೀಡ ಕಾದಂಬರಿಯನ್ನು ಕಾಣುವವರೆಗಿನ ಭಾಗವನ್ನು

ಪೂರ್ವಭಾಗವೆಂದೂ ಮುಂದಿನದನ್ನು ಉತ್ತರಭಾಗವೆಂದೂ ಹೇಳಿ ಪದ್ಯಗಳಿಗೆ ಪ್ರತ್ಯೇಕವಾಗಿ ಸಂಖ್ಯೆ ನೀಡಿದ್ದಾನೆ. ತನ್ನ ಕಾವ್ಯದ ಬಗ್ಗೆ ಕೊನೆಯಲ್ಲಿ ಈ ರೀತಿ ಹೇಳುತ್ತಾನೆ.

**ಇದು ಚೋದ್ಯಂ ಕವಿಹೃದ್ಗತಂ ನವರಸಂ ನಿರ್ದೋಷಿಮೆಂದಿಗಳಾ**
**ದುದು ಕಾದಂಬರಿ ಸೇವ್ಯಮಾದುದನಿತುಂ ತಾನೆಯ್ದೆ ಭೂಭಾಗದೊಳ್**
**ವಿದಿತ ಶ್ರೀ ಕವಿ ನಾಗವರ್ಮನ ವಚಸ್ಸಂದೋಹದಿಂದೋಷಿಮೊಂ**
**ದದಲಂಕಾರದ ವಸ್ತು ಬಂಧಮಿದು ತಾನೇಂ ಮಾಡದೇಂಗೆಯ್ಯೆದೋ**

ಈ ಕಾವ್ಯ ವಿದ್ವಾಂಸರ ಮನಸ್ಸಿಗೆ ಆನಂದವನ್ನುಂಟು ಮಾಡುವಂಥದ್ದು: ಅದ್ಭುತವಾದುದು. ಕಾವ್ಯ ದೋಷವೆಂಬುದೇ ಇಲ್ಲದ ನವರಸಭರಿತವಾಗಿದ್ದು ನಿರ್ದೋಷವಾಗಿರುವುದು. ಈ ಕಾರಣದಿಂದಲೇ ಲೋಕದಲ್ಲಿ ಈ ಕಾವ್ಯ ಆಸ್ವಾದಿಸಲು ಯೋಗ್ಯವಾದುದಾಗಿದೆ. ವಿದಿತಶ್ರೀಕವಿ ನಾಗವರ್ಮನ ವಚಸ್ಸಂದೋಹದಿಂದ, ದೋಷವನ್ನೇ ಹೊಂದಿರದ 'ವಸ್ತು ಬಂಧ' ವಾದ ಈ ಕಾವ್ಯ ಏನನ್ನು ತಾನೇ ನೀಡದು ಎನ್ನುತ್ತಾನೆ. ಇಲ್ಲಿ ತನ್ನ ಕಾವ್ಯವನ್ನು ನಾಗವರ್ಮ 'ವಸ್ತುಬಂಧ' ಎಂಬುದಾಗಿ ಕರೆದುಕೊಂಡಿದ್ದಾನೆ. ಆದ್ದರಿಂದ ಕಥೆಯ ಓಟಕ್ಕೆ ಅಡ್ಡಿಯಾಗುವ, ಪ್ರಬಂಧ ವರ್ಣಕ ಕಾವ್ಯಗಳಲ್ಲಿ ಬರಲೇಬೇಕಾದ ಅಷ್ಟಾದಶ ವರ್ಣನೆಗಳನ್ನು ನಾಗವರ್ಮ ತಂದಿಲ್ಲ. ಕಥಾಸಂದರ್ಭದಲ್ಲಿಯೇ ಬರುವ ಪರ್ವತ, ಕುಮಾರೋದಯ, ಚಂದ್ರೋದಯ ವರ್ಣನೆಗಳಿಗೆ ಸಂಬಂಧಿಸಿದ ಪದ್ಯಗಳನ್ನು ಆಯ್ಕೆ ಮಾಡಿ ಕಾವ್ಯಸಾರದಲ್ಲಿ ಉಲ್ಲೇಖಿಸಲಾಗಿದೆ. ಇದೇ ಅಭಿಪ್ರಾಯವನ್ನು ಕಾವ್ಯಸಾರ ಮತ್ತು ಸೂಕ್ತಿ ಸುಧಾರ್ಣವದಲ್ಲಿ ಕಂಡು ಬರುವ ಆದಿಪುರಾಣದ ಪದ್ಯಗಳ ಬಗೆಗೂ ಹೇಳಬಹುದಾಗಿದೆ.

ವಸ್ತುಕೃತಿ ಎಂದರೆ ವರ್ಣನೆಗಳು ಇರಬಾರದೆಂದಲ್ಲ. ಆದರೆ ಅವು ಕಥಾ ಗರ್ಭದಲ್ಲಿಯೇ ಸಹಜವಾಗಿ ಬಂದಿರಬೇಕು. ವರ್ಣನೆಯನ್ನು ತರಬೇಕು ಎಂಬ ಉದ್ದೇಶದಿಂದ ಕವಿ ಒಂದು ಪ್ರಸಂಗವನ್ನು ಕಲ್ಪಿಸಿ ತರುವುದಿಲ್ಲ ಎಂಬುದು ಮುಖ್ಯ.

ಮತ್ತೊಬ್ಬ ಬ್ರಾಹ್ಮಣ ಕವಿ ಚೌಂಡರಸಃ ಇವನು ದಂಡಿಯ ದಶಕುಮಾರ ಚರಿತೆಯನ್ನು ಅನುವಾದ ಮಾಡಿದ್ದಾನೆ.

ಚೌಂಡರಸ ತನ್ನ ಅನುವಾದದ ಬಗ್ಗೆ ಹೇಳಿರುವ ಮಾತುಗಳು ತುಂಬಾ ಸ್ವಾರಸ್ಯವಾಗಿದೆ.

**ಮೊದಲೊಳ್ ದಂಡಿ ಕವೀಶ್ವರಂ ದಶಕುಮಾರಾ ಖ್ಯಾತ ಚಾರಿತ್ರಮಂ**
**ಪದೆಪಿಂ ಸಂಸ್ಕೃತ ಭಾಷೆಯಿಂ ರಚಿಸಿದಂ ಧಾತ್ರೀ ಜನ ಸ್ತೋತ್ರ ಸ**
**ಮ್ಮದವಪ್ಪಂತದನಾಂ ಪ್ರಸಿದ್ಧಿಯವತಾರಾಕಾರಮಂ ತಾಳ್ದಿ ಸ**
**ದ್ವಿದಿತಂ ರಂಗದೊಳಾಡಿ ತೋರ್ಪ್ಪ ತೆಜದಿಂ ಪೇೞ್ವೆಂ ಸುಕವಾಚಕದಿಂ ॥ ೧-೧೭. ॥**

ಈ ಹಿಂದೆಯೇ ದಂಡಿಯೆಂಬ ಕವೀಶ್ವರನು ಸಂಸ್ಕೃತ ಭಾಷೆಯಲ್ಲಿ ಲೋಕದ ಜನ ಮೆಚ್ಚುವಂತೆ ದಶ ಕುಮಾರರ ಪ್ರಸಿದ್ಧವಾದ ಕತೆಯನ್ನು ಅಂದವಾಗಿ ಹೇಳಿದ್ದಾನೆ. ಅದೇ ಕಥೆಯನ್ನು ನಾನು ರಂಗಭೂಮಿಯಲ್ಲಿ ನಟನು ಬೇರೆ ಬೇರೆ ವೇಷಗಳನ್ನು ಧರಿಸಿ, ಅಭಿನಯಿಸಿ ತೋರಿಸುವಂತೆ ಸುಂದರವಾದ ಕರ್ಣಾಟಕ ಭಾಷೆಯಲ್ಲಿ ಹೇಳುತ್ತೇನೆ ಇಲ್ಲಿ ಚೌಂಡರಸ ನೀಡಿರುವ ಉಪಮೆ ತುಂಬಾ ಔಚಿತ್ಯದಿಂದ ಕೂಡಿದೆ. ನಾಟಕಕಾರ ಬರೆದ ನಾಟಕವನ್ನು ಸಹೃದಯರಿಗೆ ನಟರು ತಮ್ಮ ನಟನೆಯ ಮೂಲಕ ತಲುಪಿಸುತ್ತಾರೆ. ನಾಟಕ ಯಾವಾಗಲೂ ನಟರ ಮೂಲಕವೇ ಸಹೃದಯರಿಗೆ ಸಂವಹನವಾಗುವುದು. ಇಲ್ಲಿ ದಂಡಿಯು ಸಂಸ್ಕೃತದಲ್ಲಿ ಹೇಳಿರುವ ಕಥೆಯನ್ನು ಕನ್ನಡದ ಜನರಿಗೆ ಸಂವಹನ ಮಾಡುತ್ತಿದ್ದಾನೆ. ಬಹುಶಃ ಅನುವಾದದ ಬಗ್ಗೆ ಇಷ್ಟೊಂದು ಸುಂದರವಾದ ಉಪಮೆಯೊಂದಿಗೆ ವ್ಯಾಖ್ಯಾನ ಮಾಡಿರುವುದು ಇದೇ ಮೊದಲು.

ಯಾವುದೇ ಒಂದು ಸಾಹಿತ್ಯ ಕೃತಿ ರೂಪುಗೊಳ್ಳುವುದರ ಹಿನ್ನೆಲೆಯಲ್ಲಿ ಆ ಕಾಲದ ಸಾಂಸ್ಕೃತಿಕ, ಸಾಮಾಜಿಕ ಅಗತ್ಯವಿರುತ್ತದೆ ಎಂಬ ಅಂಶವನ್ನ ನೋಡಿದ್ದೇವೆ. ಪಂಪ, ಕುಮಾರವ್ಯಾಸ, ದೇವಶಿಖಾಮಣಿ, ಅಳಸಿಂಗರಾಚಾರ್ಯರು ಮುಂತಾದವರಿಂದ ಪ್ರತಿಯೊಂದು ಕಾಲದಲ್ಲಿಯೂ ಮಹಾಭಾರತ ಕನ್ನಡಕ್ಕೆ ಅನುವಾದಗೊಳ್ಳುತ್ತಲೇ ಇದೆ. ಡಾ॥ ಎ. ಆರ್. ಕೃಷ್ಣಶಾಸ್ತ್ರಿಯವರು ತಮ್ಮ ವಚನ ಭಾರತದ ಪೀಠಿಕೆಯಲ್ಲಿ ಬರೆದಿರುವಂತೆ ಒಂದೊಂದು ವಾಕ್ಯವನ್ನು ನಮ್ಮ ಹಿಂದಿನ

ಕವಿಗಳು ತಾವು ಅನುವಾದ ಮಾಡುವ ಸಂದರ್ಭದಲ್ಲಿ ಮನನ ಮಾಡಿರಬಹುದಲ್ಲವೇ ಎಂದನ್ನಿಸುತ್ತದೆ. "ಸರಳವಾದ ಹಿಂದಿನ ಗದ್ಯದಲ್ಲಿ ಬರೆದ ಒಂದು ಸಂಪುಟದಲ್ಲಿರುವ, ಜನಸಾಮಾನ್ಯಕ್ಕೆ ನಿಲುಕುವಂಥ ಒಂದು ಕನ್ನಡ ಭಾರತ ಬೇಕಿತ್ತು. ಈ ಅಭಿಪ್ರಾಯ ನಾನು ವಿದ್ಯಾರ್ಥಿಯಾಗಿದ್ದಾಗಲೇ ಇತ್ತು : ಉಪಾಧ್ಯಾಯನಾಗಿದ್ದಾಗ ಅದರ ಅವಶ್ಯಕತೆ ಆಗಾಗ್ಗೆ ತೋರುತ್ತಲೇ ಇತ್ತು. ಆದ್ದರಿಂದ ಸ್ಪಷ್ಟವಾದ ಸೂಚನೆ ಬಂದ ಕೂಡಲೆ ಅದನ್ನು ಮನಸಾರೆ ಕೈಕೊಂಡೆ. ಇದರಲ್ಲಿ ನನ್ನ ಸ್ವಂತಭಾವ ಒಂದೂ ಇಲ್ಲ : ನನ್ನ ಬುದ್ಧಿಯಿಂದ ಎಲ್ಲಾದರೂ ಉತ್ತಮಗೊಳಿಸಹೋದರೆ ಅದು ಕಾಮನಬಿಲ್ಲಿಗೆ ಬಣ್ಣ ಬಳಿದಂತೆ ಅಥವಾ ಪಟ ಬೊಂಬೆಗೆ ಬಟ್ಟೆಹೊಲಿದಂತೆ ಆದೀತೆಂದು ಹೆದರಿ ಮೂಲವನ್ನೇ ಅವಲಂಬಿಸಿ ಕೊಂಡುಹೋಗಿದ್ದೇನೆ. ನನ್ನ ಸಮಸ್ಯೆಯಲ್ಲಾ ಮೂಲದಲ್ಲಿ ಯಾವುದನ್ನು ಬಿಡಬೇಕೆಂಬುದು. ಸುಮಾರು ಐನೂರು ಪುಟಗಳಲ್ಲಿ ಮಹಾಭಾರತದ ಸಾರಾಂಶವೆಲ್ಲಾ ಇರಬೇಕು; ಅದು ಹರಕು ಮುರುಕು ಜೋಡಿಸಿದಂತಾಗದೆ ಹೊಂದಿಕೊಂಡಿರಬೇಕು, ಸಪ್ರಮಾಣವಾಗಿರಬೇಕು. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆಯುವುದಕ್ಕೆ ಮೊದಲು ಮಾಡಿದೆ. (ಡಾ॥ ಎ.ಆರ್. ಕೃಷ್ಣಶಾಸ್ತ್ರಿ ವಚನ ಭಾರತ ಪೀಠಿಕೆ ಪು. ೧೮) ಇಷ್ಟಾಗಿಯೂ ತಾವು ವ್ಯಾಸನಿಗೆ ನ್ಯಾಯ ಒದಗಿಸಿದ್ದೇವೆಂಬ ನಂಬಿಕೆ ಕೃಷ್ಣಶಾಸ್ತ್ರಿಗಳಿಗಿಲ್ಲ. ಏಕೆಂದರೆ ವ್ಯಾಸರು ಮಹಾಸಮುದ್ರದಂತೆ ಗಂಭೀರರು. ಅವರ ಮಹಾಭಾರತ ಯಾರ ಕೈಗೂ ಎಟುಕದಂತದ್ದು. ಆದ್ದರಿಂದ "ಮಹಾಭಾರತದ ಸ್ವರೂಪ ತಿಳಿಯಬೇಕಾದರೆ ಮೂಲ ಸಂಸ್ಕೃತ ಗ್ರಂಥವನ್ನು ಆಮೂಲಾಗ್ರ ಓದಬೇಕು. ಇಲ್ಲವೇ ಅಕ್ಷರಶಃ ಮಾಡಿದ ಒಳ್ಳೆಯ ಭಾಷಾಂತರವನ್ನಾದರೂ ಓದಬೇಕು...... ಮೂಲಗ್ರಂಥವನ್ನು ಓದುವುದಕ್ಕೆ ಅನೇಕರಿಗೆ ಅವಕಾಶವಿಲ್ಲ, ಅನುಕೂಲವಿಲ್ಲ, ತಾಳ್ಮೆ ಇಲ್ಲ. ಅಂಥವರ ಉಪಯೋಗಕ್ಕಾಗಿ ಈ ಗ್ರಂಥ ರಚನೆ. ಈ ಗ್ರಂಥದಲ್ಲಿ ನಾನು ಮುಖ್ಯವಾಗಿಟ್ಟುಕೊಂಡಿರುವುದು ಸಾಹಿತ್ಯ ದೃಷ್ಟಿ. ಸಾಹಿತ್ಯದಲ್ಲಿ ಔಚಿತ್ಯ ಸಾಮಂಜಸ್ಯಗಳು ಮುಖ್ಯ. ಒಂದೊಂದು ರುಚಿ ಒಂದೊಂದು ಕಾಲಕ್ಕೆ ಒಂದೊಂದು ಭಾಗ ಚೆನ್ನಾಗಿರುತ್ತದೆ. ಅದೆಲ್ಲವನ್ನೂ ಸೇರಿಸುತ್ತಾ ಹೋದರೆ, ಗ್ರಂಥ ಗಾತ್ರವೂ ಅದರ ಅವಯವ ಸರಿ ಪ್ರಮಾಣವೂ ಕೈಮೀರಿ ಹೋಗುತ್ತದೆ. ಆದ್ದರಿಂದ ನನ್ನ ಪ್ರಯತ್ನವೆಲ್ಲವೂ ಔಚಿತ್ಯ ಸಾಮಂಜಸ್ಯಗಳು ಇರುವಂತೆ, ಅಡಕ ಮಾಡುವುದರ ಕಡೆಗೆ ಹೆಚ್ಚಾಗಿ ನಡೆದಿದೆ. (ಅದೇ) – ಮೇಲಿನ ಮಾತುಗಳಿಂದ ಡಾ॥ ಎ. ಆರ್. ಕೃಷ್ಣಶಾಸ್ತ್ರಿಯವರು ಯಥಾನುವಾದವನ್ನು ಮಾಡಿಲ್ಲ. ಅವರು ವ್ಯಾಸನ ಮೂಲ ಉದ್ದೇಶವೇನು ಎಂಬುದನ್ನು ತಮ್ಮ ದೃಷ್ಟಿಯಿಂದ ಗ್ರಹಿಸಿ ಕನ್ನಡ ವಚನದಲ್ಲಿ ಭಾರತವನ್ನು ರಚಿಸಿದ್ದಾರೆ. ಇವರು ಪಂಪನ ಹಾಗೆ ಕುಮಾರವ್ಯಾಸನ ಹಾಗೆ ಅನುವಾದ ಸಂದರ್ಭದಲ್ಲಿ ತುಂಬಾ ಸ್ವಾತಂತ್ರ್ಯವನ್ನು ಸ್ವೀಕರಿಸಿಲ್ಲ. ಅಥವಾ ಬೇರೆಯವರಂತೆ ಶ್ಲೋಕ ಶ್ಲೋಕಕ್ಕೆ ಅರ್ಥನೀಡಿಲ್ಲ. ತೆಲುಗಿನ ನನ್ನಯ ಯಾವ ರೀತಿಯಲ್ಲಿ 'ವ್ಯಾಸ ನಿರೂಪಿತಾರ್ಥಕ್ಕೆ ಬದ್ಧನಾಗಿದ್ದನೋ ಅದೇ ರೀತಿ ಕೃಷ್ಣಶಾಸ್ತ್ರಿಗಳು ವ್ಯಾಸನಿಗೆ ಬದ್ಧನಾಗಿದ್ದಾರೆ. ಈ ಒಂದು ವಿಧಾನವನ್ನು ಸಾಹಿತ್ಯೇತರಕೃತಿಗಳ ಅನುವಾದ ಸಂದರ್ಭದಲ್ಲಿ ಅನುಸರಿಸಲಾಗದು. ಅನುವಾದಗೊಳ್ಳಬೇಕಾದ ಕೃತಿಯಾವುದು, ಅದರ ಸ್ವರೂಪ ಮತ್ತು ಸ್ವಭಾವಗಳು ಯಾವ ರೀತಿಯವು. ಯಾರಿಗೆ ಅನುವಾದ ಬೇಕಾಗಿರುವುದು, ಅನುವಾದಿತವಾಗುವ ಕೃತಿಯ ಕಾಲ ಅನುವಾದಗೊಳ್ಳುವ ಕಾಲಕ್ಕೂ ತುಂಬಾ ಕಾಲದ ಅಂತರವಿದ್ದಾಗ, ಸಾಮಾಜಿಕ, ಸಾಂಸ್ಕೃತಿಕ ಅಂತರವಿದ್ದಾಗ ಅಂಥ ಅನುವಾದ ಅನುವಾದಗೊಳ್ಳುವ ಭಾಷೆಯ ಜಾಯಮಾನ, ಸಾಂಸ್ಕೃತಿಕ ಸಾಮಾಜಿಕ ನೇಪಥ್ಯ ಮತ್ತು ಕಾಲಾನುಗುಣವಾಗಿರುತ್ತದೆ. ಇದು ಭಾರತೀಯರು ಅನುವಾದದ ವಿಷಯದಲ್ಲಿ ಅನುಸರಿಸಿರುವ ಪ್ರಧಾನ ನಿಲುವು; ಪದ್ಧತಿ.

ನಮಗೆ ಪಾಶ್ಚಾತ್ಯ ಅನುವಾದ ಪದ್ಧತಿಯ ಪ್ರಭಾವ, ಪರಿಚಯ ಅದೇ ಸರಿಯಾದ ಅನುವಾದ ಪದ್ಧತಿ ಎಂಬುದರ ಅರಿವಿದ್ದರೂ ಸಾಹಿತ್ಯ ಕೃತಿಗಳನ್ನು ಅನುವಾದಿಸುವಾಗ ನಮ್ಮ ಒಲವು ಭಾರತೀಯ ಪದ್ಧತಿಯ ಕಡೆಗೆ ಇರುವಂತೆ ತೋರುತ್ತದೆ. ಆದ್ದರಿಂದಲೇ ರೂಪಾಂತರ, ಸಂಕ್ಷಿಪ್ತ ಅನುವಾದಗಳು ಹೆಚ್ಚು ಜನಪ್ರಿಯವಾಗಿವೆ.

ಹಲವಾರು ಸಂಸ್ಕೃತ ಕಾವ್ಯಗಳನ್ನು ಸಮರ್ಥವಾಗಿ, ಸರಳವಾಗಿ ಕನ್ನಡಕ್ಕಿಳಿಸಿರುವ ಶ್ರೀ ಎಸ್.ವಿ. ಪರಮೇಶ್ವರ ಭಟ್ಟರು. ಅನುವಾದದ ಸಂದರ್ಭದಲ್ಲಿನ ತಮ್ಮ ಅನುಭವಗಳನ್ನು ಮತ್ತು ಆಲೋಚನೆಗಳನ್ನು ಮುನ್ನುಡಿಯಲ್ಲಿ ಮಂಡಿಸಿದ್ದಾರೆ. ಅವುಗಳನ್ನೇ ಇಲ್ಲಿ ಪರಿಶೀಲಿಸುವುದು ಸಮಂಜಸವೆನಿಸುತ್ತದೆ. "ಕಾಳಿದಾಸನನ್ನು ಕನ್ನಡಕ್ಕೆ ತರುವುದು ಕಷ್ಟ. ಭಾಷಾಂತರದ ಇತಿಮಿತಿಗಳನ್ನು ನಾನು ಬಲ್ಲೆ. ಕಳೆದ ಇಪ್ಪತ್ತು ವರ್ಷಗಳಿಂದ ಇಂಗ್ಲೀಷ್ ಮತ್ತು ಸಂಸ್ಕೃತದ ಕೃತಿಗಳನ್ನು ಕನ್ನಡಿಸುವ ಉದ್ಯಮದಲ್ಲಿದ್ದೇನೆ. ಮೂಲದ ಅರ್ಥ ಆಶಯಗಳನ್ನು ಚೆನ್ನಾಗಿ ತಿಳಿದು ಕೊಳ್ಳುವುದಕ್ಕೆ ಅನುವಾದವೂ ಒಂದು ಉಪಾಯ

ಎನ್ನುವುದು ನನ್ನ ಭಾವನೆ. ಈ ದೃಷ್ಟಿಯಿಂದ ಅನುವಾದ ಕಾರ್ಯವನ್ನೆ ತಮ್ಮ ತಮ್ಮ ಕಾಲದ ಬರಹದ ಭಾಷೆಗೆ ಹಾಕಬೇಕಾದ ಅಗತ್ಯವಿದೆ. ಹಿಂದಿನ ಸಾಹಿತ್ಯವನ್ನು ಇಂದಿನ ಜನತೆಗೆ ಮುಟ್ಟಿಸುವ ಒಂದು ಸಾಧನ ಇದು. "ಈ ದೃಷ್ಟಿಯಿಂದಲೂ ನನ್ನ ಅನುವಾದ ಕಾರ್ಯ ನಡೆದಿದೆ. ಮೂಲದಲ್ಲಿ ಇರುವ ಯಾವುದನ್ನೂ ಬಿಡದೆ, ಇಲ್ಲದ ಯಾವುದನ್ನೂ ಸೇರಿಸದೆ, ಮೂಲಕ್ಕೆ ತುಂಬ ಹತ್ತಿರದಲ್ಲಿರುವಂತೆ ಈ ಅನುವಾದವನ್ನು ಅಳವಡಿಸಿದ್ದೇನೆ. ಏನು ಮಾಡಿದರೂ ಮೂಲ ಮೂಲವೇ. ಅನುವಾದ ಅನುವಾದವೇ. ಆದರೆ ಕಾಳಿದಾಸನಂತಹವರ ಕೃತಿಗಳನ್ನು ಓದುವುದಕ್ಕೆ ಆಗದೆ ಇರುವವರಿಗೆ ಈ ಅನುವಾದ ಈ ಮಹಾ ಕವಿಯ ವ್ಯಕ್ತಿತ್ವ ಮತ್ತು ಕೃತಿಗಳ ವಿಷಯದಲ್ಲಿ ತಕ್ಕ ಮಟ್ಟಿಗೆ ತಿಳಿವನ್ನು ನೀಡಬಹುದೆಂದು ಸಮಾಧಾನದಿಂದ ಈ ಕಾರ್ಯದಲ್ಲಿ ನಿಮಿತ್ತ ಮಾತ್ರನಾದ ನಾನು ಲೇಖನಿಯನ್ನು ಕೆಳಗಿಡುತ್ತಿದ್ದೇನೆ" (ಎಸ್.ವಿ ಪರಮೇಶ್ವರಭಟ್ಟ. ಕಾಳಿದಾಸ ಮಹಾ ಸಂಪುಟ-ಬಿನ್ನಹ)

ಶ್ರೀ ಪರಮೇಶ್ವರ ಭಟ್ಟರ "ಮೂಲದಲ್ಲಿ ಇರುವ ಯಾವುದನ್ನೂ ಬಿಡದೆ, ಇಲ್ಲದ ಯಾವುದನ್ನೂ ಸೇರಿಸದೆ" ಎಂಬ ಮಾತುಗಳಲ್ಲಿ ಭಾರತೀಯ ಪದ್ಧತಿಯ ಅನುವಾದದ ಪ್ರಸನ್ನತೆಯಿದೆ. "ಮೂಲಕ್ಕೆ ತುಂಬ ಹತ್ತರದಲ್ಲಿ ಇರುವಂತೆ ಈ ಅನುವಾದವನ್ನೇ ಅಳವಡಿಸಿದ್ದೇನೆ". ಎಂಬ ಮಾತಿನಲ್ಲಿ ಪಾಶ್ಚಾತ್ಯ ಪದ್ಧತಿಯಿದೆ. ಇಷ್ಟಾಗಿಯೂ ಪರಮೇಶ್ವರ ಭಟ್ಟರಿಗೆ ಇದೇ ಸರಿಯಾದ ಸೂಕ್ತವಾದ ಅನುವಾದ ಎಂಬ ಭರವಸೆಯಿಲ್ಲ. ಆ ಭರವಸೆ ಇಲ್ಲದಿರುವುದಕ್ಕೆ ಕಾರಣ ಅವರ ಅಸಾಮರ್ಥ್ಯವಲ್ಲ. ಪ್ರತಿ ತಲೆಮಾರಿನವರಿಗೂ ಒಂದು ಕೃತಿಯ ಬಗ್ಗೆ ಇರುವ ಒಲವು; ಧೋರಣೆ ಮುಂತಾದ ಅಂಶಗಳು. ಆದ್ದರಿಂದಲೇ ಕಾಳಿದಾಸನ ಕೃತಿಗಳನ್ನು ಅನುವಾದ ಮಾಡುವವರಲ್ಲಿ ನಾನು ಮೊದಲನೆಯವನೂ ಅಲ್ಲ; ಕಡೆಯವನೂ ಅಲ್ಲ. ಇದಕ್ಕೂ ಸುಂದರವಾದ ಅನುವಾದಗಳು ಹಿಂದೆ ಬಂದಿದೆ; ಮುಂದೆ ಬರಲಿವೆ. ಹಾಗೆ ಬರಬೇಕು ಎನ್ನುವುದೇ ನನ್ನ ಅನುವಾದದ ಆಶಯಗಳಲ್ಲಿ ಒಂದಾಗಿದೆ. "(ಅದೇ ತೀ. ತಾ. ಶರ್ಮರು ತಮ್ಮ ಆತ್ಮ ಕಥೆಯಲ್ಲಿ ಶ್ರೀರಘುನಾಥರಾಯರೆಂಬ ವಿದ್ವಾಂಸರ ಬಗ್ಗೆ ಬರೆಯುತ್ತಾ ಅವರು ಬರೆದ 'ದಿ. ಆರ್ಟ್ ಆಫ್ ಟ್ರಾನ್ಸಲೇಷನ್' ಎಂಬ ಪುಸ್ತಕದ ಬಗ್ಗೆ (೧೯೧೦) ಬರೆಯುತ್ತಾ "ಅವರೊಬ್ಬರು ಯಾವ ಅಂಜಿಕೆಯೂ ಇಲ್ಲದೆ ಡಾ|| ಗ್ರೀಯರ್ ಸನ್, ಲೂಯಿರೈಸ್ ರವರ ಭಾಷಾಂತರದ ವೈಖರಿಯನ್ನು ಕುರಿತು ಬರೆದಿದ್ದಾರೆ." ಎಂಬುದಾಗಿ ತಿಳಿಸುತ್ತಾರೆ. ಅವರು ಕನ್ನಡದ ಸಂಸ್ಕೃತದ ಶಾಸನಗಳನ್ನು ಇಂಗ್ಲೀಷ್‌ಗೆ ಅನುವಾದ ಮಾಡಿದ ಬಗ್ಗೆ ಶ್ರೀ ರಘುನಾಥ ರಾಯರು ಗಂಭೀರವಾದ ಅಕ್ಷೇಪಣೆಗಳನ್ನು ಮಾಡಿದ್ದಾರೆ. (ತೀ.ತಾ. ಶರ್ಮ; ನನ್ನ ಜೀವನಧ್ಯೇಯ: ಪು. ೨೭೨-೨೭೩)

ತೀ. ತಾ. ಶರ್ಮರು ಆರಂಭದಲ್ಲಿ ಇಂಗ್ಲೀಷ್‌ನಿಂದ ಕನ್ನಡಕ್ಕೆ ಅನುವಾದಗೊಂಡ ಕೃತಿಗಳ ಅನುವಾದದ ಬಗ್ಗೆ ಬಂದಿದ್ದ ಒಂದು ಅಪರೂಪದ ಪುಸ್ತಕದ ಬಗ್ಗೆ ಸ್ವಾರಸ್ಯ ಪೂರ್ಣವಾದ ವಿವರಗಳನ್ನು ನೀಡಿದ್ದಾರೆ. ಶರ್ಮರು ಆಕಸ್ಮಿಕವಾಗಿ ಒಂದು ಪುಸ್ತಕವನ್ನು ನೋಡುತ್ತಾರೆ. ಅದರ ರಕ್ಷಾಪತ್ರದ ಮೇಲೆ 'ಆಕಿಂಡ್ರೇಸ್' ಎಂಬ ಹೆಸರಿತ್ತು ಪುಸ್ತಕದೊಳಗಿನದೆಲ್ಲಾ ಕನ್ನಡ. ಆ ಹೆಸರಿನ ಕೆಳಗೆ ಗ್ರಂಥ ಕರ್ತರು ದಪ್ಪದಪ್ಪ ಆಂಗ್ಲಾಕ್ಷರಗಳಲ್ಲಿ ತಮ್ಮ ಹೆಸರನ್ನು ಕೊಟ್ಟಿದ್ದರು. A.B. AYYATNAKIRSA ಎಂದಿತ್ತು. ಎಂಬುದಾಗಿ ತಿಳಿಸಿ ಆ ಪುಸ್ತಕದೊಳಗಿನ ವಿವರಗಳನ್ನು ಈ ರೀತಿ ತಿಳಿಸುತ್ತಾರ "ಒಳಗಿನ ವಸ್ತುವೇನೆಂಬುದನ್ನು ತಿಳಿಯಲು ಓದಿದೆ. ವಿಷಯ ಆಂಗ್ಲ ಭಾಷಾ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರ ಮಾಡುವುದಕ್ಕೆ ಸಂಬಂಧಪಟ್ಟದ್ದು. ಅನ್ಯಭಾಷಾಗ್ರಂಥಗಳನ್ನು ಕನ್ನಡಕ್ಕಿಳಿಸುವಾಗ ವಸ್ತುಗಳ ಹೆಸರುಗಳನ್ನು, ಅಂಕಿತನಾಮಗಳನ್ನೂ ಮೂಲ ಗ್ರಂಥದಲ್ಲಿರುವಂತೆಯೇ ಉಳಿಸಬೇಕೆ. ಇಲ್ಲ ಅವುಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಬೇಕೆ ಇದು ಆ ಪುಸ್ತಕದಲ್ಲಿ ಚರ್ಚೆ ಮಾಡಿದ್ದು ಅದೊಂದು ಪುಟ್ಟ ಪ್ರಬಂಧವೆಂದರೆ ಸರಿಹೋಗುತ್ತದೆ. ಪುಸ್ತಕವಲ್ಲ. ಆಂಗ್ಲ ಭಾಷೆಯ ಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿದ ಕೆಲವು ಉದಾಹರಣೆಗಳನ್ನು ಕೊಡುತ್ತಾ ಲೇಖಕರನ್ನು ಬಹು ಕಠೋರವಾಗಿ ಟೀಕೆ ಮಾಡಿದ್ದರು. (ಅದೇ ಪು. ೧೪೬-೧೪೭).

Othello ಶೂರಸೇನ ಆಯಿತು. Romeo Juliot ರಾಮವರ್ಮನ ಲೀಲಾವತಿ ಆಯಿತು. A mid summer Nights dream ಪ್ರಮೀಳಾರ್ಜುನೀಯಂ ಆಯಿತು. Merchant of Venice ಸುರತನಗರದ ಶ್ರೇಷ್ಠಿ ಆಯಿತು. . . . . ಶ್ರೀ ಪಿ. ಶ್ರೀಕಂಠಯ್ಯನವರು ರೂಢನಾಮ ಅಂಕಿತನಾಮ ಎಲ್ಲವನ್ನು ಭಾಷಾಂತರ ಮಾಡುವ ಅಸಹಜ ವ್ಯಾಪಾರವನ್ನು

ಅಲಾಘುವ ಶೈಲಿಯನ್ನು ಕುರಿತು ಟೀಕೆ ಮಾಡಿದ್ದರು. Alarm time pice ಅನ್ನು 'ಎಲೆ ರಾಮನ ಗಡಿಯಾರ'ವೆಂದು ಕರೆಯಬಹುದಲ್ಲವೆ ಎಂದು ಕೇಳಿದ್ದರು. Electricity ಯನ್ನು 'ಇಲಿಕತ್ರಿ ಶೆಟ್ಟಿ' ಎಂದು ಕರೆಯಬಹುದು! ಈ ಧಾಟಿಯಲ್ಲಿ ಭಾಷಾಂತರಕಾರರ ಹಲವು ಪ್ರಯೋಗಗಳನ್ನು ಲೇವಡಿ ಮಾಡಿ ಬಿಟ್ಟಿದ್ದರು(ಅದೇ) ಈ ಬಗ್ಗೆ ತೀ.ತಾ. ಶರ್ಮರು ಸಂಪದಾಭ್ಯುದಯದಲ್ಲಿ ಬರೆದರಂತೆ. ಅದು ಇಂದು ಉಪಲಬ್ಧವಿಲ್ಲ. ಮೇಲೆ ಹೇಳಿದ ಪುಸ್ತಕವೂ ಇಂದು ಉಪಲಬ್ಧವಿಲ್ಲ. ಮೇಲಿನ ಅಂಶಗಳನ್ನು ಪರಿಶೀಲಿಸಿದಾಗ ಪ್ರಾರಂಭದಿಂದ ಅನುವಾದಕರಿಗೆ, ಅದೂ ತಮ್ಮ ಸಮಾಜ, ಸಂಸ್ಕೃತಿಗಿಂತಲೂ ಭಿನ್ನವಾದ ಸಮಾಜ, ಸಂಸ್ಕೃತಿಗೆ ಸಂಬಂಧಿಸಿದ ಸಾಹಿತ್ಯ ಕೃತಿಗಳನ್ನು ಅನುವಾದ ಮಾಡುವವರಿಗೆ, ತಮ್ಮ ಪಾಠಕರಿಗೆ ಸುಲಭವಾಗಿ ಅರ್ಥವಾಗಲಿದೆ ಹೊರಗಿನ ವಸ್ತುವನ್ನು ಕುರಿತು ನಾನು ಓದುತ್ತಿದ್ದೇನೆ. ಎಂದು ಅನ್ನಿಸಿದೆ, ತನ್ನದೇ ಆದ ಸಮಾಜದ, ಸಂಸ್ಕೃತಿಯ ಜೀವನವನ್ನು ಓದುತ್ತಿದ್ದೇನೆ ಎಂಬ ಭಾವನೆ ಮೂಡಲಿ ಎಂಬ ಉದ್ದೇಶವಿತ್ತು. ಅಂದಿನ ಕಾಲಕ್ಕೆ ಸಾಮಾನ್ಯ ಕನ್ನಡ ಓದುಗರಿಗೆ ಪಾಶ್ಚಾತ್ಯ ಸಾಮಾಜಿಕ ಜೀವನವಾಗಲೀ, ಸಂಸ್ಕೃತಿಯಾಗಲೀ ಅಷ್ಟಾಗಿ ಪರಿಚಿತವಿರಲಿಲ್ಲ ಹೀಗಾಗಿ ಅವರಿಗೆ ಈ ಕಥೆಗಳು, ಹೆಸರುಗಳುಗೊಂದಲವನ್ನು ಮೂಡಿಸಬಹುದು. ಎಂಬ ಅನುಮಾನ ಅನುವಾದಕರಿಗಿತ್ತು. ನಮ್ಮ ಹಿಂದಿನ ಕವಿಗಳು ಸಂಸ್ಕೃತ ಹೆಸರುಗಳನ್ನು ಹಾಗೆ ಉಳಿಸಿಕೊಂಡರು. ಆದರೆ ವರ್ಣನೆಗಳು ಬಂದಾಗ ಅವರು ತಮ್ಮ ಪ್ರಾದೇಶಿಕ ಅಂಶಗಳನ್ನೇ ಬಳಸಿಕೊಳ್ಳುತ್ತಿದ್ದರು. ಎಂಬುದನ್ನು ಮರೆಯಬಾರದು.

ಶ್ರೀ ಗುಬ್ಬಿ ಸೋ. ಮುರುಗಾರಾಧ್ಯರು ೧೯೯೬ ರಲ್ಲಿ 'ಶೃಂಗಾರ ಚತುರೋಲ್ಲಾಸಿನಿ' ಎಂಬ ಕಾದಂಬರಿಗೆ ಬರೆದ ಮುನ್ನುಡಿಯನ್ನು ಈ ಸಂದರ್ಭದಲ್ಲಿ ಗಮನಿಸಬೇಕು. "ಇಂಗ್ಲೀಷಿನಲ್ಲಿರುವ ಯಾವುದಾದರೂ ಒಂದು 'ನಾವೆಲ್' (ಇನ್ನೂ ಆ ವೇಳೆಗೆ ಕಾದಂಬರಿ ಎಂಬ ಹೆಸರು ಬಳಕೆ ಬಂದಿರಲಿಲ್ಲ.) ಅನ್ನು ಕನ್ನಡದಲ್ಲಿ ಭಾಷಾಂತರ ಮಾಡಿ ಬರೆಯಬೇಕೆಂಬ ಆಲೋಚನೆಯು ನನ್ನ ಮನಸ್ಸಿನಲ್ಲಿ ಮೊದಲು ಜನಿಸಿತು. ಆದರೆ ಅಂತಹ ಒಂದೆರಡು ಇಂಗ್ಲೀಷ್ ಕಾವ್ಯಗಳನ್ನು ಚೆನ್ನಾಗಿ ವಿಚಾರ ಮಾಡುತ್ತಾ ನೋಡುವಲ್ಲಿ ಕೆಲವು ವಿಷಯಗಳು ನಮ್ಮ ಹಿಂದೂ ಮರ್ಯಾದೆಗಳಿಗನುಸಾರವಾಗಿ ಕಂಡು ಬರಲಿಲ್ಲವಾದ್ದರಿಂದ ಆ ಮಾರ್ಗವನ್ನು ಬಿಡಬೇಕಾಯಿತು. ನಂತರ ನಮ್ಮಲ್ಲಿಯೇ ಪುರಾಣ ಪ್ರಸಿದ್ಧವಾದ ಪದ್ಯರೂಪವಾಗಿರುವ ಯಾವುದಾದರೊಂದು ಇತಿಹಾಸವನ್ನೇ ಗದ್ಯ ರೂಪವಾಗಿ ಮಾಡಬೇಕೆಂದು ಆಲೋಚಿಸುವಲ್ಲಿ, ಇಂಗ್ಲೀಷ್ ನಾವೆಲ್‌ಗಳ ಮರ್ಯಾದೆಯನ್ನು ಬಿಡಬೇಕಾಗಿ ಬಂದುದರಿಂದ ಅದೂ ನನ್ನ ಮನಸ್ಸಿಗೆ ಅಭಿರುಚಿಸಲಿಲ್ಲ. ಆದಕಾರಣ ವಿಷಯದಲ್ಲಿ ಹಿಂದೂ ಮರ್ಯಾದೆಯನ್ನ ಇಟ್ಟುಕೊಂಡು, ಇಂಗ್ಲೀಷ್ 'ನಾವೆಲ್' ಪದ್ಧತಿಯನ್ನೇ ಅನುಸರಿಸಿ ಬರೆಯಲು ಅನುಕೂಲವಾಗುವಂತೆ ಹೊಸದಾಗಿ ಒಂದು ಕಥೆಯನ್ನು ಕಲ್ಪನೆಮಾಡಿಕೊಂಡೆನು. (ಗುಬ್ಬಿ, ಸೋ. ಮುರುಗಾರಾಧ್ಯ: ಶೃಂಗಾರ ಚತುರೋಲ್ಲಾಸಿನಿ : ಲೇಖಕರ ವಿಜ್ಞಾಪನೆ. ಕ.ಸಾ.ಪ. ೧೯೯೬) – ಎಂಬುದಾಗಿ ಹೊಸತನ್ನು ಕನ್ನಡ ಓದುಗರಿಗೆ ಹೇಗೆ ತಲುಪಿಸಬೇಕು ಎಂಬುದರ ಬಗ್ಗೆ ತಾವು ಆಲೋಚಿಸಿದ ಚಿಂತನೆಗಳನ್ನು ಮಂಡಿಸಿದ್ದಾರೆ.

ಸಂಸ್ಕೃತ, ಪ್ರಾಕೃತ ಮತ್ತು ಇತರ ಭಾರತೀಯ ಭಾಷೆಗಳಿಂದ ತಮ್ಮ ಭಾಷೆಗೆ ಅನುವಾದ ಮಾಡುವಾಗ ಪ್ರಾದೇಶಿಕ ಕವಿಗಳು ಎದುರಿಸಿದ ಸವಾಲುಗಳಿಗಿಂತ ಭಿನ್ನವಾದ ಸವಾಲುಗಳನ್ನು, ಇಂಗ್ಲೀಷಿನಿಂದ ಅನುವಾದ ಮಾಡಲು ತೊಡಗಿದ ಅನುವಾದಕರು ಎದುರಿಸಿದರು ಎಂಬುದು ಮೇಲಿನ ನಿದರ್ಶನದಿಂದ ವ್ಯಕ್ತವಾಗುತ್ತದೆ.

ನವೋದಯದ ಹರಿಕಾರರಾದ ಬಿ. ಎಂ. ಶ್ರೀಕಂಠಯ್ಯನವರ ಆಲೋಚನೆಗಳನ್ನು ನಾವು ಗಮನಿಸಬೇಕು. ಅವರ ಅಭಿಪ್ರಾಯಗಳು ಅವರ 'ಇಂಗ್ಲೀಷ್ ಗೀತಗಳು'ಗೆ ಬರೆದ ಮುನ್ನುಡಿಯಲ್ಲಿ ಮತ್ತು ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ ಎಂಬ ಐತಿಹಾಸಿಕ ಉಪನ್ಯಾಸದಲ್ಲಿ ವ್ಯಕ್ತವಾಗಿವೆ.

ಇಂಗ್ಲೀಷ್ ಗೀತಗಳು ಪುಸ್ತಕದ ಅರಿಕೆಯಲ್ಲಿ "ಇಂಗ್ಲೀಷ್ ಕಾವ್ಯ ಮಾರ್ಗವನ್ನು ಕನ್ನಡಿಗರು ಈ ಸಣ್ಣ ಗ್ರಂಥದಿಂದ ಸ್ವಲ್ಪ ಮಟ್ಟಿಗೆ ತಿಳಿಯಬಹುದಾಗಿದೆ. 'ಭಾಷಾಂತರಕಾರರು ಕೊಲೆಗಾರರು' ಎಂದು ಪಾಶ್ಚಾತ್ಯರಲ್ಲಿ ಒಂದು ಗಾದೆಯುಂಟು. ಆ ಅಪವಾದವನ್ನು ತಪ್ಪಿಸಿ ಕೊಂಡಿರುವೆನೆಂದು ನಾನು ತಿಳಿದುಕೊಂಡಿಲ್ಲ. ಆದರೆ ಬುದ್ಧಿಬಲವಿರುವ ಮಟ್ಟಿಗೂ ಮೂಲವನ್ನು ಪ್ರತಿಬಿಂಬಿಸುವ ಕಥನವನ್ನು ಮುಂದಿಟ್ಟು ಕೊಂಡು ಕೆಲಸ ಮಾಡಿದ್ದೇನೆ. ಕೆಲವು ಭಾವ ಮುಂತಾದವು ಕನ್ನಡ ಜನಕ್ಕೆ

ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ ಸಾಮಾನ್ಯವಾಗಿ ಪದಪ್ರಯೋಗ, ಶೈಲಿ, ಛಂದಸ್ಸು, ಭಾವ, ರಸ ಇವೆಲ್ಲವೂ ಮೂಲ ಕವಿಯ ವ್ಯಕ್ತಿತ್ವವನ್ನೇ ಅನುಸರಿಸಿವೆ. ಕನ್ನಡದ ಜಾಯಮಾನವನ್ನು ಮೀರದೆ ಎಷ್ಟು ಮಟ್ಟಿಗೆ ಛಂದಸ್ಸು ಇಂಗ್ಲೀಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟುಮಟ್ಟಿಗೆ, ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನ ಪಟ್ಟಿದ್ದೇನೆ. ಇಂಗ್ಲೀಷ್ ಬಲ್ಲವರು ಇದನ್ನು ತಿಳಿಯುವರು. ಅಚ್ಚ ಗನ್ನಡಿಗರು ಈ ಭಾಗದಲ್ಲಿ ಅಸಮಾಧಾನ ಪಡಬಾರದೆಂದು ನನ್ನ ಪ್ರಾರ್ಥನೆ.

**ಹೇಳಿದ್ದೆ ಹೇಳುವರು, ಕೇಳಿದ್ದೆ ಕೇಳುವರು**
**ಕೇಳಿದ್ದೆ ಕೇಳಿ ಸುಖಿಸುವರು । ಗುರುಗಳ**
**ಹೇಳಿಕೆಯೆ ಬೇರೆ ಸರ್ವಜ್ಞ**

ಎಂಬ ವಚನದಂತೆ ಸಂಪ್ರದಾಯ ಮಾರ್ಗವನ್ನು ಛಲ ಹಿಡಿಯದೆ ವಿಶ್ವಕವಿತಾ ವಿಷಯಗಳಿಂದ ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗ ದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯವಸ್ತುಗಳನ್ನು ಇತರದೇಶದ ಕವಿಗಳು ಯಾವ ರೀತಿಯಲ್ಲಿ ಪುಷ್ಟಿಗೊಳಿಸಿ ಸಹಜ ಭಾಷೆಯಲ್ಲಿ, ಸೌಂದರ್ಯ ರಚನೆಯನ್ನು ಮಾಡಿರುವರು, ಅದನ್ನೆಲ್ಲಾ ಪ್ರಶ್ನೆಯಿಂದ ಪರಾಮರ್ಶಿಸಿ ಧೈರ್ಯವನ್ನು, ಶಿಕ್ಷಣ ಬದ್ಧವಾದ ಸ್ವಾತಂತ್ರ್ಯವನ್ನು ವಹಿಸಿ ಕನ್ನಡ ಕವಿಗಳು ಹಿಂದಿಗಿಂತಲೂ ಮುಂದೆ ಇನ್ನೂ ಶ್ರೇಯಸ್ಸು ತಾಳಲಿ ಎನ್ನುವುದೇ ನಮ್ಮೆಲ್ಲರ ಹಾರೈಕೆಯಾಗತಕ್ಕದ್ದಾಗಿದೆ. ಹೊಸಮಾರ್ಗದ ಕವಿಗಳು ಆಗಲೇ ಹಾಡುವುದಕ್ಕೆ ತೊಡಗಿರುವ ನಮ್ಮ ಕಾಲದಲ್ಲಿ ಈ ಮಾತನ್ನು ಒತ್ತಿ ಹೇಳಬಾಕಾಗಿಲ್ಲ." (ಬಿ. ಎಂ. ಶ್ರೀ. ಇಂಗ್ಲೀಷ್ ಗೀತಗಳು : ಅರಿಕೆ.)

ಮೇಲಿನ ಮಾತುಗಳನ್ನು ಗಮನಿಸಿದಾಗ ಬಿ.ಎಂ. ಶ್ರೀ. ಯವರೂ ಕೂಡಾ ಯಥಾನುವಾದ ದತ್ತ ಒಲಿಯದೆ "ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಿಸುವತ್ತ ದೃಷ್ಟಿ ಹರಿಸಿದ್ದರೆಂಬುದು ವೇದ್ಯವಾಗುತ್ತದೆ.

ಅನುವಾದ, ಅನುವಾದಗೊಂಡ ಭಾಷಾ ಸಾಹಿತ್ಯಗಳನ್ನು ಶ್ರೀಮಂತಗೊಳಿಸಬೇಕು. ಹಾಗಲ್ಲದೆ ಅನುವಾದ ಕೇವಲ ಅನುವಾದಕ್ಕೋ ಅಥವಾ ಸಾಮಾಜಿಕ ಅಗತ್ಯಕ್ಕೋ ಅಥವಾ ತಾತ್ಕಾಲಿಕ ಪ್ರಯೋಜನಕ್ಕೋ ಆಗಬಾರದು ಎಂಬ ಅರಿವು, ಎಚ್ಚರಿಕೆ ಅನುವಾದಕನಿಗಿದ್ದಾಗ, ಸೃಜನಶೀಲ ಲೇಖಕನಿಗಿಂತಲೂ ವಿಶಿಷ್ಟವಾದ ಸೇವೆಯನ್ನು ಕಾಣಿಕೆಯನ್ನು ಆತ ನೀಡಬಲ್ಲ.

ಬಿ.ಎಂ.ಶ್ರೀಯವರ ಮತ್ತಷ್ಟು ಆಲೋಚನೆಗಳನ್ನು ಪರಿಶೀಲಿಸೋಣ; "ಹೇಗೆ ಆದಿಯಿಂದಲೂ ಸಂಸ್ಕೃತದ ಕ್ಷಣದಲ್ಲೂ, ಸಂಸ್ಕೃತದ ಪೋಷಣೆಯಲ್ಲಿಯೂ ಕಾವ್ಯ ಮಾಲೆಯನ್ನು ಬೆಳಸಿದೆವೋ ಹಾಗೆಯೇ ಈಗ ದೈವಯತ್ನದಿಂದ ಲಭಿಸಿರುವ ಇಂಗ್ಲೀಷ್ ಕ್ಷಣದಲ್ಲಿಯೂ, ಇಂಗ್ಲೀಷ್‌ನ ಪೋಷಣೆಯಲ್ಲೂ ಅದನ್ನು ಬೆಳಸಬೇಕು. ಇಂಗ್ಲೀಷ್ ಕಾವ್ಯಮಾಲೆಯು ಪರಮೋತ್ಕೃಷ್ಟವಾದದ್ದು. ಗ್ರೀಕ್, ಲ್ಯಾಟಿನ್, ಜರ್ಮನ್, ಫ್ರೆಂಚ್, ಸಂಸ್ಕೃತ ಮುಂತಾದ ಭಾಷೆಗಳ ಸಾರವನ್ನು ಹೀರಿ ಪುಷ್ಟಿಯಾದದ್ದು. ಇದರ ಗುಣವನ್ನು ಕಲಿತು. ಇದರ ಐಶ್ವರ್ಯದಲ್ಲಿ ಭಾಗಿಗಳಾಗಿ ಬೇಕಾದರೀತಿಯಲ್ಲಿ ಭಾಷಾಂತರಗಳಿಂದ ಕನ್ನಡದ ಬೊಕ್ಕಸವನ್ನು ತುಂಬಿಟ್ಟರೆ ಮುಂದೆ ಸ್ವದೇಶ ಮಾರ್ಗವೂ ವಿದೇಶ ಮಾರ್ಗವೂ ಕಲೆತು ಒಂದಾಗಿ ಎರಡರಲ್ಲೂ ಬಗ್ಗದುವು ವಕ್ರವಾದುವು ಬಿಟ್ಟುಹೋಗಿ ಅತ್ಯುತ್ತಮವಾದ ಕಾವ್ಯಮಾಲೆ ನಮ್ಮಲ್ಲೂ ನಿಲ್ಲುವುದಕ್ಕೆ ಸಂದೇಹ ತೋರುವುದಿಲ್ಲ." ಆಧುನಿಕ ಸಂದರ್ಭದಲ್ಲಿ ಶ್ರೀ. ಬಿ.ಎಂ. ಶ್ರೀ ಯವರು ಹೇಳಿದ ಮಾತುಗಳನ್ನು, ಹೊಂದಿದ್ದ ಅಭಿಪ್ರಾಯವನ್ನು ಪ್ರಾಚೀನ ಕಾಲದಲ್ಲಿ ಸಂಸ್ಕೃತದಿಂದ ಅನುವಾದ ಮಾಡುವುದಕ್ಕೆ ಸಿದ್ಧವಿದ್ದ ಕವಿಗಳು ಹೊಂದಿದ್ದಿರಬೇಕು ಎಂಬುದಾಗಿ ಭಾವಿಸಬಹುದು.

ಮುಂದುವರಿದು ಬಿ.ಎಂ.ಶ್ರೀ ಯವರು ಹೇಳಿರುವ ಮಾತುಗಳು ಇಂದಿಗೂ ಪ್ರಸ್ತುತವಾಗಿವೆ. "ಭಾಷಾಂತರವನ್ನೇ ಹೇಳುತ್ತಿರುವಾಗ ಸಂಸ್ಕೃತವನ್ನು ನಾನು ಮರೆಯುವುದಿಲ್ಲ. ಇದರಲ್ಲಿ ಸಂಸ್ಕೃತ ಪಂಡಿತರು ಧಾರಾಳವಾಗಿ ಕನ್ನಡಿಗರನ್ನು ಉದ್ದಾರ ಮಾಡಬಹುದು. ಮತ ವಿಷಯವಾಗೂ, ನೀತಿವಿಷಯವಾಗೂ, ಆಚಾರ ಸಂಸ್ಕಾರಗಳ ವಿಷಯವಾಗೂ ಈಗ ದೇಶದಲ್ಲಿ ಎಲ್ಲೆಲ್ಲೂ ಚರ್ಚೆ ನಡೆಯುತ್ತಿದೆಯಷ್ಟೆ. ಜೀವಕ್ಕೆ ಹೇಗೆ ಕರ್ಮಪಾಶ ಬಿಡುವುದಿಲ್ಲವೋ ಹಾಗೆ ಏನು ಮಾಡಿದರೂ ಪೂರ್ವದ ಪ್ರಭಾವದಿಂದ ನಾವು ತಪ್ಪಿಸಿಕೊಳ್ಳಲಾರೆವು. ಆದ್ದರಿಂದ ಏನು ತಿದ್ದು ಪಾಟು ಆಗಬೇಕಾದರೂ ಪೂರ್ವ ಪದ್ಧತಿಯನ್ನು ಸಮಗ್ರವಾಗಿ ಪರಿಶೋಧಿಸಿದಲ್ಲದೆ ಯತ್ನವಿಲ್ಲ. ಇದಕ್ಕಾಗಿ ಸಂಸ್ಕೃತದಲ್ಲಿ ವಿದ್ವಾಂಸರಾದವರು ನಿಸ್ಸಾರವಾದ

ಕಾವ್ಯ ನಾಟಕಗಳ ಭಾಷಾಂತರವನ್ನು ಬಿಟ್ಟು, ಆಳಿದ ಮಹಾಸ್ವಾಮಿಗಳಾದ ಮುಮ್ಮಡಿ ಕೃಷ್ಣರಾಜ ಒಡೆಯರು, ಚಾಮರಾಜ ಒಡೆಯರು ಇತರರ ಹೆಸರಿನಲ್ಲಿ ಭಾಗವತ, ಭಾರತ, ರಾಮಾಯಣಗಳನ್ನ ಪ್ರತಿಯೊಂದು ಮನೆಮನೆಯಲ್ಲಿಯೂ ಹೆಂಗಸರು ಕೂಡ ಓದಿಕೊಳ್ಳುವಂತೆ ಮಾಡಿರುವ ರೀತಿಯಲ್ಲಿ ಅಮೂಲ್ಯವಾದ ಶ್ರುತಿ. ಉಪನಿಷತ್ತು ಪುರಾಣಗಳನ್ನು, ಆಚಾರ್ಯರ ಭಾಷ್ಯಗಳನ್ನು, ಅನ್ಯಮತಗಳ ತತ್ತ್ವಗಳನ್ನು ನಿಷ್ಪಕ್ಷಪಾತವಾಗಿ ಭಾಷಾಂತರ ಮಾಡಿಕೊಟ್ಟಿದ್ದಾರೆ. ಜನಗಳು ಜ್ಞಾನೋದಯವೇ ಅಲ್ಲದೆ ಕನ್ನಡ ಕಾವ್ಯ ಮಾಲೆಯೂ ಸಮೃದ್ಧಿಯಾಗುತ್ತದೆ. ಪ್ರಕೃತದಲ್ಲಿ ನಮ್ಮ ದೇಶಕ್ಕೆ ಇದಕ್ಕಿಂತ ಶ್ರೇಷ್ಠವಾದ ಉಪಕಾರ ನನಗೆ ತೋರುವುದಿಲ್ಲ". – ಎಂದು ಸಂಸ್ಕೃತದಿಂದ ಅನುವಾದ ಆಗಬೇಕಾದ ಕೃತಿಗಳು ಯಾವುವು, ಅವುಗಳ ಸಾಮಾಜಿಕ, ಸಾಂಸ್ಕೃತಿಕ ಅಗತ್ಯಗಳೇನು ಎಂಬುದನ್ನು ವಿವರಿಸಿರುವುದರ ಮೂಲಕ ಅನುವಾದಕನ ಜವಾಬ್ದಾರಿ ಕೇವಲ ಅನುವಾದ ಮಾಡುವುದಷ್ಟೇ ಅಲ್ಲ. ಅನುವಾದಕ್ಕೆ ಆಯ್ಕೆ ಮಾಡಿಕೊಳ್ಳುವಲ್ಲಿ ವಹಿಸಬೇಕಾದ ಎಚ್ಚರಿಕೆಯನ್ನು ನೀಡಿದ್ದಾರೆ.

ಭಾಷಾಂತರದ ಅಗತ್ಯವನ್ನು ಸಾಹಿತ್ಯ ಕಾರಣಗಳಿಂದ ತೀರಾ ಮುಖ್ಯವೆಂದು ಭಾವಿಸಿದವರು ಬ್ರಿಟಿಷರು ಅನೇಕ ಭಾಷೆಗಳನ್ನಾಡುವ ಭಾರತವನ್ನು ಆಳುವ ಸಂದರ್ಭದಲ್ಲಿ ಜನರನ್ನು ತಮ್ಮ ಹತೋಟಿಯಲ್ಲಿಟ್ಟುಕೊಳ್ಳಲು ಆಯಾ ದೇಶ ಭಾಷೆಗಳಲ್ಲಿ ವ್ಯವಹರಿಸುವ ಅಗತ್ಯ ಕಂಡು ಬಂದಿತು. ಈ ಕಾರಣದಿಂದಲೇ ಬ್ರಿಟಿಷ್ ಸರಕಾರ ಪ್ರಾಂತೀಯ ಭಾಷೆಗಳಿಂದ ಇಂಗ್ಲೀಷ್‌ಗೆ ಅನುವಾದಿಸುವ, ಇಂಗ್ಲೀಷ್‌ನಿಂದ ಪ್ರಾಂತೀಯ ಭಾಷೆಗಳಿಗೆ ಅನುವಾದಿಸುವ ಭಾಷಾಂತರಕಾರರನ್ನು ನೇಮಿಸಿತು. ಇಂದು ಇಂದಿನ ಭಾಷಾಂತರ ಇಲಾಖೆಯ ಮೂಲ ಬೀಜ.

ಈ ಬಗ್ಗೆ ಒಂದು ಸ್ವಾರಸ್ಯ ಮಾಹಿತಿಯೊಂದನ್ನು ನಿಮ್ಮ ಗಮನಕ್ಕೆ ತರಬಯಸುತ್ತೇನೆ. ತೀ.ತಾ. ಶರ್ಮರು ತಮ್ಮ ಆತ್ಮಕಥೆ 'ನನ್ನ ಜೀವನ ಧ್ಯೇಯ' ದಲ್ಲಿ ಒಂದು ಕಡೆ ಈ ರೀತಿ ಬರೆಯುತ್ತಾರೆ. ಬ್ರಿಟೀಷ್‌ರು ಭಾರತೀಯರ ರಾಜಭಕ್ತಿಯನ್ನು ಭದ್ರಗೊಳಿಸಿಕೊಳ್ಳುವುದರಲ್ಲಿ ಅನುಸರಿಸದ ಮಾರ್ಗವೇ ಇಲ್ಲ; ಬಳಸದ ಸಾಧನವೇ ಇಲ್ಲ. ಎಲ್ಲ ದೇಶ ಭಾಷೆಗಳಲ್ಲಿಯೂ ಪ್ರಚಾರ ಪತ್ರಾವಳಿಗಳನ್ನು ಹೊರಡಿಸುತ್ತಿದ್ದರು. ರಾಮರಾಯರು ಮದರಾಸು ಸರಕಾರದ ಸೀನಿಯರ್ ಕನ್ನಡ ಟ್ರಾನ್ಸ್‌ಲೇಟರ್. ಇಂಗ್ಲೀಷಿನಲ್ಲಿ ಸಿದ್ಧವಾದ ಈ ಪತ್ರಾವಳಿಗಳನ್ನು ರಾಯರು ತಮಿಳು, ತೆಲುಗು, ಮಲೆಯಾಳ, ಕನ್ನಡ ಭಾಷೆಗಳಿಗೆ ಭಾಷಾಂತರ ಮಾಡಿಸುವ ಜವಾಬ್ದಾರಿ ಹೊತ್ತಿದ್ದರು. . . . ಒಂದು ದಿನ ರಾಮರಾಯರು ನನ್ನ ಕೈಗೆ ಎರಡು ಆಂಗ್ಲ ಪತ್ರಾವಳಿಗಳನ್ನಿಟ್ಟು "ಇವುಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿ. ತಿಂಗಳಿಗೆ ಐವತ್ತು–ಅರವತ್ತು ರೂಪಾಯಿಗಳು ಬಂದರೆ ಏಕೆ ಬೇಡ? ಅನೇಕರು ಈ ಅವಕಾಶದ ಲಾಭ ಪಡೆಯುತ್ತಿದ್ದಾರೆ. ಕನ್ನಡದ ಜನಕ್ಕೆ ಈ ಪ್ರಯೋಜನ ತಕ್ಕ ಮಟ್ಟಿಗೆ ಆಗಲಿ ಎಂಬುದಾಗಿ ಹೇಳಿದರು."– ಎಂಬುದಾಗಿ ಶ್ರೀ ಬೆನಗಲ್ ರಾಮರಾಯರು ನೀಡಿದ ಒಂದು ಅವಕಾಶವನ್ನು ವಿವರಿಸಿದ್ದಾರೆ. ಬೆನಗಲ್ ರಾಮರಾಯರು ಈ ಸಲಹೆಯನ್ನು, ಉಪಕಾರವನ್ನು ತೀ.ತಾ. ಶರ್ಮರು ಈ ರೀತಿ ವಿನಯದಿಂದ ತಿರಸ್ಕರಿಸುತ್ತಾರೆ. ಅವರು ಆ ಕೆಲಸವನ್ನು ತಿರಸ್ಕರಿಸುವುದಕ್ಕೆ ನೀಡಿದ ಕಾರಣ. "ಅನುವಾದಕನ ಸಾಮಾಜಿಕ ಜವಾಬ್ದಾರಿಯನ್ನು ಸೂಚಿಸುತ್ತದೆ". ಬ್ರಿಟಿಷರು ಭಾರತವನ್ನು ಶಾಶ್ವತವಾಗಿ ದಾಸ್ಯದಲ್ಲಿರಿಸಲು ನಡೆಸುತ್ತಿರುವ ಯುದ್ಧವಿದು. ಭಾರತೀಯರ ಕೋಟಿಗಟ್ಟಲೆ ಹಣವನ್ನು ಈ ಯುದ್ಧಕ್ಕಾಗಿ ವೆಚ್ಚಮಾಡುತ್ತಿದ್ದಾರೆ. ಲಕ್ಷಗಟ್ಟಲೆ ಭಾರತೀಯ ಯೋಧರನ್ನು ಯುರೋಪಿನ ರಣರಂಗದಲ್ಲಿ ಫಿರಂಗಿಗಳ ಬಾಯಿಗೆ ತುತ್ತಾಗಿ ಅರ್ಪಿಸುತ್ತಿದ್ದಾರೆ. ಅಂತಹ ನಮ್ಮ ಶತ್ರು ಸರಕಾರಕ್ಕೆ ಸಹಾಯ ಮಾಡುವುದೇ? ಆ ಸಹಾಯಕ್ಕೆ ಬರುವ ನಾಲ್ಕು ಕಾಸಿಗೆ ಕೈ ನೀಡುವುದೆ? ಇದು ಮಹಾಪಾಪವೆಂದು ನನಗೆ ಅನ್ನಿಸುತ್ತಿದೆ. ಇದೂ ಒಂದು ತರಹ 'ದೇಶದ್ರೋಹ' ವೆಂದು ನನ್ನ ಭಾವನೆ. ನಾನು ಹುಡುಗ. ತಾವು ಹಿರಿಯರು. ನಾನು ಹೀಗೆ ಹೇಳುತ್ತಿರುವೆನೆಂದು ಕೋಪ ಮಾಡಬೇಡಿ"– ಎಂಬುದಾಗಿ ತಮ್ಮ ನಿಲುವನ್ನು ಸ್ಪಷ್ಟಪಡಿಸುತ್ತಾರೆ. (ತೀ.ತಾ. ಶರ್ಮ: ನಾನು ನನ್ನ ಜೀವನ ಧ್ಯೇಯ: ಪಟ. ೨೦೯–೨೧೦)

ಇದೇ ರೀತಿಯ ಇನ್ನೊಂದು ಪ್ರಸಂಗವನ್ನು ಇಲ್ಲಿ ಉಲ್ಲೇಖಿಸಬೇಕು. ತೆಲುಗು ಪತ್ರಿಕಾರಂಗದ ಭೀಷ್ಮರೆನ್ನಿಸಿದ ತಿರುಮಲರಾಮಚಂದ್ರರು. ಲಾಹೋರ್‌ನಲ್ಲಿದ್ದಾಗ ಒಂದು ಕಂಪನಿಯಲ್ಲಿ ಗುಮಾಸ್ತೆಯ ಕೆಲಸಕ್ಕೆ ಸೇರುತ್ತಾರೆ. ಅವರ ಕೆಲಸವೆಂದರೆ ದಕ್ಷಿಣ ಭಾರತದ ವಿವಿಧ ಕಡೆಗಳಿಂದ ಬಂದ ಕಾಗದಗಳನ್ನು ಓದಿ ಅದನ್ನು ಯಜಮಾನನಿಗೆ ಭಾಷಾಂತರಿಸಿ ಹೇಳಿ ಮತ್ತೆ ಅವರಿಗೆ ಅದೇ ಭಾಷೆಯಲ್ಲಿ ಉತ್ತರಿಸುವುದು. ಆ ಕಂಪನಿಯ ವ್ಯವಹಾರ, ಯಜಮಾನನ ಬಗ್ಗೆ ಒಂದು ರೀತಿಯ ಅನುಮಾನ ಇತರರಲ್ಲಿ ಮೂಡುತ್ತದೆ. ಆಗ ಅವರು ಆ ಯಜಮಾನನೊಂದಿಗೆ "ನಿಮ್ಮ ಷರತ್ತುಗಳು ನನಗೇನೂ

ಕಷ್ಟವಾದುದಲ್ಲ. ಆದರೆ ವ್ಯಾಪಾರ ಅನ್ಯಾಯ ಎಂದು ನೀತಿ ಹೇಳುತ್ತಿದ್ದೀರಿ. ನಾನೋ ಒಂದು ಪದ್ಧತಿಯಲ್ಲಿ ಬೆಳೆದು ಬಂದವನು. ಇದು ಅನ್ಯಾಯ ಎಂದು ನನ್ನ ಅಂತರಾತ್ಮ ತಿಳಿಸಿದಾಗ ನಿಮ್ಮ ಅನುಮತಿಯನ್ನು ಪಡೆದು ಕೆಲಸ ಬಿಟ್ಟು ಹೋಗಬಹುದು ತಾನೇ?" ಎಂಬುದಾಗಿ ಕೇಳುತ್ತಾರೆ. ಅಂದಿನ ಅನಿವಾರ್ಯತೆ ತಿರುಮಲ ರಾಮಚಂದ್ರರನ್ನು ಎರಡು ಮೂರು ತಿಂಗಳು ಆ ಕಂಪನಿಯಲ್ಲಿ ಕೆಲಸ ಮಾಡುವಂತೆ ಮಾಡುತ್ತದೆ. ಬಹುದಿನ ಉಳಿಯುವುದಕ್ಕೆ ನನ್ನ ಮನಸ್ಸು ಅಂಗೀಕರಿಸಲಿಲ್ಲ. ನನ್ನ ಅಂತರಂಗ ನೊಂದುಕೊಂಡಿತು. ನನ್ನ ಭಾಷಾ ಜ್ಞಾನ ಈ ಕಾಮ ಕಲಾ ಕಥೆಗಳ ಅನುವಾದಕ್ಕೇನಾ? ಎಂದು ಅನ್ನಿಸಿತು" ಎಂಬುದಾಗಿ ತಮ್ಮ ಅಂದಿನ ಸ್ಥಿತಿಯನ್ನು ಕುರಿತು ಹೇಳುತ್ತಾರೆ. ಈ ರೀತಿ ತೀವ್ರವಾಗಿ ಅನಿಸಿದ ಕೂಡಲೇ ತಿರುಮಲ ರಾಮಚಂದ್ರ ತಮ್ಮ ಆ ಉದ್ಯೋಗಕ್ಕೆ ರಾಜೀನಾಮೆ ನೀಡಿ ಲಾಹೋರಿನ ಬೀದಿಗಳಲ್ಲಿ ನಿರುದ್ಯೋಗಿಯಾಗಿ ನಿಲ್ಲುತ್ತಾರೆ. (ನೋಡಿ: ತಿರುಮಲ ರಾಮಚಂದ್ರ, ಹಂಪಿಯಿಂದ ಹರಪ್ಪಾದವರೆಗೆ; ನಕಲಿ ಒಡವೆಗಳ ತಾಯತಗಳು. ಪ್ರ: ಕೇಂದ್ರ ಸಾಹಿತ್ಯ ಅಕಾಡೆಮಿ)

ಎಲ್ಲರೂ ತೀ.ತಾ. ಶರ್ಮರ ಹಾಗೆ, ತಿರುಮಲ ರಾಮಚಂದ್ರರ ಹಾಗೆ ನಿರಾಕರಣೆ ಮಾಡಲಾರದೆ ಹೋದರೂ, ಸರಕಾರದ ಅನುವಾದಕ, ತನ್ನ ಮಿತಿಗಳಲ್ಲಿ ತನ್ನದೇ ಆದರೀತಿಯಲ್ಲಿ ದೇಶ ಸೇವೆ ಮಾಡುತ್ತಾನೆ. ಇಂಥ ಒಂದು ಸಂದರ್ಭವನ್ನು ತೀ.ತಾ. ಶರ್ಮರು ತಮ್ಮ ಆತ್ಮ ಕಥೆಯಲ್ಲಿ ವಿವರಿಸಿದ್ದಾರೆ. ಶ್ರೀ ಬೆನಗಲ್ಲು ರಾಮರಾಯರು ಸರಕಾರಕ್ಕೆ ಮುಖ್ಯ ಭಾಷಾಂತರಕಾರರಾಗಿದ್ದವರು. ಅವರು ಅಂದಿನ ಪ್ರಾದೇಶಿಕ ಭಾಷೆಗಳಲ್ಲಿ ಹೊರಬರುತ್ತಿದ್ದ ಪತ್ರಿಕೆಗಳ ಸುದ್ದಿ, ಸಂಪಾದಕೀಯಗಳನ್ನು ಅನುವಾದಿಸಿ ಸರಕಾರಕ್ಕೆ ಕಳಿಸಬೇಕಾಗುತ್ತಿತ್ತು. ಆ ಸಂದರ್ಭದಲ್ಲಿ ಪ್ರಕಟಿತವಾಗುತ್ತಿದ್ದ ವಿಶ್ವ ಕರ್ನಾಟಕದ ಸಂಪಾದಕರಾದ ತೀ.ತಾ. ಶರ್ಮರೆಂದರೆ ರಾಮರಾಯರಿಗೆ ಅಭಿಮಾನ. ಅವರು ಒಮ್ಮೆ ತೀ.ತಾ. ಶರ್ಮರಿಗೆ ಈ ರೀತಿ ಪತ್ರ ಬರೆಯುತ್ತಾರೆ. "ವಿಶ್ವ ಕರ್ನಾಟಕದ ಪಾಲಿಗೆ ನಾನೊಬ್ಬ ಪೋಲೀಸಿನವನಂತೆ ಇದ್ದೇನೆ. ನಿಮ್ಮ ಪತ್ರಿಕೆಯ ಬಹು ಭಾಗದ ಲೇಖನಗಳೂ ಟೀಕೆಗಳೂ, ಭಾಷಾಂತರವಾಗಿ ಇಂಡಿಯಾ ಸರಕಾರದ ಶಾಖೆಗೆ ರಹಸ್ಯವಾಗಿ ಹೋಗುತ್ತವೆ. ಅವುಗಳನ್ನು ಭಾಷಾಂತರ ಮಾಡುವಾಗ ಎಷ್ಟೋ ತೇಲಿಸಿ, ಮಹಾಪರಾಧವೆನಿಸದಂತೆ ಇರುವಹಾಗೆ ಮಾಡುತ್ತೇವೆ. ಆದರೂ ಕೆಟ್ಟಕಾಲ ಎಚ್ಚರಿಕೆಯಿಂದಿರಬೇಕು. ನಿಮಗೇನಾದರೂ ಕೆಡುಕಾದರೆ ಅದು ನಮ್ಮ ಭಾಷಾಂತರದ ಮೂಲಕ ಆಯಿತೆಂಬ ನೋವು ನಮಗೆ ತಟ್ಟಬಾರದು" ಬೆನಗಲ್ಲು ರಾಮರಾಯರು ಸರಕಾರದ ಉದ್ಯೋಗದಲ್ಲಿದ್ದು, ಹೋರಾಟಕ್ಕೆ ತಮ್ಮದೇ ಆದರೀತಿಯಲ್ಲಿ ನೆರವು ನೀಡಿದರೆಂಬ ವಿಷಯ ಇದರಿಂದ ಸ್ಪಷ್ಟವಾಗುತ್ತದೆ. ರಾಮರಾಯರು ಇರುವ ವಿಷಯವನ್ನು ಬಚ್ಚಿಡಲಿಲ್ಲ; ಸುಳ್ಳು ಹೇಳಲಿಲ್ಲ ಶರ್ಮರಂಥ ಪತ್ರಕೋದ್ಯಮಿಗಳು ತುಂಬಾ ಕಟುವಾಗಿ ಹೇಳಿದ್ದನ್ನು, ಸರಕಾರಕ್ಕೆ ಮೆದುವಾಗಿ ಹೇಳಿದರಷ್ಟೆ. ನಮ್ಮ ಪ್ರಾಚೀನ ಅನುವಾದಕರು ಇದೇ ಪದ್ಧತಿಯನ್ನು ಅನುವಾದ ಸಂದರ್ಭದಲ್ಲಿ ಬಳಸಿದರು. ಮೂಲ ಮಹಾಭಾರತದಲ್ಲಿ ಕುಂತಿಯು ಮಕ್ಕಳನ್ನ ಪಡೆಯುವ ಸಂದರ್ಭದ ವರ್ಣನೆಯನ್ನು ಪಂಪ, ನನ್ನಯ ಮತ್ತು ಕುಮಾರವ್ಯಾಸರು ಬದಲಾಯಿಸಿದರುವ ರೀತಿಯನ್ನು ಇಲ್ಲಿ ನೆನೆಯಬಹುದು.

****

# ಕರ್ನಾಟಕ ಸಂಗೀತದ ಮುಕುಟಮಣಿಗಳು

* ಡಾ॥ ಜಿ.ಆರ್. ಭಾರತಿ

ಕಲೆಯಲ್ಲಿ ಲಲಿತ ಮತ್ತು ಸಾಮಾನ್ಯ ಎಂಬ ಎರಡು ಪ್ರಭೇದಗಳಿವೆ ಲಲಿತಕಲಾ ಪ್ರಭೇದದಲ್ಲಿ ಸಂಗೀತವು ಹೃದಯದ ಭಾಷೆಯಾಗಿ ಮನುಷ್ಯ ಅಭಿವೃದ್ಧಿಯ ಪ್ರಮುಖವಾಗಿದ್ದು ಉನ್ನತ ಸ್ಥಾನದಲ್ಲಿದೆ. ನೃತ್ಯದಲ್ಲಿ, ಶಿಲ್ಪದಲ್ಲಿ, ಚಿತ್ರಕಲೆಯಲ್ಲಿ ಕೂಡ ತಮ್ಮ ಭಾವನೆಗಳನ್ನು ಅಭಿವ್ಯಕ್ತಗೊಳಿಸಲು ಸಂಗೀತವನ್ನು ಮಾಧ್ಯಮವನ್ನಾಗಿ ಬಳಸಿಕೊಂಡಿದ್ದಾರೆ. ಪ್ರಾಚೀನ ಕಾಲದಲ್ಲಿನ ಮಾನವ ಸಹ ತನ್ನ ಸಂತೋಷವನ್ನು ವ್ಯಕ್ತಪಡಿಸಲು ಯಾವುದೇ ಕ್ರಮವಿಲ್ಲದ ರಾಗಗಳನ್ನು ಹೊರಡಿಸಿದ್ದಾನೆ. ವೇದಗಳಲ್ಲಿ ಬ್ರಹ್ಮಜ್ಞಾನ ಪಡೆದ ಋಷಿಗಳು ಸಂತೋಷದಿಂದ ಹಾಹ್ಯಹಾಹೂಹಾಹೂ ಎಂದು ಹಾಡಿರುವುದು ತೈತ್ತಿರೀಯ ಉಪನಿಷತ್ತಿನ ಬ್ರಹ್ಮಾನಂದವಲ್ಲಿಯಲ್ಲಿ ಉಕ್ತವಾಗಿದೆ. ಅಷ್ಟೇ ಅಲ್ಲ ಸಾಮವೇದವು ರಾಗಪೂರ್ಣವಾಗಿದೆ. ಜಾನಪದ ಗೀತೆಗಳಲ್ಲಿ ಸಂಗೀತ ಶಾಸ್ತ್ರೀಯವಾಗಿ ಕ್ರಮಬದ್ಧವಾಗಿಲ್ಲದಿದ್ದರೂ ತಾವು ಹೇಳಬೇಕಾದುದನ್ನು ರಾಗಬದ್ಧವಾಗಿ, ತಾಳಬದ್ಧವಾಗಿ ಸರಳವಾಗಿ ಹೇಳಿರುವುದು ಸರ್ವವಿದಿತ ಇನ್ನು ಶಾಸ್ತ್ರೀಯ ಸಂಗೀತಕ್ಕೆ ಬಂದರೆ ಕಾಲದಿಂದ ಕಾಲಕ್ಕೆ ಲಕ್ಷ್ಯ ಲಕ್ಷಣಗಳಿಂದ ಕೂಡಿದ ಶುದ್ಧ ಶಾಸ್ತ್ರೀಯ ಸಂಗೀತ ಪದ್ಧತಿ ಪ್ರಾರಂಭವಾಯಿತು. ಸಂಗೀತದ ಬೆಳವಣಿಗೆಯ ಕಡೆಗೆ ಒಮ್ಮೆ ಕಣ್ಣು ಹಾಯಿಸಿದರೆ ಅಚ್ಚರಿಯೆನಿಸುವಷ್ಟು ಸಂಗತಿಗಳು ತೆರೆದುಕೊಳ್ಳುತ್ತವೆ. ಸಂಗೀತದ ಬಗೆಗೆ ಅಧ್ಯಯನ ಮಾಡುವುದೂ ಒಂದು ರೋಚಕ ಅನುಭವವಾಗಿ ರಸಾಸ್ವಾದನೆಗೆ ಕಾರಣವಾಗುತ್ತದೆ. ಅಂತಹ ಆನಂದ ಸಂಗೀತದಲ್ಲಿದೆ.

ಸಂಗೀತ ಕ್ರಿಯಾಶೀಲವಾದುದು. ಇದನ್ನು ಪ್ರಾಚೀನ ಕಾಲದಿಂದ ಇತಿಹಾಸ, ಪೂರ್ವಯುಗ, ವೇದಯುಗ, ವೇದೋತ್ತರ ಯುಗವೆಂದು ಅಧ್ಯಯನ ಮಾಡಬಹುದೆಂದು ವಿದ್ವಾಂಸರು ತಿಳಿಸಿದ್ದಾರೆ. 'ನಾರದೀಯ ಶಿಕ್ಷಾ'ದಲ್ಲಿ ಪಂಚಜಾತಿ ಶ್ರುತಿಗಳ ಮೇಲೆ ಆಧಾರಿತವಾಗಿರುವಂತಹ ೨೨ ಶ್ರುತಿಗಳ ಬಗ್ಗೆ ವೈಜ್ಞಾನಿಕವಾಗಿ ನಿಯಮ ಮತ್ತು ಸಿದ್ಧಾಂತಗಳನ್ನು ಭರತನು ರೂಪಿಸಿದ್ದಾನೆ. ಮುಂದೆ ಕೋಹಿಲಯಾಷ್ಠಿಕ, ಸ್ವಾತಿ, ಲೊಲ್ಲಟ, ಉದ್ಭಟ ಮುಂತಾದ ಲಾಕ್ಷಣಿಕರು ಸಂಗೀತ, ನೃತ್ಯ, ನಾಟಕಗಳ ವಿಚಾರವಾಗಿ ಹಲವಾರು ವಿಚಾರಗಳನ್ನು ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆಂದು ತಿಳಿದುಬರುತ್ತದೆ. ೫ನೆಯ ಶತಮಾನದಿಂದ ೧೬ನೆಯ ಶತಮಾನದವರೆಗಿನ ಮಧ್ಯ ಯುಗದ ಕಾಲವನ್ನು ರತ್ನಾಕರ ಪೂರ್ವ, ರತ್ನಾಕರೋತ್ತರ ಎಂದು ಎರಡು ಭಾಗಗಳಲ್ಲಿ ಕರೆಯಲಾಗಿತ್ತು. ಮೊದಲ ಭಾಗದಲ್ಲಿ ನಾಟ್ಯದ ಒಂದು ಭಾಗವಾಗಿ ಸಂಗೀತವಿದ್ದರೆ ಎರಡನೆಯ ಭಾಗದಲ್ಲಿ ಹಿಂದೂಸ್ತಾನಿ ಮತ್ತು ಕರ್ನಾಟಕವೆಂಬ ಶೈಲಿಯನ್ನು ಗುರುತಿಸಲು ಪ್ರಯತ್ನಿಸಲಾಗಿತ್ತು. ಈ ಕಾಲದಲ್ಲಿದ್ದ ಲಾಕ್ಷಣಿಕರಲ್ಲಿ ಮತಂಗ, ಸಿಂಹಭೂಪಾಲ, ಶಾರ್ಙ್ಗದೇವ, ರಾಮಾಮಾತ್ಯ ಪುರಂದರದಾಸರನ್ನು ಮುಖ್ಯವಾಗಿ ಹೆಸರಿಸಬಹುದು. ಮತಂಗನ ಬೃಹದ್ದೇಶಿಯಲ್ಲಿ ಪ್ರಾಂತ ಜನಾಂಗಗಳ ಹೆಸರುಗಳನ್ನು ನಿಯಮಬದ್ಧ ಪ್ರಾಂತೀಯ ಧ್ವನಿ ಗೀತೆಗಳಿಗೆ ಇಡುವುದರ ಜೊತೆಗೆ ಅವುಗಳನ್ನು ಶಾಸ್ತ್ರೀಯ ಪರಂಪರೆಗೆ ಅವುಗಳನ್ನು ಸೇರಿಸಿದರು.

ಸುಮಾರು ೧೬೫೦ ರ ಕಾಲದವನಾದ ವೆಂಕಟಮುಖಿಯು ೭೨ ಮೇಳ ರಾಗಗಳನ್ನು ವ್ಯವಸ್ಥೆಗೊಳಿಸಿದ. ಈತ 'ಚತುರ್ದಂಡೀ ಪ್ರಕಾಶಿಕಾ' ಎಂಬ ಶಾಸ್ತ್ರಗ್ರಂಥವನ್ನು ತಂಜಾವೂರಿನ ನಾಯಕ ದೊರೆ ವಿಜಯರಾಘವನ ಆಜ್ಞೆಯ ಮೇರೆಗೆ ಬರೆದಿದ್ದಾನೆ. ಇಂದಿನ ಕರ್ನಾಟಕ ಸಂಗೀತಕ್ಕೆ ಭದ್ರ ನೆಲೆಯನ್ನು ಒದಗಿಸಿಕೊಟ್ಟಿರುವಂಥ ಆಕರ ಗ್ರಂಥವೆಂದು ಇದನ್ನು ಗುರುತಿಸಲಾಗಿದೆ. ದಂಡಿಯೆಂದರೆ ಆಧಾರ ಸ್ತಂಭ. ಈತನ್ನು ಗೀತ, ಠಾಯ, ಆಲಾಪ, ಪ್ರಬಂಧ ಎಂಬ ನಾಲ್ಕು ಭಾಗಗಳನ್ನು ನಾಲ್ಕು ದಂಡಿಗಳೆಂದು ಕರೆದಿದ್ದಾನೆ. ಇದರಲ್ಲಿ ವೀಣಾ, ಶ್ರುತಿ, ಸ್ವರ, ಮೇಳ, ರಾಗ, ಆಲಾಪ, ಠಾಯ, ಗೀತ, ಪ್ರಬಂಧ ಮತ್ತು ತಾಳವೆಂಬ ಹತ್ತು ಪ್ರಕರಣಗಳಿವೆ. ಇದರಲ್ಲಿ ಮೊದಲ ಒಂಭತ್ತು ಪ್ರಕರಣಗಳು ಲಭ್ಯವಿದ್ದು ಹತ್ತನೆಯದಾದ ತಾಳಪ್ರಕರಣ ಲಭ್ಯವಿಲ್ಲದೆ ಈ ಗ್ರಂಥವು ಅಪೂರ್ಣವೆನಿಸಿಕೊಂಡಿದೆ. ವೆಂಕಟಮುಖಿಯು ಹಲವಾರು ರಾಗಾಂಗ, ಉಪಾಂಗ, ಭಾಷಾಂಗರಾಗಗಳ ಲಕ್ಷಣಗಳ ಬಗ್ಗೆ ವಿವರಿಸಿದ್ದಾನೆ. ೭೨ ಮೇಳಗಳಿಗೆ ವೆಂಕಟಮುಖಿಯು ಹೆಸರು ಸೂಚಿಸಿಲ್ಲವಾದರೂ ಈತನ ಮೊಮ್ಮಗ

---

* ನಂ. ೩೦, 'ವಾತ್ಸಲ್ಯ', ೧ನೇ ಅಡ್ಡರಸ್ತೆ, ಓಬಳಪ್ಪ ಗಾರ್ಡನ್, ಬೆಂಗಳೂರು-೫೬೦ ೦೭೦.

ಮುದ್ದುವೆಂಕಟಮುಖಿ ಈ ಮೇಳಗಳಿಗೆ ಹೆಸರಿಟ್ಟು ಗ್ರಂಥದೊಡನೆ ಸೇರಿಸಿದನೆಂದು ವಿದ್ವಾಂಸರು ಊಹಿಸಿದ್ದಾರೆ. ಮುಂದೆ ಜಯದೇವ, ಅಹೋಬಲ, ನಾರಾಯಣತೀರ್ಥ, ಗುರುಮೂರ್ತಿ ಶಾಸ್ತ್ರಿ ಪೈದಾಲ, ತುಳಜಾಜಿ ಮಹಾರಾಜ, ಸದಾಶಿವ ಬ್ರಹ್ಮೇಂದ್ರ, ರಾಮಸ್ವಾಮಿ ದೀಕ್ಷಿತ, ಅನ್ನಮಾಚಾರ್ಯ ಮುಂತಾದವರು ತಮ್ಮ ಕೊಡುಗೆಗಳನ್ನು ನೀಡುವ ಮೂಲಕ ಸಂಗೀತ ಪರಂಪರೆಯನ್ನು ಉಜ್ವಲಗೊಳಿಸಿದ್ದಾರೆ.

ತ್ಯಾಗರಾಜ, ಶ್ಯಾಮಾಶಾಸ್ತ್ರಿ, ಮುತ್ತುಸ್ವಾಮಿ ದೀಕ್ಷಿತ್ ಸ್ವಾತಿ ತಿರುನಾಳರು ಸಂಗೀತ ಶಾಸ್ತ್ರದ ಇತಿಹಾಸದಲ್ಲಿ ತಮ್ಮ ಜ್ಞಾನ, ಭಕ್ತಿ, ವೈರಾಗ್ಯಗಳ ಮೂಲಕ ಹೊಸ ಹೊಸ ರಾಗಗಳನ್ನು ಸಂಶೋಧನೆ ಮಾಡುವುದರೊಂದಿಗೆ ಸಂಗೀತ ನೈಜ ಸೌಂದರ್ಯವನ್ನು ಪುಷ್ಟಿಗೊಳಿಸಿದರು. ದೊರೆಸ್ವಾಮಿ ಅಯ್ಯರ್, ಕರೂರು ದಕ್ಷಿಣಾಮೂರ್ತಿ ಶಾಸ್ತ್ರಿ, ಘನಂ ಕೃಷ್ಣಯ್ಯರ್, ವೀಣಾ ಕುಪ್ಪಯ್ಯರ್, ವೀಣೆ ಶೇಷಣ್ಣ, ಮೈಸೂರು ಸದಾಶಿವರಾವ್, ಬಿಡಾರಂ ಕೃಷ್ಣಪ್ಪ, ಪಿಟೀಲು ಚೌಡಯ್ಯ ಮುಂತಾದ ಹತ್ತಾರು ಸಂಗೀತ ದಿಗ್ಗಜರು ಸಂಗೀತ ಕ್ಷೇತ್ರವನ್ನು ಮತ್ತಷ್ಟು ಶ್ರೀಮಂತಗೊಳಿಸಿದರು. ಆರಂಭದ ಸಂಗೀತದಲ್ಲಿ ಲಕ್ಷಣಕ್ಕೆ ಪ್ರಾಧಾನ್ಯತೆಯಿದ್ದರೂ ಮುಂದೆ ಲಕ್ಷ್ಯಕ್ಕೆ ಪ್ರಾಧಾನ್ಯತೆ ಹೆಚ್ಚಾಯಿತು. ಹೀಗಾಗಿ ಲಕ್ಷ್ಯ ಗ್ರಂಥಗಳ ಸಂಖ್ಯೆ ಹೆಚ್ಚಾಗಿ ಲಭ್ಯವಾಗಿವೆ.

ಸ್ವರಗಳಲ್ಲಿ ಸಪ್ತಸ್ವರಗಳಾದ 'ಸ,ರಿ,ಗ,ಮ,ಪ,ದ,ನಿ' ಇವು ಆಧಾರ ಸ್ವರಗಳಾಗಿವೆ. ಲಾಕ್ಷಣಿಕರು ಸುಸ್ವರ, ಸುರಸ, ಸುರಾಗ, ಮಧುರಾಕ್ಷರ, ಸಾಲಂಕಾರ, ಸಪ್ರಮಾಣ ಇವುಗಳನ್ನು ಉತ್ತಮ ಸಂಗೀತದ ಲಕ್ಷಣಗಳೆಂದು ಹೇಳಿದ್ದಾರೆ. ವಾದ, ಸ್ವರ, ತಾಳ, ರಾಗ, ಶ್ರುತಿ, ಸ್ಥಾಯಿ ಇವು ಸಂಗೀತದ ಅಂಗಗಳಾಗಿವೆ. 'ಶ್ರುತಿರ್ಮಾತಾ ಲಯಃಪಿತಾ' ಎಂಬ ಉಕ್ತಿ ಸಂಗೀತಕ್ಕೆ ಶ್ರುತಿ ಮತ್ತು ಲಯವು ತಾಯಿ ತಂದೆಯ ಸ್ಥಾನದಲ್ಲಿವೆ ಎನ್ನುತ್ತದೆ. ಭಾರತೀಯ ಸಂಗೀತದಲ್ಲಿ ರಾಗಪ್ರಧಾನವಾದ ಸಂಗೀತ ಬೆಳೆದು ಬಂದಿದೆ. ಆದ್ದರಿಂದಲೇ ಭಾರತೀಯ ಸಂಗೀತ ವಿಶ್ವದಲ್ಲಿಯೇ ಅತ್ಯಂತ ಉನ್ನತ ಸ್ಥಾನದಲ್ಲಿದ್ದು ಇದು ಸಂಗೀತ ಪ್ರಪಂಚಕ್ಕೆ ಭಾರತೀಯರ ಕೊಡುಗೆಯಾಗಿದೆ. ಇನ್ನೊಂದು ಪ್ರಮುಖ ಸಂಗತಿಯೆಂದರೆ ಭಾರತೀಯ ಸಂಗೀತ ರಚನೆಗಳನ್ನು ನಿರ್ದಿಷ್ಟ ಶ್ರುತಿಗೆ ಬದ್ಧಗೊಳಿಸಿಲ್ಲ. ಗಾಯಕ ತನ್ನ ಶಾರೀರಕ್ಕೆ ತಕ್ಕ ಶ್ರುತಿಯನ್ನು ಆಧಾರ ಷಡ್ಜನಾಗಿ ಇಟ್ಟುಕೊಳ್ಳುವ ಸ್ವತಂತ್ರವನ್ನು ಹೊಂದಿದ್ದಾನೆ. ಇದರಿಂದಾಗಿ ರಾಗಪದ್ಧತಿಯಲ್ಲಿ ಸೃಜನಶೀಲತೆಗೆ, ರಾಗದ ವಿಸ್ತಾರಕ್ಕೆ ತನ್ಮೂಲಕ ಸಂಗೀತದ ಬೆಳವಣಿಗೆಗೆ ವಿಪುಲ ಅವಕಾಶಗಳು ಲಭ್ಯವಾಗಿವೆ. ಸುಮಾರು ೧೩ನೆಯ ಶತಮಾನದ ಅಂತ್ಯದವರೆಗೆ ಬಂದ ಶಾಸ್ತ್ರಗ್ರಂಥಗಳು ಒಂದೇ ರೀತಿಯ ನಿರೂಪಣೆಗಳು ಕಂಡುಬಂದರೂ ಮುಂದೆ ಊರ್ಧ್ವಗಮನ, ಅಂಧೋಗಮನಗಳು ಕ್ರಮವಾಗಿ ಲೌಕಿಕ ಮತ್ತು ವೈದಿಕಗಾನಗಳು ಸ್ಫೂರ್ತಿಗೊಳಪಟ್ಟವು.

ಇಲ್ಲಿಂದ ಮುಂದೆ ಭಾರತದಲ್ಲಿ ವಿದೇಶಿಯರ ಆಕ್ರಮಣ, ಅಧಿಕಾರಗಳಿಂದಾಗಿ ಭಾರತದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಜೀವನಗಳ ಮೇಲೂ ಸಾಕಷ್ಟು ಪ್ರಭಾವಗಳುಂಟಾದವು. ಸಂಗೀತವೂ ಇದಕ್ಕೆ ಹೊರತಾಗಿರಲಿಲ್ಲ. ಇದರಿಂದ ಭಾರತೀಯ ಸಂಗೀತವು ಇನ್ನಷ್ಟು ಹೊಸ ಸೇರ್ಪಡೆಗಳಿಂದ ಮತ್ತಷ್ಟು ಶ್ರೀಮಂತವಾಯಿತು. ದಾಕ್ಷಿಣಾತ್ಯ ಮತ್ತು ಔತ್ತರೇಯ ಪದ್ಧತಿಗಳೆಂಬ ಎರಡು ಪ್ರಧಾನ ಶಾಖೆಗಳು ಬೆಳೆದು ಬಂದವು. ಅನ್ಯಪ್ರಭಾವವು ಉತ್ತರದಲ್ಲಿ ಹೆಚ್ಚಾಗಿದ್ದರಿಂದ ಅದನ್ನು ಔತ್ತರವೆಂದೂ. ಅನ್ಯಪ್ರಭಾವವು ತುಂಬ ವಿರಳವಾಗಿ ಸ್ವಂತಿಕೆಯಿಂದ ಕೂಡಿದ ದಕ್ಷಿಣದ ಸಂಗೀತವು ದಾಕ್ಷಿಣಾತ್ಯ ಎನಿಸಿಕೊಂಡಿತು. ಪಕ್ಕವಾದ್ಯಗಳಲ್ಲಿ ಕೂಡ ಬದಲಾವಣೆಗಳಿರುವುದು ಇದಕ್ಕೆ ಸಾಕ್ಷಿ. ಸಾಹಿತ್ಯದಲ್ಲಿ ಸಹ ಪ್ರಭಾವಗಳು ಹೆಚ್ಚಿನ ಪರಿಣಾಮವನ್ನು ಬೀರಿದೆಯೆನ್ನುವುದರಲ್ಲಿ ಎರಡು ಮಾತಿಲ್ಲ.

ಸಂಗೀತ ಕ್ಷೇತ್ರದಲ್ಲಿ ಸಾಧನೆ ಮಾಡಿದ ಸಾಧಕರು ನೂರಾರು ಮಂದಿ. ಮುಖ್ಯರಾದವರನ್ನು ಹೆಸರಿಸಬಹುದಾದರೆ :-

ಮತಂಗ, ವೆಂಕಟಮುಖಿ, ಮುದ್ದು ವೆಂಕಟಮುಖಿ, ಜಯದೇವ, ಅಹೋಬಲ, ನಾರಾಯಣತೀರ್ಥ (ಸಿಗಲಿಲ್ಲ), ಗುರುಮೂರ್ತಿ ಶಾಸ್ತ್ರಿ ಪೈದಾಲ, ತುಳಜಾಜಿ ಮಹಾರಾಜ, ಸದಾಶಿವ ಬ್ರಹ್ಮೇಂದ್ರ, ರಾಮಸ್ವಾಮಿ ದೀಕ್ಷಿತ (ಸಿಗಲಿಲ್ಲ), ಅನ್ನಮಾಚಾರ್ಯ, ತ್ಯಾಗರಾಜ (ವೆಂಕಟರಮಣ ಭಾಗವತರು ಉಮಯಾಳ್ಪುರಂ ಕೃಷ್ಣ ಭಾಗವರ ಸುಂದರಂ ಭಾಗವತ ವೀಣೆ ಕುಪ್ಪಯ್ಯ), ಶ್ಯಾಮಾಶಾಸ್ತ್ರಿ, ಮುತ್ತುಸ್ವಾಮಿ ದೀಕ್ಷಿತ್, ಸ್ವಾತಿ ತಿರುನಾಳ್, ದೊರೆಸ್ವಾಮಿ ಅಯ್ಯರ್, ಕರೂರ್ ದಕ್ಷಿಣಾಮೂರ್ತಿ ಶಾಸ್ತ್ರಿ, ಘನಂ ಕೃಷ್ಣಯ್ಯರ್ (ಸಿಗಲಿಲ್ಲ), ವೀಣಾ ಕುಪ್ಪಯ್ಯರ್, ವೀಣೆ ಶೇಷಣ್ಣ, ವೀಣಾ ಸುಬ್ಬಣ್ಣ, ಮೈಸೂರು ಸದಾಶಿವರಾವ್,

ಬಿಡಾರಂ ಕೃಷ್ಣಪ್ಪ, ಪಿಟೀಲು ಚೌಡಯ್ಯ, ವಾಸುದೇವಾಚಾರ್ಯ, ರಾಳ್ಳಪಲ್ಲಿ ಅನಂತಕೃಷ್ಣ ಶರ್ಮ, ಎಂ.ಎಸ್. ಸುಬ್ಬಲಕ್ಷ್ಮೀ, ವೀಣಾ ಧನಮ್ಮಾಳ್. ಮುಂತಾದವರು ಇವರಲ್ಲದೆ ಇನ್ನೂ ಅನೇಕರು ಸಂಗೀತ ಕ್ಷೇತ್ರವನನು ಬೆಳಗಿದ್ದಾರೆ. ವಿಜಯನಗರ ಆಸ್ಥಾನ, ಮೈಸೂರು ಒಡೆಯರ ಕಾಲದಲ್ಲಿ ಸಂಗೀತಕ್ಕೆ ಅಪಾರವಾದ ಪ್ರೋತ್ಸಾಹವಿತ್ತರು ಇನ್ನು ದಾಸ ಪರಂಪರೆಯಲ್ಲಂತೂ ಸಹಸ್ರಾರು ಸಂಖ್ಯೆಯಲ್ಲಿ ದಾಸರು ರಚಿಸಿದ ಕೀರ್ತನೆಗಳು, ಸುಳಾದಿ, ಉಗಾಭೋಗ ಮುಂತಾದವುಗಳ ಸಾಹಿತ್ಯವು ದೊರಕುತ್ತದೆ.

ಇನ್ನೂ ಉತ್ತರಾದಿ ಸಂಗೀತದಲ್ಲೂ ಕೂಡ ಬಹಳಷ್ಟು ಸಾಧಕರಿದ್ದಾರೆ. ಪ್ರಸ್ತುತ ಕರ್ನಾಟಕ ಸಂಗೀತವನ್ನು ಮಾತ್ರ ಕೇಂದ್ರವಾಗಿರಿಸಿಕೊಂಡು ಹಲವು ವಿವರಗಳ ಕಡೆಗೆ ಆದ್ಯತೆಯನ್ನು ನೀಡಲಾಗಿದೆ. ೨೦-೨೧ ನೆಯ ಶತಮಾನದ ಬಹಳಷ್ಟು ಸಂಗೀತಗಾರರ ಬಗೆಗೆ ಇಲ್ಲಿ ಪ್ರಸ್ತಾಪಿಸಲು ಸಾಧ್ಯವಾಗಿಲ್ಲವಾದರೂ ಹಳೆಯ ತಲೆಮಾರಿನ ಕೆಲವು ಸಂಗೀತಗಾರರ ಜೀವನ ಸಾಧನೆಯ ಬಗ್ಗೆ ಮುಂದೆ ವಿವರಿಸಲಾಗಿದೆ. ಮುಖ್ಯವಾಗಿ ವೆಂಕಟಮುಖಿ, ಕರ್ನಾಟಕ ಸಂಗೀತದ ತ್ರಿಮೂರ್ತಿಗಳಾದ ಶ್ಯಾಮಾಶಾಸ್ತ್ರೀ, ತ್ಯಾಗರಾಜ ಮುತ್ತುಸಾಮಿ ದೀಕ್ಷಿತರ ಬಗ್ಗೆ ವಿಶೇಷವಾಗಿ ಇನ್ನು ಕೆಲವು ಸಂಗೀತಜ್ಞರ ಬಗ್ಗೆ ಸ್ಥೂಲವಾಗಿ ಪರಿಚಯಿಸಲಾಗಿದೆ. ಎಲ್ಲ ಸಂಗೀತಗಾರರ ಬಗ್ಗೆ ಅರಿಯುವುದೆಂದರೆ ಆಕಾಶದಲ್ಲಿ ಬೆಳಗುವ ಅಸಂಖ್ಯ ನಕ್ಷತ್ರಗಳನ್ನು ಎಣಿಸುವಂತೆ ಮೌಢ್ಯದ ಪರಮಾವಧಿಯಾಗುವುದು.

### ವೆಂಕಟಮುಖಿ

ಸ್ವಯಂ ಶಾಸ್ತ್ರಜ್ಞ, ವಾಗ್ಗೇಯಕಾರ, ಗಾಯಕ ಮತ್ತು ವೈಣಿಕ ವೆಂಕಟಮುಖಿಯ ಕಾಲ ಸು ೧೬-೧೭ನೆಯ ಶತಮಾನ. ತಂಜಾವೂರಿನ ನಾಯಕ ಅರಸ ವಿಜಯರಾಘವನ ಆಜ್ಞೆಯ ಮೇರೆಗೆ 'ಚತುರ್ದಂಡೀ ಪ್ರಕಾಶಿಕಾ' ಎನ್ನುವ ಶಾಸ್ತ್ರ ಕೃತಿಯನ್ನು ಬರೆಯುವುದರ ಮೂಲಕ ಕರ್ನಾಟಕ ಸಂಗೀತದ ೭೨ ಮೇಳಕರ್ತ ರಾಗಗಳನ್ನು ವ್ಯವಸ್ಥೆಗೊಳಿಸಿದ್ದಾನೆ. 'ಚತುರ್ದಂಡೀ ಪ್ರಕಾಶಿಕಾ'ದಲ್ಲಿ ಹತ್ತು ಪ್ರಕರಣಗಳಲ್ಲಿ ಸಂಗೀತದ ಬಗೆಗೆ ಪೂರ್ಣ ವಿವರಗಳನ್ನು ನೀಡಿದ್ದಾನೆ. ಅವು ಯಾವುವೆಂದರೆ ವೀಣಾ, ಶ್ರುತಿ, ಸ್ವರ, ಮೇಳ, ರಾಗ, ಆಲಾಪ, ಠಾಯ, ಗೀತ, ಪ್ರಬಂಧ, ಮತ್ತು ತಾಳ ಎಂಬುವುಗಳಾಗಿವೆ. ಸಂಗೀತದ ಆಧಾರ ಸ್ತಂಭಗಳಲ್ಲಿ ಗೀತ, ಠಾಯ, ಆಲಾಪ, ಪ್ರಬಂಧ ಮತ್ತು ಅವುಗಳ ಅವಯವಗಳನ್ನು ವಿವರಿಸುತ್ತದೆ. ವೀಣಾ ಪ್ರಕರಣವು ವೀಣೆಯ ರಚನೆ, ಅವುಗಳಲ್ಲಿ ವೈವಿಧ್ಯತೆ, ವಾದ್ಯವಾದಕ ಮತ್ತು ವಾದನತಂತ್ರಗಳನ್ನು ವಿವರಿಸುತ್ತದೆ. ಶುದ್ಧಮೇಳ ವೀಣಾ, ಮಧ್ಯಮೇಳವೀಣಾ ಮತ್ತು ರಘುನಾಥೇಂದ್ರ ಮೇಳ ವೀಣಾಗಳ ಬಗ್ಗೆ ವಿವರಿಸಲಾಗಿದೆ. ಶ್ರುತಿಯ ಬಗ್ಗೆ ಮೊತ್ತ ಮೊದಲ ಬಾರಿಗೆ ಸಾರಣೆಯ ಕಲ್ಪನೆ ಇಲ್ಲಿ ಬಂದಿದೆ. ಸ್ತಪ್ತ ಸ್ವರಗಳಲ್ಲಿ ಇಪ್ಪತ್ತೆರಡು ಶ್ರುತಿಗಳು ಹೇಗೆ ಅಡಕವಾಗಿದೆ ಮತ್ತು ವೀಣೆಯಲ್ಲಿ ಅದನ್ನು ಪ್ರಯೋಗಿಸುವ ಬಗೆಯನ್ನು ಶ್ರುತಿಪ್ರಕರಣದಲಲಿ ವಿವರಿಸಲಾಗಿದೆ.

ಸ್ವರ ಪ್ರಕರಣದಲ್ಲಿ ಶ್ರುತಿಗಳಿಂದ ಹುಟ್ಟುವ ಸ್ವರಗಳ ಬಗೆಗೆ ನಿರೂಪಣೆಯಿದೆ. ಏಳು ಶುದ್ಧಸ್ವರಗಳು, ಐದು ವಿಕೃತ ಸ್ವರಗಳು ಸೇರಿ ಒಟ್ಟು ಹನ್ನೆರಡಾಗಿದೆ. ಈ ಸ್ವರ ಸಮೂಹಕ್ಕೆ ಗ್ರಾಮ ಎನ್ನಲಾಗಿದ್ದು ಷಡ್ಜಗ್ರಾಮ ಮಾತ್ರವೇ ಉಪಯುಕ್ತ ಎಂದು ಹೇಳಲಾಗಿದೆ. ನಾಲ್ಕನೆಯ ಮೇಳ ಪ್ರಕರಣವು ೭೨ ಮೇಳಗಳನ್ನು ಕಲ್ಪಿಸಲು ಅಗತ್ಯವಾದ ಹದಿನಾರು ಸ್ವರಗಳ ವಿವರ. ಮೂರು ಮೂರು ಭೇದಗಳು ಎಲ್ಲ ರಾಗಗಳಿಗೂ ಅತ್ಯವಶ್ಯಕವಾದ ಷಡ್ಜ, ಪಂಚಮ ಸ್ವರಗಳ ಬಗ್ಗೆ ವಿವರವಿದೆ. ಏಳು ಸ್ವರಗಳ ಒಟ್ಟುಗೂಡಿಗೆ ಮೇಳ ಮೇಳನೆಂಬುದನ್ನು ಸಂಗೀತ ಬಲ್ಲವರು ಹೇಳುತ್ತಾರೆ ಎನ್ನುತ್ತ ಎಪ್ಪತ್ತೆರಡು ಭೇದ ವಿವರಗಳನ್ನು ಪೂರ್ವಮೇಳ ಮತ್ತು ಉತ್ತರಮೇಳಗಳ ಬಗ್ಗೆಯೂ ವಿಸ್ತೃತ ವಿವರವನ್ನು ನೀಡಲಾಗಿದೆ. ರಾಗ ಪ್ರಕರಣವಲ್ಲಿ ಶ್ರೋತೃಗಳ ಮನರಂಜನೆಯೇ ರಾಗವೆನ್ನುತ್ತ ಅದಕ್ಕೆ ಲಂಘನ, ಅಲಂಘನ, ವಾದಿ ಸಂವಾದಿ ಸ್ವರ, ರಾಗದ ದಶಲಕ್ಷಣಗಳನ್ನು ವಿವರಿಸಿದೆ. ಆಕ್ಷಿಪ್ತಿಕಾ, ರಾಗವರ್ಧಿನಿಯ ಬಗೆಗೆ ಆಲಾಪ ಪ್ರಕರಣ ಕೇಂದ್ರಿಕೃತವಾಗಿದೆ. ಠಾಯ ಪ್ರಕರಣದಲ್ಲಿ ನ್ಯಾಸಮಾಡುವ ಕ್ರಮದ ವಿವರಣೆಯಿದೆ. ಗೀತ ಪ್ರಕರಣದಲ್ಲಿ ಸಾಲಗಸೂಡನೆಂಬ ಗೀತದ ಬಗ್ಗೆಯೂ ಮತ್ತು ರಸಾಭಿವ್ಯಕ್ತಿಯ ಬಗ್ಗೆಯೂ ವಿವರಿಸಲಾಗಿದೆ. ಒಂಭತ್ತನೆಯ ಪ್ರಬಂಧ ಪ್ರಕರಣದಲ್ಲಿ ಸ್ವರ, ಬಿರುದ, ಪದ, ತೇನಕ, ಪಾಟ, ತಾಳಗಳೆ ಆರು ಅಂಗಗಳು. ಉದ್ಗ್ರಾಹ, ಮೇಲಾಪಕ, ಧ್ರುವ, ಆಭೋಗ ಎಂಬ ನಾಲ್ಕು ಧಾತುಗಳಿಂದ ಕೂಡಿದ ರಚನೆಯನ್ನು ಪ್ರಬಂಧವೆಂದು ಕರೆಯಲಾಗುವುದು ಎಂದು ವಿವರಿಸಲಾಗಿದೆ. ತಾಳ ಪ್ರಕರಣವೆಂಬ ಹತ್ತನೆಯ ಪ್ರಕರಣವು ಲಭ್ಯವಿಲ್ಲ. ಅದು ಸಹ ಲಭ್ಯವಿದಿದ್ದರೆ ಕರ್ನಾಟಕ

ಸಂಗೀತದ ಬಗೆಗಿನ ಪೂರ್ಣ ವಿವರಣೆಗಳು ದೊರೆಯಿತು ಮತ್ತಷ್ಟು ವಿವರಣೆಗಳು ಮೂಲಕ ಸಂಗೀತದ ಬಗ್ಗೆ ಸಂಪೂರ್ಣ ಚಿತ್ರಣ ದೊರಕಿದಂತೆ ಆಗುತ್ತಿತ್ತು.

ವೆಂಕಟಮುಖಿಯು 'ಚತುರ್ದಂಡೀ ಪ್ರಕಾಶಿಕಾ' ಜೊತೆಗೆ ಬೋಧಾಯನ ಸೂತ್ರಶಾಸ್ತ್ರ, ದರ್ಶಪೂರ್ಣಮಾಸ ಪ್ರಯೋಗ, ಮೀಮಾಂಸ, ಮೊದಲದ ಕೃತಿಗಳನ್ನೂ ರಚಿಸಿದ್ದಾನೆ. ಕಾವ್ಯ, ನಾಟಕ, ಸಂಗೀತ, ಛಂದಸ್ಸು ಮುಂತಾದ ವಿದ್ಯೆಗಳಲ್ಲೂ ಪಾರಂಗತನಾಗಿದ್ದನೆಂದು ತಿಳಿದುಬರುತ್ತದೆ.

ಇನ್ನು ಕರ್ನಾಟಕ ಸಂಗೀತದ ತ್ರಿಮೂರ್ತಿಗಳಾದ ಶ್ಯಾಮಾಶಾಸ್ತ್ರೀ, ತ್ಯಾಗರಾಜ ಮತ್ತು ಮುತ್ತುಸ್ವಾಮಿ ದೀಕ್ಷಿತರು ಇನ್ನು ಕೆಲವರ ಜೀವನ ಸಾಧನೆಯ ಕಡೆಗೆ ಒಂದು ಸ್ಥೂಲ ನೋಟವನ್ನು ಹಾಯಿಸೋಣ.

ಶ್ಯಾಮಾಶಾಸ್ತ್ರೀ

ಸಂಗೀತ ಕ್ಷೇತ್ರ ಅದರಲ್ಲೂ ಕರ್ನಾಟಕ ಸಂಗೀತ ಲೋಕದ ದಿಗ್ಗಜರು ಕರ್ನಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಹಿರಿಯರು. ರಕ್ಕಸ ತಂಗಡಗಿ ಯುದ್ಧದ ನಂತರ ವಲಸೇ ಹೋದವರಲ್ಲಿ ಕಾಂಚೀಪುರದ ಕಾಮಾಕ್ಷಿ ದೇವಾಲಯದಲ್ಲಿ 'ಬಂಗಾರು ಕಾಮಾಕ್ಷಿ'ಯನ್ನು ಪೂಜಿಸುತ್ತಿದ್ದ ಅರ್ಚಕ ವಿಶ್ವನಾಥ ಶಾಸ್ತ್ರಿಗಳೂ ಇದ್ದರು. ಇವರು ತಂಜಾವೂರಿನಲ್ಲಿ ರಾಜಾಶ್ರಯ ಪಡೆದು ತಾವು ಪೂಜಿಸುತ್ತಿದ್ದ 'ಬಂಗಾರು ಕಾಮಾಕ್ಷಿ'ಯನ್ನು ಅಲ್ಲಿಯ ದೇವಾಲಯದಲ್ಲಿ ಪ್ರತಿಷ್ಠಾಪಿಸಿ ತಮ್ಮ ಅರ್ಚಕ ವೃತ್ತಿಯನ್ನು ಮುಂದುವರಿಸಿದರು. ಇವರ ಮಗನೇ ನಮ್ಮ ಸಂಗೀತ ತಾರೆ ಶ್ಯಾಮಾಶಾಸ್ತ್ರೀ. ಶ್ಯಾಮಶಾಸ್ತ್ರಿಗಳಿಗಿದ್ದ ಸಂಗೀತದ ಒಲವು ಕಂಡು ಈತನ ಸೋದರಮಾವ ಸಂಗೀತವನ್ನು ಕಲಿಸಲು ಪ್ರಾರಂಭಿಸಿದರು. ದೇವಾಲಯದಲ್ಲಿ ಹಾಡುತ್ತಿದ್ದಾಗ 'ಸಂಗೀತಸ್ವಾಮಿ'ಯವರ ಕಿವಿಗೆ ಬಿದ್ದ ಗಾನದಿಂದ ಆಕರ್ಷಿತರಾಗಿ ಶ್ಯಾಮಾಶಾಸ್ತ್ರಿಯವರ ತಂದೆಯ ಅನುಮತಿ ಪಡೆದು ತಾವು ತಂಜಾವೂರಿನಲ್ಲಿದ್ದಷ್ಟು ಕಾಲ ಕಲಿಸಿ, ತಾವು ಹಿಂದಿರುಗುವ ಮುನ್ನ ಆಸ್ಥಾನ ವಿದ್ವಾಂಸ ಸಚ್ಚಿಮಿರಿಯಮ್ ಆದಿಯಪ್ಪೈಯ್ಯನವರಲ್ಲಿ ಸಂಗೀತ ಶಿಕ್ಷಣವನ್ನು ಮುಂದುವರಿಸಲು ಅಗತ್ಯವಾದ ಸೌಕಾರ್ಯವನ್ನು ಮಾಡಿಕೊಟ್ಟರು.

ಕರ್ನಾಟಕ ಸಂಗೀತಕ್ಕೆ ಅಪಾರ ಕೊಡುಗೆಗಳನ್ನಿತ್ತಿರುವ ಶ್ಯಾಮಾಶಾಸ್ತ್ರಿಗಳ ರಚನೆಗಳು ಸುಂದರವಾಗಿವೆ. ಇವರ ಮೆಚ್ಚಿನ ರಾಗ ಆನಂದ ಭೈರವಿ. ಈ ರಾಗದ 'ಬಂಗಾರು ಕಾಮಾಕ್ಷಿ' ಎಂಬ ತಮಿಳು ಕೃತಿ, ಮರಿವೇರೆಗತಿ, ಓ ಜಗದಂಬಾ, ಪಾಹಿ ಶ್ರೀ ಗಿರಿರಾಜಸುತೆ, ಹಿಮಾಚಲತನಯೆ ಮುಂತಾದವು ಪ್ರಸಿದ್ಧವಾಗಿವೆ. 'ಕಾಮಾಕ್ಷಿ ಅನುದಿನಮ (ಭೈರವಿ), ರಾವೆ ಹಿಮಗಿರಿತನಯೆ (ತೋಡಿ), 'ಕಾಮಾಕ್ಷಿ ನೀ ಪರಯುಗವೇ ಸ್ಥಿರಮನಿ (ಯದುಕುಲ ಕಾಂಭೊಜಿ) ಈ ಮೂರೂ ಕೃತಿಗಳ ಸ್ವರಜತಿಗಳ ವಿದ್ವತ್ತಿಗೆ ಸಮನಾಗಿ ಬೇರೆ ಸ್ವರಜತಿಗಳಿಲ್ಲವೆಂಬ ಮಾತಿದೆ. ಭೈರವಿ ರಾಗದ ಸರಿಕಾವರಮ್ಮ, ಶಂಕರಾಭರಣ ರಾಗದ 'ಸರೋಜದಳ ನೇತ್ರಿ' ಪುನ್ನಾಗವರಾಳಿ ರಾಗದ 'ಕನಕ ಶೈಲ ವಿಹಾರಿಣಿ', ಸಂಸ್ಕೃಯದ 'ಹಿಮಾದ್ರಿಸುತೆ' ಮುಂತಾದವುಗಳು ಅತಿ ಪ್ರಸಿದ್ಧವಾಗಿವೆ. ಬ್ರೋವವಮ್ಮ (ಮಾಂಜಿರಾಗ), 'ದೇವಿಬ್ರೋವ ಸಮಯವಿದೆ' (ಚಿಂತಾಮಣಿ ರಾಗ), 'ಪಾರ್ವತಿನಿಮ್ಮ' (ಕಲಗಡರಾಗ) ಈ ಮೂರು ಅಪೂರ್ವ ರಾಗದಲ್ಲಿರುವ ಕೃತಿಗಳು ಭಕ್ತಿರಸ ಮತ್ತು ರಾಗ, ಭಾವಗಳೊಂದಿಗೆ ಬೆರೆಸಿರುವ ರೀತಿ ಶ್ಯಾಮಾಶಾಸ್ತ್ರಿಗಳ ಪ್ರತಿಭೆಗೆ ಮುಕುಟಪ್ರಾಯವಾಗಿದೆ.

ಶ್ಯಾಮಾಶಾಸ್ತ್ರಿಗಳ ಇಬ್ಬರು ಪುತ್ರರು ತ್ಯಾಗರಾಜರ ಶಿಷ್ಯರಾಗಿದ್ದಾರೆ. ಇವರಲ್ಲದೆ ಅಲಸೂರು ಕೃಷ್ಣಯ್ಯರ್, ಪೆರಂಬೂರ್ ಕೃಷ್ಣಯ್ಯರ್, ತಳಗಂಬಾಡಿ ಸಂಚನದ ಅಯ್ಯರ್, ದಾಸರಿ ಮುಂತಾದವರನ್ನು ಹೆಸರಿಸಬಹುದು. ಶ್ಯಾಮಾಶಾಸ್ತ್ರಿಗಳ ಕೃತಿಗಳು ಹೆಚ್ಚಾಗಿ ತೆಲುಗಿನಲ್ಲಿ ರಚನೆಯಾಗಿದೆ. ಇವರ ಕೃತಿಗಳು ತಾಳ ಮತ್ತು ಲಯಕ್ಕೆ ಪ್ರಸಿದ್ಧವಾಗಿವೆ. ಇವರು ಛಾಪುತಾಳದ ನಿಸ್ಸೀಮರಾಗಿದ್ದು ಬಹುಪಾಲು ಕೃತಿಗಳು ಇದರಲ್ಲೇ ರಚಿತವಾಗಿವೆ.

ತ್ಯಾಗರಾಜ

ಕರ್ನಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ತ್ಯಾಗರಾಜರು ಒಬ್ಬರು. ತಂದೆ ತಾಯಿಯರೊಂದಿಗೆ ತಾವು ಹುಟ್ಟಿದ ತಿರುವಾರೂರನ್ನು ಬಿಟ್ಟು ಪಂಚನದಿ ಕ್ಷೇತ್ರವಾದ ತಿರುವಯ್ಯಾರಿಗೆ ಬಂದು ನೆಲೆಸಿದರು. ತಂದೆಯಿಂದಲೇ ರಾಮಮಂತ್ರದ

ಉಪದೇಶವನ್ನು ರಾಮಕೃಷ್ಣಾನಂದ ಸ್ವಾಮಿಯೆಂಬುವವರಿಂದ ರಾಮಷಡಕ್ಷರೀ ಮಂತ್ರದ ಉಪದೇಶವೂ ಇವರಿಗೆ ದೊರೆಯಿತು. ತ್ಯಾಗರಾಜ ಮನೆತನ ಸಂಗೀತದ್ದೇ ಆಗಿದ್ದರಿಂದ ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳು ಇದ್ದವು. ಗುರುಗಳಾಗಿ ಸ್ವಾಮಿ ರಾಮಕೃಷ್ಣಾನಂದರು ಪಂಚನದೀಶ್ವರ ದೇವಾಲಯದಲ್ಲಿ 'ಸ್ವರಾರ್ಣವ'ವೆಂಬ ಶಾಸ್ತ್ರಗ್ರಂಥವನ್ನು ನೀಡಿದರು. ಇವರನ್ನು ನಾರದ ಮುನಿಯ ಅವತಾರವೆಂಬ ಪ್ರತೀತಿಯಿದ್ದುದರಿಂದ ತ್ಯಾಗರಾಜರು 'ಶ್ರೀನರದ ನಾದಸರ ಸೀರುಹಭೃಂಗಶುಭಾಂಗ' ಎಂದು ಅವರನ್ನು ಕುರಿತು ಹಾಡಿದ್ದಾರೆ.

ತ್ಯಾಗರಾಜರು ೨೪,೦೦೦ ಕೀರ್ತನೆಗಳನನ್ನು ರಚಿಸಿದ್ದಾರೆಂಬ ಪ್ರತೀತಿಯಿದೆ. ಸಂಗೀತ, ಸಾಹಿತ್ಯಗಳಲ್ಲಿ ಮಾತ್ರವಲ್ಲದೆ, ವೇದ, ಪುರಾಣ, ಜ್ಯೋತಿಷ, ಗಣಿತಶಾಸ್ತ್ರ ಮುಂತಾದುವುಗಳಲ್ಲಿಯೂ ಅಪಾರ ಪಾಂಡಿತ್ಯವಿತ್ತು. ಸುಮಾರು ಮುವತ್ತೆಂಟು ವರ್ಷಗಳಲ್ಲಿ(ರಾಮ ಷಡಕ್ಷರಿ ಮಂತ್ರವನ್ನು) ತೊಂಬತ್ತಾರು ಕೋಟಿ ಬಾರಿ ಜಪಿಸುವುದರ ಮೂಲಕ ಶ್ರೀ ರಾಮನ ದರ್ಶನವನ್ನು ಪಡೆದರೆಂದು ಹೇಳಲಾಗುತ್ತದೆ. ತ್ಯಾಗರಾಜರ ಸಂಗೀತ ಗುರು ಮಹಾವೈಣಿಕ, ತಂಜಾವೂರು, ಆಸ್ಥಾನದ ಮಹಾವಿದ್ವಾಂಸರಾದ ಶೊಂಠಿ ವೆಂಕಟರಮಣಯ್ಯ. ಸಂಗೀತವನ್ನು ತಮ್ಮ ಜೀವನದ ಸಾಧನೆಯನ್ನಾಗಿ ಮಾಡಿಕೊಂಡಿದ್ದವರು ತ್ಯಾಗರಾಜರು. ನಿರಂತರವಾದ ರಾಮಭಜನೆ, ಬಮ್ಮೆರ ಪೋತನನ ಭಾಗವತದ ಪಾರಾಯಣವನ್ನು ತಪ್ಪಿಸುತ್ತಿರಲಿಲ್ಲ. ಸಂಗೀತದಿಂದಲೇ ರಾಮಭಕ್ತಿಯ ಸಾಮ್ರಾಜ್ಯನಿರ್ಮಾಣ ಮಾಡುತ್ತ ಭಕ್ತಿಯಿಲ್ಲದೆ ಸಂಗೀತಜ್ಞಾನವು ಸನ್ಮಾರ್ಗದಲ್ಲಿ ಸಾಗದೆಂಬುದು ಇವರ ಅಭಿಮತವಾಗಿತ್ತು. ಸ್ವಾರ್ಥ ಸಾಧನೆಗಾಗಿ ಎಂದೂ ಸಂಗೀತವನ್ನು ಬಳಸಿಕೊಳ್ಳಲಿಲ್ಲ. ಅನೇಕ ಅರಸರ ಆಹ್ವಾನವನ್ನು ನಿರಾಕರಿಸಿದರು. ಇಂಥಹುದೇ ಒಂದು ಸಂದರ್ಭದಲ್ಲಿ 'ನಿಧಿಚಾಲಾಸುಖಮಾ ರಾಮನಿ ಸನ್ನಿಧಿ ಸೇವಸುಖಮಾ' ಎನ್ನುವ ಕೀರ್ತನೆಯ ರಚನೆಯಾಯಿತು. ತಿರುವಾಂಕೂರಿನ ಅರಸ ಕುಲಶೇಖರ ಸ್ವಾತಿ ತಿರುನಾಳರು ಕೂಡ ಇವರನ್ನು ತಮ್ಮ ಆಸ್ಥಾನಕ್ಕೆ ಆಹ್ವಾನಿಸಿದಾಗಲೂ ನಿರಾಕರಿಸಿದರು. 'ನಿಧಿನಿಕ್ಷೇದಮುಲಕಂಟೇ ರಾಮನಿ ಸನ್ನಿಧಿ ಸುಖಂ; ಮಮತ ಬಂಧನಯುತ ನರಸ್ತುತಿಕಂಟೇ ಸುಮತಿ ತ್ಯಾಗರಾಜನುತುನಿ ಕೀರ್ತನೇ ಸುಖಂ' ಎನ್ನುವುದೆ ಇವರ ಮನದ ಭಾವ.

ಹಿಂದೆಯೇ ತಿಳಿಸಿದಂತೆ ಇವರು ತಾವು ಕಲಿತ ವಿಷಯಗಳನ್ನು ಪ್ರತಿದಿನವ ಪಾಠ ಹೇಳುವ ಮೂಲಕ ಶಿಷ್ಯರಿಗೆ ಕಲಿಸುತ್ತಿದ್ದರು. ಆದರೆ ಶಿಷ್ಯರಿಂದ ಯಾವುದೇ ರೀತಿಯ ದಕ್ಷಿಣೆಯನ್ನು ಸ್ವೀಕರಿಸುತ್ತಿರಲಿಲ್ಲ. ತಮ್ಮ ಜೀವನ ನಿರ್ವಹಣೆಗಾಗಿ ಉಂಛವೃತ್ತಿಯನ್ನು ಆಧರಿಸಿದ್ದರು. ರಾಮಭಕ್ತಿಯಲ್ಲಿ ಮುಳುಗಿದ್ದ ಇವರನ್ನು ಊರಿನ ಗೃಹಸ್ಥರು ಅಪಾರ ಮಾರ್ಯದೆಯಿಂದ ಕಂಡು ಇವರಿಗೆ ನೇರವಾಗುತ್ತಿದ್ದರು. ಇವರ ಉಂಛವೃತ್ತಿ ಕೂಡ ದೇವರ ಉತ್ಸವದಂತಿರುತ್ತಿತ್ತು ಎನ್ನುತ್ತಾರೆ. ಪುರಂದರದಾಸರು ಸಂಗೀತಕ್ಕೆ ತಂದುಕೊಟ್ಟ ಆಧಾರವನ್ನು ಹಿಡಿದು ತ್ಯಾಗರಾಜರು ಪ್ರಸಿದ್ಧರಾಗಗಳಲ್ಲಿ ಅಪೂರ್ವ ರಾಗಗಳಲ್ಲಿ ಲಲಿತವಾದ ಸ್ವರಸಂಚಾರಗಳಿಂದ ಕೂಡಿದ ಸಾವಿರಾರು ಕೀರ್ತನೆಗಳನ್ನು ರಚಿಸುವ ಮೂಲಕ ಸಂಗೀತಗಾರರಿಗೆ ಪ್ರಿಯರಾದರು. ಮಧ್ಯಮಕಾಲ. ವಿಳಂಬಕಾಲದ ಕೀರ್ತನೆಗಳಿಗೆ ಸಂಗತಿಗಳನ್ನು ಹಾಕುವ ಸಂಪ್ರದಾಯ ಇವರ ಕಾಲದಲ್ಲಿಯೇ ಆರಂಭವಾಯಿತು. ದಿವ್ಯನಾಮ, ಭಜನಾ ಪದ್ಧತಿ, ಪಂಚರತ್ನ ಕೃತಿಗಳು ಇವರ ವಿಶೇಷ ಕೃತಿಗಳಾಗಿವೆ. ಸಂಸ್ಕೃತ ಮತ್ತು ತೆಲುಗಿನಲ್ಲಿ ಕೃತಿಗಳ ರಚನೆ ಮಾಡಿದ್ದಾರೆ. ಇವರ ಶಿಷ್ಯರಲ್ಲಿ ಪ್ರಸಿದ್ಧರಾದ ಸಂಗೀತಜ್ಞರೆಂದರೆ ವಾಲಾಜಪೇಟೆ ವೆಂಕಟರಮಣ ಭಾಗವತರು, ಮಾನಂಬುಚಾವಡಿ ವೆಂಕಡಸುಬ್ಬ ಅಯ್ಯರ್, ಉಮಯ್ಯಾಳ್ಪುರಂ ಕೃಷ್ಣಭಾಗವತರು, ಸುಂದರ ಭಾಗವತರು, ತಿರುವತ್ತಿಯೂರು ವೀಣೆ ಕುಪ್ಪಯ್ಯ ಮುಂತಾದವರನ್ನು ಹೆಸರಿಸಬಹುದು.

ಧನ್ಯಾಸಿ ರಾಗದ 'ಶ್ಯಾಮಸುಂದರಾಂಗ ಸಕಲಶಕ್ತಿ ನೀವೇರಾ' ಎನ್ನುವ ಕೀರ್ತನೆ ರಚಿಸಿ ತ್ಯಾಗರಾಜರು ಮುಕ್ತರಾದರು. ಪ್ರತಿ ವರ್ಷ ಪುಷ್ಯಬಹುಳ ಪಂಚಮಿಯಂದು ತಿರುವಯ್ಯಾರಿನ ತ್ಯಾಗರಾಜರ ಸಮಾಧಿಯ ಬಳಿ 'ತ್ಯಾಗರಾಜ ಆರಾಧನೆ'ಯು ನೂರಾರು ಸಂಗೀತಗಾರರ ಭಾಗವಹಿಸುವಿಕೆಯೊಂದಿಗೆ ಅತ್ಯಂತ ವಿಜೃಂಭಣೆಯಿಂದ ನಡೆಯುತ್ತದೆ.

ಮುತ್ತುಸ್ವಾಮಿ ದೀಕ್ಷಿತರು

ಮುತ್ತುಸ್ವಾಮಿ ದೀಕ್ಷಿತರು ಕರ್ನಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಕೊನೆಯವರು. ಇವರ ತಂದೆ ರಾಮಸ್ವಾಮಿ ದೀಕ್ಷಿತರು, ಸ್ವಯಂ ಸಂಗೀತಗಾರರು. ಮುತ್ತುಸ್ವಾಮಿಯವರ ಆರಂಭಿಕ ಸಂಗೀತ ಶಿಕ್ಷಣ ತಂದೆಯಿಂದಲೇ ಪ್ರಾರಂಭವಾಯಿತು.

ಮುಂದೆ ವೀಣೆಯಲ್ಲಿ ಅಪಾರವಾದ ಪಾಂಡಿತ್ಯವನ್ನು ಪಡೆದರು. ಸಂಸ್ಕೃತ ಭಾಷೆ, ತಂತ್ರಶಾಸ್ತ್ರ, ಮಂತ್ರಶಾಸ್ತ್ರ, ಜ್ಯೋತಿಷ, ಅಲಂಕಾರ ಶಾಸ್ತ್ರಗಳಲ್ಲೂ ಪರಿಣತರಾಗಿದ್ದರು. ಗುರು ಚಿದಂಬರನಾಥ ಯೋಗಿಯವರಿಂದ ವೇದಗಳನ್ನು ಕಲಿತು ಅಗ್ನಿಹೋತ್ರಿ ಎನಿಸಿಕೊಂಡರು. ಕಾಶಿಯಲ್ಲಿ ಐದು ವರ್ಷಗಳ ಕಾಲ ಗುರುವಿನೊಂದಿಗೇ ವಾಸಿಸಿ ಮಂತ್ರಗಳನ್ನು ಕಲಿತರು. ಮುತ್ತುಸ್ವಾಮಿಯವರು ಕಾಶಿಯಲ್ಲಿ ಗಂಗಾಸ್ನಾನ ಮುಗಿಸಿ ಪ್ರಾರ್ಥನೆ ಮಾಡುತ್ತಿರುವಾಗ ವೀಣೆಯೊಂದು ಅವರ ಕೈಗೆ ತಾನಾಗಿ ಬಂದಿತು ಎಂದು ಹೇಳಲಾಗುತ್ತದೆ. ಇವರು ಕಾಶಿಯಿಂದ ಹಿಂದಿರುಗುತ್ತಿದ್ದಾಗ ಸುಬ್ರಹ್ಮಣ್ಯಸ್ವಾಮಿಯು ಇವರಿಗೆ ತಿರುತ್ತಣಿಯ ಬಳಿ ದರ್ಶನವಿತ್ತನೆಂಬ ಪ್ರತೀತಿಯಿದೆ.

ಮುತ್ತುಸ್ವಾಮಿ ದೀಕ್ಷಿತರು ಗಾಯಕರು ಮತ್ತು ವೈಣಿಕರು ಎರಡೂ ಆಗಿದ್ದರು. ಇವರು ಹಿಂದೂಸ್ತಾನಿ ಸಂಗೀತವನ್ನೂ ಕಲಿತಿದ್ದರು. ಇವರ ಅಂಕಿತನಾಮ "ಗುರುಗುಹ" ಎಂಬುದಾಗಿತ್ತು. ನವಗ್ರಹ ಕೃತಿಗಳು, ನವಾವರಣ ಕೃತಿಗಳು, ಪಂಚಲಿಂಗ ಕೃತಿಗಳು, ಗುರುಗುಹ ಕೃತಿಗಳು ಮುಂತಾದವುಗಳನ್ನು ರಚಿಸಿದ್ದಾರೆ. ಪಿಟೀಲನ್ನು ಕರ್ನಾಟಕ ಸಂಗೀತಕ್ಕೆ ಅಳವಡಿಸಿದರು. ತಾವು ಗುರುಗುಹನ ಪಾದದಾಸನೆಂಬ ಭಾವನೆಯಿಂದ ತಮ್ಮ ಮೊಟ್ಟ ಮೊದಲ ಕೃತಿ "ಶ್ರೀನಾಥಾದಿ ಗುರುಗುಹೋ ಜಯತಿ ಜಯತಿ" ಎಂದು ಮಾಯಾಮಾಳವಗೌಳ ರಾಗದಲ್ಲಿ ರಚಿಸಿದರು. ದೀಕ್ಷಿತರು ಎಲ್ಲ ೭೨ ಮೇಳಕರ್ತ ರಾಗಗಳಲ್ಲೂ ಕೃತಿಗಳನ್ನು ರಚಿಸಿದ್ದಾರೆ. ಶ್ರೀಚಕ್ರ ಉಪಾಸನೆಯಲ್ಲಿ ತೊಡಗಿಸಿಕೊಂಡಿದ್ದ ದೀಕ್ಷಿತರು ದೇವಿಯ ಆರಾಧನೆಯನ್ನು ದೇವಿಯ ಸೌಂದರ್ಯವನ್ನು ತಮ್ಮ ನವಾವರಣ ಕೃತಿಗಳಲ್ಲಿ ವರ್ಣಿಸಿದ್ದಾರೆ. ತಾವು ಪೂರ್ವೀಕಲ್ಯಾಣಿ ರಾಗದಲ್ಲಿ ರಚಿಸಿದ "ಮೀನಾಕ್ಷಿ ಮುದಂದೇಹಿ" ಕೃತಿಯನ್ನು ನುಡಿಸುತ್ತ, ತಂಬೂರಿ ನಾದವನ್ನು ಕೇಳುತ್ತ, ಆಶ್ವೀಜ ಬಹುಳ ಚತುರ್ದಶಿಯಂದು ಇಹಲೋಕ ತ್ಯಜಿಸಿದರು.

"ವಾತಾಪಿ ಗಣಪತಿಂಭಜೆ ಹಂ" ಎಂಬ ಕೃತಿ ಹಂಸಧ್ವನಿ ರಾಗದಲ್ಲಿದ್ದು, ಸಂಗೀತ ತಿಳಿಯದೇ ಇರುವವರೂ ಕೇಳಿಸಿಕೊಳ್ಳುವಷ್ಟು ಪ್ರಸಿದ್ಧವಾಗಿದೆ. ಇವರು ಸುಮಾರು ೪೦೦ ಕೃತಿಗಳನ್ನು ರಚಿಸಿದ್ದಾರೆ. ಅದರಲ್ಲಿ ೩-೪ ಮಾತ್ರ ತೆಲುಗು ಮತ್ತು ಮಣಿಪ್ರವಾಳದಲ್ಲಿದ್ದು, ಉಳಿದುದೆಲ್ಲ ಸಂಸ್ಕೃತದಲ್ಲಿದೆ. ಸಂಗೀತದ ಬಗ್ಗೆ ಬಹಳಷ್ಟು ವಿಚಾರಗಳು ಲಭ್ಯವಿದ್ದರೂ ಇಲ್ಲಿ ಸಂಗೀತದ ಬೆಳವಣಿಗೆಯ ಬಗ್ಗೆ ಸ್ಥೂಲ ಪರಿಚಯವನ್ನು ಮಾಡಿಕೊಡುವ ಪ್ರಯತ್ನದಲ್ಲಿ ಕೇವಲ ನಾಲ್ಕು ಮಂದಿ ಸಂಗೀತಗಾರರನ್ನು ಮಾತ್ರ ಪರಿಚಯಿಸುವ ಪ್ರಯತ್ನವಷ್ಟೇ ಮಾಡಿದೆ.

ಕೆಲವು ಸಂಗೀತ, ದಿಗ್ಗಜರ ಸ್ಥೂಲ ಪರಿಚಯದ ನಂತರ ಸಂಗೀತ ಬೆಳವಣಿಗೆಯ ಇನ್ನೂ ಒಂದೆರಡು ವಿಷಯಗಳ ಬಗ್ಗೆ ನೋಡೋಣ. ಭಾರತೀಯ ಸಂಗೀತ ಪದ್ಧತಿಯಲ್ಲಿ ಹಾಡುಗಾರಿಕೆಯಲ್ಲಿ ಪಕ್ಕವಾದ್ಯ ಅಥವಾ ತಾಳವಾದ್ಯಗಳನ್ನು ಹೊಂದಿಸಿಕೊಳ್ಳಲಾಗುತ್ತದೆ. ಪ್ರಾಚೀನ ಕಾಲದಿಂದಲೂ ಗಾತ್ರ ಸಂಗೀತಕ್ಕೆ ಹೆಚ್ಚಿನ ಪ್ರಾಧಾನ್ಯತೆಯಿದೆ. ಗಾತ್ರ ಸಂಗೀತವನ್ನು ಗುಂಪಾಗಿ ಹಾಡುವಾಗ ಸಮಶ್ರುತಿಯನ್ನು ಇಟ್ಟುಕೊಂಡು ಹಾಡಲಾಗುತ್ತದೆ. ಕಾರಣವೇನೆಂದರೆ, ಭಾರತೀಯ ಸಂಗೀತವು ಯಾವುದೇ ನಿರ್ಧಿಷ್ಟ ಶ್ರುತಿಯಲ್ಲಿ ಇರಬೇಕು ಎಂಬ ಕಟ್ಟುಪಾಡಿಗೆ ಒಳಪಟ್ಟಿಲ್ಲ. ಗಾಯಕರು ತಮ್ಮ ಸಾಮರ್ಥ್ಯಕ್ಕೆ, ಶಾರೀರಕ್ಕೆ ಒಪ್ಪುವಂತಹ ಶ್ರುತಿಯನ್ನು ಆಧಾರಷಡ್ಜಕ್ಕೆ ಇಟ್ಟುಕೊಳ್ಳುವ ಸ್ವಾತಂತ್ರ್ಯವನು ಹೊಂದಿದ್ದಾರೆ ಎನ್ನುವುದು ವಿಶೇಷ.

ಮೈಸೂರು ಒಡೆಯರ ಕಾಲದಲ್ಲಿ ಪಾಶ್ಚಾತ್ಯ ಸಂಗೀತದ ಪ್ರಭಾವವು ಹೆಚ್ಚಾಯಿತು. ಚಾಮರಾಜ ಒಡೆಯರು, ನಾಲ್ವಡಿ ಕೃಷ್ಣರಾಜ ಒಡೆಯರು ಸ್ವತಃ ಪಾಶ್ಚಾತ್ಯ ವಾದ್ಯ ಸಂಗೀತವನ್ನು ಕಲಿತಿದ್ದರು. ಒಡೆಯರ ಕಾಲದಲ್ಲಿ ಭಾರತೀಯ ಕೃತಿಗಳಿಗೆ ಪಾಶ್ಚಾತ್ಯ ಸಂಗೀತದ ಸ್ವರ ಪ್ರಸ್ತಾರ, ಕರ್ನಾಟಕ ಸಂಗೀತಕ್ಕೆ ಪಾಶ್ಚಾತ್ಯ ಸಂಗೀತದ ಸ್ವರಪ್ರಸ್ತಾರವನ್ನು ಪ್ರಯೋಗಾತ್ಮಕವಾಗಿ ಅಳವಡಿಸುವಂತಹ ಪ್ರಯತ್ನ ಮಾಡಲಾಗಿದೆ. ಸುಮಾರು ೧೩ನೇಯ ಶತಮಾನದವರೆಗೆ ಇಡೀ ಭಾರತದಲ್ಲಿ ಒಂದೇ ಸಂಗೀತ ಪದ್ಧತಿಯಿತ್ತು. ಮುಸಲ್ಮಾನರ ಪ್ರಭಾವದಿಂದಾಗಿ ಸಂಗೀತದಲ್ಲಿ ಕೂಡ ಪ್ರಭಾವಗಳುಂಟಾಗಿದ್ದುದು ಅಚ್ಚರಿಯೇನಲ್ಲ. ಇವುಗಳ ಅತೀ ಪ್ರಭಾವವು ಉತ್ತರಾದಿ ಮತ್ತು ದಕ್ಷಿಣಾದಿ ಎಂದು ಎರಡು ಭೇದಗಳುಂಟಾಯಿತು.

ಉತ್ತರಾದಿ ಸಂಗೀತದಲ್ಲಿ ಅರಾಬಿಕ್, ಆಫ್ಘಾನಿಸ್ತಾನ, ಪರ್ಷಿಯನ್, ಮೊಗಲ್ ಪ್ರಭಾವಗಳು ಬಹಳ ಹೆಚ್ಚಾಗಿದ್ದು, ರಾಗಗಳು ಕೂಡ ವಿದೇಶೀ ಹೆಸರುಗಳನ್ನು ಉಳಿಸಿಕೊಂಡಿದೆ. ದಕ್ಷಿಣಾದಿ ಸಂಗೀತದಲ್ಲಿ ಮಾತ್ರ ವಿದೇಶೀ ಸಂಗೀತದ ಪ್ರಭಾವ

ಅಷ್ಟಾಗಿ ಕಂಡುಬರದೆ ಬಹುಮಟ್ಟಿಗೆ ಪ್ರಾಚೀನ ಪದ್ಧತಿಗಳೇ ಉಳಿದುಕೊಂಡಿದೆ. "೧೩೪೦ ರಿಂದ ೧೪೪೦ ರ ಕಾಲವನ್ನು ಭಾರತೀಯ ಸಂಗೀತದ ಸಂಧಿಕಾಲ"ವೆಂದು ಗುರುತಿಸುತ್ತಾರೆ. ದಕ್ಷಿಣದಲ್ಲಿ ವಿದ್ಯಾರಣ್ಯರು, ಉತ್ತರದಲ್ಲಿ ಅಮೀರ್‌ಖುಸ್ರೋ ಮತ್ತು ದೆಹಲಿಯ ಆಸ್ಥಾನದಲ್ಲಿದ್ದ ಕನ್ನಡದ ಗೋಪಾಲನಾಯಕ ಮುಂತಾದವರನ್ನು ಈ ಯುಗದ ಕಾರಣಪುರುಷರೆಂದು ಕರೆಯಲಾಗಿದೆ.

ವಿಜಯನಗರದ ಆಸ್ತಾನ, ಅವರ ಸಾಮಂತ ರಾಜ್ಯಗಳಾದ ಮೈಸೂರು, ತಂಜಾವೂರುಗಳಲ್ಲಿ ಕರ್ನಾಟಕ ಸಂಗೀತ ಹೆಚ್ಚಾಗಿ ಪೋಷಿತವಾಗಿದೆ. ಚತುರ ಪಂಡಿತನು ರಚಿಸಿರುವ, ಸುಕ್ತಂಕರರು ಸಂಪಾದಿಸಿರುವ "ಶ್ರೀಮಲ್ಲಕ್ಷ್ಯ ಸಂಗೀತಮ್" ಎಂಬ ಕೃತಿಯಲ್ಲಿ ಕರ್ನಾಟಕ, ಹಿಂದೂಸ್ತಾನಿ ಎಂಬ ಪ್ರಬೇಧಗಳ ಬಗ್ಗೆ ಹೇಳಿದ್ದಾರೆ. ಸಂಗೀತದಲ್ಲಿ ಶಾಸ್ತ್ರೀಯ, ಅಭಿಜಾತ ಎನ್ನುವ ಪರಿಕಲ್ಪನೆ ತೀರಾ ಇತ್ತೀಚಿನದು. ಆದರೆ ಸಂಗೀತ, ಮನಸ್ಸಿಗೆ ಆಹ್ಲಾದವನ್ನೂ, ಹೃದಯಕ್ಕೆ ಮುದುವನ್ನೂ ಉಂಟುಮಾಡುವುದಾಗಿದ್ದು, ಒಂದು ದೈವಿಕ ಕೊಡುಗೆಯಾಗಿದೆ.

*****

# ಮೈಸೂರು ಸಂಸ್ಥಾನದ ರಂಗಗೀತೆಗಳು

* ಡಾ. ಜಿ. ಮನೋಜ್

'ಕಾವ್ಯೇಷು ನಾಟಕಂ ರಮ್ಯಂ' ಎಂಬುದು ಜನಜನಿತವಾದ ಉಕ್ತಿ. ಎಲ್ಲಾ ಕಾಲಗಳಲ್ಲೂ ನಾಟಕವು ಜನರ ಮನವನ್ನು ರಂಜಿಸುತ್ತಲೇ ಬಂದಿದೆ. ಕಾವ್ಯವನ್ನು ಅನುಭವಿಸುವವರಿಗೆ ವಿಶಾಲವಾದ ಕಲ್ಪನಾಶಕ್ತಿಯು ಅತ್ಯವಶ್ಯಕ. ಕಾವ್ಯದ ಉಪಮಾನ ಉಪಮೇಯಗಳಲ್ಲಿಯ ಉತ್ಪ್ರೇಕ್ಷೆಯನ್ನು ಗ್ರಹಿಸಲು, ಸಾದೃಶ್ಯವನ್ನು ತಿಳಿಯಲು ಅಪಾರವಾದ ಪಾಂಡಿತ್ಯವು ಅಗತ್ಯ. ಆದರೆ ದೃಶ್ಯಮಾಧ್ಯಮವೆನಿಸಿದ ನಾಟಕವು ಸುಲಭವಾಗಿ ಪಾಮರರ ಮನಸ್ಸನ್ನು ಹೋಗುವುದಲ್ಲದೆ ಪಾತ್ರಗಳೊಂದಿಗೆ ನಿಕಟತೆಯನ್ನುಂಟು ಮಾಡುತ್ತದೆ. ಇದರ ಸಾರ್ಥಕ್ಯವು ನಟರ ಕುಶಲತೆಯನ್ನೂ ಆಧರಿಸಿರುತ್ತದೆ. ಪಾತ್ರವನ್ನು ಸಂಪೂರ್ಣವಾಗಿ ಗ್ರಹಿಸಿ, ತನ್ನತನವನ್ನು ಮರೆತು, ತೊರೆದು, ಅದರಲ್ಲಿಯೇ ಲೀನವಾಗಿ ಪೌರಾಣಿಕವೋ, ಚಾರಿತ್ರಿಕವೊ ಒಟ್ಟಾರೆ ಆ ವ್ಯಕ್ತಿಗಳನ್ನು ಕಣ್ಮುಂದೆ ತರಿಸುವ ಶಕ್ತಿ ಅವರಿಗುಂಟು. ಇಂತಹ ಪ್ರತಿಭೆಯನ್ನು ಅನುಭವಕ್ಕೆ ತಂದುಕೊಳ್ಳುವ ಪ್ರೇಕ್ಷಕರು ಅನಾಯಾಸವಾಗಿ ಕಥೆಯನ್ನೂ, ಅದರ ಮೌಲ್ಯಗಳನ್ನು ಮತ್ತು ಸ್ವೀಕರಿಸಬೇಕಾದ ತತ್ವಗಳನ್ನು ಅರಗಿಸಿಕೊಳ್ಳಬಹುದಾಗಿದೆ. ಇದನ್ನು ಅನುಭವಿಸಲು ಛಂದಶ್ಶಾಸ್ತ್ರದ ಅಥವಾ ವ್ಯಾಕರಣದ ಭಾರವನ್ನು ಹೊರಬೇಕಾಗಿಲ್ಲಾ.

ಭಾರತದಲ್ಲಿ ನಾಟಕದ ಪ್ರಾಚೀನತೆ ವೇದಗಳಷ್ಟೇ ಹಿಂದಕ್ಕೆ ಹೋಗುತ್ತದೆ. ದಕ್ಷನ ಸತ್ರಯಾಗದಲ್ಲಿ, ಪುರೂರವ ಊರ್ವಶಿಯರ ನಟನೆಯಲ್ಲಿ, ಪ್ರದರ್ಶಿಸಲಾದ ಅಮೃತಮಥನದ ವೃತ್ತಾಂತವು ಪ್ರಾಚೀನತಮವೆನ್ನಲಾಗಿದೆ. ಇಂತು ತೊಡಗಿದ ನಾಟಕಗಳು ಕಾಳಿದಾಸ, ಭಾಸ, ಸೌಮಿಲ್ಲಾದಿಗಳ ಪೋಷಣೆಯಲ್ಲಿ ತಮ್ಮ ಉಚ್ಛ್ರಾಯವನ್ನು ಕಂಡಿತು. ನಂತರ ಕ್ರಮೇಣ ಸ್ಥಳೀಯ ಭಾಷೆಗಳಲ್ಲೂ ಬೆಳೆದು ಪುರಾಣೇತಿಹಾಸಗಳ ರಸವತ್ತಾದ ಸನ್ನಿವೇಶಗಳನ್ನು ಅನಕ್ಷರಸ್ಥರಿಗೂ ಯಶಸ್ವಿಯಾಗಿ ತಲುಪಿಸಿತು. ಈ ಪರಂಪರೆಯು ಕಾಲಾನುಕ್ರಮವಾಗಿ ಸಮಕಾಲೀನ ಅವಶ್ಯಕತೆಗಳಿಗೆ ತಕ್ಕಂತೆ, ಬೆಳೆದ ಹಲವಾರು ಪ್ರಕಾರಗಳು ನಾಟಕದ ಶಿಖೋಪಶಾಖೆಯಾಗಿ ಬೆಳೆದವು.

ವಿಜಯನಗರ ಸಾಮ್ರಾಜ್ಯದ ಪತನಾನಂತರ ಸ್ವತಂತ್ರವಾದ ಹಲವು ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನವು ಪ್ರಮುಖವಾಗಿ ಬೆಳೆಯಿತು. ವಿಜಯನಗರದ ಚಕ್ರವರ್ತಿಗಳು ಪ್ರಾರಂಭಿಸಿದ ನವರಾತ್ರಿಯ ವೈಭವವನ್ನು ಮುಂದುವರೆಸಿದ ಕೀರ್ತಿ ಮೈಸೂರಿನದು. ಇವರ ಪೋಷಣೆಯಲ್ಲಿ ನಾಟಕರಂಗವು ಬೆಳದು ವಿಶೇಷವಾದ ಖ್ಯಾತಿಯನ್ನು ಪಡೆಯಿತು. ಹತ್ತೊಂಬತ್ತನೆಯ ಶತಮಾನದಲ್ಲಂತೂ ಮೈಸೂರು ನಾಟಕರಂಗವು ಸುವರ್ಣಯುಗವನ್ನು ಕಂಡಿತೆಂದರೆ ಅತಿಶಯೋಕ್ತಿಯಾಗದು.

ಈ ಕಾಲಘಟ್ಟದಲ್ಲಿ ಬಾಂಬೆ ಪ್ರೆಸಿಡೆನ್ಸಿಯಲ್ಲಿ ಪ್ರಚಲಿತವಾಗಿದ್ದ ಪಾರ್ಸಿನಾಟಕಗಳು ಬಹಳ ಖ್ಯಾತವೂ, ಇತರ ನಾಟಕ ಪ್ರಕಾರಗಳ ಮೇಲೆ ಪ್ರಭಾವಬೀರುವಂತಹದ್ದೂ ಆಗಿತ್ತು. ಈ ಪ್ರಭಾವದಿಂದ ಮೈಸೂರು ನಾಟಕರಂಗವು ಹೊರತಾಗಿರಲಿಲ್ಲ. ಇದರೊಂದಿಗೆ ಆಳುವ ಅರಸರ ಪೋಷಣೆಯಲ್ಲಿದ್ದ ಹಲವಾರು ವಿದ್ವನ್ಮಣಿಗಳು ನಾನಾ ಪ್ರಕಾರದ ಸಾಹಿತ್ಯರಚನೆಗಳಲ್ಲಿ ತೊಡಗಿದ್ದರು. ಚಕ್ರವರ್ತಿಯ ಪ್ರಭಾವವನ್ನು ಎತ್ತಿಹಿಡಿಯಲೊಸುಗ ಸಹಜವಾಗಿಯೇ ಸಂಸ್ಕೃತಕ್ಕೆ ಪ್ರಾಧಾನ್ಯವಿದ್ದಿತು. ಹೀಗಾಗಿ ಪಾರಸೀಕ ಮತ್ತು ಸಾಂಸ್ಕೃತಿಕ ಅಂಶಗಳು ಮೇಳೈಸಿ ಮೈಸೂರು ರಂಗವನ್ನು ದಕ್ಷಿಣ ಭಾರತದಲ್ಲಿಯೇ ವಿಶೇಷ ಸ್ಥಾನಕ್ಕೆ ಕೊಂಡೊಯ್ಯಿತು. ಈ ಕಾಲದಲ್ಲಿ ಪ್ರದರ್ಶಿತವಾದ ನಾಟಕಗಳು ಕಂಪನಿ ನಾಟಕಗಳೆಂಬ ಹೆಸರು ಪಡೆಯಿತು.

ಮೈಸೂರು ಸಂಸ್ಥಾನದಲ್ಲಿ ರಾಜಾಶ್ರಯವನ್ನು ಪಡೆದ ಪಂಡಿತರು ತಮ್ಮ ಪಾಂಡಿತ್ಯಕ್ಕೆ ಮೆರುಗೇರುವಂತಹ ನಾಟಕಗಳನ್ನು ರಚಿಸಿದರು. ಗರಳಪುರಿ ಶ್ರೀಕಂಠ ಶಾಸ್ತ್ರಿಗಳು, ಬಸಪ್ಪ ಶಾಸ್ತ್ರಿಗಳು, ಬೆಳ್ಳಾವೆ ನರಹರಿ ಶಾಸ್ತ್ರಿಗಳು ಮೊದಲಾದವರು ಸಂಸ್ಕೃತದ ಅಭಿಜ್ಞಾನ ಶಾಕುಂತಲಾ, ಮೃಚ್ಛಕಟಿಕಾ, ಸ್ವಪ್ನ ವಾಸವದತ್ತಾ ಮೊದಲಾದ ನಾಟಕಗಳನ್ನು ಕನ್ನಡೀಕರಿಸುವುದರೊಂದಿಗೆ

---

* ನಂ. ೨೫, ಸಿಂಧೇರಸ್ತೆ, ವಿ. ವಿ. ಪುರಂ, ಬೆಂಗಳೂರು.

ಸುಭದ್ರಾ ಪರಿಣಯ, ಮನ್ಮಥ ವಿಜಯ, ಸಂಪೂರ್ಣ ರಾಮಾಯಣದಂತಹ ನಾಟಕಗಳನ್ನು ರಚಿಸಿದರು. ಶಕುಂತಲಾ ನಾಟಕವನ್ನು ರಚಿಸಿದ ಬಸಪ್ಪ ಶಾಸ್ತ್ರಿಗಳಿಗೆ 'ಅಭಿವನ ಕಾಳಿದಾಸ'ನೆಂಬ ಬಿರುದನ್ನಿತ್ತು ಸನ್ನಿಧಾನದಿಂದ ಗೌರವಿಸಲಾಗಿತ್ತು. ಈ ಹೆಗ್ಗಳಿಕೆಯು ಅಂದಿನ ಕಾಲದ ಗ್ರಾಮಾಫೋನ್ ರೆಕಾರ್ಡ್‌ಗಳ ಮೇಲೆ ಮುದ್ರಿತವಾಗಿರುವುದು ಕಾಣಬಹುದು.

ನಾಟಕದ ವಸ್ತುವು ಕೇವಲ ಪೌರಾಣಿಕವಾಗಿಯೇ ಇರುತ್ತಿರಲಿಲ್ಲ. ಜಾನಪದೀಯ ಓನ್ನಲೆಯ ಬಾಲ ನಾಗಮ್ಮ, ಗಲೇಬ ಕಾವಲಿ, ಮೊದಲಾದ ಕಥೆಗಳನ್ನು ನಾಟಕಕ್ಕೆ ಬಳಸಲಾಗುತ್ತಿತ್ತು. ಇದರೊಂದಿಗೆ ಭಕ್ತಿ ಪ್ರತಿಪಾದಕವಾದಂತಹ, ಭಕ್ತವಿಜಯದ ನಾನಾ ಕಥೆಗಳು, ಸಂತ ರಾಮದಾಸ, ಸಕ್ಕುಬಾಯಿ, ತುಕಾರಾಮ, ಕಬೀರ್ ದಾಸ, ಬೇಡರ ಕಣ್ಣಪ್ಪ, ಅಕ್ಕಮಹಾದೇವಿ ಮೊದಲಾದ ಕಥೆಗಳು ನಾಟಕಗಳ ರೂಪವನ್ನು ತಾಳಿದವು. ವೀರಗಾಥೆಗಳಂತೆ ಯೋಧ ಚರಿತೆಗಳು ರಚಿತವಾದವು. ಇವಲ್ಲದೆ ಸಮಕಾಲೀನ ಸಮಾಜದ ದೌರ್ಬಲ್ಯಗಳನ್ನು ನಿವಾರಿಸುವ ಪ್ರಯತ್ನವೆಂಬಂತೆ ಹಲವು ನಾಟಕಗಳು ರಚಿತವಾದವು. ಇನ್ನು ಇಪ್ಪತ್ತನೆಯ ಶತಮಾನದ ಆದಿ ಭಾಗದಲ್ಲಿ ಭಾರತವು ಅನುಭವಿಸಿದ ಪ್ರಮುಖ ಘಟನೆಯಾದ ಸ್ವಾತಂತ್ರ ಸಂಗ್ರಾಮಕ್ಕೂ ನಾಟಕ ಕೊಡುಗೆಯಿತ್ತಿದೆ.

ವಸ್ತುವೇನೇ ಆಗಿರಲಿ ನಾಟಕದ ಪ್ರಮುಖವಾದ ಆಕರ್ಷಣೆಯೆಂದರೆ ಅದರಲ್ಲಿದ್ದ ಗೀತೆಗಳು ಮತ್ತು ಕಂದಪದ್ಯ. ಪ್ರತಿ ಪಾತ್ರವೂ, ರಾಜನೇ ಆಗಿರಲೀ ಪ್ರತೀಹಾರಿಯೇ ಆಗಿರಲಿ, ರಾಣಿಯಾಗಲೀ ಸಖಿಯರಾಗಲೀ, ದೇವಾನುದೇವತೆಗಳು, ಋಷಿಮುನಿಗಳು, ಯಕ್ಷಗಂಧರ್ವರು, ಅಪ್ಸರೆಯರು ರಾಕ್ಷಸಿಯರು, ಭಿಕ್ಷುಕರು, ಹೀಗೆ ಪ್ರತಿಯೊಂದು ಪಾತ್ರವೂ ಹಾಡಲೇಬೇಕಾಗಿತ್ತು. ಹಾಡದಿದ್ದ ಪಾತ್ರವೇ ಇರುತ್ತಿರಲಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ನಾಟಕದ ಪ್ರಾರಂಭಕ್ಕೆ ನಾಂದಿ, ನಾಯಕ ನಾಯಕಿಯರ ಪಾತ್ರ ಪರಿಚಯ, ಸಖಿಯರ ವಿನೋದ, ಬೇಡಬೆಸ್ತರ ಗಲಭೆ, ಶಿಶುವಿನ ರೋಧನ, ಕಳತ್ರವಿಯೋಗ, ಮೃತ್ಯು, ಶಪಥ, ಪ್ರತಿ ಸನ್ನಿವೇಶವು ಗಾನಮಯವಾಗಿದ್ದು ಕೊನೆಯಲ್ಲಿ ಮಂಗಳದಿಂದ ಮುಗಿಯಬೇಕಾಗಿತ್ತು ನಾಟಕ. ಈ ರೀತಿಯಾಗಿ ನಾಟಕವು ಸಂಗೀತಮಯವೂ ಗೀತೆಗಳ ಆಗರವೂ ಆಗಿತ್ತು. ಈ ಕಾರಣದಿಂದ ನಟ ನಟಿಯರಿಗೆ ಸಂಗೀತದ ಪರಿಚಯ ಅವಶ್ಯಕವಾಗಿತ್ತು. ಶಾಸ್ತ್ರೀಯ ಗಾಯನ ಬರುವುದರೊಂದಿಗೆ ಸುಶ್ರಾವ್ಯವಾಗಿ ಹಾಡುವುದಕ್ಕೆ ಬರುವ ಪಾತ್ರಧಾರಿಗಳೂ ಇದ್ದರು. ಒಟ್ಟಾರೆ ಅಂದಿನ ನಟರಿಗೆ ಶರೀರ ಮಾಧುರ್ಯದೊಂದಿಗೆ, ಗಟ್ಟಿಯಾಗಿ ಎತ್ತರವಾದ ಶೃತಿಯಲ್ಲಿ ಹಾಡುವ ಶಾರೀರ ಚೈತನ್ಯವೂ ಬೇಕಾಗಿತ್ತು.

**ರಂಗಗೀತೆಗಳಲ್ಲಿ ಶಾಸ್ತ್ರೀಯ ಸಂಗೀತ**

ರಂಗಗೀತೆಗಳು ಸ್ವರೂಪದಲ್ಲಿ ಶಾಸ್ತ್ರೀಯ ಸಂಗೀತದ ಕೃತಿಗಳ ಲಕ್ಷಣವನ್ನೇ ಹೊಂದಿರುತ್ತಿದ್ದವು. ಕೃತಿಗಳಂತೆಯೇ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳನ್ನು ಹೊಂದಿರುತ್ತಿದ್ದವು. ಪಲ್ಲವಿಯನ್ನು ಹೇಗೆ ಅನುಪಲ್ಲವಿಯು ರಾಗದಲ್ಲಿ ಅನುಸರಿಸುತ್ತದೆಯೋ ಹಾಗೆ ರಂಗಗೀತೆಗಳಲ್ಲೂ ಇರುತ್ತಿದ್ದವು. ಇದರೊಂದಿಗೆ ಸಂದರ್ಭಾನುಸಾರವಾಗಿ ಚರಣಗಳ ಸಂಖ್ಯೆಯಿರುತ್ತಿದ್ದವು. ಇವುಗಳು ರಾಗವಲ್ಲದೇ ಲಯವನ್ನೂ ಮೀರುತ್ತಿರಲಿಲ್ಲ. ಆದಿ, ರೂಪಕ, ಝಾಮು ತಾಳಗಳಂತಹ ತಾಳಗಳಲ್ಲಿ ರಚಿಸಲ್ಪಡುತ್ತಿದ್ದವು. ವಿಶೇಷವೆಂದರೆ ಸಾಹಿತ್ಯವೂ ಸಹ ಶಾಸ್ತ್ರೀಯ ಕೃತಿಗಳ ಲಕ್ಷಣವನ್ನೇ ಅನುಕರಿಸಿವೆ. ಉದಾಹರಣೆಗೆ ಬಹುಪಾಲು ಎಲ್ಲಾ ಕೃತಿಗಳಲ್ಲೂ ದ್ವಿತೀಯಾಕ್ಷರ ಪ್ರಾಸ ಹೆಚ್ಚಾಗಿ ಬಳಸಲಾಗುತ್ತಿತ್ತು. ಸಾಹಿತ್ಯದಲ್ಲಿ ಪಲ್ಲವಿ ಮತ್ತು ಅನುಪಲ್ಲವಿಗಳು ಒಂದು ಅಕ್ಷರ ಪ್ರಾಸದಲ್ಲಿದ್ದರೆ ಚರಣವು ಇದೇ ರೀತಿ ಮತ್ತೊಂದು ಅಕ್ಷರ ಪ್ರಾಸವನ್ನು ಹೊಂದಿರುತ್ತದೆ. ಈ ಅಂಶವನ್ನು ಈ ಕೆಳಗೆ ಸೋದಾಹರಣೆಯಾಗಿ ವಿವರಿಸಲಾಗಿದೆ.

**ಶಾಸ್ತ್ರೀಯ ಕೃತಿ**

**ವಾತಾಪಿಗಣಪತಿಂ. . . . . ॥ಪಲ್ಲವಿ॥**

**ಭೂತಾದಿ ಸಂಸೇವಿತಂ. . . . ॥ಅನುಪಲ್ಲವಿ॥**

ಪ್ರಾಸ ಸಾಹಿತ್ಯ ವಾತಾಪಿ=ಭೂತಾದಿ (ದ್ವಿತೀಯಾಕ್ಷರ ಪ್ರಾಸವನ್ನು ಗಮನಿಸತಕ್ಕದ್ದು)

ರಂಗಗೀತೆ:

**ನೋಡುವೇನೆಂದಿಗೆ ಕಾಂತನಾ . . . . ॥ಪಲ್ಲವಿ॥**
**ಕೂಡಿಕೊಂಡಾಡಿ . . . . . . . . ॥ಅನುಪಲ್ಲವಿ॥**

ಪ್ರಾಸ ಸಾಹಿತ್ಯ ನೋಡು=ಕೂಡು (ದ್ವಿತೀಯಾಕ್ಷರ ಪ್ರಾಸವನ್ನು ಗಮನಿಸತಕ್ಕದ್ದು)

ಇನ್ನು ಚರಣಕ್ಕೆ ಇದೇ ರಂಗಗೀತೆಯನ್ನೇ ಉದಾಹರಿಸಬಹುದು:

**ಕಾಂತನ ಸೇರುವ ಸಂತೋಷದಿ ಮನ ।**
**ಭ್ರಾಂತಿಯನಾಂತು ಏಕಿಂತು ನೀಗೈವೆ ॥**

ಇನ್ನು ರಾಗಗಳ ಆಯ್ಕೆಯಲ್ಲೂ ಸಹ ರಂಗಗೀತೆಗಳು ಹಲವು ವಿಶೇಷತೆಗಳನ್ನು ಹೊಂದಿವೆ. ಘನರಾಗಗಳಾದ ಭೈರವೀ, ಶಂಕರಾಭರಣ, ಕಾಂಭೋದಿ, ಖರಹರಪ್ರಿಯ ಇತ್ಯಾದಿಗಳನ್ನು ಸಹಜವಾಗಿಯೇ ಬಳಸಲಾಗುತ್ತಿತ್ತು. ಹೆಚ್ಚು ವಿಸ್ತಾರ, ಸ್ವರಪ್ರಸ್ತಾರದ ಅವಶ್ಯಕತೆಯಿಲ್ಲದಿದ್ದ ಕಾರಣ ಪೀಲು, ಭಾಗೇಶ್ರೀ, ಹಿಂದೂಸ್ತಾನಿ ಕಾಪಿ, ಭೀಮಪಲಾಸಿ ಮೊದಲಾದ ರಂಜಕ ರಾಗಗಳನ್ನು ಹೇರಳವಾಗಿ ಬಳಸಲಾಗುತ್ತಿತ್ತು. ಕಂದಪದ್ಯಗಳನ್ನು ರಾಗಮಾಲಿಕೆಯಲ್ಲಿ ಹಾಡಲಾಗುತ್ತಿತ್ತು.

ಶಾಸ್ತ್ರೀಯ ಸಂಗೀತದ ಕೃತಿ ಪ್ರಕಾರ ಮಾತ್ರವಲ್ಲದೇ ರಂಗಗೀತೆಗಳು ಜಾವಳಿಗಳನ್ನೂ ಪದಗಳನ್ನೂ ಅನುಕರಿಸಿರುವುದನ್ನು ಗಮನಿಸಬಹುದು. ಜಾವಳಿ ಮತ್ತು ಪದಗಳೆರಡೂ ಶೃಂಗಾರ ಪ್ರಧಾನ ರಚನೆಗಳಾಗಿದ್ದು ನಾಟ್ಯದ ಅಭಿನಯಕ್ಕೆ ಹೆಚ್ಚು ಸೂಕ್ತವಾದವುಗಳಾಗಿವೆ. ಆದರೂ ಕಚೇರಿಗಳಲ್ಲಿ ಇಂತಹ ಜಾವಳಿಗಳನ್ನೂ ಪದಗಳನ್ನು ಹಾಡುವ ಪರಿಪಾಠವಿದೆ. ದಾನಶೂರ ಕರ್ಣ ನಾಟಕದ 'ಪರಮಾತ್ಮ ಹರೇ' ಎಂಬ ಕುರುಂಜಿ ರಾಗದ ರಂಗಗೀತೆ ಘನಂ ಸೀನಯ್ಯನವರ 'ಶಿವದೀಕ್ಷಾ ಪರುರಾಲನುರಾ' ಎಂಬ ಝಾವಳಿಯ ಯಥಾ ಸ್ವರೂಪ. ಅದೇ ರೀತಿ 'ಸಂಧ್ಯಾ ಸಾಯಂತ್ರದೊಳು' ಎಂಬ ಮತ್ತೊಂದು ಗೀತೆ, 'ನಿನ್ನ ಸಾಯಂತ್ರಮುನ' ಎಂಬ ಮುಖಾರಿ ರಾಗದ ಪದದ ಅನುಕರಣೆ. ರಂಗಗೀತೆಗಳಲ್ಲಿ ರಾಗದ ರಸವನ್ನು ಅರಿತು ಪ್ರಯೋಗ ಮಾಡಿರುವುದನ್ನು ಕಾಣಬಹುದು. ವಿರಹದ ಗೀತೆಗಳಿಗೆ ಕರುಣಾರಸ ಅಥವಾ ಹಿಂದೂಸ್ತಾನಿ ಶಾಸ್ತ್ರೀಯ ಗಾಯನದ ಸಮ್ಮೇಳನ ಸಮರ್ಪಕವಾಗಿ ನೆರವೇರುತ್ತಿದುದು ಪ್ರಾಯಶಃ ರಂಗಗೀತೆಗಳಲ್ಲಿಯೇ!

**ರಂಗಗೀತೆಗಳ ಪ್ರಕಾರಗಳು:**

ಈ ಹಿಂದೆಯೇ ಹೇಳಿದಂತೆ, ನಾಂದಿಯಿಂದ ತೊಡಗಿ ಮಂಗಳದವರೆಗೂ ಗಾನಮಯವಾಗಿದ್ದ ನಾಟಕಗಳಲ್ಲಿ, ಸನ್ನಿವೇಶಗಳಿಗೆ ಪಾತ್ರಗಳಿಗೆ ಹೊಂದುವಂತೆ ವಿವಿಧ ಪ್ರಕಾರದ ಗೀತೆಗಳಿದ್ದವು. ನಾಂದಿ ಮತ್ತು ಮಂಗಳ ಗೀತೆಗಳು ವೃಂದಗಾಯನವಾಗಿ ಇರುತ್ತಿತ್ತು. ಎಲ್ಲಾ ಪಾತ್ರಧಾರಿಗಳು ವೇದಿಕೆಯಲ್ಲಿ ನಿಂತು ಹಾಡುವಂತಹದ್ದು. ಇನ್ನು ಇತರ ವೃಂದಗಾನಗಳೆಂದರೆ ನಾಯಕಿ ಮತ್ತು ಅವಳ ಸಖಿಯರು ಉದ್ಯಾನಗಳಲ್ಲಿ ಕ್ರೀಡಿಸುವಾಗ, ರಾಣಿವಾಸದ ಚೇಟೀವೃಂದಗಳು ಸಂಭ್ರಮಿಸುವಾಗ, ಬಾಲಕರ ಕ್ರೀಡೆಯೇ ಅಲ್ಲದೆ ಬೆಸ್ತರು, ಬೇಡರು, ದೊಂಬರು ಮೊದಳಾದವರು ಸಮೂಹವಾಗಿ ಹಾಡಿತ್ತಿದ್ದುದು.

ಇನ್ನು ನಾಯಕ, ನಾಯಕಿ ಮೊದಲಾದ ಪಾತ್ರಗಳು ಏಕಾಂಗಿಗಳಾಗಿ ಹಾಡುತ್ತಿದ್ದ ಗಾಯನಗಳನ್ನು ಸಾಮಾನ್ಯ ರಂಗಗೀತೆಗಳೆಂದೇ ಸಂಬೋಧಿಸಬೇಕು. ಇವುಗಳು ಭಕ್ತಿ, ಶೃಂಗಾರ ಮತ್ತು ವಿರಹ ರಸಗಳಲ್ಲಿ ಹಾಡಲ್ಪಡುತ್ತಿದ್ದವು. ಭಕ್ತಿ ಗೀತೆಗಳಲ್ಲಿ ನಾಟಕಗಳಿಗೆಂದೇ ರಚಿತವಾದ ಗೀತೆಗಳಲ್ಲದೇ ದಾಸಸಾಹಿತ್ಯ ಮತ್ತು ಇತರ ಕೃತಿಗಳನ್ನು ಬಳಸುತ್ತಿದ್ದುದು ವಿಶೇಷವೆನ್ನಬಹುದು. ಇಲ್ಲಿ ಪಾತ್ರಗಳ ಕಾಲದ ಬಗೆಯಾಗಲೀ ಕೃತಿಯ ಕಾಲದ ಬಗ್ಗೆಯಾಗಲಿ ಅಷ್ಟೇನು ತರ್ಕಿಸಿದಂತೆ ತೋರುವುದಿಲ್ಲ. ಉದಾಹರಣೆಗೆ, ಭಕ್ತ ಕಬೀರ್ ನಾಟಕದಲ್ಲಿ ಸಿ.ಬಿ. ಮಲ್ಲಪ್ಪನವರು ಭದ್ರಾಚಲ ರಾಮದಾಸರ 'ಓ ರಾಮ ನೀ ನಾಮಮೇಮಿ ರುಚಿರಾ' ಎಂಬ ಹಾಡನ್ನು ಹಾಡಿದ್ದಾರೆ. ಅದೇ ರೀತಿ ಹಲವು ದಾಸರ ಸಂಕೀರ್ತನೆಗಳನ್ನು ಸಂದರ್ಭೋಚಿತವಾಗಿ ಬಳಸಿರುವುದು ಕಂಡು ಬರುತ್ತದೆ. ಶೃಂಗಾರ ಗೀತೆಗಳು ಮೋಹನ ಕಲ್ಯಾಣಿಯಂತಹ ರಾಗಗಳಲ್ಲಿರುತ್ತಲಿದ್ದವು. ಕೆಲವೊಮ್ಮೆ ಸಂಗೀತದ 'ಪದ' ಪ್ರಕಾರವನ್ನು ಅನುಸರಿಸುವುದು ಗಮನಿಸಿದರೆ ಇಂದಿನ ಸಮಕಾಲೀನರಿಗೆ ಅದರಲ್ಲಿ ಶೃಂಗಾರ ರಸವನ್ನು

ಗುರುತಿಸುವುದು ಕಷ್ಟವೆಂದೇ ಹೇಳಬೇಕು. ಮಳವಳ್ಳಿ ಸುಂದರಮ್ಮನವರು ರಾಧೆಯ ಪಾತ್ರದಲ್ಲಿ ಹಾಡಿರುವ 'ಹೃದಯ ಕಾಂತನೇ ನೀನು ಸದಯ ಸಹಿತನಾಗು' ಎಂಬ ಕೃಷ್ಣಲೀಲೆಯ, ಕಾಂಭೋದಿ ರಾಗದ ಗೀತೆಯನ್ನು ಇಲ್ಲಿ ಸ್ಮರಿಸಬಹುದು. ವಿರಹ ಗೀತೆಗಳು ಸಾಮಾನ್ಯವಾಗಿ ಹಿಂದೂಸ್ತಾನಿ ರಾಗಗಳಲ್ಲಿ ಇರುತ್ತಿದ್ದವು. ಕರ್ನಾಟಕ ಶಾಸ್ತ್ರೀಯ ರಾಗಗಳಾದ ವರಾಳೀ, ಶ್ರೀರಂಜನಿಯಂತಹ ರಾಗಗಳ ಬಳಕೆಯನ್ನೂ ಗಮನಿಸಬಹುದು. ಕೆಲವೊಮ್ಮೆ ಹಾಡುಗಳು ಒಂದೇ ನಾಟಕಕ್ಕೆ ಸೀಮಿತವಾಗಿದ್ದಂತೆ ತೋರುವುದಿಲ್ಲಾ. ಮನ್ಮಥವಿಜಯ ನಾಟಕದ ರತಿವಿಲಾಪದ ಪ್ರಖ್ಯಾತ ಗೀತೆ 'ಹಾ! ಪ್ರಿಯಾ ಪ್ರಶಾಂತ ಹೃದಯಾ'ವನ್ನು ದಾನಶೂರ ಕರ್ಣ ನಾಟಕದಲ್ಲಿ ಸೋಮಪ್ರಭೆಯ ವಿಲಾಪದ ಸಂದರ್ಭದಲ್ಲಿ ಹಾಡಿರುವುದು ಕಂಡುಬರುತ್ತದೆ (ಹಿಂದೂಸ್ತಾನಿ ತೋಡಿಯ ಈ ಗೀತೆಯನ್ನು, ಅಂದಿನ ರಂಗಗೀತೆಗಳ ಸಾಂರಾಜ್ಞಿಯೆನಿಸಿದ ಕೆ. ಅಶ್ವತ್ಥಮ್ಮನವರು ಹಾಡಿ ಜನಪ್ರಿಯಗೊಳಿದ್ದರು).

ನಾಯಕಿ ನಾಯಕರು ಸೇರಿ ಹಾಡುತ್ತಿದ್ದ ಹಾಡುಗಳು ಯುಗಳ ಗೀತೆಗಳೆನಿಸುತ್ತಲಿದ್ದವು. ಈ ಯುಗಳ ಗೀತೆಗಳನ್ನು ನಾಯಕನಾಯಕಿಯರೇ ಅಲ್ಲದೆ, ಮಿತ್ರರು ಸಖಿಯರೂ ಸಹ ಹಾಡುತ್ತಿದ್ದರು. ಭೋಜ–ಕಾಳಿದಾಸ, ಶಕುಂತಲೆ–ಪ್ರಿಯಂವದೆ, ಸುಂದೋಪಸುಂದರರು. ರಾವಣ–ಕುಂಭಕರ್ಣ, ಇತ್ಯಾದಿ ಪಾತ್ರಗಳು ಒಟ್ಟಿಗೆ ಹಾಡುತ್ತಿದ್ದವು.

ವಿದೂಷಕ ಪಾತ್ರವು ಹಾಸ್ಯರಸಭರಿತ ಗೀತೆಗಳನ್ನು ಹಾಡಿ ಜನರ ಮನವನ್ನು ರಂಜಿಸುತ್ತಿದ್ದಿತು. ಕಥೆಯ ಗಾಂಭೀರ್ಯದ ಅಥವಾ ಸನ್ನಿವೇಶಗಳ ಭಾರವನ್ನು ಇಳಿಸಿ ಸ್ವಲ್ಪ ಮನಸ್ಸನ್ನು ಈ ಪ್ರಕಾರದ ಗೀತೆಗಳು ಹಗುರ ಮಾಡುತ್ತಿದ್ದವು. ಇವುಗಳು ಎಲ್ಲಾ ವರ್ಗದ ಮತ್ತು ವಯಸ್ಸಿನವರನ್ನು ನಗಿಸುತ್ತಲಿದ್ದವು. ಇಂತಹ ಗೀತೆಗಳು 'ನಕಲೀ' ಗೀತೆಗಳೆಂದು ಗುರುತಿಸಲ್ಪಟ್ಟವು. ಇಲ್ಲಿ ಎಂ.ಜಿ. ಮರಿರಾಯರು ಹಾಡಿ ಜನಪ್ರಿಯಗೊಳಿಸಿದ 'ನಾನೊಂದು ಮದುವೆಯ ಮಾಡಿಕೊಂಬೆ' ಎಂಬ ಹಾಡನ್ನು ಸ್ಮರಿಸಬಹುದು. ಸದಾರಮೆ ನಾಟಕದ ಆದಿಮೂರ್ತಿ, ಕಳ್ಳ, ಕಂಸವಧೆಯ ಅಗಸ, ಅಗಸಗಿತ್ತಿ ಮೊದಲಾದ ಪಾತ್ರಗಳು ಹಾಸ್ಯ ರಸವನ್ನು ಅವಿಸ್ಮರಣೀಯವಾಗಿ ವಿತರಿಸಿವೆ.

ಅಂದಿನ ನಾಟಕಗಳಲ್ಲಿ ವಿಶೇಷವಾಗಿ ಹಾಡಲಾಗುತ್ತಿದ್ದ ಮತ್ತೊಂದು ಪ್ರಕಾರದ ಗೀತೆಗಳೆಂದರೆ 'ಡೈಯ್ಲಾಗ್'ಗಳು ಇದರಲ್ಲಿ ಸಾಮಾನ್ಯವಾಗಿ ಎರಡು ಪಾತ್ರಗಳ ನಡುವಿನ ಸಂವಾದವನ್ನು ಗೀತೆಯ ರೂಪದಲ್ಲಿ ಹಾಡಲಾಗುತ್ತಿತ್ತು. ಇದು ಒಂದು ರೀತಿ ಯುಗಳ ಗೀತೆಯೇ ಆದರೂ ಇದರ ಪ್ರಯೋಗವು ವಿಭಿನ್ನವಾಗಿರುತ್ತಿದ್ದವು. ಇಲ್ಲಿ ಎರಡು ಪ್ರಖ್ಯಾತವಾದ 'ಡೈಯ್ಲಾಗ್'ಗಳನ್ನು ವಾಚಕರಿಗೆ ಪರಿಚಯಿಸಲಾಗಿದೆ.

**ಶಕುಂತಲಾ ನಾಟಕ**

ದುಶ್ಯಂತ: ನಾಗವೇಣಿ ನಗರಿಗೆ ನಾಂ ಪೋಗಿ ಬರುವೆನೆ ।
ಅರಸುತನದ ಕಾರ್ಯವೆನ್ನ ತ್ವರಿತಗೊಳಿಪದು ।
ಹರುಷದಿಂದ ಕಳುಹಿಸು ನೀಂ ಮರುಗಲಗಾದು॥೧॥

ಶಕುಂತಲೆ: ಇಂತು ಪೇಳಿಪೋಗಿ ಸೇರೆ ಅಂತಃಪುರವನು ।
ಅಂತರಂಗವೆಂತಹುದೋ ಕಾಂತ ಕಾಣೆನೋ ॥೨॥

ದುಶ್ಯಂತ: ಅರಸಿ ನಿನ್ನ ಅಗಲಿ ನಿಮಿಷ ಇರಲು ಒಲ್ಲೆನೇ ।
ಕರಿಸಿಕೊಂಬೆ ಬೇಗ ನಿನ್ನ ಸರಸಿಜಾನನೆ ॥೩॥

ಶಕುಂತಲೆ: ತಡೆಯಲಾರೆ ನಿಮ್ಮನು ನಾ ಬಿಡಲುಲಾರೆನು ।
ಮೊಡವಿಗೊಡೆಯ ಪೋಪರೆ ಸಂಗಡಲೆ ಬರುವೆನು ॥೪॥

ಸುದೇಷ್ಣೆ: ಪೋಗಿ ನೀನು ಅನುಜಾತನಾಲಯಕ್ಕೀಗ ತಾರೆಲೆ ಮಧುವನು ॥೧॥

ಸೈರಂಧ್ರೀ: ಪೋಗೆನಲ್ಲಿಗೆ ಮನ್ನಿಪುದು ತಲೆವಾಗಿ ಬೇಡುವೆ ನಿಮ್ಮನು ॥

ಸುದೇಷ್ಣೆ: ಸಾಕಿದುದಕ್ಕೆರಡಾಡುವೆಯ ಪಥ ಜೋಕೆನಿಲ್ಲಿಸು ಬಾಯನು ॥

ಸೈರಂಧ್ರೀ: ಏಕೆ ಕೋಪವು ನಿಮ್ಮ ತಮ್ಮನು ಲೋಕದೊಳು ಬಲು ದುರುಳನು ॥೨॥

ಸುದೇಷ್ಣೆ: ಎನ್ನ ಮನೆಯನು ಸೇರಿ ಜೀವಿಸುತ್ತಲೆನ್ನ ತಮ್ಮನ ಬೆಯ್ವಯಾ ॥

ಸೈರಂಧ್ರೀ: ಎನ್ನ ವಲ್ಲಭರಿಂದಲಾತಗೆ ಮುನ್ನ ಕೇಡಹುದರಿಯೆಯಾ ॥೩॥

ಇಂತಹ ಸಂಭಾಷಣೆಗಳು ಸುಭದ್ರ-ಸನ್ಯಾಸಿ, ಪ್ರಹ್ಲಾದ-ಹಿರಣ್ಯಕಶಿಪು, ಇತ್ಯಾದಿ ಪಾತ್ರಗಳ ನಡುವೆಯೂ ನಡೆಯುತ್ತಿತ್ತೆಂದು ತಿಳಿದು ಬರುತ್ತದೆ.

**ಕಂದ ಪದ್ಯಗಳು**

ಮೈಸೂರು ರಂಗಗೀತೆಗಳ ಬಗ್ಗೆ ಹೇಳುವಾಗ ಮುಖ್ಯವಾಗಿ ಪ್ರಸ್ತಾಪಿಸಬೇಕಾದ ಪ್ರಕಾರವೆಂದರೆ ಕಂದಪದ್ಯ. ಕಂದ ಎನ್ನುವುದು ಛಂದಸ್ಸಿನ ಹೆಸರೇ ಆದರೂ ನಾಟಕಗಳಲ್ಲಿ ಹಾಡಲಾಗುತ್ತಿದ್ದ ಎಲ್ಲಾ ಕಂದ ಪದ್ಯಗಳು ಛಂದಸ್ಸಿನಲ್ಲಿ ಇರುತ್ತಿರಲಿಲ್ಲ. ಇದು ಶ್ಲೋಕವನ್ನು ಅಥವಾ ಚೂರ್ಣಿಕೆಗಳನ್ನು ಹಾಡುವ ಕ್ರಮದಲ್ಲಿ ಹಾಡಲಾಗುತ್ತಿತ್ತು. ಇವುಗಳು ಛಂದೋಬದ್ಧವಾಗಿದ್ದು, ರಾಗಮಾಲಿಕೆಗಳಲ್ಲೇ ಸಾಮಾನ್ಯವಾಗಿ ಹಾಡಲಾಗುತ್ತಿದ್ದವು. ಏಕ ರಾಗದ ಕಂದಪದ್ಯಗಳೂ ಇವೆ, ಆದರೇ ಪ್ರತಿಸಾಲನ್ನು ಒಂದೊಂದು ರಾಗದಲ್ಲಿ ಹಾಡಲಾಗುತ್ತಿದ್ದದೇ ಹೆಚ್ಚು. ಇವುಗಳು ತಾಳದ ಕಟ್ಟುಪಾಡಿಗೆ ಒಳಗಾಗದೆ ಇದ್ದುದರಿಂದ ಇದರಲ್ಲಿ ರಾಗವನ್ನು ನಾನಾ ವಿಧವಾಗಿ ವಿಸ್ತರಿಸಿ ಹಾಡಲಾಗುತ್ತಿತ್ತು. ನಾಲ್ಕು ಸಾಲುಗಳ ಪದ್ಯವೇ ಆದರೂ ಸುದೀರ್ಘವಾಗಿ ವಿಸ್ತರಿಸಲು ಅವಕಾಶವಿದ್ದಿತು. ಇದಕ್ಕೆ ಪ್ರಾಯಶಃ ತೆಲುಗು ನಾಟಕಗಳ ಪ್ರಮುಖ ಲಕ್ಷಣವೆನಿಸಿದ ಸೀಸಪದ್ಯಗಳು ಪ್ರೇರಣೆಯಾಗಿರಬಹುದು. ತೆಲುಗಿನ ನಾಟಕಗಳಲ್ಲೇ ಅಲ್ಲದೆ ಪ್ರಾರಂಭದ ಕಾಲದ, ಅಂದರೆ ಕಳೆದ ಶತಮಾನದ ಮೂರು ಮತ್ತು ನಾಲ್ಕನೆಯ ದಶಕದ ಚಲನಚಿತ್ರಗಳಲ್ಲೂ ಇವುಗಳನ್ನು ಹೇರಳವಾಗಿ ಬಳಸಲಾಗುತ್ತಿತ್ತು. ಇದನ್ನು ತಮಿಳಿನಲ್ಲಿ 'ವಿರುತ್ತಂ' ಎನ್ನುತ್ತಿದ್ದರು. ಮೂಲತಃ ಇವು ಸಂಸ್ಕೃತ ನಾಟಕಗಳ ಶ್ಲೋಕಗಳ ದೇಶಿ ರೂಪಗಳೆನ್ನಬಹುದು. ಮನ್ಮಥ ವಿಜಯ ನಾಟಕದಲ್ಲಿ ಜಿ. ನಾಗೇಶರಾಯರು ಹಾಡಿ ಪ್ರಸಿದ್ಧವಾಗಿದ್ದ 'ಪೊಳೆವ ಕೆಂಜಟೆಗಳು' ಎಂಬ ಪದ್ಯವನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

**ಕಂದ:**

**ನಡೆಯುತ್ತೊಡನೆ ಕುಶಾಂಕುರ।**
**ಮಡಿಯೊಳ್ ತಾಗಿದುದೆನುತ್ತೆ ನಿಂದಳ್ ಮೇಣ್ ಪೂ॥**
**ಗಿಡದೊಳ್ ಸಿಲ್ಕಿದೊಡಂ ನಾ।**
**ರುಡೆಯಂ ಬಿಡಿಸುತ್ತೆ ನೋಡಿದಳೆನ್ನಂ ॥**

**ರಂಗಗೀತೆಗಳಲ್ಲಿ ಭಾಷಾ ಪ್ರಯೋಗ:**

ರಂಗಗೀತೆಗಳು ಸಾಮಾನ್ಯವಾಗಿ ಮಿಶ್ರಭಾಷೆಯಲ್ಲಿ ಇರುತ್ತಿದ್ದವೆಂದೇ ಹೇಳಬೇಕು. ರಂಗಗೀತೆಗಳ ರಚಯಿತರು ಸಾಮಾನ್ಯವಾಗಿ ರಾಜಾಶ್ರಯದ ಪಂಡಿತೋತ್ತಮರಾಗಿರುತ್ತಿದ್ದರು. ಹೀಗಾಗಿ ಭಾಷೆಯು ಸಂಸ್ಕೃತ ಭೂಯಿಷ್ಠವಾಗಿ ಇರುತ್ತಿತ್ತು. ವಿಶೇಷವೆಂದರೆ ಹಳೆಗನ್ನಡ ಮತ್ತು ನಡುಗನ್ನಡದ ಪದ ಪ್ರಯೋಗಗಳನ್ನು ಹೇರಳವಾಗಿ ಕಾಣಬಹುದಾಗಿತ್ತು. 'ಸ್ಮರಕ್ರೂರಂಜಿನಾಘಾತದಿ', 'ಸಾರಿಭಾರಮೇಕೋ ರಮಣ', 'ಚೇತೋಜಣಾ ಬಾಣ ಚಾತುರ್ಯವೆಂತಹುದು', 'ಮಂದಸಮೀರ

ನಿಂದತಿಘೋರ' ಇತ್ಯಾದಿ ಪ್ರಯೋಗಗಳು ಸಮಕಾಲೀನರಿಗೆ ಇದು ಕನ್ನಡವೇ ಎಂಬ ಸಂಶಯವನ್ನೆ ಹುಟ್ಟಿಸುತ್ತವೆ. ಸಲೆ, ಮೇಣ್, ಮಿಗೆ, ಫಡ ಇಂತಹ ಪದಗಳನ್ನು ತಾಳದ ಅಥವಾ ಛಂದಸ್ಸಿನ ಪೂರೈಕೆಗೆ ಬಳಸಿರುವುದು ಕಂಡು ಬರುತ್ತದೆ.

ಪಂಡಿತರೆಂದ ಮಾತ್ರಕ್ಕೆ ಕೇವಲ ತಮ್ಮ ಪಾಂಡಿತ್ಯ ಪ್ರದರ್ಶನವನ್ನಷ್ಟೆ ಮಾಡುತ್ತಿದ್ದರೆಂದು ಭಾವಿಸತಕ್ಕದ್ದಲ್ಲ. ನಾಟಕಗಳಲ್ಲಿ ಹಲವಾರು ಪಾತ್ರಗಳು ಜನ ಸಾಮಾನ್ಯರದ್ದಾಗಿರುತ್ತಿತ್ತು. ಅಲ್ಲದೇ ಕೇಳುಗರಲ್ಲಿ ಎಲ್ಲರಿಗೂ ಸಂಗೀತಜ್ಞಾನವಿರುತ್ತಿರಲಿಲ್ಲ. ಇಂತಹ ಪ್ರೇಕ್ಷಕವೃಂದವನ್ನು ರಂಜಿಸಲು ಜಾನಪದ, ದೇಸಿಪ್ರಯೋಗಗಳುಳ್ಳ ಹಾಡುಗಳು ರಚನೆಯಾಗಿವೆ. ಅದೇ ರೀತಿಯ ಪಾತ್ರಗಳು ಇದ್ದವು. ಅಗಸ–ಅಗಸಗಿತ್ತಿ, ಕೊರಮ–ಕೊರಮಗಿತ್ತಿ, ಬೇಡ–ಬೇಡತಿ, ಹೀಗೆ ಈ ಪಾತ್ರಗಳು ದೇಸಿ ಭಾಷೆಯಲ್ಲಿ ಹಾಡುತ್ತಿದ್ದರು. 'ಬಿಡು ಬಿಡು ಬಡಿವಾರವಿದು ಸಾಕೀಗ', 'ಅಗಸನಿಂದಲೆ ಜನಕೆ ಸೊಗಸು ಕಾಣ್ಲಾ', 'ಕಾಸಿದ್ರೆ ಕೈಲಾಸ ಕಾಣ್ರೈತೆ', 'ಭಲೆ ಹುಷಾರಿರಬೇಕಣ್ಣ', ಇವೆಲ್ಲ ದೇಸಿ–ಗ್ರಾಮ್ಯ ವಾಚಕಗಳುಳ್ಳ ಹಾಡುಗಳು. ಇಲ್ಲಿ ಗುಬ್ಬಿ ವೀರಣ್ಣ ಮತ್ತು ಬಿ. ಜಯಮ್ಮನವರು, ಅಗಸ–ಅಗಸಗಿತ್ತಿಯ ಪಾತ್ರದಲ್ಲಿ ಹಾಡುತ್ತಿದ್ದ, 'ಹೆಂಗೈತೆ ಯೊಸ್ನೆ' ಮತ್ತು 'ಬಾರೆ ಹುಡುಗಿ ಸಾರೆಸಾರೆ ಕಡಗಿ' ಎಂಬ ಗೀತೆಗಳನ್ನು ಸ್ಮರಿಸಬಹುದು. ಇಂತಹ ಪಾತ್ರಗಳ ಮತ್ತು ಗೀತೆಗಳ ಒಂದು ವಿಶೇಷವೆಂದರೇ, ಇವು ನಾನಾ ವರ್ಗಗಳ ರೀತಿ ನೀತಿಗಳನ್ನು ಹವ್ಯಾಸಗಳು, ಕಲಾವಂತಿಕೆ, ಜಾಣತನ ಮತ್ತು ಸಂಸ್ಕೃತಿಗಳ ಹಲವಾರು ಅಂಶಗಳ ಮೇಲೆ ಬೆಳಕು ಚೆಲ್ಲುತ್ತಿದ್ದವು. ಇಂದು ಜಾತಿಯ ಸುದ್ದಿಯೇ ಎತ್ತಬಾರದೆಂಬ ಅಭಿಪ್ರಾಯದಿಂದ, ಸಮಾಜಶಾಸ್ತ್ರದ ಅಧ್ಯಯನಕ್ಕೆ ಉಪಯುಕ್ತವಾಗುವ ಒಂದು ಸಂಸ್ಕೃತಿಯ ಬೆಳವಣಿಗೆಯ ಅಂಶಗಳನ್ನು ಕಳೆದುಕೊಳ್ಳುತ್ತಿದ್ದೇವೆ. ಅವುಗಳನ್ನು ಪಾಲಿಸದಿದ್ದರೂ ಪರಿಚಯವಾದರೂ ಇರಬೇಕಲ್ಲವೇ?

ಮೈಸೂರು ಸಂಸ್ಥಾನದಲ್ಲಿ ಪ್ರಚಲಿತವಾಗಿದ್ದ ಈ ರಂಗ ಸಂಗೀತ ಮತ್ತು ನಾಟಕಗಳು ದಕ್ಷಿಣ ಭಾರತದಲ್ಲೇ ಪ್ರತ್ಯೇಕವಾದ ಸ್ಥಾನವನ್ನು ಪಡೆದು ಮೆರೆದಿದ್ದವು. ನಾಟಕಗಳು ಜನಪ್ರಿಯತೆಯಿಂದ ಭಾರತೀಯ ಚಲನಚಿತ್ರಗಳ ಪ್ರಾರಂಭದ ದಶಕಗಳಲ್ಲಿ ಕನ್ನಡದಲ್ಲಿ ಹೆಚ್ಚು ಚಲನ ಚಿತ್ರಗಳು ಬರಲಿಲ್ಲ. ನಾಟಕಗಳಲ್ಲಿ ಅಂದಿಗೆ ಪರಿಚಯವಿದ್ದ ತಂತ್ರಜ್ಞಾನವನ್ನು ಬಳಸಿ ಸಮುದ್ರದ ಅಲೆಗಳು, ಬೆಟ್ಟಗಳ ಉದ್ಭವ, ದೇವತೆಗಳ ಪ್ರತ್ಯಕ್ಷವಾಗುವಿಕೆ, ಇತ್ಯಾದಿಗಳನ್ನು ಸಮರ್ಥವಾಗಿ ತೋರಿಸಲಾಗುತ್ತಿತ್ತು. ಎ.ವಿ. ವರದಾಚಾರ್, ಆರ್. ನಾಗೇಂದ್ರರಾಯರು, ಸುಬ್ಬಯ್ಯನಾಯ್ಡು, ಗುಬ್ಬಿ ವೀರಣ್ಣ ಮೊದಲಾದವರ ಪೋಷಣೆಯಲ್ಲಿ ಮೈಸೂರು ನಾಟಕರಂಗವು ತನ್ನ ಉಚ್ಛ್ರಾಯವನ್ನು ಕಂಡಿತು.

ಅಂದಿನ ಸಮಕಾಲೀನ ತೆಲುಗು ಮತ್ತು ತಮಿಳು ನಾಟಕರಂಗಗಳಿಗಿಂತ ಮೈಸೂರು ನಾಟಕರಂಗ ಮುಂದುವರೆದಿತ್ತು. ತಮಿಳು ನಾಟಕಗಳಲ್ಲಿ ವಾದ್ಯದವರು, ಅಂದರೆ ಹಾರ್ಮೋನಿಯಂ ಮತ್ತು ಮೃದಂಗ ನುಡಿಸುವವರೂ ಸಹ ವೇದಿಕೆಯಲ್ಲೇ ಕೂರುತ್ತಿದ್ದರು. 'ಪಿಟ್'ಗಳ ಪರಿಚಯವಿರಲಿಲ್ಲ. ಹೀಗಾಗಿ ವೇದಿಕೆಯಲ್ಲಿ ಕೆಲವೊಮ್ಮೆ ನಾಯಕಿಯು ಹಾರ್ಮೋನಿಯಂ ವಾದಕನೊಂದಿಗೆ ಹಾಡುತ್ತಿದ್ದರೆ, ನಾಯಕನು ದೂರದಲ್ಲಿ ನಿಂತು ನೋಡಬೇಕಾಗಿತ್ತು. ಅಂದಿನ ಜನರ ಹೇಳಿಕೆಯಂತೆ, ತಮಿಳು ನಾಟಕದ ಪ್ರಖ್ಯಾತ ನಟ–ಗಾಯಕ ಎಸ್.ಜಿ. ಕಿಟ್ಟಪ್ಪನವರು ಹಾಡುವಾಗ, ಪ್ರೇಕ್ಷಕರು ಅಪೇಕ್ಷೆಪಟ್ಟರೆ ತಕ್ಷಣವೇ ತೆರೆ ಇಳಿಸಿ, ಕರ್ನಾಟಕ ಶಾಸ್ತ್ರೀಯ ಕೃತಿಗಳ ಕಚೇರಿಯನ್ನು ನಡೆಸಿ ನಂತರ ನಾಟಕ ಮುಂದುವರಿಸುತ್ತಿದ್ದರಂತೆ. ಹೀಗಾಗಿ ವೇದಿಕೆಯ ಶಿಸ್ತಿನಲ್ಲಿ ಕೊರತೆಯಿತ್ತು. ಅದೇ ತೆಲುಗರು ಸೀಸ ಪದ್ಯಗಳನ್ನು ಬಳಸುವ ಸಂಭ್ರಮದಲ್ಲಿ ಸಂಭಾಷಣೆಗಳನ್ನು ನಿರ್ಲಕ್ಷ್ಯ ಮಾಡುತ್ತಿದ್ದರು. ಅದರಲ್ಲೂ ಬಿಲಹರಿ, ದುರ್ಗಾ ರಾಗಗಳ ಪ್ರಯೋಗವೇ ಹೆಚ್ಚು ಹೀಗಾಗಿ ಸಮಕಾಲೀನ ಪ್ರೇಕ್ಷಕರಿಗೆ ಮೈಸೂರು ಸಂಸ್ಥಾನದ ನಾಟಕಗಳ ಬಗ್ಗೆ ಹೆಚ್ಚು ಒಲವು ಇದ್ದದ್ದು ಸಹಜವೇ ಸರಿ.

*****

# ಕನ್ನಡ ನಾಡಿನ ಮೂಕಿ ಚಲನಚಿತ್ರಗಳು

* ಸುಂಕಂ ಗೋವರ್ಧನ

ಶತ ಶತಮಾನಗಳಿಂದ ಭಾರತ ಅನೇಕ ದೃಶ್ಯ ಕಲೆಗಳನ್ನು ಹೊಂದಿದೆ. ಈ ಎಲ್ಲ ಕಲೆಗಳ ರಾಜನಾಗಿ ಮೆರೆಯುತ್ತಾ ಬಂದ ದೃಶ್ಯ ಕಲೆಯೆಂದರೆ ರಂಗಭೂಮಿ. ರಂಗಭೂಮಿಯ ಸ್ಥಾನವನ್ನು ನಿಧಾನವಾಗಿ ಆಕ್ರಮಿಸಿಕೊಂಡು ಅದನ್ನು ಮೆಟ್ಟಿ ನಿಂತ ಕಲೆಯೇ ಚಲನಚಿತ್ರ. ಬಿಳಿ ಪರದೆಯ ಮೇಲೆ ಚಲಿಸುವ ವಸ್ತುಗಳನ್ನು ನೋಡಿ ಜನ ಬೆರಗಾದ ಕಾಲದಿಂದ ಹಿಡಿದು ಕನಸುಗಳ ವ್ಯಾಪಾರ ರಂಗವಾಗಿ ಚಲನಚಿತ್ರ ಬೆಳೆದು ಬಂದಿದೆ. ಮೂಕಿ ಚಲನಚಿತ್ರಗಳು ಟಾಕಿ ಚಲನಚಿತ್ರವಾಗಿ ಬೆಳವಣಿಗೆಯಾದ ನಂತರವಂತೂ ಚಲನಚಿತ್ರವು ಅತ್ಯಂತ ವ್ಯಾಪಕವಾಗಿ ಅಭಿವೃದ್ಧಿಗೊಂಡಿದೆ.

೧೮೯೫ ರಲ್ಲಿ ಫ್ರಾನ್ಸ್‌ನ ಒಗ್ಯೂಸ್ಟ್ ಲ್ಯೂಮಿಯೇರ್ ಮತ್ತು ಲೂಯಿ ಲ್ಯೂಮಿಯೇರ್ ರವರಿಂದ ಪರಿಷ್ಕೃತಗೊಂಡು ಆರಂಭವಾದ ಚಲನಚಿತ್ರವು ಕೆಲವು ತಿಂಗಳುಗಳಲ್ಲಿ ವಿಶ್ವದ ಗಮನ ಸೆಳೆಯಿತು. ೫೦ ಒಂದೆರಡು ನಿಮಿಷಗಳ ಚಲನಚಿತ್ರಗಳನ್ನು ನಿರ್ಮಿಸಿದ ಈ ಸೋದರರು ೧೮೯೫ ರ ಡಿಸೆಂಬರ್ ೨೮ ರಂದು ಪ್ಯಾರೆಸ್ಸಿನ ಬುಲಾಡೆ ಕ್ಯಾಪ್ಯುಸಿ ಭವನದಲ್ಲಿ ಒಟ್ಟು ೯ ಚಿತ್ರಗಳನ್ನು ಪ್ರದರ್ಶಿಸುವ ಮೂಲಕ ಚಲನಚಿತ್ರ ವೀಕ್ಷಣೆ ಆರಂಭವಾಯಿತು. ನಂತರ ಇವರ ಚಿತ್ರಗಳು ವಿಶ್ವಪರ್ಯಟನೆ ಮಾಡಿ ೧೮೯೬ ಜುಲೈ ೭ ರಂದು ಭಾರತಕ್ಕೆ ಬಂದವು. ಲ್ಯೂಮಿಯೇರ್ ಸೋದರರ ಪ್ರತಿನಿಧಿಯಾದ ಮಾರಿಸ್ ಸೆಸ್ಟಿಯರ್‌ನು ಭಾರತೀಯರಿಗೆ ಚಲನಚಿತ್ರವನ್ನು ಪರಿಚಯಿಸಿದನು.

ಮುಂಬಯಿಯ ಗೇಟ್ ವೇ ಆಫ್ ಇಂಡಿಯಾದ ಬಳಿಯಿರುವ ವಾಟ್ಸನ್ ಹೋಟಲಿನಲ್ಲಿ ಪ್ರದರ್ಶನ ಆರಂಭವಾಯಿತು. ಮುಂಗಾರು ಮಳೆಯನ್ನೂ ಲೆಕ್ಕಿಸದೆ ಸತತ ೩೫ ದಿನಗಳು ತುಂಬಿದ ಗೃಹದಲ್ಲಿ ಯಶಸ್ವಿಯಾಗಿ ಚಿತ್ರಗಳು ನಡೆದವು. ದಿನಕ್ಕೆ ೪ ಪ್ರದರ್ಶನಗಳಲ್ಲಿ ಚಿತ್ರಗಳು ಪ್ರದರ್ಶನವಾಗುತ್ತಿದ್ದವು. ಪ್ರವೇಶ ದರ ೧ ರೂಪಾಯಿ ಆಗಿತ್ತು. ಅಂದು ಪ್ರದರ್ಶನಗೊಂಡ ಚಿತ್ರಗಳೆಂದರೆ "ಎಂಟ್ರಿ ಆಫ್ ಸಿನಿಮಾಟೋಗ್ರಫರ್", "ಅರೈವಲ್ ಆಫ್ ಎ ಟ್ರೇನ್", "ಎ ಡೆಮಾಲಿಷನ್", "ಲೀವಿಂಗ್ ದಿ ಫ್ಯಾಕ್ಟರಿ", "ಲೇಡೀಸ್ ಅಂಡ್ ಸೋಲ್ಜರ್ಸ್ ಆನ್ ದಿ ವೀಲ್ಸ್", ಈ ಎಲ್ಲ ಚಿತ್ರಗಳು ಒಂದೆರಡು ನಿಮಿಷದ ಚಿತ್ರಣಗಳಾಗಿದ್ದವು.

ಲ್ಯೂಮಿಯೇರ್ ಸೋದರರ ಈ ಪ್ರಯತ್ನದ ನಂತರ ಹಲವಾರು ಚಿತ್ರ ತಯಾರಿಕಾ ಸಂಸ್ಥೆಗಳು ಭಾರತದಲ್ಲಿ ತಮ್ಮ ಚಿತ್ರಗಳ ಪ್ರದರ್ಶನಗಳನ್ನು ಆರಂಭಿಸಿದವು. ಈ ಎಲ್ಲ ಪ್ರದರ್ಶನಗಳಿಂದ ಸ್ಫೂರ್ತಿಗೊಂಡ ಅನೇಕ ಭಾರತೀಯರು ಚಲನಚಿತ್ರ ರಂಗವನ್ನು ಪ್ರವೇಶಿಸಿದರು. ವಿದೇಶಗಳಿಗೆ ತೆರಳಿ ಈ ತಂತ್ರಜ್ಞಾನವನ್ನು ಕಲಿತು ಬಂದವರು ಕೆಲವರಾದರೆ, ಕ್ಯಾಮೆರಾ ಮುಂತಾದ ಸಲಕರಣೆಗಳನ್ನು ಇಲ್ಲಿಗೆ ತರಿಸಿಕೊಂಡು ಪ್ರಯೋಗಗಳನ್ನು ನಡೆಸಿದವರು ಹಲವರು. ನಂತರ ಅನೇಕ ಚಿತ್ರಮಂದಿರಗಳು ತಲೆ ಎತ್ತಿದವು.

ದಾದಾ ಸಾಹೇಬ್ ಫಾಲ್ಕೆ ಎಂದು ಚಿರಪರಿಚಿತರಾಗಿರುವ ಧುಂಡಿರಾಜ ಗೋವಿಂದ ಫಾಲ್ಕೆಯವರು ೧೯೧೩ ಮೇ ೩ ರಂದು ತಮ್ಮ "ರಾಜಾ ಹರಿಶ್ಚಂದ್ರ" ಚಲನಚಿತ್ರವನ್ನು ಬಿಡುಗಡೆಗೊಳಿಸುವ ಮೂಲಕ ಭಾರತೀಯ ಕಥಾ ಚಿತ್ರಗಳ ಪರಂಪರೆ ಆರಂಭವಾಯಿತು. ಇದಾದ ನಂತರ ಹಲವಾರು ಭಾಷೆಗಳಲ್ಲಿ ಸಿನೆಮಾ ಎಂದು ಕರೆಯಲ್ಪಡುವ ಕಥಾ ಚಿತ್ರಗಳು ಆರಂಭವಾಯಿತು. ದಕ್ಷಿಣ ಭಾರತಕ್ಕೆ ಅತ್ಯಂತ ಕ್ಷಿಪ್ರಗತಿಯಲ್ಲಿ ಹರಡಿದ ಈ ಚಿತ್ರತಯಾರಿಕೆಯು ನಟರಾಜ ಮೊದಲಿಯಾರ್‌ರವರು ತಮ್ಮ ಮಿತ್ರರಾದ ಎಸ್.ಎಂ. ಧರ್ಮಲಿಂಗಂ ಅವರ ಜೊತೆಗೂಡಿ 'ಇಂಡಿಯನ್ ಫಿಲ್ಮ್ ಕಂಪನಿ' ಸ್ಥಾಪಿಸುವುದರ ಮೂಲಕ ಅನಾವರಣವಾಯಿತು. ಈ ಕಂಪನಿಯು ೧೯೧೬ ರಲ್ಲಿ ತೆಗೆದು ೧೯೧೭ ರಲ್ಲಿ ಪ್ರದರ್ಶಿಸಿದ 'ಕೀಚಕ ವಧಾ' ದಕ್ಷಿಣ ಭಾರತದ ಮೊಟ್ಟ ಮೊದಲ ಕಥಾಚಿತ್ರವಾಯಿತು. ಇದಾದ ನಂತರ ದಕ್ಷಿಣ ಭಾರತದಲ್ಲಿಯೂ ಚಲನಚಿತ್ರಕ್ಕೆ ಸಂಬಂಧಪಟ್ಟ ಪ್ರಯೋಗಗಳು ಆರಂಭಗೊಂಡವು. ಇದರ ಫಲಿತವಾಗಿ ಕನ್ನಡ ನಾಡಿನಲ್ಲಿಯೂ ಚಲನಚಿತ್ರ ಪರಂಪರೆ ತಲೆಯೆತ್ತಿತ್ತು.

---

* ೬೭, ಮೊದಲನೆಯ ಮಹಡಿ, ಕೋದಂಡರಾಮ ಪುರಂ–೫ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–೫೬೦೦೦೩ ದೂ: ೯೫೩೫೮೬೭೪೬೪.

ಬೆಂಗಳೂರಿನಲ್ಲಿ ಕನ್ನಡ ಚಲನಚಿತ್ರೋದ್ಯಮದ ಕೇಂದ್ರಸ್ಥಾನವಿತ್ತು. ಇಲ್ಲಿ ಮೊದಲ ಚಿತ್ರ ಮಂದಿರ ಪ್ಯಾರಾಮೌಂಟ್ ಆರಂಭವಾಯಿತು. ಆರಂಭದಲ್ಲಿ ಚಲನಚಿತ್ರಗಳ ವಿತರಣೆಯಲ್ಲಿ ಬೆಂಗಳೂರಿಗೆ ಇಡೀ ದಕ್ಷಿಣ ಭಾರತದಲ್ಲಿ ವಿಶೇಷ ಸ್ಥಾನಮಾನವಿತ್ತು. ಸ್ವತಂತ್ರ ಪೂರ್ವ ಚಲನಚಿತ್ರರಂಗದಲ್ಲಿ ಪ್ರಮುಖವಾದ ೨ ರೀತಿಯ ಚಲನಚಿತ್ರಗಳು ಗಮನ ಸೆಳೆಯುತ್ತವೆ. ಅವೆಂದರೆ ಮೂಕಿ ಚಲನಚಿತ್ರಗಳು ಹಾಗೂ ಟಾಕಿ ಚಲನಚಿತ್ರಗಳು. ಕನ್ನಡದಲ್ಲಿ ೧೯೩೪ ರಲ್ಲಿ ಸತಿ ಸುಲೋಚನಾ ಎಂಬ ಚಿತ್ರವೇ ಮೊಟ್ಟ ಮೊದಲ ಟಾಕಿ ಚಿತ್ರ. ಇದಕ್ಕೆ ಮುಂಚೆ ಇದ್ದ ಚಲನಚಿತ್ರಗಳು ಮೂಕಿ ಚಲನಚಿತ್ರಗಳಾಗಿವೆ. ಈ ಲೇಖನದಲ್ಲಿ ಕನ್ನಡ ನಾಡಿನ ಮೂಕಿ ಚಲನಚಿತ್ರಗಳನ್ನು ಕುರಿತು ಸಮೀಕ್ಷಿಸಲಾಗಿದೆ.

**ಮೂಕಿ ಚಲನಚಿತ್ರಗಳು**

ಮೂಕಿ ಚಲನಚಿತ್ರಗಳಿಗೆ ಭಾಷೆಯೇ ಇಲ್ಲ ಎಂದ ಮೇಲೆ ಕನ್ನಡದ ಮೂಕಿ ಚಿತ್ರಗಳೆಂದು ಕರೆಯುವುದು ಎಷ್ಟು ಸಮಂಜಸ ಎಂಬ ಪ್ರಶ್ನೆ ತಲೆದೋರುವುದು ಸ್ವಾಭಾವಿಕ. ಕನ್ನಡದ ನೆಲದಲ್ಲಿ ರೂಪುಗೊಂಡ, ಕನ್ನಡ ಮನಸ್ಥಿತಿಯಿರುವ ಚಿತ್ರಗಳನ್ನು ಕನ್ನಡದ ಚಿತ್ರಗಳೆಂದು ಕರೆಯುತ್ತೇವೆ. ಅಂತೆಯೇ ಭಾಷೆಯಿಲ್ಲದಿದ್ದರೇನಂತೆ ಕನ್ನಡ ಮನಸ್ಥಿತಿಯನ್ನು ಹೊಂದಿರುವ ಹಾಗೂ ಕನ್ನಡ ತಂತ್ರಜ್ಞರನ್ನು ಹೊಂದಿರುವ ಚಲನಚಿತ್ರಗಳನ್ನು ಕನ್ನಡದ ಮೂಕಿ ಚಿತ್ರಗಳು ಎಂದು ಕರೆಯುವುದು ತಪ್ಪಲ್ಲ.

ಕನ್ನಡದಲ್ಲಿ ಮೂಕಿ ಚಿತ್ರಗಳನ್ನು ತೆಗೆಯಲು ಆರಂಭಿಸಿದವರೆಂದರೆ ಪ್ರಖ್ಯಾತ ರಂಗಕರ್ಮಿಯಾಗಿದ್ದ ಗುಬ್ಬಿ ವೀರಣ್ಣನವರು, ಸೂರ್ಯ ಫಿಲಂ ಕಂಪನಿಯ ಹರಿಭಾಯಿದೇಸಾಯಿ, ಅಜಂತಾ ಫಿಲಂಸ್‌ನ ಎಂ. ಭವನಾನಿ ಮತ್ತು ಹಿರಿಯ ಸಾಹಿತಿಗಳಾದ ಶಿವರಾಮ ಕಾರಂತರು.

**ಗುಬ್ಬಿವೀರಣ್ಣನವರು:**

ಚಲನಚಿತ್ರ ರಂಗದ ಯಾವ ತಾಂತ್ರಿಕತೆಯೂ ಗೊತ್ತಿಲ್ಲದ ಪ್ರಖ್ಯಾತ ರಂಗಕರ್ಮಿಗಳಾಗಿದ್ದ ಗುಬ್ಬಿ ವೀರಣ್ಣನವರು ತಮ್ಮ ಕಂಪನಿಯ 'ಭಕ್ತ ಕಬೀರ್' ನಾಟಕವನ್ನು ಚಿತ್ರವಾಗಿಸುವ ಬಯಕೆ ಹೊತ್ತರು. ಬಹುಶಃ ಇವರಿಗೆ ಸ್ಫೂರ್ತಿಯೆಂದರೆ ೧೯೦೩ ರಲ್ಲಿ ಬಂಗಾಳಿಯ ನಾಟಕವನ್ನು ಹೀಗೆ ತೆರೆಗೆ ತಂದ ಹೀರಾಲಾಲ್ ಸೇನ್, ಮುಂಬಯಿಯಲ್ಲಿ ೧೯೧೩ರಲ್ಲಿ ನಾಟಕವನ್ನು ತೆರೆಗೆ ತಂದ ಎಸ್.ಎನ್. ಪಾಟಣಕರ್ ಮತ್ತು ರಾಮಚಂದ್ರ ತೋರ್ನೆ ಯವರಿರಬೇಕು. ಇವರುಗಳು ಈಗಾಗಲೇ ನಾಟಕಗಳನ್ನು ಬೆಳ್ಳಿ ತೆರೆಗೆ ಪರಿಚಯಿಸಿದ್ದರು. ಆದರೆ ಗುಬ್ಬಿ ವೀರಣ್ಣನವರ ಪ್ರಯತ್ನ ಸಫಲವಾಗಲಿಲ್ಲ.

ಆದರೆ ಸೋಲನ್ನು ಸವಾಲಾಗಿ ಸ್ವೀಕರಿಸಿದ ಗುಬ್ಬಿ ವೀರಣ್ಣನವರು 'ಕರ್ನಾಟಕ ಫಿಲ್ಮ್ ಕಾರ್ಪೋರೇಷನ್' ಸ್ಥಾಪಿಸುವುದರ ಮೂಲಕ ಚಿತ್ರರಂಗಕ್ಕೆ ಧುಮುಕಿದರು. ಸಾಹಿತಿಗಳಾಗಿದ್ದ ದೇವುಡು ನರಸಿಂಹ ಶಾಸ್ತ್ರಿಗಳು ಮತ್ತು ಓರಿಯಂಟಲ್ ಬ್ಯಾಂಕ್‌ನ ಶ್ರೀನಿವಾಸ ಮೂರ್ತಿಯವರು ವ್ಯವಸ್ಥಾಪಕ ನಿರ್ದೇಶಕರಾಗಿಯೂ ಎಂ.ವಿ. ಅಯ್ಯಂಗಾರ್, ಬಿ. ಪುಟ್ಟಸ್ವಾಮಯ್ಯ ಮತ್ತು ಕೃಷ್ಣರಾಯರು ಈ ಕಂಪನಿಯ ನಿರ್ದೇಶಕರಾಗಿಯೂ ನಿಯುಕ್ತಗೊಂಡರು. ಮದರಾಸು, ಮುಂಬೈಗಳಲ್ಲಿ ಮುಚ್ಚಿಹೋಗಿದ್ದ ಚಲನಚಿತ್ರ ತಯಾರಿಕಾ ಕಂಪನಿಗಳಿಂದ ಪರಿಕರಗಳನ್ನು ತಂದು ಬೆಂಗಳೂರಿನ ಮಲ್ಲೇಶ್ವರದಲ್ಲಿ ಸ್ಟುಡಿಯೋ ಮತ್ತು ಲ್ಯಾಬೊರೇಟರಿ ಸ್ಥಾಪಿಸಿದರು. ವೀರಣ್ಣನವರೇ ಮೊದಲಾಗಿ ಯಾರಿಗೂ ಈ ರಂಗದ ತಾಂತ್ರಿಕ ಪರಿಚಯವಿರಲಿಲ್ಲ. ಹಾಗಾಗಿ ಈ ಕಂಪನಿಯು ನಿರಂತರ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಗಲಿಲ್ಲ.

'ಕರ್ನಾಟಕ ಪಿಕ್ಚರ್ಸ್ ಕಾರ್ಪೋರೇಷನ್' ವತಿಯಿಂದ ಗುಬ್ಬಿ ವೀರಣ್ಣನವರು ೩ ಮೂಕಿ ಚಿತ್ರಗಳನ್ನು ತಯಾರಿಸಿದರು. ೧೯೩೦ ರಲ್ಲಿ ಸಾಂಗ್ ಆಫ್ ಲೈಫ್, ೧೯೩೧ ರಲ್ಲಿ ಹಿಸ್ ಲವ್ ಅಫೇರ್ ಹಾಗೂ ೧೯೩೨ ರಲ್ಲಿ ಹರಿಮಾಯ. ಆ ಕಾಲದ ಚಿತ್ರಗಳ ಹೆಸರುಗಳು ಇಂಗ್ಲೀಷ್‌ನಲ್ಲಿ ಹೆಚ್ಚಾಗಿ ಇರುತ್ತಿದ್ದವು. ಇದನ್ನು ವೀರಣ್ಣನವರು ಕೂಡ ಅನುಸರಿಸಿದರು.

ದೇವುಡು ನರಸಿಂಹಶಾಸ್ತ್ರಿಯವರ ಕಥೆಯನ್ನು ಆಧರಿಸಿ ವೀರಣ್ಣನವರು ಸಾಂಗ್ ಆಫ್ ಲೈಫ್ ಚಿತ್ರವನ್ನು ತೆರೆಗೆ ತಂದರು. ಆ ಕಾಲದ ಪ್ರಮುಖ ನಟರಾದ ಅಂಬು ಹಾಗೂ ಲಲಿತಾಪವಾರ್ ಮುಂತಾದವರು ತಾರಾಗಣದಲ್ಲಿದ್ದ ಈ ಚಲನಚಿತ್ರವನ್ನು ಮುಂಬೈನ ಜಿ.ಪಿ. ಪವಾರ್ ನಿರ್ದೇಶಿಸಿದ್ದರು. ದೇವುಡುರವರ ಕಳ್ಳರ ಕೂಟ ಕತೆಯೇ ಸಾಂಗ್ ಆಫ್ ಲೈಫ್ ಆಯಿತು.

ಗುಬ್ಬಿ ವೀರಣ್ಣನವರು ನಿರ್ಮಿಸಿದ ಎರಡನೆಯ ಚಿತ್ರ ಹಿಸ್ ಲವ್ ಅಫೇರ್. ಈ ಚಿತ್ರದ ಮೂಲಕ ಎಂ.ವಿ. ಸುಬ್ಬಯ್ಯನಾಯ್ಡು ಹಾಗೂ ಬಿ. ಜಯಮ್ಮನವರು ಚಲನಚಿತ್ರ ರಂಗವನ್ನು ಪ್ರವೇಶಿಸಿದರು ಬೆಲ್ಜಿಯಂನ ಅಲ್‌ಗೋರವರು ಈ ಚಿತ್ರವನ್ನು ನಿರ್ದೇಶಿಸಿದ್ದರು. ಈ ಚಿತ್ರದಲ್ಲಿ ಆ ಕಾಲದ ಮಹಾನ್ ನಟರುಗಳಾದ ಗುಬ್ಬಿವೀರಣ್ಣ, ಹೆಚ್.ಎಲ್.ಎನ್. ಸಿಂಹ, ಜಿ. ಸುಂದರಮ್ಮ, ಚಂದ್ರಮ್ಮ ಮುಂತಾದವರು ಅಬಿನಯಿಸಿದ್ದರು. ಗುಬ್ಬಿ ವೀರಣ್ಣನವರ ಮೂರನೆಯ ಚಿತ್ರ ಹರಿಮಾಯಾ. ಅನೇಕ ವೈಸಿಷ್ಟ್ಯತೆಗಳನ್ನು ಹೊಂದಿರುವ ಈ ಚಿತ್ರವು ಆ ಕಾಲದ ಪ್ರಧಾನವಾದ ಚಿತ್ರವಾಗಿತ್ತು. ಹಿಸ್ ಲವ್ ಅಫೇರ್‌ನ್ನು ನಿರ್ದೇಶಿಸಿದ್ದ ಆಲ್‌ಗೋ ಈ ಚಿತ್ರದ ತಾಂತ್ರಿಕ ಸಲಹೆಗಾರರಾಗಿದ್ದರು. ಈ ಚಿತ್ರವನ್ನು ವೈ.ವಿ. ರಾವ್ ಅವರು ನಿರ್ದೇಶಿಸಿ ತಾವೇ ಮುಖ್ಯ ಪಾತ್ರವಾದ ಕೃಷ್ಣನ ವೇಷದಲ್ಲಿ ಮಿಂಚಿದರು. ಪಾತ್ರವರ್ಗದಲ್ಲಿ ವೈ.ವಿ. ರಾಯರ ಪತ್ನಿ ರಾಜಮ್ಮ ಸತ್ಯಭಾಮೆಯಾಗಿದ್ದರೆ ಬಿ. ಜಯಮ್ಮನವರು ಜಾಂಬವತಿಯಾಗಿದ್ದರು.

ಇವರೆಲ್ಲರಿಗೂ ಚಿತ್ರರಂಗದಲ್ಲಿ ಅನುಭವ ಮೂಡಿಸಿದ ಈ ಮೂರು ಚಿತ್ರಗಳ ನಟರು, ತಾಂತ್ರಿಕರು ಮುಂದೆ ಚಲನಚಿತ್ರ ರಂಗದಲ್ಲಿ ದೊಡ್ಡ ಹೆಸರು ಮಾಡಿದರು. ಟಾಕಿ ಚಲನಚಿತ್ರಗಳ ಕಾಲದಲ್ಲಿ ಇವರೆಲ್ಲರೂ ಮುನ್ನೆಲೆಗೆ ಬಂದರು. ಗುಬ್ಬಿ ವೀರಣ್ಣನವರು ಎಂದಿನಂತೆಯೇ ಒಂದು ಹೊಸ ಕಲಾಪ್ರಾಕಾರವೂ, ತಾಂತ್ರಿಕ ಕೌಶಲ್ಯವು ಆದ ಚಲನಚಿತ್ರವನ್ನು ತಮ್ಮ ಶಕ್ತಿಮೀರಿ ಪೋಷಿಸಿದರು. ತಮ್ಮ ಇಡೀ ಆದಾಯವನ್ನು ಆವರೆಗಿನ ಆಸ್ತಿ-ಪಾಸ್ತಿಯನ್ನು ಇದಕ್ಕಾಗಿ ವ್ಯಯಿಸಿಬಿಟ್ಟರು.

ಒಂದು ವಿಶೇಷವೆಂದರೆ, ಗುಬ್ಬಿವೀರಣ್ಣನವರು ಆರಂಭದಲ್ಲಿಯೇ ಸಾಮಾಜಿಕ ಚಲನಚಿತ್ರವನ್ನು ತೆಗೆಯುವ ಧೈರ್ಯ ಮಾಡಿದ್ದು. ದೇಶದ ಬೇರೆ ಭಾಗಗಳಲ್ಲಿ ಪೌರಾಣಿಕ ಚಲನಚಿತ್ರಗಳೇ ಚಾಲ್ತಿಯಲ್ಲಿದ್ದ ಕಾಲದಲ್ಲಿ ವೀರಣ್ಣನವರು ಎರಡು ಸಾಮಾಜಿಕ ಚಲನಚಿತ್ರಗಳನ್ನು ತೆಗೆದರು. ಈ ಎರಡೂ ಚಲನಚಿತ್ರಗಳಲ್ಲಿ ಅವರೇನಾದರೂ ಗೆದ್ದಿದ್ದರೆ ಬಹುಶಃ ಸಾಮಾಜಿಕ ಚಲನಚಿತ್ರಗಳ ಹೊಳೆಯನ್ನೇ ಹರಿಸುವಷ್ಟು ಶಕ್ತಿ ಅವರಲ್ಲಿತ್ತು. ಆದರೆ ಎರಡೂ ಚಿತ್ರಗಳ ಸೋಲಿನ ನಂತರ ಇಡೀ ದೇಶದಲ್ಲಿ ರೂಢಿಯಲ್ಲಿದ್ದ ಪೌರಾಣಿಕ ಚಲನಚಿತ್ರಕ್ಕೆ ಮೊರೆ ಹೋದರು ಎನ್ನಿಸುತ್ತದೆ. ೧೯೩೦-೩೧ ರ ಜಾಗತಿಕ ಆರ್ಥಿಕ ಮುಗ್ಗಟ್ಟಿಗೆ ಕನ್ನಡ ಚಲನಚಿತ್ರವನ್ನು ರಸಿಕರಿಗೆ ನೀಡಬೇಕು - ಎನ್ನುವ ಗುಬ್ಬಿ ವೀರಣ್ಣನವರ ಆಸೆ ಬಲಿಯಾಗಬೇಕಾಯಿತು. ನಂತರ ಮತ್ತೆ ಗುಬ್ಬಿ ವೀರಣ್ಣನವರು ಟಾಕಿ ಚಿತ್ರಗಳ ಕಾಲದಲ್ಲಿ ಮತ್ತೆ ಚಿತ್ರ ನಿರ್ಮಾಣಕ್ಕೆ ಇಳಿದರು.

**ಎಂ. ಭವನಾನಿಯವರ ವಸಂತಸೇನೆ:**

ಕನ್ನಡ ಮೂಕಿ ಚಿತ್ರಗಳ ಇತಿಹಾಸದಲ್ಲಿ ಅತ್ಯಂತ ವೈಭವಯುತವಾದ ಅಧ್ಯಾಯವೆಂದರೆ ಭವನಾನಿಯವರ ವಸಂತಸೇನೆ ಚಲನಚಿತ್ರ. ಮೋಹನ್ ಭವನಾನಿಯವರು ಜರ್ಮನಿಯಲ್ಲಿ ಚಿತ್ರ ತಯಾರಿಕೆಯನ್ನು ಕಲಿತು ಬಂದಿದ್ದ ಶಿಸ್ತಿನ ವ್ಯಕ್ತಿಯಾಗಿದ್ದರು. ೧೯೨೮ ರಲ್ಲಿ ಮೈಸೂರು ದಸರಾ ವೀಕ್ಷಣೆಗೆಂದು ಮುಂಬೈನಿಂದ ಮೈಸೂರಿಗೆ ಬಂದು ದಸರಾ ನೋಡಿ ಅತ್ಯಂತ ಸಂತೋಷ ಭರಿತರಾದ ಭವನಾನಿಯವರು ಮೈಸೂರು ದಸರಾವನ್ನು ಕುರಿತು ಎರಡು ರೀಲ್ ಚಿತ್ರವನ್ನು ತೆಗೆದು ಅರಮನೆಗೆ ಕೊಟ್ಟರು. ಮೈಸೂರು ಮಹಾರಾಜರು ಇವರಿಗೆ ಪ್ರೋತ್ಸಾಹವನ್ನು ನೀಡಿದರು. ಮೈಸೂರು ದೊರೆಗಳ ಬೆಂಬಲದಿಂದ ಆನೆಗಳನ್ನು ಹಿಡಿಯುವ ಖೆಡ್ಡಾ ಬಗ್ಗೆ ಒಂದು ಚಿತ್ರ ತಯಾರಿಸಿದರು. ನಂತರ ಮೈಸೂರಿನಲ್ಲಿ ಭವನಾನಿಯವರಿಗೆ ಆದ ಒಂದು ವಿಶೇಷ ಪ್ರಯೋಜನವೆಂದರೆ ಟಿ.ಪಿ. ಕೈಲಾಸಂ ರವರ ಪರಿಚಯ.

ಟಿ.ಪಿ. ಕೈಲಾಸಂ ಹಾಗೂ ಮೋಹನ ಭವನಾನಿಯವರ ಪ್ರಯತ್ನದ ಫಲವಾಗಿ 'ವಸಂತಸೇನಾ' ಕಥಾಚಿತ್ರ ರೂಪುಗೊಳ್ಳಲು ಸಾಧ್ಯವಾಯಿತು. ಚಾರುದತ್ತನ ಪಾತ್ರಕ್ಕೆ ಆ ಕಾಲಕ್ಕೆ ಹಿಂದಿ ಚಲನಚಿತ್ರಗಳನ್ನು ನಿರ್ದೇಶಿಸಿ ಹೆಸರು ಮಾಡಿದ್ದ ಜಿ.ಕೆ ನಂದಾ, ವಸಂತಸೇನಾ ಪಾತ್ರಕ್ಕೆ ಆ ಕಾಲದ ಪ್ರಖ್ಯಾತ ರಂಗ ಕರ್ಮಿ ಹಾಗೂ ನೃತ್ಯಪಟು ಏಣಾಕ್ಷಿ ರಾಮರಾವ್, ಶಕಾರನ ಪಾತ್ರದಲ್ಲಿ ಸ್ವತಃ ಟಿ.ಪಿ. ಕೈಲಾಸಂ, ದೊರೆಪಾಲಕನ ಪಾತ್ರಕ್ಕೆ ಆ ಕಾಲದ ಪ್ರಖ್ಯಾತ ಮನಶ್ಶಾಸ್ತ್ರ ಪ್ರಾಧ್ಯಾಪಕರಾದ ಡಾ. ಎನ್.ಎಸ್. ನಾರಾಯಣ ಶಾಸ್ತ್ರಿಗಳು ಇವರೊಂದಿಗೆ ಕಮಲಾದೇವಿ ಚಟ್ಟೋಪಾಧ್ಯಾಯ, ಬಿ.ಎಸ್. ರಾಮರಾವ್, ಕತೆಗಾರರಾಗಿ ಮುಂದೆ ಜನಪ್ರಿಯರಾದ ಆನಂದರು, ಶಬ್ದಕೋಶವನ್ನು ತಯಾರಿಸಿದ ಡಿ.ಕೆ. ಭಾರದ್ವಾಜ್ ಮುಂತಾದ ಅತಿರಥ-ಮಹಾರಥರು ಪಾತ್ರಗಳಿಗೆ ಜೀವವನ್ನು ತುಂಬಿದ್ದರು.

ವಸಂತಸೇನಾ ಶೂದ್ರಕನ ಮೃಚ್ಛಕಟಿಕಾ ನಾಟಕದ ರೂಪಾಂತರವಾಗಿದೆ. ಭವನಾನಿಯವರು ಪುರುಷ ಪ್ರಧಾನವಾದ ಮೃಚ್ಛಕಟಿಕವನ್ನು ಹೆಣ್ಣೊಬ್ಬಳ ಮಾನಸಿಕ ಸ್ಥಿತಿ ಪ್ರಧಾನವಾದ ವಸಂತ ಸೇನೆಯನ್ನಾಗಿ ಮಾಡಿದ್ದು ನಿಜಕ್ಕೂ ವಿಶೇಷವಾದದ್ದು. ಇಡೀ ಚಿತ್ರತಂಡದಲ್ಲಿ ಮಹಾನ್ ಮೇಧಾವಿಗಳಿದ್ದರು. ಆ ಕಾಲದ ಬಹು ದೊಡ್ಡ ಕಲಾ ವಿಮರ್ಶಕರಾದ ಜಿ. ವೆಂಕಟಾಚಲಂ ರವರು ಈ ಚಿತ್ರದ ಕಲಾ ನಿರ್ದೇಶಕರಾಗಿದ್ದರು. ಜರ್ಮನಿಯ ಪ್ರಖ್ಯಾತ ತಂತ್ರಜ್ಞ ವೈಲಿ ಛಾಯಾಗ್ರಾಹಕರಾಗಿದ್ದರು. ಖ್ಯಾತ ಭರತನಾಟ್ಯ ಗುರು ಜಟ್ಟಿ ತಾಯಮ್ಮನವರು ನೃತ್ಯ ನಿರ್ದೇಶಕರಾಗಿದ್ದರು. ಐರ್ಲೆಂಡಿನ ಖ್ಯಾತ ಕವಿ ಜೇಮ್ಸ್ ಎಚ್. ಕಸಿನ್ಸ್ ಈ ಚಿತ್ರದ ವ್ಯಾಖ್ಯಾನ ಕಾರರಾಗಿದ್ದರು. ಪ್ರೊ.ವಿ. ಸೀತಾರಾಮಯ್ಯ ಮತ್ತು ವಿ. ವೆಂಕೋಬರಾವ್ ರವರು ಚಿತ್ರಕತೆಯಲ್ಲಿ ಸಹಕರಿಸಿದ್ದರು.

ಆ ಕಾಲದ ಭಾರೀ ಬಜೆಟ್ ಆದ ೧ ಲಕ್ಷ ರೂಗಳು ಈ ಚಿತ್ರಕ್ಕೂ ಖರ್ಚಾಗಿತ್ತು. ವಿಜೃಂಭಣೆಯಿಂದ ತೆಗೆದ ಚಿತ್ರವು ೧೯೩೧ ರಲ್ಲಿ ಬೆಂಗಳೂರಿನ ಸೌತ್ ಪೆರೇಡ್ ರಸ್ತೆಯ [ಇಂದಿನ ಎಂ.ಜಿ. ರಸ್ತೆ] ಎಂಪೈರ್ ಚಿತ್ರ ಮಂದಿರದಲ್ಲಿ ಬಿಡುಗಡೆಯಾಯಿತು. ಇಷ್ಟೆಲ್ಲ ಅಚ್ಚುಕಟ್ಟಿನಿಂದ ತೆಗೆದ ಚಿತ್ರ, ಚಿತ್ರತಂಡವನ್ನು ನಿರಾಶೆಗೊಳಿಸಲಿಲ್ಲ. ಐದು ವರ್ಷದಲ್ಲಿ ಈ ಚಿತ್ರದ ಅಂದಾಜು ಆದಾಯ ೫ ಲಕ್ಷ ಆಗಿತ್ತಂತೆ.

**'ಸೂರ್ಯ ಫಿಲಂ' ನ ಚಿತ್ರಗಳು:**

ಕನ್ನಡ ನಾಡಿನಲ್ಲಿ ಸ್ವತಂತ್ರಪೂರ್ವ ಕಾಲಘಟ್ಟದಲ್ಲಿ ಚಲನಚಿತ್ರದ ಸುಗ್ಗಿಯನ್ನು ಉಣಬಡಿಸಿದ ಬಹಳ ದೊಡ್ಡ ಚಲನಚಿತ್ರ ಸಂಸ್ಥೆಯೆಂದರೆ 'ಸೂರ್ಯ ಫಿಲಂಸ್'. ೧೯೨೯–೩೨ ರವರೆಗಿನ ನಾಲ್ಕು ವರ್ಷಗಳಲ್ಲಿ ಈ ಸಂಸ್ಥೆ ಚಿತ್ರಿಸಿದ ಚಿತ್ರಗಳ ಸಂಖ್ಯೆ ೩೯ ಎಂದರೆ ಆಶ್ಚರ್ಯವಾಗುತ್ತದೆ. ಸರಾಸರಿ ವರ್ಷಕ್ಕೆ ೧೦ ರಂತೆ ತೆಗೆದ ಸೂರ್ಯ ಫಿಲಂಸ್ ಚಿತ್ರಗಳು ಗುಣಮಟ್ಟದಲ್ಲಿಯೂ ಹಾಗೂ ಅಭಿರುಚಿ ನಿರ್ಮಾಣದಲ್ಲಿಯೂ ಉತ್ತಮವಾಗಿದ್ದವು. ನಾನಾಭಾಯ್ ದೇಸಾಯಿ, ಪರಶುರಾಮ್ ಚವ್ಹಾಣ್, ಜಿ.ಪಿ. ಪವಾರ್, ಸುಂದರರಾವ್ ನಾಡಕರ್ಣಿ ಹಾಗೂ ಬಾಬುರಾವ್ ಮುಂತಾದವರು ಪಾತ್ರವರ್ಗದಲ್ಲಿದ್ದರು.

ಈ ಸಂಸ್ಥೆಯಲ್ಲಿ ಖಾಯಂ ನಟರು ಉದ್ಯೋಗಿಗಳಂತೆ ಇದ್ದುದೇ ಈ ಚಿತ್ರತಯಾರಿಕಾ ಸಂಸ್ಥೆ ಯಶಸ್ವಿಯಾಗುವುದಕ್ಕೆ ಮುಖ್ಯ ಕಾರಣ. ಸೂರ್ಯ ಸ್ಟಾರ್ ಎಂದು ಜನಪ್ರಿಯರಾಗಿದ್ದ ಬೆಂಗಳೂರಿನ ಲಕ್ಷ್ಮಿಬಾಯಿ. ಇವರ ಜೊತೆಗೆ ಕಮಲಾಬಾಯಿ, ಅನ್ನಪೂರ್ಣ, ಜಿಲ್ಲೋಬಾಯಿ, ರೋಹಿಣಿ ಮುಂತಾದವರು ನಟಿಯರಾಗಿದ್ದರೆ ನಟ ವರ್ಗದಲ್ಲಿ ಗಣಪತ್ ಬಾಕ್ರ, ಆಫ್‌ಘಾನಿಸ್ತಾನದ ಅಬ್ದುಲ್ ರೆಹಮಾನ್ ಬಾಚು, ದ್ರುಪದ್ ರಾಯ್, ಮನ್ಸೂರ್ ಮುಂತಾದವರು ಉತ್ತಮ ನಟರಾಗಿದ್ದರು.

ಸೂರ್ಯ ಫಿಲಂಸ್ ಸ್ಥಾಪಿಸುವುದಕ್ಕೆ ಮುಂಚೆ ಹರಿಭಾಯಿ ದೇಸಾಯಿಯವರು ಮುಂಬೈನಲ್ಲಿ ಲಕ್ಷ್ಮಿ ಫಿಲಂ ಕಂಪನಿಯನ್ನು ನಡೆಸುತ್ತಿದ್ದರು. ಕನ್ನಡ ನಾಡಿನ ಹವಾಗುಣಕ್ಕೆ ಮಾರುಹೋಗಿ ಬೆಂಗಳೂರಿಗೆ ತಮ್ಮ ಚಲನಚಿತ್ರ ಚಟುವಟಿಕೆಯನ್ನು ವಿಸ್ತರಿಸಿದ್ದರು. ಸೂರ್ಯ ಫಿಲಂಸ್‌ನ ಲಾಂಛನದಲ್ಲಿ ಇಂಗ್ಲೀಷ್, ಹಿಂದಿ ಮತ್ತು ಕನ್ನಡ ಭಾಷೆಗಳ ಶೀರ್ಷಿಕೆಗಳಲ್ಲಿ ಚಲನಚಿತ್ರಗಳು ರೂಪುಗೊಂಡವು. ಈ ಸಂಸ್ಥೆ ತಯಾರಿಸಿದ ಒಟ್ಟು ೩೯ ಚಲನಚಿತ್ರಗಳಲ್ಲಿ ಹಿಂದಿ ಭಾಷೆಯ ಶೀರ್ಷಿಕೆಗಳಿದ್ದ ೨೬, ಹಾಗೂ ಇಂಗ್ಲೀಷ್ ಭಾಷೆಯ ಶೀರ್ಷಿಕೆಗಳಿದ್ದ ಚಲನಚಿತ್ರಗಳು ೫ ಇದ್ದರೆ ಕನ್ನಡ ಭಾಷೆಯ ಚಲನಚಿತ್ರ ಶೀರ್ಷಿಕೆಗಳು ಎಂಟು ಇವೆ.

ಈ ಒಟ್ಟು ೩೯ ಚಲನಚಿತ್ರಗಳಲ್ಲಿ ಕನ್ನಡ ಶೀರ್ಷಿಕೆಗಳಿರುವ ೮ ಚಿತ್ರಗಳನ್ನು ಕನ್ನಡ ನಾಡಿನ ಟಾಕಿ ಚಿತ್ರಗಳು ಎನ್ನಲು ಅಡ್ಡಿಯಿಲ್ಲ. ಆ ಚಿತ್ರಗಳೆಂದರೆ (೧) ರಾಜ ಹೃದಯ (೧೯೨೯), (೨) ದೈವೀಖಡ್ಗ (೧೯೩೦), (೩) ಸೂರ್ಯ ಪ್ರಭಾ (೧೯೩೦), (೪) ಧೂಮಕೇತು (೧೯೩೦), (೫) ಕಿಶೋರಿ (೧೯೩೧), (೬) ವಿಜಯ ಧ್ವನಿ (೧೯೩೧), (೭) ಸ್ತ್ರೀ ಶಕ್ತಿ (೧೯೩೨), (೮) ಭಾಗ್ಯಚಕ್ರ (೧೯೩೩), ಈ ಎಂಟು ಚಿತ್ರಗಳಲ್ಲಿ ಧೂಮಕೇತು ಚಿತ್ರವನ್ನು ಸುಂದರರಾವ್ ನಾಡಕರ್ಣಿಯವರು ನಿರ್ದೇಶಿದ್ದನ್ನು ಹೊರತುಪಡಿಸಿದರೆ ಇನ್ನುಳಿದ ಎಲ್ಲ ಚಿತ್ರಗಳನ್ನು ಹರಿಭಾಯಿ ದೇಸಾಯಿಯವರು ನಿರ್ದೇಶಿಸಿದ್ದಾರೆ.

ಆ ಕಾಲದಲ್ಲಿಯೇ ಸಿನಿಮಾ ಬಂಡವಾಳ ಹೂಡಿಕೆಯ ಉದ್ಯಮವಾಗಿದ್ದರಿಂದ ಲಾಭದ ದೃಷ್ಟಿಯನ್ನು ಇಟ್ಟುಕೊಂಡೇ ಚಲನಚಿತ್ರಗಳನ್ನು ನಿರ್ಮಿಸಲಾಗುತ್ತಿತ್ತು. ಹಾಗಾಗಿ ಗಲ್ಲಾಪೆಟ್ಟಿಗೆಯಲ್ಲಿ ಯಾವ ರೀತಿಯ ಸಿನಿಮಾಗಳು ಗೆಲ್ಲುತ್ತವೆ ಎಂದು ನಿರ್ಮಾಣ

ಸಂಸ್ಥೆ ತನ್ನ ಅನುಭವದಿಂದ ಕಂಡು ಕೊಂಡಿರುತ್ತದೆಯೋ ಅಂತಹ ಚಿತ್ರಗಳನ್ನೇ ತೆಗೆಯಲಾಗುತ್ತಿತ್ತು. ಧೂಮಕೇತು ಚಿತ್ರವು ಸಾಹಸ ಪ್ರಧಾನವಾದ ಚಿತ್ರವಾಗಿತ್ತು. ವಿಜಯಧ್ವನಿಯು ಸಾಹಸ ಪ್ರಧಾನ ಚಿತ್ರವಾಗಿತ್ತು. ದೈವೀ ಖಡ್ಗವು ಐತಿಹಾಸಿಕ ಕಥಾಹಂದರವನ್ನು ಹೊಂದಿದ್ದರೆ, ರಾಜ ಹೃದಯ ಹಾಗೂ ಸೂರ್ಯ ಪ್ರಭಾ ಚಿತ್ರಗಳು ಜಾನಪದ ಚಿತ್ರಗಳಾಗಿದ್ದವು. ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಂಡು ಚಿತ್ರಮಾಡುವ ಸವಾಲನ್ನು ಹರಿಭಾಯ್ ದೇಸಾಯಿಯವರು ಎತ್ತಿಕೊಂಡರು. ಕಿಶೋರಿ, ಸ್ತ್ರೀಶಕ್ತಿ, ಭಾಗ್ಯಚಕ್ರ ಚಿತ್ರಗಳು ಸಾಮಾಜಿಕ ಚಿತ್ರಗಳಾಗಿದ್ದವು.

ಇದಲ್ಲದೆ ಕನ್ನಡ ನಾಡಿನಲ್ಲಿ ಇಂಗ್ಲೀಷ್ ಶೀರ್ಷಿಕೆಯನ್ನು ಹೊಂದಿದ ಐದು ಚಲನಚಿತ್ರಗಳನ್ನು ಸೂರ್ಯ ಫಿಲಂಸ್ ತಯಾರಿಸಿತು. ಇದರಲ್ಲಿ ಚಾಯ್ಸ್ ಆಫ್ ಎ ಬ್ರೈಡ್[೧೯೨೯], ಎ ಪ್ರಿನ್ಸ್ ಇಂಡೀಡ್[೧೯೩೦], ಕಿಂಗ್ ಆಫ್ ಹಾರ್ಟ್ಸ್[೧೯೩೧], ಲಾ ಬ್ರೇಕರ್ಸ್ [೧೯೩೧], ಇನ್ ಶ್ಯಾಕಲ್ಸ್ [೧೯೩೨] ಈ ಚಿತ್ರಗಳು ಜಾನಪದ ಕಥಾ ಹಂದರವನ್ನು ಹೊಂದಿದ್ದವು. ಚಾಯ್ಸ್ ಆಫ್ ಎ ಬ್ರೈಡ್ ಹಾಗೂ ಇನ್ ಶ್ಯಾಕಲ್ಸ್ ಚಿತ್ರಗಳನ್ನು ಹರಿಭಾಯ್ ದೇಸಾಯಿಯವರೇ ನಿರ್ದೇಶಿಸಿದ್ದರು. ಎ ಪ್ರಿನ್ಸ್ ಇಂಡೀಡನ್ನು ಕೆ. ಜೋಶಿಯವರು ಹಾಗೂ ಲಾ ಬ್ರೇಕರ್ಸ್ ಅನ್ನು ಬಾಬುರಾವ್ ಮತ್ತು ಸುಂದರರಾವ್ ನಿರ್ದೇಶಿಸಿದ್ದರು.

ಸೂರ್ಯ ಫಿಲಂಸ್ ತೆಗೆದ ಹಿಂದಿ ಭಾಷೆಯ ಶೀರ್ಷಿಕೆಗಳಿರುವ ಚಲನಚಿತ್ರಗಳು ರಾಜದೂತ್[೧೯೩೦], ಚೌಹಾನಿ ತಲವಾರ್ [೧೯೩೦], ಜಾಬೂಕ್ ನೆ ಚಮಕಾರಿ[೧೯೩೦], ರಾಧಾ ಶ್ಯಾಮ್[೧೯೩೦], ಕಾಳಿ ಕಾ ನೋ ಕೋಪ್[೧೯೩೦], ರಾಜ್ ಪ್ರಪಂಚ್ [೧೯೩೦], ಸಿತಮ್‌ಗರ್[೧೯೩೦], ಇಂತೆಕಾವ್[೧೯೩೧], ಫೌಲಾದಿ ಫರಮಾನ್[೧೯೩೧], ವಫಾದಾರ್[೧೯೩೧], ಜಿಂದಗೀ ಕಾ ಜುವಾ [೧೯೩೧], ಜಾರ್ಜ್‌ಬಹಾದ್ದೂರ್[೧೯೩೧], ಇಷ್ಕ್ ನೊ ಅಂಜಾಮ್[೧೯೩೧], ಕುರ್ಬಾನಿ[೧೯೩೧], ಆಸಿರ್-ಎ-ಹಿರ್ಸ್[೧೯೩೧], ರಣಧೀರ್[೧೯೩೧], ತೀರ್-ಎ-ಕಾತಿಲಾ[೧೯೩೧], ಕಸೌಟಿ[೧೯೩೧], ವಿತರಾಲ್ ಒರೊ[೧೯೩೧], ಚೋಟಾ ಚೋರ್[೧೯೩೨], ಕ್ಯಾಬಾತ್[೧೯೩೨], ರಾಜಾಧಿ ರಾಜ್[೧೯೩೨], ಶೇರ್ ದಿಲ್[೧೯೩೨], ಅಸಿಯಾ ಸಿತಾರಾ[೧೯೩೨], ಹಾಗೂ ದಿಲೇ ದಿಲಾರ್[೧೯೩೨] ಈ ಎಲ್ಲ ಚಿತ್ರಗಳು ಒಂದು ಅಂದಾಜಿನ ಪ್ರಕಾರ ಬೆಂಗಳೂರಿನಲ್ಲಿ ನಿರ್ಮಾಣವಾಗಿರುವುದು ಅಧ್ಯಯನ ದೃಷ್ಟಿಯಿಂದ ಮಹತ್ವದ್ದಾಗಿವೆ.

ಈ ಚಿತ್ರಗಳಲ್ಲಿ ರಾಧೇಶ್ಯಾಮ್ ಚಿತ್ರವನ್ನು ಮಧುಸೂದನ್ ಸಾಮ್ರಾಟ್ ಮತ್ತು ಚೌಹಾನ್ ರವರು ನಿರ್ದೇಶಿಸಿದ್ದರು. ತೀರ್-ಎ-ಕಾತಿಲ್ ಚಿತ್ರವನ್ನು ಸುಂದರರಾವ್‌ರವರು ಫೌಲಾದಿ ಫರ್‌ಮಾನ್ ಚಿತ್ರವನ್ನು ಬಾಬುರಾವ್ ರವರು ನಿರ್ದೇಶಿಸಿದ್ದರು. ನಂತರ ನಿರ್ದೇಶಕ ಜೋಡಿಯಾದ ಸುಂದರರಾವ್ ಹಾಗೂ ಬಾಬುರಾವ್ ಹಲವಾರು ಚಿತ್ರಗಳನ್ನು ಚಿತ್ರಪ್ರಪಂಚಕ್ಕೆ ನೀಡಿತು. ಅವರಲ್ಲಿ ಜಿಂದಗೀ ಕಾ ದುವಾ, ಇಷ್ಕ್ ನೋ ಅಂಜಾಮ್, ಕುರ್ಬಾನಿ ಚಿತ್ರಗಳು ಪ್ರಮುಖವಾದವು. ಇನ್ನುಳಿದ ಎಲ್ಲಾ ಚಿತ್ರಗಳನ್ನು ಹರಿಭಾಯಿ ದೇಸಾಯಿಯವರೇ ನಿರ್ದೇಶಿಸಿದ್ದಾರೆ.

**ಸೂರ್ಯ ಪ್ರಕಾಶ್ ಫಿಲಂ ಕಂಪನಿ:**

ಮೂಕಿ ಚಲನಚಿತ್ರಗಳ ಇತಿಹಾಸದಲ್ಲಿ ಸೂರ್ಯಪ್ರಕಾಶ್ ಫಿಲಂಸ್ ಗೆ ಕೂಡ ವಿಶೇಷ ಸ್ಥಾನವಿದೆ. ಕೆಲವೇ ಚಿತ್ರಗಳನ್ನು ಈ ಸಂಸ್ಥೆ ನಿರ್ಮಿಸಿದರೂ ಮೂಕಿ ಚಲನಚಿತ್ರಗಳ ಪರಂಪರೆ ಇನ್ನೇನು ಮುಗಿಯುತ್ತದೆ ಎನ್ನುವ ಸುಮಾರಿಗೆ ಚಿತ್ರ ನಿರ್ಮಾಣವನ್ನು ಆರಂಭಿಸಿದ ಇವರು ಕನ್ನಡದಲ್ಲಿ ಯಾವ ಶೀರ್ಷಿಕೆಯ ಚಿತ್ರನಿರ್ಮಿಸದಿದ್ದರೂ ಕನ್ನಡ ನಾಡಿನಲ್ಲಿ ಇದರ ಕೇಂದ್ರವಿದ್ದುದರಿಂದ ಅದನ್ನು ಇಲ್ಲಿ ಕೇವಲ ದಾಖಲಿಸಲಾಗಿದೆಯಷ್ಟೆ ಜಾಲೀಮ್ ಜುಲೇಖಾ(೧೯೩೦), ಸೋರ್ಡ್ ಆಫ್ ಅಲ್ಲಾ(೧೯೩೧), ಡಿಸ್ಕಾರ್ಡ್ ಡೆಡ್‌ಲವ್ (೧೯೩೧), ಮತ್ತು ಕಿಂಗ್ ಆಫ್ ಹಾರ್ಟ್ಸ್(೧೯೩೧) ಈ ಸಂಸ್ಥೆಯ ಚಿತ್ರಗಳು. ಆಕಾಲದ ರಿವಾಜಿನಂತೆ ಈ ಎಲ್ಲಾ ಚಿತ್ರಗಳ ಹೆಸರುಗಳಲ್ಲಿ ೩ ಇಂಗ್ಲೀಷ್ ಹಾಗೂ ೧ ಹಿಂದಿಯ ಶೀರ್ಷಿಕೆಯನ್ನು ಇಡಲಾಗಿದೆ. ಆದರೆ ಚಿತ್ರದ ಗುಣಮಟ್ಟದಲ್ಲಿ ಅಂತಹ ಭೇದ-ಭಾವಗಳಿಲ್ಲ. ಫ್ಯಾಂಟಸಿ, ಸಾಮಾಜಿಕ ವಸ್ತುಗಳೇ ಈ ಚಿತ್ರಗಳ ಜೀವಾಳ.

**ಶಿವರಾಮ ಕಾರಂತರ ಪ್ರಯತ್ನ:**

ಭಾರತದಲ್ಲಿ ಚಲನಚಿತ್ರವು ಕಾಲಿಟ್ಟ ನಂತರ ಅನೇಕ ಸೂಕ್ಷ್ಮ ಮನಸ್ಸಿನ ವ್ಯಕ್ತಿಗಳು ಈ ರಂಗದ ಮೇಲೆ ಆಕರ್ಷಿತರಾದರು.

ನಿರಂತರ ಪ್ರಯೋಗಶೀಲರಾಗಿದ್ದ ಕನ್ನಡದ ಮಹಾನ್ ಸಾಹಿತಿಯಾದ ಶಿವರಾಮ ಕಾರಂತರು ಕೂಡ ಚಿತ್ರರಂಗದಿಂದ ಆಕರ್ಷಿತರಾದರು. ಪುಡೋವ್ಕಿನ್ ಬರೆದ ಫಿಲಂ ಟೆಕ್ನಿಕ್ ಹಾಗೂ ಐಸನ್‌ಸ್ಟೇ ಬರೆದ ಪುಸ್ತಕಗಳನ್ನು ಓದಿ ತಾವೂ ಒಂದು ಚಿತ್ರವನ್ನು ತೆಗೆಯಬೇಕೆಂದು ಮನಸ್ಸು ಮಾಡಿದರು.

ಶಿವರಾಮ ಕಾರಂತರ ಗೆಳೆಯರಾದ ಆಚಾರ್ಯರು ಬರ್ಲಿನ್‌ನಿಂದ ರಷ್ಯಾದಲ್ಲಿ ಚಿತ್ರ ನಿರ್ಮಾಣದ ಪ್ರಕ್ರಿಯೆ ಹೇಗಿದೆ ಎಂದು ತಿಳಿದುಕೊಂಡು, ತಾವೇ ಒಂದು ಮೂವಿ ಕ್ಯಾಮೆರಾ ಕೊಂಡರು. 'ಡೊಮಿಂಗೊ' ಎನ್ನುವ ಹೆಸರಿನ ಚಿತ್ರವನ್ನು ಆರಂಭಿಸಿದರು. ಇದು ಅಸ್ಪೃಶ್ಯತೆಯ ಸಮಸ್ಯೆಯನ್ನು ತೆರೆಯ ಮೇಲೆ ಬಿಂಬಿಸಿದ ಚಿತ್ರವಾಗಿತ್ತು.

ಡೊಮಿಂಗೊ ಚಿತ್ರದ ಪ್ರಿಂಟ್ ತೊಂದರೆಗೆ ಸಿಕ್ಕಿದ್ದರಿಂದ ಅದನ್ನು ಪ್ರದರ್ಶನ ಮಾಡಲಾಗಲಿಲ್ಲ. ಈ ನಷ್ಟದಿಂದ ಚೇತರಿಸಿಕೊಂಡ ಕಾರಂತರು ತಾವೂ ಹಾಗೂ ತಮ್ಮ ರಂಗ ಗೆಳೆಯರ ಸಹಾಯದಿಂದ 'ಭೂತರಾಜ್ಯ' ಎನ್ನುವ ಕಥಾ ಚಿತ್ರವನ್ನು ತೆರೆಗೆ ತಂದರು. ಇದರಲ್ಲಿ ತಾವೇ ಅಭಿನಯಿಸಿ, ನಿರ್ದೇಶಿಸಿದರು. ಎಲ್ಲಕ್ಕೂ ದೊಡ್ಡ ವಿಶೇಷತೆಯೆಂದರೆ ಇದರ ಛಾಯಾಗ್ರಾಹಕರು ಕೂಡ ಇವರೇ. ಇವರು ಎಲ್ಲವನ್ನು ಸಿದ್ಧಪಡಿಸಿ ಕೇವಲ ಗುಂಡಿಯನ್ನು ಒತ್ತಲು ಒಬ್ಬನನ್ನು ನೇಮಿಸಿ ಕ್ಯಾಮೆರಾ ಚಾಲೂ ಆದ ನಂತರ ನಟಿಸುತ್ತಿದ್ದರು. ಒಟ್ಟಿನಲ್ಲಿ ಬಹಳ ಶ್ರಮಪಟ್ಟು ನಿರ್ಮಿಸಿದ ಈ ಚಿತ್ರವು ಹಂಚಿಕೆದಾರರ ಕೊರತೆಯಿಂದ ಪ್ರದರ್ಶನ ಕಾಣಲು ಹೆಣಗಾಡಬೇಕಾಯಿತು.

**ಮೂಕಿ ಚಿತ್ರಗಳ ಒಟ್ಟು ಸ್ವರೂಪ:**

ಮೊದಲಿಗೆ ಮೂಕಿ ಚಿತ್ರಗಳೆಂಬ ಹೆಸರಿನ ಬಗ್ಗೆ ತಿಳಿದುಕೊಳ್ಳುವುದು ಒಳ್ಳೆಯದು. ಮೂಕಿ ಚಿತ್ರವೆನ್ನುವ ಮಾತು ಟಾಕಿ ಚಿತ್ರಗಳು ಚಾಲ್ತಿಗೆ ಬಂದ ನಂತರ ಪ್ರಚಾರಕ್ಕೆ ಬಂದ ಶಬ್ದವೇ ಹೊರತು ಆ ಕಾಲಘಟ್ಟದಲ್ಲಿ ಈ ಶಬ್ದವು ಪ್ರಚಾರದಲ್ಲಿರಲಿಲ್ಲ. ಆಗ ಬಯೋಸ್ಕೋಪ್ ಎನ್ನುತ್ತಿದ್ದರು. ಬಯೋಸ್ಕೋಪ್ ಅನ್ನುವ ಶಬ್ದವನ್ನು ಮೂಕಿ ಚಿತ್ರಗಳಿಗೆ ಅನ್ವಯಿಸಿ ಹೇಳಬಹುದು.

ಇನ್ನು ಮೂಕಿ ಚಿತ್ರಗಳಿಗೂ ಭಾಷೆಗೂ ಯಾವ ಸಂಬಂಧ ಎನ್ನುವ ಪ್ರಶ್ನೆ ಮೂಡಿದರೆ ಆಗ ಅವರಿಗೆ ಅದರ ಅಗತ್ಯವಿರಲಿಲ್ಲ. ಚಲನಚಿತ್ರಗಳು ಬ್ರಿಟೀಷರ ಆಳ್ವಿಕೆಯಲ್ಲಿ ರೂಪುಗೊಳ್ಳುತ್ತಿದ್ದರಿಂದ ಚಿತ್ರಗಳು ಅವರ ಮೂಲಕ ಅಂಗೀಕಾರಗೊಳ್ಳಬೇಕಾಗಿದ್ದರಿಂದ ಬಹುತೇಕ ಚಿತ್ರಗಳ ಶೀರ್ಷಿಕೆಗಳು ಇಂಗ್ಲೀಷ್‌ನಲ್ಲಿ ಇರುತ್ತಿತ್ತು.

ಕನ್ನಡ ನಾಡಿನಲ್ಲಿ ನೆಲೆನಿಂತ ಚಿತ್ರ ತಯಾರಿಕಾ ಸಂಸ್ಥೆಗಳು ಕನ್ನಡವೇ ಮೊದಲ್ಗೊಂಡು ಕನ್ನಡ, ಇಂಗ್ಲೀಷ್, ಹಿಂದಿ, ಉರ್ದು ಶೀರ್ಷಿಕೆಗಳಲ್ಲಿ ಮೂಕಿ ಚಿತ್ರಗಳನ್ನು ತೆಗೆಯುತ್ತಿದ್ದರು. ಪ್ರದರ್ಶನವು ಎಲ್ಲಾ ಕಡೆಯೂ ನಡೆಯುತ್ತಿತ್ತು.

ಮೊದಮೊದಲು ಈ ಕಲಾ-ತಾಂತ್ರಿಕ ಪರಿಣತಿಯ ಚಲನಚಿತ್ರಗಳು ರೂಪುಗೊಂಡಾಗ ಆವರೆಗೂ ರಂಗಭೂಮಿಯಲ್ಲಿ ಪ್ರಚಲಿತವಾಗಿದ್ದ ಕಥೆಗಳನ್ನು ಪ್ರಧಾನವಾಗಿ ಚಿತ್ರಗಳಿಗೆ ಬಳಸಲಾಯಿತು. ಯಾಕೆಂದರೆ ಜನರ ಮನಸ್ಸಿನ ಮೇಲೆ ಈಗಾಗಲೇ ಪರಿಣಾಮ ಬೀರಿರುವ ಕಥೆಗಳನ್ನು ಹೊಸ ತಾಂತ್ರಿಕತೆಗೆ ಜೋಡಿಸುವುದು ಸುಲಭವಾಗಿಯೂ ಇತ್ತು. ಕ್ರಮೇಣ ಮಾರುಕಟ್ಟೆಯ ಜಾಲದೊಳಗೆ ಚಲನಚಿತ್ರವು ಬಂಧಿಯಾಯಿತು. ಜನ ಬಯಸಲಿ ಬಿಡಲಿ ಚಿತ್ರ ತಯಾರಿಕಾ ಸಂಸ್ಥೆಗಳು ಫ್ಯಾಂಟಸಿ, ಸಾಹಸ ಪ್ರಧಾನವಾದ ಚಿತ್ರಗಳನ್ನು ತೆಗೆಯುತ್ತಿದ್ದವು. ಅತ್ಯಂತ ಬೇಗ ಒಂದು ರೀತಿಯ ಏಕತಾನತೆ ಇಂತಹ ಚಿತ್ರಗಳ ಮೂಲಕ ಸ್ಥಾಪಿತವಾಯಿತು.

ಭಾರತದ ಮೊಟ್ಟ ಮೊದಲ ಕಥಾಚಿತ್ರ ರಾಜಾ ಹರಿಶ್ಚಂದ್ರ ೧೯೧೩ ರಲ್ಲಿಆರಂಭವಾದಾಗಿನಿಂದ ಹಿಡಿದು ಭಾರತದ ಮೊದಲ ವಾಕ್ಚಿತ್ರ 'ಆಲಂ ಅರಾ' ೧೯೩೧ ರಲ್ಲಿ ಬಿಡುಗಡೆಯಾಗುವವರೆಗೂ ಹಾಗೂ ನಂತರವೂ ಕೂಡ ಭಾರತದಲ್ಲಿ ತಯಾರಾಗುತ್ತಿದ್ದುವು. ೨೧೭ ನಿರ್ಮಾಣ ಸಂಸ್ಥೆಗಳಿಂದ ಭಾರತದಲ್ಲಿ ತಯಾರಾದ ಒಟ್ಟು ಮೂಕಿ ಚಲನಚಿತ್ರಗಳ ಸಂಖ್ಯೆ ೧೩೦೬. ಕನ್ನಡ ನಾಡಿನಲ್ಲಿಯೂ ಸುಮಾರು ೫೦ ಚಿತ್ರಗಳು ರೂಪುಗೊಂಡವು. ಈ ಚಿತ್ರಗಳಲ್ಲಿ ಸಾಮಾಜಿಕ, ಪೌರಾಣಿಕ, ಐತಿಹಾಸಿಕ ಎಲ್ಲಾ ಬಗೆಯ ಚಿತ್ರಗಳಿದ್ದವು.

# ಹದಿನೆಂಟು ಬಗೆಯ ಕೊಳಲುಗಳು

* ಎಸ್. ಕಾರ್ತಿಕ್

ಕೊಳಲಿನ ಗಾನಮಾಧುರ್ಯವನ್ನು ಸವಿಯದವರಾರು? ಕೊಳಲು ಮಾನವನ ಅನಾದಿಕಾಲದ ಮಿತ್ರ. ಇಂತಹ ಕೊಳಲನ್ನು ಶಾಸ್ತ್ರದ ಚೌಕಟ್ಟಿಗೆ ಒಳಪಡಿಸಿ ಅದರಲ್ಲಿ ವಿವಿಧ ಪ್ರಯೋಗಗಳನ್ನು ನಡೆಸಿ ಅನೇಕ ವಿಧದ ಕೊಳಲುಗಳನ್ನು ಶಾಸ್ತ್ರಕಾರರು ಪರಿಚಯಿಸಿದ್ದಾರೆ. ಕರ್ನಾಟಕ ಸಂಗೀತವೆಂದೇ ಖ್ಯಾತವಾಗಿರುವ ಪದ್ಧತಿಯನ್ನು ಬೆಳಸಿದ ಶಾಸ್ತ್ರಕಾರರಲ್ಲಿ ಕರ್ನಾಟಕದ ಶಾಸ್ತ್ರಕಾರರಿಗೇ ಅಗ್ರಸ್ಥಾನ. ಜೊತೆಗೆ ಕವಿಗಳೂ ಕೂಡ ಶಾಸ್ತ್ರಕಾರರ ಪಾಂಡಿತ್ಯವನ್ನು ಮೆರೆದಿದ್ದಾರೆ. ಈ ಕವಿಗಳನ್ನು ಎರಡನೆಯ ಶಾಸ್ತ್ರಕಾರರೆಂದೇ ಪರಿಗಣಿಸಬಹುದು. ಕರ್ನಾಟಕದ ಶಾಸ್ತ್ರಕಾರರ ಸಂಗೀತ ಗ್ರಂಥಗಳು, ಕನ್ನಡ ಕಾವ್ಯಗಳು ಮತ್ತು ಶಾಸನಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಮಾತ್ರ ನಮ್ಮ ಕರ್ನಾಟಕ ಸಂಗೀತ ಪದ್ಧತಿಯ ಬಗೆಗೆ ಈ ವರೆಗೆ ಇರುವ ತಿಳಿವಳಿಕೆಗಿಂತ ಹೆಚ್ಚಿನ ಅಂಶಗಳು ತಿಳಿದುಬರುವುದು ಸಾಧ್ಯ. ಕರ್ನಾಟಕದವನೇ ಆದ ಬೃಹದ್ದೇಶಿಯ ಕರ್ತೃ ಮತಂಗನು (ಕ್ರಿ.ಶ. ಸುಮಾರು ೬೦೦) ತನ್ನ ವಂಶವಾದನದಿಂದ ಮಹೇಶ್ವರನ ಆರಾಧನೆಯನ್ನು ಮಾಡಿದನು, ವಂಶವಾದನದಲ್ಲಿ ನಾಲ್ಕು ಧಾತುಗಳಿವೆ, ವಂಶವಾದನವನ್ನು ಇಂತಿಂತಹ ರಸ ಸ್ಥಾನಗಳಲ್ಲಿ ಇಂತಿಂತಹ ರೀತಿಯಲ್ಲಿ ಬಳಸಬೇಕು ಎಂದು ಮತಂಗನು ಸೂಚಿಸಿರುವನೆಂದು ಅಭಿನವಗುಪ್ತನು ತನ್ನ ಭರತನ ನಾಟ್ಯ ಶಾಸ್ತ್ರದ ವ್ಯಾಖ್ಯಾನವಾದ ಅಭಿನವ ಭಾರತಿ ಅಥವಾ ನಾಟ್ಯವೇದ ವಿವೃತಿಯಲ್ಲಿ ಹೇಳಿರುವುದು ಗಮನಾರ್ಹ ಅಂಶ[೧]. ಕರ್ನಾಟಕದಲ್ಲಿ ಕೊಳಲು ವಾದ್ಯ ಮತ್ತು ವಾದನ ಪರಂಪರೆ ಪ್ರಾಚೀನವಾದುದೆಂಬ ಸಂಗತಿ ಇದರಿಂದ ವಿದಿತವಾಗುತ್ತದೆ. ವಂಶವೆಂಬ ಶಬ್ದವೇ ಅಪಭ್ರಂಶಗೊಂಡು ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ವಾಸವೆಂಬ ರೂಪದಲ್ಲಿ ಬಳಕೆಯಾಗಿದೆ. ಪ್ರಕೃತ ಲೇಖನದಲ್ಲಿ ಸದ್ಯಕ್ಕೆ ಕನ್ನಡ ಮತ್ತು ತೆಲುಗು ಸಾಹಿತ್ಯದಲ್ಲಿ ಮಾತ್ರ ದೊರಕುತ್ತಿರುವ ಹದಿನೆಂಟು ಬಗೆಯ ಕೊಳಲುಗಳ ಉಲ್ಲೇಖ ಮತ್ತು ಇವುಗಳ ಸಮಸ್ಯೆಗಳನ್ನು ಕುರಿತು ವಿವೇಚಿಸಿ ಸಮಸ್ಯೆಗಳಿಗೆ ಸಾಧ್ಯವಿರುವ ಮಟ್ಟಿಗೂ ಪರಿಹಾರಗಳನ್ನು ಸೂಚಿಸುವ ಕಿರುಪ್ರಯತ್ನವನ್ನು ಮಾಡಲಾಗಿದೆ.

ಕನ್ನಡ ಸಾಹಿತ್ಯದ ಕೃತಿಗಳಲ್ಲಿ ಕಂಡುಬರುವ ಹದಿನೆಂಟು ಬಗೆಯ ಕೊಳಲುಗಳ ಉಲ್ಲೇಖ ಸಂಸ್ಕೃತ ಸಂಗೀತ ಶಾಸ್ತ್ರಕೃತಿಗಳಲ್ಲಿ ಕಂಡುಬರುತ್ತಿಲ್ಲ. ಅಲ್ಲಿ ಉಲ್ಲೇಖಗಳಿದ್ದರೂ ಬೇರೆ ಬೇರೆ ಹೆಸರುಗಳಿವೆ. ಕನ್ನಡ ಸಾಹಿತ್ಯದಲ್ಲಿ ಇವುಗಳ ಉಲ್ಲೇಖ ಕ್ರಿ.ಶ. ಸುಮಾರು ೧೪೩೦ ಸುಮಾರಿಗೆ ಕಂಡುಬರುತ್ತದೆ. ಇದರ ಉಲ್ಲೇಖ ಮೊದಲು ಅಷ್ಟಭಾಷಾಕವಿ ಚಂದ್ರಶೇಖರನ ಪಂಪಾವಿರೂಪಾಕ್ಷಾಸ್ಥಾನ ವರ್ಣನಂ ನಂತರ ಪ್ರಭುಗನ ವೈಭೋಗರಾಜಾಸ್ಥಾನವರ್ಣನಂ ಆನಂತರ ನಿಜಗುಣ ಶಿವಯೋಗಿಯ ವಿವೇಕಚಿಂತಾಮಣಿ ಕೃತಿಗಳಲ್ಲಿ ಇದರ ದಾಖಲಾತಿಯಿದೆ. ಈ ಮೂರು ಕೃತಿಗಳಲ್ಲಿ ದೊರಕುವ ಮಾಹಿತಿಗಳನ್ನು ಎಂ. ಚಿದಾನಂದಮೂರ್ತಿ ಅವರು ಒಂದೆಡೆ ಸಂಕಲಿಸಿ ವಿವೇಚಿಸಿದ್ದಾರೆ[೨]. ಈ ಮೂರು ಕೃತಿಗಳಿಗಿಂತ ಪ್ರಾಚೀನವಾದ ದಾಖಲಾತಿ ಪಾಲ್ಕುರಿಕೆ ಸೋಮನಾಥನ ತೆಲುಗು ಭಾಷೆಯ ಶ್ರೀ ಪಂಡಿತಾರಾಧ್ಯ ಚರಿತ್ರ ಕೃತಿಯದಾಗಿದೆ. ಪ್ರಕೃತ ಲೇಖನದಲ್ಲಿ ಇದನ್ನೂ ಒಳಕೊಂಡು ಮತ್ತೆರಡು ಕೃತಿಗಳಲ್ಲಿ ದೊರಕುವ ಮಾಹಿತಿಗಳನ್ನು ಮತ್ತು ಇದುವರೆಗೂ ನಡೆದಿರುವ ವಿಚಾರ ವಿಮರ್ಶೆಗಳನ್ನು ಬಳಸಿಕೊಂಡು ಕಿರು ವಿವೇಚನೆ ಮಾಡಲಾಗಿದೆ.

ಪಾಲ್ಕುರಿಕೆ ಸೋಮನಾಥನ ತೆಲುಗು ಕೃತಿ ಶ್ರೀ ಪಂಡಿತಾರಾಧ್ಯ ಚರಿತ್ರ, ಅಜ್ಞಾತ ಕರ್ತೃಕವೆಂದು ತೋರುವ ತಾಳಪ್ರಸ್ತಾರ ಲಕ್ಷಣ[೩] ಮತ್ತು ಸಿದ್ಧಲಿಂಗ ಶಿವಯೋಗಿಯ ಭೈರವೇಶ್ವರ ಪುರಾಣಂ[೪] ಕೃತಿಗಳಲ್ಲಿ ಹದಿನೆಂಟು ಬಗೆಯ ಕೊಳಲುಗಳ ಹೆಸರುಗಳು ಕಂಡು ಬರುತ್ತವೆ. ಈ ಎಲ್ಲಾ ಉಲ್ಲೇಖಗಳಿಗೆ ಮೂಲ ಆಕರವಾವುದೆಂಬ ಪ್ರಶ್ನೆಗೆ ಉತ್ತರ ಕಷ್ಟಸಾಧ್ಯ. ಶ್ರೀ ಪಂಡಿತಾರಾಧ್ಯ ಚರಿತ್ರ ಕೃತಿಯ ಪಾಠ ನಾವು ಗಮನಿಸಿರುವ ಆವೃತ್ತಿಯಲ್ಲಿ ಬಲುಮಟ್ಟಿಗೆ ಶುದ್ಧಪಾಠದಿಂದ ಕೂಡಿದೆ. ತಾಳಪ್ರಸ್ತಾರ ಲಕ್ಷಣದಲ್ಲಿ ಈ ಭಾಗ ಬಹಳ ಅಶುದ್ಧವಾಗಿದೆ. ಭೈರವೇಶ್ವರ ಪುರಾಣದಲ್ಲಿ ಒಂದೆಡೆ ಎರಡು

* ೬೨೫ [೧ ನೆಯ ಮಹಡಿ], ೩ ನೆಯ ಅಡ್ಡರಸ್ತೆ . ಶಿಕ್ಷಕರ ಬಡಾವಣೆ, ೧ ನೆಯ ಹಂತ, ಜೆ.ಪಿ.ನಗರ ಅಂಚೆ . ಬೆಂಗಳೂರು-೭೮

ಕೊಳಲಿನ ಹೆಸರುಗಳು ಮಾತ್ರ ಸ್ಥಾನವ್ಯತ್ಯಯದಿಂದ ಕೂಡಿದ್ದು ಉಳಿದಂತೆ ಪಾಠ ಶುದ್ಧವಾಗಿದೆ. ಪಂಪಾವಿರೂಪಾಕ್ಷಸ್ಥಾನ ವರ್ಣನಂ[೨], ವೈಭೋಗರಾಜಾಸ್ಥಾನ ವರ್ಣನಂ ಕೃತಿಗಳ ಪಾಠ ಬಹಳವಾಗಿ ಕೆಟ್ಟಿದ್ದು ಇವುಗಳನ್ನು ಚಿದಾನಂದಮೂರ್ತಿಯವರು ಗಮನಿಸಿ ಸರಿಪಡಿಸಲು ಯತ್ನಿಸಿದ್ದಾರೆ. ವೈಭೋಗರಾಜಾಸ್ಥಾನ ವರ್ಣನಂ ಕೃತಿಯ ಪಾಠವಂತೂ ಮಿಕ್ಕವುಗಳ ಪಾಠಕ್ಕಿಂತ ಬಹಳ ಅಶುದ್ಧವಾಗಿದೆ. ಒಂದೆಡೆ ಅನುಕ್ರಮ ವ್ಯತ್ಯಯವೂ ಇದೆ. ವಿವೇಕ ಚಿಂತಾಮಣಿ, ಪಂಪಾವಿರೂಪಾಕ್ಷಸ್ಥಾನ ವರ್ಣನಂ, ವೈಭೋಗರಾಜಾಸ್ಥಾನ ವರ್ಣನಂ ಕೃತಿಗಳಲ್ಲಿನ ಕೊಳಲುಗಳ ಹೆಸರುಗಳನ್ನು ಚಿದಾನಂದಮೂರ್ತಿ ಅವರು ಪರಸ್ಪರ ಹೋಲಿಸಿ ಕೊಟ್ಟಿದ್ದಾರೆ. ಜೊತೆಗೆ ಶ್ರೀ ಪಂಡಿತಾರಾಧ್ಯ ಚರಿತ್ರ ಕೃತಿಯಲ್ಲಿನ ಪಾಠಕ್ಕೂ ಕನ್ನಡ ಆಕರಗಳ ಪಾಠಕ್ಕೂ ಬಹುವಾಗಿ ಹೋಲಿಕೆಯಿದೆ ಎಂಬಂಶವನ್ನು ಗುರುತಿಸಿದ್ದಾರೆ. ವೈಭೋಗರಾಜಾಸ್ಥಾನ ವರ್ಣನಂ ಕೃತಿ ಅಪ್ರಕಟಿತವಾಗಿರುವುದರಿಂದ ಹಸ್ತಪ್ರತಿಯನ್ನೇ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ[೬]. ಒಟ್ಟಾರೆಯಾಗಿ ಎಲ್ಲಾ ಕೃತಿಗಳಲ್ಲಿನ ಸಂಬಂಧಿತ ಭಾಗವನ್ನು ಮೊದಲು ಮೂಲಸಹಿತವಾಗಿ ಕಾಲಾನುಕ್ರಮದಲ್ಲಿ ಯಥಾವತ್ತಾಗಿ ನೀಡಲಾಗಿದೆ.

ಶ್ರೀ ಪಂಡಿತಾರಾಧ್ಯ ಚರಿತ್ರ {ಕ್ರಿ.ಶ.ಸುಮಾರು ೧೩೦೦} : ಜಾತಿವಾಸ ವಿಜಾತಿವಾಸಯನು ಗುಮಾರವಾಸಯುಂ ಬಕ್ಷವಾಸಯುನು ಭುವನವಾಸಯು ಶ್ವೇತವಾಸಯು ಭಾಸ್ಕರವಾಸ ವರರುದ್ರವಾಸ ಹರಿವಾಸ ನಿಧಿವಾಸ ಯಷ್ಟದಿಗ್ವಾಸ ಗರಮೆಪ್ಪಂ ಋಷಿವಾಸ ಗಾರ್ತಿಕವಾಸ ಜನನುತಾಘೋರವಾಸಯು ಬ್ರಹ್ಮವಾಸ ನೆನಸಿ ತ್ರಿಪುರವಾಸ ಶಿವಭಕ್ತಿವಾಸ ಪಾಲಿತ ಭುವನಾಧಿಪತಿವಾಸ ಯನಂಗ ವ್ರಾಲಿ ಯಷ್ಟಾದಶ ವಾಸನಾದಮುಲು [ಪಾಲ್ಕುರಿಕಿ ಸೋಮನಾಥುನಿ ಶ್ರೀ ಪಂಡಿತಾರಾಧ್ಯ ಚರಿತ್ರ-(ಪರಿಷ್ಕರ್ತ) ಚಿಲಕೂರಿ ನಾರಾಯಣರಾವು, ಪರ್ವತ ಪ್ರಕರಣಮು, ಆಂಧ್ರ ಗ್ರಂಥಮಾಲಾ-೩೦, ಚೆನ್ನಪುರಿ-೧೯೩೯, ಪುಟ ೪೪೯-೪೫೦. {ಅಂತರ್ಜಾಲದಲ್ಲಿ ದೊರಕಿದ ಪರ್ವತ ಪ್ರಕರಣಮು ಅಧ್ಯಾಯವನ್ನು ಮಾತ್ರ ಉಳ್ಳ ಭಾಗ}]

ಪಂಪಾವಿರೂಪಾಕ್ಷಸ್ಥಾನ ವರ್ಣನಂ {ಕ್ರಿ.ಶ. ಸುಮಾರು ೧೪೩೦} : ಮತ್ತಮಾ ವಾಸುದೇವನ ವೇಣುನಾದ ಪ್ರಿಯನೆನಿಪ ಶ್ರೀ ವಿರೂಪಾಕ್ಷನೋಲಗದಲ್ಲಿ ಜಾತಿ, ವಿಜಾತಿ, ಸುಕುವಾರನರಿಪಕ್ಷಭವನಾದಿ ಅಸಂಯುಕ್ತ ಆದಿತ್ಯರುದ್ರಧಾರಾತಿರನಿಧಿದಿಗು ಋಷಿಕುಮಾರ ಅಘೋರ ಬ್ರಹ್ಮ ಹರಿಹರ ಶಿವಶಕ್ತಿ ಭುವನಾದಿ ಇವು ಮೊದಲಾದ ಹದಿನೆಂಟು ತೆಜದ ವಾಸಂಗಳಿಂ ದೇಸೆವಡೆದ ವಾಸಕಾಜಿಂ [ಚಂದ್ರಶೇಖರ ಕವಿಯ ಪಂಪಾವಿರೂಪಾಕ್ಷಸ್ಥಾನ ವರ್ಣನಂ, ಪುಟ ೨೮, ಪದ್ಯ-೭೭ ರ ವಚನ]

ವೈಭೋಗರಾಜಾಸ್ಥಾನ ವರ್ಣನಂ {ಕ್ರಿ.ಶ. ಸುವಾರು ೧೫೭೦} : ಮತ್ತಂ ಫಣಿಮಂಡಲನೆನಿಸಿದ ವೈಭೋಗರಾಯನೋಲಗದೊಳ್ ಜಾತಿ ಸುಕುಮಾರ ವಿಜಾತಿಪಕ್ಷಭುವನಾದಿಯ ಸಯ್ಯುತವಾದಿಯತ್ಯ ರುದ್ರ ಧಾರಾವತಿರ ನಿಧಿಗುರು ಷಿ ಕುಮಾರರಘೋರ ಬ್ರಹ್ಮ ತ್ರಿಪುರ ಶಿವಶಕ್ತಿ ದಶಾವತಾರಂ ಮೊದಲಾದ ಪದಿನೆಂಟು ತೆರದ ವಾಸಂಗಳೋಳ್ ವರ್ತಿಸುವ [ಬಿ. ೧೪೭೩, ಕಾಗದದ ಹಸ್ತಪ್ರತಿ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ]

ವಿವೇಕಚಿಂತಾಮಣಿ {ಕ್ರಿ.ಶ. ಸುಮಾರು ೧೫೫೦} : ಬಳಿಕ ಹದಿನೆಂಟಂಗುಳ ಮೊದಲಾಗಿ ವಂದಂಗುಳ ಪರ್ಯಂತಮಾದ ಪರಿಮಾಣ ಕ್ರಮವಿಡಿದು ಜಾತಿವಾಸ ಸಜಾತಿವಾಸ ಸುಕುಮಾರಿಕಾವಾಸ ಪಕ್ಷಾವಾಸ ಭುವನಾವಾಸ ಶ್ವೇತವಾಸ ಆದಿತ್ಯವಾಸ ರುದ್ರವಾಸ ಹರಿವಾಸ ದಿಗ್ವಾಸ ನಿಧಿವಾಸ ಋಷಿವಾಸ ಕುಮಾರವಾಸ ಅಘೋರವಾಸ ಬ್ರಹ್ಮವಾಸ ತ್ರಿಪುರವಾಸ ಶಿವಶಕ್ತಿವಾಸ ಭುವನಾಧಿಪವಾಸವೆಂಬ ಹದಿನೆಂಟು ತೆರದ ವಾಸಂಗಳ [ನಿಜಗುಣ ಶಿವಯೋಗಿಯ ವಿವೇಕಚಿಂತಾಮಣಿ, ನಾಲ್ಕನೆಯ ಪ್ರಕರಣ, ಪ್ರಕಟನೆ : ಸರಸ್ವತೀವಿಲಾಸ ಮುದ್ರಾಕ್ಷರ ಶಾಲೆ, ಮದ್ರಾಸ್-೧೮೬೭, ಪುಟ ೪೧೨-೪೧೩]

ಭೈರವೇಶ್ವರ ಪುರಾಣಂ {ಕ್ರಿ.ಶ. ಸುಮಾರು ೧೭೫೦}: ಮತ್ತಂ ದಶಾಷ್ಟ ದಶಸಪ್ತ ಕಲೆ ಪಕ್ಷ ಮನು ದಶತ್ರಿ ಸೂರ್ಯ ರುದ್ರ ವಾಯು ನಿಧಿ ದಂತಿ ಅಶ್ವ ಋತು ಶರ ವೇದ ಅಗ್ನಿ ನಯನ ಚಂದ್ರಾಂಗುಲ ಪ್ರಮಾಣಿನ ಕ್ರಮವಿಡಿದ ಜಾತಿವಾಸ ಸಜಾತಿವಾಸ ಸುಕುಮಾರಿಕಾವಾಸ ಪಕ್ಷವಾಸ ಭುವನವಾಸ ಶ್ವೇತವಾಸ ಆದಿತ್ಯವಾಸ ರುದ್ರವಾಸ ಹರಿವಾಸ ದಿಗುವಾಸ ನಿಧಿವಾಸ ಋಷಿವಾಸ ಕುಮಾರವಾಸ ಅಘೋರವಾಸ ಬ್ರಹ್ಮವಾಸ ತ್ರಿಪುರವಾಸ ಶಿವಶಕ್ತಿವಾಸ ಭುವನಾಧಿಪತಿವಾಸವೆಂಬ ಹದಿನೆಂಟು ತೆರದ ವಾಸಂಗಳ ಲಕ್ಷಣವರಿದಾ [ಸಿದ್ಧಲಿಂಗ ಶಿವಯೋಗಿಯ ಭೈರವೇಶ್ವರ ಪುರಾಣಂ, ೫-೫ ವಚನ, ಪುಟ ೬೨]

ತಾಳಪ್ರಸ್ತಾರ ಲಕ್ಷಣಂ : ವಾಸ ಲಕ್ಷಣಂ :

ಅಷ್ಟಾದಶೊಂಗುಲಶ್ಚಯ್ಯಾಪಾದ್ಯೊಯಸ್ತಸ್ಯ ಲಕ್ಷಣಂ ।
ದ್ವಾದಶಾಂಗುಲಕಶ್ಚಯ್ಯಾಪ್ಯಾದಿತ್ಯೊವಾಸಕಸ್ತಥಾ ॥೧॥
ಏಕದಶಾಂಗುಲಿಶ್ಚಯ್ವ ರುದ್ರವಾಸಶ್ಚ ನಾಮಕಂ ।
ದಶಾಂಗುಲಶ್ಚ ದಿಗ್ವಾಸೊ । ದೇಶೀವಾಸೊ ನವಾಂಗುಲಃ ॥ ೨ ॥
ಅಷ್ಟಾಂಗುಲಶ್ಚ ದಿಗ್ವಾಸಃ ಸಿಂದುಸ್ಸಪ್ತಾಂಗುಲಸ್ತಥಾ ।
ಷಡಂಗುಲಃ ಕೂರ್ಮವಾಸಃ ಪಂಚಾಂಗುಲರಘೊರಕಃ ॥ ೩॥
ಚತುಷ್ಕೊ ಬ್ರಹ್ಮವಾಸಶ್ಚ ತ್ರ್ಯಂಗುಲಶ್ಚಂದ್ರವಾಸಕಃ ॥

[ತಾಳಪ್ರಸ್ತಾರ ಲಕ್ಷಣ, ಪುಟ ೮೦-೮೧]

ಮೇಲಿನ ಆಕರಗಳಲ್ಲಿ ಭೈರವೇಶ್ವರ ಪುರಾಣದಲ್ಲಿ ಮಾತ್ರ ಕೊಳಲುಗಳ ಅಂಗುಲಗಳನ್ನು ಸಂಖ್ಯಾಶಬ್ದಗಳಲ್ಲಿ ಸೂಚಿಸಿದೆ. ಈ ಭಾಗ ನಾವು ಗಮನಿಸಿರುವ ವಿವೇಕಚಿಂತಾಮಣಿಯ ಮುದ್ರಿತ ಆವೃತ್ತಿಯಲ್ಲಿ ಕಂಡುಬರುತ್ತಿಲ್ಲ[೭]. ತಾಳಪ್ರಸ್ತಾರ ಲಕ್ಷಣದ ಪಾಠವೂ ಅಶುದ್ಧವಾಗಿದೆ. ಇದರ ಬಗೆಗೂ ಸರಿಯಾದ ವಿವರಗಳು ತಿಳಿದುಬರುತ್ತಿಲ್ಲ. ತಾಳಪ್ರಸ್ತಾರ ಲಕ್ಷಣದಲ್ಲಿ ಕೆಲವು ಕೊಳಲುಗಳ ಹೆಸರುಗಳನ್ನು ಮಾತ್ರ ಹೇಳಲಾಗಿದೆ. ಆದರೆ ಈ ಎಲ್ಲಾ ಕೃತಿಗಳಿಗೂ ಆಕರವಾವುದೆಂದು ಸ್ಪಷ್ಟವಾಗಿ ತಿಳಿಯುತ್ತಿಲ್ಲ. ಕೆಳಗೆ ಮೇಲಿನ ಕೃತಿಗಳಲ್ಲಿ ಕಂಡುಬರುವ ಕೊಳಲುಗಳ ಹೆಸರುಗಳನ್ನು ತೌಲನಿಕವಾಗಿ ಹೋಲಿಸಿ ಕೊಡಲಾಗಿದೆ.

| ಭೈರವೇಶ್ವರ ಪುರಾಣದಲ್ಲಿ ಸಂಖ್ಯಾಶಬ್ದಗಳಲ್ಲಿ ಹೇಳಿರುವ ಕೊಳಲುಗಳ ಅಂಗುಲ | ಶ್ರೀ ಪಂಡಿತಾರಾಧ್ಯ ಚರಿತ್ರ | ಪಂಪಾ ವಿರೂಪಾಕ್ಷಾಸ್ಥಾನ ವರ್ಣಸಂ | ವೈಭೋಗ ರಾಜಾಸ್ಥಾನ ವರ್ಣಸಂ | ವಿವೇಕ ಚಿಂತಾಮಣಿ | ಭೈರವೇಶ್ವರ ಪುರಾಣಂ | ತಾಳಪ್ರಸ್ತಾರ ಲಕ್ಷಣ |
|---|---|---|---|---|---|---|
| ದಶಾಷ್ಟ (೧೮) | ಜಾತಿ | ಜಾತಿ | ಜಾತಿ | ಜಾತಿ | ಜಾತಿ | |
| ದಶಸಪ್ತ (೧೭) | ವಿಜಾತಿ | ವಿಜಾತಿ | ಸುಕುಮಾರ | ಸಜಾತಿ | ಸಜಾತಿ | |
| ಕಲೆ (೧೬) | ಕುಮಾರ | ಸುಕುಮಾರ | ವಿಜಾತಿ | ಸುಕುಮಾರಿಕಾ | ಸುಕುಮಾರಿಕಾ | |
| ಪಕ್ಷ (೧೫) | ಪಕ್ಷ | ಪಕ್ಷ | ಪಕ್ಷ | ಪಕ್ಷ | ಪಕ್ಷ | |
| ಮನು (೧೪) | ಭುವನ | ಭವನದಿ | ಭುವನಾದಿಯ | ಭುವನ | ಭುವನ | |
| ದಶತ್ರಿ (೧೩) | ಶ್ವೇತ | ಅಸಂಯುಕ್ತ | ಸಯ್ಯತ | ಶ್ವೇತ | ಶ್ವೇತ | |
| ಸೂರ್ಯ (೧೨) | ಭಾಸ್ಕರ | ಆದಿತ್ಯ | ಆದಿಯತ್ಯ | ಆದಿತ್ಯ | ಆದಿತ್ಯ | ಆದಿತ್ಯ |
| ರುದ್ರ (೧೧) | ರುದ್ರ | ರುದ್ರ | ರುದ್ರ | ರುದ್ರ | ರುದ್ರ | ರುದ್ರ |
| ವಾಯು (೧೦) | ಹರಿ | ಧಾರಾತಿರ | ಧಾರಾವತಿರ | ಹರಿ | ಹರಿ | ದಿಗ್ವಾಸ |
| ನಿಧಿ (೯) | ನಿಧಿ | ನಿಧಿ | ನಿಧಿ | ನಿಧಿ | ದಿಗು | ದೇಶಿ |
| ದಂತಿ (೮) | ದಿಗು | ದಿಗು | ಗು | ದಿಗು | ನಿಧಿ | ದಿಗು |
| ಅಶ್ವ (೭) | ಋಷಿ | ಋಷಿ | ರುಷಿ | ಋಷಿ | ಋಷಿ | ಸಿಂಧು |
| ಋತು (೬) | ಕಾರ್ತಿಕ | ಕುಮಾರ | ಕುಮಾರ | ಕುಮಾರ | ಕುಮಾರ | ಕೂರ್ಮ |
| ಶರ (೫) | ಅಘೋರ | ಅಘೋರ | ಅಘೋರ | ಅಘೋರ | ಅಘೋರ | ಅಘೋರಕಃ |
| ವೇದ (೪) | ಬ್ರಹ್ಮ | ಬ್ರಹ್ಮ | ಬ್ರಹ್ಮ | ಬ್ರಹ್ಮ | ಬ್ರಹ್ಮ | ಬ್ರಹ್ಮ |
| ಅಗ್ನಿ (೩) | ತ್ರಿಪುರ | ಹರಿಹರ | ತ್ರಿಪುರ | ತ್ರಿಪುರ | ತ್ರಿಪುರ | ಚಂದ್ರ |
| ನಯನ (೨) | ಶಿವಭಕ್ತಿ | ಶಿವಶಕ್ತಿ | ಶಿವಶಕ್ತಿ | ಶಿವಶಕ್ತಿ | ಶಿವಶಕ್ತಿ | |
| ಚಂದ್ರ (೧) | ಭುವನಾಧಿಪತಿ | ಭುವನಾದಿ | ದಶಾವತಾರ | ಭುವನಾಧಿಪ | ಭುವನಾಧಿಪ | |

ಮೇಲಿನ ಪಟ್ಟಿಯಿಂದ ತಿಳಿದು ಬರುವ ಪ್ರಮುಖ ಅಂಶವೇನೆಂದರೆ ಕೆಲವು ಕೊಳಲುಗಳ ಪಾಠ ಮಾತ್ರ ಸಮಸ್ಯಾತ್ಮಕವಾಗಿದೆ ಎಂಬುದು. ಚಿದಾನಂದಮೂರ್ತಿಯವರು ಇದನ್ನು ಗುರುತಿಸಿ ಸರಿಪಡಿಸಲು ಯತ್ನಿಸಿದ್ದರೂ ಹೆಚ್ಚು ಫಲಕಾರಿಯಾಗಿಲ್ಲ. ಆದ ಕಾರಣ ಇದರ ಬಗೆಗೆ ಸಾಧ್ಯವಿರುವ ಮಟ್ಟಿಗೂ ವಿವೇಚಿಸಲಾಗಿದೆ[೮].

೧. ಹದಿನೇಳು ಅಂಗುಲದ ಕೊಳಲಿನ ಹೆಸರು ವಿವೇಕ ಚಿಂತಾಮಣಿ ಭೈರವೇಶ್ವರ ಪುರಾಣಗಳಲ್ಲಿ ಸಜಾತಿ ಎಂದೇ ಇದೆ. ಶ್ರೀ ಪಂಡಿತಾರಾಧ್ಯ ಚರಿತ್ರ, ಪಂಪಾವಿರೂಪಾಕ್ಷಾಸ್ಥಾನ ವರ್ಣನಂ, ವೈಭೋಗರಾಜಾಸ್ಥಾನ ವರ್ಣನಂ ಕೃತಿಗಳಲ್ಲಿ ವಿಜಾತಿ ಎಂದಿದೆ. ಚಿದಾನಂದ ಮೂರ್ತಿಯವರು ಜಾತಿ ಆದ ಮೇಲೆ ವಿಜಾತಿಯೇ ಬರಬೇಕು. ಇದೇ ಸರಿಯಾದ ಪಾಠವಿರಬೇಕೆಂದು ಅಭಿಪ್ರಾಯಪಟ್ಟಿರುತ್ತಾರೆ. ಈ ಅಭಿಪ್ರಾಯವನ್ನು ಒಪ್ಪಬಹುದು. ಹದಿನೇಳರಿಂದ ಹತ್ತೊಂಬತ್ತನೆಯ ಶತಮಾನಗಳಲ್ಲಿ ರಚಿತವಾಗಿರುವ/ಪ್ರತಿಯಾಗಿರುವ ಹಸ್ತಪ್ರತಿಗಳಲ್ಲಿ ಮತ್ತು ಶಾಸನಗಳಲ್ಲಿ ಸ ಕಾರಕ್ಕೂ ವ ಕಾರಕ್ಕೂ ಕೆಲಮಟ್ಟಿಗೆ ಲಿಪಿಸಾದೃಶ್ಯವಿದೆ. ಈ ಹಿನ್ನೆಲೆಯಲ್ಲಿ ವಿಜಾತಿ ಎಂಬುದೇ ಸರಿಯಾದ ಪಾಠವೆಂದು ಹೇಳಬಹುದು.

೨. ಹದಿಮೂರು ಅಂಗುಲದ ಕೊಳಲಿನ ಹೆಸರು ಎಲ್ಲಾ ಕೃತಿಗಳಲ್ಲಿ ಶ್ವೇತ ಎಂದು ಇದ್ದರೂ ಪಂಪಾವಿರೂಪಾಕ್ಷಾಸ್ಥಾನ ವರ್ಣನಂ, ವೈಭೋಗರಾಜಾಸ್ಥಾನ ವರ್ಣನಂ ಕೃತಿಗಳಲ್ಲಿ ಕ್ರಮವಾಗಿ ಅಸಂಯುಕ್ತ ಸಯ್ಯತ ಎಂದಿದೆ. ಭರತಕೋಶದಲ್ಲಿ ಉದ್ಧೃತವಾಗಿರುವ ಮಹಾರಾಜ ಕುಂಭನ ಸಂಗೀತರಾಜ ಕೃತಿಯಲ್ಲಿನ ಶ್ಲೋಕದಲ್ಲಿ ಜಾತಿ, ಆದಿತ್ಯ, ಏಕವೀರ, ವಿಶ್ವಮೂರ್ತಿ, ಸಂಯುಕ್ತ, ಅವಸಯ್ಯತ ಎಂಬ ಕೊಳಲಿನ ಹೆಸರುಗಳಿವ್. ಇಲ್ಲಿನ ಸಂಯುಕ್ತ, ಅವಸಯ್ಯತ ಎಂಬುದು ಶ್ವೇತದ ಸಂವಾದಿ ಶಬ್ದಗಳೇ ವಿಚಾರಣೀಯ. ಜೊತೆಗೆ ಸಂಯುಕ್ತ, ಅವಸಯ್ಯತಗಳನ್ನು ಬೇರೆ ಬೇರೆಯಾಗಿ ಕಾಣಿಸಿರುವುದೂ ಗಮನಿಸಬೇಕಾದ ಅಂಶ.

೩. ಹದಿನಾಲ್ಕು ಅಂಗುಲದ ಕೊಳಲಿನ ಹೆಸರು ಭುವನವೇ ಭವನವೇ ಎಂಬುದು ಗೊಂದಲಕಾರಿಯಾಗಿದೆ. ಚಿದಾನಂದಮೂರ್ತಿಯವರು ಪಂಪಾವಿರೂಪಾಕ್ಷಾಸ್ಥಾನ ವರ್ಣನಂ, ವೈಭೋಗರಾಜಾಸ್ಥಾನ ವರ್ಣನಂ ಕೃತಿಗಳಲ್ಲಿನ ಹದಿಮೂರು ಅಂಗುಲದ ಕೊಳಲಿನ ಹೆಸರನ್ನು ಅಸಂಯುಕ್ತ, ದಿಯಸಯ್ಯತ ಎಂದು ಓದಿಕೊಂಡು ದಿಅ, ದಿಯ ಈ ಅಧಿಕಾಕ್ಷರಗಳಿಗೆ ವಿವರಣೆಯನ್ನು ನೀಡುವುದು ಕಷ್ಟವೆಂದು ಬರೆದಿದ್ದಾರೆ. ಆದರೆ ಇವುಗಳನ್ನು ಹದಿನಾಲ್ಕು ಅಂಗುಲದ ಕೊಳಲಿನ ಹೆಸರಾದ ಭುವನ / ಭವನದ ಜೊತೆ ಸೇರಿಸಿಕೊಂಡು ಭುವನಾದಿಯ/ ಭವನಾದಿಯ ಎಂದು ಓದಿಕೊಳ್ಳುವುದು ಹೆಚ್ಚು ಸಮರ್ಪಕ. ಆದರೆ ಸಂಯುಕ್ತ, ಅವಸಯ್ಯತ ಎಂಬ ಹೆಸರಿನ ಕೊಳಲುಗಳು ಭರತಕೋಶದಲ್ಲಿ ಸೂಚಿತವಾಗಿರುವಾಗ ಇದನ್ನು ಸಮರ್ಥಿಸುವುದು ಕಷ್ಟಸಾಧ್ಯ. ಇರುವುದರಲ್ಲಿ ಭುವನ ಎಂಬ ಪಾಠವೇ ಹೆಚ್ಚು ಸಮರ್ಪಕ. ಶ್ರೀ ಪಂಡಿತಾರಾಧ್ಯ ಚರಿತ್ರ ಕೃತಿಯಲ್ಲಿ ಇದೇ ಪಾಠವಿದೆ. ಹದಿನಾಲ್ಕು ಅಂಗುಲದ ಕೊಳಲಿನ ಪ್ರಮಾಣವನ್ನು ಸೂಚಿಸಲು ಭೈರವೇಶ್ವರ ಪುರಾಣದಲ್ಲಿ ಮನು ಎಂಬ ಸಂಖ್ಯಾಶಬ್ದವನ್ನು ಸೂಚಿಸಿದೆ. ಸಂಖ್ಯಾಶಬ್ದದ ಕ್ರಮವಿಡಿದು ಹದಿನಾಲ್ಕು ಅಂಗುಲದ ಕೊಳಲಿನ ಹೆಸರು ಭುವನಾಧಿಪ ಎಂದು ಇದ್ದಿರಬಹುದೆಂಬ ಸೂಚನೆಯನ್ನು ಮಾಡಬಹುದಾದರೂ ಒಂದಂಗುಲ ಪ್ರಮಾಣದ ಕೊಳಲಿನ ಹೆಸರೂ ಭುವನಾಧಿಪ ಎಂದೇ ಇರುವುದು ಸಮಸ್ಯಾತ್ಮಕವಾಗಿದೆ. ಇದರೊಂದಿಗೆ ಹಿಂದೆಯೇ ಗಮನಿಸಿರುವಂತೆ ಹದಿಮೂರು ಅಂಗುಲದ ಕೊಳಲಿನ ಹೆಸರೂ ಸಮಸ್ಯೆಯಿಂದ ಕೂಡಿದೆ.

೪. ಹತ್ತಂಗುಲ ಪ್ರಮಾಣದ ಕೊಳಲಿನ ಹೆಸರು ಪಂಪಾವಿರೂಪಾಕ್ಷಾಸ್ಥಾನ ವರ್ಣನಂ, ವೈಭೋಗರಾಜಾಸ್ಥಾನ ವರ್ಣನಂ ಕೃತಿಗಳಲ್ಲಿ ಧಾರಾತಿರ, ಧಾರಾವತಿರ ಎಂದಿದೆ. ತಾಳಪ್ರಸ್ತಾರ ಲಕ್ಷಣದಲ್ಲಿ ದಿಗ್ವಾಸವೆಂದಿದೆ. ಮಿಕ್ಕ ಕೃತಿಗಳ ಪಾಠ ಹರಿ ಎಂದಿದ್ದು ಸಮರ್ಪಕ ವಾಗಿದೆ. ಧಾರಾತಿರ, ಧಾರಾವತಿರ ಎಂಬುದು ದ್ವಾರಾವತಿಪ ಎಂಬುದರ ಅಪಲಿಖಿತವಿರಬಹುದೆಂದು ಚಿದಾನಂದಮೂರ್ತಿಯವರು ಹೇಳಿರುತ್ತಾರೆ. ಇದನ್ನು ಒಪ್ಪಲು ಹಲವು ತೊಡಕುಗಳಿವೆಯಾದರೂ ಬೇರೆ ಆಧಾರಗಳು ದೊರಕುವವರೆಗೂ ತಾತ್ಕಾಲಿಕವಾಗಿ ಒಪ್ಪಬಹುದು. ಆದರೆ ತಾಳಪ್ರಸ್ತಾರ ಲಕ್ಷಣದಲ್ಲಿ ದಿಗ್ವಾಸ ಎಂದಿರುವುದು ಯಾವ ಆಧಾರದ ಮೇಲೆ ಎಂಬ ಪ್ರಶ್ನೆ ಏಳುತ್ತದೆ. ಭೈರವೇಶ್ವರ ಪುರಾಣದಲ್ಲಿ ಹತ್ತಂಗುಲಕ್ಕೆ ವಾಯು ಎಂದು ಸಂಖ್ಯಾಶಬ್ದವನ್ನು ಹೇಳಲಾಗಿದೆ. ಇದರ ಆಧಾರದ ಮೇಲೆ ದಶದಿಕ್ಕುಗಳು ಎಂದು ಅರ್ಥೈಸಿ ದಿಗ್ವಾಸ ಪಾಠವನ್ನು ಒಪ್ಪಬಹುದೆಂದು ತೋರುತ್ತದೆ. ಆದರೆ ಎಂಟಂಗುಲದ ಕೊಳಲಿನ ಹೆಸರೂ ದಿಗ್ವಾಸ ಎಂದೇ ಇರುವುದು ಗಮನಿಸಬೇಕಾದ ಅಂಶ.

೫. ಒಂಬತ್ತು ಅಂಗುಲದ ಕೊಳಲಿನ ಹೆಸರು ಎಲ್ಲಾ ಕೃತಿಗಳಲ್ಲಿಯೂ ನಿಧಿ ಎಂದೇ ಇದ್ದರೂ ತಾಳಪ್ರಸ್ತಾರ ಲಕ್ಷಣದಲ್ಲಿ ದೆಸೀವಾಸ ಎಂದಿದೆ. ಇದೇನಾದರೂ ನವದೆಶೆ ಎಂಬ ಸಂಖ್ಯಾವಾಚಕದ ಅನುಸಾರಿಯಾಗಿ ದಶಾವಾಸ ಎಂದಿರಬಹುದೇ? ವಿಚಾರಣೀಯ.

೬. ಎಂಟಂಗುಲದ ಕೊಳಲಿನ ಹೆಸರು ವೈಭೋಗರಾಜಾಸ್ಥಾನ ವರ್ಣನಂ ಕೃತಿಯಲ್ಲಿ ಹಿಂದಿನ ಮತ್ತು ಮುಂದಿನ ಕೊಳಲುಗಳ ಹೆಸರುಗಳೊಡನೆ ನಿಧಿಗುರುಷಿ ಎಂದು ಲಿಖಿತವಾಗಿದೆ. ಇಲ್ಲಿ ಸದೃಶಾಕ್ಷರ ಲೋಪದಿಂದ ನಿಧಿ ನಂತರ ಇರಬೇಕಿದ್ದ ದಿ ಅಕ್ಷರ ಬಿಟ್ಟುಹೋಗಿದೆ. ಮಿಕ್ಕ ಕೃತಿಗಳಲ್ಲಿ ದಿಗು ಎಂಬ ಸರಿಯಾದ ಪಾಠವಿದೆ. ಇದನ್ನು ದಿಗು ಎಂದು ತಿದ್ದಬಹುದು ಎಂದು ಚಿದಾನಂದ ಮೂರ್ತಿಯವರು ಸೂಚಿಸಿರುತ್ತಾರೆ. ಸದೃಶಾಕ್ಷರ ಲೋಪ ಸಂದರ್ಭದ ಕಾರಣದಿಂದ ಈ ವಾಕ್ಯದ ಪಾಠವನ್ನು 'ನಿಧಿ ದಿಗು ಋಷಿ' ಎಂದು ಧೈರ್ಯವಾಗಿ ತಿದ್ದಬಹುದು.

೭. ಏಳಂಗುಲದ ಕೊಳಲಿನ ಹೆಸರು ಎಲ್ಲಾ ಕೃತಿಗಳಲ್ಲಿ ಋಷಿ ಎಂದೇ ಇದೆ. ತಾಳಪ್ರಸ್ತಾರ ಲಕ್ಷಣದಲ್ಲಿ ಸಿಂಧು ಎಂದಿದೆ. ಇದು ಏಳಂಗುಲ ಪ್ರಮಾಣದ ಕೊಳಲಾದ ಕಾರಣ ಸಪ್ತಸಿಂಧು ಎಂಬ ಸಂಖ್ಯಾವಾಚಕವನ್ನೇ ಹೆಸರಾಗಿ ನೀಡಲಾಗಿದೆಯೆಂದು ತೋರುತ್ತದೆ.

೮. ಆರಂಗುಲದ ಕೊಳಲಿನ ಹೆಸರು ತಾಳಪ್ರಸ್ತಾರ ಲಕ್ಷಣದಲ್ಲಿ ಮಾತ್ರ ಕೂರ್ಮ ಎಂದು ಲಿಖಿತವಾಗಿದೆ. ಮಿಕ್ಕ ಕೃತಿಗಳಲ್ಲಿ ಕುಮಾರ ಎಂಬ ಸರಿಯಾದ ಪಾಠವಿದೆ. ಕುಮಾರ ಎಂಬುದರ ಅಪಲಿಖಿತವೇ ಕೂರ್ಮ ಎಂದು ಹೇಳಲು ಅವಕಾಶವಿದೆಯಾದರೂ ಶ್ಲೋಕದ ಛಂದಸ್ಸು ಕೆಡುತ್ತದೆ. ಕೂರ್ಮ ಎಂಬುದರ ಪಾಠ ಊರ್ಮಿ ಎಂದಿರಬಹುದೆಂದು ಕಾಣುತ್ತದೆ. ಊರ್ಮಿ ಎಂದರೆ ಧರ್ಮ ಎಂಬರ್ಥವಿದೆ. ಇದರ ಆಧಾರದ ಮೇಲೆ ಆರು ಧರ್ಮಗಳು ಎಂಬ ಸಂಖ್ಯಾವಾಚಕದ ಅನುಸಾರಿಯಾಗಿ ಊರ್ಮಿ ಪಾಠವನ್ನು ಒಪ್ಪಬಹುದೆಂದು ತೋರುತ್ತದೆ.

೯. ಮೂರಂಗುಲದ ಕೊಳಲಿನ ಹೆಸರು ತ್ರಿಪುರ ಎಂದಿದ್ದು ಪಂಪಾವಿರೂಪಾಕ್ಷಾಸ್ಥಾನ ವರ್ಣನಂ ಮತ್ತು ತಾಳಪ್ರಸ್ತಾರ ಲಕ್ಷಣ ಕೃತಿಗಳಲ್ಲಿ ಕ್ರಮವಾಗಿ ಹರಿಹರ, ಚಂದ್ರ ಎಂದಿದೆ. ಹರಿಹರ ಎಂಬುದು ತ್ರಿಪುರ ಎಂಬುದರ ಅಪಲಿಖಿತವೆಂದು ಚಿದಾನಂದಮೂರ್ತಿಯವರು ಹೇಳಿರುತ್ತಾರೆ. ಪರಮೇಶ್ವರನು ತ್ರಿಪುರಗಳನ್ನು ನಾಶಮಾಡಲು ವಿಷ್ಣುವನ್ನೇ ಬಾಣವನ್ನಾಗಿ ಪ್ರಯೋಗಿಸಿದನೆಂಬ ಪುರಾಣದ ಕಥೆಯ ಆಧಾರದಿಂದ ತ್ರಿಪುರಗಳನ್ನು ಹರಿಹರರಿಬ್ಬರೂ ಸೇರಿ ನಾಶಮಾಡಿದರೆಂದು ಗ್ರಹಿಸಿ ಹರಿಹರ ಎಂದು ಕವಿಯೇ ಬಳಸಿರುವನೇ ಎಂಬುದು ವಿಚಾರಣೀಯ ಅಂಶಗಳಾಗಿವೆ. ಚಂದ್ರ ಎಂಬುದರ ವಿಶ್ಲೇಷಣೆ ಕಷ್ಟಸಾಧ್ಯವಾಗಿದೆ. ಇಲ್ಲೇನಾದ‿ೂ ಕವಿಯ ಗ್ರಹಿಕೆಯೇ ತಪ್ಪಾಗಿದೆಯೇ ಅಥವಾ ಲಿಪಿಕಾರನಿಂದಾದ ದೋಷವೇ ಎಂಬುದು ವಿಚಾರಾರ್ಹ. ಆದರೂ ಬೇರೆ ಸಮರ್ಪಕ ಆಧಾರಗಳು ದೊರಕುವ ವರೆಗೂ ತ್ರಿಪುರ ಪಾಠವನ್ನೇ ತಾತ್ಕಾಲಿಕವಾಗಿ ಅಂಗೀಕರಿಸುವುದು ಉತ್ತಮ.

೧೦. ಎರಡಂಗುಲದ ಕೊಳಲಿನ ಹೆಸರು ಎಲ್ಲಾ ಆಕರಗಳಲ್ಲಿಯೂ ಶಿವಶಕ್ತಿ ಎಂದೇ ಇದೆ. ಶ್ರೀ ಪಂಡಿತಾರಾಧ್ಯ ಚರಿತ್ರ ಕೃತಿಯಲ್ಲಿ ಶಿವಭಕ್ತಿ ಎಂಬುದು ಮೂಲಪಾಠವಾಗಿ ಅಚ್ಚಾಗಿದ್ದು ಇದಕ್ಕೆ ಶಿವಶಕ್ತಿ ಎಂದು ಪಾಠಾಂತರ ಸೂಚಿತವಾಗಿದೆ. ಇದೇ ಸರಿಯಾದ ಪಾಠವಾಗಿದ್ದು ಇದನ್ನೇ ಮೂಲಪಾಠವಾಗಿ ಅಂಗೀಕರಿಸಬೇಕಾಗಿದೆ.

೧೧. ಒಂದಂಗುಲ ಕೊಳಲಿನ ಹೆಸರು ವೈಭೋಗರಾಜಾಸ್ಥಾನ ವರ್ಣನಂ ಕೃತಿಯಲ್ಲಿ ದಶಾವತಾರ ಎಂದಿದ್ದು ಮಿಕ್ಕ ಕೃತಿಗಳಲ್ಲಿ ಭುವನಾಧಿಪತಿ, ಭುವನಾಧಿಪ, ಭುವನಾದಿ ಎಂದಿದೆ. ಚಿದಾನಂದಮೂರ್ತಿಯವರು ದಶಾವತಾರಂ ಎಂದರೆ ಹತ್ತನೆಯ ಅವತಾರ ಅಥವಾ ಕಲ್ಕಿ ಎಂದಾದರೆ, ಅದನ್ನು ಭುವನಾಧಿಪತಿ ಜೊತೆ ಸೇರಿಸಬಹುದು. ಭುವನಾಧಿಪತಿ ಎಂದರೆ ರಾಜ, ಚಕ್ರವರ್ತಿ, ಈ ಯುಗದ ಚಕ್ರವರ್ತಿ ಕಲ್ಕಿ ತಾನೇ? ಇದು ಕೇವಲ ಊಹೆ ಎಂದು ಬರೆದಿದ್ದಾರೆ. ವೈಭೋಗರಾಜಾಸ್ಥಾನ ವರ್ಣನಂ ಕೃತಿಯ ಪಾಠ ಬಹಳ ಅಶುದ್ಧವಾಗಿರುವುದರಿಂದ ಸ್ವಾತಂತ್ರ್ಯ ವಹಿಸಿ ಭುವನಾಧಿಪ ಎಂಬುದಾಗಿ ತಿದ್ದುಪಡಿ ಮಾಡಬಹುದಾಗಿದೆ. ಶ್ರೀ ಪಂಡಿತಾರಾಧ್ಯ ಚರಿತ್ರ ಕೃತಿಯಲ್ಲಿ ಭುವನಾಧಿಪತಿ ಎಂಬುದು ಮೂಲಪಾಠವಾಗಿ ಅಚ್ಚಾಗಿದೆ. ಇದಕ್ಕೆ ಭುವನಾದಿ ಎಂಬ ಪಾಠಾಂತರವಿದೆ. ಆದರೆ ಭುವನಾಧಿಪತಿ ಎಂಬ ಪಾಠವೇ ಹೆಚ್ಚು ಅರ್ಥವತ್ತಾಗಿದೆ.

ಮೇಲೆ ಸೂಚಿಸಿರುವ ಕೊಳಲುಗಳ ಹೆಸರುಗಳು ಸಂಗೀತಶಾಸ್ತ್ರ ಕೃತಿಗಳಲ್ಲಿ ಕಂಡುಬರುತ್ತಿಲ್ಲವಾದರೂ ಶಾರ್ಙ್ಗದೇವನ ಸಂಗೀತರತ್ನಾಕರ, ಪಂಡರೀವಿಠಲನ ನರ್ತನನಿರ್ಣಯ ಮುಂತಾದ ಕೃತಿಗಳಲ್ಲಿ ಬೇರೆಯದೇ ಹೆಸರುಗಳಿವೆ. ಕೊಳಲುಗಳ ಪ್ರಮಾಣವನ್ನು ಅಂಗುಲ ಗಳಲ್ಲಿಯೇ ಹೇಳಲಾಗಿದ್ದರೂ ಕನ್ನಡ ಕೃತಿಗಳ ದಾಖಲಾತಿಗಳಿಗೂ ಸಂಸ್ಕೃತ ಶಾಸ್ತ್ರಗ್ರಂಥಗಳ

ದಾಖಲಾತಿಗಳಿಗೂ ಹೆಚ್ಚಿನ ಭೇದಗಳಿವೆ. ಮೇಲಿನ ವಿವೇಚನೆಯಿಂದ ಆಯಾ ಕೃತಿಗಳಲ್ಲಿ ಇರಬೇಕಾದ ಕೊಳಲುಗಳ ಹೆಸರುಗಳ ಶುದ್ಧಪಾಠವನ್ನು ಅನುಕ್ರಮ ವ್ಯತ್ಯಯ, ಸ್ಥಾನ ವ್ಯತ್ಯಯಗಳನ್ನು ಸರಿಪಡಿಸಿ ತೌಲನಿಕವಾಗಿಯೇ ಕೆಳಗೆ ನೀಡಲಾಗಿದೆ.

| ಸಂಖ್ಯಾ ಶಬ್ದಗಳಲ್ಲಿ ಕೊಳಲುಗಳ ಅಂಗುಲ | ಶ್ರೀ ಪಂಡಿತಾರಾಧ್ಯ ಚರಿತ್ರ | ಪಂಪಾ ವಿರೂಪಾಕ್ಷಸ್ಥಾನ ವರ್ಣನಂ | ವೈಭೋಗ ರಾಜಾಸ್ಥಾನ ವರ್ಣನಂ | ವಿವೇಕ ಚಿಂತಾಮಣಿ | ಭೈರವೇಶ್ವರ ಪುರಾಣಂ | ತಾಳಪ್ರಸ್ತಾರ ಲಕ್ಷಣ |
|---|---|---|---|---|---|---|
| ದಶಾಷ್ಟ (೧೮) | ಜಾತಿ | ಜಾತಿ | ಜಾತಿ | ಜಾತಿ | ಜಾತಿ | |
| ದಶಸಪ್ತ (೧೭) | ವಿಜಾತಿ | ವಿಜಾತಿ | ವಿಜಾತಿ | ವಿಜಾತಿ | ವಿಜಾತಿ | |
| ಕಲೆ (೧೬) | ಕುಮಾರ | ಸುಕುಮಾರ | ಸುಕುಮಾರ | ಸುಕುಮಾರಿಕಾ | ಸುಕುಮಾರಿಕಾ | |
| ಪಕ್ಷ (೧೫) | ಪಕ್ಷ | ಪಕ್ಷ | ಪಕ್ಷ | ಪಕ್ಷ | ಪಕ್ಷ | |
| ಮನು (೧೪) | ಭುವನ | ಭುವನ | ಭುವನ | ಭುವನ | ಭುವನ | |
| ದಶತ್ರಿ (೧೩) | ಶ್ವೇತ | ಶ್ವೇತ | ಶ್ವೇತ | ಶ್ವೇತ | ಶ್ವೇತ | |
| ಸೂರ್ಯ (೧೨) | ಭಾಸ್ಕರ | ಆದಿತ್ಯ | ಆದಿತ್ಯ | ಆದಿತ್ಯ | ಆದಿತ್ಯ | ಆದಿತ್ಯ |
| ರುದ್ರ (೧೧) | ರುದ್ರ | ರುದ್ರ | ರುದ್ರ | ರುದ್ರ | ರುದ್ರ | ರುದ್ರ |
| ವಾಯು (೧೦) | ಹರಿ | ದ್ವಾರಾವತಿಪ (?) | ದ್ವಾರಾವತಿಪ (?) | ಹರಿ | ಹರಿ | ದಿಗ್ವಾಸ |
| ನಿಧಿ (೯) | ನಿಧಿ | ನಿಧಿ | ನಿಧಿ | ನಿಧಿ | ನಿಧಿ | ದಶಾ (?) |
| ದಂತಿ (೮) | ದಿಗು | ದಿಗು | ದಿಗು | ದಿಗು | ದಿಗು | ದಿಗು |
| ಅಶ್ವ (೭) | ಋಷಿ | ಋಷಿ | ಋಷಿ | ಋಷಿ | ಋಷಿ | ಸಿಂಧು |
| ಋತು (೬) | ಕಾರ್ತಿಕ | ಕುಮಾರ | ಕುಮಾರ | ಕುಮಾರ | ಕುಮಾರ | ಊರ್ಮಿ (?) |
| ಶರ (೫) | ಅಘೋರ | ಅಘೋರ | ಅಘೋರ | ಅಘೋರ | ಅಘೋರ | ಅಘೋರ |
| ವೇದ (೪) | ಬ್ರಹ್ಮ | ಬ್ರಹ್ಮ | ಬ್ರಹ್ಮ | ಬ್ರಹ್ಮ | ಬ್ರಹ್ಮ | ಬ್ರಹ್ಮ |
| ಅಗ್ನಿ (೩) | ತ್ರಿಪುರ | ತ್ರಿಪುರ | ತ್ರಿಪುರ | ತ್ರಿಪುರ | ತ್ರಿಪುರ | ಚಂದ್ರ (?) |
| ನಯನ (೨) | ಶಿವಶಕ್ತಿ | ಶಿವಶಕ್ತಿ | ಶಿವಶಕ್ತಿ | ಶಿವಶಕ್ತಿ | ಶಿವಶಕ್ತಿ | |
| ಚಂದ್ರ (೧) | ಭುವನಾಧಿಪತಿ | ಭುವನಾಧಿಪತಿ | ಭುವನಾಧಿಪತಿ | ಭುವನಾಧಿಪತಿ | ಭುವನಾಧಿಪತಿ | |

ಮೇಲೆ ವಿವೇಚಿಸಿರುವ ಹದಿನೆಂಟು ಅಂಗುಲಗಳ ಕೊಳಲುಗಳ ವಿಚಾರದಲ್ಲಿ ಒಟ್ಟಾರೆಯಾಗಿ ಕೆಲವೊಂದು ಅಂಶಗಳನ್ನು ನಿರೂಪಿಸುವುದು ಅಗತ್ಯವಾಗಿದೆ. ಅವುಗಳನ್ನು ಒಂದೊಂದಾಗಿ ಕೆಳಗೆ ನೀಡಲಾಗಿದೆ.

೧. ಹದಿನೆಂಟು ಬಗೆಯ ಕೊಳಲುಗಳ ಉಲ್ಲೇಖ ನಮ್ಮ ಗಮನಕ್ಕೆ ಬಂದಂತೆ ಮೊದಲ ಬಾರಿಗೆ ದೊರಕುವುದು ಪಾಲ್ಕುರಿಕೆ ಸೋಮನಾಥನ

ಶ್ರೀ ಪಂಡಿತಾರಾಧ್ಯ ಚರಿತ್ರ ಕೃತಿಯಲ್ಲಿ. ಇದರ ದಾಖಲಾತಿಗೆ ಪಾಲ್ಕುರಿಕೆ ಸೋಮನಾಥನು ಬಳಸಿರಬಹುದಾದ ಆಕರ ಯಾವುದು ಎಂಬುದನ್ನು ಗುರುತಿಸಬೇಕಾಗಿದೆ.

೨. ಶ್ರೀ ಪಂಡಿತಾರಾಧ್ಯ ಚರಿತ್ರ ಕೃತಿಯನ್ನೇ ಬಲುಮಟ್ಟಿಗೆ ಚಂದ್ರಶೇಖರ ಕವಿ ಮತ್ತು ನಿಜಗುಣ ಶಿವಯೋಗಿ ಬಳಸಿರಬಹುದೆಂದು ಆಯಾ ಕೃತಿಗಳ ಕಾಲ ಹಾಗೂ ಇತರ ಆಂತರಿಕ ಅಂಶಗಳಿಂದ ಹೇಳಬಹುದು.

೩. ವೈಭೋಗರಾಜಾಸ್ಥಾನ ವರ್ಣನಂ ಕೃತಿಗೆ ಕರ್ತೃವೇ ಹೇಳಿಕೊಂಡಿರುವಂತೆ ಪಂಪಾವಿರೂಪಾಕ್ಷಸ್ಥಾನ ವರ್ಣನಂ ಕೃತಿಯೇ ಆಕರವಾಗಿದೆ. ಭೈರವೇಶ್ವರ ಪುರಾಣಕ್ಕೆ ವಿವೇಕಚಿಂತಾಮಣಿಯೇ ಆಕರವೆಂದು ತಿಳಿಯಲು ಆಂತರಿಕ ಅಂಶಗಳು ಆಧಾರವಾಗಿವೆ.

೪. ತಾಳಪ್ರಸ್ತಾರ ಲಕ್ಷಣಕ್ಕೆ ಆಕರವಾವುದೋ ತಿಳಿಯುತ್ತಿಲ್ಲ. ಇದರ ಪಾಠವನ್ನು ಸಂಪಾದಕರು ಹಸ್ತಪ್ರತಿಯಲ್ಲಿರುವಂತೆಯೇ ಯಥಾವತ್ತಾಗಿ ನೀಡಿದ್ದಾರೆ.

೫. ಒಂದರಿಂದ ಹದಿನೆಂಟು ಅಂಗುಲಗಳ ಕೊಳಲುಗಳನ್ನು ಕವಿಗಳು ನಿಜವಾಗಿಯೂ ಗಮನಿಸಿಯೇ ವರ್ಣಿಸಿರುವರೇ ಅಥವಾ ಇವು ಕವಿ ಕಲ್ಪನೆಯೇ ಎಂಬುದು ವಿಚಾರಾರ್ಹವಾಗಿದೆ. ಕನ್ನಡನಾಡಿನ ಶಿಲ್ಪಗಳಲ್ಲಿ ಈ ಕೊಳಲುಗಳ ಬಗೆಗಿನ

ವಿವರಗಳು ದೊರಕುತ್ತವೆಯೇ ಎಂಬುದನ್ನು ಶಿಲ್ಪಗಳ ಬಗೆಗೆ ಬಲ್ಲವರಾದ ವಿದ್ವಾಂಸರು ಹೇಳಬೇಕಾಗಿದೆ.

೬. ಒಂದಂಗುಲದಿಂದ ಆರಂಗುಲದ ಕೊಳಲುಗಳು ನಿಜವಾಗಿಯೂ ಬಳಕೆಯಲ್ಲಿ ಇದ್ದಿತೇ ಎಂಬುದನ್ನು ದೃಢಪಡಿಸುವ ಆಧಾರಗಳಾವುವೂ ಇದುವರೆಗೂ ದೊರಕಿಲ್ಲ. ಮುಖರಂಧ್ರ–ತಾರರಂಧ್ರಗಳ ನಡುವೆ ಒಂದರಿಂದ ಐದು ಅಂಗುಲಗಳಷ್ಟು ಅಂತರವಿರುವ ಮೊದಲನೆಯ ಐದು ಕೊಳಲಿನ ಭೇದಗಳು ಅವ್ಯವಹಾರ್ಯವೆಂದು ಪಂಡರೀವಿಠಲನು ವರ್ಣಿಸದೆ ಕೈಬಿಟ್ಟಿದ್ದಾನೆ[೧೦].

ಮಹಾಮಹೋಪಾಧ್ಯಾಯ ರಾ. ಸತ್ಯನಾರಾಯಣ ಅವರು ವಿವೇಕ ಚಿಂತಾಮಣಿಯಲ್ಲಿನ ಈ ಭಾಗವನ್ನು {ಒಟ್ಟಾರೆಯಾಗಿ ಸಂಗೀತಾಧಿಕರಣದ ಭಾಗವನ್ನು ಕುರಿತು ವಿವೇಚಿಸುವಾಗ} ಕುರಿತು 'ಗಾಯಕಿಯರು ಎಂಬ ಶೀರ್ಷಿಕೆಯು ಅದರಡಿಯಲ್ಲಿರುವ ಆಳಾಪಿಸಿ ಕೇಳುವ ಭಾಸುರತರ ವಾಸವಿಲಾಸಿಗಳಿಂ ಎಂಬುದರೊಡನೆ ಸಂಗತವಾಗುವುದಿಲ್ಲ. ಏಕೆಂದರೆ ಇಲ್ಲಿ ಹದಿನೆಂಟು ಬಗೆಯ ಕೊಳಲು (ವಂಶ > ವಾಸ) ಗಳನ್ನೂ ಅವುಗಳನ್ನು ನುಡಿಸುವ ಸ್ತ್ರೀಯರನ್ನೂ ಕುರಿತು ಹೇಳಿದೆ. ಪ್ರಮಾಣಿನ ಎಂಬುದು ಮುಖರಂಧ್ರ ಮತ್ತು ತಾರರಂಧ್ರಗಳ ಮಧ್ಯೆ ಇರುವ ಅಂಗುಲಗಳ ಪ್ರಮಾಣವನ್ನು ಸೂಚಿಸುತ್ತದೆ. ಈ ಪ್ರಮಾಣವನ್ನು ಸಂಖ್ಯಾವಾಚಕ ಸಂಕೇತನಾಮಗಳಿಂದ ಸಂಗೀತ ಶಾಸ್ತ್ರ ಗ್ರಂಥಗಳು ತಿಳಿಸುತ್ತವೆ. ಇವುಗಳನ್ನು ಪರ್ಯಾಯವಾಚಕಗಳಿಂದ ಪಾಲ್ಕುರಿಕೆ ಸೋಮನಾಥ, ಅಷ್ಟಭಾಷಾಕವಿ ಚಂದ್ರಶೇಖರ (ಪಂಪಾಸ್ಥಾನ ವರ್ಣನಂ) ಮತ್ತು ಪ್ರಭುಗ (ವೈಭೋಗಾಸ್ಥಾನ ವರ್ಣನಂ) ರವರುಗಳು ತೋರಿಸುತ್ತಾರೆ. ಆದರೆ ನಿಜಗುಣ ಶಿವಯೋಗಿಯು ಸಂಗೀತಶಾಸ್ತ್ರ ಪ್ರಾಮಾಣ್ಯಕ್ಕೆ ವಿರುದ್ಧವಾಗಿ ಹದಿಮೂರು, ಹದಿನೈದು ಮತ್ತು ಹದಿನೇಳು ಅಂಗುಲಗಳ ಅಂತರವಿರುವ ವಂಶಗಳನ್ನು ಹೇಳುವುದು ಅನುಪಪನ್ನವಾಗಿದೆ. ಆಲಾಪ, ಕಾಲಾಪ ಮುಂತಾದ ಇಪ್ಪತ್ತನಾಲ್ಕು ತೆರಗಳನ್ನು ಪಾಲ್ಕುರಿಕೆ ಸೋಮನಾಥನೂ ಸಂಗೀತಶಾಸ್ತ್ರ ಗ್ರಂಥಗಳೂ ಉಲ್ಲೇಖಿಸುವುದಿಲ್ಲ' ಎಂದು ಬರೆದಿದ್ದಾರೆ[೧೧]. ಇದರಲ್ಲಿ ಕೊಳಲುಗಳ ಬಗೆಗೆ ಬರೆದಿರುವ ಅಂಶಗಳು ಮೇಲೆ ಸೂಚಿಸಿರುವ ಆರು ಕೃತಿಗಳಿಗೂ ಅನ್ವಯಿಸುತ್ತದೆ. ಕಲ್ಯಾಣದ ಚಾಲುಕ್ಯ ಮುಮ್ಮಡಿ ಸರ್ವಜ್ಞ ಸೋಮೇಶ್ವರನು ತನ್ನ ಕೃತಿಯಾದ ಮಾನಸೋಲ್ಲಾಸದಲ್ಲಿ ಹದಿಮೂರು, ಹದಿನೈದು, ಹದಿನೇಳು ಅಂಗುಲಗಳ ಕೊಳಲುಗಳು ಅಮಂಗಲ ಮತ್ತು ಮನುಷ್ಯರಿಗೆ ಅಯೋಗ್ಯವಾದ ಕಾರಣ ತ್ಯಾಜ್ಯವೆನಿಸಿವೆ ಎಂದು ಹೇಳಿದ್ದಾನೆ[೧೨]. ಈ ವಿವರಗಳ ಕಾರಣದಿಂದ ಕವಿಗಳು ಇವುಗಳನ್ನು ವರ್ಣಿಸಿರುವುದು ಬಹುಶಃ ಕವಿಸಮಯದ ಹಿನ್ನೆಲೆಯಲ್ಲಿ ಎಂದೇ ಹೇಳಬಹುದೇನೋ ?

೭. ಕೊಳಲಿನ ಅಂಗುಲವನ್ನು ಸೂಚಿಸಲು ಯವೆಯನ್ನು ಮಾನದಂಡವನ್ನಾಗಿ ಬಳಸಲಾಗಿದೆ. ಇದರಂತೆ ಹೇಳುವುದಾದರೇ ಒಂದಂಗುಲದ ಕೊಳಲು ಅಥವಾ ಒಂದು ಯವೆಯಷ್ಟು ಗಾತ್ರವುಳ್ಳ ಕೊಳಲು ಇದ್ದಿತೇ ಎಂಬುದೇ ಸಂದೇಹಾಸ್ಪದ.

೮. ಕನ್ನಡ ಸಾಹಿತ್ಯದಲ್ಲಿ ಬಿಡಿಬಿಡಿಯಾಗಿ ಕೆಲವು ಅಂಗುಲಗಳ ಕೊಳಲಿನ ಉಲ್ಲೇಖ ಕಂಡುಬರುತ್ತದೆ. ಉದಾಹರಣೆಗೆ ಕಮಲಭವನ ಶಾಂತೀಶ್ವರ ಪುರಾಣಂ[೧೩] ಕೃತಿಯಲ್ಲಿ ದೊರಕುವ ಎರಡು ಉದ್ಧೃತಿಗಳನ್ನು ಮಾತ್ರ ಇಲ್ಲಿ ಗಮನಿಸಿದೆ.

(ಅ) ರಾಗಸಾಗರನೆಂಬ ವಾಸಕಾರಂ ಭಾಸುರತೆವಡೆದ ಬಾರಹೆಯೆಂಬ ವಾಸಮಂ ॥ ೭–೯೩ ವಚನ ॥

(ಆ) ಸುಷಿರವಾದನ ವಿಶಾರದನಪ್ಪ ಕಿನ್ನರಂ ತನ್ನಯ ಸೊಳಹೆಯೆಂಬ ವಾಸಮಂ ಕೊಂಡು ॥ ೧೬–೬೭ ವಚನ॥

ಈ ಎರಡು ಉಲ್ಲೇಖಗಳಲ್ಲಿ ಬಾರಹೆಯೆಂಬ ವಾಸಮಂ ಎಂದಿರುವುದು ಹನ್ನೆರಡು ಅಂಗುಲದ ಕೊಳಲನ್ನು ಸೂಚಿಸುತ್ತದೆ. ಸೊಳಹೆಯೆಂಬ ವಾಸಮಂ ಎಂಬುದು ಹದಿನಾರು ಅಂಗುಲದ ಕೊಳಲನ್ನು ಸೂಚಿಸುತ್ತದೆ. ಇದೇ ರೀತಿಯಾಗಿ ಇನ್ನೂ ಅನೇಕ ಉಲ್ಲೇಖಗಳು ಇರುವ ಸಾಧ್ಯತೆಯಿದೆ. {ಮೇಲಿನ ಉಲ್ಲೇಖಗಳಲ್ಲಿ ಮೊದಲನೆಯದು ಮುದ್ರಿತ ಪ್ರತಿಯಲ್ಲಿ 'ರಾಗಸಾಗರನೆಂಬ ವಾಸುಕಾರಂ' ಎಂದು ಅಚ್ಚಾಗಿದೆ. ಆದರೆ ಚಿದಾನಂದಮೂರ್ತಿ ಅವರು 'ರಾಗಸಾಗರನೆಂಬ ವಾಸಕಾರಂ' ಎಂಬುದಾಗಿ ನೀಡಿರುವ ಪಾಠವೇ ಸಮರ್ಥನೀಯವಾಗಿರುವ ಕಾರಣ ನಾವು ಇದನ್ನೇ ಅಂಗೀಕರಿಸಿದ್ದೇವೆ}

೯. ಸಂಸ್ಕೃತ ಸಂಗೀತ ಶಾಸ್ತ್ರ ಕೃತಿಗಳಲ್ಲಿ ತಾರರಂಧ್ರಕ್ಕೂ ಮುಖರಂಧ್ರಕ್ಕೂ ಇರುವ ಅಂತರದ ಮೇಲೆ ಸಂಖ್ಯಾಶಬ್ದಗಳಲ್ಲಿ ಕೊಳಲುಗಳಿಗೆ ಹೆಸರುಗಳನ್ನು ಸೂಚಿಸಲಾಗಿದೆ. ಕನ್ನಡ ಮತ್ತು ತೆಲುಗು ಸಾಹಿತ್ಯದ ದಾಖಲಾತಿಗಳಲ್ಲಿ ಅಂಗುಲಗಳನ್ನು ಹೇಳಲು ಯಾವ ವಿಧಾನವನ್ನು ಅನುಸರಿಸಲಾಗಿದೆ ಎಂಬುದು ಖಚಿತವಾಗಿ ತಿಳಿಯುತ್ತಿಲ್ಲ. ಬಹುಶಃ ತಾರರಂಧ್ರಕ್ಕೂ

ಮುಖರಂಧ್ರಕ್ಕೂ ಇರುವ ಅಂತರದ ಮೇಲೆಯೇ ಅಂಗುಲಗಳನ್ನು ಹೇಳಲಾಗಿದೆ ಎಂದು ತೋರುತ್ತದೆ. ಕೊಳಲುಗಳ ಹೆಸರನ್ನು ಮಾತ್ರ ಬಲುಮಟ್ಟಿಗೆ ಸಂಖ್ಯಾಶಬ್ದಗಳನ್ನು ಬಳಸಿಕೊಂಡು ನೀಡಲಾಗಿದೆ.

೧೦. ಕರ್ತೃ ಮತ್ತು ಕಾಲ ಸಂದಿಗ್ಧವಾಗಿರುವ ತಾಳಪ್ರಸ್ತಾರ ಲಕ್ಷಣವನ್ನು ಹೊರತುಪಡಿಸಿ ನೋಡಿದರೆ ಹದಿನೆಂಟು ಕೊಳಲುಗಳ ಪೂರ್ಣ ಹೆಸರುಗಳನ್ನು ದಾಖಲಿಸಿರುವವರು ವೀರಶೈವ ಕವಿಗಳೇ ಎಂಬುದು ಪ್ರಮುಖ ಅಂಶ. ಇವರಲ್ಲಿ ಒಬ್ಬರನ್ನೊಬ್ಬರು ಅನುಸರಿಸಿ ತಮ್ಮ ಕೃತಿಗಳನ್ನು ರಚಿಸಿದ್ದಾರೆ. ಆದರೆ ಪೂರ್ವಕವಿ ಋಣವನ್ನು ಒಪ್ಪಿಕೊಂಡರೂ ಪ್ರಕೃತ ಹದಿನೆಂಟು ಕೊಳಲುಗಳ ದಾಖಲಾತಿ ಮಕ್ಕಿಕಾಮಕ್ಕಿ ಅಂಧಾನುಕರಣೆಯಾಗಿರುವುದು ಸಮರ್ಥನೀಯವಲ್ಲ.

೧೧. ಸಂಸ್ಕೃತ ಸಂಗೀತ ಶಾಸ್ತ್ರ ಕೃತಿಗಳಲ್ಲಿಯೂ ಕೊಳಲುಗಳ ಹೆಸರುಗಳು ಮತ್ತು ಅಂಗುಲಗಳನ್ನು ಹೇಳುವಲ್ಲಿ ಒಬ್ಬೊಬ್ಬ ಶಾಸ್ತ್ರಕಾರ ಒಂದೊಂದು ತೆರನಾಗಿ ಹೇಳಿರುವುದು ಗಮನಿಸತಕ್ಕ ಅಂಶ. ಕನ್ನಡ ಮತ್ತು ತೆಲುಗಿನ ಕವಿಗಳೂ ತಮಗೆ ಬೇಕಾದ (?) ಸಂವಾದಿ ಶಬ್ದವನ್ನು ಬಳಸಿರುವುದು ಗಮನಾರ್ಹ.

೧೨. ಪ್ರತಿಕಾರರ ದೆಸೆಯಿಂದ ಮತ್ತು ಆಯಾ ಶಾಸ್ತ್ರಗಳ ಪಾರಿಭಾಷಿಕ ಪದಗಳ ಅಪರಿಚಯತ್ವ ಹಾಗೂ ಉತ್ತಮ ಹಸ್ತಪ್ರತಿಗಳ ಅಲಭ್ಯತೆಯಿಂದಾಗಿ ಅನೇಕ ಪಾಠದೋಷಗಳು ಉಂಟಾಗಿರುವುದು ವಿದಿತವಾದ ಅಂಶ. ಇವುಗಳನ್ನು ಮೊದಲು ನೇರ್ಪಡಿಸಬೇಕು. ಇದಕ್ಕೆ ಆಯಾ ಶಾಸ್ತ್ರವನ್ನು ಬಲ್ಲವರ ನೆರವು ಅತ್ಯಗತ್ಯ. ವಿವೇಕ ಚಿಂತಾಮಣಿಯ ಸಂಪಾದನೆಯಲ್ಲಿ ಅನೇಕ ಕ್ಲಿಷ್ಟ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಇಲ್ಲಿ ಪೂರ್ಣವಾಗಿ ಹಸ್ತಪ್ರತಿಗಳ ಪಾಠವನ್ನು ಮಾತ್ರ ಅವಲಂಬಿಸದೆ ಬಾಹ್ಯಾಧಾರಗಳನ್ನೂ ಬಳಸಿಕೊಂಡಲ್ಲಿ ಅನೇಕ ಪಾಠದೋಷಗಳನ್ನು ನೇರ್ಪಡಿಸಬಹುದು. ಮಿಕ್ಕ ಕೃತಿಗಳಿಗೂ ಇದೇ ಮಾತು ಅನ್ವಯಿಸುತ್ತದೆ. ಜೊತೆಗೆ ವಿವೇಕ ಚಿಂತಾಮಣಿಯನ್ನು ಹೊರತುಪಡಿಸಿ ಮಿಕ್ಕ ಕೃತಿಗಳ ಹಸ್ತಪ್ರತಿಗಳು ದೊರೆತಿರುವುದು ಕೇವಲ ಒಂದು, ಒಂದೂವರೆ ಇಲ್ಲವೇ ಎರಡು ಮಾತ್ರ. ಈ ಎಲ್ಲಾ ಕೃತಿಗಳಲ್ಲಿನ ಸಮಾನ ಅಂಶ ಗಳನ್ನು ಒಂದೆಡೆ ಸಂಕಲಿಸಿದರೆ ಬಹಳಷ್ಟು ಪಾಠದೋಷಗಳನ್ನು ಪರಿಷ್ಕರಿಸಬಹುದು.

ಪ್ರಕೃತ ಲೇಖನದಲ್ಲಿ ಮೇಲೆ ಸೂಚಿಸಿರುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಇತರ ವಿವರಗಳ ಬಗೆಗೂ ಗಮನಹರಿಸಬೇಕಾಗಿದೆ. ಕನ್ನಡ ಸಾಹಿತ್ಯದಲ್ಲಿ ಮತ್ತು ಶಾಸನಗಳಲ್ಲಿ ಕೊಳಲುಗಳ ಉಲ್ಲೇಖ ಹಾಗೂ ಕೊಳಲು ವಾದನದ ಪರಿಭಾಷಾ ಶಬ್ದಗಳು ಹೇರಳವಾಗಿ ಪ್ರಯೋಗವಾಗಿವೆ. ಕೊಳಲು ವಾದಕರ ಬಗೆಗೂ ಅವರಿಗೆ ನೀಡಲಾದ ದಾನದತ್ತಿಗಳ ಬಗೆಗೂ ಶಾಸನಗಳಲ್ಲಿ ಮಾಹಿತಿ ದೊರಕುತ್ತದೆ. ಕನ್ನಡನಾಡಿನ ಶಿಲ್ಪಗಳಲ್ಲಿ ಕೊಳಲು ಕ್ರಿ.ಶ. ಸುಮಾರು ಎರಡನೆಯ ಶತಮಾನದ ಆರಂಭದಿಂದ ಕಂಡುಬರುತ್ತದೆ. ಶಿಲ್ಪಗಳಲ್ಲಿನ ಕೊಳಲುಗಳ ಚಿತ್ರಣವನ್ನು ಅಭ್ಯಸಿಸಿ ಅವುಗಳ ಬಗೆಗೆ ವಿವರಗಳನ್ನು ದಾಖಲಿಸಬೇಕಾಗಿದೆ. ಸರ್ವಜ್ಞ ಮುಮ್ಮಡಿ ಸೋಮೇಶ್ವರನ ಮಾನಸೋಲ್ಲಾಸದಲ್ಲಿ ಕೊಳಲನ್ನು ತಯಾರಿಸುವ ವಿವರಗಳನ್ನು ಹೇಳಲಾಗಿದೆ. ಇವೆಲ್ಲವುಗಳನ್ನು ಅಭ್ಯಸಿಸಿ ಒಂದೆಡೆ ಸಂಕಲಿಸಿದರೆ ಅಭ್ಯಾಸಕ್ಕೆ ಹೆಚ್ಚು ಅನುಕೂಲವಾಗುತ್ತದೆ. ತೆಲುಗು ಸಾಹಿತ್ಯದಲ್ಲಿ ದೊರಕುವ ವಿವರಗಳನ್ನೂ ಇದರೊಂದಿಗೆ ಒಗ್ಗೂಡಿಸಿದರೆ ಹದಿನೆಂಟು ಕೊಳಲುಗಳ ದಾಖಲಾತಿಯ ಬಗೆಗೆ ಒಂದು ಖಚಿತ ನಿಲವನ್ನು ತಾಳಲು ಅನುಕೂಲವಾಗುತ್ತದೆ. ನಿಘಂಟುಗಳಲ್ಲಿಯೂ ಇವುಗಳ ಬಗೆಗೆ ಸಮರ್ಪಕವಾದ ದಾಖಲಾತಿಗಳಿಲ್ಲ. ಇದ್ದರೂ ಒಂದು ಕೊಳಲಿನ ಹೆಸರು ಎಂದು ದಾಖಲಾಗಿದೆ. ಇದರ ಬದಲು ಆಯಾ ಅಂಗುಲಗಳ ಕೊಳಲುಗಳು ಎಂದು ದಾಖಲಾಗುವುದು ಸಮರ್ಥನೀಯ. ಕೊಳಲುಗಳ ಬಗೆಗೆ ಈ ವರೆಗೂ ಯಾವುದೇ ಸ್ವತಂತ್ರ ಬರಹಗಳೂ ಪ್ರಕಟವಾಗಿರುವಂತೆ ತಿಳಿದುಬಂದಿರುವುದಿಲ್ಲ ಹಾಗೂ ಪ್ರಕಟವಾಗಿದ್ದರೂ ನಮ್ಮ ಗಮನಕ್ಕೆ ಬಂದಿರುವುದಿಲ್ಲ. ಸಂಸ್ಕೃತ ಆಕರಗಳಲ್ಲಿ ದೊರಕುವ ಕೊಳಲುಗಳ ವಿಧಗಳನ್ನು, ಪಾರಿಭಾಷಿಕ ಶಬ್ದಗಳನ್ನು ಮತ್ತು ಕನ್ನಡ ಕಾವ್ಯಗಳಲ್ಲಿ ದೊರಕುವ ಪಾರಿಭಾಷಿಕ ಶಬ್ದಗಳನ್ನು ಕುರಿತು ಶ್ರೀಕಾಂತಂ ನಾಗೇಂದ್ರಶಾಸ್ತ್ರಿಯವರು ತಮ್ಮ ಅಪ್ರಕಟಿತ ಪಿಎಚ್.ಡಿ ನಿಬಂಧದಲ್ಲಿ ವಿಸ್ತಾರವಾಗಿ ಚರ್ಚಿಸಿದ್ದಾರೆ. ಇದು ಆದಷ್ಟು ಬೇಗ ಪ್ರಕಟವಾಗಬೇಕಾದ ಅಗತ್ಯವಿದೆ. ಇದರೊಂದಿಗೆ ಮತ್ತಷ್ಟು ಹೆಚ್ಚಿನ ಸಾಮಗ್ರಿಯನ್ನು ಕೂಡಿಸಿಕೊಂಡು ಕೊಳಲುಗಳ ಬಗೆಗೆ ವ್ಯಾಪಕ ಸಂಶೋಧನೆ ನಡೆಯಬೇಕಾಗಿದೆ ಹಾಗೂ ಕೊಳಲು ಸಂಬಂಧಿ ಕೋಶವೊಂದರ ರಚನೆಯ ಅಗತ್ಯವೂ ಇದೆ. ಇದು ಆದಷ್ಟು ಬೇಗ ನಡೆಯಲೆಂದು ಹಾರೈಸುತ್ತೇವೆ[೪]. 

**ಆಧಾರಗಳು ಮತ್ತು ಟಿಪ್ಪಣಿಗಳು :**

೧. ಮತಂಗನ ಬೃಹದ್ದೇಶಿ-(ಸಂ) ರಾ. ಸತ್ಯನಾರಾಯಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೯, ವಿಮರ್ಶಾತ್ಮಕ ಪೀಠಿಕೆ, ಪುಟ ೧೫೯-೧೬೦

೨. ಕನ್ನಡ ಸಾಹಿತ್ಯ ಶಾಸನಗಳಲ್ಲಿ ಸಂಗೀತ ವಿಚಾರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೧೯೯೮, ದ್ವಿತೀಯ ಮುದ್ರಣ, ಪುಟ ೧೩೩-೧೩೭, ೧೪೦

೩. ತಾಳಪ್ರಸ್ತಾರ ಲಕ್ಷಣ-(ಸಂ) ಕೆಳದಿ ಗುಂಡಾಜೋಯಿಸ್, ಕರ್ನಾಟಕ ಲೋಚನ ೧-೨, ಡಿಸೆಂಬರ್ ೧೯೮೮, ಪುಟ ೮೦-೮೧, ಪ್ರಕಟನೆ : ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೪. ಸಿದ್ಧಲಿಂಗ ಶಿವಯೋಗಿಯ ಭೈರವೇಶ್ವರ ಪುರಾಣಂ-(ಸಂ) ವೈ.ಸಿ. ಭಾನುಮತಿ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು-೨೦೦೭, ೫-೫ ವಚನ, ಪುಟ ೬೨

೫. ಚಂದ್ರಶೇಖರ ಕವಿಯ ಪಂಪಾವಿರೂಪಾಕ್ಷಾಸ್ಥಾನ ವರ್ಣನಂ-(ಸಂ) ನ.ಕೃಷ್ಣಜೋಯಿಸ್, ಶರಣ ಸಾಹಿತ್ಯ ಗ್ರಂಥಮಾಲೆ, ಬೆಂಗಳೂರು-೧೯೫೫, ಪುಟ ೨೮

೬ ಬಿ. ೧೪೭೩, ಕಾಗದದ ಹಸ್ತಪ್ರತಿ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ {ಈ ಹಸ್ತಪ್ರತಿಯನ್ನು ನಮಗೆ ಅಧ್ಯಯನಕ್ಕೆ ನೀಡಿದವರು ಶ್ರೀಕಾಂತಂ ನಾಗೇಂದ್ರ ಶಾಸ್ತ್ರೀ ಅವರು. ಇವರು ಬಹಳ ಹಿಂದೆಯೇ ಬೆಂಗಳೂರು ವಿಶ್ವವಿದ್ಯಾಲಯದಿಂದ ಪ್ರತಿಮಾಡಿಸಿಕೊಂಡಿದ್ದರು. ಈ ಹಸ್ತಪ್ರತಿ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕೆ.ಎ. ೫೫೪/೨ ನೆಯ ಸಂಖ್ಯೆಯ ಕಾಗದದ ಹಸ್ತಪ್ರತಿಯ ನಕಲಾಗಿದೆ. ಇದೇ ಕೃತಿಯ ಕೆ.ಎ.೫೧೪/೩ ನೆಯ ಸಂಖ್ಯೆಯ ಮತ್ತೊಂದು ಕಾಗದದ ಹಸ್ತಪ್ರತಿ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿದೆ }.

೭. ಗೌ.ಮ. ಉಮಾಪತಿ ಶಾಸ್ತ್ರಿಗಳಿಂದ ಸಂಪಾದಿತವಾದ {ಶ್ರೀ ಜಗದ್ಗುರು ಮೂರುಸಾವಿರ ಮಠ, ಹುಬ್ಬಳ್ಳಿ-೧೯೮೬, ದ್ವಿತೀಯ ಮುದ್ರಣ} ಆವೃತ್ತಿಯಲ್ಲಿ 'ಬಳಿಕ ಹದಿನೆಂಟಗುಂಲ, ಹದಿನೇಳಂಗುಲ, ಹದಿನಾರಂಗುಲ, ಹದಿನೈದಂಗುಲ, ಹದಿನಾಲ್ಕಂಗುಲ ಹದಿಮೂರಂಗುಲ, ಹನ್ನೆರಡಂಗುಲ, ಹನ್ನೊಂದಂಗುಲ, ಹತ್ತಂಗುಲ, ಒಂಭತ್ತಂಗುಲ, ಎಂಟಂಗುಲ, ಏಳಂಗುಲ, ಆರಂಗುಲ, ಐದಂಗುಲ, ನಾಲ್ಕಂಗುಲ, ಮೂರಂಗುಲ, ಎರಡಂಗುಲ, ಒಂದಂಗುಲ ಪ್ರಮಾಣಿನ ಕ್ರಮವಿಡಿದು' ಎಂದು ಪಾಠವಿದೆ. ನಾವು ಗಮನಿಸಿರುವ ಕ್ರಿ.ಶ. ೧೮೬೭ ರ ಆವೃತ್ತಿಯಲ್ಲಿ 'ಬಳಿಕ ಹದಿನೆಂಟಂಗುಳ ಮೊದಲಾಗಿ ವಂದಂಗುಳ ಪರ್ಯಂತಮಾದ ಪರಿಮಾಣ ಕ್ರಮವಿಡಿದು' ಎಂಬ ಪಾಠವಿದೆ. ಭಾಷೆ, ಬಂಧ ಮತ್ತು ಅರ್ಥವೈಶದ್ಯದ ದೃಷ್ಟಿಯಿಂದ ಕ್ರಿ.ಶ. ೧೮೬೭ ರ ಆವೃತ್ತಿಯ ಪಾಠವೇ ಮೂಲಪಾಠವಾಗಿ ಇದ್ದಿರುವುದು ಸಮರ್ಥನೀಯ. ಗೌ.ಮ.ಉಮಾಪತಿ ಶಾಸ್ತಿಗಳಿಂದ ಸಂಪಾದಿತವಾದ ಆವೃತ್ತಿಯ ಪಾಠದಲ್ಲಿ ಅಂಗುಲಗಳ ಸಂಖ್ಯೆಯನ್ನು ಸುಮ್ಮನೆ ಹೇಳಿರುವುದರಲ್ಲಿ ಯಾವುದೇ ಪ್ರಯೋಜನವೂ ಕಾಣಿಸದು. ಜೊತೆಗೆ ಭಾಷೆ ಮತ್ತು ಬಂಧದಲ್ಲಿ ಕೃತಕತೆ ಕಾಣುತ್ತದೆ.

೮. ಈ ಭಾಗದ ವಿವೇಚನೆಗೆ ೧ಳಸಿಕೊಳ್ಳಲಾದ ಪ್ರಮುಖ ಆಕರಗಳು ಇಂತಿವೆ {ಕೆಲವನ್ನು ಹಿಂದೆಯೇ ಉದಾಹರಿಸಿದೆ}: (ಅ) ಕನ್ನಡ ಸಾಹಿತ್ಯ ಶಾಸನಗಳಲ್ಲಿ ಸಂಗೀತ ವಿಚಾರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೧೯೯೮, ದ್ವಿತೀಯ ಮುದ್ರಣ, ಪುಟ ೧೩೩-೧೩೭, ೧೪೦ (ಆ) ಸಿದ್ಧಲಿಂಗ ಶಿವಯೋಗಿಯ ಭೈರವೇಶ್ವರ ಪುರಾಣಂ

೯. ಭರತಕೋಶ-ಮಾನವಲ್ಲಿ ರಾಮಕೃಷ್ಣಕವಿ, ಪ್ರಕಟನೆ : ತಿರುಮಲ ತಿರುಪತಿ ದೇವಾಲಯ, ತಿರುಪತಿ-೧೯೯೯, ದ್ವಿತೀಯ ಮುದ್ರಣ, ಪುಟ ೫೭೭

೧೦. ಪಂಡರೀವಿಠಲನ ನರ್ತನ ನಿರ್ಣಯ-(ಸಂ) ರಾ. ಸತ್ಯನಾರಾಯಣ, ಪುಂಡರೀಕಮಾಲಾ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು-೧೯೮೬, ಪುಟ ೬೨೬, ಅಡಿಟಿಪ್ಪಣಿ-೧೮೪

೧೧. ಕರ್ಣಾಟಕ ಸಂಗೀತವಾಹಿನಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೧, ದ್ವಿತೀಯ ಮುದ್ರಣ, ಪುಟ ೨೨೭

೧೨. ಮಾನಸೋಲ್ಲಾಸ, ಸಂಪುಟ -೨ {ಮೂಲ ರಹಿತ ಕನ್ನಡ ಅನುವಾದದೊಡನೆ}, ಪ್ರಕಟನೆ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೮, ಪುಟ ೬೫೦ ಮಾನಸೋಲ್ಲಾಸ {ಭಾಗ-೩}-(ಸಂ) ಜಿ. ಕೆ. ಶ್ರೀಗೊಂಡೇಕರ್, ಬರೋಡ ಓರಿಯಂಟಲ್ ಇನ್ಸ್ಟಿಟ್ಯೂಟ್, ಬರೋಡ-೧೯೬೧, ಚತುರ್ಥ ವಿಂಶತಿ, ವಾದ್ಯಾಧ್ಯಾಯ, ಪುಟ ೧೧೬. ಈ ಭಾಗದ ಮೂಲ ಶ್ಲೋಕಗಳಿಂತಿವೆ :

ಕನಿಷ್ಠಾಂಗುಲಿಮಾನೇನ ವಂಶರಂಧ್ರಂ ವಿಧೀಯತೇ
ತ್ರಯೋದಶಾಂಗುಲಂ ವರ್ಜ್ಯಂ ತಥಾ ಪಂಚದಶಾಂಗುಲಂ ॥ ೯೧೬ ॥
ವಂಶಭೇದೇಷು ಸರ್ವೇಷು ತಥಾ ಸಪ್ತದಶಾಂಗುಲಂ
ಅಶೋಭನಮನಾಯುಷ್ಯಂ ವಂಶತ್ರಾಯಮಿದಂ ಯತಃ ॥ ೯೧೭ ॥

೧೩. ಕಮಲಭವನ ಶಾಂತೀಶ್ವರ ಪುರಾಣಂ-(ಸಂಪಾದಕರು + ಹೊಸಗನ್ನಡ ಗದ್ಯಾನುವಾದಕರು) ಆರ್.ವಿ. ಕುಲಕರ್ಣಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೩, ಪುಟ ೩೨೨ ಮತ್ತು ೭೫೩

೧೪. ಈ ಲೇಖನವನ್ನು ಸಂಗೀತ ವಿದ್ವಾನ್ ಡಾ ॥ ಶ್ರೀಕಾಂತಂ ನಾಗೇಂದ್ರಶಾಸ್ತ್ರೀ ಅವರು ಆಮೂಲಾಗ್ರವಾಗಿ ಪರಿಶೀಲಿಸಿ, ಅನೇಕ ಸಲಹೆ, ಸೂಚನೆಗಳನ್ನು ನೀಡಿರುತ್ತಾರೆ. ಅವರ ಮಾರ್ಗದರ್ಶನ ಮತ್ತು ಸಹಾಯಕ್ಕಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ನನ್ನ ಗುರುಗಳಾದ ಡಾ ॥ ಕೆ.ಆರ್. ಗಣೇಶ್ ಅವರು ಕೂಡ ಈ ಲೇಖನವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಉಪಯುಕ್ತ ಸಲಹೆಗಳನ್ನು ನೀಡಿದ್ದಾರೆ. ಇವರಿಗೂ ಕೂಡ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

*****

# ಮೃದಂಗ ಮೀಮಾಂಸೆ

* ಕೆ.ಜಿ. ಶ್ರೀಕಂಠದಾನಿ

ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ಮೃದಂಗಕ್ಕೆ ಬಹುಮುಖ್ಯವಾದ ಸ್ಥಾನವಿದೆ. ನಾಗಸ್ವರವಾದನವನ್ನು ಹೊರತು ಪಡಿಸಿದಂತೆ ಇತರ ಯಾವುದೇ ಸಂಗೀತ ಕಛೇರಿಯಲ್ಲಿ ಮೃದಂಗಕ್ಕೆ ಮುಖ್ಯ ಲಯಪಕ್ಕವಾದ್ಯದ ಜವಾಬ್ದಾರಿಯಿರುತ್ತದೆ. ಒಂದು ಲಯ ಮತ್ತು ತಾಳವಾದ್ಯವಾಗಿ ಮೃದಂಗಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದ್ದರೂ ನಾವು ಇಂದು ನೋಡುವ ವಾದ್ಯದ ರಚನಾಸ್ವರೂಪವೂ, ವಾದನ ಪ್ರಕಾರಗಳೂ ಪಾಠಕ್ರಮಗಳೆಲ್ಲವೂ ಹದಿನೆಂಟನೇ ಶತಮಾನದ ನಂತರವೇ ಬೆಳೆದುಬಂದಿರುವುದು ಸಂಗೀತ ವಿದ್ವಾಂಸರುಗಳಿಗೂ ವಿದ್ಯಾರ್ಥಿಗಳಿಗೂ ತಿಳಿದ ವಿಚಾರ. ಹದಿನೆಂಟನೇ ಶತಮಾನದ ಅಂತ್ಯದಲ್ಲಿ ಆರಂಭವಾಗಿ ಹತ್ತೊಂಭತ್ತನೇ ಶತಮಾನದುದ್ದಕ್ಕೂ ಕರ್ನಾಟಕ ಶಾಸ್ತ್ರೀಯ ಸಂಗೀತ ರಚನೆಗಳಲ್ಲಿ ಆದ ಕ್ರಾಂತಿಯೂ ಮೃದಂಗ ವಾದನದ ಬೆಳವಣಿಗೆಯಲ್ಲಿ ಬಹುದೊಡ್ಡ ಪಾತ್ರ ವಹಿಸಿದ್ದು ಆ ಕ್ರಾಂತಿಯ ಹರಿಕಾರರು ಸಂಗೀತದ ತ್ರಿಮೂರ್ತಿ ವಾಗ್ಗೇಯಕಾರರುಗಳೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ. ಅವರೊಂದಿಗೆ ತಂಜಾವೂರು ನಾರಾಯಣಸ್ವಾಮಿ ಅಪ್ಪ, ಪುದುಕೋಟೆ ಮಾಮುಡಿಯಾ ಪಿಳ್ಳೆ ಅವರೂ ಮೃದಂಗ ವಿದ್ವಾಂಸರೂ ಇತರ ಹಿರಿಯ ಡೋಲು ವಿದ್ವಾಂಸರುಗಳೂ ಶಾಸ್ತ್ರೀಯ ಪಕ್ಕವಾದ್ಯದ ಪಾಠಕ್ರಮಗಳನ್ನು ಕ್ರೋಡೀಕರಿಸಿ, ಹೊಸ ರೀತಿಯ ನುಡಿಸಾಣಿಕೆಗಳನ್ನು ಹುಟ್ಟುಹಾಕಿ ಲಯವಾದ್ಯವಾದನಗಳಿಗೆ ಪುನರ್ವ್ಯಾಖ್ಯೆ ಬರೆದರು. ಅವರ ಶಿಷ್ಯ ಪರಂಪರೆಯಲ್ಲಿ ಅನೇಕ ಅತಿರಥ ಮಹಾರಥ ವಿದ್ವಾಂಸರುಗಳು ಬೆಳೆದು ಕಛೇರಿಗಳಲ್ಲಿ ನುಡಿಸುವ ಕ್ರಮವನ್ನು ಎಂದೂ ಕೇಳರಿಯದ ಎತ್ತರಕ್ಕೆ ಕೊಂಡೊಯ್ದರು. ಈಗ ನಾನು ಹೇಳಹೊರಟಿರುವ ವಿಷಯವು ಬಹುಮಟ್ಟಿಗೆ ಇಪ್ಪತ್ತನೇ ಶತಮಾನದ ಮೃದಂಗ ವಾದನ ಪ್ರಕಾರಗಳಿಗೆ ಅನ್ವಯವಾಗಲಿದ್ದು ಮೇಲೆ ಹೆಸರಿಸಿರುವ ಮತ್ತು ಹೆಸರಿಸದ ದಕ್ಷಿಣ ಭಾರತದ ಎಲ್ಲಾ ರಾಜ್ಯಗಳಲ್ಲಿ ಸ್ವತಂತ್ರವಾಗಿ ಅಥವಾ ಪರಂಪರಾಗತವಾಗಿ ಬೆಳೆದ ಅಪರೂಪದ ಮಹಾ ವಿದ್ವಾಂಸರುಗಳ ಕೊಡುಗೆಯಾಗಿದೆ. ಅವರೆಲ್ಲರ ಪಾತ್ರವನ್ನು ಸ್ಮರಿಸಿಕೊಂಡು ನಾನು ನನ್ನ ಗುರುಗಳಿಂದ ಕಲಿತು, ನನ್ನ ಮಟ್ಟಿಗೆ ಅರ್ಥ ಮಾಡಿಕೊಂಡಿರುವಂತೆ, ಮೃದಂಗ ವಾದನದಲ್ಲಿ ಬಳಸಲ್ಪಡುವ ಪಾಠಕ್ರಮಗಳಿಗೂ, ಆ ಪಾಠಕ್ರಮಗಳ ವಾದನದಿಂದುಟಾಗುವ ನಾದಪುಂಜಗಳಿಗೂ ಇರುವ ಸಂಬಂಧಗಳ ಕುರಿತಾದ ಕೆಲವು ವಿಚಾರಗಳನ್ನು ಮಾತ್ರ ಇಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಲು ಪ್ರಯತ್ನಿಸಿದ್ದೇನೆ.

ನಾನು ಇಲ್ಲಿಯವರೆಗೆ ಎಚ್ಚರಿಕೆಯಿಂದ 'ಮೃದಂಗ ಪಾಠಕ್ರಮಗಳು' ಎಂಬ ಪದಗಳನ್ನು ಬಳಸಿದೆ. ಈ ಪಾಠಕ್ರಮಗಳು ಲಯವಾದ್ಯ ವಿದ್ಯಾರ್ಥಿಗಳಿಗೆ ತತಕ್ಕಾರ' ಅಥವಾ 'ಸೊಲ್ಲುಕಟ್ಟುಗಳು' ಎಂಬ ಹೆಸರುಗಳಿಂದ ಹೆಚ್ಚು ಪರಿಚಿತ. ಹಲವಾರು ಸೊಲ್ಲುಕಟ್ಟುಗಳು ಅರ್ಥಪೂರ್ಣವಾಗಿ(ತರ್ಕಬದ್ಧವಾಗಿ) ಜೋಡಿಸಿಕೊಂಡು ತಾಳಕ್ಕೆ ಹೊಂದುವಂತಹ ಪಾಠಗಳಾಗುತ್ತವೆಂಬುದನ್ನು ನಾವು ಗಮನಿಸಿದಾಗ ಪಾಠಕ್ರಮವೆಂಬುದು ಸೊಲ್ಲುಕಟ್ಟಿಗಿಂತ ದೊಡ್ಡದಾದ ಹೆಚ್ಚು ಜಟಿಲವಾದ ರಚನೆಯೆಂದು ಗೊತ್ತಾಗುತ್ತದೆ. ಅದೇ ರೀತಿ ಒಂದು 'ಸೊಲ್ಲುಕಟ್ಟು' ಸಹ ಅದರ ಹೆಸರೇ ಹೇಳುವಂತೆ ಹಲವು ಸೊಲ್ಲುಗಳು ಒಂದು ನಿರ್ದಿಷ್ಟವಾದ ಗುಂಪಾಗುತ್ತದೆ. ಹೀಗೆ ಮೃದಂಗ ವಾದನದಲ್ಲಿ ತಾಳಕ್ಕೊಳಪಡುವ ಪಾಠಕ್ರಮಗಳು ತಾಳಕ್ಕೆ ಒಳಪಡುವ ಅಥವಾ ಒಳಪಡದ ಸೊಲ್ಲುಕಟ್ಟುಗಳಿಂದಲೂ, ಆ ಸೊಲ್ಲುಕಟ್ಟುಗಳು ನಿರ್ದಿಷ್ಟವಾದ ನಾದ ಮತ್ತು ಕಾಲಪ್ರಮಾಣಗಳುಳ್ಳ ಸೊಲ್ಲುಗಳಿಂದಲೂ ಮಾಡಲ್ಪಟ್ಟಿವೆ. ಮೃದಂಗದ ಮುಚ್ಚಿಗೆಗಳ ಮೇಲೆ ವಾದಕನ ಕೈ ಮತ್ತು ಬೆರಳುಗಳ ವಿವಿಧ ರೀತಿಯ ತಾಡನಗಳಿಂದ ನಿರ್ದಿಷ್ಟವಾದ ನಾದರೂಪೀ ಸೊಲ್ಲುಗಳು ಸೃಷ್ಟಿಯಾಗುತ್ತವೆ.

ಸಂಗೀತಕ್ಕೆ ಪ್ರಕೃತಿ ಸ್ವರಗಳಾದ ಷಡ್ಜ ಮತ್ತು ಪಂಚಮಗಳಿದ್ದಂತೆ ದಕ್ಷಿಣ ಭಾರತದ ಲಯವಾದ್ಯಗಳಿಗೆ ತ, ದಿ, ತೋಂ, ಮತ್ತು ನಂ ಗಳೆಂಬ ನಾಲ್ಕು ಮೂಲ ಸೊಲ್ಲುಗಳಿವೆ. ಮೃದಂಗದ ಎಡಮುಚ್ಚಿಗೆಯಿಂದ ತ ಮತ್ತು ತೊಂ ಸೃಷ್ಟಿಯಾದರೆ,

---

* ನಂ. ೨೦/೧, ೪ನೆಯ ಅಡ್ಡರಸ್ತೆ, ಮಾಗಡಿ ರಸ್ತೆ ಬೆಂಗಳೂರು-೫೬೦೦೨೩

ಬಲ ಮುಚ್ಚಿಗೆಯಿಂದ ದಿ ಮತ್ತು ನಂ ಹೊಮ್ಮುತ್ತದೆ. ಈ ಮೂಲ ಸೊಲ್ಲುಗಳನ್ನು ಆಧರಿಸಿ, ಕೆಲವು ಹೆಚ್ಚುವರಿ ಸೊಲ್ಲುಗಳನ್ನು ಸೇರಿಸಿ ಮೃದಂಗದ ಬಹುತೇಕ ಎಲ್ಲಾ ಸೊಲ್ಲುಕಟ್ಟುಗಳನ್ನೂ ರೂಪಿಸಬಹುದಾಗಿದೆ. ತ, ದಿ, ತೊಂ, ನಂಗಳನ್ನೂ ಸೇರಿಸಿಕೊಂಡು ಇನ್ನೂ ಅನೇಕ ವ್ಯಂಜನಗಳನ್ನೂ ಅವುಗಳ ಕಾಗುಣಿತ ರೂಪಗಳನ್ನೂ ಬಳಸಲಾಗುತ್ತದೆ. ಉದಾಹರಣೆಗೆ: ತದಿಂತೊಂನಂ, ಕಿಟತಕ, ತರಿಕಿಟ, ತದಿಗಿಣತೊಂ, ದಿಗುತರಿ, ತಕಝುಣುತಕಿಟ, ನಕತಾಂಕು. . . ಇತ್ಯಾದಿ ಸೊಲ್ಲುಗಳನ್ನು ಅವು ಸೃಷ್ಟಿಯಾಗುವ ಮೃದಂಗ ಮುಚ್ಚಿಗೆಯ ಭಾಗದೊಂದಿಗೆ ಹೊಂದಿಸಿ ತೋರಿಸಲಾಗಿದೆ.

ಈ ಚಿತ್ರಣದಿಂದ ನಮಗೆ 'ಯಾವ ಅಕ್ಷರರೂಪದ ಸೊಲ್ಲೂ ಅನನ್ಯವಾದ ಗುರುತನ್ನಾಗಲೀ ಮುಚ್ಚಿಗೆಯ ನೆಲೆಯನ್ನಾಗಲೀ ಅಥವಾ ನಾದರೂಪದೊಂದಿಗಿನ ಸಂಬಂಧವನ್ನಾಗಲೀ ಹೊಂದಿಲ್ಲ'. ಎಂದು ಗೊತ್ತಾಗುತ್ತದೆ. ಅಕ್ಷರರೂಪಿ ಸೊಲ್ಲುಕಟ್ಟುಗಳ ನಿರ್ಮಾಣದ ಉದ್ದೇಶವು ಮೃದಂಗ ವಾದಕನಿಗೆ ತಾನು ನುಡಿಸುವ ಪಾಠಗಳನ್ನು ತಾಳಕ್ಕೆ ಸರಿಯಾಗಿ ಹೇಳುವುದಕ್ಕೂ, ಇತರರಿಗೆ ಹೇಳಿಕೊಡುವುದಕ್ಕೂ ಅನುವು ಮಾಡುವುದಾಗಿದೆ. ನಮ್ಮ ನಾಲಿಗೆಗೆ, ಹಲ್ಲಿಗೆ, ಬಾಯಿಗೆ ಸುಲಭವಾಗಿ ಎಟುಕುವ, ಹೇಳಿದಾಗ ಕೇಳಲು ಆದಷ್ಟೂ ಸುಖಕರವೆಂದೆನಿಸುವ, ಹಗುರವಾದ, ಬಹುತೇಕ ಅಲ್ಪಪ್ರಾಣದ ವ್ಯಂಜನಗಳ ಸಜಾತೀಯ ಸಂಯುಕ್ತಾಕ್ಷರಗಳಿರುವ ಈ ಸೊಲ್ಲುಕಟ್ಟುಗಳು (ಮಾತಿನಕಟ್ಟು) ಮೃದಂಗದ ಭಾಷೆಯ ನಾದರೂಪಿ ಶಬ್ದಪುಂಜಗಳಿಗಿಂತ ಬಹಳ ಭಿನ್ನವಾದುವು. ಲಯದ, ಲಯವಾದ್ಯದ ವಿದ್ಯಾರ್ಥಿಯಾದವನು ಅಕ್ಷರರೂಪೀ ಸೊಲ್ಲುಕಟ್ಟುಗಳಿಂದಾದ ಪಾಠಗಳನ್ನು ತಾಳಕ್ಕೆ ಹೇಳಲು ಕಲಿಯಲಾರಂಭಿಸಿ ಕ್ರಮೇಣ ಹಿರಿಯ ವಿದ್ವಾಂಸರುಗಳ ನುಡಿಸಾಣಿಕೆಯನ್ನು ಕೇಳುವಾಗ ಆ ಅಕ್ಷರರೂಪಿ ಸೊಲ್ಲುಕಟ್ಟುಗಳನ್ನು ಗುರ್ತಿಸಲು ಶಕ್ತನಾಗುತ್ತಾನೆ. ಹಾಗೇ ಮುಂದುವರೆದು ತಾನು ನುಡಿಸುವಾಗ ಆ ಅಕ್ಷರ ರೂಪಗಳ ಕಾಲ ಪ್ರಮಾಣವನ್ನು ಕಂಡುಕೊಂಡು ಬೆಳೆಯುತ್ತಾನೆ. ಹಂತ ಹಂತವಾಗಿ ಬೆಳೆದ ಮೇಲೆ ಆ ವಿದ್ಯಾರ್ಥಿಗೆ ನುರಿತ ವಾದಕರ ನುಡಿಸಾಣಿಕೆಯಲ್ಲಿ ಅಕ್ಷರದ ಹುಡುಕಾಟ ನಿಂತು ನಾದರೂಪೀ ರಚನೆಗಳ ಅನುಭವವಾಗಲಾರಂಭಿಸುತ್ತದೆ. ಅದೃಷ್ಟವಿದ್ದರೆ, ಗುರುಗಳ ಆಶೀರ್ವಾದವಿದ್ದರೆ, ಮುಖ್ಯವಾಗಿ ಸತತ ಪರಿಶ್ರಮವಿದ್ದರೆ ಮುಂದೊಂದು ದಿನ ತಾನೇ ನುಡಿಸುವಾಗ ಆ ವಿದ್ಯಾರ್ಥಿಗೆ ಪಾಠಗಳು ಕೇಳಿಸುವುದು ನಿಂತು ನಾದರೂಪವುಳ್ಳ ಕಾವ್ಯವು ಕೇಳಿಸಬಹುದು. ಆಗ ವಿದ್ಯಾರ್ಥಿಯು ವಿದ್ವಾಂಸನೆನಿಸಿಕೊಳಬಹುದೇನೋ.

ಇದುವರೆಗೂ ನಾವು ಮೃದಂಗ ಅಥವಾ ಮೃದಂಗದಂತೆ ಎರಡು ಮುಚ್ಚಿಗೆಗಳುಳ್ಳ ವಾದ್ಯವನ್ನೇ ಮನಸ್ಸಿನಲ್ಲಿಟ್ಟುಕೊಂಡು ಅಕ್ಷರ ಮತ್ತು ನಾದರೂಪೀ ಸೊಲ್ಲುಕಟ್ಟುಗಳನ್ನು ಗಮನಿಸಿದ್ದೇವೆ. ಮನುಷ್ಯನಿಗೆ ಎರಡು ಕೈಗಳೂ, ಆ ಕೈಗಳಲ್ಲಿ ಒಟ್ಟು ಹತ್ತು ಬೆರಳುಗಳೂ ಇರುವುದರಿಂದ ಮೃದಂಗದಂತಹ ಯಾವುದೇ ಎರಡು ಮುಚ್ಚಿಗೆಗಳಿರುವ ಲಯವಾದ್ಯದ ಹುಟ್ಟು ಮತ್ತು ಬಳಕೆ( ಜೊತೆಗೆ ಉಳಿವು) ಅವನಿಗೆ ಸ್ವಾಭಾವಿಕವಾಗಿ ಒಗ್ಗಿದೆಯೆಂದು ಹೇಳಬಹುದು. ಮೃದಂಗದ ಬಲ ಮುಚ್ಚಿಗೆಯ ಶೃತಿಯು ಮುಖ್ಯ ಕಲಾವಿದರ ಕಂಠದ ಅಥವಾ ವಾದ್ಯದ ಶ್ರುತಿಯಲ್ಲಿರುವುದರಿಂದ (ಆಧಾರ ಷಡ್ಜ) ಆ ಮುಚ್ಚಿಗೆಯಿಂದ ಹೆಚ್ಚಿನ ಸಂಖ್ಯೆಯಲ್ಲಿ ನಾದರೂಪೀ ಸೊಲ್ಲುಗಳ ಸೃಷ್ಟಿಯಾಗಬಹುದು. ಮನುಷ್ಯನ ಎಡ ಅಥವಾ ಬಲಗೈ ಆತನ ಸ್ವಭಾವಕ್ಕೆ ತಕ್ಕಂತೆ ಇನ್ನೊಂದು ಕೈಗಿಂತ ಹೆಚ್ಚು ಸೂಕ್ಷ್ಮತೆಯನ್ನೂ ಲವಲವಿಕೆಯನ್ನೂ ಬೆಳೆಸಿಕೊಳ್ಳುವುದರಿಂದ ಯಾವುದಾದರೊಂದು ಮುಚ್ಚಿಗೆಯಿಂದ ಹೊಮ್ಮುವ ನಾದರೂಪೀ ಸೊಲ್ಲುಗಳ ಸಂಖ್ಯೆ, ವೇಗ ಹೆಚ್ಚಾಗಬಹುದು. ಆದರೆ ತಾಂತ್ರಿಕವಾಗಿ ವಾದ್ಯಕ್ಕೆ ಯಾವ ಮಿತಿಯೂ ಅನ್ವಯಿಸುವುದಿಲ್ಲ. ಈ ದೃಷ್ಟಿಕೋನವು ಖಂಜಿರ ಅಥವಾ ಮೋರ್ಚಿಂಗ್ ವಾದ್ಯಗಳಿಗೆ ಒಪ್ಪುತ್ತದೆಯೇ ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಮೂರು ಮುಚ್ಚಿಗೆಗಳುಳ್ಳ ಆಫ್ರಿಕಾದ ವಾದ್ಯವೋ ಅಥವಾ ಪಾಶ್ಚಾತ್ಯರ ಹಲವಾರು ಮುಚ್ಚಿಗೆಗಳುಳ್ಳ ಡ್ರಮ್‌ಕಿಟ್‌ನಂತಹ ವಾದ್ಯವೋ ಆದರೆ ಮೃದಂಗದ ತರ್ಕ ಒಪ್ಪುತ್ತದೆಯೇ ಎಂಬ ಅನುಮಾನ ಬರಬಹುದು. ಮುಚ್ಚಿಗೆಗಳ ಸಂಖ್ಯೆ ಮತ್ತು ಸ್ವರೂಪಗಳು ಹೆಚ್ಚಾದಂತೆ ಆ ವಾದ್ಯದ ನಾದರೂಪ ಸಂಪತ್ತೂ ಹೆಚ್ಚಾಗಬಹುದು. ಆದರೆ ಎರಡು ಕೈಗಳ ಸಮೀಕರಣವನ್ನು (ಮೋರ್ಚಿಂಗ್‌ನಲ್ಲಿ ನಾಲಿಗೆಯದು ನೆರವಿನ ಕೈಯಾದರೆ ಖಂಜಿರದಲ್ಲಿ ವಾದ್ಯವನ್ನು ಹಿಡಿದುಕೊಳ್ಳುವ ಮುಚ್ಚಿಗೆಯ ಸೆಳೆಯುವ ಒತ್ತಡದ ಕೈ) ಯಾವ ವಾದ್ಯವೂ ಮೀರಲಾಗುವುದಿಲ್ಲ. ಎಲ್ಲಾ ಅಂಶಗಳನ್ನು ನೋಡಿದ ಮೇಲೆ ಮೃದಂಗ ವಾದ್ಯವನ್ನು 'ಕಲ ತಂದೊಡ್ಡುವ ಎಲ್ಲಾ ಪರೀಕ್ಷೆಗಳನ್ನೂ ಎದುರಿಸಿ ಇಂದಿಗೂ ತನ್ನ ರಚನಾ ಸ್ವರೂಪದಲ್ಲಿ ಸಾಕಷ್ಟು ಸಂಕೀರ್ಣತೆಯನ್ನು ಉಳಿಸಿಕೊಂಡಿರುವ ಅಗಾಧವಾದ ನಾದ ಸಂಪತ್ತುಳ್ಳ ಜನ ರಂಜನೆಯ

ಸಾಮರ್ಥ್ಯವುಳ್ಳ ಮಾದರಿಲಯವಾದ್ಯ" ಎನ್ನಬಹುದೆನಿಸುತ್ತದೆ. ಅದೇ ಉಸಿರಿನಲ್ಲಿ, ಖಂಜಿರ, ಮೋರ್ಚಿಂಗ್ ಅಥವಾ ಘಟದಂತಹ ವಾದ್ಯಗಳು ನಾದರೂಪಗಳ ಸೃಷ್ಟಿಯಲ್ಲಿ ಸ್ವಲ್ಪ ಮಿತಿಯನ್ನು ತೋರಿಸಿದರೂ ವಾದಕನಿಗೆ ಅವು ಒಡ್ಡುವ ಸವಾಲಿನಿಂದ ಮತ್ತು ತಮ್ಮ ಮಿತಿಗಳೆಲ್ಲವ ಮೀರಿ ಯಾವ ವಾದ್ಯಕ್ಕಾದರೂ ಪೈಪೋಟಿ ನೀಡುವ ಸಾಮರ್ಥ್ಯದಿಂದ ಅವೆಲ್ಲವೂ ಸಂಗೀತ ರಸಿಕರಿಗೆ ಆಪ್ತವಾಗುತ್ತವೆಂದು ಹೇಳಬಹುದು.

ನಾಗಸ್ವರವಾದನಕ್ಕೆ ಲಯ ಸಹಕಾರ ನೀಡುವ ಮತ್ತೊಂದು ಪ್ರಾಚೀನವಾದ ಮಂಗಳಕರವಾದ ವಾದ್ಯ ಡೋಲು ಮೃದಂಗಕ್ಕಿಂತ ಭಿನ್ನವಾದ ಪರಿಸ್ಥಿತಿಗಳಲ್ಲಿ ಬೆಳೆದು ಬಂದಿದೆ. ಹಲವು ಗಂಟೆಗಳ ಕಾಲ ನಿಲ್ಲದೇ ನಡೆಯುತ್ತಿದ್ದ ಸಮಾರಂಭಗಳು, ದೇವಸ್ಥಾನದ ಪೂಜೆಗಳು ಊರಿಂದೂರಿಗೆ ನಡೆದು ಹೋಗುತ್ತಿದ್ದ ಮೆರವಣಿಗೆಗಳಲ್ಲಿ ಮುಖ್ಯ ಲಯವಾದ್ಯವಾಗಿ ಮೂಡಿ ಬಂದ ಡೋಲಿಗೆ ಲಯ ಸಹಕಾರದ ಜೊತೆಗೆ ತಾನೊಂದೆ ನಿಂತು ಕಲೆಯನ್ನು ಪ್ರದರ್ಶಿಸುವ ಜವಾಬ್ದಾರಿ ಆಗಿಂದಾಗ್ಗೆ ಒದಗುತ್ತಿದ್ದ ಕಾರಣದಿಂದ, ನಾಗಸ್ವರ ವಾದ್ಯ ಒಡ್ಡುವ ಶ್ರಮಸಿದ್ಧ ನಿಲುಗಡೆಗಳನ್ನು ತುಂಬುವ ಪಾತ್ರ ಅದಕ್ಕೆ ಸಿಕ್ಕಿದೆ. ಮುಖ್ಯವಾದ್ಯ ತಾನೇ ಆಗಿ ಗಂಟೆಗಟ್ಟಲೆ ಸಾಧಿಸಬಲ್ಲ ಮಾನಸಿಕ ತರಬೇತಿ ಡೋಲಿಗೆ ಹೊಸದಲ್ಲ. ಆದರೆ ಮೃದಂಗವು ಪಕ್ಕವಾದ್ಯವಾಗೇ ಹೆಚ್ಚು ಪಳಗಿ ಕೃತಿಗಳ ಗಾಯನ, ವಾದನ ಮತ್ತು ನರ್ತನಗಳಿಗೆ ಲಯಸಹಕಾರವನ್ನು ಕೊಡಲಿಕ್ಕೇ ರೂಪುಗೊಂಡಿರುವುದು ದಿಟ. ಕೃತಿಗಳನ್ನು ಪೋಷಿಸುವಾಗ ಇರಬೇಕಾದ ಸೌಂದರ್ಯ ಪ್ರಜ್ಞೆಯೇ ಒಂದು ಬಗೆ. ತನಿ ಆವರ್ತನೆಗಳಲ್ಲಿ ತನ್ನ ಪೂರ್ಣ ಬತ್ತಳಿಕೆಯನ್ನು ಪ್ರದರ್ಶಿಸುವಾಗ ಇರಬೇಕಾದ ಸೌಂದರ್ಯ ಪ್ರಜ್ಞೆಯೇ ಒಂದು ಬಗೆ. ಇಲ್ಲಿಯೂ ಸಹ ಮೃದಂಗದ ಯಶಸ್ಸು ಗಮನಾರ್ಹವಾದುದು. ಕೃತಿಗಳಲ್ಲಿ ವ್ಯಕ್ತವಾಗುವ ಭಾವನೆಗಳನ್ನು ಲಯನಾದರೂಪಗಳಿಂದ ಶಕ್ತವಾಗಿ ಹೃದಯಕ್ಕೆ ತಟ್ಟುವಂತೆ ಪೋಷಿಸುವುದು ಒಂದು ಕಡೆಯಾದರೆ ಅದೇ ಸೊಲ್ಲುಕಟ್ಟುಗಳನ್ನು ಬೆಳೆಸಿ ಚಮತ್ಕಾರಿಕವಾಗಿ ಮುಕ್ತಾಯವನ್ನಾಗಿ ಪರಿವರ್ತಿಸುವುದು ಇನ್ನೊಂದು ಕಡೆ. ಮೃದಂಗಕ್ಕೆ ಎರಡೂ ಸಮಾನ ಪ್ರಮಾಣದಲ್ಲಿ ಸಿದ್ಧಿಯಾಗಿದೆ. ಘನ ವಿದ್ವಾಂಸರುಗಳು ಅದನ್ನು ಸಾಧಿಸಿ ತೋರಿಸಿ ಮೃದಂಗಕ್ಕೆ ಗೌರವ ತಂದಿತ್ತಿದ್ದಾರೆ.

ಮೃದಂಗವು ಒಂದು ವಿಶೇಷವಾದ ತತ್ವವನ್ನು ಪ್ರತಿನಿಧಿಸುತ್ತದೇನೋ ಎಂದು ನನಗೆ ಬೇಕಾದಷ್ಟು ಬಾರಿ ಅನಿಸಿದ್ದುಂಟು. ಮೃದಂಗದ ಎರಡು ಮುಚ್ಚಿಗೆಗಳಲ್ಲಿ (ಮುಖಗಳಲ್ಲಿ) ಎಡ ಮುಚ್ಚಿಗೆಯು ಒದ್ದೆಯಾಗಿರಬೇಕು. ಬಲ ಮುಚ್ಚಿಗೆಯು ಶುಷ್ಕವಾಗಿರಬೇಕು. ಎಡ ಮುಚ್ಚಿಗೆಯು ಒಣಗಿದಂತೆ ತನ್ನ ಸೃಷ್ಟಿ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಾ ಹೋಗುತ್ತದೆ. ಅದಕ್ಕೆ ಎಲ್ಲ ರೀತಿಯಿಂದಲೂ ತದ್ವಿರುದ್ಧವಾದ ಬಲ ಮುಚ್ಚಿಗೆಯು ಅಕಸ್ಮಾತ್ ವಾದಕನ ಕೈ ಬೆವರಿ ಅಲ್ಪ ಪ್ರಮಾಣದ ತೇವಾಂಶ ತಗುಲಿದರೂ ನರಳುತ್ತದೆ. ಹೀಗೆ ಒದ್ದೆಯಾದ ಒಂದು ಮುಖ ಒಣಗಿರುವ ಇನ್ನೊಂದು ಮುಖದೊಂದಿಗೆ ಸಂವಾದದಲ್ಲಿ ತೊಡಗಿ, ಮನುಷ್ಯನ ಎಲ್ಲೆ ಇಲ್ಲದ ಕಲ್ಪನೆಗೆ ಸರಳ ಸುಂದರ ನಿಯಮಾವಳಿಗಳನ್ನಾರೋಪಿಸಿ, ಕ್ರಮಬದ್ಧವಾದ ಲಯನಾದಲೋಕವನ್ನು ಸೃಷ್ಟಿಸುವ ಅಸಾಮಾನ್ಯವಾದ ಪ್ರಕ್ರಿಯೆಯು ಮೃದಂಗ ವಾದನದಿಂದ ಆಗುತ್ತದೆ. ಅಂತಹ ವಾದ್ಯದ ಸಂಗ ಬಲ್ಲವರು, ಸಂಗದಲ್ಲಿರುವವರು ಕೆಲವೊಮ್ಮೆ ಸುಮ್ಮನೆ ಕುಳಿತಿರುವಾಗಲೂ ನಿಬ್ಬೆರಗಾದವರಂತಾದರೆ ಆಶ್ಚರ್ಯವೇನೂ ಇಲ್ಲ.

*****

# ಗ್ಯಾಸೆಟಿಯರ್ ಪರಂಪರೆ, ತಯಾರಿಕೆ, ಬಳಕೆ

* ಡಾ॥ ಅ.ಲ. ನರಸಿಂಹನ್

(ಡಾ॥ ಕೆ.ಆರ್. ಗಣೇಶ್ ಅವರಿಗೂ ಗ್ಯಾಸೆಟಿಯರ್‌ಗಳಿಗೂ ಸಂಬಂಧವಿದೆ. ಕೆಲವು ಗ್ರಂಥಗಳಿಗೆ ಲೇಖನಗಳನ್ನು ಬರೆದು ಕೊಟ್ಟಿರುವರಲ್ಲದೆ, ಕೆಲವೊಂದು ಅನುವಾದಗಳನ್ನು ನೀಡಿದ್ದಾರೆ. ಇಲಾಖೆ ಅವರಿಗೆ ಅಪರಿಚಿತವಾಗಿರಲಿಲ್ಲ. ಅಲ್ಲಿಯ ಸಂಪಾದಕರು ಮತ್ತು ಅನ್ವೇಷಕರುಗಳು ಅವರಿಗೆ ಆತ್ಮೀಯವಾಗಿರುವವರು. ಹಾಗಾಗಿ ಶ್ರೀಯುತರ ಅಭಿನಂದನಾ ಗ್ರಂಥಕ್ಕೆ ಈ ಲೇಖನ ಸೂಕ್ತವೆಂದು ಭಾವಿಸಿದ್ದೇನೆ. ಹಾಗೂ ಗ್ಯಾಸೆಟಿಯರ್‌ಗೆ ಸಂಬಂಧಿಸಿದ ಮಾಹಿತಿಗಳು ಒಂದೆಡೆ ದೊರಕಲೆಂಬ ಆಶಯವೂ ಇದೆ.)

ಇಂದಿನ ಗ್ಯಾಸೆಟಿಯರ್‌ನ್ನು ಹೋಲುವವಂತಹ ಗ್ರಂಥಗಳು ಹಿಂದಿನಿಂದಲೂ ಇವೆ. ಆದರೆ ಪುನರ್‌ಪರಿಷ್ಕೃತ ಆಧುನಿಕ ಗ್ಯಾಸೆಟಿಯರ್‌ಗಳ ರಚನೆ ಕರ್ನಾಟಕದಲ್ಲಿ ಕ್ರಿಸ್ತಶಕೆಯ ಹತ್ತೊಂಬತ್ತನೆಯ ಶತಮಾನದ ಮಧ್ಯಕಾಲದಲ್ಲಿ ಆರಂಭವಾಯಿತು. ೧೮೬೭ರಲ್ಲಿ ಅಂದಿನ ಹಳೆಯ ಮೈಸೂರು ಪ್ರದೇಶದ ಡಿವಿಷನಲ್ ಸೂಪರಿಂಟೆಂಡೆಟ್ಸ್ ಅವರುಗಳ ಮೇಲಧಿಕಾರಿಯಾಗಿದ್ದ ಚೀಫ್ ಕಮಿಷನರ್ ಸಾಂಡ್ರೂಸ್ (Saunders) ಅವರಿಗೆ (ಈಗಾಗಲೇ ಮುದ್ರಣವಾಗಿದ್ದ) ಬಾಂದ್ರ ಜಿಲ್ಲಾ ಗ್ಯಾಸೆಟಿಯರ್‌ನ್ನು ಹೋಲುವಂತಹ ಪುಸ್ತಕಗಳನ್ನು ಹಳೆಯ ಮೈಸೂರಿನ ಪ್ರತಿ ಜಿಲ್ಲೆಗಳಿಗೂ ತಯಾರಿಸುವಂತೆ ನಿರ್ದೇಶಿಸಲಾಯಿತು. ಅದರಂತೆ ಮುಂದಿನ ಎರಡು ವರ್ಷಗಳಲ್ಲಿ ಒಂಬತ್ತು ಜಿಲ್ಲೆಗಳಿಗೂ ಸಂಬಂಧಿಸಿದಂತೆ ಹಸ್ತಪ್ರತಿಗಳು ತಯಾರಾದವು. ಅವುಗಳಲ್ಲಿ ವೆಲ್ಲಸ್ಲಿ ಬರೆದ ಮೈಸೂರು ಜಿಲೆ  ಹಾಗೂ ಕೃಷ್ಣಯ್ಯಂಗಾರ್ ಬರೆದ ಕೋಲಾರ ಜಿಲ್ಲೆಯ ಪುಸ್ತಕಗಳು ಪ್ರಕಟವಾದುವು. ಕ್ಯಾ॥ ಗೋರ್ಡಾನ್ ಕುಮ್ಮಿಂಗ್ ಅವರು ಶಿವಮೊಗ್ಗ, ಡಬಲ್ಯೂ ಹಿಲ್ ಅವರು ಹಾಸನ, ಸಿ. ಪಿಯರ್‌ಸ್ ಅವರು ತುಮಕೂರು, ಕೃಷ್ಣರಾವ್ ಅವರು ಚಿತ್ರದುರ್ಗ ಜಿಲ್ಲೆಗಳ ಬಗ್ಗೆ ಬರೆದರು. ಬೆಂಗಳೂರು ಮತ್ತು ಕಡೂರುಗಳ ಪುಸ್ತಕ ಪೂರ್ಣಗೊಳ್ಳಲಿಲ್ಲ. (ಕೊಡಗು ಪ್ರತ್ಯೇಕ ರಾಜ್ಯವಾಗಿದ್ದು ಆಡಳಿತಾತ್ಮಕವಾಗಿ ಮೈಸೂರು ರಾಜ್ಯಕ್ಕೆ ಸೇರಿದ್ದು ಅದಕ್ಕೂ ಪುಸ್ತಕ ತಯಾರಾಗಿದ್ದಿರಬಹುದು.) ಮುಂದೆ ೧೮೭೧ರ ಜನಗಣತಿ ವರದಿಯಲ್ಲಿ ಅದರ ಸಂಪಾದಕರಾದ ಲಿಂಡ್ಸೆ ಅವರು ಈ ಎಲ್ಲ ಪುಸ್ತಕಗಳಲ್ಲಿದ್ದ ಅಂಕಿ ಅಂಶಗಳನ್ನು ಬಳಸಿಕೊಂಡರು. ಮುದ್ರಿತ ಎರಡು ಗ್ಯಾಸೆಟಿಯರ್ ಪುಸ್ತಕಗಳ ಬಗ್ಗೆ ಎಸ್.ಎಲ್. ಶ್ರೀನಿವಾಸಮೂರ್ತಿ ಅವರು ವಿವರವಾಗಿ ಬರೆದಿದ್ದಾರೆ.

ಬ್ರಿಟಿಷ್ ಸರ್ಕಾರ ಪೂರ್ಣಾವಧಿ ಸಂಪಾದಕರನ್ನು ನೇಮಿಸ ಬಯಸಿದ್ದು ಬಿ.ಎಲ್. ರೈಸ್ ಅವರನ್ನೇ 'ಮೈಸೂರು ಮತ್ತು ಕೊಡಗು' ಗ್ಯಾಸೆಟಿಯರ್ ತಯಾರಿಸಲು ೧೮೭೩ರಲ್ಲಿ ನೇಮಿಸಿತು. ಇದೇ ವೇಳೆಯಲ್ಲಿ ಭಾರತ ಸರ್ಕಾರ ಇಡೀ ರಾಷ್ಟ್ರಕ್ಕೆ ಸಂಬಂಧಿಸಿದಂತೆ 'ಇಂಪೀರಿಯಲ್ ಗ್ಯಾಸೆಟಿಯರ್' ಮಾಲಿಕೆಯನ್ನು ಪ್ರಕಟಿಸಲು ಹಂಟರ್ ಅವರನ್ನು ನೇಮಿಸಿದ್ದು ಅವರು ೧೮೭೪ರಲ್ಲಿ ಬೆಂಗಳೂರಿಗೆ ಬಂದಾಗ ರೈಸ್ ಅವರು ತಾವು ಹಾಕಿಕೊಂಡಿದ್ದ ರೂಪುರೇಷೆಗಳನ್ನು ಅವರಿಗೆ ವಿವರಿಸಿದರು. ಸೂಕ್ತ ಮಾಹಿತಿ ನೀಡಿದ್ದಕ್ಕಾಗಿ ಹಂಟರ್ ಅವರು ರೈಸ್ ಅವರನ್ನು ಕುರಿತು ಪ್ರಶಂಸೆಯ ಪತ್ರ ನೀಡಿದರು. ರೈಸ್ ಅವರು ಕೊಡಗು ರಾಜ್ಯವೂ ಸೇರಿದಂತೆ ಮೂರು ಸಂಪುಟಗಳಲ್ಲಿ ೧೮೭೬ರಲ್ಲಿ ಗ್ಯಾಸೆಟಿಯರ್‌ಗಳನ್ನು ಪ್ರಕಟಿಸಿದರು. ಅವುಗಳಲ್ಲಿ ಮೈಸೂರಿಗೆ ಸಂಬಂಧಿಸಿದಂತೆ 'ಮೈಸೂರು–ಸಾಮಾನ್ಯ ವಿವರ', 'ಮೈಸೂರು–ಜಿಲ್ಲೆಗಳ ವಿವರ' ಹಾಗೂ ಕೊಡಗಿಗೆ ಪ್ರತ್ಯೇಕ ಗ್ರಂಥ ಎಂದು ವಿಭಾಗಿಸಿಕೊಂಡಿದ್ದರು. ಮತ್ತೆ ಇಪ್ಪತ್ತು ವರ್ಷಗಳ ನಂತರ ೧೮೯೭ರಲ್ಲಿ ಹಿಂದೆ ಅವರು ಪ್ರಕಟಿಸಿದ ಗ್ರಂಥಗಳನ್ನು ನವೀಕರಿಸಿ ಪುನರ್ ಪ್ರಕಟಿಸಲು ನಿರ್ದೇಶಿಸಲಾಯಿತು. ಸಮಕಾಲೀನವಾಗಿ ದೊರೆತ ಮಾಹಿತಿಗಳನ್ನು ಸೇರಿಸಿದ್ದಲ್ಲದೆ ಇನ್ನಷ್ಟು ಪೂರಕ ವಿಷಯಗಳನ್ನು ಅನುಬಂಧದಲ್ಲಿ ನೀಡಿ ದ್ವಿತೀಯ ಮುದ್ರಣವನ್ನು ಅಣಿಗೊಳಿಸಿದರು. ಲಂಡನ್ನಿನ ಕಂಪನಿಯೊಂದು ಮೈಸೂರಿನ ಸರ್ಕಾರೀ ಮುದ್ರಣಾಲಯಕ್ಕಿಂತ ಕಡಿಮೆ ವೆಚ್ಚದಲ್ಲಿ ಮುದ್ರಿಸಲು ತಯಾರಿದ್ದು ಅಲ್ಲಿಯೇ ಮುದ್ರಿಸಲಾಯಿತು.

---

* ೧೩, ೧ನೇ ದೇವಸ್ಥಾನದ ರಸ್ತೆ, ೧೫ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು– ೫೬೦೦೦೩, ದೂ.ವಾ. ೨೩೪೬೮೮೦೫

ಹದಿನೈದನೆಯ ಶತಮಾನದ ಮಧ್ಯಭಾಗದ ಕಾಲಕ್ಕಾಗಲೇ ಭಾರತದಲ್ಲಿ ಬ್ರಿಟಿಷ್ ಆಡಳಿತ ಪ್ರದೇಶಗಳ ಕೆಲವು ರಾಜ್ಯಗಳಲ್ಲಿ ಗ್ಯಾಸೆಟಿಯರ್ ಗ್ರಂಥಗಳು ಪ್ರಕಟಣೆಗೊಂಡಿದ್ದವು. ಅಂತೆಯೇ ಮುಂಬಯಿಗೆ ಸಂಬಂಧಿಸಿದ ಗ್ಯಾಸೆಟಿಯರ್‌ಗಳೂ ಹೊರಬಂದಿದ್ದವು. ಅಲ್ಲಿ ಗ್ರಂಥ ಪ್ರಕಟಣೆಗಳಿಗಾಗಿ ೧೮೪೩ರಲ್ಲಿ ಸರ್ಕಾರೀ ನಿರ್ಣಯವನ್ನು ಕೈಗೊಳ್ಳಲಾಯಿತು. ಅದು ಕಂದಾಯ ಇಲಾಖೆಯ ವತಿಯಿಂದ 'ಅಂಕಿ ಅಂಶ' (ಸ್ಟಾಟಿಸ್ಟಿಕಲ್ ಫಿಗರ್‌ಸ್) ಗಳನ್ನು ವಿವಿಧ ಇಲಾಖೆಗಳಿಂದ ಸಂಗ್ರಹಿಸಿ ಪ್ರಕಟಿಸುವುದಾಗಿತ್ತು. ೧೮೬೮ರವರೆಗೂ ಹಲವಾರು ಬಾರಿ ಸಭೆಗಳು ನಡೆದಿದ್ದು ಆ ವರ್ಷದ ಜನವರಿಯಲ್ಲಿ ರೆವಿನ್ಯೂ ಕಮಿಷನರ್ ಮತ್ತಿತರನ್ನೊಳಗೊಂಡ ಸಮಿತಿಯನ್ನು ರಚಿಸಿ ಗ್ರಂಥ ರಚನೆಗಾಗಿ ಸಂಪಾದಕರೊಬ್ಬರನ್ನು ನೇಮಿಸಲಾಯಿತು. ಆಗಸ್ಟ್ ೧೮೬೮ರಲ್ಲಿ ಬಾಂಬೆ ಗ್ಯಾಸೆಟಿಯರ್ ಕಮಿಟಿಯೊಂದನ್ನು ಸಂಘಟಿಸಲಾಯಿತು. ಪ್ರತಿ ಜಿಲ್ಲೆಗಳಿಂದ ಪೂರಕ ಮಾಹಿತಿಗಳನ್ನು ತರಿಸಿಕೊಳ್ಳುವುದಲ್ಲದೆ ವಿಷಯದಲ್ಲಿ ಪರಿಣತರಿಂದ ಲೇಖನ ಬರೆಯಿಸಲೂ ನಿರ್ಧರಿಸಲಾಯಿತು. ೧೮೬೯ರಲ್ಲಿ ಮೊದಲ ಕರಡು ಪ್ರತಿ ತಯಾರಾಗಿ ಬಂಗಾಳದಲ್ಲಿದ್ದ ಡಬ್ಲ್ಯೂ. ಹಂಟರ್ ಅವರಿಗೆ ಸಲಹೆ ಮತ್ತು ಒಪ್ಪಿಗೆಗಾಗಿ ಕಳಿಸಿಕೊಡಲಾಯಿತು. ೧೮೭೧ರಲ್ಲಿ ಹಳೆಯ ಮುಂಬಯಿ ಕರ್ನಾಟಕ ಭಾಗದ ಧಾರವಾಡ ಜಿಲ್ಲೆಯ ಗ್ಯಾಸೆಟಿಯರ್‌ನ ಕರಡು ಸಿದ್ದವಾಯಿತು. ಅದೇ ವರ್ಷ ಹಂಟರ್ ಅವರು ರಾಷ್ಟ್ರೀಯ ಸರ್ಕಾರದ ಅಂಕಿ ಅಂಶಗಳ ಮುಖ್ಯಸ್ಥರಾಗಿ ನೇಮಕವಾಗಿದ್ದು 'ಇಂಪೀರಿಯಲ್ ಗ್ಯಾಸೆಟಿಯರ್'ಗಳ ಸಂಪಾದಕತ್ವವನ್ನೂ ವಹಿಸಿಕೊಂಡರು. ಜೂನ್ ೧೮೭೩ರಲ್ಲಿ ಜೇಮ್ಸ್ ಎಂ. ಕ್ಯಾಂಪ್‌ಬಲ್ ಅವರನ್ನು ಗ್ಯಾಸೆಟಿಯರ್ ಗ್ರಂಥಗಳ ಸಂಪಾದಕರಾಗಿ (ಕಂಪೈಲರ್) ನೇಮಿಸಲಾಯಿತು. ಅವರು ನಿವೃತ್ತರಾಗುವ ವೇಳೆಗೆ (೧೯೦೨?) ಮುಂಬಯಿಗೆ ಸಂಬಂಧಿಸಿದ ಇಪ್ಪತ್ತೇಳು ಸಂಪುಟಗಳನ್ನು ತಯಾರಿಸಿದ್ದಲ್ಲದೆ, ಇಂಪೀರಿಯಲ್ ಗ್ಯಾಸೆಟಿಯರ್‌ಗೂ ಹಲವಾರು ಲೇಖನಗಳನ್ನು ಬರೆದು ಕೊಟ್ಟಿದ್ದರು. (ಕರ್ನಾಟಕ ಮತ್ತು ಕೊಡಗಿಗೆ ಸಂಬಂಧಿಸಿದಂತೆ ಬಿ.ಎಲ್. ರೈಸ್ ಅವರು ಇಂಪೀರಿಯಲ್ ಗ್ಯಾಸೆಟಿಯರ್‌ಗೆ ಬರೆದುಕೊಟ್ಟಿದ್ದು ನಂತರ ಅದನ್ನು ಬಿಡಿಯಾಗಿ ಪುಸ್ತಕ ರೂಪದಲ್ಲಿಯೂ ಹೊರತಂದರು.) ವಿಶೇಷವೆಂದರೆ ಮುಂಬಯಿ ರಾಜ್ಯಕ್ಕೆ ಸಂಬಂಧಿಸಿದಂತೆ ವಿಷಯಾಧಾರಿತ ಗ್ಯಾಸೆಟಿಯರ್ ಸಂಪುಟಗಳನ್ನು ಹೊರತರಲಾಯಿತು. (ಉದಾ: ಫ್ಲೋರ, ಫೌನ ಇತ್ಯಾದಿ)

ಕರ್ನಾಟಕಕ್ಕೆ ಸಂಬಂಧಿಸಿದಂತೆ ೧೮೮೪ರಲ್ಲಿ ಧಾರವಾಡ ಧಾರವಾಡ ಮತ್ತು ಬೆಳಗಾವಿ ಸಂಪುಟಗಳು ಪ್ರಕಟವಾದವು. ಸರಿ ಸುಮಾರು ಅದೇ ಸಮಯದಲ್ಲಿ ಬೆಳಗಾವಿ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಸಂಪುಟಗಳನ್ನೂ ಹೊರತರಲಾಯಿತು. ೧೮೯೩ರಲ್ಲಿ ಈ ನಾಲ್ಕೂ ಜಿಲ್ಲೆಯ ಸಂಪುಟಗಳನ್ನು ಸಂಗ್ರಹಿಸಿ ಕನ್ನಡದಲ್ಲಿ ಒಂದು ಸಂಪುಟದಲ್ಲಿ ವೆಂಕಟರಂಗೋ ಕಟ್ಟಿ ಅವರು ತಂದರು. ಮತ್ತೆ ೧೯೮೪ರಲ್ಲಿ ರಾಜ್ಯ ಗ್ಯಾಸೆಟಿಯರ್‌ನ ಪ್ರಥಮ ಸಂಪುಟ ಬರುವವರೆಗೆ ಕನ್ನಡದಲ್ಲಿ ಯಾವುದೇ ಗ್ಯಾಸೆಟಿಯರ್ ಸಂಪುಟ ಬರಲಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಗ್ಯಾಸೆಟಿಯರ್ ಕೇವಲ ಅಧಿಕಾರಿಗಳಿಗೆ ಮಾತ್ರ ತಾವಿರುವ ಜಿಲ್ಲೆಯ ಬಗ್ಗೆ ತಿಳಿದುಕೊಳ್ಳಲು ಎಂಬ ಧೋರಣೆ ಇದ್ದುದರಿಂದ ಕನ್ನಡದಲ್ಲಿ ಬರಲಿಲ್ಲ. ಸ್ವಾತಂತ್ರ್ಯಾನಂತರ ಅಖಿಲ ಭಾರತ ಮಟ್ಟದಲ್ಲಿ ಏಕರೂಪವಾಗಿ ಗ್ರಂಥಗಳು ಬರಬೇಕಿದ್ದರಿಂದ ಆಗಲೂ ಕನ್ನಡ ನಿರ್ಲಕ್ಷಿತವಾಯಿತು. ಕರ್ನಾಟಕದಲ್ಲಿ ಎಲ್ಲ ಜಿಲ್ಲಾ ಗ್ಯಾಸೆಟಿಯರ್ ಮುದ್ರಣವಾದಮೇಲೆ ಜನಸಾಮಾನ್ಯರಿಗೂ ತಮ್ಮ ಜಿಲ್ಲೆಯ ಬಗ್ಗೆ ಅರಿವು ಮೂಡಿಸಲು ಡಾ॥ ಸೂರ್ಯನಾಥ ಕಾಮತ್ ಅವರು ಮುಖ್ಯ ಸಂಪಾದಕರಾಗಿದ್ದ ವೇಳೆಯಲ್ಲಿ ಮತ್ತೆ ಎಲ್ಲ ಸಂಪುಟಗಳು ಮೊದಲಿಗೆ ಕನ್ನಡದಲ್ಲಿಯೂ ನಂತರ ಅದರ ಇಂಗ್ಲಿಷ್ ಅನುವಾದಗಳು ಪ್ರಕಟವಾಗತೊಡಗಿದವು. (ಆ ವೇಳೆಗೆ ಮಹಾರಾಷ್ಟ್ರದಲ್ಲಿ ಮರಾಠಿಯಲ್ಲಿ ಗ್ಯಾಸೆಟಿಯರ್‌ಗಳು ಹೊರಬಂದಿದ್ದವು) ಸ್ವಾತಂತ್ರ್ಯಾನಂತರ ಮುಂಬಯಿ ಪ್ರಾಂತ್ಯದ ಗ್ಯಾಸೆಟಿಯರ್‌ಗಳನ್ನು ನವೀಕರಿಸಿ ಪುನರ್ ಮುದ್ರಿಸಲಾಯಿತು. ೧೯೫೬ರ ಕರ್ನಾಟಕ ರಾಜ್ಯೋದಯದ ವೇಳೆಗೆ ಧಾರವಾಡ ಜಿಲ್ಲೆ ಮುದ್ರಣವಾಗಿದ್ದು ಮುದ್ರಿತ ಪ್ರತಿಗಳನ್ನು ರಾಜ್ಯ ಸರ್ಕಾರಕ್ಕೆ ನೀಡಲಾಯಿತು. ಉತ್ತರ ಕನ್ನಡ ಜಿಲ್ಲೆಯ ಪ್ರತಿಯೊಂದು ಗ್ರಾಮಗಳಿಂದಲೂ ವಿವರಗಳನ್ನು ಸಂಗ್ರಹಿಸಲಾಗಿದ್ದು ಅವುಗಳನ್ನೂ ರಾಜ್ಯ ಸರ್ಕಾರದ ಮೂಲಕ ಗ್ಯಾಸೆಟಿಯರ್ ಇಲಾಖೆಗೆ ನೀಡಲಾಯಿತು. ಮುಂದೆ ಇಲಾಖೆ ಗ್ರಂಥ ಪ್ರಕಟಿಸಿದಾಗ ಈ ಮಾಹಿತಿಗಳನ್ನೂ ಬಳಸಿಕೊಳ್ಳಲಾಯಿತು.

ಕೊಡಗಿನ ಬಗ್ಗೆ ರೈಸ್ ಅವರು ಪ್ರಕಟಿಸುವ ಮೊದಲೇ ಆ ಸಂಸ್ಥಾನವನ್ನು ಕುರಿತು (ಈಗ ಜಿಲ್ಲೆಯಾದರೂ ಆಗ ಪ್ರತ್ಯೇಕ ಬ್ರಿಟಿಷ್ ರಾಜ್ಯಾಡಳಿತ ಪ್ರದೇಶವಾಗಿತ್ತು.) ಗ್ರಂಥಗಳು ಬಂದಿದ್ದವು. ೧೮೫೫ರಲ್ಲಿ ಹೆಚ್. ಮೋಗ್ಲಿಂಗ್ ಅವರು (ಪ್ರಥಮ ಕನ್ನಡ ಪತ್ರಿಕೆಯ ಜನಕರು) 'ಕೂರ್ಗ್ ಮೆಮೊರಿಸ್' ಇಂಬ ಹೆಸರಿನಲ್ಲಿ ಪುಟ್ಟ ಪುಸ್ತಕ ವೊಂದನ್ನು ಹೊರತಂದಿದ್ದು

೧೮೬೬ರಲ್ಲಿ ಅದರ ಜರ್ಮನ್ ಆವೃತ್ತಿಯನ್ನು ವಿಸ್ತರಿಸಿ, ಹೆಚ್ಚಿನ ಮಾಹಿತಿಗಳನ್ನು ಸೇರಿಸಿ ಪ್ರಕಟಿಸಿದರು. ೧೮೬೦ರಲ್ಲಿ ಜಿ.ರಿಕ್ಟರ್ ಅವರು ಮೋಗ್ಲಿಂಗ್ ಅವರ ಕೊಡಗಿನ ನೆನಪುಗಳ ಜರ್ಮನ್ ಆವೃತ್ತಿ, ರಾಜೇಂದ್ರನಾಮೆ, ಕೊಡಗು ಭಾಷೆ ಇತ್ಯಾದಿಗಳೂ, ಸ್ವತಹ ೧೪ವರ್ಷ ಕೊಡಗಿನಲ್ಲಿ ನೆಲೆಸಿದ್ದು ಜನಜೀವನವನ್ನು ಹತ್ತಿರದಿಂದ ಕಂಡದ್ದು ಇತ್ಯಾದಿಗಳ ನೆರವಿನಿಂದ 'ಗ್ಯಾಸೆಟಿಯರ್ ಆಫ್ ಕೂರ್ಗ್' ಗ್ರಂಥ ರಚಿಸಿದ್ದರೂ ಅದನ್ನು ಮ್ಯಾನ್ಯುಯಲ್ ಎಂದೇ ಕರೆದುಕೊಂಡಿದ್ದಾರೆ. ಇವುಗಳೆಲ್ಲದರ ಉಪಯೋಗವನ್ನು ರೈಸ್ ಅವರು ಪಡೆದುಕೊಂಡಿದ್ದಾರೆ.

ಇಂದಿನ ದಕ್ಷಿಣ ಕನ್ನಡ (ಸೌತ್ ಕೆನರ) ಜಿಲ್ಲೆಗೆ ಸಂಬಂಧಿಸಿದ ಗ್ಯಾಸೆಟಿಯರ್ ಕಾರ್ಯ ೧೮೮೦ಕ್ಕೂ ಮೊದಲೇ ಆರಂಭವಾಗಿತ್ತು. ಮದ್ರಾಸ್ ಸಿವಿಲ್ ಸರ್ವೀಸ್‌ನ ಹೆಕ್ಟರ್ಪ್ ಮತ್ತು ಸ್ಪೆನ್ಸರ್ ಅವರುಗಳನ್ನು –ಪ್ರಾಯಶ ಕೆನರ ಕುರಿತ ಗ್ಯಾಸೆಟಿಯರ್ ಮಾದರಿಯ– ಪುಸ್ತಕ ರಚಿಸಲು ನಿಯೋಜಿಸಲಾಗಿದ್ದು ಹಲವಾರು ಪುಸ್ತಕಗಳಲ್ಲಿ ಟಿಪ್ಪಣಿಗಳನ್ನು ಮಾಡಿಕೊಂಡಿದ್ದರು. ಆದರೆ ಅವರು ಪುಸ್ತಕ ರಚಿಸದೇ ಇದ್ದದ್ದರಿಂದ ಆ ಟಿಪ್ಪಣಿಗಳು ಸ್ಟೊರುಕ್ ಅವರಿಗೆ ದೊರಕಿತು. ಅವರಿಗೆ ಜಿಲ್ಲಾ ಮ್ಯಾನ್ಯುಯಲ್ ರಚಿಸಲು ತಿಳಿಸಿದ್ದು ೧೮೮೪–೮೭ರ ಅವಧಿಯಲ್ಲಿ ಮಾಹಿತಿ ಸಂಗ್ರಹಕ್ಕೆ ತೊಡಗಿದರು. ಅವರು ಇಂಗ್ಲೆಂಡ್‌ಗೆ ಹೋಗಬೇಕಿದ್ದು ಮರಳಿ ಬಂದ ಮೇಲೆ ೧೮೯೪–೯೫ರ ವೇಳೆಯಲ್ಲಿ ಪೂರ್ತಿಗೊಳಿಸಿದರು. ೧೮೯೨ರಲ್ಲಿ ಅಂಕಿ–ಅಂಶಗಳಿಗಾಗಿ ಎರಡನೇ ಸಂಪುಟ ತರಲು ವಿಷಯ ಸಂಗ್ರಹಣೆಗೆ ತೊಡಗಿದರು. ಜಿಲ್ಲೆಯಲ್ಲಿ ಬಹಳಕಾಲ ನ್ಯಾಯಾಧೀಶರಾಗಿದ್ದ ಎಂ.ಜೆ. ವಾಲೌಹೌಸ್ ಅವರು 'ಫ್ರೆಷರ್‌ಸ್ ಮ್ಯಾಗಸೀನ್'ನಲ್ಲಿ ರಚಿಸಿದ ಜಿಲ್ಲೆಯನ್ನು ಕುರಿತಾದ ಲೇಖನ ಬಳಸಿಕೊಂಡಿದ್ದಲ್ಲದೆ ಎಚ್.ಎ. ಸುರತ್ ಅವರು ೧೮೯೧ರ ಜನಗಣತಿಯಿಂದ ಜನತೆ ಕುರಿತ ವಿವರಗಳನ್ನು ಸೇರ್ಪಡೆ ಮಾಡಿದರು. ನಂತರ ಸುರತ್ ಅವರು ಸಂಪಾದರಾಗಿದ್ದು ಎರಡನೆಯ ಭಾಗವನ್ನು ಹೊರತಂದರು.

ಬ್ರಿಟಿಷರು ದೇಶೀಯ ರಾಜರಿಂದ ಪಡೆದಮೇಲೆ ಬಳ್ಳಾರಿ ಜಿಲ್ಲೆಯನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಲಾಯಿತು. ಉಳಿದ ರಾಜ್ಯಗಳಂತೆ ಮ್ಯಾನ್ಯುಯೇಲ್‌ಗಳನ್ನು ತಯಾರಿಸಲು ಸರ್ಕಾರ ನಿರ್ದೇಶಿಸಿದ್ದು ಬಳ್ಳಾರಿ ಜಿಲ್ಲೆಯ ಗ್ರಂಥ ರಚನೆಗಾಗಿ ಜಾನ್ ಕೆಲ್‌ಸಲ್ ಅವರಿಗೆ ಸೆಪ್ಟಂಬರ್ ೯, ೧೮೬೯ರಲ್ಲಿ ಒಪ್ಪಿಸಲಾಯಿತು. ಆ ವೇಳೆಗೆ ಮದ್ರಾಸ್ ಮತ್ತು ವಿಶಾಖಪಟ್ಟಣ ಜಿಲ್ಲೆಯ ಗ್ಯಾಸೆಟಿಯರ್‌ಗಳು ಬಂದಿದ್ದವು ಕೆಲ್‌ಸಲ್ ಅವರಿಗೆ ಬಂದ ಮುಖ್ಯ ಸಂದೇಹ ಪದಗಳ ಉಚ್ಚಾರಣೆ ಮತ್ತು ಕಾಗುಣಿತದ ಬಗ್ಗೆ. ಅದನ್ನು ಗ್ರಂಥದ ಮುನ್ನುಡಿಯಲ್ಲಿ ಉದಾಹರಣೆಯ ಸಹಿತವಾಗಿ ವಿವರಿಸಿದ್ದಾರೆ. ಗ್ರಂಥ ೧೮೭೨ರಲ್ಲಿ ಪ್ರಕಟವಾಯಿತು. ಗ್ಯಾಸೆಟಿಯರ್‌ನಲ್ಲಿ ಹಲವಾರು ಶೀರ್ಷಿಕೆ ಗಳು ಉಪಶೀರ್ಷಿಕೆಗಳಿಂದ ವಿವರಣೆಯಿದೆ. ಮುಂದೆ ಬಳ್ಳಾರಿ ಜಿಲ್ಲೆ ಅನಂತಪುರ ಕಲೆಕ್ಟರೊಲ್‌ನಿಂದ ಬೇರೆಯಾಗಿದ್ದು ಹಾಗೂ ಹಿಂದಿನ ಗ್ರಂಥ ಪ್ರಕಟವಾಗಿ ಮೂವತ್ತು ವರ್ಷಗಳ ಮೇಲಾಗಿದ್ದು ಮತ್ತೆ ನವೀಕರಿಸಲು ವಿಲಿಯಂ ಫ್ರಾನ್ಸಿಸ್‌ಗೆ ಆದೇಶ ನೀಡಲಾಯಿತು. ಆ ವೇಳೆಗೆ ಇನ್ನೂ ಮೂರು ಬಾರಿ ಜನಗಣತಿಯಾಗಿದ್ದು ಇನ್ನಷ್ಟು ಹೊಸ ವಿಷಯಗಳು ಸೇರ್ಪಡೆಯಾಗಿದ್ದು ೧೯೦೪ರಲ್ಲಿ 'ಬಳ್ಳಾರಿ ಜಿಲ್ಲಾ ಗ್ಯಾಸೆಟಿಯರ್' ಎಂಬ ಶೀರ್ಷಿಕೆಯಲ್ಲಿ ಫ್ರಾನ್ಸಿಸ್ ಅವರು ಹೊರತಂದರು.

ಹೈದರಾಬಾದ್ ಕರ್ನಾಟಕಕ್ಕೆ ಸಂಬಂಧಿಸಿದಂತೆ ರಾಯಚೂರು, ಗುಲ್ಬರ್ಗಾ ಮತ್ತು ಬೀದರ್ ಜಿಲ್ಲೆಗಳ ಗ್ಯಾಸೆಟಿಯರ್‌ಗಳು ಪ್ರತ್ಯೇಕವಾಗಿ ಮೂರು ಸಂಪುಟಗಳಲ್ಲಿ ಪ್ರಕಟವಾಗಿದ್ದು ಅವುಗಳ ಪುರವಣಿಗಳನ್ನು ಇಲಾಖೆಯಿಂದ ಪುನರ್‌ಮುದ್ರಿಸಲಾಯಿತು. ಈ ಸಂಪುಟಗಳು ಇಂಗ್ಲೀಷ್ ಮತ್ತು ಉರ್ದು ಭಾಷೆಗಳಲ್ಲಿದ್ದು ಕೇವಲ ಅಂಕಿ ಅಂಶಗಳಿಂದ ಕೂಡಿದ್ದಾಗಿದೆ.

ರೈಸ್ ಅವರು ಅಂದಿನ ಮೈಸೂರು ರಾಜ್ಯಕ್ಕೆ ಸಂಬಂಧಿಸಿದಂತೆ ಎರಡನೆಯ ಮುದ್ರಣ ಹೊರತಂದ ಮೇಲೆ ಮೂವತ್ತು ವರ್ಷಗಳ ನಂತರ ನಾಲ್ವಡಿ ಕೃಷ್ಣರಾಜರ ಕಾಲದಲ್ಲಿ ಇನ್ನಷ್ಟು ವಿಸ್ತಾರವಾಗಿ ಹಲವಾರು ಸಂಪುಟಗಳಲ್ಲಿ ರಾಜ್ಯಕ್ಕೆ ಸಂಬಂಧಿಸಿದಂತೆ ಗ್ಯಾಸೆಟಿಯರ್ ಸಂಪುಟಗಳನ್ನು ಹೊರತರಲು ಯೋಜನೆ ರೂಪಿಸಿದ್ದು ಅಂತೆಯೇ ಸಿ. ಹಯವದನರಾವ್ ಅವರನ್ನು ಸಂಪಾದಕರಾಗಿ ನೇಮಿಸಲಾಯಿತು. 'ಮೈಸೂರ್ ಗ್ಯಾಸೆಟಿಯರ್' ಎಂಬ ಶೀರ್ಷಿಕೆಯಲ್ಲಿ ಐದು ಸಂಪುಟಗಳನ್ನು ಒಟ್ಟಾರೆಯಾಗಿ ಎಂಟು ಭಾಗಗಳಲ್ಲಿ ೧೯೨೭– ೩೦ರ ಅವಧಿಯಲ್ಲಿ ಪ್ರಕಟಿಸಲಾಯಿತು. ಗ್ರಂಥಗಳ ವಿಂಗಡಣೆ ಈ ರೀತಿ ಇದೆ. ಸಂಪುಟ–೧ : ವಿವರಣೆ; ಸಂ–೨, ಭಾಗ–೧ : ಇತಿಹಾಸ; ಭಾಗ–೨ : ಇತಿಹಾಸ (ಮುಂದುವರಿದುದು); ಭಾಗ–

೩ : ಮಧ್ಯಕಾಲೀನ (ಇತಿಹಾಸ); ಭಾಗ-೪ : ಆಧುನಿಕ (ಇತಿಹಾಸ) ; ಸಂ-೩ : ವಾಣಿಜ್ಯ (ಎಕನಾಮಿಕ್) (ಕೃಷಿ, ನೀರಾವರಿ, ಕೈಗಾರಿಕೆ ಇತ್ಯಾದಿಗಳನ್ನು ಒಳಗೊಂಡಂತೆ) ; ಸಂ-೪ : ಆಡಳಿತ ; ಸಂ-೫ : ಗ್ಯಾಸೆಟಿಯರ್ (ಅಂದಿನ ಎಂಟು ಜಿಲ್ಲೆಗಳಿಗೆ ಸಂಬಂಧಿಸಿದಂತೆ ಆಯಾ ಜಿಲ್ಲೆಗಳ ವಿವರಣೆ ಮತ್ತು ಪ್ರೇಕ್ಷಣೀಯ ಸ್ಥಳಗಳು) (ಗ್ಯಾಸೆಟಿಯರ್ ಎಂದರೆ 'ದೇಶಕೋಶ' ಎಂಬ ಅರ್ಥವಿದ್ದು ಒಂದು ಹಳ್ಳಿಯ, ಊರಿನ, ಪಟ್ಟಣದ ಅಥವ ಜಿಲ್ಲೆಯನ್ನು ಕುರಿತು ಸಮಗ್ರವಾದ ಮಾಹಿತಿಯನ್ನು ನೀಡುವುದು ಎಂಬ ವಿವರಣೆಯಿದೆ. ಮುಂದೆ ರಾಷ್ಟ್ರಮಟ್ಟದಲ್ಲಿ ಗ್ರಂಥಗಳನ್ನು ಹೊರತಂದಾಗ ಬೇರೆ ಬೇರೆ ಅಧ್ಯಾಯಗಳಲ್ಲಿ ವಿವರಗಳು ಇರುವುದರಿಂದ ಕೊನೆಯ ಅಧ್ಯಾಯಕ್ಕೆ 'ಪ್ರೇಕ್ಷಣೀಯ ಸ್ಥಳಗಳು' ಎಂದಷ್ಟೇ ಹೆಸರಿಸಿದ್ದು, ಆಯಾ ಜಿಲ್ಲೆಯ ಪ್ರಮುಖ ಸ್ಥಳಗಳ ವಿವರವನ್ನು ಅಕಾರಾದಿಯಾಗಿ ನೀಡಿದೆ.) ಇಡೀ ಸಂಪುಟಗಳಿಗೆ ಹಯವದನರಾಯರು 'ಹೊಸ ಆವೃತ್ತಿ' (ನ್ಯೂ ಎಡಿಷನ್) ಎಂದು ಹೆಸರಿಸಿದ್ದು ಪ್ರಾಯಶ ರೈಸ್ ಅವರ ಗ್ರಂಥಗಳನ್ನು ಗಮನದಲ್ಲಿ ಇರಿಸಿಕೊಂಡು ಹೇಳಿದ್ದಿರಬಹುದು. ಈ ಸಂಪುಟಗಳನ್ನು ಇಲಾಖೆಯಿಂದ ೨೦೧೨ರಲ್ಲಿ ಪುನರ್ ಮುದ್ರಿಸಲಾಗಿದೆ.

ಸ್ವಾತಂತ್ರ್ಯ ನಂತರ ಇಡೀ ಭಾರತಕ್ಕೆ ಏಕರೂಪದಲ್ಲಿ ಗ್ಯಾಸೆಟಿಯರ್ ಗ್ರಂಥಗಳನ್ನು ಹೊರತರಲು ಯೋಜಿಸಲಾಯಿತು. ಅದಕ್ಕಾಗಿ ಕೇಂದ್ರ ಸರ್ಕಾರ ಇಂದು ಪ್ರತ್ಯೇಕ ಇಲಾಖೆಯನ್ನು ೧೯೫೫ರಲ್ಲಿ ತೆರೆಯಿತು. ಹಾಗೂ ಒಂದು ಮಾರ್ಗದರ್ಶಿ ಸೂತ್ರವನ್ನು ಅಳವಡಿಸಿಕೊಂಡಿತು. ಆಯಾ ರಾಜ್ಯಗಳ ಗ್ಯಾಸೆಟಿಯರ್ ತಯಾರಿಕೆಯ ವೆಚ್ಚಕ್ಕೆ ಕೇಂದ್ರದಿಂದ ಕೆಲಮಟ್ಟಿನ ಧನಸಹಾಯ ನೀಡಲಾಯಿತು. ಅದರಂತೆ ೧೯೬೫ರಲ್ಲಿ ಕರ್ನಾಟಕ ರಾಜ್ಯ (ಅಂದಿನ ಮೈಸೂರು ರಾಜ್ಯ) ದಲ್ಲಿಯೂ ಗ್ಯಾಸೆಟಿಯರ್ ಇಲಾಖೆ ಆರಂಭವಾಯಿತು. ಪ್ರಥಮ ಮುಖ್ಯ ಸಂಪಾದಕರಾಗಿ ಸರ್ಕಾರಿ ಸೇವೆಯಲ್ಲಿದ್ದ ಬಿ.ಎನ್. ಶ್ರೀಸತ್ಯನ್ ಅವರನ್ನು ನೇಮಿಸಿತು. ಆ ವೇಳೆಗೆ ಮುಂಬಯಿ ಪ್ರಾಂತದಲ್ಲಿದ್ದ ಧಾರವಾಡ ಜಿಲ್ಲೆ ಕರ್ನಾಟಕಕ್ಕೆ ಸೇರಿತು. ಆದರೆ ಮುಂಬಯಿ ಸರ್ಕಾರ ಅಲ್ಲಯ ಮುಖ್ಯ ಸಂಪಾದಕರಾಗಿದ್ದ ಎಂ.ಆರ್. ಪಲಾಂದೆ ಅವರು ೧೯೬೫ರಲ್ಲಿ ಹೊರತಂದಿದ್ದ ಧಾರವಾಡ ಜಿಲ್ಲೆಯ ಗ್ಯಾಸೆಟಿಯರ್‌ನ್ನು ಮುದ್ರಿಸಿ ಬಿಕರಿಗೆ ಇರಿಸಿತ್ತು. ಉಳಿದ ಪ್ರತಿಗಳನ್ನು ಕರ್ನಾಟಕ ಸರ್ಕಾರಕ್ಕೆ ವರ್ಗಾಯಿಸಿತು. ಅವುಗಳನ್ನು ಇಲಾಖೆಗೆ ಮಾರಾಟ ಮಾಡಲು ನೀಡಲಾಯಿತು.

ಶ್ರೀಸತ್ಯನ್ ಅವರ ಸಂಪಾದಕತ್ವದಲ್ಲಿ ಕೊಡಗು (೧೯೬೫), ಬಿಜಾಪುರ (೧೯೬೬), ಗುಲಬರ್ಗಾ (೧೯೬೭) ಮತ್ತು ಚಿತ್ರದುರ್ಗ (೧೯೬೭) ಸಂಪುಟಗಳನ್ನು ತರಲಾಯಿತು. ನಂತರ ಮುಖ್ಯ ಸಂಪಾದಕರಾದ ಕೆ. ಅಭಿಶಂಕರ್ ಅವರು ಮಂಡ್ಯ (೧೯೬೮), ಕೋಲಾರ (೧೯೫೮), ತುಮಕೂರು (೧೯೬೯), ರಾಯಚೂರು (೧೯೭೦), ಹಾಸನ (೧೯೭೧), ಬಳ್ಳಾರಿ (೧೯೭೨), ದಕ್ಷಿಣ ಕನ್ನಡ (೧೯೭೪), ಶಿವಮೊಗ್ಗ (೧೯೭೬), ಬೀದರ್ (೧೯೭೬) ಮತ್ತು ಚಿಕ್ಕಮಗಳೂರು (೧೯೭೭) ಸಂಪುಟಗಳನ್ನು ಪ್ರಕಟಿಸಿದರು. ಅಭಿಶಂಕರ್ ಅವರು ೧೯೮೧ರಲ್ಲಿ ನಿವೃತ್ತರಾದರು. ಆದರೆ ಆ ವೇಳೆಗೆ ಕೇಂದ್ರ ಇಲಾಖೆಯಿಂದ ಬಂದಿದ್ದ ಸೂಚನೆಯ ಮೇರೆಗೆ ರಾಜ್ಯ ಗ್ಯಾಸೆಟಿಯರ್ ಸಂಪುಟ ತಯಾರಿಸಲು ಸಿದ್ಧತೆ ಮಾಡಿಕೊಳ್ಳಲಾಗಿತ್ತು. ಅಲ್ಲದೆ ಉತ್ತರ ಕನ್ನಡ ಜಿಲ್ಲೆಯ ಸಂಪುಟಕ್ಕೂ ಪತ್ರ ವ್ಯವಹಾರ ಮತ್ತು ಮಾಹಿತಿಗಳ ಸಂಗ್ರಹ ನಡೆಸಿದ್ದರು. ನಂತರ ಕೆಲ ತಿಂಗಳು ಇಲಾಖೆಯ ಹಿರಿಯ ಸಂಪಾದಕರಾಗಿದ್ದ ಎಸ್.ವಿ. ರಂಗನಾಥ್ ಅವರು ಮುಖ್ಯ ಸಂಪಾದಕರಾದರೂ ರಾಜ್ಯ ಸಂಪುಟದ ಕಾರ್ಯ ಮುಂದುವರಿಯಿತು.

೧೯೮೧ರಲ್ಲಿ ಸೂರ್ಯನಾಥ ಯು. ಕಾಮತ್ ಅವರನ್ನು ಮುಖ್ಯ ಸಂಪಾದಕರಾಗಿ ಸರ್ಕಾರ ನೇಮಿಸಿತು. ಅವರು ರಾಜ್ಯ ಗ್ಯಾಸೆಟಿಯರ್‌ನ ಇಂಗ್ಲೀಷ್ ಆವೃತ್ತಿಯ ಮೊದಲ ಸಂಪುಟ (೧೯೮೨), ಎರಡನೆಯ ಸಂಪುಟ (೧೯೮೩) ಮತ್ತು ಅದರ ಕನ್ನಡ ಆವೃತ್ತಿ ಭಾಗ ೧ (೧೯೮೪), ಭಾಗ ೨ (೧೯೮೫), ಭಾಗ ೩ (೧೯೮೬) ಗಳನ್ನು ಹೊರತಂದರು. ಇದರೊಂದಿಗೆ ಜಿಲ್ಲಾ ಸಂಪುಟಗಳ ಕಾರ್ಯವೂ ನಡೆಯುತ್ತಿದ್ದು, ಉತ್ತರ ಕನ್ನಡ (೧೯೮೫), ಬೆಳಗಾವಿ (೧೯೮೭), ಮೈಸೂರು (೧೯೮೮), ಬೆಂಗಳೂರು (೧೯೮೯) ಹಾಗೂ ಹೊಸದಾಗಿ ರೂಪಿತವಾಗಿದ್ದ ಬೆಂಗಳೂರು ಗ್ರಾಮಾಂತರ (೧೯೯೦) ಗಳನ್ನು ಪ್ರಕಟಿಸುವುದರೊಂದಿಗೆ ಅಂದಿನ ಕರ್ನಾಟಕದ ಎಲ್ಲ ಜಿಲ್ಲೆ ಗಳ ಸಂಪುಟಗಳು (೧೯+೧) ಪ್ರಥಮಬಾರಿಗೆ ಪ್ರಕಟಣೆಯನ್ನು ಕಂಡಿತು. ಆ ವೇಳೆಗೆ-ಮಹಾರಾಷ್ಟ್ರದ ವಿನಾ- ಉಳಿದ ಯಾವ ರಾಜ್ಯಗಳೂ ತನ್ನ ಎಲ್ಲ ಜಿಲ್ಲೆಗಳ ಗ್ಯಾಸೆಟಿಯರ್‌ಗಳನ್ನು ಪ್ರಕಟಿಸಿರಲಿಲ್ಲ ಎಂಬುದು ನಮ್ಮ ರಾಜ್ಯದ ಹೆಚ್ಚುಗಾರಿಕೆ. ಇಂದಿಗೂ ಅನೇಕ ರಾಜ್ಯಗಳು ತಮ್ಮ ಸಮಸ್ತ

ಸಂಪುಟಗಳನ್ನು ಹೊರತಂದಿಲ್ಲ. ನೆರೆಯ ತಮಿಳುನಾಡು ಹೊಸ ಆವೃತ್ತಿಯಲ್ಲಿ ಮೂರು ಅಥವ ನಾಲ್ಕು ಗ್ರಂಥಗಳನ್ನು ಹೊರತಂದಿವೆ. ಅದಕ್ಕೆ ಮುಖ್ಯ ಕಾರಣ ಅಖಿಲ ಭಾರತದ ಗ್ಯಾಸೆಟಿಯರ್‌ಗಳು ಇಂಗ್ಲೀಷ್ ಭಾಷೆಯಲ್ಲಿರಬೇಕೆಂಬ ಕೇಂದ್ರದ ಆದೇಶ. ಅಂತೆಯೇ ತಮಿಳುನಾಡು ತಾನು ಪ್ರಕಟಿಸಿರುವ ಕೆಲವೇ ಪುಸ್ತಕಗಳ ತಮಿಳು ಅನುವಾದವನ್ನು ಹೊರತಂದಿದೆ. ತಾನು ಪ್ರಕಟಿಸಿದ ಎಲ್ಲ ಗ್ರಂಥಗಳನ್ನು ಉಳಿದೆಲ್ಲ ರಾಜ್ಯಗಳಿಗೆ ತಲಾ ಮೂರು ಪ್ರತಿಗಳನ್ನು ಉಚಿತವಾಗಿ ಕಳಿಸಿಕೊಡಬೇಕೆಂದು ಕೇಂದ್ರದ ಇಲಾಖೆ ಸೂಚಿಸಿತ್ತು. ಮೊದಲಿಗೆ ನಮ್ಮ ಗ್ಯಾಸೆಟಿಯರ್‌ಗಳು ಬೇರೆ ರಾಜ್ಯಗಳೊಂದಿಗೆ ವಿನಿಮಯ ಆಗುತ್ತಿದ್ದು ನಮ್ಮ ರಾಜ್ಯದ ಇಲಾಖೆಯಲ್ಲಿಯೂ ಒಂದು ಅಪೂರ್ವ ಸಂಗ್ರಹವಿದೆ. ಈಚೆಗೆ ಎಲ್ಲ ರಾಜ್ಯಗಳಿಗೆ ಕಳಿಹಿಸಲು ಅಂಚೆ ವೆಚ್ಚ ದುಬಾರಿಯಾಗುತ್ತದೆ ಎಂದೂ ಸರ್ಕಾರ ನಮಗೆ ನೀಡುವ ಅನುದಾನದ ಬಹುಪಾಲು ವೆಚ್ಚ ಅಂಚೆ ಹಾಸಲಿಗೇ ತಗಲುತ್ತದೆ ಎಂದು ಹೇಳಿ ವಿನಿಮಯ ವನ್ನು ಸ್ತಬ್ಧಗೊಳಿಸಿದೆ.

ಮೊದಲಿನಿಂದಲೂ ಗ್ಯಾಸೆಟಿಯರ್‌ಗಳು ಜಿಲ್ಲಾ ಆಡಳಿತಾಧಿಕಾರಿಗೇ ಮೀಸಲು ಎಂಬ ಭಾವನೆ ಇತ್ತು. ಆದರೆ ಸ್ಥಳೀಯರು ಆಸಕ್ತಿವಹಿಸಿದ್ದು ಕನ್ನಡದಲ್ಲಿ ಸಂಪುಟಗಳನ್ನು ಹೊರತರಲು ಸೂರ್ಯನಾಥ ಕಾಮತರು ಕಾರಣರಾದರು. ಅಂತೆಯೇ ಕೊಡಗಿನಿಂದ ಆರಂಭಿಸಿ ತಿದ್ದಿ ಬೆಳೆಸಿದ ಗ್ರಂಥಗಳು ೧೯೯೨ರಿಂದ ಆರಂಭಿಸ ಲಾಯಿತು. ಸುತರಾಂ ಕನ್ನಡ ಬಾರದ ವಿಧಾನಸೌಧದಲ್ಲಿ ಕುಳಿತ ಅಧಿಕಾರಿಗಳು ಇಂಗ್ಲೀಷ್ ಅನುವಾದ ವನ್ನೂ ತರಲು ಸೂಚಿಸಿದ್ದು ೧೯೯೩ರಲ್ಲಿ ಕಾಮತರೇ ಕೊಡಗಿನ ಇಂಗ್ಲೀಷ್ ಆವೃತ್ತಿಯನ್ನು ತಂದರು. ರಾಜ್ಯ ಗ್ಯಾಸೆಟಿಯರ್ ತಂದು ಹತ್ತು ವರ್ಷಗಳಾದ್ದರಿಂದ ಅದಕ್ಕೆ ಪುರವಣಿ (ಸಪ್ಲಿಮೆಂಟ್) ಯನ್ನು ಇಂಗ್ಲೀಷ್‌ನಲ್ಲಿ (೧೯೯೪) ಮತ್ತು ಕನ್ನಡದಲ್ಲಿ (೧೯೯೬), ಧಾರವಾಡ (ಕನ್ನಡ-೧೯೯೫) ಹ್ಯಾಂಡ್ ಬುಕ್ ಆಫ್ ಕರ್ನಾಟಕವನ್ನು (೧೯೯೬) ರಲ್ಲೂ ಕಾಮತರೇ ತಂದರು. ಮುಂದೆ ಎಂ.ಬಿ. ಪಾಟೀಲರು ಕರ್ನಾಟಕ ಕೈಪಿಡಿ (೧೯೯೬) ಮತ್ತು ಗುಲಬರ್ಗಾ (ಕನ್ನಡ-೧೯೯೬)ಪ್ರಕಟಿಸಿದರು. ಆರ್. ಮುನಿಸ್ವಾಮಿ ಅವರು ವಿಜಾಪುರ (ಕನ್ನಡ-೧೯೯೯) ತಂದರು. ಮುಂದೆ ಇಲಾಖೆಗೆ ಆಡಳಿತಾಧಿಕಾರಿ (ಕರ್ನಾಟಕ ಆಡಳಿತ ಸೇವೆ)ಗಳಷ್ಟೇ ಬಂದಿದ್ದು (ಇಂದಿಗೂ) ಅವರಿಗೆ ಗ್ರಂಥಗಳ ಪ್ರಾಮುಖ್ಯತೆಯ ಅರಿವಿಲ್ಲದೇ ಜವಾಬ್ದಾರಿಗಳು ಹಿರಿಯ ಸಂಪಾದಕರ ಹೆಗಲಿಗೆ ವರ್ಗ ಗೊಂಡಿತು. ಕಾಮತರು ನಿವೃತ್ತರಾದ ಮೇಲೆ ಈ ವರೆಗೆ (ಡಿಸೆಂಬರ್-೨೦೧೨) ಸುಮಾರು ಮಂದಿ ಆಡಳಿತಗಾರರು ಬಂದಿದ್ದು ಗ್ರಂಥಗಳ ಪ್ರಕಟಣೆ ನಿರಂತರವಾಗಿ ಮುಂದುವರಿದಿದೆ. ಅಂತೆಯೇ ಧಾರವಾಡ (ಆಂಗ್ಲ-೨೦೦೩), ಗುಲಬರ್ಗಾ (ಆಂಗ್ಲ).

**ತಯಾರಿಕೆ**

ಗ್ಯಾಸೆಟಿಯರ್ ತಯಾರಿಕೆ ಒಬ್ಬ ವ್ಯಕ್ತಿಯಿಂದ ಆಗುವಂಥಹದಲ್ಲ. ಅದಕ್ಕೊಂದು ಕಾರ್ಯಾಲಯ ಹಾಗೂ ಸಿಬ್ಬಂದಿ ವರ್ಗದವರು ಇರಬೇಕಾದುದು ಅವಶ್ಯಕ. ಸ್ವಾತಂತ್ರ್ಯಕ್ಕೆ ಮೊದಲು ಸರಕಾರವೇ ಯಾವ ಸಂಪುಟಗಳನ್ನು ತಯಾರಿಸಬೇಕೆಂದು ನಿರ್ದೇಶಿಸುತ್ತಿತ್ತು. ಸ್ವಾತಂತ್ರ್ಯಾನಂತರ ಪ್ರತಿ ವರ್ಷ ಕ್ರಿಯಾ ಯೋಜನೆಯನ್ನು ತಯಾರಿಸಿ ಸರ್ಕಾರಕ್ಕೆ ಕಳಿಸಿ ಆಯುವ್ಯಯದಲ್ಲಿ ಒಪ್ಪಿಗೆ ತೆಗೆದುಕೊಳ್ಳಬೇಕಿದೆ. ನಂತರ ಸಣ್ಣಪುಟ್ಟ ಬದಲಾವಣೆಗಳನ್ನು ಮಾಡುವ ನಿರ್ಧಾರ ಆಯಾ ಇಲಾಖೆಯ ಕಾರ್ಯದರ್ಶಿಗಳಿಗೆ ಸಂಬಂಧಿಸಿದ್ದು (ಅನೇಕ ರಾಜ್ಯಗಳಲ್ಲಿ ಗ್ಯಾಸೆಟಿಯರ್‌ಗೆಂದೇ ಪ್ರತ್ಯೇಕ ಇಲಾಖೆ ಇಲ್ಲ. ಅವರುಗಳು ತಮ್ಮ ಯೋಜನೆ ಯಲ್ಲಿಯೇ ಇದನ್ನೂ ಸೇರ್ಪಡೆ ಮಾಡಿರುತ್ತಾರೆ. ನಮ್ಮ ರಾಜ್ಯದಲ್ಲಿಯೂ ಮೊದಲಿಗೆ ವಿದ್ಯಾ ಇಲಾಖೆಯಲ್ಲಿ ಆ ನಂತರ ಪ್ರವಾಸೋದ್ಯಮ ಇಲಾಖೆಯ ಸುಪರ್ದಿನಲ್ಲಿದ್ದು ನಂತರ ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯದ ಅಧೀನದಲ್ಲಿದೆ)

ಹಿಂದೆ ಹೇಳಿದಂತೆ ೧೮೬೭ರಲ್ಲಿ ಅಂದಿನ ಹಳೆಯ ಮೈಸೂರು ರಾಜ್ಯಕ್ಕೆ ಸಂಬಂಧಿಸಿದ ಕಿರು ಪ್ರಮಾಣದ ಗ್ಯಾಸೆಟಿಯರ್‌ಗಳನ್ನು ತಯಾರಿಸಲು ಚೀಫ್ ಕಮಿಷನರ್ ಆಗಿದ್ದ ಸ್ಯಾಡರ್ಸ್ ಅವರು ಆಯಾ ಜಿಲ್ಲೆಗಳ (ಪ್ರಾಂತಗಳ) ಡಿವಿಷನಲ್ ಕಮಿಷನರ್‌ಗಳಿಗೆ ನಿರ್ದೇಶಿಸಿದ್ದರು. ೧೮೬೭ರ ಕೆಲವೇ ಪುಟಗಳ ಗ್ಯಾಸೆಟಿಯರ್ ಗಳಲ್ಲಿ ೧. ಆಯಾ ಜಿಲ್ಲೆಗಳು ಅದರ ಉಪವಿಭಾಗ, ಜನಸಂಖ್ಯೆ, ರೆವೆನ್ಯೂ ೨. ಮೇಲ್ಮೈಲಕ್ಷಣಗಳು : ನದಿ, ತೊರೆಗಳು, ಬೆಟ್ಟ-ಗುಡ್ಡಗಳು, ಅರಣ್ಯ, ಉಳುಮೆಯ ಭೂಮಿ, ನೈಸರ್ಗಿಕ ಇತಿಹಾಸ. ೩. ಐತಿಹ್ಯಗಳು ೪. ಇತಿಹಾಸ ೫. ಜನಸಂಖ್ಯೆ-ಗೆ ಅನುಗುಣವಾಗಿ-ಪ್ರಮುಖ ಜಾತಿಗಳು ಅವರ ಕಸಬು - ವಾಣಿಜ್ಯಗಳು, ನಡವಳಿಕೆ, ಆಚರಣೆಗಳು ಮತ್ತು ಉಡುಗೆ ತೊಡುಗೆಗಳು. ೬. ಉತ್ಪಾದನೆ ೭. ಕೃಷಿ: ಭೂ ಗುಣ, ಬೆಳೆಗಳು ಮತ್ತು ಕೃಷಿ ಪದ್ಧತಿ, ಬೆಲೆ, ಕಳೆದ ಹತ್ತುವರ್ಷಗಳ ಕಂದಾಯ, ಗ್ರಾಮದ ಪದ್ಧತಿ.

೮. ತೆರಿಗೆಗಳು ೯. ನೀರಾವರಿ: ಸಂವಹನ, ಪುರಾತತ್ವದ ಉಳಿಕೆ, ನ್ಯಾಯ, ಆರಕ್ಷಕರು, ವಿದ್ಯಾಭ್ಯಾಸ, ಅರಣ್ಯ ಇಲಾಖೆ, ಪ್ರಮುಖ ಪಟ್ಟಣಗಳು ಎಂದು ವಿಭಾಗಿಸಿಕೊಳ್ಳಲಾಗಿದೆ.

ಆ ನಂತರ ಬಿ.ಎಲ್. ರೈಸ್ ಅವರಿಗೆ ೧೮೭೩ರಲ್ಲಿ ಇಡೀ ರಾಜ್ಯಕ್ಕೆ ಸಂಬಂಧಿಸಿದಂತೆ ಮೈಸೂರು ಮತ್ತು ಕೊಡಗಿನ ಗ್ಯಾಸೆಟಿಯರ್‌ನ್ನು ತಯಾರಿಸಲು ಕೇಂದ್ರ ಸರ್ಕಾರ ಆದೇಶಿಸಿ ಅವರನ್ನು ಸಂಪಾದಕರಾಗಿ ನೇಮಿಸಿತು. (ಅವರು ತಮ್ಮನ್ನು 'ಸಂಗ್ರಹಕಾರ– ಕಂಪೈಲರ್– ಎಂದು ಕರೆದುಕೊಂಡಿದ್ದಾರಲ್ಲದೆ ಸಂಪುಟದ ಮೇಲೆಯೂ ಅದೇ ರೀತಿ ಹೇಳಿಕೊಂಡಿದ್ದಾರೆ. ವಿದ್ಯಾಭ್ಯಾಸ ಇಲಾಖೆ ಸೇರ್ಪಡೆಯಾದ ಮೇಲೆ ಹೆಚ್ಚಿನ ಹೊಣೆಗಾರಿಕೆ ಇದಾಗಿತ್ತು. ಆದರೂ ಮಾಹಿತಿ ಸಂಗ್ರಹಕ್ಕಾಗಿ ಎಲ್ಲ ಜಿಲ್ಲೆಗಳಿಗೂ ರೈಸ್ ಅವರೇ ಹೋಗಿ ಬಂದರು. ಇಂದಿಗೂ ಕೆಲವು ರಾಜ್ಯದ ಮುಖ್ಯಸ್ಥರು ತಮ್ಮ ಕಚೇರಿಗೇ ವಿವಿಧ ಇಲಾಖೆಗಳಿಂದ ಮಾಹಿತಿ ತರಿಸಿಕೊಂಡು ಕೇವಲ ಅಂಕಿ– ಅಂಶಗಳನ್ನಷ್ಟೇ ನೀಡಿ ಗ್ರಂಥಗಳನ್ನು ಹೊರತರುವುದುಂಟು. ಕ್ಷೇತ್ರಕಾರ್ಯ (ಫೀಲ್ಡ್ ವರ್ಕ) ಮಾಡದಿದ್ದಲ್ಲಿ ಸಂಪುಟಗಳಿಗೆ ಒಂದು ಅಧೀಕೃತತೆ ಬರಲಾರದು. ರೈಸ್ ಅವರಿಗೆ ಒಪ್ಪಿಸಿದಾಗ ಕೊಡಗು ಜಿಲ್ಲೆಯನ್ನೂ ಒಳಗೊಂಡಿರಬೇಕು ಮತ್ತು ಯೋಜನೆ ಎರಡು ವರ್ಷಗಳಲ್ಲಿ ಮುಗಿಯಬೇಕು ಎಂದು ಸರ್ಕಾರ ನಿರ್ದೇಶಿಸಿತ್ತು. ರೈಸ್ ಅವರೂ ಸಹ ತಮಗೆ ಆವರೆಗೆ ಪ್ರಕಟವಾದ ಗ್ಯಾಸೆಟಿಯರ್ ಗ್ರಂಥಗಳನ್ನು ಪರಿಶೀಲನೆಗೆ ನೀಡಬೇಕು, ವಿವಿಧ ಇಲಾಖೆಗಳಿಂದ ಮಾಹಿತಿ ನೀಡುವಂತೆ ಪತ್ರ ಬರೆಯಬೇಕು ಮತ್ತು ಜನಗಣತಿಯ ವಿವಿರ ಒದಗಿಸಬೇಕು ಎಂದು ಸರ್ಕಾರಕ್ಕೆ ತಿಳಿಸಿದರು. ಆದರೆ ನಿಗದಿತ ಅವಧಿಗಿಂತ ತಡವಾಗಿ ೧೮೭೬ರಲ್ಲಿ ಮೊದಲ ಸಂಪುಟ ಮತ್ತು ೧೮೭೭ರಲ್ಲಿ ಎರಡನೆಯ ಸಂಪುಟ ಪ್ರಕಟವಾಯಿತು. ಕಾರಣ ವಿದ್ಯಾಭ್ಯಾಸ ಇಲಾಖೆ, ಶಾಸನಗಳನ್ನು ಓದುವಿಕೆ, ಹಲವಾರು ಇಲಾಖೆಗಳ ಕನ್ನಡ ಭಾಷೆಯ ಪರೀಕ್ಷಕ ಇತ್ಯಾದಿ ಹೊಣೆಗಳಿಂದ ತಡವಾಯಿತು. ಮತ್ತೆ ರೈಸ್ ಅವರಿಗೆ ಪರಿಷ್ಕರಿಸಿ ಪ್ರಕಟಿಸಲು ಸರ್ಕಾರ ವಿನಂತಿಸಿದ್ದು ೧೮೯೦ರಲ್ಲಿ ಕಾರ್ಯ ಆರಂಭವಾಗಿದ್ದು ೧೮೯೭ರಲ್ಲಿ ಎರಡು ಸಂಪುಟಗಳಲ್ಲಿ ಪ್ರಕಟವಾಯಿತು. ಇದು ಪುನರ್ ಮುದ್ರಣವಲ್ಲವಾದುದರಿಂದ ಕೆಲವು ನಿಯಮಾವಳಿಗಳನ್ನು ಅವರೇ ಹಾಕಿಕೊಂಡರು. ಬದಲಾವಣೆಗೆ ಅಗತ್ಯವಿಲ್ಲದ ಪಠ್ಯಭಾಗ ಹಾಗೆಯೇ ಉಳಿಸಿಕೊಳ್ಳುವುದು, ಹಿಂದಿನ ಸಂಪುಟಕ್ಕಿಂತಲೂ ಉತ್ತಮ ವರದಿ ದೊರೆತಲ್ಲಿ ಹೊಸದು ಅಳವಡಿಸಿಕೊಳ್ಳುವುದು, ವೈಜ್ಞಾನಿಕ ಮಾಹಿತಿಗಳನ್ನು ಹೊಸಮಾಹಿತಿಗಳ ಬೆಳಕಿನಲ್ಲಿ ಪರಿಷ್ಕರಿಸುವುದು, ಹೊಸ ಬೆಳವಣಿಗೆಯ ಹಿನ್ನೆಲೆಯಲ್ಲಿ ಕೆಲವು ಪ್ಯಾರಾಗಳನ್ನು ತೆಗೆದುಹಾಕುವುದು, ಹೊಸ ವಿವರಗಳನ್ನು ಸೇರಿಸುವುದು, ಕೆಲವು ಅಂಕಿ–ಂಶಗಳನ್ನು ಬದಲಿಸುವುದರ ಮಾಲಕ ಬರಹವನ್ನು ಉತ್ತಮಗೊಳಿಸುವುದು, ಅಗತ್ಯವಿದ್ದಲ್ಲಿ ಸಂಪೂರ್ಣ ಭಾಗವನ್ನು ಪುನಾರಚಿಸುವುದು ಇವೇ ಮುಂತಾದ ಅಂಶಗಳು ಮುಂದಿನ ಸಂಪಾದಕರುಗಳಿಗೆ ಉಪಯುಕ್ತವಾಗುವಂತಾಯಿತು. ಅಧ್ಯಾಯಗಳ ವಿಂಗಡಣೆ ವೈಜ್ಞಾನಿಕವಾಗಿದ್ದು, ಸರ್ಕಾರದ ಯಾವುದೇ ಹೊಸ ಯೋಜನೆ ಆರಂಭವಾದರೂ ಅವುಗಳನ್ನು ಯಾವುದಾದರೊಂದು ಅಧ್ಯಾಯದಲ್ಲಿ ಅಳವಡಿಸಬಹುದಾ ದಷ್ಟು ಅವಕಾಶ ಕಲ್ಪಿಸಿದ್ದರು. ಈ ಅಧ್ಯಾಯಗಳೆಂದರೆ: ಭೂಲಕ್ಷಣ; ಗಿಡ, ಮರಗಳು (ಫ್ಲೋರ); ಪಶು, ಪಕ್ಷಿ, ಪ್ರಾಣಿಗಳು (ಫೌನ); ಇತಿಹಾಸ; ಜನತೆ; ಭಾಷೆ ಮತ್ತು ಸಾಹಿತ್ಯ; ಕಲೆ ಮತ್ತು ಕೈಗಾರಿಕೆ; ಆಡಳಿತ– ಇತಿಹಾಸದ ಆರಂಭದಿಂದ ಹಿಡಿದು ಕಮಿಷನರ್ ಆಡಳಿತದ ಮತ್ತು ರಾಜ್ಯ ಪುನರ್ ಪ್ರಾಪ್ತಿಯವರೆಗೆ ಮೊದಲ ಸಂಪುಟದಲ್ಲಿಯೂ ಪ್ರತ್ಯೇಕವಾಗಿ ಎಂಟು ಜಿಲ್ಲೆಗಳ ವಿವರದೊಂದಿಗೆ ಆಯಾ ಜಿಲ್ಲೆಯಲ್ಲಿಯ ಪ್ರೇಕ್ಷಣೀಯ ಸ್ಥಳಗಳ ಬಗ್ಗೆಯೂ ವಿವರಗಳನ್ನು ಎರಡನೆಯ ಸಂಪುಟದಲ್ಲಿಯೂ ನೀಡಲಾಗಿದೆ. ಎರಡೂ ಸಂಪುಟಗಳಲ್ಲಿ ಪ್ರತಿ ಅಧ್ಯಾಯಗಳಲ್ಲೂ ಹಲವಾರು ಉಪ ಅಧ್ಯಾಯಗಳಿರುವುದಲ್ಲದೆ ಆಯಾ ಅಧ್ಯಾಯಗಳಿಗೆ ಸಂಬಂಧಿಸಿದಂತೆ ಬಹುವರ್ಣದಲ್ಲಿ ನಕ್ಷೆಗಳನ್ನು ಅಳವಡಿಸಲಾಗಿದೆ. ಮತ್ತೆ ೨೦೦೧ರಲ್ಲಿ ಗ್ಯಾಸೆಟಿಯರ್ ಇಲಾಖೆಯಿಂದ ಮೂರನೇ ಮುದ್ರಣವನ್ನು ಹೊರ ತರಲಾಯಿತು. ಅದರಲ್ಲಿ ಸುಮಾರು ನೂರು ವರ್ಷಗಳಷ್ಟು ಹಿಂದಿನ ಛಾಯಾಚಿತ್ರಗಳನ್ನು ಅಳವಡಿಸಲಾಯಿತು. (ಬಿ.ಎಲ್. ರೈಸ್ ಅವರನ್ನು ಕುರಿತು ಪಿಎಚ್.ಡಿ ಅಧ್ಯಯನ ಮಾಡಿರುವ ಡಾ॥ ಎಸ್.ಎಲ್. ಶ್ರೀನಿವಾಸಮೂರ್ತಿ ಅವರು ರೈಸ್ ಅವರ ಗ್ಯಾಸಿಟಿಯರ್‌ನ ಹಿನ್ನೆಲೆ, ಸಿಬ್ಬಂದಿ ವರ್ಗ, ಸಂಬಳ–ಸಾರಿಗೆ, ಸರ್ಕಾರದೊಂದಿಗೆ ಪತ್ರವ್ಯವಹಾರ, ಅಧ್ಯಾಯಗಳ ವಿಂಗಡಣೆ ಇತ್ಯಾದಿ ಕುರಿತು ಒಂದು ಅಧ್ಯಾಯವನ್ನೇ ಮೀಸಲಿರಿಸಿದ್ದಾರೆ. ಅವುಗಳ ಪ್ರಯೋಜನ ಇಲ್ಲಿ ಪಡೆಯಲಾಗಿದೆ.)

ಅಂದಿನ ಪದ್ಧತಿಯಂತೆ ಮುಂದಿನ ಮುದ್ರಣದಲ್ಲಿ ಆವರೆಗೆ ಬಂದ ಅದರ ಹಿಂದಿನ ಮುದ್ರಣಗಳ ಮುನ್ನುಡಿ ಗಳನ್ನು ನೀಡುತ್ತಿದ್ದು ರೈಸ್ ಅವರೂ ೧೮೯೭ರ ಎರಡನೆಯ ಮುದ್ರಣದಲ್ಲಿ ಮೊದಲ ೧೮೭೬ರ ಮುದ್ರಣದ ಮುನ್ನುಡಿಯನ್ನು ನೀಡಿದ್ದಾರೆ. (೨೦೦೪ರ ಮೂರನೇ ಮುದ್ರಣದಲ್ಲಿ ಈ ಎರಡೂ ಮುನ್ನುಡಿಗಳನ್ನು ನೀಡಿದೆ).

೧೮೭೬ರಲ್ಲಿ ಆ ವರೆಗೆ ಬಂದಿದ್ದ ಅಂದಿನ ಮೈಸೂರು ರಾಜ್ಯ ಕುರಿತಾದ ಗ್ರಂಥಗಳನ್ನು ಅವುಗಳನ್ನು ಬಳಸಿಕೊಂಡ ರೀತಿಯನ್ನು ಹೇಳಿದ್ದಾರೆ. ಇಂದು ಅವರು ಹೇಳಿದ ಹಲವಾರು ಆಕರಗಳು ಲಭ್ಯವಿಲ್ಲವಾಗಿದೆ. ನಂತರ ೧೮೯೭ರಲ್ಲಿ ಹಿಂದಿನ ಆವೃತ್ತಿಯಿಂದ ಹೊರತಾದ ಸೇರ್ಪಡೆ, ಪರಿಷ್ಕರಣ, ನೆರವಾದ ಮತ್ತು ಮಾಹಿತಿ ನೀಡಿದ ಮಹನೀಯರು ಇತ್ಯಾದಿಗಳನ್ನು ಹೇಳಿದ್ದಾರೆ. ಇವೆಲ್ಲವೂ ಗ್ಯಾಸೆಟಿಯರ್‌ನ ತಯಾರಿಕೆಯಲ್ಲಿ ಎಷ್ಟು ಪರಿಶ್ರಮ ಇರಬೇಕೆಂಬುದನ್ನು ಸೂಚಿಸುತ್ತದೆ. ಎಂದರೆ ಪೂರ್ಣಪ್ರಮಾಣದ ಪ್ರಥಮ ಪ್ರಯತ್ನದಲ್ಲಿಯೇ ರೈಸ್ ಅವರು ಒಂದು ಭದ್ರವಾದ ಬುನಾದಿಯನ್ನು ಹಾಕಿದ್ದು ಮುಂದಿನವರಿಗೆ ಮಾರ್ಗದರ್ಶನವಾಯಿತು.

ಸಿ.ಹಯವದನ ರಾವ್ ಅವರು ಮೈಸೂರು ಗ್ಯಾಸೆಟಿಯರ್‌ನ ಪ್ರಥಮ ಸಂಪುಟ ೧೯೨೭ರಲ್ಲಿ ತರುವ ಮೊದಲು ಅವರಿಗೆ ಗ್ರಂಥ ತಯಾರಿಕೆಗೆ ಬಹಳಷ್ಟು ಮೊದಲೇ ನಿರ್ದೇಶಿಸಿರಬಹುದು. (ಮುಂದೆ ಸೂರ್ಯನಾಥ ಕಾಮತರು ಮುಖ್ಯ ಸಂಪಾದಕರಾಗಿ ನೇಮಿಸಿದಾಗ ಅವರು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಂದ ಶುಭ ಹಾರೈಕೆ ಬಯಸಿ ಹೋದಾಗ ಮಾಸ್ತಿ ಅವರು ಗ್ಯಾಸೆಟಿಯರ್ ಗ್ರಂಥಗಳನ್ನು ಆದಷ್ಟು ಬೇಗದಲ್ಲಿ ತರಬೇಕೆಂದೂ ಹಯವದನರಾಯರಂತೆ ಹತ್ತಾರು ವರ್ಷ ತಡಮಾಡಬಾರದೆಂದೂ ಹೇಳಿದರಂತೆ) ಆದರೆ ರಾಯರಿಗೆ ರೈಸ್ ಅವರ ಗ್ರಂಥದ ರೂಪುರೇಶೆಯ ಅರಿವು ಇದ್ದರೂ ಎಂಟು ಸಂಪುಟಗಳಲ್ಲಿ ಹೊರತರಲು ಯೋಜಿಸಿದ್ದು ಅವುಗಳಿಗೆ ಮಾಹಿತಿ ಸಂಗ್ರಹಿಸಲು ಸಾಕಷ್ಟು ಕಾಲಾವಕಾಶ ಬೇಕಿದ್ದಿರಬಹುದು. ಅವರಿಗಿದ್ದ ಸಹಾಯಕರ ಬಗ್ಗೆ ಪತ್ರಾಗಾರದಲ್ಲಿ ಹುಡುಕಬೇಕಾದ ಅವಶ್ಯಕತೆಯಿದೆ. (ಅಂದಿಗೆ ಬರುತ್ತಿದ್ದ ದಿನಪತ್ರಿಕೆಗಳು, ನಿಯತಕಾಲಿಕೆಗಳು, ಸರ್ಕಾರದ ವಿವಿಧ ಇಲಾಖೆಯ ಪ್ರಕಟಣೆಗಳು, ಗ್ಯಾಸೆಟ್‌ಗಳು, ಪುರಾತತ್ವ ಇಲಾಖೆಯ ವರದಿಗಳು-ಎಂ.ಎ.ಆರ್- ಇತ್ಯಾದಿಗಳೆಲ್ಲವನ್ನು ಸ್ವತಃ ಪರಿಶೀಲಿಸಿ ಕೆಂಪುಶಾಯಿಯಲ್ಲಿ ಗುರುತು ಹಾಕಿಕೊಂಡು ಸೂಕ್ತವಾಗಿ ಬಳಸಿಕೊಳ್ಳುತ್ತಿದ್ದರೆಂದೂ ಅವರ ನಿಧನಾನಂತರ ಸುಮಾರು ಒಂದು ಲಾರಿಯಷ್ಟು ಸಾಮಗ್ರಿಗಳನ್ನು ರದ್ದಿಗೆ ಹಾಕಲಾಯಿತೆಂದು ಅವರ ಪಕ್ಕದ ಮನೆಯಲ್ಲಿದ್ದ ನನ್ನ ಸಹೋದ್ಯೋಗಿಯೊಬ್ಬರು ತಿಳಿಸಿದ್ದುಂಟು. ಕೆಲ ವರ್ಷಗಳ ನಂತರ ನಾನು ಗ್ಯಾಸೆಟಿಯರ್ ಇಲಾಖೆಯಲ್ಲಿ ನೌಕರನಾಗಿದ್ದಾಗ ರಾಯರ ಒಬ್ಬ ಮಗ ನಮ್ಮಲ್ಲಿಗೆ ಬಂದು ಪರಿಚಯಿಸಿಕೊಂಡು ತಾವು ಸುಮಾರು ಕಾಲದಿಂದ ಅರ್ಥಶಾಸ್ತ್ರ ಕುರಿತ ನಿಯತಕಾಲಿಕೆ ತರುತ್ತಿರುವುದಾಗಿಯೂ ದೇಶ, ವಿದೇಶಗಳಲ್ಲಿ ಅದಕ್ಕೆ ಚಂದಾದಾರಗು ಇರುವುದಾಗಿಯೂ ಅವುಗಳ ಪ್ರತಿಗಳು ಮೊದಲಿನಿಂದಲೂ ಸಂಗ್ರಹಿಸಿದ್ದು, ನಮ್ಮ ಇಲಾಖೆಗೆ ಅವುಗಳನ್ನು ಉಚಿತವಾಗಿ ನೀಡಬಯಸುವುದಾಗಿಯೂ ತಿಳಿಸಿದರು. ಆದರೆ ಸ್ಥಳದ ಅಭಾವದಿಂದಾಗಿ ನಮ್ಮಲ್ಲಾಗಲೀ ಬೇರೆ ಗ್ರಂಥಾಲಯದವರಾಗಲೀ ಪಡೆಯಲಾಗಲಿಲ್ಲ. ಮುಂದೆ ಕೆಲ ದಿನಗಳಲ್ಲಿ ಅವರು ನಿಧನರಾಗಿದ್ದು ಆ ನಿಯತಕಾಲಿಕೆಗಳು ಏನಾದವೆಂದು ತಿಳಿಮು ಬರುವುದಿಲ್ಲ.) ರಾಯರು ೧೯೨೭ರಲ್ಲಿ ಪ್ರಥಮ ಸಂಪುಟ ತಂದರಾದರೂ ೧೯೩೦ರ ವೇಳೆಗೆ ಎಲ್ಲ ಎಂಟು ಸಂಪುಟಗಳನ್ನು ಪ್ರಕಟಿಸಿದ್ದರು. ಪ್ರತಿ ಸಂಪುಟಗಳಲ್ಲೂ ಮುನ್ನುಡಿಯಲ್ಲಿ ಆಯಾ ಗ್ರಂಥಗಳ ತಯಾರಿಕೆಗೆ ತಮಗೆ ನೆರವಾದವರ ಇಲಾಖೆಗಳು, ಮಹನೀಯರುಗಳು, ಗ್ರಂಥಗಳು, ಆಕರಗಳು ಇವೇ ಮುಂತಾದುವನ್ನು ದಾಖಲಿಸಿದ್ದಾರೆ. ಈ ಮಾತು ಎಲ್ಲ ಜಿಲ್ಲೆಗಳ ಎಲ್ಲ ಗ್ಯಾಸೆಟಿಯರ್ ಗ್ರಂಥಗಳಿಗೂ ಅನ್ವಯಿಸುತ್ತದೆ. ಕೆಲವೊಮ್ಮೆ ಅದೇ ಜಿಲ್ಲೆಯ ಬಗ್ಗೆ ಹಿಂದೆ ಬಂದಂತಹ ಸಂಪುಟಗಳು, ಇಲ್ಲವೇ ಆಯಾ ರಾಜ್ಯದಲ್ಲಿ ಹಿಂದೆ ಬಂದಂತಹ ಸಂಪುಟಗಳ ಬಗ್ಗೆ ಹೇಳಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಆಯಾ ಜಿಲ್ಲೆಯ ಆಡಳಿತಾಧಿಕಾರಿಗಳು ತಮ್ಮ ಕಾರ್ಯಾಲಯದ ಯಾರಾದರೊಬ್ಬ ವ್ಯಕ್ತಿಗೆ ಗ್ಯಾಸೆಟಿಯರ್ ಇಲಾಖೆಯವರು ಬಯಸಿದ ಮಾಹಿತಿಯನ್ನು ಸಂಗ್ರಹಿಸಿ ನೀಡಲು ನಿಯೋಜಿಸುತ್ತಿದ್ದುದುಂಟು.

ಸ್ವಾತಂತ್ರ್ಯಾನಂತರ ಮಾಹಿತಿ ಸಂಗ್ರಹಕ್ಕೆ ಕಷ್ಟಸಾಧ್ಯವೆನಿಸಿದೆ. ಇತಿಹಾಸ, ಸಾಹಿತ್ಯ ಮತ್ತು ಸಂಸ್ಕೃತಿ ಮತ್ತು ಪ್ರೇಕ್ಷಣೀಯ ಸ್ಥಳಗಳು ಈ ಮೂರು ಅಧ್ಯಯದ ವಿನಾ ಉಳಿದವೆಲ್ಲಾ ಆಯಾ ಇಲಾಖೆಯವರು ನೀಡುವ ಅಂಕಿ-ಸಂಖ್ಯೆ, ಮಾಹಿತಿಗಳನ್ನು ಅವಲಂಬಿಸಿದೆ. ಅನೇಕ ಸಂದರ್ಭದಲ್ಲಿ ಅವು ಜಿಲ್ಲೆಯ ಎಲ್ಲ ತಾಲೂಕು ಗಳಿಂದಲೂ ಸೂಕ್ತ ಮಾಹಿತಿ ದೊರೆಯದೆ ಅಪೂರ್ಣವಾಗುವ ಸಾಧ್ಯತೆಯಿದೆ. ಇದಕ್ಕೆ ಮುಖ್ಯಕಾರಣ ಗ್ಯಾಸೆಟಿಯರ್ ಇಲಾಖೆಯಿಂದ ಬಯಸಿದ ರೀತಿಯಲ್ಲಿ ಉಳಿದ ಇಲಾಖೆಗಳು ತನ್ನ ಕಡತವನ್ನು ಸಿದ್ದ ಮಾಡಿರುವುದಿಲ್ಲ. ಈಚೆಗೆ ಎಲ್ಲ ಇಲಾಖೆಯವರೂ ತಮ್ಮ ವಾರ್ಷಿಕ ವರದಿಯನ್ನು ಪ್ರಕಟಿಸುವುದರಿಂದ ಅವುಗಳನ್ನು ಕೆಲಮಟ್ಟಿಗೆ ಆಕರಗಳನ್ನಾಗಿ ಬಳಸಿಕೊಳ್ಳಬಹುದು. ಗ್ರಂಥವನ್ನು ಆದಷ್ಟು ಪರಿಪೂರ್ಣವಾಗಿಸಲು ಸಂಬಂಧಿಸಿದ ಸಂಪಾದಕರು ಮತ್ತು ಅನ್ವೇಷಕರು ಆಯಾ ಜಿಲ್ಲೆಯ ಇಲಾಖೆಯವರಿಗೆ ಪತ್ರ ಹಾಗೂ ನೆನಪಿನ ಪತ್ರಗಳನ್ನು

ಬರೆದು ಮತ್ತು ಆಯಾ ಜಿಲ್ಲೆಯ ಎಲ್ಲ ತಾಲೂಕುಗಳಲ್ಲಿ ವ್ಯಾಪಕವಾಗಿ ಸಂಚರಿಸಿ ಮಾಹಿತಿಗಳನ್ನು ಸಂಗ್ರಹಿಸಬೇಕಾದುದು ಅನಿವಾರ್ಯ. ಈಚೆಗೆ ಇ-ಅಂಚೆ, ಅಂತರ್‌ಜಾಲತಾಣ, ದೂರವಾಣಿಯ ಮೂಲಕ ಸಂಪರ್ಕಿಸಿ ಮಾಹಿತಿ ಪಡೆಯುವ ಸೌಲಭ್ಯವನ್ನು ಬಳಸಿಕೊಳ್ಳುವ ಸಾಧ್ಯತೆಯಿದೆ. ಇತಿಹಾಸ ಕುರಿತ ಅಧ್ಯಾಯಕ್ಕೆ ಆಯಾ ಜಿಲ್ಲೆಯ ಬಗ್ಗೆ ಬಂದಿರುವ ಇತಿಹಾಸ ಗ್ರಂಥಗಳನ್ನು ಪರಿಶೀಲಿಸುವುದಲ್ಲದೆ ಜಿಲ್ಲೆಗೆ ಸಂಬಂಧಿಸಿದ ಶಾಸನ ಸಂಪುಟಗಳನ್ನು ಬಳಸಿಕೊಳ್ಳಲಾಗುತ್ತದೆ. ಅಲ್ಲದೆ ಜಿಲ್ಲೆಯಾದ್ಯಂತ ಪ್ರವಾಸ ಮಾಡುವುದರಿಂದ ಆ ವರೆಗೆ ಪ್ರಕಟವಾಗದ ಅನೇಕ ಸಂಗತಿಗಳನ್ನು ಗುರುತಿಸಿ ಸಂಪುಟಗಳಲ್ಲಿ ಅಡಕ ಗೊಳಿಸಬಹುದು. ಸಾಹಿತ್ಯ ಮತ್ತು ಸಂಸ್ಕೃತಿ ಅಧ್ಯಾಯ ಹಿಂದಿನ ಗ್ಯಾಸೆಟಿಯರ್‌ಗಳಲ್ಲಿಯಾಗಲೀ ಸ್ವಾತಂತ್ರ್ಯ ನಂತರವೂ ಎಂಟನೇ ದಶಕದ ವರೆಗೆ ಶಿಕ್ಷಣ ಕುರಿತ ಅಧ್ಯಾಯದ ಅನುಬಂಧದಂತೆ ಬರುತ್ತಿತ್ತು. ಕೇಂದ್ರ ಗ್ಯಾಸೆಟಿಯರ್ ಇಲಾಖೆಯ ಒಂದು ಅಲಿಖಿತ ನಿಯಮದಂತೆ ಜೀವಂತವಿರುವ ಯಾವುದೇ ವ್ಯಕ್ತಿಯ ಹೆಸರನ್ನು ಗ್ರಂಥದಲ್ಲಿ ನಮೂದಿಸುವಂತಿರಲಿಲ್ಲ. ಛಾಯಾಚಿತ್ರದಲ್ಲಿಯೂ ಯಾವುದೇ ವ್ಯಕ್ತಿ ಇದ್ದಲ್ಲಿ ಅದನ್ನು ಅಳಿಸಿಬಿಡಲಾಗುತ್ತಿತ್ತು.

೧೯೮೫ರಲ್ಲಿ ಪ್ರಕಟವಾದ ಚಿಕ್ಕಮಗಳೂರು ಗ್ಯಾಸೆಟಿಯರ್‌ನಲ್ಲಿ ಪ್ರಥಮಬಾರಿಗೆಂಬಂತೆ ಸಾಹಿತ್ಯವೂ ಸೇರಿದಂತೆ ವಿವಿಧ ಕಲೆಗಳಲ್ಲಿ ಹೆಸರು ಮಾಡಿದ, ಪುರಸ್ಕೃತರಾದ ಕ್ರಿಯಾಶೀಲರಾಗಿದ್ದ ಮಹನೀಯರ ಹೆಸರುಗಳನ್ನು ಅವರ ಸಾಧನೆಯ ಸಹಿತ ನೀಡಲಾಯಿತು. ಮುಂದೆ ಆಂಗ್ಲ ಭಾಷೆಯಲ್ಲಿ ಎಲ್ಲ ಜಿಲ್ಲೆಗಳ ಸಂಪುಟಗಳು ಹೊರಬಂದಮೇಲೆ ಕನ್ನಡದಲ್ಲಿ ಮೊದಲಿಗೆ ತಂದ ಕೊಡಗು ಜಿಲ್ಲೆಯ ಸಂಪುಟದಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿಗೆ ಪ್ರತ್ಯೇಕ ಅಧ್ಯಾಯ ಮೀಸಲಿರಿಸಲಾಯಿತು. ಪ್ರೇಕ್ಷಣೀಯ ಸ್ಥಳ ಅಧ್ಯಾಯಕ್ಕೆ ಪೂರ್ವಭಾವಿ ಸಿದ್ಧತೆಗಳನ್ನು ಮಾಡಿಕೊಳ್ಳುವುದಲ್ಲದೆ ಜಿಲ್ಲೆಯಾದ್ಯಂತ ಸಂಚರಿಸಿ ವಿವರವಾಗಿ ಟಿಪ್ಪಣಿಗಳನ್ನು ಮಾಡಿಕೊಂಡು ರಚಿಸುವುದು ಅನಿವಾರ್ಯವಾಗಿದ್ದು ಹೆಚ್ಚು ಶ್ರಮವನ್ನು ಬಯಸುವಂತಹದು. ಗ್ಯಾಸೆಟಿಯರ್ ಇಲಾಖೆಗಾಗಿಯೇ ಪ್ರತ್ಯೇಕವಾದ ಸಲಹಾ ಸಮಿತಿಯಿದ್ದು ಸದಸ್ಯರು ಹಲವಾರು ಬಾರಿ ಸೇರಿ ಕೂಲಂಕಶವಾಗಿ ಅಧ್ಯಾಯಗಳನ್ನು ಪರಿಶೀಲಿಸಿ ಒಪ್ಪಿಗೆ ನೀಡಿದ ಮೇಲೆ ಮುದ್ರಣಕ್ಕೆ ನೀಡಲಾಗುವುದು. ಸಾಮಾನ್ಯವಾಗಿ ಆಯಾ ಜಿಲ್ಲೆಯ ಸದಸ್ಯರೇ ಇರುವುದರಿಂದ ಅವರುಗಳಿಗೆ ತಮ್ಮ ಜಿಲ್ಲೆಯ ಕುರಿತು ಹೆಚ್ಚಿನ ಮತ್ತು ಅಧಿಕೃತವಾದ ತಿಳುವಳಿಕೆ ಇರುವುದು ಸಹಜ.

**ಬಳಕೆ**

ಗ್ಯಾಸೆಟಿಯರ್ ಯಾರಿಗಾಗಿ ರಚನೆಯಾಗುತ್ತದೆ ಎಂಬುದು ಮುಖ್ಯವಾದ ಪ್ರಶ್ನೆಯಾಗಿದೆ. ಮೊದಲಿಗೆ ಸಂಪುಟ ತಯಾರಾಗಿದ್ದು ಆಯಾ ಜಿಲ್ಲೆಯ ಕಲೆಕ್ಟರ್‌ಗಳ ಅಥವ ಜಿಲ್ಲಾಧಿಕಾರಿಗಳ ಬಳಕೆಗಾಗಿ. ಎಂದರೆ ತಮ್ಮ ಜಿಲ್ಲೆಯಲ್ಲಿ ಇರುವ ಸಂಪನ್ಮೂಲ (ಪೊಟೆನ್‌ಶಿಯಲ್) ಗಳ ಬಗ್ಗೆ ಅವುಗಳನ್ನು ರಾಜ್ಯ ಅಥವ ಪ್ರಾಂತ ಸರ್ಕಾರ ಗಳು ಬಳಸಿಕೊಂಡು ತನ್ನ ಆರ್ಥಿಕ ಅಭಿವೃದ್ಧಿ ಹೆಚ್ಚಿಸಿಕೊಳ್ಳಲು ಸಾಧ್ಯವಾಗಿಸುವ ಬಗ್ಗೆ ಬ್ರಿಟಿಷ್ ವರಿಷ್ಠರ ದೃಷ್ಟಿ ಇದ್ದುದು. ಹಾಗೆ ಹೆಚ್ಚು ಆದಾಯವಿರುವ ಕಡೆಗಳನ್ನು ಪೋಷಿಸಿರುವುದೂ, ಇಲ್ಲದಿರುವ ಕಡೆಗಳನ್ನು ನಿರ್ಲಕ್ಷಿಸಿರುವುದೂ ಗುರುತಿಸಬಹುದು. (ಉತ್ತರ ಕನ್ನಡ ಜಿಲ್ಲೆಯಲ್ಲಿ ಇದ್ದುದು ಕೆಲವೇ ಸಾವಿರ ಜನಸಂಖ್ಯೆ. ಇಡೀ ಜಿಲ್ಲೆಯೇ ಅರಣ್ಯ ಪ್ರದೇಶವಾಗಿದ್ದು ಸಾಗುವಾನಿ, ಬೊಂಬು ಸೇರಿದಂತೆ ಮರಮಟ್ಟುಗಳು ಇದ್ದುದು ಆರ್ಥಿಕವಾಗಿ ಹೆಚ್ಚು ಪ್ರಯೋಜನಕ್ಕೆ ಬರುವಂತಾಗಿದ್ದು ಇಡೀ ಜಿಲ್ಲೆಯನ್ನು ಹಾಗೆಯೇ ಉಳಿಸಿಕೊಳ್ಳುವುದು ಅವರಿಗೆ ಸೂಕ್ತವೆನಿಸಿತ್ತು.)

ಕ್ಯಾಪ್‌ಬಲ್ ಮುಂತಾದವರು ಇತಹಾಸ ಕುರಿತು ಆವರೆಗೆ ಬಂದಿದ್ದ ಮಾಹಿತಿಯನ್ನು ನೀಡಿದ್ದಾರೆ. ರೈಸ್ ಅವರ ಕಾಲಕ್ಕೂ ಸಮಗ್ರವಾದ ಶಾಸನ ಸಂಪುಟಗಳು ಬಂದಿರಲಿಲ್ಲ. ಹಯವದನರಾಯರು ಅಂದಿನ ಮೈಸೂರು ಜಿಲ್ಲೆಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಮೂರು ಸಂಪುಟಗಳಲ್ಲಿ ರಚಿಸಿದರೂ ತಮ್ಮ ಗ್ಯಾಸೆಟಿಯರ್‌ನಲ್ಲಿ ಪ್ರತ್ಯೇಕವಾದ ಸಂಪುಟಗಳನ್ನು ಮೀಸಲಿರಿಸಿದ್ದಾರೆ. ಇವು ಇತಿಹಾಸ ಕುರಿತು ಅಧ್ಯಯನ ಮಾಡುವವರಿಗೆ ಹೆಚ್ಚಿನ ಅನುಕೂಲ ಒಗಿಸಿತು. ಹೊಸ ಆವೃತ್ತಿಯ ಗ್ರಂಥಗಳು ಈ ದಿಸೆಯಲ್ಲಿ ಹೆಚ್ಚಿನ ಪ್ರಯೋಜನ ನೀಡುತ್ತವೆ. ವಿಶೇಷವಾಗಿ ಹೊಸದಾಗಿ ಸೇರ್ಪಡೆಯಾದ ಜಿಲ್ಲೆಗಳ ಇತಿಹಾಸ ಕುರಿತು ಪ್ರಥಮ ಬಾರಿಗೆಂಬಂತೆ ವಿವರವಾಗಿ ದೊರಕುತ್ತವೆ. ಉಳಿದಂತೆ ಪ್ರೇಕ್ಷಣೀಯ ಸ್ಥಳಗಳು ಆಯಾ ಸ್ಥಳಗಳಿಗೆ ಪ್ರವಾಸ ಮಾಡುವವರಿಗೆ ಪೂರ್ವಭಾವಿ ಸಿದ್ಧತೆಗೆ ಸಹಾಯಕವಾಗಿದೆ. ಪಿಎಚ್.ಡಿ., ಡಿ.ಲಿಟ್ ಮುಂತಾದ ಹೆಚ್ಚಿನ ಅಧ್ಯಯನ

ಕೈಗೊಳ್ಳುವವರಿಗೆ, ಸಂಶೋಧಕರಿಗೆ ಗ್ಯಾಸೆಟಿಯರ್‌ಗಳು ಕಡ್ಡಾಯವಾದ ಆಕರ ಎಂದೆನಿಸಿದೆ. ಬೇರೆ ಬೇರೆ ವಿಷಯಗಳಲ್ಲಿ ಹೆಚ್ಚಿನ ಸಂಶೋಧನೆ ಮಾಡುವವರು ಗ್ಯಾಸೆಟಿಯರ್‌ನ ಉಳಿದ ಅಧ್ಯಾಯಗಳನ್ನು ಗಮನಿಸ ದಿರುವುದು ವಿಷಾದನೀಯ.

ಗ್ಯಾಸೆಟಿಯರ್‌ಗಳೆಂದರೆ ಅದೊಂದು ಶುಷ್ಕವಾದ ಕೇವಲ ಅಂಕಿ–ಅಂಶಗಳಿಂದ ಕೂಡಿದ ಸಂಪುಟಗಳೆಂದೇ ಅನೇಕರ ಭಾವನೆ. ಅದೂ ನಿಜವೇ. ಕೆಲವು ಅಧ್ಯಾಯಗಳು ಅದೇ ರೀತಿ ಇರುವುದುಂಟು. ಹಾಗಾಗಿ ಜನ ಸಾಮಾನ್ಯನಿಗೆ ಅವುಗಳ ಅವಶ್ಯಕತೆಯಿಲ್ಲ ಎಂಬುದು ಜನಜನಿತವಾಗಿದೆ. ಅಧ್ಯಯನ ಶೀಲ ಮನೋಭಾವ ದವರಿಗೆ ಅವುಗಳ ಎಡೆಯಲ್ಲಿಯೇ ಹಲವಾರು ಹೊಸ ಹೊಳಹು ದೊರಕುವ ಸಾಧ್ಯತೆಯಿದೆ. ಜನತೆ ಕುರಿತ ಅಧ್ಯಾಯದಲ್ಲಿ ಹತ್ತು ವರ್ಷಗಳ ಅವಧಿ ಅನುಸರಿಸಿ ನೂರು ವರ್ಷಗಳ ಜನಸಂಖ್ಯೆ ನೀಡಿದಾಗ ಸಂಖ್ಯೆಯಲ್ಲಿ ಇರುವ ಏರುಪೇರುಗಳಿಗೆ ಕಾರಣ ಹುಡುಕುವಂತೆ ಮಾಡುತ್ತದೆ. ಯುದ್ಧ, ಪ್ರಾಕೃತಿಕ ವಿಕೋಪ, ವಲಸೆ, ಸಂತಾನ ಹರಣ ಚಿಕಿತ್ಸೆ, ಸಂತಾನ ನಿಯಂತ್ರಣದ ಬಳಕೆ ಇವೇ ಮುಂತಾದವು ಜನಸಂಖ್ಯೆಯನ್ನು ಕಡಿಮೆ ಮಾಡಿರಬಹುದು. ಸುಭಿಕ್ಷತೆ, ರಕ್ಷಣೆ, ಸಂಪನ್ಮೂಲದ ಹೆಚ್ಚಳ ಇದ್ದಲ್ಲಿ ಜನಸಂಖ್ಯೆಯಲ್ಲಿ ಹೆಚ್ಚಳ ಕಂಡುಬರ ಬಹುದು. ವಿದ್ಯಾಭ್ಯಾಸದಲ್ಲಿ ಶಾಲೆ ಬಿಡುವ ಮಕ್ಕಳ ಸಂಖ್ಯೆ, ಸಾಗಾಣಿಕೆಯಲ್ಲಿ ರಸ್ತೆ ಅಥವ ರೈಲುಮಾರ್ಗಗಳ ಲಭ್ಯತೆ/ಅಲಭ್ಯತೆ ಇತ್ಯಾದಿಗಳ ಅಧ್ಯಯನಕ್ಕೆ ಸಾಕಷ್ಟು ಅವಕಾಶವಿದೆ. ಇವೇ ಮಾತನ್ನು, ಕೃಷಿ, ನೀರಾವರಿ, ಕೈಗಾರಿಕೆ ಇತ್ಯಾದಿ ಅಧ್ಯಾಯಗಳಿಗೂ ಅನ್ವಯಿಸಬಹುದು. ಕೆಲವೊಮ್ಮೆ ಬೇರೆ ಬೇರೆ ಆಕರಗಳನ್ನು ಬಳಸಿ ಗ್ರಂಥ ರಚಿಸುವಾಗ ಕೆಲಮಟ್ಟಿನ ವ್ಯತ್ಯಾಸ ಆಗಬಹುದು. ಈ ಸಂಪುಟಗಳನ್ನು ಬಳಸುವ ವ್ಯಕ್ತಿ ಉಳಿದ ಆಕರಗಳನ್ನು ಗಮನಿಸುವುದು ಒಳಿತು.

ಈಚೆಗೆ ಗ್ಯಾಸೆಟಿಯರ್ ಗ್ರಂಥಗಳಲ್ಲಿ ಛಾಯಾಚಿತ್ರಗಳಿಗೂ ಹೆಚ್ಚಿನ ಮಹತ್ವ ನೀಡಿರುವುದು ಆಯಾ ಜಿಲ್ಲೆಗೆ ಸಂಬಂಧಿಸಿದಂತೆ ಚಿತ್ರಸಂಪುಟದ ರೀತಿಯಲ್ಲಿ ಬಳಸಿಕೊಳ್ಳಬಹುದು. ಸಾಮಾನ್ಯವಾಗಿ ಪ್ರೇಕ್ಷಣೀಯ ಸ್ಥಳಗಳನ್ನು ರಚಿಸುವ ಸಂಪಾದಕರೇ ತಾವು ಹೋದ ಕಡೆಗಳ ಛಾಯಾಚಿತ್ರ ಪಡೆದುಕೊಂಡು ಬರುವುದುಂಟು. ಅಲ್ಲದೆ ವಾರ್ತಾ ಇಲಾಖೆ, ಪ್ರವಾಸೋದ್ಯಮ ಇಲಾಖೆ ಇತ್ಯಾದಿಗಳಲ್ಲದೆ ಆಯಾ ಅಧ್ಯಾಯಕ್ಕೆ ಸಂಬಂಧಿಸಿದ ಇಲಾಖೆಗಳಿಂದಲೂ ಮತ್ತು ಅಂತರ್‌ಜಾಲ ತಾಣಗಳಿಂದಲೂ ಛಾಯಾಚಿತ್ರ ಪಡೆಯಲಾಗುತ್ತದೆ. ಅವುಗಳನ್ನು ಒಂದು ವ್ಯವಸ್ಥೆಯಲ್ಲಿ ಜೋಡಿಸುವುದೂ, ವಿನ್ಯಾಸಗೊಳಿಸುವುದೂ ಒಂದು ಕಲೆ.

ಈಚಿನ ಸಂಪುಟಗಳಲ್ಲಿ ಬೇಚಿರಾಗ್ ಸೇರಿದಂತೆ ಗ್ರಾಮಗಳ ಪಟ್ಟಿ, ಗ್ರಂಥದಲ್ಲಿ ಹೇಳಿರದ ನಂತರ ದೊರೆತ ಮಾಹಿತಿಗಳ ಅನುಬಂಧಗಳು ಮತ್ತು ವಿವರವಾದ ಪದಕೋಶ ನೀಡುವುದರಿಂದ ಓದುಗರಿಗೆ ಹೆಚ್ಚಿನ ನೆರವು ನೀಡಲಾಗುತ್ತಿದೆ. ಗ್ರಂಥಗಳೊಂದಿಗೆ ಅಡಕ–ಮುದ್ರಿಕೆ (ಸಿಡಿ) ಯನ್ನು ನೀಡುವುದರಿಂದ 'ಹುಡುಕು'ವಿಕೆಗೆ (ಸರ್ಚ್ ಇಂಜಿನ್) ನ ನೆರವನ್ನು ಪಡೆಯಬಹುದಾದ ಸೌಕರ್ಯವಿದೆ. ಇಲಾಖೆಯಿಂದ ರಾಜ್ಯ ಗ್ಯಾಸೆಟಿಯರ್, ಕರ್ನಾಟಕ ಕೈಪಿಡಿ, ಪ್ರವಾಸೋದ್ಯಮ ಗ್ಯಾಸೆಟಿಯರ್, ಗಿಂಪ್ಸಸ್ ಆಫ್ ಕರ್ನಾಟಕ ಇತ್ಯಾದಿಗಳನ್ನು ಪ್ರಕಟಿಸಿದ್ದು ಅವುಗಳಲ್ಲಿ ಕರ್ನಾಟಕ ಕೈಪಿಡಿ ಆಡಳಿತ ಸೇವೆಯ ಪರೀಕ್ಷೆಗಳೂ ಸೇರಿದಂತೆ ಹಲವಾರು ಉನ್ನತ ಮಟ್ಟದ ವಿದ್ಯಾಭ್ಯಾಸಗಳಿಗೆ ಪಠ್ಯವಸ್ತು, ಆಕರ ಗ್ರಂಥವಾಗಿದ್ದು ಕನ್ನಡ ಮತ್ತು ಇಂಗ್ಲಿಷ್ ಆವೃತ್ತಿಗಳ ಹಲವಾರು ಮುದ್ರಣಗಳನ್ನು ಕಂಡಿವೆ. ಪ್ರತಿ ಮುದ್ರಣಗಳಿಗೂ ಅಧ್ಯಾಯಗಳನ್ನು ಇಂದೀಕರಿಸಲಾಗುತ್ತಿದೆ. ಈಚೆಗೆ ಅನೇಕ ನಕ್ಷೆಗಳು, ಛಾಯಾಚಿತ್ರಗಳಿಂದ ಕೂಡಿ ಹಾಲು ಕಾಗದದಮೇಲೆ ವರ್ಣಮಯವಾಗಿ ಮುದ್ರಿಸಲಾಗುತ್ತಿದ್ದು ಸಂಗ್ರಹ ಯೋಗ್ಯವಾಗಿಯೂ ಇದೆ.

ಗ್ಯಾಸೆಟಿಯರ್ ಗ್ರಂಥಗಳು ವಿದ್ಯಾರ್ಥಿಗಳಿಗೆ ತಮ್ಮ ಜಿಲ್ಲೆಯ ಬಗ್ಗೆ ಅರಿತುಕೊಳ್ಳಲು ಸಹಾಯಕವಾಗಿವೆ. ಪತ್ರಕರ್ತರಿಗೆ ಇದೊಂದು ಮಾಹಿತಿಗಳ ಸಂಗ್ರಹಾಲಯ (ಇನ್‌ಫರ್‌ಮೇಷನ್ ಪೂಲ್). ವಾರಾಂತ್ಯದಲ್ಲಿ ಚಾರಣ ಮಾಡುವವರಿಗೆ ಕೈಪಿಡಿ. ಸಂಶೋಧಕರಿಗೆ ಆಕರ ಗ್ರಂಥ. ಗ್ರಂಥಾಲಯಗಳಲ್ಲಿ ಕಡ್ಡಾಯವಾಗಿ ಇರಬೇಕಾದ ಸಂಪುಟಗಳು. ಜನಸಾಮಾನ್ಯನಿಗೆ ಜ್ಞಾನ ಹೆಚ್ಚಿಸುವ ಕೈದೀವಿಗೆ. ಆಡಳಿತಾಧಿಕಾರಿಗೆ ತನ್ನ ಜಿಲ್ಲೆಯ ಬಗ್ಗೆ ಅರಿವು ಮೂಡಿಸುವ ಸಂಗ್ರಹ, ಇತ್ಯಾದಿಯಾಗಿ ಹತ್ತು ಹಲವು ರೀತಿಯಲ್ಲಿ ಪ್ರಯೋಜನ ಪಡೆಯಲು ಸಾಧ್ಯ. ಗ್ಯಾಸೆಟಿಯರ್ ಗ್ರಂಥಗಳಿಗೆ ಸಂವಾದಿಯಾಗಿ 'ದೇಶಕೋಶ', 'ಜಿಲ್ಲಾಕೋಶ. 'ಪ್ರದೇಶಕೋಶ' ಇತ್ಯಾದಿ ಪರ್ಯಾಯ ಪದಗಳನ್ನು ಸೂಚಿಸಿದ್ದರೂ ಅವುಗಳಿಲ್ಲಿ ಮೂಲ ಆಶಯದ ಧ್ವನಿ ಕಂಡುಬರುವುದಿಲ್ಲ. ಇಲ್ಲಿಯ ಅಧ್ಯಾಯಗಳ ಮಾಹಿತಿಗಳು ಬೇರೆಡೆ ಬಿಡಿಯಾಗಿ ದೊರೆಯಬಹುದಾದರೂ ಆ ಎಲ್ಲ ಮಾಹಿತಿಗಳು ಒಂದೆಡೆ ದೊರೆಯುವುದು ವಿಶೇಷ. ಓದುಗರು ಅಲ್ಲಿಂದ ಮುಂದಕ್ಕೆ ತಮ್ಮ ಜ್ಞಾನದ ಪರಿಧಿಯನ್ನು ಹೆಚ್ಚಿಸಿಕೊಳ್ಳಬಹುದು.

*****

# ಇತಿಹಾಸ ತಜ್ಞ ಎ.ಎಂ. ಅಣ್ಣಿಗೇರಿ ಒಂದು ನೆನಪು

* ವೇಮಗಲ್ ಸೋಮಶೇಖರ್.

ಧಾರವಾಡ ಜಿಲ್ಲೆ ನವಲಗುಂದ ತಾಲೂಕಿನ ಅಣ್ಣಿಗೇರಿ ಗ್ರಾಮದಲ್ಲಿ ೧೯೧೪ ನೇ ಜೂನ್ ೬, ಶನಿವಾರದಂದು ವೈದಿಕ ಪರಂಪರೆಯ ಗೌರವಾನ್ವಿತ ಕುಟುಂಬದಲ್ಲಿ ಶ್ರೀ ಎ.ಎಂ (ಅಮೃತ ಮಹದೇವ) ಅಣ್ಣಿಗೇರಿ ಜನಿಸಿದ್ದು. ಇವರ ತಂದೆ ವೇ. ಮೂ. ಮಹದೇವಭಟ್ಟರು ವೈದಿಕ ವಿದ್ಯಾಪಾರಂಗತರಾಗಿ ಪ್ರಾಥಮಿಕ ಶಾಲಾ ಉಪಾಧ್ಯಾಯರೂ ಆಗಿದ್ದರು.

ಎ.ಎಂ. ಅಣ್ಣಿಗೇರಿಯವರು ಬಾಲ್ಯ ಜೀವನವನ್ನು ಹಾಗೂ ಪ್ರಾಥಮಿಕ ಶಾಲಾ ಶಿಕ್ಷಣವನ್ನು ಏಳನೇ ತರಗತಿಯವರಿಗೆ ತಮ್ಮ ತಂದೆಯವರ ನೇತೃತ್ವದಲ್ಲಿ ಸ್ವಗ್ರಾಮದಲ್ಲಿಯೇ ಪಡೆದರು. ಪ್ರೌಢಶಾಲಾ ಶಿಕ್ಷಣದ ಸೌಕರ್ಯ ಆಗ ಅಣ್ಣಿಗೇರಿಯಲ್ಲಿ ಇಲ್ಲದ ಕಾರಣ ಲಕ್ಷ್ಮೇಶ್ವರದಲ್ಲಿ ಸೋದರ ಮಾವಂದಿರ ಆಶ್ರಯದಲ್ಲಿ ಇದ್ದು ನಂತರ ಧಾರವಾಡಕ್ಕೆ ಆಗಮಿಸಿ ಅಲ್ಲಿನ ವಿಕ್ಟೋರಿಯಾ ಪ್ರೌಢಶಾಲೆಯಲ್ಲಿ (ಈಗಿನ ವಿದ್ಯಾರಣ್ಯ ಪ್ರೌಢಶಾಲೆ) ೧೯೩೨ ರಲ್ಲಿ ಮೆಟ್ರಿಕ್ ಪೂರೈಸಿ ನಾಲ್ಕು ವರ್ಷಗಳ ಉಚ್ಚ ಶಿಕ್ಷಣವನ್ನು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಮುಗಿಸಿ ೧೯೩೭ ರಲ್ಲಿ ಸಂಸ್ಕೃತವನ್ನು ಉಪ ವಿಷಯವನ್ನಾಗಿ ಆಯ್ದುಕೊಂಡು ಕನ್ನಡದಲ್ಲಿ ಬಿ.ಎ. ಪದವೀಧರರಾದರು. ನಂತರ ಸಾಂಗಲಿಯ ವಿಲ್ಲಿಂಗ್‌ಡನ್ ಕಾಲೇಜಿನಲ್ಲಿ ಪ್ರವೇಶ ಪಡೆದು ಆಗ್ಗೆ ಪ್ರಾಂಶುಪಾಲರಾಗಿದ್ದ ಡಾ॥ ರಂ.ಶ್ರೀ. ಮುಗಳಿ ಹಾಗೂ ವಿ.ಕೃ. ಗೋಕಾಕ್ ಅವರ ನೇತೃತ್ವದಲ್ಲಿ ಅಭ್ಯಸಿಸಿ ೧೯೩೯ರಲ್ಲಿ ಎಂ.ಎ. ಪದವೀಧರರಾದರು.

ತರುವಾಯ ಕೆಲತಿಂಗಳು ಅಣ್ಣಿಗೇರಿಯವರು ಹುಬ್ಬಳ್ಳಿಯ ನ್ಯೂ ಇಂಗ್ಲೀಷ್ ಹೈಸ್ಕೂಲ್‌ನಲ್ಲಿ ಶಿಕ್ಷಕರಾಗಿ ಕಾರ್ಯನಿರ್ವಹಿಸಿ ೧೯೪೦ ರಿಂದ ೪೩ ರವರೆಗೆ ಮುಂಬೈ ಸರಕಾರದ ಕನ್ನಡ ಸಂಶೋಧನಾ ಸಂಸ್ಥೆಯಲ್ಲಿ ಶಿಷ್ಯವೇತನ ಪಡೆದು ರೀಸರ್ಚ್‌ಫೆಲೋ ಆಗಿ ಸಂಶೋಧನಾಕಾರ್ಯ ನಿರ್ವಹಿಸಿ ಅಪಾರ ಜ್ಞಾನ ಸಂಪಾದಿಸಿದರು. ಆಗ ವಿದ್ಯಾರತ್ನ ಆರ್.ಎಸ್. ಪಂಚಮುಖಿಯವರ ಮಾರ್ಗದರ್ಶನದಲ್ಲಿ Karnataka Inscriptions ನ ಕೆಲವು ಸಂಪುಟಗಳ ಪ್ರಕಟನೆಯಲ್ಲಿ ಮುಖ್ಯ ಪಾತ್ರವಹಿಸಿದರು. ಮುಂಬೈ ಸರಕಾರದವರು ೧೯೪೩ ರಲ್ಲಿ ಇವರನ್ನು ಅದೇ ಸಂಸ್ಥೆಯಲ್ಲಿ ಸಹಾಯಕ ಸಂಶೋಧಕರಾಗಿ ನೇಮಕಗೊಳಿಸಿದರು. ಸದರೀ ಹುದ್ದೆಯಲ್ಲಿ ೧೯೫೩ ರವರೆಗೂ ಕಾರ್ಯ ನಿರ್ವಹಿಸಿದ ನಂತರ ಬಡ್ತಿ ಹೊಂದಿ ಅದೇ ಸಂಸ್ಥೆಯ ವಸ್ತುಸಂಗ್ರಹಾಲಯದ ಕ್ಯುರೇಟರ್ ಆಗಿ ನೇಮಕಗೊಂಡರು. ೧೯೬೪ ರಲ್ಲಿ ಆ ಸಂಸ್ಥೆಯು ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಗೊಂಡಿದ್ದರಿಂದ ಮೈಸೂರು ಸರಕಾರದ ಸೇವೆಗೆ ಬಂದರು. ೧೯೬೧ ರಿಂದ ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಇಲಾಖೆಯಲ್ಲಿ ಕ್ಯುರೇಟರ್ ಆಗಿ ಕಾರ್ಯನಿರ್ವಹಿಸಿ ೧೯೬೯ ರಲ್ಲಿ ನಿವೃತ್ತಿ ಹೊಂದಿದರು.

ನಿವೃತ್ತಿಯ ನಂತರ ೧೯೬೯ ರಿಂದ ೧೯೭೪ ರವರೆಗೆ ಕರ್ನಾಟಕ ವಿಶ್ವವಿದ್ಯಾಲಯದ ಪಠ್ಯಪುಸ್ತಕದ ನಿರ್ದೇನಾಲಯದಲ್ಲಿ ಸಂಶೋಧನಾ ಸಹಾಯಕರಾಗಿ ಕಾರ್ಯನಿರ್ವಹಿಸಿದರು. ತಮ್ಮ ದೀರ್ಘ ಕಾಲದ ಸೇವಾವಧಿಯಲ್ಲಿ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಸಂಶೋಧನೆಗಳನ್ನು ಮಾಡಿ ಸಂಗ್ರಹಿಸಿದ್ದ ನಾಣ್ಯಗಳು, ಗ್ರಂಥಗಳು ಮತ್ತು ಮೂರ್ತಿಗಳನ್ನು ಧಾರವಾಡದ ವಸ್ತುಸಂಗ್ರಹಾಲಯಕ್ಕೆ ದಾನವಾಗಿ ನೀಡಿದರು. ತಮ್ಮ ಸಂಶೋದನಾ ಕಾರ್ಯದ ವಿಷಯದ ಮೇಲೆ ಅನೇಕ ಪ್ರಬಂಧಗಳನ್ನು ಕಾಲಕಾಲಕ್ಕೆ ಪ್ರಕಟಿಸುತ್ತಲೇ ಇದ್ದರು.

೧೯೭೪ ರಲ್ಲಿ ಬೆಂಗಳೂರಿಗೆ ಆಗಮಿಸಿದ ಅಣ್ಣಿಗೇರಿಯವರು ಆಗತಾನೇ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪ್ರಾರಂಭವಾಗಿದ್ದ ಸಂಶೋಧನಾ ವಿಭಾಗ ಮತ್ತು ವಸ್ತುಸಂಗ್ರಹಾಲಯದ ಕ್ಯುರೇಟರ್ ಆಗಿ ನೇಮಕಗೊಂಡರು. ಅಣ್ಣಿಗೇರಿಯವರಿಗೆ ಕನ್ನಡ ಶಾಸನಗಳನ್ನು ಓದುವುದರಲ್ಲಿ ಸಾಕಷ್ಟು ಅನುಭವವಿದ್ದುದನ್ನು ಗಮನಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಜಿ.

* ೧೬೦, ೪ನೇ ಅಡ್ಡರಸ್ತೆ, ಲಕ್ಷ್ಮೀಪುರ, ಕೆಂಪೇಗೌಡನಗರ, ಬೆಂಗಳೂರು–೧೯.

ನಾರಾಯಣ ಮತ್ತು ತಿರುಮಲೆ ತಾತಾಚಾರ್ಯ ಶರ್ಮರು ಶಾಸನ ಶಾಸ್ತ್ರವನ್ನು ಅಭ್ಯಾಸ ಮಾಡಿರುವವರು. ಹಾಗೂ ಮೂಲ ಶಾಸನಗಳನ್ನು ಓದಬಲ್ಲವ ಈ ನಮ್ಮ ನಾಡಿನಲ್ಲಿ ಅತಿವಿರಳವೆಂದುಭಾವಿಸಿ ಪರಿಷತ್ತಿನಲ್ಲಿ ಶಾಸನಶಾಸ್ತ್ರ ತರಗತಿಯನ್ನು ಪ್ರಾರಂಭಿಸಲು ೧೯೭೫ ರಲ್ಲಿ ಯೋಜಿಸಿದರು. ಪ್ರಥಮವಾಗಿ ೧೯೭೫-೭೬ ನೇ ಸಾಲಿನ ಶಾಸನ ತರಗತಿಯನ್ನು ಅಣ್ಣಿಗೇರಿಯವರೇ ಪ್ರಥಮವಾಗಿ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸಿದರು. ಆಗ ಪರಿಷತ್ತಿನ ಸಂಶೋಧನಾ ಸಮಿತಿ ಮನವಿ ಮೇರೆಗೆ ಅಣ್ಣಿಗೇರಿಯವರು ಆರ್. ಶೇಷಶಾಸ್ತ್ರಿಗಳೊಂದಿಗೆ ಸಂಪಾದಿಸಿದ 'ಶಾಸನ ಸಂಗ್ರಹ' ಕೃತಿಯೂ ಬಿಡುಗಡೆಯಾಯಿತು. ಈ ತರಗತಿ ಮುಗಿಯುತ್ತಿದ್ದಂತೆಯೇ ಅಣ್ಣಿಗೇರಿ ಯವರ ಎರಡು ಕಣ್ಣುಗಳು ಮಸುಕಾದ ಕಾರಣ ಬೆಂಗಳೂರು ಬಿಟ್ಟು ವಿಶ್ರಾಂತಿ ಜೀವನಕ್ಕಾಗಿ ಧಾರವಾಡಕ್ಕೆ ಅನಿವಾರ್ಯವಾಗಿ ಹಿಂತಿರುಗಬೇಕಾಯಿತು. ಇವರು ಸಲ್ಲಿಸಿದ್ದ ಇತಿಹಾಸ ಸಂಶೋಧನಾ ಕ್ಷೇತ್ರದಲ್ಲಿನ ಸಾಧನೆಯನ್ನು ಗುರುತಿಸಿ ಬೆಂಗಳೂರಿನ ಮಿಥಿಕ್ ಸೊಸೈಟಿಯವರು ತಮ್ಮ ಪ್ಲಾಟಿನಂ ಮಹೋತ್ಸವದ ಸಂದರ್ಭದಲ್ಲಿ ಅತ್ಯುತ್ತಮ ಸಂಶೋಧಕರೆಂದು ಪರಿಗಣಿಸಿ ೧೯೮೫ ಅಕ್ಟೋಬರ್ ೧೩ ಶನಿವಾರದಂದು ಸನ್ಮಾನಿಸಿದರು.

ಕನ್ನಡದಲ್ಲಿ ಸುಮಾರು ೨೦ ಹಾಗೂ ಇಂಗ್ಲೀಷ್‌ನಲ್ಲಿ ಎಂಟು ತಾವೇ ಸಂಶೋಧಿಸಿದ ಕೃತಿಗಳನ್ನು ತಮ್ಮ ವೈಯಕ್ತಿಕ ಪ್ರಕಾಶನಾಲಯವಾದ 'ಭವಾನಿ ಪ್ರಕಾಶನ' ದಿಂದ ಪ್ರಕಟಿಸಿದ್ದಾರೆ. ಇವುಗಳಲ್ಲಿ ಮುಖ್ಯವಾದವು ಬಾದಾಮಿಯ ಶಿಲ್ಪಕಲೆ, ವಿಜಾಪುರದ ಶಿಲ್ಪಕಲಾ ವೈಭವ, ಪಟ್ಟದಕಲ್ಲ ಗುಡಿಗಳು, ಐಹೊಳೆ: ಸಂಸ್ಕೃತಿ ಮತ್ತು ಕಲೆ, ಅದ್ವೈತ ಮಹಾಪುರುಷರು, ಹರಿದಾಸಬೋಧೆ, The cave Temples of Badami, The glory of Bijapur, The glory of Pattadakal ಮುಂತಾದವು. ಕೆಲ ಕನ್ನಡ ಕೃತಿಗಳು ಆಂಗ್ಲಭಾಷೆಗೆ ಅನುವಾದಗೊಂಡಿದೆ. ಈ ಎಲ್ಲಾ ಕೃತಿಗಳು ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಕಲೆಗಳನ್ನು ಅಭ್ಯಸಿಸುವವರಿಗೆ ಬಹು ಉಪಯುಕ್ತವಾಗಿದೆ.

ಜೀವನದುದ್ದಕ್ಕೂ ಸದ್ದಿಲ್ಲದೆ ಸರಳ, ಸಾತ್ವಿಕ ಹಾಗೂ ನಿಸ್ಪೃಹ ಜೀವನ ಸಾಗಿಸಿದ್ದ ಇತಿಹಾಸ ತಜ್ಞ ಅಣ್ಣಿಗೇರಿ ಯವರು ೧೯೮೭ ಜೂನ್ ೨೭, ಶನಿವಾರದಂದು ಸ್ವಗೃಹದಲ್ಲಿ ಹೃದಯಾಘಾತದಿಂದ ಆಕಸ್ಮಿಕ ಮರಣವನ್ನಪ್ಪಿದರು. ಅಣ್ಣಿಗೇರಿಯವರು ಅಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಬುನಾದಿ ಹಾಕಿದ ಶಾಸನಶಾಸ್ತ್ರ ತರಗತಿಗಳ ನೆರವಿನಿಂದ ಇಂದು ಡಾ॥ ಎಚ್.ಎಸ್. ಗೋಪಾಲರಾವ್, ಡಾ॥ ಶೇಷಶಾಸ್ತ್ರಿ, ಡಾ॥ ದೇವರಕೊಂಡಾರೆಡ್ಡಿ, ಪ್ರೊ॥ ಎಮ್.ಜಿ. ನಾಗರಾಜ್, ಡಾ॥ ಕೆ.ಆರ್. ಗಣೇಶ್, ಡಾ॥ ಪಿ.ವಿ. ಕೃಷ್ಣಮೂರ್ತಿ, ಮುಂತಾದವರು ಪ್ರಸಿದ್ಧ ಶಾಸನ ತಜ್ಞರಾಗಿ ಕಾರ್ಯ ನಿರ್ವಹಿಸುತ್ತಿರುವುದು ಹೆಮ್ಮೆಯ ಸಂಗತಿ.

ದಿವಂಗತರ ಆತ್ಮಕ್ಕೆ ಶಾಂತಿಕೋರಿ, ಅವರ ಭಾವಚಿತ್ರವನ್ನು ಅನಾವರಣ ಮಾಡುವ ಮೂಲಕ ಕ್ನಡ ಸಾಹಿತ್ಯ ಪರಿಷತ್ತು ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದುದು ನನ್ನ ಮನಸ್ಸಿನಲ್ಲಿ ಇನ್ನು ಹಚ್ಚಹಸಿರಾಗಿದೆ.

ಎ.ಎಂ. ಅಣ್ಣಿಗೇರಿಯವರ ಬಗ್ಗೆ ಪೂರಕ ಮಾಹಿತಿಯನ್ನು ಲಿಖಿತ ರೂಪದಲ್ಲಿ ೧೯೮೮ ಅಕ್ಟೋಬರ್‌ನಲ್ಲಿ ಒದಗಿಸಿಕೊಟ್ಟಿರುವ ದಿವಂಗತ ಅಣ್ಣಿಗೇರಿಯವರ ಪತ್ನಿ ಶ್ರೀಮತಿ ಗಂಗೂತಾಯಿ ಅಣ್ಣಿಗೇರಿಯವರನ್ನು ಕೃತಜ್ಞತೆಯೊಂದಿಗೆ ಸ್ಮರಿಸುತ್ತೇನೆ.

ಸಾಹಿತಿಯಾಗಿದ್ದ ಅಣ್ಣಿಗೇರಿಯವರ ಪತ್ನಿ ಶ್ರೀಮತಿ ಗಂಗೂತಾಯಿ ಅಣ್ಣಿಗೇರಿ ಪತಿಯ ಜೀವನದ ಬಗ್ಗೆ ದೀರ್ಘ ಕವನವನ್ನು ೧೯೮೭ ರ ಸೆಪ್ಟೆಂಬರ್‌ನಲ್ಲಿ ರಚಿಸಿದರು. ಈ ಅಪ್ರಕಟಿತ ಕವನ ಅಣ್ಣಿಗೇರಿಯವರ ಬದುಕನ್ನು ಬಿಂಬಿಸುವುದರ ಜೊತೆಗೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತದೆ.

**"ನೆನೆಹಿನ ನಂದಾದೀಪ"**

ಮರೆಯಲೆಂತು ಮನಮಂದಿರದೀಶನ
ಪುಣ್ಯಪುರುಷ ಅಮೃತೇಶನ
ಇಹಪರದಲಿ ಗಳಿಸಿದನು ಸುಯಶವನು
ಪಡೆದನು ಜೀವನ್ಮುಕ್ತಿಯನು
ಮರೆಯಲೆಂತು ಮನದೀಶನ॥ ೧ ॥

ಅನ್ನಗಿರಿಯ ಸುಕ್ಷೇತ್ರದಿ ಜನಿಸಿದಿ
ಮಹದೇವ-ಅಂಬಾ ದಂಪತಿಗಳಲೀ
ವಿನಯಶೀಲರು ವೇದಪಂಡಿತರು
ಶಾಲಾಪಂತರು ವೃತ್ತಿಯಲಿ॥ ೨॥

ವಿದ್ಯಾರಂಭವು ಲಕ್ಷ್ಮೀಶಪುರದ
ಮಾತುಳಕೃಷ್ಣ ಪಂಡಿತರಲ್ಲಿ
ಏಕನಾಥ ಗುರು ಎಂದರೆ ಶ್ರದ್ಧೆಯು
ಏಕಪಾರಿನೀ ವಿದ್ಯೆಯಲಿ॥ ೩ ॥

ಪುಸ್ತಕವೆಂಬುದೇ ಆಸ್ತಿಯು ನಿನಗೆ
ಬಹಳಾಸಕ್ತಿಯು ಬರಹದಲಿ
ವ್ಯರ್ಥವಂದುಹಣ ಕಳೆಯದೆ
ಉತ್ತೀರ್ಣನಾಗುತಿದ್ದಿ ಪ್ರತಿ ವರುಷದಲಿ॥ ೪ ॥

ಹೆಚ್ಚಿನ ವ್ಯಾಸಂಗಕ್ಕೆ ಬಂದಿ ಬಹು
ಮೆಚ್ಚಿನ ಧಾರ್ವಾಡ ಶಹರಕ್ಕೆ
ಅಣ್ಣ-ಅತ್ತಿಗೆಯ ಪ್ರೀತಿಯ
ಆಶೀರ್ವಾದವು ನಿನ್ನ ಶುಭೋದಯಕೆ॥ ೫ ॥

ಪ್ರಾಂಶುಪಾಲರು ಕವಿ ವಿನಾಯಕರು
ನಿನ್ನಯ ಪ್ರೀತಿಯ ಪ್ರಾಚಾರ್ಯ
ನಿನ್ನ ಯಶಸ್ಸಿಗೆ ಕಾರಣರಾದ
ಮಹನೀಯರು ಸದ್ಗುರುವರ್ಯಾ॥ ೬ ॥

ಆರೋಗ್ಯದ ಐಸಿರಿಯನು ಪಡೆದ
ಸುಂದರ ಸ್ವರೂಪದ ಸುಖಪುರುಷ
ಸತತ ಸಾಹಿತ್ಯ-ಸರಸತಿಯ ಉಪಾಸನೆ
ಸೇವೆ ಹೈಯ್ಯುವ ಮನದಭಿಲಾಷಾ॥ ೭ ॥

ಪ್ರಾಚ್ಯವಸ್ತು ಇತಿಹಾಸ ಶೋಧನೆಯಲಿ
ಪಡೆಯುತ ಬಹು ಪ್ರಾಮುಖ್ಯತೆಯೂ
ಮೂರ್ತಿಶಿಲ್ಪ ಅಧ್ಯಯನವು ನಿರುತದಿ
ಗಳಿಸಿದಿ ಅಧ್ಭುತ ಕೀರುತಿಯಾ॥ ೮ ॥

ಬಾದಾಮಿ ಕೈಪಿಡಿ ವಿದ್ಯಾರ್ಥಿ-
ಜನಗಳಿಗುತ್ತಮವಾಗಿದ ಪ್ರಕಟನೆಯು
ಶಿಲ್ಪ-ಕಲಾ ಕೃತಿ ಸುಂದರ ರಚನೆಯು
ಪಟ್ಟದ ಕಲ್ಲಿನ ವೈಭವವು॥ ೯ ॥

ಅದ್ವೈತದ ಮಹಾಪುರುಷರ ಚರಿತೆಯು
ಅದ್ವಿತೀಯ ಸದ್ಗ್ರಂಥವು
ಅದ್ವೈತದ ಮಹಸಿದ್ಧಿಯ ಪಡೆದಿಹ
ಸಚ್ಚಾರಿತ್ರರ ಚರಿತೆಯದು॥ ೧೦ ॥

ಶಂಕರ ಗುರುಗಳ ಸಂಸ್ಕೃತ ಶ್ಲೋಕಕೆ
ಕನ್ನಡ ಭಾಷೆಯ ಭಾವಾರ್ಥ
ಭಗವತ್ಪಾದರ ಸಂಸ್ಕೃತ ಸ್ತೋತ್ರವ ಪಠಿಸುತ
ಪಡೆದಿ ಪುರುಷಾರ್ಥ॥ ೧೧॥

ಶಂಕರ ಗುರುಗಳ ಸ್ತೋತ್ರ
ಗಳೆಂದರೆ ಏನದು ಅದ್ಭುತ ಆನಂದ
ಓದಿಸಿ ಹಾಡಿಸಿ ಕೇಳಿ ನಲಿಯುತಿರೆ
ಮರೆಯಲೆಂತು ಆ ದಿನದಂದ॥ ೧೨ ॥

ಉತ್ತಮ ಸಾಹಿತಿ ಎಂದು ಪ್ರಶಸ್ತಿಯ
ಗಳಿಸಿ ಪಡೆದಿ ಬಹು ಮಾನ್ಯತೆಯಾ
ಬೆಂಗಳೂರು ಮಿಥಿಕ್-ಸೊಸಾಯ್ಟಿ ನಾಗರಿಕರು
ಕರೆಸಿ ಕೊಟ್ಟರು ಬಿರುದಾವಳಿಯಾ॥ ೧೩ ॥

ಮಾನ ಸನ್ಮಾನವ ಗಣನೆಗೆ ತಾರದ
ಅವ್ಯಕ್ತನು ಧೀ ಶಕ್ತಯುತ
ಅಸಭ್ಯವರ್ತನೆ ಅಸತ್ಯ ಅರಿಯದ
ನಿರ್ಲಿಪ್ತನು ನಿಜ ಸಮಚಿತ್ತಾ॥ ೧೪ ॥

ಗರ್ವ ರಹಿತ ನಿರ್ದುಷ್ಟ ಗುಣಾನ್ವಿತ
ಸ್ಪಷ್ಟೋಕ್ತಿಯು ಹಿತಚಿಂತಕನು
ಅತಿ ವಿವರ್ಜಿತನು ಮಿತಭಾಷಿಯು
ನಿಷ್ಕಪಟಿಯು ತುಷ್ಟಿಯ ಪಡೆದವನು॥ ೧೫ ॥

ಸಾಕೆಂಬುದು ಈತನಿಗೆ ನಾಕವು
ಬೇಕೆಂಬುದೆ ನರಕದ ಕೂಪ
ಅನೇಕತೆಯಲಿ ಏಕತೆಯ ಕಂಡನಿವ
ಶ್ರೀ ತುಳಜಾಂಬೆಯ ನಿಜಭಕ್ತ॥ ೧೬ ॥

ಕಾಮದ ಕೆಸರಿನ ಕಸು ಕಾಯಾಗದೆ
ಪ್ರೇಮದ ನಂದನ ಹೂವಾಗಿ
ರಾಮನ ನಾಮಸ್ಮರಣೆಯ ಮಾಡಿದ
ಕಾಯುವ ದೇವಗೆ ಬೇಕಾಗಿ॥ ೧೭ ॥

ಮೃಷ್ಟಾನ್ನವನೆಂದಿಗು ಬಯಸದ
ಸಾತ್ವಿಕ ಹಿತ-ಮಿತಾಹಾರ ಪ್ರಿಯ
ಸಾಧು ಸ್ವಭಾವದ ನಿರಾಡಂಬರ
ಜೀವನ ನಡೆಸಿದ ನಿರಾಮಯ॥ ೧೮ ॥

ಸತತೋದ್ಯೋಗಿಯು ಸಜ್ಜನ ಮಿತ್ರನು
ಸ್ತುತಿ ನಿಂದೆಗೆ ಮನ ಇಕ್ಕದವ
ಚಿಕ್ಕಮಕ್ಕಳಲಿ ದೇವನ ಕಾಣುವ
ಏಕಾಂತ ಪ್ರಿಯ ಭಕ್ತನಿವ॥ ೧೯ ॥

ಭವಾರ್ಣವವನುತೀರ್ಣಗೊಳಿಪ
ಸದ್ವಿವೇಕ ನೌಕೆಯ ಏರ್ದವನು
ಜನನ ಮರಣದಾವರಣ ಕಡೆದು
ಸಾಯುಜ್ಯ ಸಾಮ್ರಾಜ್ಯದಿ ನೆಲೆಸಿಹನು॥ ೨೦ ॥

ಮಾಡಲಿಲ್ಲ ಜಪತಪ ಪಾರಾಯಣ
ಬಿಡಲಿಲ್ಲ ಮಾನಸ ಪೂಜೆಯನು
ನೆಲೆಸಿದ್ದನೆ ನಿಸ್ವಾತ್ಮದಿ ದೇವನು
ಅರವ ತಿಳಿದ ಸರ್ವಜ್ಞನು॥ ೨೧ ॥

ಚಕ್ಷುಶಕ್ತಿ ಕುಗ್ಗಿದರು ವ್ಯಾಸಂಗದ
ಛಲವನು ಎಂದಿಗು ಬಿಡದವನು
ಸಾಹಿತ್ಯ ಸರಸ್ವತಿ ಭಗವದ್ಭಕ್ತನು
ವಿದ್ಯಾಧಿದೇವಿ ಉಪಾಸಕನು॥ ೨೨ ॥

ಪ್ರಾಮಾಣಿಕತನದಲಿ ಬಹು ಪ್ರಾಜ್ಞನು
ಕಾರ್ಯನಿಷ್ಠ ಮಹಾ ಸೂಜ್ಞನು
ಸತ್ಯವೆಂಬುದೇ ದೇವನೆಂಬುವನು
ಏದೃಚ್ಛಾಲಾಭ ಸಂತುಷ್ಟನು॥ ೨೩ ॥

ಮಾಯಾ ಮೋಹವೆಂಬ ಸೀಮೆಯ ದಾಟಿದ
ಅನುಪಮ ಸುಮನಸ ಶುದ್ಧನು
ತ್ಯಾಗ ವೈರಾಗ್ಯ ಸಾಧಿಸಿ ತೋರಿದ
ಶುದ್ಧಾಂತಃಕರಣದ ಬುದ್ಧನು॥ ೨೪ ॥

ಸಂಸಾರವೆಂಬ ಸಾಗರ ಸುಳಿಯಲಿ
ಸಿಲುಕದೆ ಏಳ್ಗೆಯ ಪಡೆದವನು
ಆಮಿಷವೆಂಬ ವಿಷವರ್ತುಲ
ಕಕ್ಷೆಗೆ ಎಟುಕದ ಅವ್ಯಕ್ತನು॥ ೨೫ ॥

ಭೂಮಿಯಲಿ ಬಾಳಿದ ಕಮಲ ಪತ್ರದಂತೆ
ಸದಮಲ ಕೀರ್ತಿಯ ಪಡೆದವನು
ಸತ್ಯ ಶೋಧದ ಅನುಭವಿ ಅಸದೃಶ
ಸಾಯುಜ್ಯ ಮುಕ್ತಿಯ ಪಾಂಥಸ್ತನು॥ ೨೬ ॥

ಮೂರ್ತಿ ಅಳಿದರೂ ಕೀರ್ತಿ ರೂಪದಲಿಹ
ಪ್ರಕೃತಿದತ್ತ ಮಹಾತುಮನು
ಮೃತನಾಗಿಲ್ಲ ನೀ ಅಮೃತ ಎಂದೆಂದಿಗೂ
ಅಜರಾಮರ ಪದ ಪಡೆದವನು॥ ೨೭ ॥

ಮರಣ ಪಡೆದಿ ನಿಜ ಶರಣನಂತೆ
ಅರುಣೋದಯ ಶುಭ ಪರವಣೆಯಲ್ಲಿ
ಚಿತ್‌ಪ್ರಕೃತಿಯಲಿ ಐಕ್ಯನಾದಿ
ಸಾರೂಪ್ಯ ಓಂಕಾರ ನಾದದಲಿ॥ ೨೮ ॥

ಏನು ಪೇಳಿದಡೇನು ಮರೆಯಲಾಗದು
ನಿನ್ನಂತಾಗಲಿ ಎನ ಪಯಣ
ಅನ್ನದಾತ ನಿನ್ನನೆನಿಸಿ ಉಣ್ಣುವೆನು
ಸರನಲ್ಲವೋ ನೀ ನಾರಾಯಣ॥ ೨೯ ॥

ಅನಂತನ ಮನ ನಿನಗಂತರ್ಯಾಮಿಯೇ
ಅರ್ಪಿಸುವೆನು ಸುಮನಾಂಜಲಿಯ
ಎಂದೂ ಬಾಡದ-ಈ ಕೆಂದಾವರೆ
ಸೌಗಂಧದ ಪುಷ್ಪಾಂಜಲಿಯ.॥ ೩೦ ॥

ಶಾಂತಪುರುಷ ಎನ್ನಂತರಂಗದ
ನಮನವಿದೋ ನಿಜ ಪುಣ್ಯಾತ್ಮಾ
ದಿಗಂತದಲಿ ವ್ಯಾಪಿಸಿದ ನಿಸ್ವಾತ್ಮಕ್ಕೆ
ಶಾಂತಿಯನೀಯಲಿ ಪರಮಾತ್ಮ॥ ೩೧ ॥

ಮನವಾಕ್ಕಾಯದ ಈ ಕುಸುಮಾಂಜಲಿ
ಅರ್ಪಿಸುವೆನು ನಿನ್ನಡಿಗಳಲೀ
ದುರ್ವಾಸನೆ ಕಳೆದು, ಸುವಾಸನೆ ಬೀರಲಿ
ಚಿರಂತನವಾಗಿಹ ಬಾಳಿನಲಿ॥ ೩೨ ॥

ಗಂಗಾಮೃತವಿದು ಬುವಿಯದಲ್ಲವೊ
ಅಮರವಾಗಿಹ ಸಗ್ಗದ ಸುತ್ತು
ಮಿಥ್ಯವಲ್ಲ ಪರತತ್ವ
ಸದಾ ಶಿವನಿಗೆ ಇದು ಬಹು ಪ್ರಿಯವಾಗಿತ್ತು॥ ೩೩॥

ಭವಾನಿ ನಿಲಯದ ಭವ್ಯ ಪ್ರಕಾಶವು
ದಾರಿ ದೀಪವಾಗಿರಲೆಮಗೆ
ಮನಸಿನ ತಾಮಸ ಕಳೆದು
ಬೆಳಗಲೀ ನೆನಹಿನ ನಂದಾ ದೀವಿಗೆ॥ ೩೪ ॥

* ಶ್ರೀಮತಿ ಗಂಗೂತಾಯಿ ಅಣ್ಣಿಗೇರಿ

*****

# ನಾಜಿ ಕ್ಯಾಂಪ್‌ನಲ್ಲಿ ಮಡಿದ ಟಿಪ್ಪು ಸಂತತಿಯ ಕರ್ನಾಟಕದ ವೀರ ಮಹಿಳೆ

*** ಡಾ. ವಸುಂಧರಾ ಫಿಲಿಯೋಜಾ**

ಟಿಪ್ಪು ಮನೆತನಕ್ಕೆ ಸೇರಿದ ಕರ್ನಾಟಕದ ನೂರ್ ಉನ್ನೀಸ ಇನಾಯತ್ ಖಾನ್ ಎರಡನೆಯ ವಿಶ್ವ ಸಮರದಲ್ಲಿ ಬಂಧಿತಳಾಗಿ ಯಾತನಾ ಶಿಬಿರದಲ್ಲಿ ಕೊಲ್ಲಲ್ಪಟ್ಟಳು. ಆಕೆಯ ಬೇರುಗಳು ಕರ್ನಾಟಕದಲ್ಲಿದ್ದರೂ ಕನ್ನಡ ನಾಡಿನ ಜನರಿಗೆ ಆಕೆಯ ಅಪರಿಚಿತಳಾಗಿಯೇ ಉಳಿದಳು. ನೂರ್‌ಳ ಜೀವನವು ಪೂರ್ತಿಯಾಗಿ ಶೋಕಭರಿತ ಘಟನೆಗಳಿಂದ ತುಂಬಿ ಹೋಗಿದೆ. ಸುಂದರ ಹಾಗೂ ದುರ್ಬಲಳಾದ ಹೆಣ್ಣು ಮಗಳು ನಾಜಿಗಳ ಪಾಶವೀ ಕೃತ್ಯಕ್ಕೆ ಬಲಿಪಶುವಾದ ಸಂಗತಿಯು ನಿಜಕ್ಕೂ ಮನಕರಗುವಂತೆ ಇದೆ. ಆಕೆಯ ಬೇರುಗಳನ್ನು ಕರ್ನಾಟಕದಲ್ಲಿ ಅದರಲ್ಲಿಯೂ ಮೈಸೂರಿನಲ್ಲಿ ಗುರುತಿಸಿರುವುದು ನಿಜಕ್ಕೂ ಆಸಕ್ತಿದಾಯಕವಾಗಿದೆ.

ಟಿಪ್ಪು ಬ್ರಿಟೀಷರ ವಿರುದ್ಧ ನಡೆಸಿದ ಹೋರಾಟದಲ್ಲಿ ಹತನಾದಾಗ ಆತನ ಮಕ್ಕಳಲ್ಲಿ ಒಬ್ಬಳಾದ ಕುಸಿಂಬಿಯು ಗರ್ಭವತಿಯಾಗಿದ್ದಳು. ಟಿಪ್ಪುವಿನ ಕೆಲವು ಅನುಯಾಯಿಗಳು ಆಕೆಯನ್ನು ಬರೋಡಾಕ್ಕೆ ಒಯ್ದು ಅವಳನ್ನು ಬಚ್ಚಿಟ್ಟರು. ಕಾರಣ ಆಕೆಯೇನಾದರೂ ಟಿಪ್ಪುವಿನ ಮಗಳೆಂದು ಬ್ರಿಟೀಷರಿಗೆ ಸುಳಿವು ಸಿಕ್ಕಿದರೆ ಆಕೆಯ ಪ್ರಾಣಕ್ಕೆ ಅಪಾಯವಿತ್ತು. ಇದರಿಂದ ಭಯಗೊಂಡ ಇವರು ಕುಸಿಂಬಿಯನ್ನು ಗುಪ್ತವಾದ ಜಾಗದಲ್ಲಿಟ್ಟರು. ಇಲ್ಲಿ ಕುಸಿಂಬಿಯು ಗಂಡು ಮಗುವಿಗೆ ಜನ್ಮಕೊಟ್ಟಳು. ಆ ಸಂದರ್ಭದಲ್ಲಿ ಮೈಸೂರಿನಲ್ಲಿ ಬ್ರಿಟೀಷರ ಬಿಗಿಮುಷ್ಟಿಯಲ್ಲಿ ಒಡೆಯರ್ ಮನೆತನದವರ ಆಳ್ವಿಕೆ ಆರಂಭವಾದ್ದರಿಂದ ಟಿಪ್ಪುವಿನ ಮನೆತನಕ್ಕೆ ಸೇರಿದ ಇವರು ಮೈಸೂರಿಗೆ ಬರುವಂತೆಯೇ ಇರಲಿಲ್ಲ. ಇವರು ಬರೋಡದಲ್ಲಿಯೇ ಉಳಿದು ಬಿಟ್ಟರು.

ಕುಸಿಂಬಿಯ ಈ ಮಗನ ಬಗ್ಗೆಯಾಗಲೀ ಆತನ ಕಾರ್ಯ ಚಟುಪಟಿಕೆಗಳ ಬಗ್ಗೆಯಾಗಲೀ ಹೆಚ್ಚಿನ ಯಾವ ಮಾಹಿತಿಯೂ ತಿಳಿದು ಬರುವುದಿಲ್ಲ. ಆತನ ಮಗ ಬರೋಡಾದ ಆಸ್ಥಾನದಲ್ಲಿ ಮುಖ್ಯವಾದ ಸಂಗೀತಕಾರನಾಗಿದ್ದನು. ಈತ ಆಗ್ರಾ ಘರಾನ ಶೈಲಿಯ ಸಂಗೀತದ ಮುಖ್ಯ ಪ್ರತಿಪಾದಕರಲ್ಲಿ ಒಬ್ಬನಾಗಿದ್ದನು. ಈತನ ಮಗ ಇನಾಯತ್ ಖಾನ್ ಹಿಂದೂಸ್ಥಾನೀ ಸಂಗೀತದ ಶ್ರೇಷ್ಠ ಕಲಾಪಿದನಾಗಿದ್ದನು. ಇನಾಯತ್ ಖಾನ್‌ನ ಗುರುವೊಬ್ಬ ಸೂಫಿ ಸಂತನಾಗಿದ್ದ. ಗುರುಗಳ ಉಪದೇಶದಂತೆ ಸೂಫಿ ಸಂಗೀತದ ಮೂಲಕ ಸೂಫಿ ಸಂಗತಿಗಳನ್ನು ಪ್ರಚಾರ ಮಾಡಲು ಇನಾಯತ್ ಖಾನ್‌ನು ಪಶ್ಚಿಮದ ರಾಷ್ಟ್ರಗಳಿಗೆ ತೆರಳಿದನು. ಇನಾಯತ್ ಖಾನ್ ಮೊದಲು ಅಮೇರಿಕೆಗೆ ತೆರಳಿದ. ಅಲ್ಲಿ ಉಳಿದುಕೊಂಡು ಸೂಫಿ ಸಂಗೀತವನ್ನು ಪ್ರಸಾರ ಮಾಡುತ್ತಿರುವಾಗಲೇ ಅಮೆರಿಕೆಯ ಹೆಣ್ಣುಮಗಳೊಂದಿಗೆ ಕಂಕಣ ಭಾಗ್ಯ ಕೂಡಿ ಬಂದಿತು. ಆದರೆ ಆಕೆಯ ಮನೆಯವರು ತಮ್ಮ ಕುಟುಂಬಕ್ಕೆ ಇನಾಯತ್ ಖಾನ್‌ನ ಪ್ರವೇಶವನ್ನು ತಿರಸ್ಕರಿದರು. ಹಾಗಾಗಿ ಈ ಯುವ ಜೋಡಿಯು ರಷ್ಯಾಕ್ಕೆ ವಲಸೆ ಹೋಗುವಂತಾಯಿತು.

ಈ ಸುವಿಖ್ಯಾತವಾದ ಸಂಗೀತಗಾರರ ಕುಟುಂಬದಲ್ಲಿ ನಮ್ಮ ನಾಯಕಿ ನೂರ್ ರಷ್ಯಾದಲ್ಲಿ ಜನಿಸಿದಳು. ಈ ದಂಪತಿಗಳಿಗೆ ಇನ್ನಿತರೆ ಮಕ್ಕಳಿದ್ದರೂ ನೂರ್ ಧೃವನಕ್ಷತ್ರದಂತೆ ಬೆಳಗುತ್ತಲೇ ಹೋದಳು. ಆಕೆ ಅತ್ಯಂತ ಚೆಲುವೆ ಮಾತ್ರವಾಗಿರದೆ ಅನನ್ಯ ಕಂಠಸಿರಿಯಿಂದ ಕಂಗೊಳಿಸುತ್ತಿದ್ದಳು. ಸಂಗೀತಕ್ಕೆ ಹೇಳಿ ಮಾಡಿಸಿದ ಕಂಠ ಅವಳದಾಗಿತ್ತು. ಜೊತೆಗೆ ಚಿತ್ರಕಲೆಯಲ್ಲೂ ಇವಳಿಗೆ ಪರಿಶ್ರಮವಿತ್ತು. ರಷ್ಯಾದಲ್ಲಿ ೧೯೧೭ ರಲ್ಲಿ ಕ್ರಾಂತಿಯಾದಾಗ ಇನಾಯತ್ ಖಾನ್ ಕುಟುಂಬದೊಡನೆ ಫ್ರಾನ್ಸ್‌ಗೆ ಸ್ಥಳಾಂತರಗೊಳ್ಳಬೇಕಾಯಿತು.

---

* ೧೨೫, ವಿವೇಕಾನಂದ ರೋಡ್ ಕ್ರಾಸ್, ಯಾದವಗಿರಿ, ಮೈಸೂರು – ೫೭೦೦೨೦

ಪ್ಯಾರಿಸ್ ಅಗತ್ಯಂತ ಸನಿಹದ ಉಪನಗರವಾದ ಸೂರೇಸ್ ನಲ್ಲಿ ಇವರದ್ದೇ ಆದ ಒಂದು ಚಿಕ್ಕಗೂಡನ್ನು ಮಾಡಿಕೊಂಡು ಪ್ರಶಾಂತವಾಗಿ ಬದುಕುತ್ತಿದ್ದರು. ಇನಾಯತ್ ಖಾನನೇ ಮೂಸೀ ಗುಮಿಟ್ ನಲ್ಲಿ ಸಂಗೀತ ಕಛೇರಿಯನ್ನು ನಡೆಸಿಕೊಟ್ಟ ಪ್ರಪ್ರಥಮ ಭಾರತೀಯ. ಆತ ಸೂಫಿ ಸಂಗೀತವನ್ನು ಇಲ್ಲಿ ಹಾಡುತ್ತಿದ್ದ. ನೂರಳು ಫ್ರೆಂಚ್ ಶಾಲೆಯಲ್ಲಿ ತನ್ನ ತರಗತಿಯ ಸಹಪಾಠಿಗಳಲೆಲ್ಲ ಮಿಗಿಲಾಗಿದ್ದಳು. ದುರದೃಷ್ಟವಶಾತ್ ಎರಡನೆಯ ವಿಶ್ವಸಮರವು ೧೯೩೯ ರಲ್ಲಿ ಮುಗಿದಾಗ ಇವರ ಕುಟುಂಬವು ಮತ್ತೆ ಲಂಡನ್‌ಗೆ ವಲಸೆ ಹೋಗಬೇಕಾಯಿತು. ಬದುಕು ಬವಣೆಗೊಳಪಟ್ಟಿತು. ಮೊದಲನೇ ಯುದ್ಧದಿಂದ ಜರ್ಜರಿತರಾಗಿದ್ದ ಇವರ ಕುಟುಂಬವನ್ನು ಇನಾಯತ್ ಖಾನ್‌ನ ಭಾರತೀಯ ಮೂಲದ ಪರಿಣಾಮವಾಗಿ ಬ್ರಿಟೀಷ್ ಸಾಮ್ರಾಜ್ಯ ಒಪ್ಪಲಿಲ್ಲ. ಹಾಗಾಗಿ ಯುವತಿ ನೂರ್ ನೌಕರಿ ಹುಡುಕಬೇಕಾಯಿತು.

ನೂರಳಲ್ಲಿ ರಾಷ್ಟ್ರೀಯತೆ ಹಾಗೂ ಸ್ವಾತಂತ್ರ್ಯದ ಸ್ಫೂರ್ತಿಯು ಅಂತರ್ಗತವಾಗಿತ್ತು. ಆಕೆಯು ಮುಗ್ಧ ಯಹೂದಿ ಕುಟುಂಬಗಳ ಮೇಲೆ ನಾಜಿಗಳ ದೌರ್ಜನ್ಯವನ್ನು ವಿರೋಧಿಸಿದಳು. ಈ ಅನ್ಯಾಯದ ವಿರುದ್ಧ ಹೋರಾಡಲು ಆಕೆಯು ಬ್ರಿಟೀಷ್ ಸೈನ್ಯವನ್ನು ಸೇರಿದಳು. ಆದರೆ ಆಕೆ ಗೂಢಚಾರಗಳ ಹಾದಿಯನ್ನು ಅನುಸರಿಸಬೇಕಾಗಿತ್ತು.

ನೂರಳಿಗೆ ಏನನ್ನೇ ಕಲಿಸಿದರೂ ಅತೀ ಶೀಘ್ರವಾಗಿ ಗ್ರಹಿಸುತ್ತಿದ್ದಳು. ಆದರೆ ಆಕೆಯ ಬ್ರಿಟೀಷ್ ಶಿಕ್ಷಕ ಅವಳ ಬಗ್ಗೆ, ಆಕೆ ಮಂದಮತಿಯವಳು, ಕಲಿಯಲು ತುಂಬಾ ತಡಮಾಡುತ್ತಾಳೆ, ಇವಳಿಗೆ ಏನೂ ಅರ್ಥವಾಗುವುದಿಲ್ಲ ಎಂದು ಸುಳ್ಳು ವರದಿಯನ್ನು ನೀಡಿದ. ಇದಕ್ಕೆ ಕಾರಣ ನೂರಳು ಭಾರತೀಯ ಮೂಲದವಳು ಎಂದು ಮಾತ್ರವಾಗಿತ್ತು. ಆಕೆಯ ಮೇಲೆ ಇಷ್ಟೆಲ್ಲಾ ದೂರುಗಳಿದ್ದರೂ ಆಕೆಯನ್ನು ಬ್ರಿಟೀಷ್ ಗುಪ್ತಚರಳಾಗಿ ಕೆಲಸ ಮಾಡಲು ಆಯ್ಕೆ ಮಾಡಲಾಯಿತು. ನೂರಳು ಫ್ರೆಂಚನ್ನು ಸುಲಲಿತವಾಗಿ ಮಾತನಾಡುತ್ತಿದ್ದ ಕಾರಣ ಆಕೆಯನ್ನು ಪ್ಯಾರಿಸ್ಸಿಗೆ ಕಳುಹಿಸಲಾಯಿತು.

೧೯೪೦ ರ ಸುಮಾರಿಗೆ ಇಡೀ ಫ್ರಾನ್ಸ್ ಪೂರ್ಣವಾಗಿ ನಾಜಿಗಳ ಆಡಳಿತದಿಂದ ಉಸಿರುಗಟ್ಟಿತ್ತು. ಹಿಟ್ಲರನು ನಾಜಿಗಳ ನಾಯಕನಾಗಿದ್ದನು. ಆತನ ಪ್ರಕಾರ ಜರ್ಮನ್ನರು ಆರ್ಯ ರಕ್ತದವರಾಗಿದ್ದರೆ ಹೊರತು ಯಹೂದಿಗಳು ಅಲ್ಲ. ಹಾಗಾಗಿ ಅವರನ್ನು ನಿರ್ಮೂಲನೆ ಮಾಡುವುದು ಆತನ ಉದ್ದೇಶವಾಗಿತ್ತು. ಈ ತತ್ವದ ಆಧಾರದ ಮೇಲೆ ಆತನ ಸರ್ಕಾರದಿಂದ ಯುರೋಪಿನಾದ್ಯಂತ ಇರುವ ಯೆಹೂದಿಗಳನ್ನು ಹಿಂಸಿಸಲು ಆರಂಭಿಸಲಾಯಿತು. ಯಹೂದಿ ಮತಕ್ಕೆ ಸೇರಿದ ಫ್ರೆಂಚ್ ನಾಗರಿಕರ ವಿಧಿಯು ಕೂಡ ಇದರಿಂದ ಭಿನ್ನವಾಗಿರಲಿಲ್ಲ.

ಫ್ರೆಂಚ್ ಸರ್ಕಾರವನ್ನು ದುರ್ಬಲ ಸರ್ಕಾರ ಎನ್ನಲಾಗುತ್ತಿತ್ತು. ಮಾರ್ಷಲ್ ಪೀಟೆನ್‌ನ ಕೈಕೆಳಗೆ ಫ್ರಾನ್ಸ್‌ನಲ್ಲಿ ನಾಜಿ ಆಡಳಿತವಿತ್ತು. ಯೆಹೂದಿಗಳು ಅಡಗಿಕೊಳ್ಳುತ್ತಿದ್ದರು. ಹೀಗೆ ಇವರು ಅಡಗುತ್ತಿರುವುದನ್ನು ಸರ್ಕಾರದ ಅಧಿಕಾರಿಗಳು ಬಹಿರಂಗವಾಗಿ ಖಂಡಿಸುತ್ತಿದ್ದರು. ಬಹುತೇಕ ಸಲ ಲಾರಿಗಳ ತುಂಬಾ ಯೆಹೂದಿಗಳನ್ನು ತುಂಬಿಕೊಂಡು ಯಾತನಾ ಶಿಬಿರದಲ್ಲಿ ತುಂಬಿಸಿ ಅವರನ್ನು ಪ್ರಾಣಿಗಳ ತರ ತುಚ್ಛವಾಗಿ ಕಂಡು ಕೊಲ್ಲಲ್ಪಡಲಾಗುತ್ತಿತ್ತು. ಆ ಸಂದರ್ಭದಲ್ಲಿ ಜನರಲ್ ಚಾರ್ಲ್ಸ್ ಡಿ ಗಾಲೆ ಈ ಸರ್ಕಾರವನ್ನು ವಿರೋಧಿಸಿದನು ಮತ್ತು ಲಂಡನ್‌ಗೆ ಓಡಿಹೋದನು. ಬಿ.ಬಿ.ಸಿ. ರೇಡಿಯೋದ ಮೂಲಕ ಪರಕೀಯರ ಆಡಳಿತದ ವಿರುದ್ಧ ದನಿಯೆತ್ತಿದಂತೆಯೇ ಡೀ ಗಾಲೆ ಫ್ರೆಂಚ್ ಜನರನ್ನು ಪರಕೀಯರ ಆಡಳಿತದಿಂದ ಫ್ರಾನ್ಸ್‌ನ್ನು ಮುಕ್ತಿಗೊಳಿಸಲು ಕರೆಕೊಟ್ಟನು.

ನಮ್ಮ ಮಹಾತ್ಮಾಗಾಂಧಿ ಹಾಗೂ ಜನರಲ್ ಡಿ ಗಾಲೆಯ ನಡುವೆ ಇದ್ದ ಏಕೈಕ ವ್ಯತ್ಯಾಸವೆಂದರೆ ನಮ್ಮ ದೇಶಪಿತ ಭಾರತದಲ್ಲಿಯೇ ನೆಲೆಸಿ ಬ್ರಿಟೀಷರ ಆಡಳಿತವನ್ನು ಪ್ರತಿರೋಧಿಸಿದರೆ ಡಿ ಗಾಲೆಯು ಲಂಡನ್‌ಗೆ ತೆರಳಿ ಅಲ್ಲಿಂದ ಜನರನ್ನು ಬಡಿದೆಬ್ಬಿಸಿದರು. ಎರಡೂ ದೇಶಗಳ ಸಂದರ್ಭ ಸನ್ನಿವೇಶಗಳು ಒಂದೇ ತೆರನಾಗಿ ಇರಲಿಲ್ಲ ವೆನ್ನುವುದನ್ನೇ ಮನಗಾಣಬೇಕು. ಜನರಲ್ ಡಿ ಗಾಲೆಯನ್ನು ಬಂಧಿಸುವಂತೆ ಆದೇಶವನ್ನು ನೀಡಿದ್ದರ ಹಿನ್ನೆಲೆ ಯಲ್ಲಿ ಅನ್ಯಮಾರ್ಗವಿಲ್ಲದೆ ಅವನು ಇಂಗ್ಲೆಂಡ್‌ಗೆ ತೆರಳುವಂತಾಯಿತು. ಅಲ್ಲಿ ಡಿ ಗಾಲೆಗೆ ಚರ್ಚಿಲ್ಲನ ಸಹಕಾರವೂ ದೊರೆಯಿತು. ಈಗ ಫ್ರಾನ್ಸ್, ಫ್ರೆಂಚ್ ದೇಶಪ್ರೇಮಿಗಳು ಮತ್ತು ನಾಜಿಗಳ ಸಹಕಾರಿಗಳು ಎಂದು ಎರಡು ಭಾಗವಾಯಿತು.

ಬ್ರಿಟನ್ ತನ್ನ ರಾಯಭಾರಿಯನ್ನು ಫ್ರಾನ್ಸ್‌ಗೆ ಕಳುಹಿಸಿತು. ನಾಜಿಗಳ ಚಲನವಲನದ ಮೇಲೆ ಕಣ್ಣಿಡುವಂತೆ ಗೂಢಚಾರಿಗಳಾಗಿ ಇವರು ಬಂದರು. ನೂರಳು ಫ್ರೆಂಚನ್ನು ಸುಲಲಿತವಾಗಿ ಮಾತನಾಡುತ್ತಿದ್ದುದರಿಂದ ಈಕೆಯನ್ನು ಬ್ರಿಟೀಷ್ ಸರ್ಕಾರದ ಗೂಢಚಾರಿಯಾಗಿ ಪ್ಯಾರಿಸ್ಸಿಗೆ ಕಳುಹಿಸಲಾಯಿತು. ಇಲ್ಲಿ ಈಕೆಯ ಹೆಸರು ಮ್ಯಾಡಲೈನ್ ಎನ್ನಲಾಗುತ್ತಿತ್ತು.

ಗೂಢಚಾರಿಕೆಯ ಕೆಲಸಕ್ಕಾಗಿ ನೂರಳನ್ನು ೬ ವಾರಗಳ ಮಟ್ಟಿಗೆ ಗೂಢಚಾರಳಾಗಿ ಫ್ರಾನ್ಸಿಗೆ ತೆರಳುವಂತೆ ಕೇಳಿಕೊಳ್ಳಲಾಗಿತ್ತು. ಈಕೆ ಫ್ರಾನ್ಸ್‌ಗೆ ತೆರಳುವ ಮುನ್ನ ಬಹಳ ಧೈರ್ಯದಿಂದ ಹೀಗೆ ಘೋಷಣೆ ಮಾಡಿದಳು. ಬ್ರಿಟೀಷ್ ಸರ್ಕಾರದ ಗೂಢಚಾರಿಕೆಯ ಈ ಕೆಲಸವನ್ನು ನಾನು ಒಪ್ಪಿಕೊಳ್ಳಲು ಮುಖ್ಯ ಕಾರಣ ಮಾನವೀಯತೆಯ ಮೇಲೆ ಆಗುತ್ತಿರುವ ಅನ್ಯಾಯವೇ ಆಗಿದೆ ಎಂದು ಯುದ್ಧ ಮುಗಿದ ನಂತರ ಭಾರತಕ್ಕೆ ಬಂದು ಮಹಾತ್ಮಾ ಗಾಂಧಿಯವರ ಸ್ವಾತಂತ್ರ್ಯ ಚಳುವಳಿಯನ್ನು ಸೇರುವುದು ಆಕೆಯ ಹೆಬ್ಬಯಕೆಯಾಗಿತ್ತು. ಈ ಉದ್ದೇಶದಿಂದಲೇ ಪ್ಯಾರಿಸ್ಸಿಗೆ ಪ್ರಯಾಣ ಬೆಳೆಸಿದ್ದಳು.

ಬಹಳ ಅನಾಗರಿಕಅಧಿಕಾರಿಯ ಕೆಳಗೆ ನಾಲ್ಕೈದು ಜನ ರಾಯಭಾರಿಗಳು ಕೆಲಸ ಮಾಡಬೇಕಾಗಿತ್ತು. ಈ ಗುಂಪಿನಲ್ಲಿ ನೂರಳು ಕೂಡ ಇದ್ದಳು. ಆತನು ಈ ಹೊಸ ರಾಜ ಪ್ರತಿನಿಧಿಗಳಿಗೆ ಸಹಾಯ ಮಾಡುವಂತೆ ಇದ್ದರೂ ಇವರ ಚಲನವಲನಗಳನ್ನು ನಾಜಿಗಳಿಗೆ ಗುಟ್ಟಾಗಿ ತಿಳಿಸುತ್ತಿದ್ದನು. ನೂರಳು ಈತನನ್ನು ಸಂಶಯಿಸಿ ಆತನ ಜೊತೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳದೆ ಆತನ ಜೊತೆ ಮಾತನಾಡುತ್ತಲೂ ಇರಲಿಲ್ಲ. ಈಕೆಯ ಅವಿಧೇಯತೆಯನ್ನು ಆತ ಪ್ರಶಂಸಿಸಲಿಲ್ಲ. ನಾಜಿಗಳು ಮ್ಯಾಡಲೈನ್‌ನನ್ನ ಹುಡುಕುತ್ತಿದ್ದರು. ಅವರ ಪ್ರಕಾರ ಈಕೆ ಫ್ರೆಂಚ್ ಹೋರಾಟಗಾರ್ತಿ ಎಂದುಕೊಂಡಿದ್ದರು. ಅವರೆಂದೂ ಈ ಹೆಸರಿನ ಹಿಂದೆ ಒಬ್ಬಳು ಭಾರತೀಯಳಿದ್ದಾಳೆ ಎಂದು ಆಲೋಚಿಸಿಯೇ ಇರಲಿಲ್ಲ.

ಆರು ವಾರಗಳು ಕಳೆದವು. ನೂರಳ ಸಹೋದ್ಯೋಗಿಗಳನ್ನು ಇಂಗ್ಲೆಂಡ್‌ಗೆ ಹಿಂತಿರುಗಿಸಿಕೊಳ್ಳಲಾಯಿತು. ಆದರೆ ನೂರಳ ಕಾರ್ಯದಕ್ಷತೆಯಿಂದ ಆಕೆಯನ್ನು ಫ್ರಾನ್ಸಿನಲ್ಲಿಯೇ ಉಳಿಯುವಂತೆ ಕೇಳಿಕೊಳ್ಳಲಾಯಿತು. ಹೊಸ ತಂಡವೊಂದು ನೂರಳನ್ನು ಬಂದು ಸೇರಿಕೊಂಡಿತು. ಈ ಹೊಸ ತಂಡದಲ್ಲಿದ್ದ ಬ್ರಿಟೀಷ್ ಯುವತಿಯೊಬ್ಬಳು ನೂರಳ ಯಶಸ್ಸಿಗೆ ಅಸೂಯೆ ಪಟುಕೊಳ್ಳುತ್ತಿದ್ದಳು. ಅಧಿಕಾರಿಗಳಿಗೆ ನೂರಳ ಮೇಲೆ ಇಲ್ಲಸಲ್ಲದ ದೂರುಗಳನ್ನು ಕೊಟ್ಟಳು. ಆಕೆ ತನ್ನ ವಾಡಿಕೆಯಂತೆ, ನಾಜಿಗಳಿಗೆ ಗುಟ್ಟಾಗಿ ಸಂದೇಶವನ್ನು ತಲುಪಿಸಿದಳು. ನಾಜಿ ಪೋಲೀಸರು ಪ್ಯಾರಿಸ್‌ನಲ್ಲಿ ನೂರಳನ್ನು ಬಂಧಿಸಿದರು.

ಈಗ ನೂರಳ ಬದುಕು ಮುಳ್ಳುಗಳ ಹಾಸಿಗೆಯಾಯಿತು. ಕೊನೆಗಾಣದ ಹಿಂಸೆ ಮತ್ತು ಕಷ್ಟಗಳನ್ನು ಅನುಭವಿಸಬೇಕಾಯಿತು. ಕತ್ತರಿಸುವಂತಹ ಚಳಿಗಾಲದಲ್ಲಿ ಬಹಳ ತೆಳುವಾದ ಬಟ್ಟೆಗಳನ್ನು ಧರಿಸಬೇಕಾಗಿತ್ತು. ಈ ಎಲ್ಲಾ ಅಡೆತಡೆ ಹಾಗೂ ಹಿಂಸೆಗಳನ್ನು ಎದುರಿಸಿಯೂ ಈಕೆ ತನ್ನ ಯಾವ ಒಂದು ಗುಟ್ಟನ್ನೂ ಬಿಟ್ಟುಕೊಡದೇ ಅಪ್ರತಿಮಳಾಗಿಯೇ ಉಳಿದಳು. ಒಮ್ಮೆ ಬ್ರಿಟನ್ನಿನ ಸಹ ಬಂಧಿತರೊಡನೆ ಜೈಲಿನಿಂದ ಪರಾರಿಯಾಗಲು ಪ್ರಯತ್ನಪಟ್ಟಳು. ಆದರೆ ಆಕೆಯ ಅದೃಷ್ಟ ಸರಿಯಿರಲಿಲ್ಲ. ಬೇರೆಯವರು ಪರಾರಿಯಾದರು. ಈಕೆ ಮಾತ್ರ ಮತ್ತೆ ಹಿಡಿಯಲ್ಪಟ್ಟಳು. ಆಗ ೧೯೪೩ ರ ಸೆಪ್ಟೆಂಬರ್ ತಿಂಗಳಾಗಿತ್ತು.

ನೂರಳನ್ನು ಪ್ಯಾರಿಸ್ಸಿನಿಂದ ಜರ್ಮನಿಯ ಯಾತನಾ ಶಿಬಿರಕ್ಕೆ ವರ್ಗಾಯಿಸಲಾಯಿತು. ಅಲ್ಲಿ ನಾಜಿ ಪೋಲೀಸರಿಂದ ಬಹಳ ಹಿಂಸೆಗೆ ಒಳಗಾದಳು. ಅಮಾನವೀಯವಾಗಿ ಈಕೆಯನ್ನು ನಡೆಸಿಕೊಳ್ಳುತ್ತಿದ್ದರು. ಆಕೆಯೊಂದಿಗೆ ಇದ್ದ ಏಕೈಕ ಶಸ್ತ್ರವೆಂದರೆ ಆಕೆಯ ಎದೆಗಾರಿಕೆ. ತನ್ನ ಮೌನದ ಮೂಲಕ ಈಕೆ ನಾಜಿಗಳನ್ನು ಪ್ರತಿರೋಧಿಸಿದಳು. ಪ್ರತಿಯೊಂದು ಕಷ್ಟಗಳನ್ನು ತನ್ನ ಕೆಚ್ಚಿನಿಂದಲೇ ಎದುರಿಸಿದಳು. ಇದು ನಾಜಿಗಳ ನರಗಳಲ್ಲೂ ಪ್ರವೇಶಿಸಿತು. ಯುರೋಪಿನ ಇನ್ನಿತರೆ ಬಂಧಿತರೊಡನೆ ಯಾತನಾ ಶಿಬಿರದಲ್ಲಿ ದಿನದೂಡಬೇಕಾಯಿತು. ಯುದ್ಧದ ನಂತರ ಬದುಕುಳಿದು ತಮ್ಮ ಸ್ವದೇಶಗಳಿಗೆ ಮರಳಿದ ಕೆಲವರು ತಮ್ಮ ಯುದ್ಧದ ನೆನಪುಗಳನ್ನು ಬರೆದಿಡುವ ಸಂದರ್ಭದಲ್ಲಿ ನೂರಳನ್ನು ಇಲ್ಲಿನ ಪೋಲೀಸರು ಹೆಚ್ಚು ಹಿಂಸಿಸಲು ಕಾರಣ ಈಕೆಯು ಭಾರತೀಯ ರಕ್ತದವಳು ಎಂದು ದಾಖಲಿಸಿದ್ದಾರೆ. ಹಿಟ್ಲರನು ಜರ್ಮನ್ನರದು ಆರ್ಯ ರಕ್ತವೆಂದು ನಿರಂತರವಾಗಿ ಹೇಳುತ್ತಿದ್ದರೂ ಅವನು ಭಾರತೀಯರ ಮೇಲೆ ಎಂದೂ ಭಾವನಾತ್ಮಕವಾಗಿರಲಿಲ್ಲ. ಹಿಟ್ಲರನು ಭಾರತೀಯರ ಸ್ವಸ್ತಿಕವನ್ನು ತನ್ನ ಲಾಂಛನವನ್ನಾಗಿ ಉಪಯೋಗಿಸುತ್ತಿದ್ದರೂ ಭಾರತೀಯರ ಮೇಲೆ ಯಾವುದೇ ರೀತಿಯ ಒಳ್ಳೆಯ ಭಾವನೆಗಳನ್ನು ಇವನು ಹೊಂದಿರಲಿಲ್ಲ.

ಯಾವ ಮಾನಸಿಕ ಹಾಗೂ ದೈಹಿಕ ಯಾತನೆಯೂ ನೂರಳ ದಿಟ್ಟ ನಿರ್ಧಾರದಿಂದ ದೂರ ಸರಿಯುವಂತೆ ಮಾಡಲಿಲ್ಲ. ಅವಳನ್ನು ಎಷ್ಟೇ ಕೆಟ್ಟದಾಗಿ ನಡೆಸಿಕೊಂಡರೂ ತಾನು ಯಾವ ಸರಕಾರಕ್ಕಾಗಿ ಏನೆಲ್ಲಾ ಮಾಡಿದೆನೆಂಬ ಸತ್ಯವನ್ನು ಮಾತ್ರ ಬಾಯಿಬಿಡಲಿಲ್ಲ. ಬರುಬರುತ್ತಾ ನೂರಳು ಕೇವಲ ಚರ್ಮ ಮತ್ತು ಎಲುಬುಗಳ ಗೂಡಾದಳು. ಈ ದೃಶ್ಯವು ಕಲ್ಲು ಹೃದಯದ ನಾಜಿಗಳ ಮನಕರಗಿಸಲಿಲ್ಲ. ಕೊನೆಗೊಂದು ದಿನ ನಾಜಿ ಪೋಲೀಸನೊಬ್ಬ ಅವಳನ್ನು ಗುಂಡಿಕ್ಕಿ ಕೊಲ್ಲುವುದಾಗಿ ಘೋಷಿಸಿದಾಗ ಆಕೆ ಪ್ರತಿರೋಧಿಸಲೇ ಇಲ್ಲ. ಆತನು ತನ್ನ ಬಂದೂಕಿನ ಕುದುರೆಯನ್ನು ಜಗ್ಗಿದಾಗ ಅವಳ ಬಾಯಿಂದ ಬಂದ ಒಂದೇ ಮಾತು Liberty– ಸ್ವಾತಂತ್ರ್ಯ–ಅವಳ ಕೊನೆಯ ಮಾತು. ಹಾಗೇ ಅವಳು ಸಾವಿಗೀಡಾದಳು.

ಅವಳ ಬದುಕಿನ ಅತ್ಯಂತ ವಿಷಾದಕರ ಸಂಗತಿಯೆಂದರೆ, ಈಕೆ ಪ್ಯಾರಿಸ್ಸಿನಲ್ಲಿ ಹೀಗೆ ಕಷ್ಟಕ್ಕೆ ಸಿಲುಕಿ ಕೊಂಡು ಇದ್ದಾಗ, ಬ್ರಿಟೀಷ್ ಸರಕಾರವು ಆಕೆಯನ್ನು ಹಿಂತಿರುಗಿಸಿಕೊಳ್ಳಲು ಯಾವುದೇ ರೀತಿಯ ಪ್ರಯತ್ನವನ್ನೂ ಮಾಡದೇ ಹೋದದ್ದು. ೧೯೪೪ ರ ಸೆಪ್ಟೆಂಬರ್‌ನ ಆರಂಭದಲ್ಲಿ ಆಕೆಯನ್ನು ಜರ್ಮನಿಯ ಯಾತನಾ ಶಿಬಿರಕ್ಕೆ ಕರೆದೊಯ್ದು ಕೆಲವೇ ದಿನಗಳ ನಂತರ ಅಂದರೆ ಅದೇ ತಿಂಗಳ ೧೯೪೪ ರ ಸೆಪ್ಟೆಂಬರ್ ಮೂರನೇ ವಾರದಲ್ಲಿ ನಾಜಿಗಳ ಬಿಗಿಮುಷ್ಟಿಯಿಂದ ಪ್ಯಾರಿಸ್ ಸ್ವತಂತ್ರವಾಯಿತು. ಪ್ಯಾರಿಸ್ ಸ್ವಾತಂತ್ರ್ಯಕ್ಕಾಗಿ ನೂರ್ ತನ್ನ ಬದುಕನ್ನೇ ಆತ್ಮಾರ್ಪಣೆ ಮಾಡಿಕೊಳ್ಳಬೇಕಾಯಿತು.

ನೂರ್‌ಳ ಹೆಸರು ಭಾರತೀಯರಿಗೆ ಅಪರಿಚಿತ. ಅದಕ್ಕಿಂತ ವಿಷಾದಕರ ಸಂಗತಿಯೆಂದರೆ ಮೈಸೂರಿನವರಿಗೆ ಆಕೆಯ ಬಗ್ಗೆ ಯಾವ ವಿಷಯಗಳೂ ಗೊತ್ತಿಲ್ಲ. ಆಕೆಯ ದೇಶಸೇವೆ ಇಲ್ಲಿನವರಿಗೆ ಗೊತ್ತಿಲ್ಲ. ಎರಡನೆಯ ವಿಶ್ವ ಸಮರಕ್ಕೆ ಮುನ್ನ ಪ್ಯಾರಿಸಿನ ಬಳಿಯ ಸೂರೆಸ್ಸ್ ಮುನಿಸಿಪಾಲಿಟಿಯವರು ಫ್ರೆಂಚ್ ರಾಷ್ಟ್ರಗೀತೆಯನ್ನು ವಾದ್ಯ ಗೋಷ್ಠಿಯ ಮೂಲಕ ಪ್ರಚುರ ಪಡಿಸಿ ಆಕೆಯ ಧೈರ್ಯಕ್ಕೆ ವಂದನೆಯನ್ನು ಸಲ್ಲಿಸುತ್ತದೆ.

ಈಗ ಕರ್ನಾಟಕವು ೧೫೦ನೇ ಸ್ವಾತಂತ್ರ್ಯ ಚಳುವಳಿಯ ವರುಷವನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ ಕರ್ನಾಟಕದ ಎಲ್ಲಾ ಹೋರಾಟಗಾರ್ತಿಯರ ಜೊತೆಗೆ ನೂರಳನ್ನು ಕೂಡ ಖಂಡಿತವಾಗಿ ನೆನಪಿಸಿಕೊಳ್ಳಬೇಕು. ಆಕೆ ಟಿಪ್ಪುವಿನ ಮನೆತನಕ್ಕೆ ಸೇರಿದವಳಾದ ಕಾರಣ ಮೈಸೂರಿನ ಜನ ಅವಳ ಮೇಲೆ ಹೆಮ್ಮೆಯನ್ನು ವ್ಯಕ್ತಪಡಿಸಬೇಕು ಹಾಗೂ ನಗರದಲ್ಲಿ ಆಕೆಯ ನೆನಪನ್ನು ಶಾಶ್ವತವಾಗಿಸುವಂತೆ ಪ್ರಯತ್ನಿಸಬೇಕು.

****

# ಬೆಂಗಳೂರಿನಲ್ಲಿ ವೀರೇಶಲಿಂಗಂ ಪಂತುಲು ಅವರ ಚಟುವಟಿಕೆಗಳು

* ಡಾ॥ ಎಸ್.ಎಲ್. ಶ್ರೀನಿವಾಸಮೂರ್ತಿ

ಆಧುನಿಕ ತೆಲುಗು ಗದ್ಯ ನಿರ್ಮಾಪಕ, ತೆಲುಗು ಪತ್ರಿಕೋದ್ಯಮದ ಸಂಸ್ಥಾಪಕ, ಆಂಧ್ರ ಕಾದಂಬರೀ ಜನಕ, ಪ್ರಥಮ ತೆಲುಗು ನಾಟಕಕಾರ ಎಂದೆಲ್ಲಾ ಪ್ರಸಿದ್ಧರಾಗಿದ್ದ ಕಂದಕೂರಿ ವೀರೇಶಲಿಂಗಂ ಪಂತುಲು (೧೮೪೮–೧೯೧೯) ದಕ್ಷಿಣ ಭಾರತದ ಅಗ್ರಗಣ್ಯ ಸಮಾಜ ಸುಧಾರಕರೂ ಹೌದು. ಸ್ತ್ರೀ ಶಿಕ್ಷಣ, ವಿಧವಾ ವಿವಾಹ, ಅನಾಥ–ಅಬಲ ಸ್ತ್ರೀಯರ ಸಂರಕ್ಷಣೆಯಂತಹ ಕ್ರಾಂತಿಕಾರಿ ಆಂದೋಲನಗಳಲ್ಲಿ ತೊಡಗಿ 'ದಕ್ಷಿಣದ ಈಶ್ವರ ಚಂದ್ರ ವಿದ್ಯಾಸಾಗರ'ರೆಂದು ಮಹದೇವ ಗೋವಿಂದ ರಾನಡೆಯವರಿಂದ ಹೆಸರು ಪಡೆದವರು ಅವರು. ಆಂಧ್ರಪ್ರದೇಶದ ರಾಜಮಹೇಂದ್ರಿ ಇವರ ಕಾರ್ಯ ಚಟುವಟಿಕೆಗಳ ಮೂಲಸ್ಥಾನವಾಗಿತ್ತಾದರೂ ತಮಿಳುನಾಡು ಹಾಗೂ ಹಳೆಯ ಮೈಸೂರು ಪ್ರಾಂತ್ಯಗಳಲ್ಲಿ ಈತ ಕೈಗೊಂಡ ಸಮಾಜಸುಧಾರಣ ಕಾರ್ಯಗಳು ಗಮನಾರ್ಹವಾದವು. ಪ್ರಸ್ತುತ ಸಂಪ್ರಬಂಧವು ಪಂತುಲುರವರು ಬೆಂಗಳೂರಿನಲ್ಲಿ ನಡೆಸಿದ ಅಂತಹ ಕೆಲವು ಕಾರ್ಯ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲಲು ಯತ್ನಿಸಿದೆ.

ಹೊಸ ರೀತಿಯ ಸಾಹಿತ್ಯ ನಿರ್ಮಾಣ, ಸ್ತ್ರೀ ಶಿಕ್ಷಣ, ಮೂಢನಂಬಿಕೆಗಳ ವಿರುದ್ಧ ಹೋರಾಟ–ಹೀಗೆ ಹಲವು ಹತ್ತು ಕ್ಷೇತ್ರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರೂ ಪಂತುಲುರವರು ವಿಧವಾವಿವಾಹ ಆಂದೋಲನವನ್ನು ತಮ್ಮ ಜೀವಿತದ ಮುಖ್ಯ ಗುರಿಯೆಂದು ಭಾವಿಸಿದ್ದರು. ಈ ಬಗ್ಗೆ ಬ್ರಹ್ಮಸಮಾಜದ ಇತಿಹಾಸವನ್ನು ಬರೆದಿರುವ ಶಿವನಾಥ ಶಾಸ್ತ್ರಿಯವರು ಆಡಿರುವ ಮಾತುಗಳಿವು – "The widow Re-marriage movement was inaugurated (1881) and mainly worked by him (Panthulu), though not as great a success as it was expected to be, has done much service in bettering the lot of the forlorn widow in Sourthern India. His house has afforded ever since the beginning a ready asylum to every widow that sought shelter either for marriage or for eduction".[೧]

ವಿಧವಾ ವಿವಾಹವನ್ನು ಕುರಿತಾದ ಪಂತುಲುರವರ ಆರಂಭಿಕ ಪ್ರಯತ್ನಗಳಿಗೆ ಹಿಂದೂ ಸಮಾಜ ತೀವ್ರವಾಗಿಯೇ ಪ್ರತಿಭಟನೆಯನ್ನು ಸೂಚಿಸಿತು. ಆದರೆ ೧೮೮೧ರಲ್ಲಿ ಪರವಸ್ತು ರಂಗಾಚಾರ್ಯರೆಂಬ ವಿದ್ವಾಂಸರು ವಿಧವಾ ಪುನರ್ವಿವಾಹಕ್ಕೆ ಸ್ಮೃತಿಗ್ರಂಥಗಳ ಬೆಂಬಲವಿದೆ ಎಂದು ತೋರಿಸಿಕೊಟ್ಟಾಗ ಪಂತುಲುರವರ ಉತ್ಸಾಹ ಇಮ್ಮಡಿಯಾಯಿತು. ತಮ್ಮ ಹೋರಾಟಕ್ಕೆ ಹೆಚ್ಚಿನ ಕಸುವು ಬರಲೆಂದು ಅವರು ರಾಜಮಹೇಂದ್ರಿಯಲ್ಲಿ 'Widow Re-marriage Association' (WRA) ಎಂಬ ಸಂಸ್ಥೆಯನ್ನೇ ಸ್ಥಾಪಿಸಿದರು. "ಈ ಯತ್ನದಲ್ಲಿ ಅವರಿಗೆ ಬೆಂಬಲವಾಗಿ ನಿಂತವರೆಂದರೆ ಬಸವರಾಜು ಗವರಾಜು, ಈಲೂರಿ ಲಕ್ಷ್ಮೀನರಸಿಂಹ, ಬಯಪನೇಡಿ ವೆಂಕಟ ಜೋಗಯ್ಯ, ಕನ್ನಮರೆಡ್ಡಿ, ಪಾರ್ಥಸಾರಥಿ ನಾಯ್ಡು, ಚಿರ್ರವೂರಿ ಯಜ್ಞನ್ನ ಶಾಸ್ತ್ರೀ, ಕಾಜಾ ರಾಮಕೃಷ್ಣರಾವು, ಕೊಮ್ಮು ರಾಮಲಿಂಗಂ ಶಾಸ್ತ್ರಿ[೨], ಕಾಕಿವಾಡದ ಪೈಡಿ ರಾಮಕೃಷ್ಣಯ್ಯ ಎಂಬಾತ ೩೦ ಸಾವಿರ ರೂಪಾಯಿಗಳ ಆರ್ಥಿಕ ಸಹಾಯವನ್ನು ಮಾಡಿದ್ದಕ್ಕಾಗಿ ಗೋಣಿಚೀಲವನ್ನು, ಭಸ್ಮವನ್ನೂ ಧರಿಸಬೇಕಾಯಿತು.[೩] ಪಂತುಲುರವರು ಒಟ್ಟು ಸುಮಾರು ನಲವತ್ತೈವತ್ತು ವಿಧವಾ ವಿವಾಹಗಳನ್ನು ಮಾಡಿಸಿದ್ದರು ಅವುಗಳಲ್ಲಿ ಮೂರು ಬೆಂಗಳೂರಿನಲ್ಲಿ ನಡೆದವು.[೪] ಎಂಬುದು ಗಮನಾರ್ಹ ಸಂಗತಿ. ಅದರ ವಿವರಗಳನ್ನು ಮುಂದೆ ನೋಡಬಹುದು. ನಿರಂತರವಾದ ದುಡಿಮೆ ಹಾಗೂ ತಡೆಯಲಾರದ ಸೆಖೆಯ ಬಾಧೆಯ ಕಾರಣದಿಂದಾಗಿ ಪಂತುಲುರವರು ತಮ್ಮ ಪತ್ನಿ ರಾಜ್ಯಲಕ್ಷ್ಮಿಯವರೊಂದಿಗೆ ೧೯೦೭ರಲ್ಲಿ ಬೇಸಿಗೆಯನ್ನು ಕಳೆಯಲೆಂದು ಬೆಂಗಳೂರಿಗೆ ಮೊದಲ ಬಾರಿಗೆ ಬಂದರು. ಆವೇಳೆಗಾಗಲೇ ಅವರ ಕೀರ್ತಿ

---

* ನಂ. ೭೦೨, 'ಅಂತರಗಂಗೆ', ೭ನೇ ಕ್ರಾಸ್, ೭ನೇ ಮೇನ್, ಭುವನೇಶ್ವರಿ ನಗರ, ಬನಶಂಕರಿ ೩ನೇ ಹಂತ, ಬೆಂಗಳೂರು–೫೬೦ ೦೮೫.
ಮೊ.: ೯೬೬೩೮ ೫೪೩೮೦

ಮೈಸೂರು ಸಂಸ್ಥಾನದಾದ್ಯಂತ ಹರಡಿತ್ತು. ಹಾಗಾಗಿ ಅವರ ಆಗಮನದಿಂದ ಈ ಪ್ರಾಂತ್ಯದ ಜನತೆ ವಿಶೇಷವಾಗಿ ಸಂಭ್ರಮಿಸಿದರು. ಈ ಬಗ್ಗೆ ವೀರೇಶಲಿಂಗಂರವರೇ ತಮ್ಮ ಆತ್ಮ ಚರಿತ್ರೆಯಲ್ಲಿ "ಈ ವರ್ಷ (೧೯೦೭) ದಲ್ಲಿ ನಾನು ಬೆಂಗಳೂರಿಗೆ ತೆರಳಿದೆನು. ಮೈಸೂರಿನ ವಾರ್ತಾ ಪತ್ರಿಕೆಗಳೆಲ್ಲವು ನನ್ನನ್ನು ಅಭಿನಂದಿಸುವ ಲೇಖನಗಳನ್ನು ಬರೆದವು. ಬೆಂಗಳೂರಿನಲ್ಲಿನ 'ವರ್ಧಮಾನ ಸಮಾಜ' (ಕಡಿಂಡಿಭುತಿಜ ಗಟುಂಟಿ) ದವರು ನನಗೆ ಸತ್ಕಾರವನ್ನು ಮಾಡಿ ತಮ್ಮೊಂದಿಗೆ ನನ್ನ ಛಾಯಾಚಿತ್ರವನ್ನು ತೋರಿಸಿಕೊಂಡು ನನ್ನನ್ನು ಗೌರವಿಸಿದರು. ಅಲ್ಲಿ ಕೆಲವು ದಿನಗಳಿದ್ದು ಮೈಸೂರಿಗೆ ಹೋಗಲು ಮಹಾರಾಣಿ ಕಾಲೇಜಿನಲ್ಲಿ ನನ್ನನ್ನು ಸ್ವಾಗತಿಸಿ ಆದರಿಸಿದರು. ಶಿವನಸಮುದ್ರಕ್ಕೆ ಹೋಗಿ ಅಲ್ಲಿ ಕಾವೇರಿ ಬೀಳುವುದನ್ನೂ, ಅದರಿಂದ ವಿದ್ಯುಚ್ಛಕ್ತಿಯನ್ನು ತಯಾರಿಸುವುದನ್ನೂ ನೋಡಿದೆನು. ಕೋಲಾರಕ್ಕೆ ಹೋಗಿ ಬಂಗಾರದ ಕೆಲಸ ಮಾಡುವುದನ್ನು ನೋಡಿದೆನು. ಈ ರೀತಿ ಅಲ್ಲಲ್ಲಿ ನೋಡಬೇಕಾದ ವಿಶೇಷಗಳೆಲ್ಲವನ್ನೂ ನೋಡಿ ಮರಳಿ ಬೆಂಗಳೂರನ್ನು ಸೇರಿದೆನು. ಅಲ್ಲಿನ ಪೌರರು ಸಭೆ ಸೇರಿ ನಾಲ್ಕು ಭಾಷೆಗಳಲ್ಲಿ ನನಗೆ ಸ್ವಾಗತ ಪತ್ರಿಕೆಯನ್ನು ವಾಚಿಸಿದರು". ಎಂದು ಬರೆದು ಕೊಂಡಿದ್ದಾರಲ್ಲದೆ ಜೂನ್ ೧೫ ರಂದು ಸಮರ್ಪಿಸಿದ ಸ್ವಾಗತ ಪತ್ರಿಕೆಯ ಇಂಗ್ಲಿಷ್ ಅವತರಣಿಕೆಯನ್ನು ಯಥಾವತ್ತಾಗಿ ಮುದ್ರಿಸಿದ್ದಾರೆ.[೫]

ಮೂಲತಃ ಬ್ರಹಸಮಾಜಿಯಾಗಿದ್ದ ಪಂತುಲುರವರು ಸಮಾಜದ ಸದಸ್ಯರ ಬಳಕೆಗೆಂದು ರಾಜಮಹೇಂದ್ರಿ, ಮದ್ರಾಸು, ಮುಂತಾದ ಕಡೆಗಳಲ್ಲಿ ಪ್ರಾರ್ಥನಾಮಂದಿರಗಳನ್ನು ಸ್ವಂತಖರ್ಚಿನಿಂದ ಕಟ್ಟಿಸಿಕೊಟ್ಟಿದ್ದರು. ಅದೇ ರೀತಿಯಲ್ಲಿಯೇ ತಮ್ಮ ಮೊತ್ತಮೊದಲ ಬೆಂಗಳೂರು ಭೇಟಿಯ ಸಂದರ್ಭದಲ್ಲಿಯೇ ಇಲ್ಲಿನ ಅರಳೇಪೇಟೆಯಲ್ಲಿ ಬ್ರಹ್ಮ ಸಮಾಜಕ್ಕಾಗಿ ಒಂದು ಸಭಾಮಂದಿರವನ್ನು ಕಟ್ಟಿಸಿಕೊಟ್ಟಿದ್ದು ವಿಶೇಷ ಸಂಗತಿ. ಅವರ ವಿವರಗಳನ್ನು ಅವರೇ ಹೀಗೆ ದಾಖಲಿಸಿದ್ದಾರೆ:

"೧೯೦೭ರಲ್ಲಿ ಬೆಂಗಳೂರಿಗೆ ಹೋದಾಗ ಅಲ್ಲಿಯ ಅರಳೇಪೇಟೆಯ ಬ್ರಹ್ಮಸಾಮಾಜಿಕರು ನನ್ನನ್ನೂ, ನನ್ನ ಭಾರ್ಯೆಯನ್ನು ತಮ್ಮ ಉಪಾಸನಾಸಮಯದಲ್ಲಿ ಬರಬೇಕೆಂದು ಆಹ್ವಾನಿಸಿದ್ದರಿಂದ ನಾವು ಅಲ್ಲಿಗೆ ಹೋದೆವು. ಹಗಲೆಲ್ಲ ಮಗ್ಗವನ್ನು ಹಾಕಿ ನೇಯ್ಗೆಯನ್ನು ಮಾಡಿದ ಮನೆಯಲ್ಲಿ ಮಗ್ಗಗಳನ್ನು ಎತ್ತಿಟ್ಟು ರಾತ್ರಿ ಉಪಾಸನೆಯನ್ನು ನಡೆಸಿದರು. ಆ ಮನೆಯ ಮಣ್ಣಿನಛಾವಣಿ ತಲೆಗೆ ತಗಲುವಂತಿತ್ತು. ಅಲ್ಲಿ ಉಪಾಸನೆಯನ್ನು ಮಾಡಿದ ಸಾಮಾಜಿಕರು ವಿದ್ಯಾವಂತರೂ, ಧನವಂತರೂ ಅಲ್ಲದಿದ್ದರೂ ಭಕ್ತಿಪರರೆಂದು ನಮಗೆ ನಂಬಿಕೆಯಾಯಿತು. ಅವರಲ್ಲಿ ಕೆಲವರು ನನ್ನನ್ನು ನೋಡಲೆಂದು ಚೆನ್ನಪಟ್ಟಣ (ಮದ್ರಾಸು)ಕ್ಕೆ ಬಂದಾಗ ಅವರ ಕುತ್ತಿಗೆಯಲ್ಲಿ ದೊಡ್ಡ ದೊಡ್ಡ ಲಿಂಗದ ಕಾಯಿಗಳಿದ್ದವು. ಈಗ ಅವರು ಅವನ್ನು ತೆಗೆದುಹಾಕಿ ಏಕೇಶ್ವರರಾಧನ ಪರರಾಗಿ ಇದ್ದರು. ಅವರ ಭಕ್ತಿಗೆ ಸಂತೋಷಿಸಿ ನಾನೂ, ನನ್ನ ಭಾರ್ಯೆಯೂ ಇವರ ವಿಷಯಕ್ಕೆ ಸಂಬಂಧಪಟ್ಟು ಅವರಿಗೆ ಒಂದು ಚಿಕ್ಕ ಮಂದಿರವನ್ನು ಕಟ್ಟಿಸಿಕೊಟ್ಟರೆ ಚೆನ್ನಾಗಿರುತ್ತದೆಂದು ನಮ್ಮಲ್ಲಿಯೇ ಆಲೋಚಿಸಿದೆವು. ಒಂದು ಕೆಲಸವನ್ನು ಸಂಕಲ್ಪಿಸಿದೊಡನೆಯೇ ಅದನ್ನು ಆರಂಭಿಸದಿರುವುದು ನನ್ನ ಮನಸ್ಸಿಗೆ ಸಾಧ್ಯವಿಲ್ಲ. ಆದ್ದರಿಂದ ನಾನು ಆ ಸಾಮಾಜಿಕರನ್ನು ಕರೆಸಿ ನಾನಿದ್ದ ಚಾಮರಾಜಪೇಟೆಯಲ್ಲಿ ಒಂದು ಮಂದಿರವನ್ನು ಕಟ್ಟಿಸಿ ಕೊಡುವೆನೆಂದು ಹೇಳಿದೆ. ರಾತ್ರಿ ಅಷ್ಟು ದೂರ ತಾವು ಬರಲಾರೆವೆಂದು ಅವರು ಹೇಳಿ ಪಟ್ಟಣದೊಳಗೇ ಕಟ್ಟಿಸಿಕೊಡಬೇಕೆಂದು ಕೋರಿದರು. ಅರಳೇಪೇಟೆಯಲ್ಲೇ ಮನೆಯೊಂದನ್ನು ಕೊಳ್ಳಲೆಂದು ಪ್ರಯತ್ನಿಸಿದರೂ ನಾನು ಅಲ್ಲಿದ್ದ ಕಾಲದಲ್ಲಿ ಯಾವುದೂ ದೊರಕಲಿಲ್ಲ. ೧೯೦೮ನೇ ಸಂವತ್ಸರದಲ್ಲಿ ಒಂದು ಮನೆಯು ನೂರು ರೂಪಾಯಿಗೆ ಮಾರಾಟಕ್ಕಿದೆಯೆಂದು ಅವರು ಪತ್ರ ಬರೆಯಲಾಗಿ ಕೂಡಲೇ ಹಣವನ್ನು ಕಳುಹಿಸಿ ಮನೆಯನ್ನು ಕೊಳ್ಳುವಂತೆ ಮಾಡಿದೆನು. ಆ ಮೇಲೆ ಆ ಮನೆಯನ್ನು ನೆಲಸಮಗೊಳಿಸಿ ಸಾವಿರ ರೂಪಾಯಿಗಳಿಗೆ ಒಂದು ಮಂದಿರವನ್ನು ಆ ಸ್ಥಳದಲ್ಲಿ ನಾನು ಕಟ್ಟಿಸಿದೆನು. ಈ ಮಂದಿರ ನಿರ್ಮಾಣಕ್ಕೆ ನನಗೆ ೧೫೦೦ ರೂಗಳು ವ್ಯಯವಾದವು. ಕೆಲವು ಸಂವತ್ಸರಗಳಿಂದ ಈ ಮಂದಿರದಲ್ಲಿಯೇ ಪ್ರತಿವಾರವೂ ಬ್ರಹ್ಮಸಾಮಾಜಿಕರು ತಮ್ಮ ಉಪಾಸನೆಯನ್ನು ಜರುಗಿಸುತ್ತಿದ್ದಾರೆ".[೬]

ಬೆಂಗಳೂರಿನ ಹಿತಕರವಾದ ವಾತಾವರಣ ಹಾಗೂ ಸ್ಥಳೀಯ ಸ್ನೇಹಿತರ ವಿಶ್ವಾಸಪೂರ್ವಕ ಒತ್ತಾಯ ಅವರನ್ನು ಮತ್ತೆ ಮತ್ತೆ ಬೆಂಗಳೂರಿಗೆ ಭೇಟಿ ನೀಡುವಂತೆ ಮಾಡಿತು. ತಮ್ಮ ಹಾಗೂ ತಮ್ಮ ಪತ್ನಿಯ ಆರೋಗ್ಯದ ವರ್ಧನೆಗಾಗಿ ವರ್ಷದ ಕೆಲವು ತಿಂಗಳುಗಳನ್ನಾದರೂ ಬೆಂಗಳೂರಿನಲ್ಲಿ ಕಳೆಯಬೇಕೆಂಬ ಉದ್ದೇಶದಿಂದ ೧೯೦೯-೧೦ರ ಸುಮಾರಿಗೆ ಪಂತುಲುರವರು ಬೆಂಗಳೂರಿನ ಚಾಮರಾಜಪೇಟೆಯ ಮೊದಲ ಮುಖ್ಯರಸ್ತೆಯಲ್ಲಿ, ಈದ್ಗಾ ಮೈದಾನಕ್ಕೆ ಸಮೀಪವಿದ್ದ ನಿವೇಶನವನ್ನು ಕೊಂಡುಕೊಂಡರು. ರಾಜಮಹೇಂದ್ರಿ, ಮದ್ರಾಸು ಮುಂತಾದ ಕಡೆಗಳಿಗೆ ನಿರಂತರವಾಗಿ ಅವರು ಭೇಟಿ

ನೀಡಬೇಕಾಗಿದ್ದುದರಿಂದ ಅವರೇ ಸ್ವತಃ ನಿಂತು ಮನೆ ಕಟ್ಟಿಸಲು ಸಾಧ್ಯವಿರಲಿಲ್ಲ. ಆದರೂ ಅವರ ಸ್ನೇಹಿತರೆಲ್ಲರ ನೆರವಿನಿಂದ ಅಲ್ಲಿ ಮನೆ ನಿರ್ಮಿತವಾಯಿತು. [ಕಳೆದ ಕೆಲವು ವರ್ಷಗಳವರೆಗೆ ಈ ಮನೆ ಅಸ್ತಿತ್ವದಲ್ಲಿತ್ತು. (ಚಿತ್ರ ನೋಡಿ) ನಂತರ ಬೆಂಗಳೂರಿನ ಜಿಲ್ಲಾಧಿಕಾರಿಗಳಾಗಿದ್ದ ತಾಜ್ ಪಿರಾನ್ ರವರು ಅದನ್ನು ಕೊಂಡಂತೆ ಉಲ್ಲೇಖವಿದೆ. ಈಗ ಆ ಸ್ಥಳದಲ್ಲಿ ಬಹು ಮಹಡಿ ಕಟ್ಟಡವೊಂದು ಮೇಲೆದ್ದಿದೆ].

ಇದರೊಂದಿಗೆ ಪಂತುಲುರವರಿಗೆ ಬೆಂಗಳೂರಿಗೆ ಬರಲು ಇದ್ದ ಮತ್ತೊಂದು ಮುಖ್ಯ ಆಕರ್ಷಣೆಯೆಂದರೆ ವಿಧವಾ ಪುನರ್ವಿವಾಹಕ್ಕೆ ಇದ್ದ ಪೂರಕವಾದ ವಾತಾವರಣ. ಏಕೆಂದರೆ ೧೯೦೫ರ ವೇಳೆಗಾಗಲೇ ಚಕ್ರವರ್ತಿ ವೆಂಕಟ ವರದಯ್ಯಂಗಾರ್ಯರು 'ಅಬಲಾಶ್ರಮ'ವನ್ನು ಸ್ಥಾಪಿಸಿ ಅನಾಥ, ಅಶಕ್ತ ಮಹಿಳೆಯರಿಗೆ, ವಿಧವೆಯರಿಗೆ ನೆರವಾಗಿದ್ದರು. ಸ್ವತಃ ತಾವೇ ಕೃಷ್ಣಮ್ಮ ಎಂಬ ವಿಧವೆಯನ್ನು ಮದುವೆಯಾಗುವ ಮೂಲಕ ಹೊಸ ಬದಲಾವಣೆಗೆ ನಾಂದಿ ಹಾಡಿದ್ದರು. ಹಾಗಾಗಿ ಪಂತಲುರವರು ಬೆಂಗಳೂರಿನಲ್ಲಿ ಅಂತಹ ಇನ್ನಷ್ಟು ವಿವಾಹಗಳನ್ನು ನೆರವೇರಿಸಲು ಯೋಚಿಸಿದರು. ಪ್ರತಿಬಾರಿ ಆಂಧ್ರದಿಂದ ಬರುವಾಗಲೂ ಅವರು ಮಾಗಂಟಿ ವೆಂಕಟ ಸುಬ್ಬಮ್ಮ, ನ್ಯಾಪತಿ ಜಾನಿಕಮ್ಮ, ಕಾಮರಾಜುಗುಡ್ಡ ಮಂಗಮ್ಮ ಮುಂತಾದ ಒಬ್ಬಿಬ್ಬ ವಿಧವೆಯರನ್ನು ಈ ಉದ್ದೇಶಕ್ಕಾಗಿ ತಮ್ಮೊಂದಿಗೆ ತಾವು ಹೋದಲ್ಲೆಲ್ಲ ಕರೆದುಕೊಂಡು ಹೋಗುತ್ತಿದ್ದರು.

ಬೆಂಗಳೂರಿನಲ್ಲಿ ಪಂತುಲುರವರು ನಡೆಸಿದ ವಿಧವಾ ವಿವಾಹಗಳ ಪೌರೋಹಿತ್ಯವನ್ನು ವಹಿಸಿದ್ದವರಲ್ಲಿ ಒಬ್ಬರು ಖ್ಯಾತ ಸಾಹಿತಿ, ಸಾಮಾಜಿಕ ಕಾರ್ಯಕರ್ತರಾಗಿದ್ದ ಡಿ.ವಿ. ಗುಂಡಪ್ಪನವರು. ಅವರು ಈ ಬಗ್ಗೆ ಬರೆದಿರುವ ಮಾತುಗಳನ್ನು ಹೀಗೆ ಸಂಗ್ರಹಿಸಬಹುದು. "ವೀರೇಶಲಿಂಗಂ ಅವರು ನಲವತ್ತೈವತ್ತು ವಿತಂತು ವಿವಾಹಗಳನ್ನು ಮಾಡಿಸಿದರು. ಅವುಗಳಲ್ಲಿ ಮೂರು ಬೆಂಗಳೂರಿನಲ್ಲಿ ನಡೆದವು ನನಗೆ ತಿಳಿದಿದೆ. ಆ ವಿವಾಹಗಳ 'ಪೌರೋಹಿತ್ಯ'ದಲ್ಲಿ ನಾನು ಭಾಗವಹಿಸಿದ್ದೂ ಉಂಟು. ಪೌರೋಹಿತ್ಯದಲ್ಲಿ ಸೇರಿದ್ದ ಇನ್ನೊಬ್ಬರು ಶರ್ಮ ಎಂಬುವರು.... ಅವರು ಆರ್ಯ ಸಮಾಜದವರಾದದ್ದರಿಂದ ಮಂತ್ರಗಳನ್ನು ಕಲಿತಿದ್ದರು. ನನಗೆ ತುಣುಕುಗಳು ಬರುತ್ತಿದ್ದದ್ದರಿಂದ ಈ ವಿತಂತು ವಿವಾಹ ಸಮಾರಂಭಗಳಿಗೆ ಯಜಮಾನರಾಗಿದ್ದ ವೆಂಕಟವರದಯ್ಯಗಾರ್ಯರು ನಮ್ಮಿಬ್ಬರನ್ನೂ ಪೌರೋಹಿತ್ಯಕ್ಕೆ ನಿಯಮಿಸುತ್ತಿದ್ದರು".[೭]

ಒಂದು ಅಚ್ಚರಿಯ ಮತ್ತು ಪ್ರಮುಖವಾದ ಅಂಶವೆಂದರೆ ಈ ಮೂರೂ ವಿವಾಹಗಳೂ ಬೆಂಗಳೂರು ನಗರದೊಳಗೆ ನಡೆಯದೆ ದಂಡು ಪ್ರದೇಶದಲ್ಲಿ ನಡೆದದ್ದು! ಈ ಬಗ್ಗೆ ಡಿ.ವಿ.ಜಿ "ವಿವಾಹವು ಕಂಟೋನ್ಮೆಂಟನಲ್ಲಿ ನಡೆಯತಕ್ಕದ್ದೆಂದು ಗೊತ್ತು ಮಾಡಲು ಇದ್ದ ಕಾರಣವನ್ನು ಹೇಳುತ್ತೇನೆ. ಆ ಕಾಲದಲ್ಲಿ ವಿಧವಾ ವಿವಾಹದ ಕಾನೂನು ಬ್ರಿಟಿಷ್ ಇಂಡಿಯಾದಲ್ಲಿ ಜಾರಿಯಲ್ಲಿತ್ತು. ಮೈಸೂರು ರಾಜ್ಯವು ಆಗ್ಗೆ ಪ್ರತ್ಯೇಕವಾಗಿದ್ದರಿಂದ ಆ ಕಾನೂನು ದೇಶೀಯ ಸಂಸ್ಥಾನದಲ್ಲಿ ಊರ್ಜಿತವಾಗ ತಕ್ಕದ್ದಾಗಿರಲಿಲ್ಲ. ಬೆಂಗಳೂರು ಕಂಟೋನ್ಮೆಂಟು ಬ್ರಿಟಿಷ್ ಸರಕಾರದ ಅಧೀನದಲ್ಲಿಎದ್ದ ಕಾರಣದಿಂದ ಬ್ರಿಟಿಷ್ ಇಂಡಿಯದ ಕಾನೂನಿಗೆ ಅಲ್ಲಿ ಬಲವುಂಟು ಈ ರೀತಿ ಯೋಚಿಸಿ ಆ ಕಾಲದಲ್ಲಿ ನಡೆದ ಎಲ್ಲ ವಿತಂತು ವಿವಾಹಗಳೂ ಕಂಟೋನ್ಮೆಂಟು ಪ್ರದೇಶದಲ್ಲಿಯೇ ನಡೆದವು[೮] ಎಂದಿದ್ದಾರೆ.

ಆದರೂ ಬೆಂಗಳೂರಿನ ಪ್ರಜ್ಞಾವಂತ ನಾಗರೀಕರು ಈ ವಿಧವಾವಿವಾಹಗಳಲ್ಲಿ ಆಸಕ್ತಿಯಿಂದ ಪಾಲ್ಗೊಳ್ಳುತ್ತಿದ್ದರು. ೧೯೧೦ರಲ್ಲಿ ಪಂತುಲುರವರು ನಡೆಸಿದ ಮೊತ್ತಮೊದಲು ವಿವಾಹ ನ್ಯಾಪತಿ ಜಾನಿಕಮ್ಮ ಎಂಬ ವಿಧವೆಯದು.

"ಈ ವಿವಾಹವು ಅಲ್ಲಿ ನೂತನವಾದ ರೀತಿಯದಾಗಿದ್ದುದರಿಂದ ಬೆಂಗಳೂರಿನ ದೊಡ್ಡ ಮನುಷ್ಯರು ವಿಶೇಷವಾಗಿ ಬಂದು ತಾಂಬೂಲಾದಿ ಸತ್ಕಾರಗಳನ್ನು ಕೊಂಡು ಸಂತೋಷಿಸಿ ಹೋದರು".[೯]

ಆದರೆ ಪಂತುಲುರವರ ಆದರ್ಶ ಬಹುಕಾಲ ಉಳಿಯಲಿಲ್ಲ. ವಿವಾಹಿತರಾದ ವಿತಂತುಗಳಲ್ಲಿ ಹುಟ್ಟಿದ ಭಿನ್ನಾಭಿಪ್ರಾಯ, ಆಶ್ರಮದ ಮಹಿಳೆಯೊಬ್ಬರನ್ನು ತಮ್ಮ ವೈಯಕ್ತಿಕ ಸೇವೆಗೆ ಬಳಸಿಕೊಳ್ಳುತ್ತಿದ್ದಾರೆಂದು ಆರೋಪಿಸಿ ತಂಗಟೂರಿ ಶ್ರೀರಾಮುಲುರವರು ಕೋರ್ಟಿನಲ್ಲಿ ಹಾಕಿದ ದಾವಾ ಹಾಗೂ ಮುಖ್ಯವಾಗಿ ತಮ್ಮ ಎಲ್ಲ ಆದರ್ಶಗಳಿಗೆ ಬೆಂಬಲವಾಗಿ ನಿಂತಿದ್ದ ಪತ್ನಿ ರಾಜ್ಯಲಕ್ಷ್ಮಿಯವರ ಮರಣ (೧೯೧೦) ಪಂತುಲು ರವರನ್ನು ಜರ್ಜರಿತರನ್ನಾಗಿ ಮಾಡಿದವು. ತಮ್ಮ ಆತ್ಮಕಥೆ 'ಸ್ವೀಯ ಚರಿತ್ರಮು'ವಿನ

ಎರಡನೇ ಭಾಗವನ್ನು ೧೯೧೦ರಲ್ಲಿ ಬೆಂಗಳೂರಿನ ತಮ್ಮ ಮನೆಯಲ್ಲಿ ಆರಂಭಿಸಿ ಮರುವರ್ಷದ ಬೇಸಿಗೆಯಲ್ಲಿ ಅಲ್ಲೇ ಅದನ್ನು ಬರೆದು ಮುಗಿಸಿದ್ದ ಪಂತುಲುರವರು ಪತ್ನಿಯೊಂದಿಗೆ ಕಳೆದ ಮಧುರ ಕ್ಷಣಗಳನ್ನು ಮರೆಯಲಾಗದೆ ಆ ಕಾರಣಕ್ಕಾಗಿಯೇ ಬೆಂಗಳೂರಿನ ಮನೆಯನ್ನು ೧೯೧೧ ರಲ್ಲಿ ಮಾರಾಟ ಮಾಡಿದರು. ಆದರದ ಕೆಲವೇ ವರ್ಷಗಳಲ್ಲಿ (೧೯೧೯) ಆತ ಗತಿಸಿದರು.

ಹೀಗೆ ಆಂಧ್ರದಲ್ಲಿ ಆರಂಭವಾಗಿ ದಕ್ಷಿಣಭಾರತದ ಬಹುಭಾಗವನ್ನು ವ್ಯಾಪಿಸಿದ ವೀರೇಶಲಿಂಗಂ ಪಂತುಲು ರವರ ಸಮಾಜಸುಧಾರಣ ಕಾರ್ಯದ ಹೆಜ್ಜೆಗುರುತುಗಳು ಬೆಂಗಳೂರಿನಲ್ಲಿಯೂ ಭದ್ರವಾಗಿ ಮೂಡಿವೆ.

**ಅಡಿಟಿಪ್ಪಣಿಗಳು**

೧. Shivanatha Sastri, History of Bramha Samaj, Sadharan Bramhasamaj, Calcutta, 1993, P-501.
೨. Anjaneyulu, D., Kandakuri Veeresalingam, Govt. of India, 1976, P-28.
೩. ನಾರ್ಲ, ವಿ.ಆರ್., ವೀರೇಶಲಿಂಗಂ ಸಾಹಿತ್ಯ ಅಕಾಡೆಮಿ, ದೆಹಲಿ, ೧೯೭೩, ಪು-೩೭.
೪. ಗುಂಡಪ್ಪ, ಡಿ.ವಿ. ಜ್ಞಾಪಕಚಿತ್ರಮಾಲೆ-೪, ಡಿವಿಜಿ ಕೃತಿ ಶ್ರೇಣಿ ಸಂ-೭, ಬೆಂಗಳೂರು, ೧೯೯೭, ಪು-೫೭೩.
೫. ವೀರೇಶಲಿಂಗಂ ಪಂತುಲು., ಸ್ವೀಯಚರಿತ್ರಮು (ತೆಲುಗು), ರೊಂಡವಭಾಗಮು, ೧೯೧೭, ಮದ್ರಾಸು, ಪು-೩೩೨. (ಅನುವಾದಿತ ಭಾಗ)
೬. ಅಲ್ಲೇ., ಪು ೧೧೮-೧೧೯.
೭. ಗುಂಡಪ್ಪ, ಡಿ.ವಿ., ಪೂರ್ವೋಕ್ತ,
೮. ಅಲ್ಲೇ.,
೯. ವೀರೇಶಲಿಂಗಂ ಪಂತುಲು, ಪೂರ್ವೋಕ್ತ, ಪು-೩೫೫ (ಅನುವಾದಿತ ಭಾಗ)

*****

